








## ಭೈರಪ್ಪನವರ ಪ್ರಶಸ್ತಿಸ್ವೀಕಾರ ಭಾಷಣ

ಅಕಾದೆಮಿಯ ಪ್ರಶಸ್ತಿಯನ್ನು ಕೃತಜ್ಞತೆಯಿಂದ ಸ್ವೀಕರಿಸುವ ಈ ಸಂದರ್ಭದಲ್ಲಿ, ನನ್ನ ವ್ಯಾಪಕ ವಾಚಕವೃಂದದ ಅಭಿರುಚಿ ಶೀವರ್ಾನಗಳು, ರಾಷ್ಟ್ರದ ಅತ್ಯುನ್ನತ ಸಾಹಿತ್ಯಿಕ ಮಂಡಲಿಯಾದ ಸಾಹಿತ್ಯ ಅಕಾದೆಮಿಯಿಂದ ಅಧಿಕೃತವಾಗಿ ಪುಷ್ಟಿಪಡೆದಿರುವ ಬಗೆಗೆ ನನ್ನ ಸಂತೋಷವನ್ನು ವ್ಯಕ್ತಪಡಿಸಲಿಚ್ಛಿಸುತ್ತೇನೆ. ನಾನು ವೃತ್ತಿಯಿಂದ ತತ್ತ್ವಶಾಸ್ತ್ರದ ವಿದ್ಯಾರ್ಥಿ, ಇಚ್ಛೆಯಿಂದ ಸೃಜನಾತ್ಮಕ ಲೇಖಕ. ಚಿಕ್ಕಂದಿನಿಂದಲೂ ಸಾಹಿತ್ಯದಿಂದ ಆಕರ್ಷಿತನಾಗಿದ್ದೆ. ಸಾಹಿತ್ಯವು ಯೌವನದ ಕಷ್ಟದ ದಿನಗಳಲ್ಲಿ ಒಂದು ಬಗೆಯ ನೆಮ್ಮದಿ, ವಿಮೋಚನೆ ಕೂಡ ಆಗಿತ್ತು. ಬದುಕಿಗೆ ಇನ್ನೂ ಉತ್ತಮವಾದ ಮಾರ್ಗದರ್ಶಿ ಎಂದು ಭಾವಿಸಿ ಕಾಲೇಜಿನಲ್ಲಿ ತತ್ತ್ವಶಾಸ್ತ್ರವನ್ನು ನನ್ನ ವ್ಯಾಸಂಗದ ವಿಷಯವಾಗಿ ಆರಿಸಿದೆ; ಹೊಟ್ಟೆಪಾಡಿಗಾಗಿ ಅದರ ಅಧ್ಯಾಪನವನ್ನೂ ಆರಿಸಬೇಕಾಯಿತು. ಸ್ವತಃ ಎಷ್ಟೇ ಆಕರ್ಷಕ ಹಾಗೂ ಪ್ರಗಲ್ಭವಾಗಿದ್ದರೂ ಅದು ನಾನು ಅರಸುತ್ತಿದ್ದ ತೃಪ್ತಿಯನ್ನು ಕೊಡುತ್ತಿಲ್ಲವೆನ್ನುವುದನ್ನು ಬೇಗ ಕಂಡುಕೊಂಡೆ. ಆದ್ದರಿಂದ ಸಾಹಿತ್ಯದತ್ತ ಹೊರಳಿದೆ. ಬದುಕು ಮತ್ತು ಅನುಭವಗಳ ಸಂಕೀರ್ಣತೆ ಹಾಗೂ ಅರ್ಥಗಳನ್ನು ಗ್ರಹಿಸಲು ಸಾಹಿತ್ಯವು ಹೆಚ್ಚಿನ ನೆರವು ನೀಡುತ್ತದೆ ಎಂಬುದನ್ನು ಅರಿತೆ. ಅಂದಿನಿಂದ ಸೃಜನಾತ್ಮಕ ಲೇಖನವನ್ನು ಅನ್ವೇಷಣೆ ಮತ್ತು ಅರಿವಿನ ಸಾಧನವಾಗಿ ಆಶ್ರಯಿಸಿದ್ದೇನೆ.

ಕಾದಂಬರಿಯು ಸಾಹಿತ್ಯಪ್ರಕಾರಗಳಲ್ಲೆಲ್ಲ ಅತ್ಯಂತ ಉಪಯುಕ್ತವಾದುದು ಎಂಬುದನ್ನು ಕಂಡುಕೊಂಡೆ. ಏಕೆಂದರೆ ಅದು ಜೀವನಕ್ಕೆ ತೀರ ಹತ್ತಿರವಾದದ್ದು; ಜೀವನದ ಎಲ್ಲ ಮುಖಗಳನ್ನೂ ಪರೀಕ್ಷಿಸಲು, ನಿರೂಪಿಸಲು ಅತ್ಯಂತ ವ್ಯಾಪಕವಾದ ಅವಕಾಶವುಳ್ಳದ್ದು; ಓದುಗರೊಂದಿಗೆ ಸುಲಭವಾದ, ನೇರವಾದ ಹೃದಯ ಸಂವಾದವನ್ನು ಸ್ಥಾಪಿಸಿರುವ ಸಾಹಿತ್ಯಪ್ರಕಾರ ಅದು. ಆದ್ದರಿಂದ ನಾನು ಕಾದಂಬರಿಗಳ ಮೂಲಕ ನನ್ನ ಅನ್ವೇಷಣೆಯನ್ನು ಪ್ರಾರಂಭಿಸಿದೆ; ನನ್ನನ್ನು ಕಾಡುತ್ತಿದ್ದ ಕೆಲವು ಸಮಸ್ಯೆಗಳನ್ನು, ಅನುಭವದ ಕ್ಷೇತ್ರಗಳನ್ನು ಆಳವಾಗಿ ಪರೀಕ್ಷಿಸಲು ಪ್ರಯತ್ನಿಸಿದೆ. ಈ ಕ್ರಮವು ಒಂದು ಆತ್ಮಶೋಧನೆಯಾಯಿತು. ನನ್ನ ಸ್ವಂತ ಅನುಭವವು ಇನ್ನೂ ಆಳವಾಯಿತು, ವಿಶಾಲವಾಯಿತು. ಪ್ರತಿ ಕಾದಂಬರಿಯೂ ನನ್ನನ್ನು ರಹಸ್ಯದ ಕೇಂದ್ರದೆಡೆಗೆ ಒಂದು ಹೆಜ್ಜೆ ಹತ್ತಿರ ಒಯ್ದಿದೆ, ಜೀವನದ ಸಂಕೀರ್ಣರಚನೆ ಹಾಗೂ ಅರ್ಥಗಳ ಹೆಚ್ಚಿನ ಅರಿವು ನೀಡಿದೆ. ಹೀಗೆ ಸೃಜನಾತ್ಮಕ ಬರೆವಣಿಗೆಯು ಯಾವುದೇ ಸಿದ್ಧಾಂತದ ಪಾಂಡಿತ್ಯಕ ಅಭ್ಯಾಸಕ್ಕಿಂತಲೂ ಹೆಚ್ಚು ಅರ್ಥವಂತವಾಗಿ, ತೃಪ್ತಿಕರವಾಗಿ ನನಗೆ ಕಂಡುಬಂದಿದೆ; ನನ್ನ ಸುಪ್ತಪ್ರಜ್ಞೆಯಲ್ಲಿ ಅಡಗಿದ್ದ ಅನೇಕ ಸಮಸ್ಯೆಗಳನ್ನು ಬೆಳಕಿಗೆ ತಂದಿದೆ. ಹೀಗೆ ಬೆಳಕಿಗೆ ಬಂದಿರುವ ಸಮಸ್ಯೆಗಳನ್ನು ನಾನು ಈಗ ನನ್ನ ಜಾಗ್ರದವಸ್ಥೆಯ ಯಾವುದೇ ಸಂಗತಿಯಷ್ಟು ವಸ್ತುನಿಷ್ಠವಾಗಿ, ವಿಮರ್ಶಾಪೂರ್ವಕವಾಗಿ ಪರೀಕ್ಷಿಸಬಲ್ಲೆ.

ನನ್ನ ಪಂಡಿತ ಹಾಗೂ ಸಾಮಾನ್ಯ ವಾಚಕವೃಂದದ ವಿಷಯದಲ್ಲಿ ನಾನು ಅದೃಷ್ಟವಂತ. ವಿರುದ್ಧಾಭಿಪ್ರಾಯಗಳು ಇಲ್ಲವೆಂದಲ್ಲ – ಪ್ರಬಲವಾಗಿವೆ; ಸತತವಾಗಿಯೂ ಇವೆ. ಆತ್ಮಸಂತೃಪ್ತಿಯಲ್ಲಿ ಮುಳುಗಿಹೋಗುವುದರಿಂದ ನನ್ನನ್ನು ಪಾರು ಮಾಡುತ್ತಿರುವುದಕ್ಕಾಗಿ, ಮೇಲ್ಮೆ ಗಳಿಸುವುದಷ್ಟೇ ಅಲ್ಲದೆ ಮುಂದೆ ಸಾಗುತ್ತಿರಲು, ಅಥವಾ, ನನ್ನ ಈ ಕಾದಂಬರಿ 'ದಾಟು'ವಿನ ಪರಿಭಾಷೆಯಲ್ಲಿ, ನಿಂತಲ್ಲಿ ನಿಂತುಬಿಡದೆ ದಾಟಿಹೋಗಲು ಪ್ರಚೋದಿಸುತ್ತಿರುವುದಕ್ಕಾಗಿ ಅವಕ್ಕೆ ಕೃತಜ್ಞನಾಗಿದ್ದೇನೆ.

ಒ?

ದೇ-

# ದಾಟು

## ಒಂದು

ತಿರುಮಲಾಪುರವೆಂಬ ಹೆಸರು ಯಾಕೆ ಬಂತೆಂಬುದನ್ನು ತಿಳಿಯುವುದು ಕಷ್ಟವೇನಲ್ಲ. ತಿರುಮಲನ, ಎಂದರೆ ತಿರುಪತಿಯ ಶ್ರೀನಿವಾಸನ ದೇವಸ್ಥಾನವಿರುವುದರಿಂದ ಊರಿಗೆ ಈ ಹೆಸರು ಬಂತು. ದೊಡ್ಡ ತಿರುಪತಿಗೆ ಹೋಗಲು ಶಕ್ತಿಯಿಲ್ಲದವರು ಭಕ್ತಿಯಿಂದ ಇಲ್ಲಿಯ ಶ್ರೀನಿವಾಸನಿಗೆ ಪೂಜೆ ಮಾಡಿಸಿದರೂ ಇಷ್ಟಾರ್ಥಸಿದ್ಧಿಸುತ್ತದೆ. ಅರಸೀಕೆರೆಯ ಪಕ್ಕದ ಮಾಲೆಕಲ್ಲುತಿರುಪತಿಯ ಬಗೆಗೂ ಇದೇ ನಂಬಿಕೆಯಿದೆ. ಆದರೆ ವ್ಯತ್ಯಾಸವಿಷ್ಟು: ಮಾಲೆಕಲ್ಲು ಎಷ್ಟಾದರೂ ಒಂದು ಬೆಟ್ಟ, ಮೂಲದ ದೊಡ್ಡ ತಿರುಪತಿಯನ್ನು ಹೋಲುತ್ತದೆ. ಆದರೆ ತಿರುಮಲಾಪುರದ ದೇವಸ್ಥಾನವಿರುವುದು ಬೆಟ್ಟದ ಮೇಲಲ್ಲ, ಸಾಧಾರಣ ಬಯಲಿನಲ್ಲಿ ಕೂಡ ಅಲ್ಲ. ಕೆರೆ ಏರಿಯ ಕೆಳಗಿನ ಹಳ್ಳದ ಪಕ್ಕದಲ್ಲಿ. ಊರಿಗೆ ಹೊರಚ್ಚಾಗುತ್ತದೆ.

ವಿಷ್ಣುದೇವಾಲಯವು ಗ್ರಾಮದ ಒಳಗಿರುತ್ತದೆ. ಸ್ಥಿತಿಪಾಲಕ ವಿಷ್ಣು ಜನರ ಮಧ್ಯೆ ವಾಸಿಸುವುದು ಸಹಜ, ಅಗತ್ಯ. ಲಯಕರ್ತೃ ಈಶ್ವರ ಊರ ಹೊರಗಿರುತ್ತಾನೆ. ಆದರೆ ತಿರುಮಲಾಪುರ ಗ್ರಾಮವಿರುವುದು ದೇವಸ್ಥಾನದಿಂದ ಮೇಲ್ಭಾಗಕ್ಕೆ, ಎಂದರೆ ದಿಬ್ಬದ ಮೇಲೆ; ದೇವಸ್ಥಾನದಿಂದ ಮೂರು ಫರ್ಲಾಂಗ್ ದೂರದಲ್ಲಿ. ಒಂದು ಪಕ್ಕಕ್ಕೆ ದೊಡ್ಡ ಊರು. ಮಗ್ಗುಲಿನ ಮೇಲ್ಭಾಗದಲ್ಲಿ ಮದಗುಟ್ಟುವ ಭಾರೀ ಕೆರೆ. ಏರಿಯ ಕೆಳಗಿನ ಹಳ್ಳದ ದಡದಲ್ಲಿ, ಏರಿಗೆ ಒಂದು ಫರ್ಲಾಂಗ್ ಕೆಳಗೆ ತಿರುಮಲ ದೇವಸ್ಥಾನ. ದೇವಸ್ಥಾನದ ದಾರಿಯ ಎಡ ಬಲಗಳಲ್ಲಿ ತೆಂಗಿನ ತೋಟ, ಗದ್ದೆಗಳು. ಪಕ್ಕದ ಹಳ್ಳವನ್ನು ದಾಟಿದರೆ ಗದ್ದೆ ತೋಟಗಳು. ಅವುಗಳ ಆಚೆಯ ದಿಬ್ಬದ ಮೇಲೆ ಊರಿನ ಹೊಲೆಗೇರಿ, ಮಾದಿಗ ಕೇರಿಗಳು.

ಹೊಲೆಗೇರಿ ಮಾದಿಗ ಕೇರಿಗಳನ್ನು ಊರಿನ ಭಾಗವೆಂದು ಭಾವಿಸಿದರೆ ಈ ವಿಷ್ಣುಮಂದಿರವು ಗ್ರಾಮಮಧ್ಯದಲ್ಲೇ ಇದ್ದಂತಾಯಿತು. ಆದರೆ ಊರಿನ ಸುತ್ತ ಶಿಥಿಲಸ್ಥಿತಿಯಲ್ಲಿ ಈಗಲೂ ಇರುವ ಕೋಟೆಯ ಗೋಡೆಗಳಿವೆ. ಇಷ್ಟು ದೂರ ಹೊರಗಿರುವ ಈ ಕೇರಿಗಳನ್ನು ಊರಿನ ಭಾಗವೆಂದು ಕರೆಯುವುದು ಹೇಗೆ? ಆದರೆ ಹಾಗೆ ಕರೆಯದಿದ್ದರೆ ಈ ಕೇರಿಗಳಿಗೆ ಹೆಸರಿನ ಅಂತಸ್ತೇ ಇರುವುದಿಲ್ಲವಲ್ಲ. ಇಂಥ ಊರಿನ

ಹೊಲೆಗೇರಿ, ಇಂಥ ಊರಿನ ಮಾದಿಗಕೇರಿ ಎನ್ನಬಹುದೇ ವಿನಾ ಬರೀ ಹೊ... ಎಂದರೆ ಅರ್ಥವೂ ಪೂರ್ತಿಯಾಗುವುದಿಲ್ಲ. 'ನಾವು ಊರಿನ ಭಾಗವೇ ... ನಮಗೂ ಈ ಊರಿಗೂ ಯಾವ ಸಂಬಂಧವೂ ಇಲ್ಲ. ಹರಿಪುರ ಅಂತ ನಾವು ಬೇರೆ ಹೆಸರಿಟ್ಟುಕೊತ್ತೀವಿ' – ಎಂದು ಈ ಕೇರಿಯ ಒಬ್ಬಿಬ್ಬರು ಇತ್ತೀಚೆಗೆ ಪ್ರಯತ್ನಿಸಿದ್ದುಂಟು. ಪ್ರತ್ಯೇಕ ಹೆಸರೆಂದರೆ ಪ್ರತ್ಯೇಕ ಗ್ರಾಮವೇ ಅಸ್ತಿತ್ವಕ್ಕೆ ಬಂದಂತೆ. ಒಂದು ಹೊಸ ದೇಶ ಹುಟ್ಟುವುದು ಎಷ್ಟು ಕಷ್ಟವೋ, ಅದರ ಹುಟ್ಟನ್ನು ಚಿವುಟಲು, ಗರ್ಭಪಾತ ಮಾಡಿಸಲು, ಹೇಗೆ ಮೂಲದೇಶವು ಸರ್ವ ಪ್ರಯತ್ನ ಮಾಡುವುದೋ, ಹಾಗೆಯೇ ಈ ಕೇರಿಗಳು ಸ್ವಾತಂತ್ರ್ಯವನ್ನು ಘೋಷಿಸುವುದರ ವಿರುದ್ಧ ತಿರುಮಲಾಪುರದವರು ಎದ್ದು ನಿಂತರು. ಸುತ್ತಮುತ್ತಣ ಊರುಗಳವರೂ ಇದನ್ನು ವಿರೋಧಿಸಿದರು. ಗಡುಸಿನ ಜನಾಭಿಪ್ರಾಯದ ವಿರುದ್ಧ ಸರ್ಕಾರದವರು ಏನೂ ಮಾಡುವಂತಿಲ್ಲ. ಸುಮ್ಮಸುಮ್ಮನೆ ಸರ್ಕಾರವಾದರೂ ಯಾಕೆ ಬಹುಜನರ ಮರ್ಜಿಗೆ ವಿರೋಧವಾಗಿ ವರ್ತಿಸೀತು? ಹೀಗಾಗಿ ಸರ್ಕಾರಿ ಲೆಕ್ಕದಲ್ಲಿ, ಆರ್ಥಿಕ ವ್ಯವಹಾರದಲ್ಲಿ, ನಿತ್ಯಜೀವನದಲ್ಲಿ, ಇವು ತಿರುಮಲಾಪುರದ ಕೇರಿಗಳೇ ಆಗಿವೆ – ಹೊಲೆ ಮತ್ತು ಮಾದಿಗ ಎಂಬ ವಿಶೇಷಣಗಳಿಂದ ಭೂಷಿತವಾಗಿ. ಆದರೆ ಇತ್ತೀಚೆಗೆ ಅವರನ್ನು ಹರಿಜನರೆಂದು ಕರೆಯುವ ಪದ್ಧತಿ ಬೆಳೆದು, ದೇವಸ್ಥಾನದ ಮುಖ್ಯರಾದ ತಿರುಮಲೇಗೌಡರು ಹೇಳಿದಂತೆ ಹರಿ ಎನ್ನುವ ಹೆಸ... ಹೊಲೆಯಾಯಿತು. ಈ ಕೇರಿಯ ಜನರು 'ಹರಿ'ಯವರಾಗಲಿಲ್ಲ.

ಇದು ಊರಿನ ಸಮಾಜಕ್ಕೆ ಸಂಬಂಧಿಸಿದ ವಿಚಾರ. ಆದರೆ ನಾವು ಇಲ್ಲಿ ನೋಡಬೇಕಾದುದು ದೇವಸ್ಥಾನ ಮತ್ತು ಗ್ರಾಮದ ಇತಿಹಾಸವನ್ನು. ಈ ವಿಷ್ಣು ದೇವಾಲಯವನ್ನು ಸ್ವಯಂ ಜಕಣಾಚಾರಿಯೇ ಕಟ್ಟಿದನೆಂದು ಸುತ್ತಣ ಭಕ್ತಾದಿಗಳು ಎದೆಯುಬ್ಬಿಸಿ ಹೇಳುತ್ತಾರೆ. ಆದರೆ ಇದು ಎಷ್ಟು ಭಾಗ ಖಚಿತವೆಂದು ಹೇಳುವುದು ಕಷ್ಟ. ಜಿಲ್ಲೆಯ ಇತಿಹಾಸವನ್ನು ಬರೆದಿರುವ ಬ್ರಿಟಿಶ್ ವಿದ್ವಾಂಸ ಡಾ. ಆರ್. ಎಫ್. ಫ್ಲೀಟ್ ಅವರ ಪ್ರಕಾರ: 'ಜಕಣಾಚಾರಿ ಎಂಬ ಪ್ರಸಿದ್ಧ ಶಿಲ್ಪಿಯ ಶೈಲಿಯಲ್ಲಿ, ಅವನ ಪರಂಪರೆಯ ಶಿಲ್ಪಿಗಳು ದೇಶದ ನಾನಾ ಭಾಗಗಳಲ್ಲಿ ಸಣ್ಣ ಪುಟ್ಟ ದೇವಾಲಯಗಳನ್ನು ಕಟ್ಟಿದರು. ಹೀಗಾಗಿ ಬೇಲೂರು ಹಳೇಬೀಡುಗಳ ಮುಖ್ಯ ಲಕ್ಷಣಗಳು ಈ ಮಂದಿರಗಳಲ್ಲಿಯೂ ಇವೆ. ಶೈಲಿಯ ಪ್ರಮುಖನ ಅಥವಾ ಗುರುವಿನ ಹೆಸರನ್ನೇ ಹೇಳಿಕೊಳ್ಳುವುದು ಹೆಮ್ಮೆಯ ಮಾತಾದುದರಿಂದ ಎಲ್ಲರೂ ತಮ್ಮ ಊರಿನ ದೇವಾಲಯವನ್ನು ಜಕ್ಕಣನೇ ಸ್ವತಃ ಕಟ್ಟಿದನೆಂದು ವಾದಿಸುತ್ತಾರೆ. ಈ ತಿರುಮಲಾಪುರದ ಗುಡಿಯೂ ಅಂಥದೇ.'

ಫ್ಲೀಟ್ ಅವರ ಅಭಿಪ್ರಾಯವನ್ನು ನಾವು ಕೂಡ ನಂಬಬಹುದು. ಆದರೆ

ಒಟ್ಟಿನಲ್ಲಿ ಇತಿಹಾಸಜ್ಞರು ಸಂಶೋಧಿಸಬೇಕಾದ ಊರು ಇದು. ಐತಿಹ್ಯ, ದೇವಸ್ಥಾನದ ಹೊರಗೋಡೆಗೆ ಒರಗಿಸಿರುವ ದೊಡ್ಡ ಶಿಲಾಶಾಸನ, ಅರ್ಚಕರ ಮನೆಯಲ್ಲಿ ಈಗಲೂ ಇರುವ ತಾಮ್ರಪತ್ರ, ಕೋಟೆಯ ರಚನೆ ಮೊದಲಾದುವನ್ನು ವಿಶ್ಲೇಷಿಸಿ ಡಾ. ಫ್ಲೀಟ್ ಅವರು ಬರೆದಿರುವ, 'ತುಮಕೂರು ಜಿಲ್ಲೆಯ ಇತಿಹಾಸ' ಎಂಬ ಗ್ರಂಥದಲ್ಲಿ ಇರುವುದನ್ನೂ ಗಮನಿಸಿ ಯಾರಾದರೂ ಈ ಊರಿನ ಚರಿತ್ರೆಯನ್ನೇ ಬರೆಯಬಹುದು. ಶ್ರೀರಂಗಪಟ್ಟಣ, ತಲಕಾಡುಗಳ ಇತಿಹಾಸವನ್ನು ವಿದ್ವಾಂಸರು ಬರೆಯಬಹುದಾದರೆ ತಿರುಮಲಾಪುರದ್ದು ಯಾಕೆ ಆಗದು? ಈಗಿನ ಗ್ರಾಮದ ಜನಸಂಖ್ಯೆ ಸುಮಾರು ಮೂರು ಸಾವಿರ. ಐದು ನೂರು ಮನೆಗಳಿವೆ. ಕೋಟೆಯ ಒಳಭಾಗದ ಮುಕ್ಕಾಲು ಭಾಗ ಮಾತ್ರ ಮನೆಗಳಿವೆ. ಉಳಿದ ಕಾಲು ಭಾಗ ಹಾಳುಬಿದ್ದಿದೆ. ಎಂದರೆ ಹಿಂದಿನ ಪಾಳೆಯಗಾರರು ಕಟ್ಟಿಸಿದ ಕಾಲಕ್ಕೆ ಊರು ಈಗ ಇರುವುದಕ್ಕಿಂತ ದೊಡ್ಡದಾಗಿತ್ತು. ಈಗಿನ ಮಾನದ ದೃಷ್ಟಿಯಿಂದ ಇದು ಗ್ರಾಮವೆನಿಸಿದರೆ, ಆಗಿನ ಕಾಲಕ್ಕೆ ಪಟ್ಟಣವೋ ನಗರವೋ ಆಗಿತ್ತು. ಟೀಪು ಸುಲ್ತಾನನು ಲಗ್ಗೆಹಾಕಿ ಸಂದು ಬಿಡಿಸಿ ಒಡೆಸಿ ನುಗ್ಗಿದ ಭಾಗವು ಊರ ಬಲ ಭಾಗದ ಕೋಟೆಯಲ್ಲಿ ಈಗಲೂ ಇದೆ. ಅದನ್ನು ಅನಂತರ ಸರಿಮಾಡಿಸಲಿಲ್ಲ. ತಾನು ಒಡೆದ ಜಾಗದ ಒಳಭಾಗದಲ್ಲಿಯೇ ಸುಲ್ತಾನನು ಸ್ವತಃ ಹುಕುಂ ಮಾಡಿ ಒಂದು ದೊಡ್ಡ ಮಸೀತಿ ಕಟ್ಟಿಸಿದ. ಮಸೀತಿಯ ಎರಡು ಮಿನಾರುಗಳೂ ಕೋಟೆಯ ಗೋಡೆಯ ಎರಡರಷ್ಟು ಎತ್ತರವಾಗಿವೆ. ೧೯೧೩ರಲ್ಲಿ ಈ ಭಾಗವನ್ನು ನೋಡಲು ರೆಸಿಡೆಂಟರು ಬಂದಿದ್ದಾಗ ಸ್ವತಃ ಡಾ. ಫ್ಲೀಟ್ ಅವರೇ ಜೊತೆಯಲ್ಲಿ ಬಂದು ಅವರಿಗೆ ಸ್ಥಳದ ಇತಿಹಾಸವನ್ನು ವಿವರಿಸಿದರು. ರೆಸಿಡೆಂಟರು ಬರುವ ಹೊತ್ತಿಗೆ ಊರಿನಲ್ಲಿ ಇಬ್ಬರು ಕ್ರೈಸ್ತ ಕುಟುಂಬಗಳು ಬಂದು ಕಡಲೆಪುರಿ ಹುರಿದು ಮಾರಿ ಜೀವಿಸುತ್ತಿದ್ದರು. ಅವರ ಧಾರ್ಮಿಕ ಅಗತ್ಯಕ್ಕಾಗಿ, ಆದರೆ ಮುಖ್ಯವಾಗಿ ರೆಸಿಡೆಂಟರ ಭೇಟಿಯ ನೆನಪಿಗಾಗಿ, ಕೋಟೆಯ ಹೊರಗೆ ಈಗಿನ ಬಸ್‌ಸ್ಟ್ಯಾಂಡಿನ ಎದುರಿನ ದಿಬ್ಬದ ಮೇಲೆ, ಮಂಗಳೂರು ಹೆಂಚಿನ ಒಂದು ಚರ್ಚ್ ಕಟ್ಟಿಸಿದರು. ಅನಂತರ ಬೆಳೆದ ಕ್ರೈಸ್ತ ಮತಾನುಯಾಯಿಗಳ ಕಾಲೋನಿಯು ಚರ್ಚಿನ ಹಿಂಭಾಗದಲ್ಲಿದೆ.

# ಎರಡು

## ೧

ದೇವಸ್ಥಾನದ ಅರ್ಚಕ ವೆಂಕಟರಮಣಯ್ಯನವರ ಮನೆಯಲ್ಲಿ ಸಮಾರಾಧನೆ ನಡೆಯುತ್ತಿತ್ತು. ಅವರ ಏಕಮಾತ್ರ ಮಗ ವೆಂಕಟೇಶನಿಗೆ ಗಂಡು ಮಗುವಾಗಿ ಈ ದಿನ ನಾಮಕರಣ ಸಮಾರಂಭ. ವೆಂಕಟರಮಣಯ್ಯನವರಿಗೆ ಒಬ್ಬ ಮಗ, ಅವನಿಗಿಂತ ಚಿಕ್ಕ ಒಬ್ಬಳು ಮಗಳು. ಮಗ ವೆಂಕಟೇಶ ಹನ್ನೆರಡು ವರ್ಷದವ ನಾಗಿದ್ದಾಗ ಅವರ ಹೆಂಡತಿ ಸತ್ತರು. ಇನ್ನೂ ಪ್ರಾಯವಿದ್ದರೂ ಅವರು ಮರು ಮದುವೆ ಮಾಡಿಕೊಳ್ಳಲಿಲ್ಲ. ತಮಗೆ ಗೊತ್ತಿದ್ದ ಸಂಸ್ಕೃತ ಮತ್ತು ಪೌರೋಹಿತ್ಯ ಗಳನ್ನು ಕಲಿಸಿದ್ದೇ ಅಲ್ಲದೆ ಮಗನನ್ನು ಕಾಲೇಜಿಗೂ ಕಳಿಸಿದರು. ಆದರೆ ಮೂರು ಬಾರಿ ಪರೀಕ್ಷೆಗೆ ಕಟ್ಟಿದರೂ ಅವನು ಇಂಟರ್‌ಮೀಡಿಯಟ್ ಪಾಸು ಮಾಡಲಿಲ್ಲ. ಓದಿ ಕೆಲಸಕ್ಕೆ ಸೇರಿಯೇ ಅವನು ಜೀವನಮಾಡಬೇಕಾಗಿರಲಿಲ್ಲ. ದೇವರ ಪೂಜೆಯ ಇನಾಂ ಜಮೀನು ಸಾಕಷ್ಟಿತ್ತು. ದೇವರ ತಲೆಯ ಮೇಲೆ ಒಂದು ಅರಳು ಹೂವು ಹಾಕಿದರೆ ಸಾಕು – ಪರಕ್ಕೆ ಮುಕ್ತಿ ಇಹಕ್ಕೆ ಅನುಕೂಲ, ಎರಡೂ ಆಗುತ್ತಿತ್ತು. ಅದಲ್ಲದೆ ಪಿತ್ರಾರ್ಜಿತ ಸ್ವಂತ ಆಸ್ತಿ ತಕ್ಕಮಟ್ಟಿಗಿದೆ. ಮನೆಯಲ್ಲಿ ಬೇಯಿಸಿ ಹಾಕುವವರು ಇರಲಿಲ್ಲ. ಅವನು ಒಪ್ಪಿದಂತೆ ವಿಟ್ಠಲಾಪುರದ ಶ್ಯಾನುಭೋಗರ ಮಗಳು ಜಯಲಕ್ಷ್ಮಿಯನ್ನು ತಂದು ಮದುವೆ ಮಾಡಿದರು. ಮೊದಲನೆಯದೇ ಗಂಡು ಮಗುವಾಗಿದೆ. ಮೊದಲನೆಯ ಹೆರಿಗೆಗೆ ಸೊಸೆ ತೌರುಮನೆಗೆ ಹೋಗ ಬೇಕಾಗಿತ್ತು. ಆದರೆ ಊರಿನಲ್ಲಿ ಅವಳ ಅಜ್ಜಿ ಈಗ ಮೂರು ತಿಂಗಳಿನಲ್ಲಿ ತಾನೆ ಕೆಟ್ಟ ನಕ್ಷತ್ರದಲ್ಲಿ ಸತ್ತು ಮನೆ ಬಿಟ್ಟಿದ್ದಾರೆ. ಬಾಣಂತಿತನಕ್ಕೆ ಜಯಲಕ್ಷ್ಮಿಯ ತಾಯಿಯೇ ಇಲ್ಲಿಗೆ ಬಂದಿದ್ದಾರೆ.

ವೆಂಕಟೇಶ ಇಂಟರ್‌ಮೀಡಿಯಟ್‌ನಲ್ಲಿ ಫೇಲಾಗಿರಬಹುದು. ಆದರೆ ದಡ್ಡನಲ್ಲ. ಇನ್ನೂ ಮದುವೆಯಾಗದಿದ್ದುದರಿಂದಲೇ ಅವನು ಫೇಲಾದನೆಂದು ಕೆಲವರು ಹೇಳು ತ್ತಾರೆ. ಅವನ ತಂದೆಗೂ ಆ ಮಾತಿನಲ್ಲಿ ಅಲ್ಪ ಸ್ವಲ್ಪ ತಥ್ಯ ಕಾಣಿಸುತ್ತಿತ್ತು. 'ಆದದ್ದಾಯಿತು. ಜೀವನಕ್ಕೆ ತಕ್ಕ ದಾರಿ ಇರುವಾಗ ಪಾಸು ಮಾಡಿ ಏನಾಗ ಬೇಕಿತ್ತು?' – ಎಂದು ಅವರು ಸುಮ್ಮನಾದರು. ಪರೀಕ್ಷೆಯಲ್ಲಿ ಫೇಲಾದರೂ ಅವನು ಹಣಕಾಸು ಪೋಲು ಮಾಡಿದವನಲ್ಲ. ಈಗ ಊರಿಗೆ ಬಂದ ಮೇಲೆ ಅವನು ದೇವಸ್ಥಾನದ ಪೂಜೆಗೆ ಹೋಗುತ್ತಿಲ್ಲ. ಅದನ್ನು ಹ್ಯಾಗೂ ತಂದೆ

ಮಾಡುತ್ತಾರೆ. ತಂದೆಗಿಂತ ಹೆಚ್ಚು ಮುತುವರ್ಜಿಯಿಂದ ಇವನು ಬೇಸಾಯ ಮಾಡಿಸುತ್ತಾನೆ. ಸೀಮೆಗೊಬ್ಬರ ಹಾಕಿಸಿ ಜಪಾನು ಮಾದರಿಯ ಬತ್ತ ಬೆಳೆಸುತ್ತಾನೆ. ಕೋಟೆಯ ಬಾಗಿಲಿನ ಹೊರಗೆ ಬಸ್‌ಸ್ಟ್ಯಾಂಡಿನ ಎದುರಿಗೇ ಒಂದು ಹೋಟೆಲು ಕಟ್ಟಿಸಿದ್ದಾನೆ. ಇವನ ಮಾಲೀಕತ್ವದಲ್ಲೇ ಹೋಟೆಲು ನಡೆಯುತ್ತಿದೆ. ಆದರೆ ವಾಸ್ತವವಾಗಿ ಎಲ್ಲ ಜವಾಬ್ದಾರಿಯೂ ಒಬ್ಬ ಉಡುಪಿ ಬ್ರಾಹ್ಮಣನದು. ಜಾಗ, ಕಟ್ಟಡ, ಕುರ್ಚಿ, ಮೇಜ ಮತ್ತು ಪಾತ್ರೆಗಳು ಇವನವು. ಅವನು ಬೇಕಾದ ಸಂಪಾದನೆ ಮಾಡಿಕೊಳ್ಳಬಹುದು. ಆದರೆ ಇವನಿಗೆ ದಿನಕ್ಕೆ ಹದಿನೈದು ರೂಪಾಯಿ ಕೊಡಬೇಕು. ಇದಲ್ಲದೆ ಕನ್ನಡ ಪತ್ರಿಕೆಗಳ ಈ ಊರಿನ ಏಜೆನ್ಸಿಯೂ ಇವನದೇ. ಊರಿನಲ್ಲಿ ಆಗುವ ಸಾರ್ವಜನಿಕ ಸಮಾರಂಭಗಳು, ಮುಖ್ಯರ ಮನೆಯ ಮದುವೆ, ಮರಣ, ಮೊದಲಾದ ಸುದ್ದಿಗಳನ್ನು ಪತ್ರಿಕೆಗಳಿಗೆ ಬರೆದು ಕಳಿಸುವವನೂ ಇವನೇ. ಒಟ್ಟಿನಲ್ಲಿ ಇಪ್ಪತ್ತೆಂಟನೆಯ ವಯಸ್ಸಿಗೇ ಸುತ್ತ ಐವತ್ತು ಊರುಗಳ ಜನರಲ್ಲಿ ಒಂದು ಹೆಸರು ಪಡೆದಿದ್ದಾನೆ.

ಅಣ್ಣ ಸರಿಯಾಗಿ ಓದಲಿಲ್ಲ. ಆದರೆ ತಂಗಿ ಓದಿದಳು. ಹಾಗೆ ನೋಡಿದರೆ ಅವಳು ಓದಿದುದು ಹೆಚ್ಚಲ್ಲ. ಅವಳ ತಂದೆ ಅವಳನ್ನು ಕಾಲೇಜಿಗೆ ಕಳಿಸಿದುದು ಹೆಚ್ಚು. ಊರಿಗೆ ಹೈಸ್ಕೂಲು ಬಂದು ಎಂಟು ವರ್ಷವಾಗಿತ್ತು. ಊರಿನಲ್ಲಿದ್ದ ಹೈಸ್ಕೂಲಿಗೆ ಹೆಣ್ಣುಮಕ್ಕಳನ್ನು ಕಳಿಸಲು ಕೂಡ ಜನರು ಹಿಂದಲೇಟು ಹಾಕುತ್ತಿದ್ದರು. ವೆಂಕಟರಮಣಯ್ಯನವರು ಧೈರ್ಯಮಾಡಿ ಮಗಳನ್ನು ಕಳಿಸಿದರು. ಸತ್ಯಭಾಮಾ ಫಸ್ಟ್‌ಕ್ಲಾಸಿನಲ್ಲಿ ಎಸ್.ಎಸ್.ಎಲ್.ಸಿ. ಪಾಸುಮಾಡಿದನಂತರ, ಕಾಲೇಜಿಗೆ ಹೋಗುವುದಾಗಿ ಹಟ ಹಿಡಿದಳು. ತಾಯಿಯಿಲ್ಲದ ಹುಡುಗಿಯನ್ನು ಕಾಲೇಜಿಗೆ ಕಳಿಸಿ ಅವಳು ಏನಾದರೂ ಹೆಚ್ಚುಕಡಿಮೆ ಮಾಡಿಕೊಂಡರೆ ಗತಿ ಏನು ಎಂಬ ಭಯ ತಂದೆಗೆ. ಅಂಥದೇನೂ ಆಗುವುದಿಲ್ಲವೆಂದು ಹೈಸ್ಕೂಲಿನ ಹೆಡ್ಮಾಸ್ಟರೇ ಧೈರ್ಯ ಹೇಳಿದರು. ಮೈಸೂರಿನಲ್ಲಿ ಹೆಣ್ಣುಮಕ್ಕಳ ಹಾಸ್ಟೆಲಿನಲ್ಲಿ ಇದ್ದುಕೊಂಡು ಅವಳು ಪ್ರತಿಯೊಂದು ಪರೀಕ್ಷೆಯನ್ನೂ ಪ್ರಥಮ ದರ್ಜೆಯಲ್ಲಿ ಪಾಸು ಮಾಡಿದಳು. ಇಂಟರ್ ಆದಮೇಲೆ ಆನರ್ಸ್ ಮಾಡಿ ಇತಿಹಾಸದಲ್ಲಿ ಎಂ.ಎ. ಮಾಡಿದ್ದಾಳೆ. ಈಗ ಹದಿನೈದು ದಿನದಲ್ಲಿ ತಾನೇ ಫಲಿತಾಂಶ ಹೊರಬಿದ್ದು, ನಿರೀಕ್ಷಿಸಿದಂತೆ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾಗಿದ್ದಾಳೆ.

ಎಂ.ಎ. ಮಾಡಿರುವ ಮಗಳಿಗೆ ತಕ್ಕ ಗಂಡು ಹುಡುಕುವ ವಿಧಾನ, ಆ ಮಟ್ಟದ ಜನಗಳೊಡನೆ ವ್ಯವಹರಿಸುವ ರೀತಿ, ವೆಂಕಟರಮಣಯ್ಯನವರಿಗೆ ಗೊತ್ತಿಲ್ಲ. ವೆಂಕಟೇಶ ಎಷ್ಟೇ ಚಾಕಚಕ್ಯನಾದರೂ ದೊಡ್ಡ ನಗರದಲ್ಲಿ, ಅದೂ ತನ್ನ ತಂಗಿಗಿಂತ ಹೆಚ್ಚು ಅಥವಾ ಅವಳಷ್ಟೇ ಓದಿರುವವನೊಡನೆ ಸಲೀಸಾಗಿ ವ್ಯವಹರಿಸ

ಲಾರ. ಮಗಳಿಗೆ ಗಂಡು ಹುಡುಕುವ ಕಷ್ಟವನ್ನು ವೆಂಕಟರಮಣಯ್ಯನವರು ಉಪಮಂತ್ರಿ ಮೇಲಗಿರಿಗೌಡರ ಕೈಲಿ ಹೇಳಿಕೊಂಡಿದ್ದರು. ಈ ಊರಿನ ಕೋಟೆಯನ್ನು ಕಟ್ಟಿದ ಪಾಳೆಯಗಾರರ ವಂಶದ ಮೇಲಗಿರಿಗೌಡರು ಇದೇ ಊರಿನವರು. ಮದರಾಸಿನಲ್ಲಿ ಬಿ.ಎಲ್. ಮಾಡಿ ತುಮಕೂರಿನಲ್ಲಿ ವಕೀಲಿ ನಡೆಸಿ, ಸ್ವದೇಶೀ ಚಳವಳಿಯಲ್ಲಿ ಭಾಗವಹಿಸಿ, ಸಾಬರಮತಿ ಆಶ್ರಮದಲ್ಲಿ ಗಾಂಧಿಯವರೊಡನಿದ್ದ ಅವರು, ಈಗ ಮೈಸೂರು ಸರ್ಕಾರದಲ್ಲಿ ಉಪಮಂತ್ರಿಗಳಾಗಿದ್ದಾರೆ. ವಯಸ್ಸಿನಲ್ಲಿ ವೆಂಕಟರಮಣಯ್ಯನವರಿಗಿಂತ ನಾಲ್ಕೈದು ವರ್ಷಕ್ಕೆ ದೊಡ್ಡವರು.

'ಅಯ್ಯಾ, ನಿನ್ನ ಮಗಳಿಗೆ ಗಂಡು ಸಿಕ್ಕೂದೇನೂ ಕಷ್ಟವಲ್ಲ. ನನ್ನ ಕೈಕೆಳಗಿನ ಯಾವನಾದರೂ ಗೆಜೆಟೆಡ್ ಆಫೀಸರನ್ನ ಮಾಡ್ಕ ಅಂದ್ರೆ ಮಾಡ್ಕ್ಯತ್ತಾನೆ. ಬೇಕಾದ್ರೆ ಸತ್ಯನಿಗೂ ಒಂದು ಕೆಲ್ಸ ಕೊಡುಸ್ತೀನಿ. ಗಂಡ ಹೆಂಡತಿ ಸಂಬಳ ತಗಂಡು ದಿಮ್ಮಗೆ ಇರ್ತಾರೆ' – ಎಂದು ಅವರು ಆಶ್ವಾಸನೆ ಇತ್ತಿದ್ದಾರೆ.

ಸತ್ಯ ಮದುವೆಯಾದರೂ ಕೆಲಸಕ್ಕೆ ಸೇರುವವಳೇ. ಅವಳ ಧೈರ್ಯ ತುಂಬ. ಅವಳ ಅಭಿಪ್ರಾಯಗಳು ಭಯವಾಗುವಂತಹವು. ಕಾಲೇಜಿನಲ್ಲಿ ಓದುವ ಹೆಣ್ಣುಮಕ್ಕಳೆಲ್ಲ ಹೀಗಿರುವುದಿಲ್ಲವಂತೆ. ತಾಯಿ ಇಲ್ಲದೆ ಬೆಳೆಯುವ ಹೆಣ್ಣುಮಕ್ಕಳು ಗಂಡಸರ ಹಾಗೆ ಆಗಿಬಿಡುತ್ತಾರೇನೋ! – ಎಂದು ವೆಂಕಟರಮಣಯ್ಯನವರು ತಮ್ಮಲ್ಲಿಯೇ ಯೋಚಿಸುತ್ತಾರೆ. ಒಟ್ಟಿನಲ್ಲಿ ಒಬ್ಬ ತಕ್ಕ ಬ್ರಾಹ್ಮಣನ ಕೈಲಿಟ್ಟು ಧಾರೆ ಎರೆದರೆ ಸಾಕು. ನನ್ನ ಜವಾಬ್ದಾರಿ ತಪ್ಪಿತು. ಮದುವೆಯಾದಮೇಲೆ ಗಂಡ ಹೆಂಡತಿ ಹೇಗೆ ಬೇಕಾದರೂ ಕುಣಿದುಕೊಳ್ಳಲಿ. ಯಾವ ಜಾತಿಯವರ ಮನೆಯಲ್ಲಿ ಬೇಕಾದರೂ ಊಟ ಮಾಡಲಿ. ನನ್ನ ಹೊಣೆ ಇಲ್ಲ – ಎಂದುಕೊಳ್ಳುವರು.

ಫಲಿತಾಂಶ ಬಂದ ಮೇಲೆ, ಕಾಲೇಜಿನಲ್ಲಿ ಲೆಕ್ಚರರ್ ಕೆಲಸಕ್ಕೆ ಅರ್ಜಿ ಹಾಕುವುದಾಗಿ ಹೇಳಿ ಅವಳು ಮೈಸೂರಿಗೆ ಹೋದಳು. ಕೆಲಸ ಸಿಕ್ಕಲಿಲ್ಲ, ಸಂಶೋಧನೆ ಮಾಡುವ ವಿದ್ಯಾರ್ಥಿವೇತನಕ್ಕೆ ಅರ್ಜಿ ಹಾಕಿದ್ದೇನೆ, ಊರಿಗೆ ಬರುವುದು ಒಂದು ವಾರ ತಡವಾಗುವುದೆಂದು ಕಾಗದ ಬರೆದಿದ್ದಳು. ಆಮೇಲೆ, ಎಂದರೆ ಈಗ ಹತ್ತು ಹನ್ನೆರಡು ದಿನದಿಂದ ಕಾಗದವೇ ಇಲ್ಲ. ಇಲ್ಲಿ ಅಣ್ಣನಿಗೆ ಮೊದಲನೆಯದು ಗಂಡು ಮಗುವಾದ ಸಮಾಚಾರ ತಿಳಿಸಿ ಬರೆದ ಕಾಗದಕ್ಕೆ ಕೂಡ ಉತ್ತರವಿಲ್ಲ. ಅದು ಅವಳಿಗೆ ತಲುಪಿದೆಯೋ ಇಲ್ಲವೋ! ಅವಳು ಮೈಸೂರಿನಲ್ಲಿದ್ದಾಳೆಯೋ ಇಲ್ಲವೋ? ಈಗ ನಾಲ್ಕು ದಿನದ ಹಿಂದೆ ಅವಳು ಬೆಂಗಳೂರಿನಲ್ಲಿ ಸಿಟಿ ಬಸ್ಸಿನಲ್ಲಿ ಕೂತು ಹೋಗುತ್ತಿದ್ದುದನ್ನು ಕಂಡದ್ದಾಗಿ ಈ ಊರಿನ ಹೈಸ್ಕೂಲು ಮೇಷ್ಟರು ವೃಷಭೇಂದ್ರಸ್ವಾಮಿಗಳು ವೆಂಕಟೇಶನಿಗೆ ಹೇಳಿದರಂತೆ. ಬೆಂಗಳೂರಿಗೆ ಯಾಕೆ ಹೋಗಿ

ದ್ದಾಳೆಯೋ! ಈ ನಾಮಕರಣದ ದಿನ ಅವಳು ಮನೆಯಲ್ಲಿರಬೇಕಾಗಿತ್ತು – ಎಂದು ತಂದೆ ನೆನೆಸಿಕೊಳ್ಳುತ್ತಿದ್ದರು.

೨

ದೊಡ್ಡ ತೊಟ್ಟಿ ಮತ್ತು ಒಳಸಾಲೆಗಳಲ್ಲಿ ಮಾತ್ರವಲ್ಲದೆ ಎದುರು ಮನೆಯ ಕುಪ್ಪಣ್ಣಯ್ಯಂಗಾರರ ಪಡಸಾಲೆಯಲ್ಲೂ ಎಲೆ ಹಾಕಿತ್ತು. ಊರಿನ ವೈಷ್ಣವ ಮತ್ತು ಶ್ರೀವೈಷ್ಣವರಲ್ಲಿ ಮುದುಕರನ್ನು ಬಿಟ್ಟು ಉಳಿದವರೆಲ್ಲ ಊಟಕ್ಕೆ ಬಂದಿದ್ದರು. ಸಮಾರಾಧನೆಯ ಹೆಮ್ಮೆಯ ನಾಯಕ ವೆಂಕಟೇಶ, 'ಸಾವಕಾಶವಾಯ್ತು. ನಿಧಾನವಾಗಿ ಭೋಜನವಾಗಬೇಕು' ಎಂದು ಉಪಚಾರ ಹೇಳಿಕೊಂಡು ಪಂಕ್ತಿಗಳ ಮಧ್ಯೆ ತಿರುಗಾಡುತ್ತಿದ್ದ. ಅವನು ರೇಶ್ಮೆಯ ಬಿಳೀ ಮಕುಟ ಉಟ್ಟು, ಮೇಲೆ ದೊಡ್ಡ ಅಂಚಿನ ಶಲ್ಯ ಹೊದೆದಿದ್ದ. ಎಡಹೆಗಲಿನಿಂದ ನೇತಾಡುವ ಜನಿವಾರವು ಶಲ್ಯದ ಒಳಗಿನಿಂದ ಕಾಣುತ್ತಿತ್ತು. ಎಡಗೈಗೆ ಬಂಗಾರದ ಚೈನಿನ ಗಡಿಯಾರ. ಬೆರಳಿಗೆ ಉಂಗುರಗಳು. ತಲೆಯ ಕ್ರಾಪು ಅರೆಕೆದರಿದ ಅಲಂಕೃತ ಸ್ಥಿತಿಯಲ್ಲಿತ್ತು.

ಹುಳಿತೊವೆ, ಬೂದುಗುಂಬಳಕಾಯಿ ಮಜ್ಜಿಗೆ ಹುಳಿ, ಸಾರುಗಳಲ್ಲಿ ಕಲಸಿ ಹಸಿವನ್ನು ಮೊದಲ ಕಿಸ್ತು ತೃಪ್ತಿಪಡಿಸಿದ ಮೇಲೆ, ನಿಧಾನವಾಗಿ ಹುಳಿಯನ್ನದ ಪಿಡಿಚೆ ಮಾಡುವಾಗ ಸಂವಾದ ಆರಂಭವಾಯಿತು.

ಕುಪ್ಪಣ್ಣಯ್ಯಂಗಾರರೆಂದರು: 'ಪರವಾಗಿಲ್ಲ, ಪುಳಿಯೋಗರೆ ನಮ್ಮ ಜನದ ಹಾಗೇ ಮಾಡಿದಾರೆ.'

'ಟ್ರೇಡ್ ಸೀಕ್ರೆಟ್ ಎಲ್ಲ ಪತ್ತೆಮಾಡಿದೀವಿ' – ವೆಂಕಟೇಶ ಮೆಚ್ಚುಗೆಯನ್ನು ಸ್ವೀಕರಿಸಿದ.

'ಐಯ್ಯಂಗಾರರ ಪುಳಿಯೋಗರೆ, ಮಾಧ್ವರ ಬೇಳೆಹುಳಿ, ಸ್ಮಾರ್ತರ ಮಜ್ಜಿಗೆ ಹುಳಿ ಅಂದ್ರೆ ಪ್ರಸಿದ್ಧ. ಬೂದುಗುಂಬಳಕಾಯಿ ಎಲ್ಲಿ ಸಿಕ್ತು ನಿಮಗೆ? ಇತ್ತೀಚೆಗೆ ಇತರೇ ಜನಗಳೂ ಬೂದುಗುಂಬಳಕಾಯಿ ತಿನ್ನಕ್ಕೆ ಶುರುಮಾಡಿಬಿಟ್ಟಿದಾರೆ' – ಹಳೆಮನೆಯ ಮುಖ್ಯಪ್ರಾಣರಾಯರು ಪಾಕಸಿದ್ಧಿಯ ಸಮನ್ವಯಸಿದ್ಧಾಂತದ ಜೊತೆಗೆ ಪ್ರಪಂಚ ಕೆಡುತ್ತಿರುವ ಕಡೆಗೆ ಸಂಭಾಷಣೆಯನ್ನು ಎಳೆದರು.

'ಇನ್ನೊಂದು ಸಲ ಹೆಂಡತಿಕೊರಳಿನ ತಾಳಿ ಕೀಳಿಸೂತನಕ ತಿನ್ನಲಿ ಬಿಡಿ. ಎಷ್ಟು ದಿನ ಮೆರೆದಾರು?' – ಕಲ್ಲಿನಮನೆ ಶ್ಯಾಮಣ್ಣನವರೆಂದರು.

'ಏಸು ಮೆರೆದರೂ ಚಿನ್ನ ಚಿನ್ನವೇ, ಕಬ್ಬಿಣ ಕಬ್ಬಿಣವೇ. ಇಬ್ಬರಿಗೂ ಪಾತ

ಹೇಳಿದೋನು ನಾನು. ಹೇಳ್ತೀನಿ ಕೇಳಿ' – ಎಂದು, ಎಂಭತ್ತು ವರ್ಷದ ವೃದ್ಧ ಅಯ್ಯಾ ಮೇಷ್ಟರು ಜ್ಞಾಪಿಸಿಕೊಂಡು ನಿರೂಪಿಸಿದರು:

'ನಮ್ಮ ವೆಂಕಟರಮಣಯ್ಯನೋರು ಮೇಲಗಿರಿಗೌಡನಿಗಿಂತ ನಾಲ್ಕು ವರ್ಷಕ್ಕೆ ಚಿಕ್ಕೋರು. ಅವರಿಗೆ ಐದು ವರ್ಷ, ಮೇಲಗಿರಿಗೌಡನಿಗೆ ಒಂಬತ್ತು. ಇಬ್ಬರೂ ನನ್ನ ಸ್ಕೂಲಿಗೆ ಬರ್ತಿದ್ರು. ನಾನು, ಕಂಡ ಪ್ರಯತ್ನ ಮಾಡಿದೆ. ಗೌಡನ ಬಾಯಲ್ಲಿ ಗರುಡ ಅನ್ನೊ ಪದ ಬರಲೇ ಇಲ್ಲ. ಗರುಡ ಅಂತ ನಾನು ತಿದ್ದುಕ್ಕೆ, ಅವನು ಗಲ್ಡ ಅಂತ ನುಡಿಯುಕ್ಕೆ.'

'ಸ್ವರ, ಉದಾತ್ತ, ಅನುದಾತ್ತಗಳ ಸಹಿತ ವೇದ ನುಡಿಯೋ ನಾಲಿಗೆ ಬಿಟ್ರೆ ಶೂದ್ರರ ಬಾಯಲ್ಲಿ ಹ್ಯಾಗೆ ಬರುತ್ತೆ ಗರುಡ ಅನ್ನೊ ಸಂಸ್ಕೃತ ಪದ?" – ಹೈಸ್ಕೂಲಿನ ಕನ್ನಡ ಪಂಡಿತ ಕೃಷ್ಣಪ್ಪನವರು ಕೇಳಿದರು.

'ಆದ್ರೂ ಈಗ ಅವರುದ್ದೇ ಕಾಲವಲ್ರೀ? ಅವರು ಲಾಯರಾದರು. ಈಗ ಮಂತ್ರಿಗಳಾಗಿದಾರೆ. ಸರ್ಕಾರೀ ಕೆಲಸವೆಲ್ಲ ಅವರದ್ದು. ನಮ್ಮ ಕೈಲಿ ಏನಿದೆ, ಗರುಡ ಅಂತ ಶುದ್ಧವಾಗಿ ನುಡಿಯೋದು ಬಿಟ್ರೆ?' – ತುಮಕೂರು ಕಾಲೇಜಿನಲ್ಲಿ ಇಂಟರ್ ಓದಿದ ಮೇಲೆ ಕೆಲಸ ಸಿಕ್ಕದೆ ನಿರಾಶನಾಗಿದ್ದ ನಾಗರಾಜ ಕೇಳಿದ.

'ಮಂತ್ರಿಯಾಗುವ ಮಾತು ಬಿಡಿ. ಎಲೆಕ್ಷನ್‌ನಲ್ಲಿ ಪಲ್ಟಿ ಹೊಡೆದ್ಹೋಕ್ತಿದ್ರು. ಕೊನೆಗಾದ್ರೂ ನಮ್ಮೋರ ತಂತ್ರವೇ ಬೇಕು' – ಎಂದು, ವೆಂಕಟೇಶನ ಏಜೆನ್ಸಿಯ ಪತ್ರಿಕೆಗಳನ್ನು ಮನೆಮನೆಗೆ ಹಂಚುತ್ತಿದ್ದ ಸುಬ್ಬರಾಯರು ತನ್ನ ಮಹತ್ವವನ್ನು ಹೇಳಿದಾಗ ವೆಂಕಟೇಶ ಧನ್ಯತೆ ಮತ್ತು ಪ್ರಸನ್ನತೆಗಳಿಂದ ಅವರ ಕಡೆ ನೋಡಿದ.

ಈ ಬರೀ ಸ್ಮಾರ್ತ ಹುಡುಗನಿಂದ ಮೇಲಗಿರಿಗೌಡರು ಗೆದ್ದರೆಂಬುದನ್ನು ಸಹಿಸಲಾರದೆ, 'ನಮ್ಮ ಕುಪ್ಪಣ್ಣಯ್ಯಂಗಾರರು ಸಹ ಎಲೆಕ್ಷನ್ನಲ್ಲಿ ಕೆಲಸ ಮಾಡದಿದ್ದರೆ' – ಎಂದು ತಿರುನಾರಾಯಣಯ್ಯಂಗಾರರು ಬಾಯಿಹಾಕಿ ವಾಕ್ಯವನ್ನು ಪೂರ್ತಿ ಮಾಡುವ ಮೊದಲೇ, ತಾವು ಈಗ ಪುಳಿಯೋಗರೆ ತಿನ್ನುತ್ತಿರುವುದು ಈ ಸ್ಮಾರ್ತರ ಮನೆಯಲ್ಲೇ ಎಂಬ ನೆನಪಾಗಿ ಅರ್ಥಕ್ಕೆ ಬದಲಿಸಿ, '....ಅನೇ ನಮ್ಮ ಕುಪ್ಪಣ್ಣ ಅಯ್ಯಂಗಾರರು ವೆಂಕಟೇಶಮೂರ್ತಿಗಳು ಕೂಡ ತಂತ್ರ ಮಾಡದಿದ್ದರೆ ಆ ಶೂದ್ರ ಹ್ಯಾಗೆ ಗೆಲ್ಲಿದ್ದ?' ಎಂದು ಸ್ಮಾರ್ತ ಶ್ರೀವೈಷ್ಣವ ಏಕತೆಯನ್ನು ಮೀಟಿದರು.

'ನಾವು ನಾವು ತ್ರಿಮತಸ್ಥರು ಒಂದಾಗದೆ ಇನ್ನು ಬದುಕೂಹಾಗಿಲ್ಲ' – ಎಂದು, ಕಂಬದ ಆಚೆ ಕುಳಿತಿದ್ದ ಒಬ್ಬರು ಬಾಯಿಹಾಕಿದರು.

ಅವರ ಪಕ್ಕದಲ್ಲಿಯೇ ಕುಳಿತಿದ್ದ ರಾಘವೇಂದ್ರ ತಟ್ಟನೆ ಅಂದುಬಿಟ್ಟ: 'ಆಗ್ತಾರೆ ಈ ಗೊಡ್ಡು ರಂಡೇಗಂಡರು!'

ಇಪ್ಪತ್ತಾರು ವರ್ಷದ ಮಾಧ್ವ ರಾಘವೇಂದ್ರ ತನ್ನ ಹಿಂದಿನ ಬೀದಿಯ

ಅಪ್ಪಣ್ಣಯ್ಯಂಗಾರರ ಮಗಳು ಶ್ರೀದೇವಿಯನ್ನು ಪ್ರೀತಿಸಿದ್ದ. ಹಿರಿಯರು ಒಪ್ಪದಿದ್ದರೆ ಅವನ ಸಂಗಡ ಓಡಿ ಬರಲು ಸಿದ್ಧಳಿರುವುದಾಗಿ ಅವಳು ಚೀಟಿ ಬರೆದು ಕಳಿಸಿದ್ದಳು. ಎಸ್.ಎಸ್.ಎಲ್.ಸಿ. ಓದಿದ್ದರೂ ಬೇರೆ ಊರಿಗೆ ಹೋದರೆ ಕೆಲಸ ಸಿಕ್ಕುತ್ತಿರಲಿಲ್ಲ. ಅವಳನ್ನು ಕರೆದುಕೊಂಡು ಹೋಗಿ ಜೀವನ ಮಾಡುವುದು ಹೇಗೆ ಎಂಬ ಚಿಂತೆ ಅವನನ್ನು ಕಾಡಿತು. ಬೇರೆ ಜಾತಿಯ ಅವಳನ್ನು ಮದುವೆಯಾದರೆ ತನ್ನ ಸ್ವಯಾರ್ಜಿತ ಆಸ್ತಿಯಲ್ಲಿ ಒಂದು ಎಕರೆಯನ್ನೂ ಕೊಡುವುದಿಲ್ಲವೆಂದು ಅವನ ತಂದೆ ಭೀಮಸೇನರಾಯರು ಕಡ್ಡಿ ಮುರಿದರು. ತರುಣನ ಧೈರ್ಯ ಕುಗ್ಗಿತು. ಆ ಸಿಟ್ಟನ್ನು ಅವನು ಇಲ್ಲಿ ತೀರಿಸಿಕೊಂಡ. ಮಡಿನಂತರಾದುದರಿಂದ ಅವನ ತಂದೆ ಸಮಾರಾಧನೆಗೆ ಬಂದಿರಲಿಲ್ಲ.

ವೆಂಕಟರಮಣಯ್ಯನವರು, ಎದುರು ಮನೆಯ ಕುಪ್ಪಣ್ಣಯ್ಯಂಗಾರರ ಮನೆಯ ಪಡಸಾಲೆಯಲ್ಲಿ ಕೂತಿದ್ದವರನ್ನು ಉಪಚರಿಸುತ್ತಿದ್ದರು. ಅವರ ಅದೃಷ್ಟ ಚೆನ್ನ, ಮಗನಿಗೆ ಮೊದಲನೆಯದೇ ಗಂಡು ಮಗುವಾಯಿತು – ಎಂದು ಮುಂತಾಗಿ ಸಂಭಾಷಣೆ ಸಾಗುತ್ತಿತ್ತು. ಮೊದಲ ಪಂಙ್ತಿಗೆ ಯಾರು ಯಾರು ಬಂದಿಲ್ಲ ಎಂಬುದನ್ನು ವೆಂಕಟರಮಣಯ್ಯನವರು ವಿಚಾರಿಸುತ್ತಿದ್ದರು. ಪೋಸ್ಟ್ ಮಾಸ್ಟರ್ ನಾರಣಯ್ಯನವರು ಇನ್ನೂ ಬಂದಿಲ್ಲ; ಎರಡು ಗಂಟೆಯ ಬಸ್ಸಿಗೆ ಟಪಾಲು ಕಟ್ಟಿ ಕೊಟ್ಟೇ ಅವರು ಮನೆ ಬಿಡಬೇಕು; ಈಗ ಎರಡೂ ಕಾಲಾಗಿದೆ; ಇನ್ನೂ ಬರಲಿಲ್ಲ; ಇನ್ನು ಎರಡನೆಯ ಪಂಙ್ತಿಗೇ ಕೂರಬೇಕು ಅವರು – ಎಂದು ಯಜಮಾನರು ಯೋಚಿಸುತ್ತಿರುವಾಗಲೇ ನಾರಣಯ್ಯನವರು ಬಂದರು. ಕೈಲಿ ಒಂದು ಕವರು.

ಯಜಮಾನರು ಅದನ್ನು ಇಸಿದುಕೊಂಡರು. ವಿಳಾಸದ ಅಕ್ಷರ ನೋಡಿಯೇ ಗೊತ್ತಾಯಿತು – ಮಗಳು ಸತ್ಯಭಾಮೆಯದು. ಅವಳೇ ಇಷ್ಟು ಹೊತ್ತಿಗೆ ಊರಿಗೆ ಬರಬೇಕಾಗಿತ್ತು. ಕಾಗದ ಬರೆದಿದ್ದಾಳೆ. ಯಾಕೆ ಬರಲಿಲ್ಲವೋ! ಯಜಮಾನರು ಅಲ್ಲಿಯೇ ಕವರನ್ನು ಒಡೆದು ಓದಿದರು: ತನಗೆ ಬೆಂಗಳೂರಿನ ದೇಶೀಯ ಕಾಲೇಜಿನಲ್ಲಿ ಲೆಕ್ಚರರ್ ಕೆಲಸ ಸಿಕ್ಕಿದೆ, ಸೇರಿದ್ದೇನೆ – ಎಂಬ ತಾತ್ಪರ್ಯದ ಮೊದಲ ಪ್ಯಾರಾ ಓದಿ ಮನಸ್ಸಿಗೆ ಸಮಾಧಾನವಾಯಿತಾದರೂ ಇವಳ್ಯಾಕೆ ನೌಕರಿ ಮಾಡಬೇಕೆಂಬ ತುಸು ಅಸಮಾಧಾನವೂ ಉಂಟಾಯಿತು. ಎರಡನೆಯ ಪ್ಯಾರಾ ಓದುವಾಗ ಮನಸ್ಸಿಗೆ ಕಸಿವಿಸಿಯಾಯಿತು. ಮುಂದೆ ಓದುತ್ತಾ ಹೋದಂತೆ ಆತಂಕವಾಯಿತು. ಕಣ್ಣುಗಳನ್ನು ಓಡಿಸಿಕೊಂಡುಹೋದರು. ಮುಖ್ಯ ವಿಷಯ ಸ್ಪಷ್ಟವಾಯಿತು. ಮಂತ್ರಿಯಾಗಿರುವ ಮೇಲಗಿರಿಗೌಡರ ಮಗ ಶ್ರೀನಿವಾಸ ಮತ್ತು ತಾನು ಮದುವೆಯಾಗಲು ನಿಷ್ಕರ್ಷಿಸಿರುವುದಾಗಿಯೂ, ತಾವು ಆಶೀರ್ವದಿಸಬೇಕೆಂದೂ ಬರೆದಿದ್ದಳು.

ತಾವು ಯಾವುದನ್ನು ಕಲ್ಪಿಸಿಕೊಳ್ಳಲು ಸಹ ಅಸಮರ್ಥರಾಗಿದ್ದರೋ ಅಂಥದನ್ನು ತಮ್ಮ ಮಗಳು ನಿಶ್ಚಯಿಸಿದ್ದಾಳೆ. ಅದನ್ನು ನಂಬುವುದು ಒಂದು ನಿಮಿಷ ಕಷ್ಟವಾಯಿತು. ಆದರೆ ಮಗಳ ಸ್ವಭಾವವನ್ನು ಅರಿತಿದ್ದುದರಿಂದ ಅಪರಿಹಾರ್ಯ ಘಟನೆಯಾಗುತ್ತದೆಂದು ಅವರ ಅಂತಃಪ್ರಜ್ಞೆಯೇ ಹೇಳಿತು. ತಲೆ ಸುತ್ತಿ ಬಂದಂತೆ ಆಯಿತು. ಸುತ್ತ ಬ್ರಾಹ್ಮಣರು ಊಟ ಮಾಡುತ್ತಿದ್ದಾರೆ. ಮಧ್ಯೆ ತಾನು ಬಿದ್ದೇನು ಎಂಬ ಎಚ್ಚರವಾಗಿ ಪಡಸಾಲೆಯಿಂದ ಹೊರಗೆ ಬಂದು, ಜಗುಲಿಯ ಮೇಲೆ ಕೈ ತೊಳೆಯಲು ನೀರು ತುಂಬಿ ಇಟ್ಟಿದ್ದ ದೊಡ್ಡ ಕೊಳದಪ್ಪಲೆಯ ಪಕ್ಕದಲ್ಲಿ ಕುಳಿತರು. ಎರಡು ನಿಮಿಷ ಕಣ್ಣು ಹೊತ್ತಿಕೊಂಡು ಬಂದಂತಾದರೂ ಅವರು ಮಲಗಿಕೊಳ್ಳಲಿಲ್ಲ. ಕಣ್ಣು ಹೊತ್ತು ಕಳೆದಮೇಲೆ ತಮ್ಮ ಮನೆಯ ಕಡೆಗೆ ಹೆಜ್ಜೆ ಹಾಕಿದರು. ಅಲ್ಲಿ ಮೂರನೆಯ ಸಲ ಹುಳಿಯನ್ನ ಬಡಿಸುತ್ತಿದ್ದರು. ಅದರ ಹಿಂದೆಯೇ ಲಾಡು ಉಂಡೆ ಬರುತ್ತಿತ್ತು. ವೆಂಕಟೇಶ ಮುಖ್ಯಮುಖ್ಯರಾದವರಿಗೆ ಬಲವಂತಮಾಡಿ ಬಡಿಸುತ್ತಿದ್ದ.

'ಯಂಕ್ಟೇಶ, ಬಾ ಇಲ್ಲಿ ಒಂದಿಷ್ಟು'–ಎಂದು ಯಜಮಾನರು ಹಿತ್ತಿಲ ಕಡೆಗೆ ಹೋದರು. ಅವರ ಮುಖವನ್ನು ನೋಡಿಯೇ ಗಾಬರಿಯಾದ ಮಗ ಹಿಂದೆ ಹಿಂದೆ ಬಂದ. ಹಿಂಭಾಗದಲ್ಲಿದ್ದ ಹುಲ್ಲುಕೊಪ್ಪಲಿಗೆ ಹೋಗಿ ಅವರು ಕಾಗದವನ್ನು ಮಗನ ಕೈಲಿ ಕೊಟ್ಟರು. ಅವನು ಅದನ್ನು ಓದಿಕೊಳ್ಳುತ್ತಿರುವಾಗ ಅವರಿಗೆ ಕೋಪ ಏರುತ್ತಿತ್ತು. ಅವನು ಓದಿಕೊಳ್ಳುತ್ತಿದ್ದ: 'ಜಾತಿ ಕುಲಗಳ ಬಗೆಗೆ ನನ್ನ ಅಭಿಪ್ರಾಯ ನಿಮಗೆ ಗೊತ್ತೇ ಇದೆ. ನೀವು ಮತ್ತು ಊರಿನ ಇತರರು ಇದನ್ನು ಅನೀತಿ ಎನ್ನಬಹುದು. ಆದರೆ ಇದು ಅತ್ಯಂತ ನೀತಿಯುತ ನಿರ್ಣಯ ಎಂದು ನನ್ನ ಶುದ್ಧ ನಂಬಿಕೆ. ಎದುರುನಿಂತು ಮದುವೆ ಮಾಡಿಕೊಡುವುದು ನಿಮಗೆ ಸಾಧ್ಯವಾಗದಿರಬಹುದು. ಆದರೆ ಅಲ್ಲಿಂದಲೇ ಆಶೀರ್ವಾದ ಕಳಿಸಿ....'

ತಂದೆ ಮಾತನಾಡಿದರು: 'ಬೆಂಗಳೂರಿಗೆ ಹೋಗಿ ಈ ಕತ್ತೆಲೌಡಿಗೆ ನಾಲ್ಕು ಒದ್ದು ಎಳಕೊಂಡು ಬಾ ಹೋಗು. ಈಗಲೇ ಹೊರಡು.'

ವೆಂಕಟೇಶ ಓದಿಕೊಳ್ಳುತ್ತಿದ್ದ: '....ಇಂಥದೆಲ್ಲ ಊರಿನಲ್ಲಿ ನಾಲ್ಕು ದಿನ ಕೋಲಾಹಲ ಉಂಟುಮಾಡುತ್ತದೆ. ಆಮೇಲೆ ಜನ ತೆಪ್ಪಗಾಗುತ್ತಾರೆ. ಅಲ್ಲಿಯ ತನಕ ನೀವು ಬೇಡವೆಂದರೆ ನಾನು ಊರಿಗೆ ಬರುವುದಿಲ್ಲ. ಆದರೆ ನೀವು ಮತ್ತು ಅಣ್ಣ ಬೆಂಗಳೂರಿಗೆ ಬರುತ್ತಿದ್ದರೆ ಯಾವ ತೊಂದರೆಯೂ ಇಲ್ಲ....'

'ಅಲ್ಲೇನು ಓದ್ತಿದೀಯ! ಮೂರು ಗಂಟೆ ಮೋಟಾರಿಗೆ ಹೊರಡೋ ಬೆಂಗಳೂರಿಗೆ. ಆ ಕಳ್ಳಮುಂಡೆ ಕೈಕಾಲು ಕಟ್ಟಿ ಎಳ್ಕೊಂಡು ಬಾ. ಯಾರಾದರೂ ಒಬ್ಬ ವ್ಯಾಸಾಯ ಮಾಡೂ ಬ್ರಾಹ್ಮಣ ಹುಡುಗನಿಗೆ ಕೊಟ್ಟು ಇನ್ನು

ಮೂರು ದಿನದಲ್ಲಿ ತಾಳಿ ಕಟ್ಟಿಸಿಬಿಡಾಣ' – ನಡುವೆ ತಂಗೆ ಕೂಗಿದರು.

ಕಾಗದದಲ್ಲಿ ಬರೆದಿತ್ತು: '....ಊರಿಗೆ ಬರಲು ನನಗೆ ಭಯವೇನಿಲ್ಲ. ಒಂದು ಲಕ್ಷ ಜನ ಎದುರಿಗೆ ನಿಂತು ಬೆರಳುಮಾಡಿದರೂ ನನ್ನ ನಂಬಿಕೆ ನನ್ನದು. ನನ್ನ ಧೈರ್ಯ ನನ್ನದು....'

'ಮೋಟಾರಿಗೆ ಹೊತ್ತಾಗುತ್ತೆ ಹೊರಡೋ ಬ್ಯಾಗ' – ಎಂದು ಯಜಮಾನರು ಅವನ ಕೈಲಿದ್ದ ಕಾಗದವನ್ನು ಕಿತ್ತುಕೊಂಡರು.

'ಅಪ್ಪ, ಈಗ ನೀನು ತಾಳ್ಮೆ ತಂದುಕೊಳ್ಳದೆ ಇದ್ರೆ ನಮ್ಮ ಮರ್ಯಾದೆಯೇ ಹೋಗುತ್ತೆ.'

'ನಮ್ಮ ಮರ್ಯಾದೆ ಕಳಿಯುಕ್ಕೆ ತಾನೆ ಈ ಮುಂಡೆ ಹುಟ್ಟಿರೂದು. ತಾಳ್ಮೆ ಯಂತೆ ಗೀಳ್ಮೆ' – ಎಂದು ಅವರು ಹುಲ್ಲುಮೆವೆ ಅಡಿಯ ಸಂದಿನಿಂದ ಒಂದು ಬಿದಿರುದಡಿಯನ್ನು ಎಳೆದುಕೊಂಡರು.

ಎದುರಿಗೆ ನಿಂತಿರುವ ತಾನೇ ಮಗಳೆಂದು ಭ್ರಮಿಸಿ ಎಲ್ಲಿ ಹೊಡೆಯುತ್ತಾರೆಯೋ ಎಂದು ಅರಿತ ವೆಂಕಟೇಶ ಉಪಾಯದಿಂದ ಹೇಳಿದ: 'ಈಗ ಎರಡು ಮನೆ ಭರ್ತಿ ಊರ ಬ್ರಾಹ್ಮಣರು ಸೇರಿದಾರೆ. ಮಾತಾಡಿದರೆ ಅವರಿಗೆಲ್ಲ ತಿಳಿಯುತ್ತೆ. ಒಂದು ಪಕ್ಷ ನಾನು ಬೆಂಗಳೂರಿಗೆ ಹೋಗಿ ಅವಳ ಮನಸ್ಸನ್ನ ಬದಲಾಯಿಸಿದರೂ ಆಮೇಲೆ ನಮ್ಮ ಮರ್ಯಾದೆ ಉಳಿಯುಲ್ಲ. ಮುಂದೆ ಅವಳಿಗೆ ಬೇರೆ ಗಂಡು ಸಿಕ್ಕುಲ್ಲ. ಅದಕ್ಕೆ ನೀನು ಏನೂ ಆಗಿಲ್ಲ ಅಂತ ಸುಮ್ಮನಿದ್ದುಬಿಡಬೇಕು.'

'ಈ ಮುಂಡೆ ಹೀಗೆ ಮಾಡ್ತೀನಿ ಅಂತ ಬರೆದಿರುವಾಗ ಹ್ಯಾಗೆ ಸುಮ್ಮನಿರೂದು?' – ಎಂದು ಮಗನನ್ನು ಜಬರಿಸಿ ಕೇಳುವಾಗ ಅವರ ಕಣ್ಣಿನಲ್ಲಿ ನೀರು ಬಂದುಬಿಟ್ಟಿತು. 'ತಾಯಿ ಇಲ್ಲದ ಹುಡುಗಿ ಅಂತ ನಾನೇ ತಾಯಿಯಾಗಿ ಸಾಕಿದೆ. ಪಾಪಿ ಲೌಡಿ....' ಎಂದು ಬಿಕ್ಕಿಬಿಕ್ಕಿ ಅಳಲು ಪ್ರಾರಂಭಿಸಿದರು.

ಒಳಗೆ ಹುಳಿಯನ್ನ ಲಾಡುಗಳು ನಿಧಾನವಾಗಿ ಸಾಗುತ್ತಿದ್ದುವು. ಭೋಜಕರು ಶ್ಲೋಕ ಹೇಳಲು ಪ್ರಾರಂಭಿಸಿದ್ದರು. 'ಮರ್ತ್ಯ ಲೋಕಕ್ಕೆ ಶಿವಾ ಕಳುಹಿದ ಮೂರು ಕಣ್ಣಿನ ತೆಂಗಿನಕಾಯೀ' – ಎಂದು ಗಟ್ಟಿಯಾಗಿ ಹೇಳಲು ಶುರುಮಾಡಿದ್ದವರು ಸೋಸಲಗೆರೆ ಸುಬ್ಬರಾಯರೆಂದು ಅಲ್ಲಿಂದಲೇ ತಿಳಿಯುತ್ತಿತ್ತು.

ವೆಂಕಟೇಶ ಹೇಳಿದ: 'ಅಪ್ಪ, ಇಂಥ ಸಂದರ್ಭದಲ್ಲಿ ಏನೂ ಆಗಿಲ್ಲ ಅನ್ನೊ ಹಾಗೆ ನಿಭಾಯಿಸುಕ್ಕೆ ನಿನ್ನ ಕೈಲಾಗುಲ್ಲ. ನೀನು ಸುಮ್ಮನೆ ದೇವಸ್ಥಾನಕ್ಕೆ ಹೋಗಿಬಿಡು. ನಾನು ಹೇಳೂತನಕ ಯಾರ ಕೈಲೂ ಈ ವಿಷಯ ಮಾತಾಡ ಕೂಡದು. ತಿರುಮಲದೇವರ ಆಣೆ. ಈ ಕಾಗದ ನನ್ನ ಹತ್ತಿರ ಇರಲಿ' – ಎಂದು ಅವನು ಅವರ ಬೆನ್ನಿನ ಮೇಲೆ ಕೈಹಾಕಿ ಹಿಂಬದಿಯ ದಾರಿಯಿಂದಲೇ ಕಳಿಸಿದ. ದೇವಸ್ಥಾನದ ಬೀಗದ ಕೈ ಯಾವಾಗಲೂ ಅವರ ಸೊಂಟದಲ್ಲಿ ಇರುತ್ತಿತ್ತು.

೩

ಒಬ್ಬರಾದ ಮೇಲೆ ಒಬ್ಬರಂತೆ ಶ್ಲೋಕ ಹೇಳುತ್ತಿದ್ದರು. ಎಲ್ಲರ ಎಲೆಯಮೇಲೂ ಹುಳಿಯನ್ನ ಹರವಿಬಿದ್ದಿತ್ತು. ಕೆಲವರು ಒಡೆದ ಲಾಡುನನ್ನು ಸಹ ಚಲ್ಲಿದ್ದರು. ಪಲ್ಯ, ಹುಳಿತೋವೆಗಳು ಎಲೆಯ ಕೊನೆಯಲ್ಲಿ ವಿರಮಿಸಿ ನೊಣಗಳನ್ನು ಆಕರ್ಷಿಸುತ್ತಿದ್ದುವು. ವೆಂಕಟೇಶ ಒಂದು ಸಲ ಎದುರು ಮನೆಗೂ ಹೋಗಿ ವಿಚಾರಿಸಿಕೊಂಡು ಬಂದ. ಇನ್ನು ಮಜ್ಜಿಗೆಗೆ ಅನ್ನ ಕೇಳುವಂತೆ ಬಡಿಸುವವರಿಗೆ ಸೂಚಿಸಿದ.

ಜಗುಲಿಯ ಮೇಲೆ ಹಾಕಿದ್ದ ಜಮಖಾನೆಯ ಮೇಲೆ ತಾಂಬೂಲಕ್ಕೆ ಕುಳಿತಾಗ ಕೆಲವರು, 'ಯಜಮಾನರೆಲ್ಲಿ?' ಎಂದರು. 'ತ್ವಾಟದಾಗೆ ಯಾರೋ ಬೇಲಿ ಹಾರಿ ಮರ ಹತ್ತಿ ಕಾಯಿ ಕೆಡುವ್ತಿದ್ದರಂತೆ. ನೋಡಿಕೊಂಡು ಬತ್ತೀನಿ ಅಂತ ಹೋದ್ರು' ಎಂದು ವೆಂಕಟೇಶ ಉತ್ತರಕೊಟ್ಟ.

'ನೋಡಿ, ಇತರೆಯೋರೆಲ್ಲ ಮಾತಾಡಿಕೊಂಡು ಬರೀ ಬ್ರಾಹ್ಮಣರ ಜಮೀನಿನಲ್ಲೇ ಕಳ್ಳತನ ಮಾಡ್ತಾರೆ. ಅವರ ತ್ವಾಟ ಗದ್ದೆಗಳಲ್ಲಿ ಮಾತ್ರ ಒಂದು ತೆನೆ, ಒಂದು ಗೊನೆ ಅಳ್ಳಾಡುಲ್ಲ'—ಸ್ವಂತ ಬೇಸಾಯ ಮಾಡುತ್ತಿದ್ದ ನಾಗಪ್ಪನವರು ಕಷ್ಟ ಸುಖ ಹೇಳಲು ಪ್ರಾರಂಭಿಸಿದರು.

ವೆಂಕಟೇಶ ಒಳಗೆ ಬಂದು ತೊಟ್ಟೆಯ ಎಲೆ ಗೋಮೆ ಮಾಡಿಸಿ ಅಡಿಗೆಯವರು, ಬಡಿಸಿದವರು, ಮತ್ತು ಮೊದಲ ಪಂಙ್ತಿಗೆ ಬರಲು ಹೊತ್ತಾದವರಿಗೆಲ್ಲ ಎಲೆ ಹಾಕಿಸಿಸಿದ. ತಾನೆ ಬಡಿಸಲು ನಿಂತ. ಯಜಮಾನರು ಬಂದ ಮೇಲೆ ತಾನು ಅವರ ಕೂಡ ಮಾಡುವುದಾಗಿ ಹೇಳಿ ಅವರಿಗೆಲ್ಲ ಊಟ ಮಾಡಿಸಿ ತಾಂಬೂಲ ಕೊಟ್ಟು ಕಳಿಸಿದ. ಇನ್ನು ಊಟವಾಗದೆ ಉಳಿದವರೆಂದರೆ ಅವನು, ತಂದೆ, ಮತ್ತು ಅವರ ಅತ್ತೆ. ಬೀಗರು, ಅಳಿಯ ಮಾಡದೆ ಅತ್ತೆ ಕೂರುವವರಲ್ಲ. ಆದುದರಿಂದ ತಂದೆಯನ್ನು ಕರೆತರಲು ತಾನೇ ದೇವಸ್ಥಾನಕ್ಕೆ ಹೋದ. ಅವರು ಗುಡಿಯ ಬಾಗಿಲು ತೆಗೆದುಕೊಂಡು ಒಳಗಿನ ಕಂಬವನ್ನೊರಗಿ ಯೋಚಿಸುತ್ತಾ ಕುಳಿತಿದ್ದರು.

'ಅಪ್ಪ, ಊಟ ಮಾಡಾಣ, ಮನೆಗೆ ಬಾ. ದಾರೀಲೇ ಆಗಲಿ, ಹೊರಗೆ ಯಾರ ಕೈಲೇ ಆಗಲಿ ನೀನು ಈ ವಿಷಯ ಆಡಕೂಡದು. ತ್ವಾಟದಲ್ಲಿ ಕಳ್ಳತನವಾಗ್ತಿತ್ತಂತೆ, ನೋಡುಕ್ಕೆ ಹೋಗಿದಾರೆ ಅಂತ ನಾನು ಹೇಳಿದೀನಿ. ಯಾರಾದ್ರೂ ಕೇಳಿದರೆ ನೀನೂ ಹಾಗೇ ಅನ್ನಬೇಕು.'

'ಮುಚ್ಚಿಕಂಡ್ರೆ ಆಗುತ್ತೇನೋ? ಅವಳು ಹ್ಯಾಗೂ ಮಾಡ್ಕಂಡೇ ಮಾಡ್ಕತ್ತಾಳೆ. ಹೂಸೂದು ತಡ ಅಂಸ್ರೆ ನಾರೂದು ತಡವೆ?'

'ನಾನು ಬೆಂಗಳೂರಿಗೆ ಹೋಗಿ ಅವಳ ಕೈಲಿ ಮಾತಾಡ್ತೀನಿ ಸುಮ್ನಿರು.'

'ಅವಳ ಸ್ವಭಾವ ನಿಂಗೆ ಗೊತ್ತಿಲ್ವೆ?'

'ಇವಳು ಕುದುರೆಯಂಥೋಳು. ಈ ಕುದುರೆ ಏನೋ ಉಮೇದು ಮಾಡ್ತು ಅಂತ ಆ ಕತ್ತೆಗಳು ಒಪ್ಪಬೇಕಲ್ಲ.'

'ಇಷ್ಟು ದಿನವಾದರೂ ನಿಂಗೆ ಬುದ್ಧಿ ಬರಲಿಲ್ಲ. ಯಾಕೆ ಒಪ್ಕಳುಲ್ಲ? ಬ್ರಾಹ್ಮಣರ ಹುಡುಗೀನ ಮಾಡ್ಕಂಡು ನಮ್ಮ ಜಾತೀಗೇ ಅವಮಾನ ಮಾಡಬೇಕು ಅಂದ್ರೆ ಆ ಬ್ರಾಹ್ಮಣದ್ವೇಷಿ ಬಿಡ್ತಾನೆಯೆ? ನಾನೂ ಅವನೂ ಜೊತೇಲಿ ಓದ್ತಿದ್ವಿ. ಅವನ ಯೋಗ್ತಿ ನಂಗೊತ್ತು. ಈಗ ಇದು ತಾನಾಗಿಯೇ ಹೋಗಿರುವಾಗ ಬಿಡ್ತಾರೆಯೇ ಅವಕಾಶಾನ?'

'ಅಪ್ಪ, ಕುದುರೆ ಮೇಲೆಬಿದ್ದು ಹೋದ್ರೂ ಕತ್ತೆಗಳು ತಮ್ಮ ಲಾಯಕ್ಕೆ ಸೇರಿಸುಲ್ಲ. ಇದು ನೀನು ತಿಳ್ಕಂಡಿರೂವಷ್ಟು ಸುಲಭವಲ್ಲ. ಈಗ ಊಟ ಮಾಡು ಬಾ. ಯೋಚನೆ ಮಾಡಿ ನಾನು ಏನಾರ ಮಾಡ್ತೀನಿ' – ಎಂದು ವೆಂಕಟೇಶ ತಂದೆಯ ಕೈ ಹಿಡಿದು ಎಬ್ಬಿಸಿ ಕರೆದುಕೊಂಡು ಬಂದ.

ಮಗ ಹೇಳಿದಂತೆ ವೆಂಕಟರಮಣ್ಯಯನವರು ಯಾವ ಮಾತೂ ಆಡದೆ ಸುಮ್ಮನಿದ್ದರು. ಆದರೆ ಏನೋ ಅನಾಹುತ ನಡೆದುಹೋಗಿದೆ ಎಂಬುದನ್ನು ಅವರ ಮುಖವು ಬಿಚ್ಚಿತೋರಿಸುತ್ತಿತ್ತು.

ತಂದೆ ಮಗನಿಗೆ ಬಡಿಸಿದ ನಂತರ ಬೀಗಿತ್ತಿ ಊಟ ಮಾಡಿದರು. ವಿಷಯ ಇವರಿಬ್ಬರನ್ನು ಬಿಟ್ಟು ಮತ್ತೆ ಯಾರಿಗೂ ತಿಳಿದಿಲ್ಲ. ಊಟವಾಗುವ ವೇಳೆಗೆ ವೆಂಕಟೇಶನ ಮನಸ್ಸು ಅದೇನೋ ಯೋಚಿಸಿತ್ತು. 'ನೋಡಿ, ಇನ್ನು ರಾತ್ರಿಯ ಆರತಿ ಅಕ್ಷತೆ ಹೆಂಗಸರ ಬಾಬಿಗೆ ಸೇರಿದ್ದು. ನಮ್ದೇನೂ ಕೆಲಸವಿಲ್ಲವಲ್ಲ?' – ಎಂದು ಅತ್ತೆಯನ್ನು ಕೇಳಿದ. ಅವರು 'ಹೂಂ'ಗುಟ್ಟಿದರು. ಹೆಂಡತಿ ಚಿಕ್ಕ ಮನೆಯಲ್ಲಿ ಮಗುವಿನೊಡನೆ ಮಲಗಿದ್ದಳು. ಅವಳಿಗೆ ನಿದ್ರೆ ಹೊತ್ತಿದ್ದಂತೆ ಕಾಣುತ್ತಿತ್ತು. ವೆಂಕಟೇಶ ಉಗ್ರಾಣದ ಕೋಣೆಗೆ ಹೋಗಿ ಒಂದು ಬುಟ್ಟಿಗೆ ಹತ್ತು ಲಾಡು, ಹತ್ತು ಒಬ್ಬಟ್ಟುಗಳನ್ನು ಹಾಕಿಕೊಂಡ. ಅಡಿಗೆಮನೆಗೆ ಬಂದು ಒಂದು ಅಡಿಕೆಪಟ್ಟೆಯಲ್ಲಿ ಸುಮಾರು ಮೂರು ಪಾವು ಅಕ್ಕಿಯ ಹುಳಿಯನ್ನ ಕಟ್ಟಿ ಅದನ್ನೂ ಬುಟ್ಟಿಗೆ ಹಾಕಿಕೊಂಡು ಶರಟು ತೊಟ್ಟು ಕಾಲಿಗೆ ಎಕ್ಕಡ ಮೆಟ್ಟಿ ಪಟೇಲ್ ತಿರುಮಲೇಗೌಡರ ಮನೆಗೆ ಹೊರಟ.

೪

ಮಂತ್ರಿ ಮೇಲಗಿರಿಗೌಡರ ತಂದೆ ಪಟೇಲ್ ತಿರುಮಲೇಗೌಡರು ಈ ಊರಿನಲ್ಲಿಯೇ ಇರುತ್ತಾರೆ. ಬೆಂಗಳೂರಿನಲ್ಲಿರುವ ಮಗ ಆಗಾಗ್ಗೆ ಊರಿಗೆ ಬಂದು

ನೋಡಿಕೊಂಡು ಹೋಗುತ್ತಾರೆ. ವೃದ್ಧ ಪಟೇಲರ ತಮ್ಮನ ಮಗ, ಅವನ ಹೆಂಡತಿ ಇಲ್ಲಿದ್ದು ಅವರ ಜಮೀನಿನ ಮೇಲ್ವಿಚಾರಣೆ ನೋಡಿಕೊಳ್ಳುತ್ತಾರೆ. ಅವರ ಊಟ ತಿಂಡಿಯೂ ಇವರಿಂದಲೇ ನಡೆಯುತ್ತದೆ.

ಬರೀ ತಿರುಮಲೇಗೌಡರ ಮನೆ ಎಂದರೆ ಊರಿನಲ್ಲಿ ಯಾರಿಗೂ ತಕ್ಷಣ ತಿಳಿಯುವುದಿಲ್ಲ. ಕೋಟೆಮನೆ ಎನ್ನಬೇಕು. ಮೇಲಿನ ಮನೆ ಅಂದರೂ ಆಗುತ್ತದೆ. ಕೆಲವರು ಅರಮನೆ ಎನ್ನುವುದೂ ಉಂಟು. ಪಾಳೆಯಗಾರರಾಗಿ ಸುತ್ತ ನೂರು ಊರುಗಳನ್ನು ಆಳಿ ಈ ಊರಿನ ಕೋಟೆ ಕಟ್ಟಿಸಿದವರ ನೇರವಾದ ವಂಶದವರು ಇವರು. ಆ ಕಾಲದಲ್ಲಿ ಕಟ್ಟಿದ ಮನೆಯೇ ಈಗಲೂ ಇಲ್ಲದಿದ್ದರೂ ಈಗಿರುವು ದೇನೂ ಸಣ್ಣ ಪ್ರಮಾಣದ್ದಲ್ಲ. ಅಷ್ಟೊಂದು ಆಳುಕಾಳುಗಳು, ಹಸು, ಎತ್ತು ಎಮ್ಮೆಗಳು, ಸವಾರಿಯ ಕುದುರೆ, ಬತ್ತ ಭರಣಗಳ ಕಣಜ, ರಾಗಿಯ ಹಗೇವು, ಕೊಬ್ಬರಿಯ ಅಟ್ಟ, ಹೀಗೆ ಈಗಿರುವುದೂ ಅರಮನೆಯಂತೆಯೇ ಇದೆ, ದರ್ಬಾರಿನ ಸಿಂಹಾಸನವೊಂದನ್ನುಳಿದು. ಆದರೆ ಅವರ ಮಗ ಈಗ ಬೆಂಗಳೂರಿನಲ್ಲಿ ಸಿಂಹಾ ಸನದ ಮೇಲೆಯೇ ಕೂರುತ್ತಿದ್ದಾರಲ್ಲ.

ಚಿಕ್ಕ ವಯಸ್ಸಿನಲ್ಲಿ ರಾಜದರ್ಪದಿಂದ ಪಟೇಲಿಕೆ ಮಾಡಿ ಸುತ್ತಣ ಹಳ್ಳಿಗಳ ನ್ಯಾಯ ಪಂಚಾಯಿತಿಕೆಗಳನ್ನು ಆಳಿದ ಪಟೇಲರು ವೃದ್ಧಾಪ್ಯದಲ್ಲಿ ಆಧ್ಯಾತ್ಮಿಕ ದತ್ತ ಸರಿಯುತ್ತಿದ್ದಾರೆ. ಇತ್ತೀಚೆಗಂತೂ ಹೊಲ ಗದ್ದೆ ತೋಟ ತುಡಿಕೆಗಳನ್ನೂ ನೋಡದೆ ಸದಾ ದೇವತಾರ್ಚನೆಯಲ್ಲಿ ಕಾಲ ಕಳೆಯುತ್ತಾರೆ. ಒಳಮನೆಯ ಒಂದು ಕೋಣೆಯನ್ನು ದೇವರ ಮನೆಯಾಗಿ ಮಾಡಿಕೊಂಡಿದ್ದಾರೆ. ಗೋಡೆಗಳ ಮೇಲೆಲ್ಲ ಸಕಲ ದೇವ ದೇವತೆಗಳ ಪಟಗಳು. ಗೋಡೆಗೆ ತಗುಲಿದಂತೆ ಎತ್ತರವಾದ ಗಂಧದ ಮಂದಾಸನ. ಅದರೊಳಗೆ ವಿರಾಜಿಸುವ ಬೆಳ್ಳಿಯ ಶ್ರೀನಿವಾಸ. ಎದುರಿಗೆ ಬೆಳ್ಳಿಯ ಹೂವಿನ ಬುಟ್ಟಿ. ಅರಿಶಿನ ಕುಂಕುಮದ ಭರಣಿಗಳು. ದೇವತಾರ್ಚನೆಗೆ ಕುಳಿತುಕೊಳ್ಳಲು ಅಗಲವಾದ ಮಣೆ. ಮಣೆಯ ಮೇಲೆ ಕೃಷ್ಣಾಜಿನ. ಕಿಟಕಿಯ ಬಾಗಿಲಿಗೆ ಬಣ್ಣದ ಗಾಜುಗಳನ್ನು ಹಾಕಿಸಿರುವುದರಿಂದ ಇಡೀ ದೇವರ ಕೋಣೆ ಯಲ್ಲಿ ರಂಗುಬೆಳಕಿನ ವಿಚಿತ್ರ ಪರಿಣಾಮವಿರುತ್ತದೆ. ಮಂದಾಸನದ ಒಳಗೆ ಇಪ್ಪತ್ತನಾಲ್ಕು ಗಂಟೆಯೂ ರತ್ನದಂತೆ ಉರಿಯುವ ಸಣ್ಣ ಶೂನ್ಯಕ್ಯಾಂಡಲಿನ ವಿದ್ಯುತ್ ಬಲ್ಬ್. ಅದಲ್ಲದೆ ಅಖಂಡವಾಗಿ ತುಪ್ಪದಲ್ಲೇ ಉರಿಯುವ ಎರಡು ಬೆಳ್ಳಿಯ ದೀಪಗಂಪಗಳು.

ಪಟೇಲರು, ದೇವರಮನೆಗೇ ಹೊಂದಿರುವ ಇನ್ನೊಂದು ಕೋಣೆಯಲ್ಲಿ ಇರು ತ್ತಾರೆ. ಎರಡು ಮೂರು ತಲೆಗಳ ಹಿಂದೆ ರಾಜಶಯ್ಯೆಯ ರೀತಿಯಲ್ಲಿ ಮಾಡಿಸಿದ್ದರ

ಒಂದು ದೊಡ್ಡ ಮಂಚದ ಮೇಲೆ ಸದಾ ಮೆತ್ತೆಯನ್ನು ಹಾಕಿರುತ್ತದೆ. ಆದರೆ ಈಗ ಅವರು ಆ ಹತ್ತಿಯ ಹಾಸಿಗೆಯ ಮೇಲೆ ಹಾಗೆಯೇ ಮಲಗುವುದಿಲ್ಲ. ಒಂದರೊಡನೊಂದು ಕೂಡಿಸಿ ನಾಲ್ಕು ಕೃಷ್ಣಾಜಿನಗಳನ್ನು ಅದರ ಮೇಲೆ ಹಾಸಿಕೊಂಡು ಕೂರುತ್ತಾರೆ, ಅಥವಾ ಮಲಗುತ್ತಾರೆ. ಹೊದೆಯಲು, ಮೈಲಿಗೆಯೇ ಆಗದ ಕಾಶ್ಮೀರದ ಶಾಲು. ಮಂಚದ ಕಟ್ಟೆಗೇ ಜಪದ ಸರ ತೂಗು ಹಾಕಿರುತ್ತದೆ. ಆಯಾಸವಾದಾಗ ಪವಡಿಸುತ್ತಾರೆ. ಉಳಿದಂತೆ ಕೈಲಿ ಸರ ಹಿಡಿದು ಭಗವನ್ನಾಮ ಜಪಿಸುತ್ತಾರೆ. ಸರವನ್ನು ಒಂದು ಸುತ್ತು ತಿರುಗಿಸಿದರೆ ನೂರ ಎಂಟು. ಒಮ್ಮೆ ಹಿಡಿದರೆ ಹತ್ತು ಸುತ್ತಾದರೂ ಆಗದೆ ಬಿಡುವುದಿಲ್ಲ.

ತಿರುಮಲ ಮಂದಿರದ ಆಡಳಿತಾಧಿಕಾರವೂ ಅವರದೇ. ಮಂದಿರದ ಆಡಳಿತದ ಸರ್ವಾಧಿಕಾರವೂ ತಲಾಂತರದಿಂದ ಬಂದದ್ದು. ಈ ಊರು, ಮಂದಿರ, ಕೋಟೆ ಮೊದಲಾದುವು ಹೇಗೆ ಇತಿಹಾಸಕಾರರು ಸಂಶೋಧಿಸಿ ನಿಷ್ಕರ್ಷಿಸಬೇಕಾದುವೋ, ಹಾಗೆಯೇ ಈ ಮನೆತನದ ಯಾವ ತಲೆಯಲ್ಲಿ ಮಂದಿರದ ಸರ್ವಾಧಿಕಾರವು ಕೈಸೇರಿತೆಂಬುದನ್ನೂ ಹುಡುಕಬೇಕು. ಆದರೆ ಈ ಮನೆತನವು ದೇವಸ್ಥಾನ ಕೈಂಕರ್ಯ ಕೊಟ್ಟಿದೆಯೇ ವಿನಾ ದೇವರ ಆಸ್ತಿಯನ್ನು ಎಂದೂ ತಿಂದಿಲ್ಲ.

ಮುಂದಿನ ಬಾಗಿಲಿನಲ್ಲಿ ಎಕ್ಕಡ ಬಿಟ್ಟು, ಎರಡು ಅಂಗಳ ಎರಡು ತೊಟ್ಟಿಗಳನ್ನು ದಾಟಿ, ಬಲಗೈಯಲ್ಲಿ ತಿಂಡಿಯ ಬುಟ್ಟಿ ಹಿಡಿದುಕೊಂಡು ವೆಂಕಟೇಶ ಕೋಣೆಗೆ ಬಂದಾಗ ಪಟೇಲರು ಮಂಚದ ಮೇಲೆ ಕುಳಿತಿದ್ದರು. ಕೈಯಲ್ಲಿ ಜಪದ ಸರವಿರಲಿಲ್ಲ.

'ಬಾ, ಬಾ. ಇವತ್ತು ನಾಮಕರ್ಣವಾಯ್ತಂತೆ. ಏನ್ ಹ್ಯಸರಿಟ್ರೆ?' – ಎಂದು ಗೌಡರು ಸ್ವಾಗತಿಸಿದರು.

'ಶ್ರೀನಿವಾಸ ಅನ್ನಬೇಕು ಅಂತ ಅಪ್ಪ ಹೇಳಿದರು. ಅದರದ್ದೇ ಇನ್ನೊಂದು ರೂಪ ವಾಸು ಅಂತ ಇಟ್ಟಿವಿ.'

'ಯಲ್ಲಾ ಒಂದೇ. ದೇವರು ವಬ್ಬ, ನಾಮ ಅಲವು. ಕುಂತ್ಕ' – ಎಂದು ಅವರು. ಕೆಳಗೆ ನೆಲದ ಮೇಲೆ ಹಾಸಿದ್ದ ಮಂದಲಿಗೆಯ ಕಡೆಗೆ ಕಣ್ಣು ಹೊರಳಿಸಿದರು.

ಕೈಲಿದ್ದ ಬುಟ್ಟಿಯನ್ನು ತೋರಿಸಿ ಅವನು ಕೇಳಿದ: 'ಇದ ಎಲ್ಲಿಡ್ಲಿ? ಸ್ವಲ್ಪ ಮುಸುರೆ-ಪದಾರ್ಥವೂ ಇದೆ.'

'ಅದೇನಪ್ಪ?'

'ಲಾಡು, ಕಾಯಿ-ಒಬ್ಬಟ್ಟು. ಒಂದಿಷ್ಟು ಹುಳಿಯನ್ನ.'

'ನೀವೆಲ್ಲ ಉಂಡವ್ಯಾಲೆ ತಂದ್ಯಲ?'

ಈ ಪ್ರಶ್ನೆಯ ಒಳ ಅರ್ಥ ಅವನಿಗೆ ತಕ್ಷಣ ಆಯಿತು. ಆದರೆ ಉತ್ತರವನ್ನು ಸಿದ್ಧಪಡಿಸಿಕೊಂಡಿದ್ದವನಂತೆ ಅದೇ ಕ್ಷಣದಲ್ಲಿ ಹೇಳಿದ: 'ದೇವರ ನೈವೇದ್ಯ ಆಗುಕ್ಕೆ ಸಹ ಮುಂಚೆ ಇದನ್ನ ಬುಟ್ಟೀಲಿ ಹಾಕಿಟ್ಟಿದ್ದೆ. ಮೊದಲೇ ತರಾಣ ಅಂತಿದ್ದೆ. ಕೆಲಸದ ಗಲಾಟೇಲಿ ಆಗ್‌ಲಿಲ್ಲ.'

'ಹೋಗ್ಲಿ ಬಿಡು. ಅಲ್ಲಿ ಗ್ವಾಡೆ ತಾವ ಮಡಗು. ನೀನೇನೋ ತಂದೆ. ನಾಮಕರ್ಣ. ಶುಭ ಕೆಲಸದ್ದು ವಲ್ಲೆ ಅನ್ನಬ್ಯಾಡದು. ಆದರೆ ನಾನು ತಿನ್ನಾ-ಕುಲ್ಲ. ಅದ್ಯಾಕೆ ನಿಂತೇ ಇದೀಯಲ. ಕುಂತ್ಕ.'

ವೆಂಕಟೇಶ ನೆಲದಮೇಲೆ ಮುಂದಲಿಗೆಯ ಮೇಲೆ ಕುಳಿತುಕೊಂಡು ಕೇಳಿದ: 'ಯಾಕೆ, ಆರೋಗ್ಯ ಸರಿ ಇಲ್ಲವೆ?'

'ಆರೋಗ್ಯ ಅಂತ ಅಲ್ಲ. ಆದ್ರೂ ವರ್ತ, ಕತೆ, ಪೂಜೆ ಪುರಸ್ಕಾರ ಹಿಡಿದ ವ್ಯಾಗೆ ಬ್ಯಾರೆಯೋರು ಬೇಸಿದ್ದ ಪದಾರ್ಥ ತಿನ್‌ಬ್ಯಾಡ್‌ದು ಅಲ್ವೆ?'

ಈ ವೃದ್ಧ ಪಟೇಲರು ಮಡಿಹುಡಿಗಳನ್ನು ಸಾಕಷ್ಟು ಅಭ್ಯಾಸ ಮಾಡುತ್ತಿರುವರೆಂಬುದು ಅವನಿಗೆ ಗೊತ್ತಿಲ್ಲದ ಸಂಗತಿಯಲ್ಲ. ತಮ್ಮ ಮತಸ್ಥರಲ್ಲದ ಇತರ ಶೂದ್ರರಾದ ದಾಸ-ಒಕ್ಕಲಿಗರು, ಕುರುಬರು, ನಾಯಕರು, ಉಪ್ಪಾರರು, ಮಗ್ಗದವರು ಮೊದಲಾದವರ ಮನೆಯಲ್ಲಿ ಅವರು ನೀರು ಸಹ ಕುಡಿಯುತ್ತಿರಲಿಲ್ಲ. ಬ್ರಾಹ್ಮಣರ ಮನೆಯಲ್ಲಿ ತಿನ್ನುತ್ತಿದ್ದರು. ಅಲ್ಲದೆ ಅವರ ಮನೆದೇವರೇ ಆದ ತಿರುಮಲಸ್ವಾಮಿಯ ಅರ್ಚಕರ ಮನೆ ತನ್ನದು. ದೇವಸ್ಥಾನದಿಂದ ತಾವು ಕಳಿಸುತ್ತಿದ್ದ ಪ್ರಸಾದವನ್ನು ಅವರು ಎಂದಿನಿಂದಲೂ ಪರಮಭಕ್ತಿಯಿಂದ ಸ್ವೀಕರಿಸುತ್ತಿದ್ದರು. ಆದರೆ ಈಗ – 'ಬ್ಯಾರೆಯೋರು ಬೇಸಿದ್ದು' ಅನ್ನುತ್ತಿದ್ದಾರೆ. ಈ ಮಾತಿನ ಪೂರ್ತಿ ಅರ್ಥವನ್ನು ಹೊರಗೆಡವಬೇಕೆಂದು ಅವನು ಒತ್ತಿದ: 'ಆದರೆ ಬ್ರಾಹ್ಮಣರ ಮನೇಲಿ ಮಾಡಿದ್ದು ತಾನೆ?'

'ಬ್ರಾಂಬ್ರು ಅಂದ್ರೆ ಯಾರು? ಪೂಜಾರಿಗಳು. ಅವರೇ ಮಾಡಿದ್ದಾದ್‌ರೂ ದೇವರ ಪರ್‌ಸಾದ ಅಂತ ಮಡಿ ಬರ್ತದ್ಯೇ ಹೊರತು ಇಲ್ದೆ ಇದ್ರೆ ಅದು ಮೈಲಿಗೆಯೇ.'

ಈ ಮಾತಿನಿಂದ ವೆಂಕಟೇಶನಿಗೆ ಅಪ್ರಿಯವೆನಿಸಿತು. ಅಪ್ರಿಯವಾದರೂ ಯಾವುದನ್ನೂ ಅರ್ಥಕ್ಕೆ ಕೈಬಿಡುವ, ಅಥವಾ ತನ್ನ ಕೋಪವನ್ನು ಪ್ರದರ್ಶಿಸಿ ಕೆಲಸ ಕಳೆಯುವ ಜಾಯಮಾನವಲ್ಲ ಅವನದು. ಇದುವರೆಗೂ ಈ ವೃದ್ಧ ಪಟೇಲರು ಬ್ರಾಹ್ಮಣರ ಶ್ರೇಷ್ಠತೆಯನ್ನು ಸ್ವೀಕರಿಸಿದ್ದರು. ಈಗ ತಾವು ಬ್ರಾಹ್ಮಣರಿಗಿಂತ ಶ್ರೇಷ್ಠರು, ಅಥವಾ ತಮ್ಮ ಶ್ರೇಷ್ಠತೆಯು ಬ್ರಾಹ್ಮಣರದ್ದಕ್ಕಿಂತ ಕಡಿಮೆಯದಲ್ಲವೆನ್ನುತ್ತಿದ್ದಾರೆ. ಇಂತಹ ಹೊಸ ವಿಚಾರಗಳು ತಾವಾಗಿಯೇ ಇವರ ತಲೆ

ಯಲ್ಲಿ ಹುಟ್ಟುವುದಿಲ್ಲವೆಂದು ಬಲ್ಲ ಅವನು ಹೇಳಿದ: 'ಹೋಗ್ಲಿ, ಅದು ನಿಮ್ಮ ನಿಮ್ಮ ಶ್ರದ್ಧೆಯ ವಿಷಯ. ಎಷ್ಟಾದರೂ ನೀವು ದೊಡ್ಡೋರು. ನಿಮ್ಮಷ್ಟು ಜಪ ತಪ ನಾವೇ ಮಾಡುಲ್ಲ.' ಈ ಮಾತಿನಿಂದ ಪಟೇಲರಿಗೆ ಸಂತೋಷವಾಯಿತು. ಎಂದರು: 'ಹ್ಯಾಗೂ ತಂದಿದೀಯ. ನಾನು ತಿನ್ನದಿದ್ರೆ ಏನು? ಚಿಕ್ಕಪುಟ್ಟೋರು ತಿನ್ನಭೌದು.' ಆಮೇಲೆ ಗಟ್ಟಿಯಾಗಿ ಕೂಗಿದರು: 'ಎಲೇ ನಿಂಗವ್ವಾ, ಎಲ್ ಹ್ವಾದ್ಯೆ? ಬಾ ಇಲ್ಲಿ ಸಟಾಗೆ.'

ಅವರ ತಮ್ಮನ ಮಗನ ಹೆಂಡತಿ ಬಂದಳು. 'ಇದ ತಗಂಡ್ ಹ್ವಾಗು. ನೀವು ತಿನ್ನಿ. ನಾನು ತಿನ್ನಾಕುಲ್ಲ' – ಎಂದು ಬುಟ್ಟಿಯನ್ನು ತೋರಿಸಿದರು. ಸುಮಾರು ನಲವತ್ತು ವರ್ಷದ ಆಕೆ ಅದನ್ನು ತೆಗೆದುಕೊಂಡು ಹೋದಳು.

ವೆಂಕಟೇಶ ಕೇಳಿದ: 'ಈಗ ಹದಿನೈದು ದಿನದಲ್ಲಿ ನೀವು ಬೆಂಗಳೂರಿಗೆ ಹೋಗಿದ್ರಂತೆ. ಧರ್ಮ, ವೇದಾಂತ, ದೇವರ ವಿಷಯ, ಏನಾದರೂ ಚರ್ಚೆ ಯಾಯಿತೆ? ಅವರವರಿಗೆ ಇಷ್ಟವಾದ ವಿಷಯ ಅವರವರು ಎಲ್ಲಿ ಹೋದರೂ ವಿಚಾರ ಮಾಡ್ತಾರೆ. ವೇದಾಂತ ಬಿಟ್ಟರೆ ನಿಮಗೆ ಈ ಪ್ರಪಂಚದಲ್ಲಿ ಯಾವುದೂ ಬ್ಯಾಡ.'

'ನ್ಯಾಯವಾದ್ದು ಹ್ಯೇಳ್ದೆ. ಕಾಶೀ ಕಡೆಯೋರು ಒಬ್ರು ಜಮೀನ್ದಾರ್ರು ಬಂದಿದ್ರು. ನಮ್ಮೋರೆಯಾ. ಅಂದ್ರೆ ಗೌಡಗಳು ಅನ್ನಾಕುಲ್ಲ. ಅದೇನಂತಾರಪ್ಪಾ' ....ಎಂದು ಜ್ಞಾಪಿಸಿಕೊಂಡು ಹೇಳಿದರು: 'ಠಾಕೂರರು ಅಂತ ಅದೇನೋ ಅಂದ್ರು. ಭಾರೀ ಜಮೀನ್ದಾರರು. ಎಲ್ಡು ಸಾವಿರ ಎಕ್ರೆ ಅದಾವಂತೆ. ಅಲ್ಲಿ ಕಾಂಗ್ರೆಸ್ಸಿನೋರು. ನಮ್ಮ ಹುಡುಗುನ್ಗೆ ಗುರ್ತಂತೆ. ಈ ಕಡೆ ನೋಡಾಕೆ ಅಂತ ಹೆಂಡ್ತಿ ಮಕ್ಳ ಜೊತೆ ಬಂದಿದ್ರು. ಇಲ್ಲೇ ಇಳ್ಕಂಡಿದ್ರು. ಅವರು ಬಿಡು, ಗಂಡಸರು. ರಾಜಕೀಯ ಮಾಡೋರು. ಎಲ್ಲಾದರೂ ತಿಂತಾರೆ. ಅವರ ಹೆಂಡ್ತಿ ಸ್ವಂತ ಅಡಿಗೆ ಮಾಡ್ಕಂಡೇ ಉಂಡ್ಳು. ಬ್ರಾಹ್ಮಣರು ಅಡಿಗೆಯೋರ ಕರುಸ್ತೀವಿ ಅಂದ್ರೂ ವಲ್ಲೆ ಅಂದ್ಬಿಟ್ಳು.'

'ಅಂದ್ರೆ ಆ ಕಡೆ ಬ್ರಾಹ್ಮಣರು ಜಮೀನ್ದಾರ್ರಿಗಿಂತ ಕೀಳೇನು?'

'ಹೂಂ. ಠಾಕೂರ್ ಯಜಮಾನರೇ ಅಂದ್ರು. ಹೆಂಗಸರು, ಮಡಿಯೋರು ಬ್ರಾಹ್ಮಣ ಮುಟ್ಟಿದ ನೀರೂ ಕುಡಿಯಾಕಿಲ್ವಂತೆ. ಬ್ರಾಹ್ಮಣ ಇರಾದು ದೇವರ ಪೂಜೆ ಮಾಡಾಕೆ ಮಾತ್ರವಂತೆ.'

'ಒಂದೊಂದು ಕಡೆ ಒಂದೊಂದು ಪದ್ಧತಿ. ಇನ್ನೇನಂದ್ರು ಅವರು?'

'ಹೇಳ್ತೀನಿ ಕೇಳು. ನಿಂಗೆ ಮನ್ಲಿ ಏನೂ ಅರ್ಜೆಂಟ್ ಇಲ್ವಲಾ?'

'ರಾತ್ರಿ ಆರತಿ ಪಾರತಿ ಏನಿದ್ರೂ ಹೆಂಗಸರದ್ದು. ನಮ್ಮತ್ತೆ ಇದಾರೆ. ಹೇಳಿ. ವೇದಾಂತದ ವಿಚಾರ ನಿಮ್ಮ ಹಾಗೆ ಹೇಳೋರು ಈ ಊರಲ್ಲಿ ಇನ್ಯಾರು ಸಿಕ್ ಬೇಕು?'

ಗೌಡರು ಹುರುಪಿನಿಂದ ಮಾತನಾಡಿದರು: 'ವೇದ ವೇದಾಂತ ಎಲ್ಲ ಮಾಡ್ದೋರು ಬ್ರಾಂಬ್ರು ಅಲ್ವಂತೆ. ನಂಗೂ ಕತೆ ಗೊತ್ತಿತ್ತು. ಆದ್ರೆ ಅರ್ತವೇ ಆಗಿರ್ನಿಲ್ಲ. ಶುರೂನಲ್ಲಿ ಜನಕ ಮಹಾರಾಜನಂತಾ ಕ್ಷತ್ರಿಯರೇ ಮಹಾ ಮಹಾ ವೇದ-ಇದ್ಯಾ ಪಂಡಿತರಂತೆ. ರಾಮ ಕೃಷ್ಣ ಅಂತ ನಾವು ಯಾವ ಯಾವ ದೇವರುನ್ನ ಪೂಜೆ ಮಾಡ್ತೀವೋ ಅವರೆಲ್ಲ ಕ್ಷತ್ರಿಯರೇ ಅಲ್ವಾ? ಒಟ್ನಲಿ ಬ್ರಮ್ಮ ವಿದ್ಯಾನ ಬ್ರಾಮ್ರಿಗೆ ಕಲುಸ್ತೋರು ಕ್ಷತ್ರಿಯರೇ. ದೇವ್‌ರೂವೆ ಅವತಾರ ತಾಳಿದ್ರೆ ಕ್ಷತ್ರಿಯನಾಗೇ ಭೂಲೋಕಕ್ಕೆ ಬರ್ತಿದ್ದ.'

'ಹಾಗಾದ್‌ರೆ ಪರಶುರಾಮ ಬ್ರಾಹ್ಮಣನಲ್ವೆ? ಇನ್ನು ವರಾಹಾವತಾರ, ಮತ್ಸ್ಯಾವತಾರ ಇವೆಲ್ಲ ಕ್ಷತ್ರಿಯವೆ?'

'ಐ, ಇದೇನ್ ಮಗ ಹಿಂಗ್ ಕೇಳ್ತಿಯಾ? ಪರಶುರಾಮನ್ನ ಯಾರು ಪೂಜೆ ಮಾಡ್ತಾರೆ? ಹಂದೀನ್ನೂ ಮೀನನ್ನೂ ಯಾರು ಪೂಜೆ ಮಾಡ್ತಿದಾರೆ? ಪೂಜೆಗೆ ತಕ್ಕೋರು ಅಂದ್‌ರೆ ಕ್ಷತ್ರಿಯರೇ. ಪೂಜೆ ಮಾಡಾದೇ ಬ್ರಾಮ್ಮಣರ ಕಸುಬು.'

ಈ ಮಾತಿಗೆ ತಕ್ಷಣ ಉತ್ತರ ಕೊಡಲು ವೆಂಕಟೇಶನಿಗೆ ತಿಳಿಯಲಿಲ್ಲ. ಅವರು ಹೇಳುತ್ತಿರುವ ಅಂಶದಲ್ಲಿ ಸುಳ್ಳಿಲ್ಲ. ಪುರಾಣಗಳಲ್ಲಿ ಇರುವುದೇ ಹಾಗೆ. ಆದರೆ ಅದರ ಸಾಮಾಜಿಕ ಒಳ-ಅರ್ಥವನ್ನು ಬಿಡಿಸಿ ನೋಡುವಷ್ಟು ಮಟ್ಟಿಗೆ ಅವನು ಇತಿಹಾಸ ಓದಿರಲಿಲ್ಲ. ಇದ್ಯಾಕೆ ಹೀಗೆ, ಎಂದು ಯೋಚಿಸುತ್ತಾ ಸುಮ್ಮನೆ ಕುಳಿತ. ಯಜಮಾನರೇ ಅಂದರು: 'ನಿಮ್ಮ ಜಾತೀನ ಹಿಂಗಂದೆ ಅಂತ ಸಿಟ್‌ಮಾಡ್ಕಬ್ಯಾಡ.'

'ಇರೂ ವಿಷಯ ಅಂದ್ರೆ ಸಿಟ್ಯಾಕೆ? ಅಂದ್ರೆ ಅವರು ಹೇಳೋದು ನಿಜ ಅಂತ ಒಂದು ಪಕ್ಷ ಒಪ್ಕಂಡ್‌ರೂ, ಕ್ಷತ್ರಿಯರು ಬ್ರಾಹ್ಮಣರಿಗಿಂತ ಮೇಲು ಅಂದ ಹಾಗಾಯ್ತು. ಇಷ್ಟಕ್ಕೂ ನಮ್ಮ ಮೈಸೂರು ದೇಶದಲ್ಲಿ ಕ್ಷತ್ರಿಯರು ಅಂತ ಯಾರು ಇರೋರು? ಮೈಸೂರು ಕಡೆ ಅರಸರು ಅಂತ ಇದಾರೆ. ಅವರು ಮೂಲ ಕ್ಷತ್ರಿಯರೋ ಇತ್ತೀಚೆಗೆ ಆದೋರೋ ಯಾರಿಗೆ ಗೊತ್ತು?'

'ನೋಡು, ನೀನು ಕೇಳಿದ್ದು ಸೈನಾಯ್ತು. ಠಾಕೂರ್ ದನಿಗಳೇ ಏಳಿದ್ರು. ಮೂಲದಲ್ಲಿ ಕ್ಷತ್ರಿಯರು ಅಂತ ಯಾರೂ ಇರ್ಲೇ ಇಲ್ವಂತೆ. ಯಾರು ರಾಜ್ಯ ಆಳ್ತಿದ್ರೋ ಅವರುನ್ನ ಕ್ಷತ್ರಿಯರು ಅಂತ ಕರ್‌ದರಂತೆ ಬ್ರಾಂಬ್ರು. ಆಮ್ಯಾಲೆ ಮತ್ತೆ ಯಾರ್‍ಯಾರೋ ಗಟ್ಟಿಯಾಗಿ ಆಳಾಕೆ ಶುರುಮಾಡಿದ್ರು. ಅವರಿಗೆಲ್ಲ ರಾಜ, ರಜಪೂತ, ಕ್ಷತ್ರಿಯ ಅಂತ ಬ್ರಾಂಬ್ರೇ ಬಿರುದು ಕೊಟ್ಕಂಡ್ ಬಂದ್ರಂತೆ. ಯೇದದಲ್ಲಿ ಹೇಳಿರಾದ್ ತಾನೆ ಏನು? ತೋಳಿರೋನೇ ರಾಜ. ರಾಜ್ಯ ಆಳಾನು ರಾಜ. ಅವನೇ ಕ್ಷತ್ರಿಯ ಅಂತ. ಅಲ್ವಾ?'

ತಾನು ಯಾವ ಮಾಹಿತಿಯನ್ನು ಬಯಸಿ ಬಂದಿದ್ದನೋ ಆ ಬಗೆಗೆ ವೆಂಕಟೇಶನಿಗೆ ಯಾವ ವಿಷಯವೂ ನೇರವಾಗಿ ತಿಳಿಯಲಿಲ್ಲ. ಆದರೆ ಒಂದು ಹೊಸ ಬೆಳವಳಿಗೆಯು ಪ್ರಚಂಡ ಶಕ್ತಿಯಿಂದ ಕಾಣಿಸಿತು. ಈ ಕೋಣೆಯೊಳಕ್ಕೆ ಬಂದ ಕ್ಷಣದಿಂದ ಆದ ಪ್ರತಿಯೊಂದು ಘಟನೆ ಮತ್ತು ಮಾತಿನಲ್ಲಿಯೂ ಈ ಬೆಳವಳಿಗೆಯು ಗೋಚರಿಸುತ್ತಿತ್ತು. ಅದರ ಸತ್ತ್ವವು ತನ್ನ ಅಂತಶ್ಶಕ್ತಿಯನ್ನು ದುರ್ಬಲಗೊಳಿಸುತ್ತಿರುವಂತೆ ಅವನಿಗೆ ಭಾಸವಾಯಿತು. ತಾವು ಆಡುತ್ತಿರುವ ಮಾತಿನ ಪೂರ್ಣ ಅರ್ಥ ಈ ಪಟೇಲರಿಗೆ ಪ್ರಾಯಶಃ ತಿಳಿದಿಲ್ಲ. ದೈವಭಕ್ತಿ, ಆಚಾರ, ಮಡಿ ಮೊದಲಾದುವು ಇವರಲ್ಲಿ ಇತ್ತೀಚೆಗೆ ಬೆಳೆಯುತ್ತಿವೆ; ಬೆಳೆದು ಬ್ರಾಹ್ಮಣರ ಅತಿಮಡಿಯ ರೂಪವನ್ನೇ ತಾಳುತ್ತಿವೆ. ಅವನು ಅವರನ್ನು ಒಂದು ಸಲ ದೃಷ್ಟಿಸಿ ನೋಡಿದ: ವಯಸ್ಸಿನಿಂದ ಬಾಗಿದ್ದರೂ ಉದ್ದನೆಯ ಶರೀರ. ಹೊಳೆಯುವ ಬೊಕ್ಕ ತಲೆ. ಬಿಳಿಯ ತುಂಬುಮೀಸೆ. ಎಂಬತ್ತರ ವಯಸ್ಸಿನ ಸುಕ್ಕುಗಳು ಕಾಣುವ ಅಗಲವಾದ ಹಣೆ. ಕಿವಿಯಲ್ಲಿ, ಹೊಳೆಯುವ ಚಿನ್ನದ ದಪ್ಪ ಕಡಕು. ಬಲಮೊಣಕಟ್ಟಿನ ಸುತ್ತ ಕಿರುಬೆರಳು ದಪ್ಪದ ಬಂಗಾರದ ಕಪ್ಪ. ರೇಷ್ಮೆಯ ಪಂಚೆಯುಟ್ಟು, ರೇಷ್ಮೆಯದೇ ಒಂದು ಶಲ್ಯ ಹೊದೆದಿದ್ದಾರೆ. ಕೊರಳಿನಲ್ಲಿ ಚಿನ್ನದ ತಂತಿಯಿಂದ ಕಟ್ಟಿದ ತುಳಸೀಹಾರವಿದೆ. ಜನಿವಾರವಿಲ್ಲ. ಹಣೆಯ ಮೇಲೆ, ಮಾಸಿದ ವಿಭೂತಿಯ ಗುರುತಿದೆ.

ಅವರೇ ಜ್ಞಾಪಿಸಿಕೊಂಡು ಅಂದರು: 'ಅವರು ನನ್ನ ಕಸುಬು ಕೇಳಿದರು. ಮನೆತನ ಪಟೇಲರು ಅಂದೆ. ಆಗ ಏಳಿದ್‌ರು. ಪತಿ ಅಂದರೆ ಯಜಮಾನ, ರಾಜ ಅಂತ. ಪತಿ ಅನ್ನೋ ಮಾತಿನಿಂದ ಪಟೇಲ ಅಂತ ಆಯ್ತಂತೆ.' ವೆಂಕಟೇಶನಿಗೆ ಪುನಃ ಸೋಲಿನ ಅನುಭವವಾಯಿತು. ಯಜಮಾನರು ನಕ್ಕು ಹೇಳಿದರು: 'ನೋಡಿದೆಯಾ, ನಮ್ಮ ನಮ್ಮ ಕಸುಬಿನ ಅರ್ಥ ನಮಗೇ ತಿಳಿದಿರಾಕುಲ್ವಲ!'

'ನೀವು ಠಾಕೂರರ ಕೈಲಿ ಹ್ಯಾಗೆ ಮಾತಾಡಿದಿರಿ?'

'ನಾನು ಜಪ ಮಾಡ್ತಾ ಕುಂತಿದ್ದೆ. ಅವರು ಹಿಂದೂಸ್ತಾನೀಲಿ ಮಾತಾಡ್ತಿದ್ರು. ನಾನು ಸಾಬ್‌ರ ಮಾತ್ನಲ್ಲಿ ಜವಾಬು ಕೊಟ್ಟೆ. ಹಿಂಗ್ ಹಿಂಗೇ ಅಡ್ತಿದ್ವಿ. ಓಟ್‌ರಲ್ಲಿ ನಮ್ಮ ಹುಡ್ಗ ಮೇಲಗಿರಿ ಅಲ್ಲಿಗೆ ಬಂದ. ನಂಗೆ ತಿಳೀದೇ ಇದ್ದುದ ಕನ್ನಡದಲ್ಲಿ ಹೇಳ್ದ.'

'ಇನ್ನೇನು ಬೆಂಗಳೂರು ಕಡೆ ಸಮಾಚಾರ?'

'ಇನ್ನೇನಿಲ್ಲಪ್ಪ. ಹಿಂಗೆ ಜನ ಅಸೆಂಬ್ಲಿಯೋರು ಅವ್ರು ಇವ್ರು ಬತ್ತಾರೆ ಹೋಗ್ತಾರೆ. ದರ್ಪ ಅಂದ್ರೆ ಏಟಾದ್ರೂ ರಾಜದರ್ಪ ಅಲ್ವಾ?'

'ನಿಮ್ಮ ಮೊಮ್ಮಗ ಅಕಸ್ಮಾತ್ ಒಬ್ಬ ಬ್ರಾಹ್ಮಣ ಹುಡುಗಿಯನ್ನು ಮದುವೆ

ಯಾದರೆ ನೀವು ಒಪ್ತೀರಾ?' – ಎಂದು ಕೇಳಲೇ ಎಂದು ಅವನ ಮನಸ್ಸಿಗೆ ಬಂತು. ಆದರೆ ತಾನಾಗಿಯೇ ಕೇಳಬಾರದು ಎನಿಸಿತು. ಅವಳು ಹೀಗೆ ಬರೆಯಬೇಕಾದರೆ ಅವನೂ ಒಪ್ಪಿರಲೇ ಬೇಕು. ಅವಳು ಇಲ್ಲಿ ನಮಗೆ ಕಾಗದ ಬರೆದಿರೂ ಹಾಗೆ ಅವನು ಅಲ್ಲಿ ಮನೇಲಿ ಹೇಳ್ತಾನೆ. ಅಲ್ಲಿಂದ ಇಲ್ಲಿ ಈ ಮುದುಕನಿಗೆ ಸುದ್ದಿ ಬರುತ್ತೆ. ನಾನು ಈಗಲೇ ಈ ಪ್ರಶ್ನೆ ಕೇಳಿದರೆ ಇವರೂ ಇದಕ್ಕೆ ಶರೀಕಾಗಿದ್ದರು ಅಂತ ಮುಂದೆ ಈ ಮುದುಕ ಅರ್ಥಮಾಡಿಕೊಳ್ಳುತ್ತೆ – ಎಂದು ಯೋಚಿಸಿದ ಅವನು ಸುಮ್ಮನಾದ.

ಅಷ್ಟರಲ್ಲಿ ನಿಂಗವ್ವ ಬಾಗಿಲಿಗೆ ಬಂದು, 'ನೀರು ಕಾದವೆ. ತಾನ ಮಾಡಾಕ್ ಬಲ್ಲಿ' ಎಂದಳು.

'ಇದೇನು ಇಷ್ಟು ಹೊತ್ನಲ್ಲಿ ಸ್ನಾನ?' – ವೆಂಕಟೇಶ ಕೇಳಿದ.

'ಈಗ ದಿನಕ್ಕೆ ಮೂರು ಸಲಿ ಮಡಿ ಉಟ್ಕಂತೀವಿ. ಇಲ್ದೆ ಇದ್ರೆ ಮನುಷ್ಯೆ ಹ್ಯಾಂಗ್ ಹ್ಯಾಂಗೋ ಆಯ್ತದೆ. ಸ್ವಾಮಿ ಉಟ್ಕೊವಾಗ, ನೆತ್ತಿಮ್ಯಾಲೆ ಬಂದಾಗ, ಮುಣುಗುವಾಗ ಬಿಸಿಬಿಸಿಯಾಗಿ ಸ್ನಾನ ಮಾಡ್ಕಂಡು ಪೂಜೆಗೆ ಕುಂತ್ರೆ ಹಿತ ವಾಗಿರ್ತದೆ' – ಎಂದು ಅವರು ಮೇಲೆ ಎದ್ದರು. ಎರಡು ಅಂಗಳ ಎರಡು ತೊಟ್ಟಿಗಳು ಮತ್ತು ಮುಂಭಾಗದ ದೊಡ್ಡ ಪಡಸಾಲೆಯನ್ನು ದಾಟಿ ಹೊರಬಾಗಿ ಲಿಗೆ ಬಂದು ತನ್ನ ಎಕ್ಕಡಗಳನ್ನು ಮೆಟ್ಟಿಕೊಂಡು ವೆಂಕಟೇಶ ಮನೆಯ ಕಡೆಗೆ ತಿರುಗಿದ.

೫

ರಾತ್ರಿ ಆರತಿ ಮುಗಿದು ಮನೆಯಲ್ಲಿ ಗದ್ದಲ ಕಳೆದ ಮೇಲೆ ತಂದೆ ಕೇಳಿದರು: 'ಊಟವಾದ ಮೇಲೆ ಎಲ್ಲಿಗೆ ಹೋಗಿದ್ದೆ?'

'ಪಟೇಲರ ಮನೆಗೆ.'

'ಏನಾರ ಮಾಡಿ ಬಂದೆ ಏನು?'

'ನಾನೇನೂ ಮಾಡಲಿಲ್ಲ. ಆದರೆ ಈ ಮದುವೆ ಆಗುಲ್ಲ.'

'ಹ್ಯಾಗೆ ಹೇಳ್ತೀಯ?'

'ಅವರು ಬ್ರಾಹ್ಮಣರಿಗಿಂತ ಶ್ರೇಷ್ಠ ಬ್ರಾಹ್ಮಣರಾಗ್ತಿದಾರೆ. ನನ್ನ ಹೆಣ್ಣು ತಂದ್‌ಕಳೂದಿಲ್ಲ.'

'ಆ ಮುದುಕನ ಮಡಿ ಹುಡಿ ಇಪ್ಪತ್ತು ವರ್ಷದಿಂದ ನೋಡ್ತಿದೀನಿ. ಅವನ ಶ್ರೇಷ್ಠತನಾನ ನಾನು ಹುಟ್ಟಿದಾಗಿನಿಂದ ಬಲ್ಲೆ. ಇವನು ಒಪ್ಪದೆ ಇರಭೌದು.

ಆದರೆ ಅವರು ರಿಜಿಸ್ಟರ್ ಮದುವೆ ಮಾಡ್ಕತ್ತಾರೆ. ಬೆಂಗಳೂರಲ್ಲೇ ಮಾಡ್ಕಂಡ್ರೆ ಯಾರು ತಡಿಯುಕ್ಕಾಗುತ್ತೆ?'

ಇದೂ ಒಂದು ಮುಖ್ಯ ಅಂಶ. ವೆಂಕಟೇಶ ಇದನ್ನು ಗಂಭೀರವಾಗಿ ಯೋಚಿಸಿರಲಿಲ್ಲ. ಯಜಮಾನರು ಹೇಳಿದರು: 'ಈ ಮುದುಕನ ಮಾತು ಬಿಡು. ಆ ಮೇಲಗಿರಿ ಬುದ್ಧಿ ಎಂಥದು ಗೊತ್ತಿಲ್ವೆ ನಿಂಗೆ? ನಾನು ಅವನು ಕೂಡಿ ಪಾಠ ಹೇಳಿಸ್ಕಂಡೋರು. ಬ್ರಾಹ್ಮಣದ್ವೇಷಿ ಅವನು. ನಮ್ಮ ಜಾತಿಗೆ ಅವಮಾನಮಾಡ ಬೇಕು ಅಂತಲಾದ್ರೂ ಈ ಮದುವೆ ಮಾಡಿಸ್ತಾನೆ.'

'ಅವನು ಮಾಡಿಸುಲ್ಲ.'

'ನಿಂಗೇನು ಗೊತ್ತು ಅವನ ಯೋಗ್ತಿ?' – ಎಂದು, ಒಳಗೆ ಬೀಗಿತ್ತಿ, ಕೋಣೆ ಯಲ್ಲಿ ಸೊಸೆ ಇರುವ ಅರಿವಿನಿಂದ ಸ್ವಲ್ಪ ಧ್ವನಿ ತಗ್ಗಿಸಿ ಹೇಳಿದರು: 'ಪ್ರೂಟ ಲಾಯರಿ ಕಾಳೇಗೌಡ ಹೇಳ್ದ ಕಣೊ. ಅವನು ಬೆಂಗಳೂರಲ್ಲಿ ಯಾವಳೋ ಬ್ರಾಹ್ಮಣ ಹೆಂಗಸನ್ನ ಇಟ್ಕಂಡಿದಾನಂತೆ. ಈ ಜಾತೀದು ಏನು ಹೆಚ್ಚು, ಅವರ ಹೆಂಗಸನ್ನೇ ನಾನು ಮುಗಿಸಿದೀನಿ ಅಂತ ಹೇಳ್ಕಂಡನಂತೆ ಕಾಳೇಗೌಡನ ಕೈಲಿ.'

'ಅವಳು ಏನಾಗಿದಾಳಂತೆ?'

'ಅವನ ಆಪೀಸಿನಲ್ಲಿ ಟೈಪು ಬಡೀತಾಳಂತೆ.'

'ಏನೋ ದಿಕ್ಕಿಲ್ಲದ ಬಡವೆಯೋ ವಿಧವೆಯೋ ಆಗಿರಭೌದು. ಹೆಚ್ಚಿನ ಸಂಬಳ ಮಾಡುಸ್ತೀನಿ ಅಂತ ಇವನು ಹೀಗೆ ಮಾಡಿರಭೌದು. ಅದುನ್ನ ಕಾಳೇಗೌಡನ ಕೈಲಿ ಹೀಗಂದ್‌ಕಂಡಿರಭೌದು. ಆದರೆ ಅವನು ಈ ಮದುವೆಗೆ ಒಪ್ಕಳುಲ್ಲ.'

'ಅವರವರೇ ರಿಜಿಸ್ಟ್ರಿ ಮಾಡ್ಕಂಡ್ರೆ ಏನ್ ಮಾಡ್ತೀಯ?'

ವೆಂಕಟೇಶ ಎರಡು ನಿಮಿಷ ಯೋಚಿಸಿ ಹೇಳಿದ: 'ನಮ್ಮನೆ ಚಿನ್ನಾನ ನ್ಯಾರ ಮಾಡದೆ ಆಚಾರೀನ ಬೈಯಬಾರದು. ನಾಳೆ ಬೆಳಗ್ಗೆ ನಾನೇ ಬೆಂಗಳೂರಿಗೆ ಹೋಗಿ ಬುದ್ಧಿ ಹೇಳಲೆ?'

'ಕುತ್ತಿಗೆ ಚೆಂಡ ಮೇಲೆ ಎರಡು ಇಡಿದು ಎಳಕಂಡ್ ಬಾ.'

ವೆಂಕಟೇಶ 'ಆಗಲಿ' ಎಂದು ಒಪ್ಪಿಕೊಂಡ. ಇಷ್ಟರಲ್ಲಿ ಇವರು ಆಡಿದ ಮಾತಿನ ಧಾಟಿ ತಿಳಿದು ಒಳಗೆ ಹೆಂಡತಿ ಮತ್ತು ಅತ್ತೆಗೆ ವಿಷಯ ಅರ್ಥವಾಗಿರು ತ್ತದೆಂದು ಗೊತ್ತಾಗಿ ಅವನು ಒಳಗೆ ಹೋಗಿ, ಇರುವ ಸಂಗತಿಯನ್ನು ತಾನೇ ಹೇಳಿ ಕಟ್ಟಾಜ್ಞೆ ಮಾಡಿದ: 'ನಾವು ಏನಾದ್ರೂ ಮಾಡಿ ತಪ್ಪುಸ್ತೀವಿ. ನೀವು ಯಾರ ಕೈಲಾದರೂ ಬಾಯಿ ಬಿಟ್‌ಗಿಟ್ಟೀರ, ಹುಶಾರು.'

ಮಗ ಬಲವಂತ ಮಾಡಿದರೂ ತಂದೆ ಒಂದು ತುತ್ತು ಮಜ್ಜಿಗೆ ಅನ್ನ ಸಹ ತಿನ್ನಲಿಲ್ಲ. ಇಬ್ಬರೂ ತೊಟ್ಟಿಯಲ್ಲಿ ಅಕ್ಕಪಕ್ಕದಲ್ಲಿ ಹಾಸಿಕೊಂಡು ಮಲಗಿದರು.

ತಂದೆ ತಮ್ಮಲ್ಲಿಯೇ ಪಿಟಪಿಟನೆ ಮಾತನಾಡಿಕೊಳ್ಳುತ್ತಿದ್ದರು. ನಡುವೆ ಒಂದೊಂದು ಸಲ, 'ಈ ಮುಂಡೇದು ಹುಟ್ಟಿದಾಗಲೇ ಸತ್ಹೋಗಿದ್ರೂ ಆಗ್ತಿತ್ತು. ತಾಯಿ ಸತ್ತ ಮಗು ಅಂತ ಹೊಟ್ಟೆಗೆ ಕಟ್ಟಿಕಂಡು ಸಾಕಿದೆ' ಎನ್ನುತ್ತಿದ್ದುದು ವೆಂಕಟೇಶನಿಗೂ ಕೇಳುತ್ತಿತ್ತು.

ಅವನು ತನ್ನಲ್ಲಿಯೇ ಯೋಚನೆ ಮಾಡುತ್ತಿದ್ದ: ನಾನು ನಾಳೆ ಬೆಳಗಿನ ಬಸ್ಸಿಗೆ ಹೋಗಬಹುದು. ಆದರೆ ಅವಳು ನನ್ನ ಮಾತು ಕೇಳುತ್ತಾಳೆಯೆ? ತನ್ನ ಮನಸ್ಸಿಗೆ ಬಂದದ್ದೇ ಆಗಬೇಕು. ಚಿಕ್ಕ ವಯಸ್ಸಿನಿಂದಲೇ ಕಲಿತ ಹಟ. ತಾಯಿ ಇಲ್ಲದ್ದು, ಅದೂ ಹೆಣ್ಣುಹುಡುಗಿ ಅಂತ, ಅಪ್ಪನೇ ಅವಳು ಹೇಳಿಹೇಳಿದ ಹಾಗೆ ಕುಣಿದ. ಇಲ್ಲದಿದ್ದರೆ ಹಟ ಬೆಳೀತಲೇ ಇರಲಿಲ್ಲ. ಹೆಣ್ಣುಹುಡುಗಿಗೆಂಥ ಹಟ? ಅದು ಗಂಡಸಿಗಿರಬೇಕಾದ್ದು. ಅವಳಿಗೆ ಕಾಲೇಜೇ ಬ್ಯಾಡ ಅಂತ ನಾನು ಹೇಳಿದೆ. 'ಇವನು ಇಂಟರ್‌ಮೀಡಿಯೆಟ್ ಫೇಲಾಗಿದಾನೆ, ನಾನು ಹೋಗಿ ಪಾಸು ಮಾಡಿದರೆ ಅವಮಾನವಾಗುತ್ತೆ ಅಂತ ಹೀಗಂತಾನೆ ಕಣಪ್ಪ' – ಎಂದಳು. ಅಪ್ಪ ಕೊನೆಗೆ ಅವಳ ಮಾತೇ ಕೇಳಿದ. ನಾಳೆ ನಾನು ಬೆಂಗಳೂರಿಗೆ ಹೋದರೂ ಅಷ್ಟೆ. ಅದರಲ್ಲಿ ತಪ್ಪೇನು ಅಂತಾಳೆ. ಕಾಗದದಲ್ಲಿ ಬರೆದಿರೂದುನ್ನೇ ಮತ್ತೆ ಲಂಬಿಸಿ ಲಂಬಿಸಿ ಹೇಳ್ತಾಳೆ. ಎಂ.ಎ. ಕ್ಲಾಸಿನಲ್ಲಿ ಮೇಷ್ಟರು ಬರೆಸಿದ್ದ ನೋಟ್ಸೆಲ್ಲ ತಗಂಡು, ಜಾತಿ ಮತ ಕುಲ ಹ್ಯಾಗೆಹ್ಯಾಗೆ ಹುಟ್ಟಿತು ಅಂತ ಲೆಕ್ಚರ್ ಮಾಡ್ತಾಳೆ. ಅವಳಷ್ಟೇ ಓದಿದ್ದರೆ ನಾನೂ ವಾದ ಮಾಡಬೌದಾಗಿತ್ತು. ದಂಡಂ ದಶಗುಣಂ ಭವೇತ್. ಎಕ್ಕಡ ತಗಂಡು ಎರಡು ಹಾಕಿದರೆ ಸರಿ. ದಾರಿಗೆ ಬರ್ತಾಳೆ. ಅಪ್ಪ ಹೇಳೂದೇ ನ್ಯಾಯ. ಆದರೆ ನಾನು ಹೊಡೆದರೆ ಸುಮ್ಮನಿರ್ತಾಳೆಯೆ?

ಬೆಳಗಿನ ಜಾವದತನಕ ಯೋಚಿಸಿ ಅವನು ಒಂದು ತೀರ್ಮಾನಕ್ಕೆ ಬಂದ. ಅಪ್ಪನಿಗೂ ನಿದ್ರೆ ಬಂದಿರಲಿಲ್ಲ. ಅವರು ಹೊರಳಾಡುತ್ತಲೇ ಇದ್ದರು. ಹೇಳಿದ: 'ಕೇಳುತ್ಯಾ?'

'ಹೂಂ' – ಎಂದರು.

'ಅವಳ ಕೈಲಿ ವಾದ ಮಾಡಿ ಗೆಲ್ಲುಕ್ಕಾಗುಲ್ಲ.'

'ಯಕ್ಡ ಮೆಟ್ಟಿಕಂಡ್ ಹೋಗುಲ್ವೇನೊ?'

'ನಾನು ಹಾಗೆ ಮಾಡಿದ್ರೆ ಚೆನ್ನಲ್ಲ. ನೀನ್ಯಾವನು ಕೇಳುಕ್ಕೆ ಅನ್‌ಭೌದು. ಬೆಳಗ್ಗೆ ಬೆಂಗಳೂರಿಗೆ ನೀನೇ ಹೋಗಿ ಬಾ.'

'ಮುಠ್ಠಾಳ ಸೂಳೆಮಗನೆ' – ಎಂದು ಅವನನ್ನೇ ಬೈದರು. ಆದರೆ ಹತ್ತು ನಿಮಿಷದ ನಂತರ, 'ನೀನು ಹೇಳೂದೂ ನ್ಯಾಯ. ನಾನೇ ಹೋಗಿಬರ್ತೀನಿ' ಎಂದರು. ಮತ್ತೆ ಸ್ವಲ್ಪ ವೇಳೆಯ ನಂತರ, 'ನೀನೂ ಬಾ ಜೊತೆಗೆ' ಎಂದರು.

'ಇಬ್ಬರೂ ಹೋದರೆ ಪೂಜೆ?'

'ಇವತ್ತು ನಾಳೆ ಮಾಡು ಅಂತ ರಂಗಣ್ಣನ ಮನೆ ನಾಗರಾಜೂಗೆ ಹೇಳಿ ಹೋಗಾಣ.'

'ಹೇಳಭೌದು. ಆದರೂ ನೀನೊಬ್ಬನೇ ಹೋಗಿ ಬಾ.'

'ಮುತ್ತ್ಯಾಳನನ್ನ ಮಗ ನೀನು. ನಾನೇ ಹೋಗ್ತೀನಿ.'

ಸ್ವಲ್ಪ ಹೊತ್ತಿಗೆ ಕೋಳಿ ಕೂಗಿತು. ವೆಂಕಟೇಶನ ಅತ್ತೆ ನಾಗಮ್ಮನವರು ರಾತ್ರಿ ಮಲಗುವಾಗಲೇ ನೀರೊಲೆಗೆ ಕೊರಡು ನೂಕಿದ್ದುದರಿಂದ ಹಂಡೆ ಕಾದು ಅದರ ಮೇಲೆ ತುಂಬಿಟ್ಟಿದ್ದ ಬಿಂದಿಗೆಯ ನೀರೂ ಸುಡುತ್ತಿತ್ತು. ಯಜಮಾನರು ಹೊರಗಡೆ ಹೋಗಿ ಬಂದು ಸ್ನಾನ ಮಾಡಿದರು. ಸಂಧ್ಯಾವಂದನೆಗೆ ಕೂತರು. ಮನಸ್ಸು ಸ್ತಿಮಿತಕ್ಕೆ ಬರದೆ ಮೂರು ಆಚಮನಕ್ಕೆ ಮುಗಿಸಿದರು. ಬೀಗಿತ್ತಿ ತಿಂಡಿ ಮಾಡಲು ಹೊರಟರು. ತಿಂಡಿ ಬೇಡವೆಂದು ಇವರು ಅಂಗಿ ತೊಟ್ಟು ಕುತ್ತಿಗೆಗೆ ಉತ್ತರೀಯ ಸುತ್ತಿ ಕೈಯಲ್ಲಿ ಕೊಡೆ ಹಿಡಿದು ಹೊರಟುನಿಂತರು. ವೆಂಕಟೇಶನೇ ಒಂದು ಕೈಚೀಲಕ್ಕೆ ಶಾಲು ಒಂದು ಪಂಚೆ ಒಂದು ಟವಲು ಮಡಿಸಿ ಹಾಕಿ ತಂದು ಕೊಟ್ಟ.

ತಿಪಟೂರಿನಿಂದ ಈ ಮಾರ್ಗವಾಗಿ ಬೆಂಗಳೂರಿಗೆ ಹೋಗುವ ಮೊದಲ ಬಸ್ಸು ಬೆಳಗ್ಗೆ ಆರೂವರೆಗೇ ಬರುತ್ತದೆ. ಸ್ಟ್ಯಾಂಡಿಗೆ ವೆಂಕಟೇಶನೂ ಜೊತೆಯಲ್ಲಿ ಬಂದ. ಸ್ಟ್ಯಾಂಡಿನ ಎದುರಿಗೇ ಅವನ ಮಾಲೀಕತ್ವದ ಹೋಟೆಲು. ಆದರೆ ಈ ಬಸ್ಸಿಗೆ ಸಾಮಾನ್ಯವಾಗಿ ಹೆಚ್ಚು ಪ್ರಯಾಣಿಕರಿರುವುದಿಲ್ಲ. ಇವರು ಬಂದ ಹತ್ತು ನಿಮಿಷದಲ್ಲಿ ಹರಿಜನರ ಬೆಟ್ಟಯ್ಯನವರು ಬಂದರು. ಖಾದಿ ಪಂಚೆ, ಖಾದಿ ಜುಬ್ಬ, ಗಾಂಧಿ ಟೋಪಿ ಹಾಕಿ ಒಂದು ಖಾದಿ ಕೈಚೀಲ ಹಿಡಿದಿದ್ದರು. ಕಪ್ಪನೆಯ ಬಣ್ಣ, ಮಟ್ಟಸ ಎತ್ತರದ ಬೆಟ್ಟಯ್ಯನವರು ವೆಂಕಟರಮಣಯ್ಯನವರಿಗಿಂತ ಆರೇಳು ವರ್ಷಕ್ಕೆ ದೊಡ್ಡವರು. ಸ್ವಾತಂತ್ರ್ಯ ಚಳವಳಿ ನಡೆಯುತ್ತಿದ್ದಾಗ ಸಾಬರ್ಮತಿ ಆಶ್ರಮದಲ್ಲಿ ಗಾಂಧೀ ಮಹಾತ್ಮರ ಜೊತೆ ಆರು ವರ್ಷ ಇದ್ದು ಬಂದ ಅವರು ಈಗ ನಿಮ್ನ ಜನಾಂಗದ ಕ್ಷೇತ್ರದಿಂದ ನಿಂತು ಅಸೆಂಬ್ಲಿಯ ಮೆಂಬರ್ ಆಗಿದ್ದಾರೆ. ಬಸ್‌ಸ್ಟ್ಯಾಂಡಿಗೆ ಬಂದರೆಂದರೆ ಬೆಂಗಳೂರಿಗೆ ಹೋಗುತ್ತಾರೆಂದು ಯಾರಿಗಾದರೂ ಗೊತ್ತು.

ವೆಂಕಟೇಶ ಮಾತನಾಡಿಸಿದ: 'ಏನು, ಎಂ.ಎಲ್.ಎ.ಗಳು ಬೆಂಗಳೂರಿಗಾ?'

'ಹೂಂ ಕಣ್ರಪ್ಪ. ನೀವೂ ಬತ್ತೀರಾ?'

'ನಾನು ಬರುಲ್ಲ. ಅಯ್ಯಾರು ಬತ್ತಾರೆ.'

ಬೆಟ್ಟಯ್ಯನವರು ವೆಂಕಟರಮಣಯ್ಯನವರಿಗೆ ಕೈಮುಗಿದರು. ಬಸ್ಸು ಬಂದ

ಮೇಲೆ ವೆಂಕಟರಮಣಯ್ಯನವರು ಮೊದಲು ಹತ್ತಿದರು. ಅವರು ಕುಳಿತ ಐದು ಸೀಟು ಹಿಂಬದಿಗೆ ಬೆಟ್ಟಯ್ಯನವರು ಕುಳಿತರು.

'ರಾತ್ರಿ ಬಸ್ಸಿಗೇ ಬಂದುಬಿಡು' – ಎಂದು ವೆಂಕಟೇಶ ತಂದೆಗೆ ಹೇಳಿದ. ತಾವು ಅಸೆಂಬ್ಲಿ ಮೆಂಬರಾದರೂ ಬೆಟ್ಟಯ್ಯನವರು ಬ್ರಾಹ್ಮಣರಾದ, ಅದರಲ್ಲೂ ದೇವಸ್ಥಾನದ ಅರ್ಚಕರಾದ ವೆಂಕಟರಮಣಯ್ಯನವರ ಹತ್ತಿರ ಕೂರುವವರಲ್ಲ. ಒಂದೊಂದು ಸಲ ಸ್ಟ್ಯಾಂಡಿಗೆ ಬಂದು ಬಸ್ಸಿಗಾಗಿ ಕಾಯುವಾಗ ಒಂದು ಲೋಟ ಕಾಫಿಗೆಂದು ವೆಂಕಟೇಶನ ಹೋಟಲಿಗೆ ಹೇಳಿಕಳಿಸುತ್ತಿದ್ದರು. ತಾವೇ ಒಳಗೆ ಹೋಗುತ್ತಿರಲಿಲ್ಲ. ಉಳಿದ ಹರಿಜನರಿಗಾದರೆ ಅವರದೇ ಪಾತ್ರೆ ಇದ್ದರೆ ಮೇಲಿನಿಂದ ಸುರಿಯುವ ಹೋಟಲಿನವರು, ಎಂ.ಎಲ್.ಎ.ಗಳಾದ ಇವರಿಗೆ ಗಾಜಿನ ಲೋಟದಲ್ಲಿ ಕಳಿಸುತ್ತಿದ್ದರು. ಆದರೆ ಅದನ್ನು ಬ್ರಾಹ್ಮಣರ ಮಾಣಿ ತರುತ್ತಿರಲಿಲ್ಲ. ಕ್ಲೀನರ್ ತರುತ್ತಿದ್ದ. ಇವರು ಕುಡಿದ ನಂತರ ಲೋಟ ತೆಗೆದುಕೊಂಡು ಹೋಗಿ ತೊಳೆಯುತ್ತಿದ್ದ. ಹುಣಿಸೆಹುಳಿ ಹಾಕುತ್ತಿದ್ದನೋ ಪಂಚಗವ್ಯ ಚಿಮುಕಿಸುತ್ತಿದ್ದನೋ ಎಂಬುದು ಯಾರೂ ಕೇಳದ ಪ್ರಶ್ನೆ.

ವೆಂಕಟರಮಣಯ್ಯನವರು ನೋಡದ ಊರಲ್ಲ ಬೆಂಗಳೂರು. ಆದರೆ ಕೆಂಪೇಗೌಡ ರಸ್ತೆ, ಚಿಕ್ಕಪೇಟೆ, ಮಲ್ಲೇಶ್ವರ, ಮತ್ತು ತಮ್ಮ ಮಂತ್ರಿಗಳಾದ ಮೇಲಗಿರಿಗೌಡರ ಸರ್ಕಾರೀ ಬಂಗಲೆಯಿದ್ದ ಹೈಗ್ರೌಂಡ್ಸ್, ಇಷ್ಟೇ ಅವರ ಪರಿಚಯ ಕ್ಷೇತ್ರ. ಈ ಇವಳು ಸೇರಿರುವ ದೇಶೀಯ ಕಾಲೇಜು ಎಲ್ಲಿದೆಯೋ ಗೊತ್ತಿಲ್ಲ. ಈ ಸಲ ಮೇಲಗಿರಿಯ ಮನೆಗೆ ಹೋಗಕೂಡದು. ಅವರವರೇ ಶರೀಕಾಗಿರುವಾಗ ನಾನು ಅಲ್ಲಿಗೆ ಹೋದರೆ ಎಡವಟ್ಟೇ. ಸೀದಾ ಹೋಗಿ ಇವಳನ್ನೇ ಹಿಡಿಯಬೇಕು ಎಂದು ಯೋಚಿಸುತ್ತಿದ್ದರು. ಮಗಳು ತನ್ನ ಕೈಬಿಟ್ಟಳು. ತಾನು ಒಂಟಿಯಾದೆ ಎಂಬ ಭಾವನೆ ಅವರ ಮನಸ್ಸನ್ನು ತುಂಬಿಬಿಟ್ಟಿತ್ತು. ಹೆಂಡತಿ ಸತ್ತಾಗ ಬಂದಿದ್ದ ಶೂನ್ಯಭಾವನೆಯು ಈಗಲೂ ಕವಿದಿದೆ. ಇವಳೂ ಕೈಬಿಟ್ಟರೆ ನಾನು ಒಂಟಿ. ವೆಂಕಟೇಶ ಎಲ್ಲದರಲ್ಲೂ ಸರಿ. ಆದರೆ ಅವನ ಪ್ರೀತಿಯಲ್ಲಿ ಏನೋ ಒಂದು ಥರ ಕಳಪೆ ಇದೆ ಎಂಬ ಅರಿವು ಅವರಿಗೆ ಮೊದಲಿನಿಂದ ಇತ್ತು. ಆದುದರಿಂದ ತಮ್ಮ ಪ್ರೀತಿಯನ್ನೆಲ್ಲ ಮಗಳಮೇಲೆ ಬೆಳೆಸಿಕೊಂಡಿದ್ದರು. ಈಗ ಇವಳು ಹೀಗೆ ಮಾಡುಕ್ಕೆ ಹೊರಟಿದ್ದಾಳೆ.

ಜಾತಿ ಮತಗಳು ಸುಳ್ಳೆ? – ಎಂಬ ಜಿಜ್ಞಾಸೆ ಅವರಿಗೆ ಹೊಸತಲ್ಲ. ಅವರು ಸಂಸ್ಕೃತ ಓದಿದವರು. ಉಪನಿಷತ್ತು ಗೀತೆಗಳನ್ನು ಅಭ್ಯಾಸ ಮಾಡಿದ್ದವರು. ಚಾತುರ್ವರ್ಣ್ಯಂ ಮಯಾ ಸೃಷ್ಟಂ ಅಂತ ಭಗವಂತ ಹೇಳಿದ್ದೇ ಸುಳ್ಳೇ? ಹೋದ ಸಲ ರಜದಲ್ಲಿ ಸತ್ಯ ಊರಿಗೆ ಬಂದಿದ್ದಾಗ, 'ಭಗವದ್ಗೀತೆಯನ್ನು ಬರೆದವನು

ಮನುಷ್ಯನೇ, ಭಗವಂತನೇನಲ್ಲ' ಅಂತ ವಾದ ಮಾಡಿದ್ದಳು. ಮುಂದೆ ಹೀಗೆ ತಾನು ಮಾಡಿಕೊಳ್ಳುವ ಪ್ಲಾನ್ ಆಗಲೇ ಅವಳ ಮನಸ್ಸಿನಲ್ಲಿತ್ತೆ? ಒಳಗೇ ಪ್ಲಾನ್ ಮಾಡುವುದು ವೆಂಕಟೇಶನ ಸ್ವಭಾವ. ಆದರೆ ಇವಳಲ್ಲೂ ಇದೆಯೆ? ಇದೆ ಎಂದುಕೊಳ್ಳಲು ಅವರ ಮನಸ್ಸು ಒಪ್ಪಲಿಲ್ಲ. ಒಪ್ಪಿಕೊಂಡರೆ ಮನಸ್ಸಿಗೆ ತುಂಬ ಕಷ್ಟವಾಗುತ್ತಿತ್ತು. ಅಷ್ಟರಲ್ಲಿ ಎಡೆಯೂರು ಬಂದು ಮೋಟಾರು ನಿಂತಿತು. ಇಳಿಯುವವರು ಇಳಿದು ಹತ್ತುವವರು ಹತ್ತಿದರು. ಮತ್ತೆ ಹೊರಟ ಬಸ್ಸು ನಡುನಡುವೆ ಕೈನೀಡಿದವರಿಗೆಲ್ಲ ನಿಂತು ಕುಣಿಗಲು ತಲುಪಿತು. ಇಲ್ಲಿ ಕಾಲು ಗಂಟೆಯಾದರೂ ನಿಲ್ಲುತ್ತದೆ. ಪ್ರಯಾಣಿಕರೆಲ್ಲ ಇಳಿದು ಹೋಟೆಲಿಗೆ ಹೋದರು. ಬೆಟ್ಟಯ್ಯನವರೂ ಹೋಟೆಲಿನೊಳಕ್ಕೆ ಹೋದದ್ದು ಕಾಣಿಸಿತು.

ಬೆಟ್ಟಯ್ಯ ನಮ್ಮೂರ ಹೋಟಲಿಗಾದರೆ ಬರುಲ್ಲ. ಇಲ್ಲೆಲ್ಲ ಸಲೀಸಾಗಿ ಹೋಗ್ತಾನೆ. ಹೋಟಲಿಗೆ ಹೊಲೇರು ಮಾದಿಗರನ್ನ ಸೇರಿಸುಲ್ಲ ಅಂದ್ರೆ ಸರ್ಕಾರ ದೋರು ಕೇಸು ಹಾಕ್ತಾರಂತೆ. ದೇವಸ್ಥಾನಕ್ಕೇ ಸೇರಿಸಬೇಕು ಅಂತ ಕಾನೂನು ಮಾಡಿರುವಾಗ ಹೋಟಲಿಗೆ ಸೇರಿಸದೆ ಬಿಡ್ತಾರೆಯೆ? ಕಾಲ ಎಲ್ಲೆಲ್ಲಿಗೆ ಬರ್ತಿದೆ?— ಎಂಬ ಯೋಚನೆಯಲ್ಲಿ ಅವರು ಕೆಲವು ನಿಮಿಷ ತಮ್ಮ ಮಗಳ ವಿಷಯ ಮರೆತರು. ಹತ್ತು ನಿಮಿಷದಲ್ಲಿ ಬೆಟ್ಟಯ್ಯ ಹೊರಗೆ ಬಂದರು. ಬಸ್ಸಿನ ಕಿಟಕಿಯಿಂದ ದೂರ ನಿಂತು, 'ಸ್ವಾಮಿಗಳೇ, ಒಂದೆಲ್ಡು ಕಿತ್ತಳೆಹಣ್ಣು ತಗಂತೀರಾ?' ಎಂದು ಕೇಳಿದರು.

'ಏನೂ ಬ್ಯಾಡಪ್ಪ' – ಎಂದು ಇವರು ಹೇಳಿದುದಕ್ಕೆ ಸುಮ್ಮನಾಗಲಿಲ್ಲ. ಎದುರುಭಾಗದ ಅಂಗಡಿಗೆ ಹೋಗಿ ಧಾರಣೆ ಕೇಳಿ ದುಡ್ಡು ಕೊಟ್ಟರು. ಇನ್ನು ಇವನು ತಂದುಕೊಟ್ಟದ್ದನ್ನ ಹ್ಯಾಗೆ ತಗೋಳಾದು? ಹಣ್ಣು ಅಂತ ಸ್ವೀಕರಿಸಿದರೂ ಅವನು ಕೊಡುವಾಗ ಕೈ ಮುಟ್ಟಿದರೆ ಏನು ಮಾಡೂದು? ಅವರಿಗೆ ಈಗ ಹಸಿವು ಕಾಣಿಸುತ್ತಿತ್ತು. ನೆನ್ನೆ ಮಧ್ಯಾಹ್ನ ಹ್ಯಾಗೆ ಒಂದು ತುತ್ತು ತಿಂದಿದ್ದರೋ! ರಾತ್ರಿಯೂ ಬಾಯಿಗೆ ಏನೂ ಹಾಕಿಲ್ಲ. ಬೆಳಗ್ಗೆಯೂ ತಿಂದಿಲ್ಲ. ಈಗ ಇವನನ್ನು ಮುಟ್ಟಿಕೊಂಡರೆ ಬೆಂಗಳೂರಿನಲ್ಲಿ ಸ್ನಾನ ಮಾಡದೆ ಏನೂ ತಿನ್ನೂಹಾಗಿಲ್ಲ ಎಂದು ಯೋಚಿಸುತ್ತಿರುವಾಗ ಅಂಗಡಿಯವನೇ ಕೆಳಗೆ ಇಳಿದು ಆರು ಕಿತ್ತಳೆ ಆರು ರಸ ಬಾಳೆಹಣ್ಣುಗಳನ್ನು ತೆಗೆದು ತಂದ. ಬೆಟ್ಟಯ್ಯ ದೂರದಿಂದ ಇವರನ್ನು ಕೈಮಾಡಿ ತೋರಿಸಿದರು. ಅಂಗಡಿಯವನು ಕಿಟಕಿಯಿಂದ ಕೈನೀಡಿ ಕೊಟ್ಟ. ಪಟ್ಟೆಪಟ್ಟೆ ಲುಂಗಿ ಸುತ್ತಿದ ಅವನು ಲಬ್ಬೆ ಸಾಬರವನೆಂದು ಗೊತ್ತಾಯಿತು.

ವೆಂಕಟರಮಣಯ್ಯನವರು ಅಂದುಕೊಳ್ಳುತ್ತಿದ್ದರು: ಬೆಟ್ಟಯ್ಯನ ಸ್ವಭಾವ ಒಳ್ಳೆಯದು. ಅಸೆಂಬ್ಲಿ ಮೆಂಬರಾದೆ ಅಂತ ಅಹಂಕಾರವಿಲ್ಲ. ಸರ್ಕಾರದೋರು, ಹೊಲೇರು ಮಾದಿಗರಿಗೆ ಮಂಗಳೂರು ಹೆಂಚಿನ ಮನೆ ಕಟ್ಟಿಸಿಕೊಡ್ತಿದಾರೆ. ಈಗ

ಬೆಟ್ಟಯ್ಯನಿಗೆ ಮಾದಿಗಕೇರೀಲಿ ದೊಡ್ಡ ಮನೆಯಿದೆ. ದರಖಾಸ್ತಿನಲ್ಲಿ ಹೊಸ ಹೊಲ ವಾಗಿದೆ. ಐನೂರು ತೆಂಗಿನ ಸೊಸಿ ಹಾಕಿಸಿದಾನೆ. ಇನ್ನು ಎರಡು ವರ್ಷದಲ್ಲಿ ಮರ ಫಲಕ್ಕೆ ಬಂದರೆ ಅದೇ ಅರವತ್ತು ಎಪ್ಪತ್ತು ಸಾವಿರದ ಆಸ್ತಿ. ಅಸೆಂಬ್ಲೀಲಿ ಸಂಬಳ ವಂತೆ. ಆದರೂ ಜಂಬವಿಲ್ಲ. ತನ್ನ ಜಾತಿಯ ಮಿತಿ ಮರ್‍ಯಾದೆ ತಿಳ್ಕೊಂಡೇ ನಡೀತಾನೆ. ಆದರೆ ಅವನ ಮಗನ ಅಹಂಕಾರ ವಿಪರೀತ. ಕಾಲೇಜಿನಲ್ಲಿ ಬಿ.ಎ. ಓದಿ ಫೇಲಾಗಿದಾನೆ. ಅವತ್ತು ವೆಂಕಟೇಶನ ಹೋಟಲಿನೊಳಕ್ಕೆ ನುಗ್ಗಿದ್ದನಂತೆ. ಕಾನೂನೇ ಇದೆ, ನಾನ್ಯಾಕೆ ಬರಕೂಡದು ಅಂತ ವಾದ ಮಾಡಿದನಂತೆ. ಮೇಲಿನ ಮನೆ ಕಾಳೇಗೌಡ ಕಾಫಿ ಕುಡೀತಾ ಕೂತಿದ್ದನಂತೆ. ಎದ್ದು ಬಂದು ಇವನ ಮುಖಕ್ಕೆ ಹೊಡೆದ ಮೇಲೆ ಸೋತು ಕತ್ತು ಬಗ್ಗಿಸಿಕೊಂಡು ಹೊರಟುಹೋದ ನಂತೆ. ಕಾಲೇಜು ಓದಿದರೆ ಇದೆಲ್ಲ ಅಹಂಕಾರ ಬರುತ್ತೆ. ಬೆಟ್ಟಯ್ಯ ಎಷ್ಟಾದರೂ ಹಿಂದಿನ ಕಾಲದೋನು; ಕಾಲೇಜು ಕಂಡಿಲ್ಲ.

ಬಸ್ಸು ಕುಣಿಗಲಿನಿಂದ ಮುಂದೆ ಓಡುತ್ತಿದ್ದಾಗ ಅವರ ಮನಸ್ಸು ಬೆಟ್ಟಯ್ಯ ನವರ ಬಗೆಗೇ ಯೋಚಿಸುತ್ತಿತ್ತು. ಕೈಲಿದ್ದವುಗಳ ಪೈಕಿ ನಾಲ್ಕು ಬಾಳೆ ಮತ್ತು ಮೂರು ಕಿತ್ತಳೆಹಣ್ಣುಗಳನ್ನು ಸುಲಿದು ತಿಂದು ಸಿಪ್ಪೆಯನ್ನು ಕಿಟಕಿಯಿಂದ ಹೊರಗೆ ಎಸೆದರು. ಉಳಿದ ಹಣ್ಣುಗಳನ್ನು ಕೈಚೀಲಕ್ಕೆ ಹಾಕಿಕೊಂಡರು. ಅಷ್ಟರಲ್ಲಿ ನೆಲಮಂಗಲ ಬಂತು. ಇಲ್ಲಿಯೂ ಕಾಲುಗಂಟೆ ನಿಲ್ಲಿಸುತ್ತಾರೆ. ಎಷ್ಟೋ ಜನರು ಬಸ್ಸಿನಿಂದ ಕೆಳಗೆ ಇಳಿದು ಕಲ್ಲುಬೆಂಚುಗಳ ಮೇಲೆ ಕುಳಿತು ಕಡಲೆಕಾಯಿ ಕೊಂಡು ತಿನ್ನಲು ಶುರುಮಾಡಿದರು. ಬೆಟ್ಟಯ್ಯನವರೂ ಕೆಳಗಿಳಿದರು. ವೆಂಕಟ ರಮಣಯ್ಯನವರೂ ಇಳಿದು ಅವರಿಗೆ ಸ್ವಲ್ಪ ದೂರದಲ್ಲಿ ನಿಂತು ಕೇಳಿದರು: 'ದೇಶೀಯ ಕಾಲೇಜು ಅಂದ್ರೆ ಎಲ್ಲಿದೆ ಗೊತ್ತೇ?'

'ಬೆಂಗಳೂರಾಗೆ? ಗೊತ್ತಿದೆ. ಬಸವನಗುಡಿಯಾಗೆ.'

'ನಾನು ಆ ಕಡೆ ನೋಡಿಲ್ಲ. ಬಂದು ಸ್ವಲ್ಪ ತೋರಿಸಬೇಕಲ.'

'ತೋರುಸ್ತೀನಿ. ಈಗೇನು ಜನ್ರು?'

'ಹೀಗೇ' – ಎಂದರೇ ಹೊರತು ಕಾರಣ ಹೇಳಲಿಲ್ಲ. ಬೆಟ್ಟಯ್ಯನವರೂ ಮುಂದೆ ಕೇಳಲಿಲ್ಲ. ಆದರೆ ಇವರಿಗೆ ಅವರ ಬಗೆಗೆ ಇದ್ದಕ್ಕಿದ್ದ ಹಾಗೆಯೇ ವಿಶ್ವಾಸ ಹುಟ್ಟಿತು. ನೆನ್ನೆ ಮಧ್ಯಾಹ್ನದಿಂದ ತಮ್ಮ ಕಷ್ಟವನ್ನು ಬೇರೆಯವರಿಗೆ ಹೇಳಿ ಕೊಂಡಿರಲಿಲ್ಲ. ಬೆಟ್ಟಯ್ಯ ಅಂದರೆ ಸಾಧು ಮನುಷ್ಯ ಎಂದುಕೊಂಡ ಅವರು ತಮ್ಮ ಅಂಗಿಯ ಒಳಜೇಬಿಗೆ ಕೈಹಾಕಿ, ನೆನ್ನೆ ಬಂದಿದ್ದ ಕಾಗದವನ್ನು ತೆಗೆದು ತಮ್ಮ ಮುಂದಿದ್ದ ಒಂದು ಕಲ್ಲುಬೆಂಚಿನ ಮೇಲೆ ಹಾಕಿ, 'ಇದ ಓದು ಗೊತ್ತಾ ಗುತ್ತೆ. ಸಾಯುಕ್ಕೆ ಮುಂಚೆ ನಾನು ಇದೊಂದ ನೋಡಬೇಕಾಗಿದೆ' ಎಂದರು.

ಕಾಗದ ತೆಗೆದುಕೊಂಡು ಓದಿದ ಅವರ ಮುಖವೂ ಖಿನ್ನವಾಯಿತು. 'ನೋಡಿ, ಕಾಲ ಬದಲಾಯಿಸ್ತಾ ಇದೆ' – ಎಂದರು.

'ಅವಳಿರೂ ಕಡೆಗೆ ನನ್ನ ಕರ್ಕಂಡ್ ಹೋಗಬೇಕು. ಇದು ತಪ್ಪು, ಅಧರ್ಮ ಅಂತ ಆ ಮುಂಡೇದುಕ್ಕೆ ನೀನೂ ಬಿಡಿಸಿಹೇಳಬೇಕು.'

'ಆಯ್ತು ಬಿಡಿ. ಹೇಳಾಣ.'

ಅಷ್ಟರಲ್ಲಿ ಡ್ರೈವರು ಸ್ಟೀರಿಂಗ್ ಮುಂದೆ ಕುಳಿತರು. ಇಳಿದಿದ್ದವರೆಲ್ಲ ಓಡಿ ಬಂದು ಹತ್ತಿ ತಮ್ಮ ತಮ್ಮ ಜಾಗದಲ್ಲಿ ಕುಳಿತರು.

ಬೆಟ್ಟಯ್ಯನವರು ಎಂ.ಎಲ್.ಎ. ಹಾಸ್ಟೆಲಿಗೆ ಹೋಗದೆ ಕಲಾಸಿಪಾಳ್ಯದಲ್ಲಿಯೇ ಇಳಿದರು. 'ದೇಶೀಯ ಕಾಲೇಜಿಗೆ ಹೋಗಬೇಕಾದರೆ ಆಟೋರಿಕ್ಷಾ ಮಾಡಿದರೂ ಇವರು ತಮ್ಮ ಜೊತೆ ಕೂರಲಾರರು. ಟ್ಯಾಕ್ಸಿಯಲ್ಲಿ ತಾವು ಮುಂದೆ ಕೂತು ಇವರನ್ನು ಹಿಂದೆ ಕೂರಿಸಿದರೂ ಹತ್ತಿರವೇ ಆಗುತ್ತದೆ' ಎಂದು ಯೋಚಿಸಿ ಎರಡು ರಿಕ್ಷಾ ಮಾಡಿ, ಒಂದರ ಹಿಂದೆ ಮತ್ತೊಂದು ಒಂದೇ ಕಡೆಗೆ ಬರುವಂತೆ ವ್ಯವಸ್ಥೆ ಮಾಡಿ ಹೊರಟರು.

ಇವರು ಕಾಲೇಜಿನ ಗೇಟಿನ ಹತ್ತಿರ ನಿಂತರು. ಬೆಟ್ಟಯ್ಯನವರೇ ಒಳಗೆ ಹೋಗಿ ಹತ್ತು ನಿಮಿಷದಲ್ಲಿ ಸತ್ಯಭಾಮೆಯನ್ನು ಕರೆದುಕೊಂಡು ಬಂದರು. ಮುಖವು ತಂದೆಯನ್ನು ಕಂಡದ್ದಕ್ಕೋ ಅಥವಾ ಮತ್ತೆ ಯಾವ ಕಾರಣಕ್ಕೋ ಸ್ವಲ್ಪ ಮಂಕಾಗಿದ್ದರೂ, ಅವಳು ಪ್ರಜ್ಞಾಪೂರ್ವಕ ಪ್ರಯತ್ನದಿಂದ ಗೆಲುವನ್ನು ಪ್ರಕಟಿಸುವಂತೆ ಕಾಣುತ್ತಿದ್ದಳು. ಬೆಟ್ಟಯ್ಯನವರಿಗೆ ಹತ್ತಿರವಾಗಿಯೇ ನಡೆದುಕೊಂಡು ಬರುತ್ತಿದ್ದಳು. ಅವಳನ್ನು ಕಂಡ ಇವರು ನೆಲದ ಕಡೆ ಕಣ್ಣು ತಿರುಗಿಸಿ ತಮ್ಮ ಮುಂಗಾಲನ್ನೇ ದಿಟ್ಟಿಸಿ ನೋಡಲು ಪ್ರಾರಂಭಿಸಿದರು. ಅವಳು ಹತ್ತಿರ ಬಂದು, 'ಈಗ ಬಂದ್ಯಾ ಅಪ್ಪ?' ಎಂದು ಕೇಳಿದರೂ ಮಾತನಾಡಲಿಲ್ಲ. ಅವಳೇ –'ರೂಮಿಗೆ ಹೋಗಾಣ ನಡೀರಿ' ಎಂದು ಮುಂದೆ ಹೆಜ್ಜೆ ಹಾಕಿದಳು. ಇವರೂ ತಮ್ಮ ಹೆಜ್ಜೆಯನ್ನು ಕಿತ್ತರು. 'ಹಂಗಾರೆ ನಾನು ಹ್ವರಡ್ಲಾ?' – ಎಂದು ಬೆಟ್ಟಯ್ಯನವರು ಎಂದದ್ದಕ್ಕೆ, 'ಬನ್ನಿ, ನನ್ನ ರೂಮು ನೋಡ್ಕಂಡು ಹೋಗೋರಂತೆ' ಎಂದು ಕರೆದಳು. 'ಸ್ವಾಮಿಯೋರೇ, ನೀವಿನ್ನು ನಡೀರಿ, ನಾನು ಹೋಯ್ತೀನಿ' – ಎಂದು, ಅವಳ ಆಹ್ವಾನಕ್ಕಿಂತ ಅವರ ಒಪ್ಪಿಗೆ ಮುಖ್ಯವೆಂಬುದನ್ನು ಬೆಟ್ಟಯ್ಯನವರು ಸೂಚಿಸಿದರು.

'ನಾನಲ್ಲೇ ಹೇಳಿದ್ನಲಾ. ನೀನೂ ಬಾರಯ್ಯ' – ಎಂದು ಅವರೂ ಕರೆದರು.

ಕಾಲೇಜಿಗೆ ಎರಡು ಫರ್ಲಾಂಗ್ ದೂರದಲ್ಲೇ ಒಂದು ಸಣ್ಣ ಬೀದಿಯಲ್ಲಿ ಒಂದು ಮಹಡಿಯ ಮೇಲೆ ಅವಳ ರೂಮು. ಹತ್ತಿ ಇಳಿಯಲು ಹಿಂಭಾಗದಿಂದ

ಪ್ರತ್ಯೇಕ ಮೆಟ್ಟಿಲು. ಒಳಗೆ ಒಂದು ಮಂಚ, ಒಂದು ಮೇಜ, ಎರಡು ಕುರ್ಚಿಗಳು. ಹಾಸಿಗೆ ಬಟ್ಟೆಬರೆ ಮೊದಲಾಗಿ ಇನ್ನೂ ಏನೂ ಹೆಚ್ಚು ಮಾಡಿಕೊಂಡಿರಲಿಲ್ಲ. ಬೆಟ್ಟಯ್ಯನವರು ರೂಮಿನ ಒಳಗೆ ಬರಲಿಲ್ಲ. ಹೊರಗಿನ ಬಿಸಿಲುಮಚ್ಚಿನಂತಹ ಜಾಗದಲ್ಲೇ ನಿಂತರು. ಯಜಮಾನರು ಒಳಗೆ ಬಂದದ್ದೇ ತಡ, ಅವಳ ಕಾಗದವನ್ನು ತೆಗೆದು ಮಂಚದ ಮೇಲೆ ಎಸೆದು ಕೇಳಿದರು: 'ಇದೇನು ಬರೆದಿರೂದು?'

ಅವಳು ಉತ್ತರ ಹೇಳಲಿಲ್ಲ. ಅವರಿಗೆ ಮುಖಕೊಡದೆ ಬೇರೆ ಕಡೆ ತಿರುಗಿ ನಿಂತಳು. 'ಇದೇನು ಬರೆದಿರೂದು ಬಗುಳೇ' – ಎಂದು ತಂದೆ ಧ್ವನಿ ಏರಿಸಿದರು.

'ಅಪ್ಪ, ಆಡೂ ಮಾತನ್ನ ಮೆಲ್ಲಗೆ ಆಡು. ಪಟ್ಟಣವಾಸದಲ್ಲಿ ಎಲ್ಲ ಹತ್ತಿರ ಹತ್ತಿರ ಮನೆಗಳು. ಈ ಮಹಡೀ ಮೇಲೆ ಇನ್ನೊಂದು ಸಂಸಾರ ಇದೆ.'

'ನೀನು ಮಾಡೂ ಕೆಲ್ಸಕ್ಕೆ ಮರ್ಯಾದೆಯೊಂದು ಕೇಡು. ಹೊಲೆಮುಂಡೆ' – ಎಂದು ಬಾಗಿ, ಒಳಬಾಗಿಲಿನಲ್ಲಿಟ್ಟಿದ್ದ ತಮ್ಮ ಎಕ್ಕಡಗಳಲ್ಲಿ ಒಂದನ್ನು ತೆಗೆದುಕೊಂಡು ಅವಳ ನೆತ್ತಿ, ಬೆನ್ನು ಭುಜಗಳ ಮೇಲೆ ಎತ್ತಿ ಎತ್ತಿ ಬಾರಿಸಿಬಿಟ್ಟರು. ಹೊರಗೆ ನಿಂತ ಬೆಟ್ಟಯ್ಯನವರಿಗೆ ಏನು ಮಾಡಲೂ ತೋಚದು. ಒಳಗೆ ಹೋಗಿ ಬಿಡಿಸಿಕೊಳ್ಳುವ ಮನಸ್ಸು. ಆದರೆ ತಾವು ಒಳಗೆ ಹೋಗುವಂತಿಲ್ಲ, ಅವರನ್ನು ಮುಟ್ಟುವಂತಿಲ್ಲ. ಬಾಗಿಲಿನಿಂದ ಒಳಕ್ಕೆ ತಲೆಯನ್ನು ಚಾಚಿ, 'ಸ್ವಾಮಿಗಳೇ, ಶಾಂತಿ ಶಾಂತಿ. ನಿಮ್ಮಂತೋರು ಅಹಿಂಸೆ ಮಾಡಬೇಕು. ಅಂತದನ್ನ ಕೈಯಾಗೆ ಮುಟ್ಟಬ್ಯಾಡ್‌ದು' – ಎಂದರೆ ಅವರು ಮತ್ತೆ ಮತ್ತೆ ಹೊಡೆಯುತ್ತಾ, 'ನೀನು ಸುಮ್ನಿರಯ್ಯಾ, ಎಕ್ಕಡದೇಟು ಬೀಳದೆ ಬುದ್ಧಿ ಬರುಲ್ಲ ಈ ಮಾದಿಗಿತ್ತಿಗೆ' ಎಂದು ತಮ್ಮ ತೋಳ ಶಕ್ತಿಯನ್ನು ಹೆಚ್ಚು ಮಾಡಿದರು. ಮಗಳು ಮಾತ್ರ ಸ್ವಲ್ಪವೂ ವಿರೋಧಿಸದೆ, ತನ್ನನ್ನು ತಾನು ಪೂರ್ತಿಯಾಗಿ ಅವರ ಶಿಕ್ಷೆಗೆ ಸಮರ್ಪಿಸಿಕೊಂಡು ತಲೆಬಾಗಿ ನಿಂತಿದ್ದಳು. 'ಮಾತಾಡೇ' – ಎಂದು ಅವರು ಅರಚಿದರೂ ತುಟಿಪಿಟಿಕ್ ಎನ್ನಲಿಲ್ಲ. ಅವಳ ಭುಜ ಬೆನ್ನುಗಳಲ್ಲಿ ಸಣ್ಣಗೆ ರಕ್ತ ಬಂದು ರವಿಕೆ ಮತ್ತು ಸೀರೆಯ ಸೆರಗು ನೆನೆಯುತ್ತಿತ್ತು. ತಾನು ಮುಂದೆ ನುಗ್ಗಿ ಇವರ ಕೈಹಿಡಿದು ಬಿಡಿಸಿಕೊಳ್ಳಬೇಕೆಂದು ಬೆಟ್ಟಯ್ಯನವರು ಕೈನೀಡಿದರು.' ನೀನು ದೂರ ಇರು' – ಎಂದು ಅವರ ಕಡೆಗೆ ಒಂದು ಸಲ ಗರ್ಜಿಸಿದ ವೆಂಕಟರಮಣಯ್ಯನವರು ಆವೇಶ ಬಂದವರಂತೆ ಬಾಗಿ ಇನ್ನೊಂದು ಎಕ್ಕಡವನ್ನೂ ಕೈಗೆ ತೆಗೆದುಕೊಂಡು ಎರಡೂ ಕೈಗಳಿಂದ ಹುಯ್ಯಲು ಪ್ರಾರಂಭಿಸಿದರು. ಮಗಳ ಭುಜದಿಂದ ಈಗ ಇನ್ನೂ ಹೆಚ್ಚು ರಕ್ತ ಹನಿಯಲು ಪ್ರಾರಂಭವಾಯಿತು.

ಅಷ್ಟರಲ್ಲಿ ಮಹಡಿಯ ಮೇಲಿದ್ದ ಸಂಸಾರದ ಹೆಂಗಸು ಓಡಿಬಂದಳು. ಬೆಟ್ಟಯ್ಯನವರೇ, 'ಅಮ್ಮಾ, ಒಳಗೆ ಹೋಗಿ ಮಸಿ ಬಿಡಿಸ್ಕಳಿ' ಎಂದು ಆಕೆಗೆ

ಅಂಗಲಾಚಿದರು. ಬಿಡಿಸಿಕೊಳ್ಳದಿದ್ದರೆ ಈ ಹುಡುಗಿ ಉಳಿಯುವುದಿಲ್ಲವೆಂಬ ಭಯ ಅವರಿಗೆ. ಆದರೆ ಅಷ್ಟರಲ್ಲಿ ಅವಳ ತಂದೆಯೇ ಇದ್ದಕ್ಕಿದ್ದ ಹಾಗೆ ಕೆಳಗೆ ಬಿದ್ದುಬಿಟ್ಟರು. ಅವರಿಗೆ ಪ್ರಜ್ಞೆ ತಪ್ಪಿಹೋಗಿದೆ ಎಂದು ಬೆಟ್ಟಯ್ಯನವರಿಗೆ ಸ್ಪಷ್ಟವಾಯಿತು. ಅವರ ಹೊಡೆತಕ್ಕೆ ಬೆನ್ನು ಕೊಟ್ಟು ನಿಂತಿದ್ದ ಸತ್ಯಳಿಗೆ ಏನೂ ತಿಳಿಯಲಿಲ್ಲ. ಬೆಟ್ಟಯ್ಯನವರೇ, 'ಅಯ್ಯಾರು ಗ್ಯಾನ ತಪ್ಪಿ ಬಿದ್ದವ್ರೆ, ನೋಡವ್ವ' ಎಂದಾಗ ತಿರುಗಿ ನೋಡಿದಳು. ಪ್ರಾಣ ಹೋದ ಹೆಣದಂತೆ ಅವರು ಬಿದ್ದಿದ್ದಾರೆ. ಎರಡು ಕಾಲೂ ಒಂದೊಂದು ಕಡೆಗೆ ಚಾಚಿವೆ. ಬಲಗೈ ಮಂಚದ ಕೆಳಗೆ ಹೋಗಿದೆ. ಮುಖವೆಲ್ಲ ಬೆವೆತು, ಹನಿಗಳು ಹಣೆ ಕೆನ್ನೆ ಮೂಗುಗಳ ಮೇಲೆ ಕೂಡಿನಿಂತಿವೆ. ತೊಟ್ಟಿದ್ದ ಅಂಗಿ ಬೆವರಿನಿಂದ ಒದ್ದೆಯಾಗಿದೆ.

'ಬ್ಯಾಗ ತಲೆಗೆ ಒಂದೀಟು ತಣ್ಣೀರು ತಟ್ಟಿ. ಗಾಳಿ ಬೀಸಿ, ಗಾಳಿಯ' – ಎಂದು ಬೆಟ್ಟಯ್ಯ ಹೇಳಿದರು. ಕಿಟಕಿಯ ಗೂಡಿನಲ್ಲಿ ಗಾಜಿನ ಜಾಡಿಯಲ್ಲಿದ್ದ ನೀರನ್ನು ತೆಗೆದುಕೊಂಡು ಅವಳು ಬೇಗ ಅವರ ತಲೆಗೆ ತಟ್ಟಿದಳು. ಮೇಜದ ಮೇಲಿದ್ದ ಬರೆಯುವ ರೊಟ್ಟಿನಿಂದ ಬೇಗ ಬೇಗ ಗಾಳಿ ಹಾಕಿದಳು. ಪಕ್ಕದ ಕೋಣೆಯ ಸಂಸಾರದ ಹೆಂಗಸು ಹೊಸಲಿಗೆ ಬಂದು, 'ಯಾವನ್ರೀ ಇವನು, ಕೈ ಸೇದಿಹೋಗ, ನಿಮಗೆ ಹೀಗೆ ಹೊಡೆದಿದಾನೆ. ಮೈ ಎಲ್ಲ ರಕ್ತ ಬತ್ತಿದೆ' ಎಂದಳು.

'ನಮ್ಮ ತಂದೆ. ಕೋಪಕ್ಕೆ ಹಾಗೆ ಮಾಡಿದಾರೆ. ಸಿಟ್ಟಿನ ಸ್ವಭಾವ. ನಿಮ್ಮ ಮನೆಗೆ ನಡೀರಿ' – ಎಂದು ಸತ್ಯ ಶಾಂತವಾಗಿ ಉತ್ತರ ಕೊಟ್ಟಳು. ತನಗೆ ಅವಮಾನವಾದವಳಂತೆ ಆಕೆ ಸರಕ್ಕನೆ ತಿರುಗಿ ಹೊರಟುಹೋದಳು.

'ಬೆಟ್ಟಯ್ಯನೋರೇ, ಓಡಿ ಹೋಗಿ ಯಾರಾದರೂ ಡಾಕ್ಟ್ರನ್ನ ಕರ್ಕಂಡ್ ಬನ್ನಿ' – ಸತ್ಯ ಹೇಳಿದಳು.

'ಒಂದೆಲ್ಡು ನಿಮಿಷ ತಡೀರಿ. ಇನ್ನೊಂದ್ ಸಲಿ ನೀರು ತಟ್ಟಿ.'

ಅವಳು ಹಾಗೆಯೇ ಮಾಡಿದಳು. ಹತ್ತಿರ ಕೂತು ಅವರ ತಲೆಯನ್ನು ನಿಧಾನವಾಗಿ ಎತ್ತಿ ತನ್ನ ತೊಡೆಯ ಮೇಲೆ ಇಟ್ಟುಕೊಂಡಳು. 'ಬೆಟ್ಟಯ್ಯನೋರೇ, ಇವರು ಬೇಕಾದರೆ ಮತ್ತೆ ಸ್ನಾನ ಮಾಡ್ತಾರೆ. ನೀವು ಒಳಗೆ ಬನ್ನಿ. ಗಾಳಿ ಹಾಕಿ' – ಎಂದಳು.

ಒಳಗೆ ಬಂದು ಕೂತು ಅವರು ಜೋರಾಗಿ ಗಾಳಿ ಹಾಕಿದರು. ಎರಡು ನಿಮಿಷದಲ್ಲಿ ಯಜಮಾನರಿಗೆ ಪ್ರಜ್ಞೆ ತಿಳಿಯಿತು. ಕಣ್ಣು ಬಿಟ್ಟರು. ಎದುರಿಗೆ ಕುಳಿತಿದ್ದ ಮಾದಿಗ ಜಾತಿಯ ಇವರ ಗುರುತು ಹತ್ತುವ ಮುನ್ನ ಇವರೇ 'ಸ್ವಾಮಿಯೋರೇ, ನಾನೇನು ಮುಟ್ಟಿಲ್ಲ, ಗಾಳಿ ಬೀಸ್ತಿದೀನಿ. ಚೆನ್ನಾಗಿ ಗ್ಯಾನ ಬಂದ ಮ್ಯಾಲೆ ಮಡಿ ಉಟ್ಕಳೋರಂತೆ' ಎಂದದ್ದಕ್ಕೆ – 'ನಾನೆಲ್ಲಿದೀನಿ?' ಎಂದು ಕನವರಿಸಿದಂತೆ ಕೇಳಿದರು.

'ನಿಮ್ಮ ಮಗಳ ತೊಡೆ ಮ್ಯಾಲೆ ಮನೀಕಂಡಿದೀರ. ಹಂಗೇ ಮನಗಿರಿ.'

ಸ್ವಲ್ಪ ಹೊತ್ತಿನಲ್ಲಿ ಅವರಿಗೆ ಪೂರ್ಣವಾಗಿ ಪ್ರಜ್ಞೆ ಬಂತು. ನಡೆದದ್ದೆಲ್ಲ ಸ್ಪಷ್ಟವಾಗಿ ನೆನಪಾಯಿತು. ಇಬ್ಬರೂ ಬೇಡವೆಂದರೂ ಎದ್ದು ಕುಳಿತರು. ಹಿಂತಿರುಗಿ ಮಗಳನ್ನು ನೋಡುತ್ತಾರೆ: ಅವಳು ತಲೆ ತಗ್ಗಿಸಿ ಕುಳಿತಿದ್ದಾಳೆ. ಬೆನ್ನು ಕಾಣುತ್ತಿಲ್ಲ. ಆದರೆ ಭುಜ ತೋಳುಗಳ ಮೇಲಿನ ರಕ್ತ ಕಪ್ಪು ಬಣ್ಣಕ್ಕೆ ತಿರುಗಿದೆ. ಬಿಳೀ ಬಣ್ಣದ ರವಿಕೆಯು ಒಳಗೆ ಆಗಿದ್ದ ಗಾಯಕ್ಕೆ ಅಂಟಿಕೊಂಡಿದೆ. ತಾವೇ ಸರಗಿ ಬಂದು ಬೆನ್ನನ್ನು ತಡವರಿಸಿ ನೋಡಿದರು. ಬೆನ್ನಿನ ಮೇಲ್ಭಾಗವೆಲ್ಲ ಕಪ್ಪಗೆ ಪಟ್ಟುಕಟ್ಟಿದಂತೆ ಆಗಿದೆ. ರವಿಕೆಯು ಒಂದು ಅಗಲವಾದ ಬ್ಯಾಂಡೇಜಿನಂತೆ ಹತ್ತಿಕೊಂಡಿದೆ. 'ಏಳು, ಯಾವ್ದಾದರೂ ಆಸ್ಪತ್ರೆಗೆ ಹೋಗಾಣ' – ಎಂದರು.

'ಎಲ್ಲಿಗೂ ಬ್ಯಾಡ. ಒಂದಿಷ್ಟು ಜೋರಿಕ್‌ಪುಡಿ ತಂದು ಹಾಕಿದರೆ ಹುಶಾರಾಗುತ್ತೆ. ನೀನು ಮಂಚದಮ್ಯಾಲೆ ಸ್ವಲ್ಪ ಹೊತ್ತು ಮಲಕ್ಕಂಡು ಸುಧಾರಿಸಿಕೊ.'

'ಸ್ವಾಮಿಗಳೇ, ನೀವು ಮಡಿ ಉಟ್ಕಂಡು ಊಟದ ನಿಗ ನೋಡಿ' – ಎಂದು ಬೆಟ್ಟಯ್ಯನವರು ಎದ್ದು ನಿಂತರು.

'ಊಟದ ಮನೆ ಕಾಯ್ವಾಯ್ತು. ಬಂದ ವಿಷಯ ಮದ್ಲು ಮಾತಾಡಬೇಕು. ನೀನೂ ಕೂತ್ಕಳಯ್ಯ.'

'ಇಷಯ ತೀರ್ಮಾನಮಾಡಿ ಆಯ್ತಲ್ರ' – ಬೆಟ್ಟಯ್ಯನವರು ವಿಷಾದವನ್ನು ಸೂಸುತ್ತಾ ನಕ್ಕರು.

'ಎರಡೇಟು ಕೊಡ್ದ್ದೆ ಇದ್ರೆ ಯಾಕ ಮಕ್ಕಳು ತಾನೆ ಬುದ್ಧಿ ಕಲ್ತ್ಕತ್ತಾವಯ್ಯ. ಕೂತ್ಕ, ಮಾತಾಡಾಣ. ನೀನೂ ಬುದ್ಧಿ ಹೇಳು ಇದುಕ್ಕೆ' – ಎಂದು ಎದ್ದು ಅವರು ಗೋಡೆಯನ್ನೊರಗಿ ಮಂಚದ ಮೇಲೆ ಕುಳಿತರು.

೬

ಬೆಟ್ಟಯ್ಯನವರು ಒಳಬಾಗಿಲಿನಲ್ಲಿ, ಸತ್ಯ ಮೇಜದ ಕಾಲಿನ ಹತ್ತಿರವೂ ನೆಲದ ಮೇಲೆ ಕುಳಿತರು.

'ಅದೇನು ಮಾತಾಡೇ' – ಯಜಮಾನರು ಹೇಳಿದರು.

'ನಾನು ಎಲ್ಲಾನೂ ಕಾಗದದಲ್ಲೇ ಬರೆದಿದೀನಿ' – ಅವಳು ಶಾಂತವಾಗಿ ಉತ್ತರ ಹೇಳಿದಳು.

'ನೀನೊಬ್ಳೇ ಅಲ್ಲ ಬರವಣಿಗೆ ಕಂಡಿರೋಳು. ನನ್ನೆದುರಿಗೆ ಬಾಯಿಬಿಟ್ಟು ಬಗುಳು.'

'ನೀವು ಸಿಟ್ಟೀ ಮಾಡ್ಕಂಡಿದ್ರೆ ನಾನೇನ್ ಹೇಳ್ಲಿ?'

'ನೀವು ಶಾಂತಿ ಮಾಡ್ಕ್ಯಬೇಕು. ಅಹಿಂಸಾ ಅಂದ್ರೆ....' – ಬೆಟ್ಟಯ್ಯನವರೂ ಹೇಳಿದರು.

'ಶಾಂತಿ ಅಲ್ದೆ ನಾನೇನ್ ಸಿಟ್ ಮಾಡ್ಕಂಡಿದೀನಾ? ಹೇಳೂದ ನ್ಯೆಟ್ಟಗೆ ಬಗುಳಕ್ಕೆ ಹೇಳಯ್ಯಾ ಅವಳಿಗೆ.'

ಸತ್ಯ ದೃಢವಾಗಿ, ಆದರೆ ತಗ್ಗಿದ ಧ್ವನಿಯಲ್ಲಿ ಮಾತನಾಡಿದಳು: 'ಕಾಗದದಲ್ಲಿ ಬರೆದಿರೂದ ಮತ್ತೆ ನನ್ನ ಬಾಯಲ್ಲಿ ಹೇಳಿಸಬೇಕು ಅಂತ ನೀವು ಹಟಮಾಡಿದ್ರೆ ಹೇಳ್ತೀನಿ ಕೇಳಿ. ನನಗೆ ಜಾತಿಮತದಲ್ಲಿ ನಂಬಿಕೆ ಇಲ್ಲ. ಶ್ರೀನಿವಾಸನನ್ನ ಮಾಡ್ಕಂಡ್ರೆ ತಪ್ಪಿಲ್ಲ.'

'ಜಾತಿ ಮತ ಸುಳ್ಳೆ? ಧರ್ಮ ಸುಳ್ಳೆ?'

'ಧರ್ಮ ಸುಳ್ಳು ಅಂತ ಯಾರೂ ಅನ್ನೂಕ್ಯಾಗುಲ್ಲ. ಆದರೆ ಜಾತಿ ಮತ ಅಧರ್ಮ. ಅದು ಸುಳ್ಳು.'

'ಜಾತಿ ಮತ ಸುಳ್ಳೆ? ನಾನು ಬ್ರಾಹ್ಮಣನಾಗಿರೂದು, ನೀನು ನನ್ನ ಹೊಟ್ಟೇಲಿ ಹುಟ್ಟಿದ್ದು, ಆ ಚಾಂಡಾಲ ಶೂದ್ರನಾಗಿರೂದು ಸುಳ್ಳೆ? ತಿರುಮಲೇಗೌಡ ಅಂತ ಅವನ ಹುಟ್ಟುಹೆಸರು. ಶ್ರೀನಿವಾಸ ಅಂತಲೋ ಶ್ರೀನಿವಾಸರಾವ್ ಅಂತಲೋ ಶ್ರೀನಿವಾಸಮೂರ್ತಿ ಅಂತಲೋ ಹೆಸರು ಬದಲಾಯಿಸ್ಕಂಡ್ರೆ ಅವನು ಬ್ರಾಹ್ಮಣ ನಾಗ್ತಾನೆಯೆ?'

ಬೆಟ್ಟಯ್ಯನವರು ಮಧ್ಯದಲ್ಲಿ ಹೇಳಿದರು: 'ಈ ಹೆಣ್‌ಮಗ ತೀರ್ಮಾನ ಮಾಡ್ಕ್ಯಂಡಿರಾದು ನ್ಯಾಯವೋ ತಪ್ಪೋ ಬ್ಯಾರೇ ಮಾತು. ಜಾತಿ ವರ್ಗ ಅಂತ ಮಾಡಿರಾದು ತಪ್ಪು ಅಂತ ಮಹಾತ್ಮರು ಹ್ಯೇಳ್ತಾನೇ ಇದ್ರು. ನಾನಲ್ಲಿದ್ದಾಗ....'

'ನಿನ್ನ ಮಹಾತ್ಮನ ಮಾತು ಬಿಡು' – ವೆಂಕಟರಮಣಯ್ಯನವರು ಸಿರ್ರನೆ ಉತ್ತರಕೊಟ್ಟರು: 'ಹಸೀ ನೆಲಗಡಲೆಕಾಯಿ ತಿಂದು ಆಡಿನ ಹಾಲು ಕುಡಿದು ಪಿತ್ತ ನೆತ್ತಿಗೇರಿ ಆ ಮುದುಕ ಅಂದುದ್ದೇ, ಇವರೆಲ್ಲ ಕೇಳಿದ್ದೇ.'

ಸತ್ಯ ಎಂದಳು: 'ಯಾರು ಹೇಳಿದ್ದೂ ನಾನು ಅನುಸರಿಸ್ತಿಲ್ಲ. ನಾನೇ ಓದ್ತೀನಿ. ಸ್ವಂತ ಯೋಚನೆ ಮಾಡ್ತೀನಿ. ನನಗೆ ತಿಳಿದ ಹಾಗೆ ನಡೀತೀನಿ.'

'ಹಾಗಾದರೆ ನಿನ್ನ ಜಾತಿ ಯಾವ್ದು?'

'ಹೆಂಗಸು ಜಾತಿ. ಶ್ರೀನಿವಾಸಂದು ಗಂಡಸು ಜಾತಿ. ಅಷ್ಟೆ. ಮತ್ತೆ ವ್ಯತ್ಯಾಸ ವಿಲ್ಲ.'

'ಈ ಬುದ್ಧಿವಂತಿಕೆ ಮಾತ ನಾನೂ ಬೇಕಾದಷ್ಟು ಕೇಳಿದೀನಿ. ನೀನು ಹುಟ್ಟಿದ ಮನೇ ಮರ್ಯಾದೆ ನಿಗದಲ್ಲಿಟ್ಕಂಡ್ ಮಾತಾಡು.'

'ನೋಡಿ, ನಾನು ಕಾಗದದಲ್ಲೇ ಬರ್ದಿದೀನಿ. ನಿಮಗೆ ಇದರಿಂದ ಬೇಜಾರಾಗೂದಿದ್ರೆ, ನಾನು ಊರಿಗೆ ಬರುಲ್ಲ. ಬಂದ್ರೂ ನನ್ನನ್ನ ಅಡಿಗೆಮನೆ ದೇವರ ಮನೆಗೆ ಸೇರಿಸಬ್ಯಾಡಿ. ಊರಿನ ಇತರ ಬ್ರಾಹ್ಮಣರು ನಿಮಗೆ ಬಹಿಷ್ಕಾರ ಹಾಕೂದು ಬ್ಯಾಡ. ನಿಮ್ಮ ಮನೇಲಿ ಇಂಥದು ಆಯ್ತು ಅಂತ ತಲಾಂತರದಿಂದ ಬಂದ ದೇವಸ್ಥಾನದ ಪೂಜೆ ಹೋಗಿ ಅದರ ಇನಾಮತಿ ಜಮೀನು ತಪ್ಪಿಹೋಗೂದು ಬ್ಯಾಡ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗು. ಕೊಟ್ಟ ಮೇಲೆ ಮತ್ತೆ ಕರೆದು ಕಳಿಸಿ ಮಾಡಿದರೆ ನಿಮ್ಮ ಮೇಲೆ ಆಕ್ಷೇಪ ಬರಬಹುದು. ನೀವು ಅದೂ ಮಾಡಬ್ಯಾಡಿ. ನೀವೇ ವರ್ಷಕ್ಕೊಂದು ಸಲ ಬೆಂಗಳೂರಿಗೆ ಬನ್ನಿ. ಕಾಲನ್ನು ಸಹ ಮುಟ್ಟಿ ಮೈಲಿಗೆ ಮಾಡದ ಹಾಗೆ, ನೆಲಕ್ಕೇ ಬಗ್ಗಿ ನಮಸ್ಕಾರ ಮಾಡ್ತೀನಿ. ಆಶೀರ್ವಾದ ಮಾಡಿ.'

'ನೋಡಯ್ಯ, ಎಷ್ಟು ಬುದ್ಧಿವಂತಿಕೆಯಾಗಿ ಮಾತಾಡ್ತಾಳೆ ನಾನು ಸಾಕಿದ ಮಗಳು!' – ಎಂದು ಯಜಮಾನರು ಬೆಟ್ಟಯ್ಯನವರಿಗೆ ನ್ಯಾಯ ಒಪ್ಪಿಸಿದರು.

'ಬುದ್ಧಿವಂತಿಕೆ ಅಲ್ಲ. ಇರೂ ವಿಷಯ ಹೇಳ್ತೀನಿ. ನಿಮ್ಮ ಕಷ್ಟ ನನಗೆ ಅರ್ಥವಾಗುತ್ತೆ. ನಮ್ಮ ಕಷ್ಟ ಅರ್ಥ ಮಾಡ್ಕಳುಕ್ಕೆ ನೀವು ಪ್ರಯತ್ನಾನೇ ಪಡುಲ್ಲ. ತುಂಬ ದಿನದಿಂದ ಪದ್ಧತಿ ಬೆಳೆದುಬಂದಿದೆ. ಮಧ್ಯ ಯಾರೇ ಮುರಿಯಲಿ, ಮುರಿದೋರಿಗೂ ಕಷ್ಟವಾಗುತ್ತೆ ಉಳಿದೋರಿಗೂ ಆಗುತ್ತೆ. ಒಂದು ಸಲ ಕಷ್ಟ ಅನುಭವಿಸುಕ್ಕೆ ಯಾರೂ ತಯಾರಿಲ್ಲದಿದ್ದರೆ ರೂಢಿ ಮುರಿಯೂದು ಹ್ಯಾಗೆ? ನೀವು ಯಾವುದನ್ನ ಧರ್ಮ ಅಂತೀರೋ ಅದೆಲ್ಲ ರೂಢಿ. ಈ ವ್ಯತ್ಯಾಸದ ಮೂಲತತ್ತ್ವ ಯಾವುದು? – ಜನಾಂಗವೇ, ಬಣ್ಣವೇ, ರೂಪಲಕ್ಷಣವೆ? ನೋಡಿ. ಬೆಟ್ಟಯ್ಯನೋರ ಬಣ್ಣ ಕಪ್ಪು. ನಿಮ್ಮ ಬಣ್ಣವೂ ಕಪ್ಪು. ಅವರ ಹಾಗೆ ದಪ್ಪ ಮೂಗು, ಗಡಸು ತುಟಿ ನಿಮಗೂ ಇವೆ. ನನ್ನ ಬಣ್ಣ ನೋಡಿ. ನಾನು ಕಪ್ಪಗಿದೀನಿ. ಬೆಟ್ಟಯ್ಯನೋರ ಮಗಳಿದಾಳಲ, ಅವಳ ಹೆಸರೇನು?' – ಎಂದು ಅವರ ಕಡೆ ತಿರುಗಿದಳು.

ಅವರು, 'ಮೀರಾ' ಎಂದರು.

'ಹೂಂ, ಮೀರಾ. ಅವಳಿಗೂ ನನಗೂ ಬಣ್ಣ, ರೂಪ, ನಿಲುವಿನಲ್ಲಿ ವ್ಯತ್ಯಾಸವಿಲ್ಲ. ಆದರೆ ಅವಳು ಬಿಸಿಲಿನಲ್ಲಿ ತಿರುಗಿ ನನಗಿಂತ ಹೆಚ್ಚು ಕಪ್ಪಗಿದಾಳೆ' – ಎಂದು ಏನೋ ಜ್ಞಾಪಿಸಿಕೊಂಡು ಹೇಳಿದಳು: 'ಬೆಟ್ಟಯ್ಯನೋರ ಕೇರೀಲಿ ಇದಾಳಲ್ಲ ಮಾತಂಗಿ. ನಿಮ್ಮ ಕೇರೀಲೇ ಒಬ್ಬರಿಗೆ ಕೊಟ್ಟು ಚಿಕ್ಕ ವಯಸಿನಲ್ಲೇ ಗಂಡು ಸತ್ತು ಹೋಗಿದ್ದ. ಅವಳು ಒಂದು ದಿನ....'

'ನಿಂಗೆ ಇನ್ನೊಂದು ಸಲ ಯಕ್ಕಡ ತಗಂಡು ಹೊಡೀಬೇಕೇನು?' – ಎಂದು ತಂದೆ ನಡುವೆಯೇ ಕೋಪದಿಂದ ಕೇಳಿದರು: 'ನಿನ್ನ ಭಾಷಣ ಬೆಳೆಸ್ತಾ ಇದೀಯ.

ನಮ್ಮೆಲ್ಲರ ಬಣ್ಣವೂ ಕಪ್ಪು ನಿಜ. ಕಸ್ತೂರಿಯೂ ಕಪ್ಪು, ಇದ್ದಿಲೂ ಕಪ್ಪು. ಇದ್ದಿಲು ಕಸ್ತೂರಿಯಾಗುತ್ತೆಯೆ?'

'ಸ್ವಾಮಿಗಳಿಗೆ ಹೃಟ್ಟೆ ಹಸೀದ್ದೈತೆ. ಸಿಟ್ಟು ಬತ್ತದೆ. ಮಡಿಗೆ ನೀರು ಕೊಟ್ಟು ಅವರಿಗೆ ಏನಾದರೂ ಊಟಕ್ಕೆ ಮಾಡ್ಸಿ. ನಾನು ಹೋಯ್ತೀನಿ' – ಎಂದು ಬೆಟ್ಟಯ್ಯನವರು ಎದ್ದರು.

'ಏಳಬೇಡಿ ಕೂತ್ಕಳಿ. ಈ ವಿಷಯ ಎಷ್ಟು ಆಡಿದ್ರೂ ಹತ್ತುಲ್ಲ ಹರಿಯುಲ್ಲ. ಅವರ ಕಷ್ಟ ನನಗೆ ತಿಳಿಯುತ್ತೆ. ನನ್ನ ಕಷ್ಟ ತಿಳ್ಕಳುಕ್ಕೆ ಅವರು ಪ್ರಯತ್ನಾನೇ ಮಾಡುಲ್ಲ. ನಾನು ಹೇಳ್ತಿದ್ದೆನಲ್ಲ. ನನಗೆ ಎಂಟು ವರ್ಷವಾಗಿತ್ತು. ಒಂದು ದಿನ ಸಂಜೆ ತೋಟಕ್ಕೆ ಹೋಗಿದ್ದೆ ಅಪ್ಪನ್ನ ಹುಡಿಕ್ಕಂಡು. ಅಪ್ಪ ಇರ್ಲಿಲ್ಲ. ಮಾತಂಗಿ ನಮ್ಮ ತೋಟದಲ್ಲಿ ಸೋಗೆ ಕುರುಂಬಾಳೆ ಕಟ್ಟಿಕತಿದ್ಲು. ನನ್ನ ಮಾತಾಡಿಸಿದ್ಲು. ಮಾದಿಗರು ಅಂತ ಗೊತ್ತಿದ್ರೂ ನಾನು ಹತ್ರ ಹೋದೆ. ಅವಳುದ್ದು ಮೊದಲಿನಿಂದ ಕ್ಲೀನು. ಹಲ್ಲಿಗೆ ಕಪ್ಪು ಕಟ್ಟಿಸಿದ್ದೊಂದು ಬಿಟ್ರೆ ವ್ಯತ್ಯಾಸವೇ ತಿಳೀತಿರ್ಲಿಲ್ಲ.'

'ಹೌದವ್ವ. ಅವಳು ಈಗ್ಲೂ ದಿನಾ ಮಡಿ ಉಟ್ಕಂತಳೆ.'

"ನಾನು ಅವಳ ಹತ್ತಿರ ನಿಂತಿದ್ದೆ. ಅದೇ ದಾರೀಲಿ ಬತ್ತಿದ್ದ ಯಾವುದೋ ಊರಿನವರು, ಅವಳೇ ತೋಟದ ಯಜಮಾಂತಿ ಅಂತ ತಿಳ್ಕಂಡು ಕುಡಿಯುಕ್ಕೆ ಎಳನೀರು ಕೇಳಿದರು. ತಾನು ಯಜಮಾಂತಿಯಲ್ಲ ಅಂತ ಅವಳು ಹೇಳಿದರೆ ಕೇಳಲೇ ಇಲ್ಲ. ಕೊನೆಗೆ ನನ್ನ ತೋರಿಸಿ, 'ಏನವ್ವಾ, ನಿಮ್ಮ ಮಗಳೇ?' ಅಂತ ಕೇಳಿದರು. 'ಅಲ್ಲ, ತ್ವಾಟದ ಯಜಮಾನರ ಮಗಳು' ಅಂದ್ಳು. ಆದರೆ ಅವರು, 'ಎಳ್ನೀರು ಕೊಟ್ರೆ ಖರ್ಚಾಯ್ತದೆ ಅನ್ನೂ ಹಂಗಿದ್ರೆ ಇಲ್ಲ ಅನ್ನವ್ವ. ಹೃಟ್ಟೇಲಿ ಹುಟ್ಟಿದ ಮಗಳನ್ನ ಯಾಕೆ ಅಲ್ಲ ಅಂತೀಯ?' ಅಂದು ಮುಂದೆ ಹೋದರು. ನಾನು ಪೋದ ಸಲ ಊರಿಗೆ ಹೋದಾಗ ಕೆರೆ ಏರಿ ಮೇಲೆ ಅವಳನ್ನ ನೋಡಿದೆ. ಈ ಮಾತು ಜ್ಞಾಪಕಕ್ಕೆ ಬಂತು. ಯಾಕಂದೆ ಅಂದ್ರೆ ಅವಳ ಮುಖ, ಮೂಗು, ಹಣೆ, ಕಣ್ಣು, ಬಣ್ಣ, ಎಲ್ಲ ನನ್ನ ಹಾಗೇ ಇದೆ. ಅವಳು ಹ್ಯಾಗೆ ಮಾದಿಗಿತ್ತಿ ಯಾದಳು? ನಾನು ಹ್ಯಾಗೆ ಬ್ರಾಹ್ಮಣಿತಿಯಾದೆ? ಹಿಂದೂಸ್ಥಾನದಲ್ಲಿರೂ ಒಂದೊಂದು ಪ್ರದೇಶದ ಜನರನ್ನೂ ನೋಡಿ. ಜಾತಿಯ ವ್ಯತ್ಯಾಸ ಕಾಣೂದೇ ಇಲ್ಲ. ಒಂದೇ ಚಹರೆ ಇರುತ್ತೆ."

ಇವೆಲ್ಲ ಬೆಟ್ಟಯ್ಯನವರು ಕೇಳದ ಮಾತಲ್ಲ. ತಾವೇ ಹಲವು ಸಂದರ್ಭಗಳಲ್ಲಿ ಹಲವರ ಸಂಗಡ ಆಡಿದ್ದ, ಆಡುವ ಮಾತುಗಳು. ಆದರೆ ಮೊದಲ ದರ್ಜೆಯಲ್ಲಿ ಎಂ.ಎ. ಪಾಸು ಮಾಡಿರುವ ಈ ಬ್ರಾಹ್ಮಣ ಹುಡುಗಿಯು ಗ್ರಾಮದೇವರ ಅರ್ಚಕರಾದ ತನ್ನ ತಂದೆಯೊಡನೆ ಆಡುತ್ತಿರುವುದನ್ನು ಕೇಳಿ ಅವರಿಗೆ ಆಶ್ಚರ್ಯ

ವಾಯಿತು, ಸಂತೋಷವೂ ಆಯಿತು. ಅವಳ ತಂದೆ ಮಾತ್ರ ಮೌನವಾಗಿ ಕೂತು ಬಿಟ್ಟರು. ಇದುವರೆಗೂ ಉರಿಯುತ್ತಿದ್ದ ಸಿಟ್ಟು ಈಗ ಮುಖದಲ್ಲಿ ಕಡಿಮೆಯಾದಂತೆ ಕಾಣುತ್ತಿತ್ತು. ಆದರೆ ಅಪ್ರಸನ್ನತೆಯು ಎದ್ದು ಕಾಣುತ್ತಿತ್ತು. ಹತ್ತು ನಿಮಿಷ ಎಲ್ಲರೂ ಮೌನವಾಗಿದ್ದರು. ಮೌನವು ಅವಳ ಮಾತಿನ ಅರ್ಥವನ್ನು ಪಾಕಗೊಳಿಸಿ ಪ್ರಜ್ಞೆಯ ಪಚನಕ್ಕೆ ಅನುವು ಮಾಡಿಕೊಡುತ್ತಿತ್ತು. ಅಷ್ಟರಲ್ಲಿ ಮಹಡಿಯ ಇನ್ನೊಂದು ಸಂಸಾರದ ಹೆಂಗಸಿನ ಹೆಜ್ಜೆಯ ಸಪ್ಪಳವು, ಆ ಕಡೆಗೆ ಒಂದು ಅಂಶ ಗಮನವಿಟ್ಟಿದ್ದ ಸತ್ಯಳ ಕಿವಿಗೆ ಕೇಳಿಸಿತು. ಸದ್ದಾಗದಂತೆ ಎದ್ದು ನಡೆದು ಅವಳು ತಕ್ಷಣ ಬಾಗಿಲಿನ ಹೊರಗೆ ತಲೆ ಇಟ್ಟು ನೋಡಿದಳು. ಇವಳ ರೂಮಿನ ಬಾಗಿಲಿಗೆ ಒಂದು ಮಾರು ದೂರದಲ್ಲಿ ನಿಂತು ಕೇಳಿಸಿಕೊಳ್ಳುತ್ತಿದ್ದ ಆ ಹೆಂಗಸು ದಿಙ್ಮೂಢ ಳಂತೆ ಹಿಂದಕ್ಕೆ ತಿರುಗಿದಳು.

'ಅದ್ಯಾಕೆ ಹಾಗೆ ಹೋಕ್ತೀರಿ? ನನ್ನ ರೂಮಿನ ಒಳಗೇ ಬಂದು ಕೂತ್ಕಂಡು ಕೇಳಿ' – ಸತ್ಯ ಎಂದಳು.

ತಲೆ ತಗ್ಗಿಸಿಕೊಂಡು ತನ್ನ ಮನೆಗೆ ಹೋದ ಆಕೆ ಬಾಗಿಲು ಮುಚ್ಚಿ ಬೋಲ್ಟು ಹಾಕಿಕೊಂಡಳು. ಸತ್ಯ ಒಳಗೆ ಬಂದು ಪುನಃ ತನ್ನ ಜಾಗದಲ್ಲಿ ಕುಳಿತಳು. ಪುನಃ ಮೌನವು ಹದಗೊಂಡಿತು. ಐದು ನಿಮಿಷದನಂತರ ಅವಳೇ ಮಾತನಾಡಿದಳು: 'ವ್ಯತ್ಯಾಸವೆಲ್ಲ ಸುಳ್ಳು ಅಂತ ಎಲ್ಲ ವೇದಾಂತವೂ ಹೇಳುತ್ತೆ. ದಾಸರೆಲ್ಲ ಅದನ್ನೇ ಅಂದ್ರು. ಯಾರು ಅಂದದ್ದೂ ಅನ್ನೊದೂ ಮುಖ್ಯವಲ್ಲ. ನಮ್ಮ ನಮ್ಮ ಅಂತರಂಗವೇ ನಿಜ ನುಡಿಯುತ್ತೆ. ನಮ್ಮ ನಮ್ಮ ಅನುಭವವೇ ದಿಕ್ಕು ತೋರಿಸುತ್ತೆ. ಆದರೆ ರೂಢಿ ಅಂತರಂಗಾನ ಮುಚ್ಚಿಹಾಕುತ್ತೆ. ಅನುಭವದ ಅರ್ಥವನ್ನ ಕೈತಪ್ಪಿಸುತ್ತೆ. ಧೈರ್ಯವಿದ್ದೋರು ರೂಢೀನ ಗೆಲ್ತಾರೆ, ಗೆದ್ದು ಬದುಕ್ತಾರೆ. ಹೇಡಿಗಳು ಮನಸ್ಸಿನ ಮೇಲೆ ಮಣ್ಣು ಮುಚ್ಚಿಕೊಂಡು ಮಣ್ಣು ಹುಳುವಿನ ಹಾಗೆ ಜೀವನ ಮಾಡ್ತಾರೆ.'

ಮತ್ತೆ ಐದು ನಿಮಿಷ ಮೌನವಾಯಿತು. ಈ ಮಾತು ಉಳಿದ ಇಬ್ಬರ ಪ್ರಜ್ಞೆಯನ್ನೂ ತಟ್ಟುತ್ತಿತ್ತು.

ಅವಳು ಹೇಳಿದಳು: 'ಅಪ್ಪಾ, ಇದರಿಂದ ಪೂರ್ತಿ ಸುಖವಾಗುತ್ತೆ ಅಂತ ನಾನು ಭ್ರಮಿಸಿಲ್ಲ. ಸುತ್ತ ಜನ ಸಹಕರಿಸದೆ ಇದ್ದರೆ ಯಾವ ಸಂಸಾರದಲ್ಲಿ ಸುಖವಿರುತ್ತೆ? ಆದರೆ ನನ್ನ ಅಂತರಂಗ ಹೇಳಿದ ಹಾಗೆ ಮಾಡಿ ರೂಢಿಯನ್ನ ಕೆಡವಿದ ಸಂತೋಷ ಸಿಕ್ಕಿದರೆ ಸಾಕು. ನನಗೆ ತಿಳಿದ ಹಾಗೆ ನಾನು ಮಾಡ್ತೀನಿ. ನನ್ನ ಹೊಡೆದದ್ದಕ್ಕೆ ನೊಂದುಕೋಬ್ಯಾಡ. ನನ್ನ ಹೊಡೆಯುಕ್ಕೆ ನೀನಲ್ಲದೆ ಮತ್ತೆ ಯಾರು ಬಾಧ್ಯರು?'

ಕೊನೆಯ ಮಾತನ್ನು ಹೇಳುವಾಗ ಅವಳ ಕಣ್ಣು ಹನಿಗೂಡಿತು. ಅದನ್ನು ಕಟ್ಟಬೇಕೆಂದು ಎಷ್ಟು ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ರಕ್ತದ ಕಲೆಗಳಿಂದ ಕೂಡಿದ ಸೀರೆಯ ಸೆರಗನ್ನು ಕಣ್ಣಿಗೆ ಕೊಟ್ಟುಕೊಂಡಳು.

'ಅವ್ವಾ, ನೀವೆದ್ದು ಆಸ್ಪತ್ರೆಗೋ ಶಾಪಿಗೋ ಹ್ವಾಗಿ ಗಾಯಕ್ಕೆ ಔಸ್ದ ಆಕಿಸ್ಕಳಿ. ಗಾಯ ಕೀತ್‌ಗೀತ್ ಕಂಡಾತು' – ಬೆಟ್ಟಯ್ಯನವರೆಂದರು.

'ಇದು ಏಟಿನಿಂದಲೇ ಆದ ಗಾಯ ಅಂತ ನೋಡಿದ ತಕ್ಷಣ ಗೊತ್ತಾಗುತ್ತೆ. ಯಾರು ಹೊಡೆದರು ಅಂತ ಕೇಳಿದರೆ ನಮ್ಮಪ್ಪ ಅಂತ ಹೇಳಲೇ? ಇಷ್ಟು ಪ್ರೀತಿಯಾಗಿ ಸಾಕಿದ ನಮ್ಮಪ್ಪ ಇವತ್ತೊಂದು ದಿನ ಸಿಟ್ಟಿನಲ್ಲಿ ಹೊಡೆದಿದಾರೆ, ನಾನು ಯಾವ ಡಾಕ್ಟರ ಹತ್ತಿರಕ್ಕೂ ಹೋಗುಲ್ಲ. ಅದೇ ವಾಸಿಯಾಗುತ್ತೆ' – ಎನ್ನುತ್ತಾ ಅವಳು ಸೆರಗನ್ನು ಕಣ್ಣಿನಿಂದ ಕೆಳಗೆ ಇಳಿಸಿದಳು.

ಮತ್ತೆ ಮೌನ ಬಿಸಿ ಏರಿತು. ಗಂಭೀರರಾಗಿ ಅಂತರ್ಮುಖಿಯಾಗಿ ಕುಳಿತಿದ್ದ ತಂದೆ ಇದ್ದಕ್ಕಿದ್ದ ಹಾಗೆಯೇ ಮೇಲೆ ಎದ್ದು, 'ಎಷ್ಟೊತ್ತಾಯ್ತೋ ಏನೋ. ಬೆಟ್ಟಯ್ಯ, ನನ್ನ ಮೋಟಾರ್ ಸ್ಟ್ಯಾಂಡಿಗೆ ತಲುಪಿಸಿಬಿಟ್ಟು ಹೋಗಪ್ಪ' ಎಂದರು.

ಸತ್ಯ ತಡೆದಳು: 'ಮೋಟಾರ್ ಸ್ಟ್ಯಾಂಡಿಗೆ ನಾನು ತಲುಪುಸ್ತೀನಿ. ನನ್ನ ಕಾಗದ ನಿಮಗೆ ನೆನ್ನೆ ಮಧ್ಯಾಹ್ನ ತಲುಪಿದೆ. ಆಗಿನಿಂದ ನೀವು ಹೊಟ್ಟೆಗೆ ಏನೂ ತಿಂದಿರುಲ್ಲ ಅಂತ ನಂಗೆ ಗೊತ್ತು. ಏಳಿ, ಸ್ನಾನ ಮಾಡಿ. ಇಲ್ಲೊಂದು ಆಚಾರರ ಹೋಟಲಿದೆ. ಒಳಗೆ ಮಣೆ ಮೇಲೆ ಕೂರಿಸಿ ಬಡುಸ್ತಾರೆ. ಊಟ ಮಾಡಿ ಬನ್ನಿ.'

'ಹಂಗೆ ಮಾಡಿ' – ಬೆಟ್ಟಯ್ಯನವರೂ ಒತ್ತಾಯ ಮಾಡಿದರು.

'ನೀನು ಮಾಡಿರೂ ಕೆಲಸಕ್ಕೆ ನಾನು ಅನ್ನ ತಿಂದ ಹಾಗೇ ಆಯ್ತು. ಈ ಮದುವೆ ಮಾತು ಕೈಬಿಡ್ತೀಯ? ಊಟ ಮಾಡ್ತೀನಿ.'

'ಮಕ್ಕಳು ಆಡೂ ಥರ ಇದೆ ನಿಮ್ಮ ಹಟ. ಇಷ್ಟಾತನಕ ನಾನು ಏನು ಹೇಳ್ದೆ?'

'ಹಾಗಾದರೆ ನಾನು ಹೊರಟೆ. ನಿನ್ನ ಸಾಕಿದ್ದಕ್ಕೆ ನನಗೆ ಉಪವಾಸವೇ ಗತಿ' – ಎಂದ ಅವರು, ತಮ್ಮ ಚೀಲವನ್ನು ಕೈಲಿ ಹಿಡಿದು ದಾಪುಗಾಲು ಹಾಕಿ ಹೊಸಲನ್ನು ದಾಟಿಬಿಟ್ಟರು. 'ತಡೀರಿ' – ಎಂದು ಇವಳು ಅನುಸರಿಸುವ ಮೊದಲೇ ಮೆಟ್ಟಿಲುಗಳನ್ನು ಸರಸರನೆ ಇಳಿದು ಕೆಳಗೆ ಹೋಗಿದ್ದರು.

ಅವಳು ಹಿಂತಿರುಗಿ ಬಂದು ಬೆಟ್ಟಯ್ಯನವರನ್ನು ಕೇಳಿಕೊಂಡಳು: 'ನಾನು ಹಿಂದೆ ಹೋದರೆ ಅವರು ರಸ್ತೆಯಲ್ಲೇ ರೇಗಿಯಾರು. ನೀವು ದಯವಿಟ್ಟು ಜೊತೇಲಿ ಹೋಗಿ ಬಸ್‌ಸ್ಟ್ಯಾಂಡಿಗೆ ಮುಟ್ಟಿಸಿ. ಬಸ್ ಇದ್ದರೆ ಕೂರಿಸಿಬಿಟ್ಟರೂ ಸರಿ. ಉಪವಾಸ ಇದಾರೆ. ಏನಾದರೂ ಒಂದಿಷ್ಟು ಹಣ್ಣು ತೆಗೆದು ಕೊಡಿ.'

'ಆಗಲಿ' – ಎಂದು ಅವರು ಎದ್ದು ತಮ್ಮ ಎಕ್ಕಡ ಮೆಟ್ಟಿಕೊಂಡು ಹೊರಟರು. ಮೆಟ್ಟಿಲು ಇಳಿಯುವ ತನಕ ಅವರನ್ನು ಕಳಿಸಿ ಅವಳು ಹಿಂತಿರುಗಿ ಬಂದಾಗ ಕಾಣಿಸಿತು – ಅವಳ ತಂದೆ ತಮ್ಮ ಎಕ್ಕಡ ಮೆಟ್ಟಿಕೊಂಡು ಹೋಗುವುದನ್ನು ಮರೆತಿದ್ದಾರೆ. ಹಳ್ಳಿಯಲ್ಲಿ ಎಕ್ಕಡವಿಲ್ಲದೆ ನಡೆಯಬಹುದು. ಆದರೆ ನಗರದ ರಸ್ತೆಗಳಲ್ಲಿ ಗಾಜಿನ ಚೂರು, ಕಾಯ್ದ ಟಾರು ಮೊದಲಾದ ಅಪಾಯಕರ ವಸ್ತುಗಳಿರುತ್ತವೆ. ತಕ್ಷಣ ಒಂದು ಹಳೇ ವೃತ್ತಪತ್ರಿಕೆಯಲ್ಲಿ ಎರಡು ಪಾದರಕ್ಷೆಗಳನ್ನೂ ಸುತ್ತಿಕೊಂಡು ಬೇಗ ಬೇಗ ಹೆಜ್ಜೆಹಾಕಿ ಮೆಟ್ಟಿಲು ಇಳಿದು ರಸ್ತೆಯಲ್ಲಿ ನಡೆದು ಬೆಟ್ಟಯ್ಯನವರನ್ನು ಕೂಗಿ ನಿಲ್ಲಿಸಿದಳು. ಹತ್ತಿರ ಹೋಗಿ, 'ಇದ ಮರತೇ ಹೋಗಿದಾರೆ. ನಾನೂ ನಿಮ್ಮ ಜೊತೆ ಬಂದು ಅವರಿಗೆ ಕೊಡ್ತೀನಿ' ಎಂದಳು.

'ನಾನೇ ಒಯ್ದು ಕೊಡ್ತೀನಿ ಬಿಡವ್ವ' – ಅವರೆಂದರು.

'ಅವರು ಮೆಟ್ಟಿದ ಎಕ್ಕಡ ನೀವು ಹಿಡಕೊಂಡು ಹೋಗುಕ್ಕೆ ಹ್ಯಾಗೆ ಕೊಡಲಿ?' – ಎಂದು ಅವಳು ಅನುಮಾನಿಸಿದುದಕ್ಕೆ ಅವರೇ, 'ಮೆಟ್ಟಿದ ಎಕ್ಕಡ ಮುಟ್ಟೋದು ನಮ್ಮ ಕುಲಕಸುಬೇ ಆಗಿತ್ತಲ. ನೋಡಿ, ನಿಮ್ಮಯ್ಯಾರು ಇವತ್ತಿಗೂ ನಮ್ಮ ಕೇರಿಯೋರು ಮಾಡಿದ ಎಕ್ಕಡ ಮೆಟ್ತಾರೆಯೇ ಸಿವಾಯ್, ಕಂಪ್ನೀದಕ್ಕೆ ಕಾಲು ತಗುಲಿಸಿಲ್ಲ' ಎಂದು, ಅವಳ ಕೈಲಿದ್ದ ಕಾಗದದ ಪೊಟ್ಟಣವನ್ನು ಕೈಗೆ ತೆಗೆದುಕೊಂಡು ಮುಂದೆ ಮುಂದೆ ಹೋದರು.

# ಮೂರು

## ೧

ಸತ್ಯ ಊರಿಗೆ ಕಾಗದ ಬರೆದ ದಿನವೇ ಶ್ರೀನಿವಾಸ ತನ್ನ ಮನೆಯಲ್ಲಿ ತಿಳಿಸ ಬೇಕಾಗಿತ್ತು. ಅವಳೇನೋ ದೂರವಿದ್ದಳು. ಆದುದರಿಂದ ಕಾಗದದಲ್ಲಿ ಬರೆದಳು. ತಂದೆಯ ಎದುರು ನಿಂತು ಹೇಳುವುದು ಅವನಿಗೆ ಕಷ್ಟವೆನಿಸಿತು. ಇಂಥ ವಿಷಯ ದಲ್ಲಿ ತನ್ನ ತಂದೆಯ ಅಭಿಪ್ರಾಯ ಅವನಿಗೆ ಗೊತ್ತಿತ್ತು. ಒಂದು ವರ್ಷ ಗಾಂಧೀಜಿಯ ಸಾಬರ್ಮತಿ ಆಶ್ರಮದಲ್ಲಿದ್ದು ಸ್ವಾತಂತ್ರ್ಯ ಚಳುವಳಿಯಲ್ಲಿ ಜೈಲಿಗೆ ಹೋಗಿದ್ದ ಅವರು ಜಾತಿ ಮತಗಳ ವ್ಯತ್ಯಾಸವನ್ನು ನಂಬುವವರಲ್ಲ. ಮೇಲು ಕೀಳುಗಳು ಸೃಷ್ಟಿಯಾಗಿಯೇ ಭಾರತ ದೇಶ ಅಧೋಗತಿಗಿಳಿಯಿತೆಂದು ಹೇಳು ತ್ತಲೇ ಇರುತ್ತಾರೆ. ಅಲ್ಲದೆ ವಿದ್ಯೆ ನೌಕರಿಗಳಲ್ಲಿ ಸಹಸ್ರಾರು ವರ್ಷಗಳಿಂದ ಮುಂದೆ ನಿಂತಿರುವ ಬ್ರಾಹ್ಮಣರನ್ನು ಹಿಂದೆ ಹಾಕದೆ, ಉಳಿದವರು ಮೇಲೆ ಬರುವುದು ಸಾಧ್ಯವಿಲ್ಲವೆಂಬ ವಿಚಾರದವರು. ತಮ್ಮದೇ ಊರಿನ ಈ ಬ್ರಾಹ್ಮಣ ಹುಡುಗಿಯನ್ನು ಮದುವೆಯಾಗಲು ಅವರು ಅಡ್ಡಿ ಮಾಡುವುದಿಲ್ಲವೆಂಬ ವಿಶ್ವಾಸ ವಿದ್ದರೂ, ಅವನು ಅವರ ಸಂಗಡ ಹೇಳಲು ಮಾತ್ರ ಒಂದು ದಿನ ಹಿಂದಲೇಟು ಹೊಡೆದ. ಕೊನೆಗೆ ಒಂದು ಕಾಗದದಲ್ಲಿ ವಿಷಯವನ್ನು ಬರೆದು, 'ಅಪ್ಪಾಜೀ ಕೈಲಿ ಕೊಡು ಎಂದು ತಾಯಿಗೆ ಕೊಟ್ಟು, ಸತ್ಯಳನ್ನು ನೋಡಲು ಹೊರಟುಹೋದ.

ಕಾಗದ ಓದಿಕೊಂಡು ವಿಷಯ ತಿಳಿದಾಗ ಉಪಮಂತ್ರಿ ಮೇಲಗಿರಿಗೌಡರಿಗೆ ಒಂದು ತೆರನಾದ ಸಂತೋಷವೇ ಆಯಿತು. ಯಾವುದನ್ನೂ ತಮ್ಮಲ್ಲಿಯೇ ಯೋಚಿಸಿ ಅನಂತರ ಅಗತ್ಯಬಿದ್ದರೆ ಎರಡನೆಯವರಿಗೆ ಹೇಳುವುದು ಅವರ ಪದ್ಧತಿ ಆದರೆ ಈ ಸಂಗತಿಯನ್ನು ಮಾತ್ರ ತಕ್ಷಣ ಹೆಂಡತಿ ರಂಗಮ್ಮನಿಗೆ ಹೇಳಿ ದರು. ಆಕೆ, ತಡವರಿಸಿಕೊಂಡು ಕನ್ನಡ ಓದಬಲ್ಲ ಹೆಂಗಸು. ಇವರೊಂದಿಗೆ ಮೊದಲು ತುಮಕೂರಿನಲ್ಲಿ, ಅನಂತರ ಅಸೆಂಬ್ಲಿ ಮೆಂಬರಾಗಿದ್ದಾಗ ಮತ್ತು ಈಗ ಉಪಮಂತ್ರಿಗಳಾಗಿರುವಾಗ ಬೆಂಗಳೂರಿನಲ್ಲಿ ಸಂಸಾರ ಮಾಡಿಕೊಂಡಿದ್ದು ಪಟ್ಟಣ ವಾಸದ ಕೆಲವು ವಿಧಾನಗಳನ್ನು ಕಲಿತಿದ್ದರೂ, ಈ ಮದುವೆಗೆ ಒಪ್ಪುವಷ್ಟು ಬದ ಲಾಯಿಸಿರಲಿಲ್ಲ. ಗಂಡ ಹೇಳಿದ ತಕ್ಷಣ ಅವಳು ಹೌಹಾರಿದಳು.

'ಎನೆ ಆಳಾಗಾ ಕ್ಯಲ್ಸ.'

'ಯಾಕೆ ಹಂಗಂತೀಯ?'

'ಯಲ್ಲಾ ಒಂದು ಅಂತ ಏಟು ಅಂದ್ರೂ, ಕತ್ತೆ ಕತ್ತೆಯಾ ಕುದುರೆ ಕುದುರೆಯಾ!'

'ಅಂದ್ರೆ ಇದರಲ್ಲಿ ಕತ್ತೆ ಯಾರು ಕುದುರೆ ಯಾರು ಅಂತೀ?'

ತನ್ನ ಹೋಲಿಕೆಯ ಅರ್ಥದ ಎಡವಟ್ಟು ಈಗ ಆಕೆಗೆ ಹೊಳೆಯಿತು. ಬ್ರಾಹ್ಮಣರನ್ನು ಕುದುರೆ ಎಂದರೆ ತಮ್ಮನ್ನು ಕತ್ತೆ ಎಂದುಕೊಂಡ ಹಾಗಾಯಿತು. ಈ ಅಪಮಾನಕ್ಕೆ ಆಕೆ ಸಿದ್ಧಳಿಲ್ಲ. ಬೇಡ, ತಮ್ಮನ್ನೇ ಕುದುರೆ ಎಂದುಕೊಂಡರೆ ಬ್ರಾಹ್ಮಣರನ್ನು ಕತ್ತೆ ಮಾಡಿದ ಹಾಗೆ. ಆದರೆ ಹಾಗೆ ಮಾಡುವುದೂ ಸಾಧ್ಯವಿಲ್ಲ. ಏಕೆಂದರೆ ಓದಿನಲ್ಲಿ ಅಡಿಗೆಯಲ್ಲಿ ಹಾಡು ಹಸೆಯಲ್ಲಿ ಚನ್ನಾಗಿ ಮಾತಾಡುವುದರಲ್ಲಿ ಸಹ ಅವರೇ ತಮಗಿಂತ ಮುಂದೆಂದು ಆಕೆಯ ನಂಬಿಕೆ. ಅದನ್ನು ತಾನೊಬ್ಬಳಲ್ಲ ಯಜಮಾನರೂ ಒಪ್ಪುತ್ತಾರೆ. ಅದುದರಿಂದ ಉತ್ತರಕೊಟ್ಟಳು: 'ನಾನೇನೋ ಅಂದೆ ಅಂತ ತಿವಿದು ಕ್ಯೇಳಬ್ಯಾಡಿ. ಐದು ಬೆಳ್ಳು ಒಂದೇಸಮ ಇರಾಕುಲ್ಲ.'

'ಅಂದ್‌ರೆ ನಾವು ಕಿರುಬೆರಳು ಅವರು ಉದ್ದ ಬೆರಳು ಅಂತೀ ಏನು?'

'ನಿಮ್‌ಕುಟ್ ಮಾತಾಡಾಕ್ ಆಗಾಕುಲ್ಲ. ಅವರು ಅವರೇ. ನಾವು ನಾವೇ. ಇಂತಾದೆಲ್ಲ ಮಾಡಿದ್ರೆ ಮನೆ ಹಾಳಾಯ್ತದೆ.'

'ಏಳಿದ್ರೆ ನಿಂಗ್ ತಿಳಿಯುಲ್ಲ. ನಿನ್ನ ಗೊಡ್ಡು ಪುರಾಣ ಬಿಡುಲ್ಲ ಅದ್ ಹ್ಯಂಗ್ ಅವ್‌ರು ನಮಗಿಂತ ಮೇಲು? ನಾನು, ಪೂಜಾರಿ ವೆಂಕಟರಮಣಯ್ಯ ಒಂದೇ ಜೊತೇಲಿ ಓದ್‌ತಿದ್ವು. ಕನ್ನಡ ನನ್ನ ಬಾಯಾಗೆ ನ್ಯಟ್ಟಗ್ ಕ್ವಲ್ತಿರ್ಲಿಲ್ಲ. ಮೇಷ್ಟ್ರು ಗರುಡ ಅನ್ನೂ ಅಂದ್‌ರು. ಅವನು ಸರಿಯಾಗಿ ಅಂದ. ನಾನು ಗಲ್ಡ ಅಂದೆ. ನನ್ನ ಎಷ್ಟು ಆಡ್ಕಂಡ್ರು ಗೊತ್ತಾ? ನಂಗೆ ಈಗ ಗೊತ್ತಾಯ್ತದೆ. ಮೇಷ್ಟ್ರೂ ಅವರೂ ಒಂದು ಜಾತಿಯೋರು. ಒಂದೆ ಥರಾ ಮಾತಾಡ್ತಾರೆ. ಅದುಕ್ಕೆ ಅವರು ಹೇಳಿದ್ದಂಗೆ ಇವನು ಅಂದ್‌ಬಿಟ್ಟ. ಅವರ ಜಾತಿಯೋರು ಉಚ್ಚಾರ ಮಾಡಿದ್ದೇ ಯಾಕೆ ಕರೆಕ್ಟ್ ಆಗಬೇಕು? ಗಲ್ಡ ಅಂತ ಯಾಕ್ ಆಗಬಾರ್ದು?'

'ಹ್ಯಂಗಾಯ್ತದೆ? ನೀವು ಮಾಡಿದರಾಯ್ತದಾ?'

'ಭಾಷೆ ನಾವ್ ಹ್ಯಂಗೆ ಮಾಡಿದರೆ ಹಂಗಾಯ್ತದೆ. ಅದು ಹೋಗಲಿ. ಈಗ ನಾನು ಅವರ ಹಂಗೇ ಶುದ್ಧವಾಗಿ ಕನ್ನಡ ಮಾತಾಡಾವಿಲ್ವಾ? ಭಾಷಣಕ್ಕೆ ನಿಂತ್ಕಂಡ್ರೆ ಅದ್ಯಾವನು ಬೆಳ್ಳು ಮಡುಸ್ಲಿ. ಗರುಡ ಅಂದೋನು ಗರುಡಗಂಬಕ್ಕೆ ಮಂಗಳಾರತಿ ಮಾಡ್ಕಂಡು ಪೂಜಾರಿಯಾಗೇ ಉಳ್‌ದ. ಗಲ್ಡ ಅಂದನಾನು ಬಿ.ಎ.ಬಿ.ಎಲ್. ಮಾಡಿ ಲಾಯರಾಗಿ, ಎಂ.ಎಲ್.ಎ. ಆಗಿ ಈಗ ಮಂತ್ರಿಯಾಗಿದೀನಿ. ನಮಗಿಂತ ಅವರು ಹ್ಯಾಗೆ ಮೇಲು ಅಂತೀಯ?'

'ನ್ಯಾಲೋ ಕ್ಯಳಗೋ, ಅವರು ಬ್ಯಾರೆ ನಾವು ಬ್ಯಾರೆ. ಜಾತಿನುತ ಅಂತ ದೇವರು ಮಾಡಿರೂದು ಸುಳ್ಳಲ್ಲ. ಇಲ್ಲದ್ದನ್ನ ಮಾಡಾಕ್ ಹ್ವಂಟ್ರೆ ವಳ್ಳೇದಾಗಾಕುಲ್ಲ' – ಎಂದು ಆಕೆ ತೀರ್ಮಾನ ಹೇಳಿಬಿಟ್ಟಳು.

'ದೇವರೇನು ಇವರು ಬ್ರಾಹ್ಮಣರು ಇವರು ಶೂದ್ರರು ಅಂತ ಹುಟ್ಟುಸ್ತಾನೆಯೆ? ಅದ್ಯೆಲ್ಲ ಬ್ರಾಹ್ಮಣರೇ ಮಾಡಿದ್ದು. ತಾವು ಕಷ್ಟಪಟ್ಟು ಗೇಯದೆ ನಮ್ಮೋರ ಎಡೆ ಕೆರ್ಕಂಡ್ ತಿನ್ನಾಕ್ ಮಾಡ್ಕಂಡ್ರು. ಈಷ್ಟ ದಿನ ಬುದ್ದಿ ಇಲ್ದೆ ನಮ್ಮೋರು ನ್ಯಂಬ್ತಿದ್ರು. ಈಗಲೂ ಹಳ್ಳೀಕಡೆ ನ್ಯಂಬ್ತಾವೆ. ನಾವು ನ್ಯಂಬ್ ಭೌದಾ? ಇದು ಸುಳ್ಳು ಅಂತ ಜನಕ್ಕೆ ತಿಳಿವಳಿಕೆ ಹ್ಯೇಳಿ ಜಾಗ್ರತಿ ಮಾಡಬೇಕು. ಜನದ ಮುಕಂಡ ಆಗಿ ನಾನು ಮಾಡಬೇಕು ಈ ಕೆಲ್ಸಾನ. ಮಾಡ್ತಿದೀನಿ.'

'ಅದೇನಾರಾ ಮಾಡ್ಕ್ಯಳಿ. ಸ್ವಸೆ ಅಂತ ನಮ್ಮ ಮನೆಗೆ ಬಂದೋಳು ನಾವು ಉಂಡ ಎಂಜಲ ತಣಿಗೆ ಎತ್ತಬೇಕು. ಬ್ರಾಹ್ಮಣ ಹುಡುಗಿ ಕೈಲಿ ಅದ ಮಾಡ್ಸಿದ್ರೆ ನಮ್ಮ ಮನೆ ಉಳಿಯಾಕುಲ್ಲ. ವಂಸ ನಾಸವಾಗ್ತದೆ.'

'ನಮ್ಮನೆಗೆ ಬಂದ್ ಮ್ಯಾಲೆ ಅವಳು ಬ್ರಾಹ್ಮಣರೋಳು ಹ್ಯಂಗಾಯ್ತಾಳೆ? ನಮ್ಮೋಳೇ ಆಯ್ತಾಳೆ.'

'ಹಂಗಾರೆ ಜಾತಿಗೆಟ್ಟುದ್ದಾಯ್ತದೆ. ಕತ್ತೇ ಲಾಯ ಸೇರಿದ ಕುದುರೆ ಓಡಾಕೂ ಇಲ್ಲ ಹೇರು ಹೊರಾಕೂ ಇಲ್ಲ.'

'ಮತ್ತೆ ಕತ್ತೆ ಕುದುರೆ ಅಂತೀಯಲ' – ಎಂದು ಅವರು ಎಚ್ಚರಿಸಿದರು.

ಆಕೆಗೆ ತನ್ನ ತಪ್ಪಿನ ಅರಿವಾಯಿತು: 'ಮಾತು ಹಂಗ್ ಬಂತು.'

'ಅದೇ ಮೊದಲಿಂದ ಕಲ್ತದ್ದು. ಸಾವಿರ ಸಾವಿರ ವರ್ಷದಿಂದ ವಿದ್ಯಾಭ್ಯಾಸ ಕೊಡದೆ ನಮ್ಮುನ್ನ ಅವರು ಕತ್ತೇನೇ ಮಾಡಿದ್ರು. ಈಗ ಗೊತ್ತಾಯ್ತಿದೆ: ನಾವೇ ಕುದುರೆ ಅವರೇ ಕತ್ತೆ ಅಂತ. ಮುಂದೆ ಹೋಗಾದು ಕುದುರೆ. ಹಿಂದೆ ಬೀಳಾದು ಕತ್ತೆ. ಮಂತ್ರಿಯಾಗಿರೋನ್ಯಾರು? ನಾನೋ ಆ ಪೂಜಾರಯ್ಯನೋ?'

ಗಂಡನ ಎದುರು ವಾದ ಮಾಡಿ ತಾನು ಗೆಲ್ಲಲು ಸಾಧ್ಯವಿಲ್ಲವೆಂದು ಆಕೆಗೆ ಗೊತ್ತು. ಅವರು ವಿದ್ಯಾವಂತರು. ಈ ಮನೆಯಲ್ಲಿ ಎಲ್ಲ ಅವರು ಹೇಳಿದಂತೆಯೇ ನಡೆಯುತ್ತೆ. ಆದರೂ ಈ ಮದುವೆಯಾಗಲು ಅವಕಾಶ ಕೊಡಕೂಡದು. ಅವಳು ಎಂ.ಎ. ಓದಿದ ಹುಡುಗಿ. ಮೊದಲಿನಿಂದ ಫಸ್ಟ್ ಕ್ಲಾಸು ಮಾಡಿದವಳು. ಇವನು ಬಿ.ಎ. ಮಾಡಿ ಬಿ.ಎಲ್. ಫೇಲಾದವನು. ಎಲ್ಲ ಪರೀಕ್ಷೆಯಲ್ಲೂ ಒಂದೊಂದು ಸಲ ಫೇಲಾಗಿ ಮತ್ತೆ ಕಟ್ಟಿ ಪಾಸು ಮಾಡಿದವನು. ಅಂಥ ಹುಡುಗಿ ಮನೇಲಿ ಸ್ವಸೆಯಾಗಿ ಹೇಳಿದ್ದಂಗೆ ಕೇಳ್ಕಂಡಿರ್ತಾಳಾ?

ಹಾಗೆ ನೋಡಿದರೆ ಅವಳು ಇವರಿಗೆ ಅಪರಿಚಿತಳೇನಲ್ಲ. ಒಂದೇ ಊರಿನವಳು.

ಊರಿಗೆ ಹೋದಾಗ ಮಾತ್ರವಲ್ಲ, ಬೆಂಗಳೂರಿನಲ್ಲೂ ಎಷ್ಟೋ ದಿನ ತಮ್ಮ ಮನೆಗೆ ಬಂದಿದ್ದಳು. ಶ್ರೀನಿವಾಸ ಅವಳು ಒಬ್ಬರನ್ನೊಬ್ಬರು ನೀನು ತಾನು ಅಂತಲೇ ಮಾತನಾಡಿಸ್ತಾರೆ. ತಿರುಮಲಾಪುರದಾಗೆ ಇಬ್ಬರೂ ಜೋಡೀಲಿ ಹೈಸ್ಕೂಲು ಓದಿದೋರು. ಬೆಂಗಳೂರಾಗೆ ನನ್ಮ ಮನೆಗೆ ಅವರ ಅಪ್ಪಾಜಿ ಬಂದಿದ್ದರು. ಆದರೆ ಊಟ ಮಾಡುಲ್ಲ. ಹಣ್ಣು ಪಣ್ಣು ತಿಂತಾರೆ. ಇಲ್ದೆ ಇದ್ರೆ ಒಂದು ಚರುಕಿನಲ್ಲಿ ಒಂದು ಪಾವು ಅಕ್ಕಿ ಹಾಕ್ಯಂಡ್ ಬೇಸಿ ಮೊಸರಿನಲ್ಲಿ ತಿಂದ್ ಕೈತೊಳ್ಕಂತಾರೆ. ಬ್ರಾಹ್ಮಣರು ಹಂಗೇ ಇರಬೇಕು. 'ಅವ್ವಾ, ಸತ್ಯಂಗೆ ಅದೇನೂ ಇಲ್ಲ. ಊಟ ಮಾಡ್ತಾಳೆ' – ಅಂತ ಇವನೇ ಅಂದ. ಅವಳೂ ಕುಂತು ಉಂಡಳು. ಈಗಿನ ಕಾಲದ ಹುಡುಗಿ. ಕಾಲೇಜು ಗೀಲೇಜು ಓದಿದೋಳು. ಉಂಡ್ರೆ ತಪ್ಪೇನು ಅಂತ ನಾನೂ ಸುಮ್ಕಾದೆ. ಇಬ್ರೂ ಕೂಡಿ ಹಿಂಗೆ ಮಾಡ್ತಾರೆ ಅಂತ ನಂಗೆ ಅಂದಾಜೇ ಆಗ್ನಿಲ್ಲ. ಯಜಮಾನ್ರೇ ಒಂದ್ ದಿನ, 'ನಿನ್ನ ಮಗ ಆ ಬ್ರಾಹ್ಮಣರ ಹುಡುಗೀನ ಮದ್ವೆಗಿದ್ವೆ ಆಯ್ತನೇನೇ?' ಎಂದಿದ್ರು. ಆಕ್ಲಾಸುಕ್ಕೆ ಹಂಗಂ-ದ್ರೇನೋ ಅಂದ್‌ಕಂಡು ನಾನು, 'ಅವ್ರು ಏಟಾದ್ರೂ ಬ್ರಾಂಬ್ರು. ಜೋಡೀಲಿ ಓದ್‌ತವ್ರೆ. ಅದ್‌ಕ್ಯಾಕ್ ಹಿಂಗಂತೀರ?' ಅಂದೆ. ಇವರು ನಕ್ಕಿದ್ದರು. ಹಂಗಾದ್ರೆ ಇವರಿಗೆ ಮದ್ಲೇ ಗೊತ್ತಿತ್ತೇನೊ?

ಈಗ ಕೇಳಿದಳು: 'ಇವರು ಮದುವೆಯಾಯ್ತೀವಿ ಅಂತಾರೆ ಅಂತ ನಿಮ್ಗೆ ಮೊದ್ಲೇ ಗೊತ್ತಿತ್ತಾ?'

'ನಂಗೇನ್ ಗೊತ್ತು? ಹೆಂಗಸಾಗಿ ನಿಂಗೆ ಹ್ವಳೀಬ್ಯಾಡದಾಗಿತ್ತಾ?'

'ಬ್ರಾಹ್ಮಣರ ಹುಡುಗೀ ಜೋಡಿ ಹಿಂಗಾಯ್ತದೆ ಅಂತ ಹ್ಯಂಗ್ ಹ್ವಳೀ-ಬೇಕು?'

ಗೌಡರು ನಕ್ಕರು.

ಆದರೆ ಆಕೆ ಎಂದಳು: 'ಬರೀ ನಮ್‌ನಮ್ದೆ ಅಲ್ಲ. ಊರಾಗೆ ಯಜಮಾನ್ರವ್ರೆ. ಕೇಳಿ. ಅವ್ರುನ್ನ ಬಿಟ್ ಯಾವ ಮಾತೂ ಇಲ್ಲ. ಅವಳ ಅಪ್ಪ ಅಣ್ಣನ್ನೂ ಕೇಳಿ. ಎಕ್‌ಡ ತಗಂಡ್ ಹ್ವಡೀತಾರೆ. ಇಬ್ರೂ ಸುಮ್ಕಾಯ್ತರೆ.'

'ಅಯ್ಯಾರುನ್ನ ಒಪ್ಪಿಸೂ ಮಾತು ನಂಗಿರ್ಲಿ. ನೀನು ತರಲೇ ತೆಗೀಬ್ಯಾಡ. ಸೊಸೆ ಬಂದು ತಣಿಗೆ ತೆಗೆಯೂ ಕಾಲ ಆಯ್ತು. ಹುಡುಗರು ಸುಖವಾಗಿದ್ರೆ ಸರಿ' – ಎಂದು ಹೆಂಡತಿಗೆ ಹಿತವಾದ, ಅಪ್ಪಣೆ, ಎರಡನ್ನೂ ಬೆರೆಸಿ ಹೇಳಿದರು.

ಅಷ್ಟರಲ್ಲಿ ಅವರನ್ನು ನೋಡಲು ಯಾರೋ ಬಂದರು. ಬಂದವರನ್ನು ನೋಡಲು ಅವರು ಮನೆಯ ಪ್ರವೇಶದ್ವಾರದ ಬಲಪಕ್ಕದಲ್ಲಿಯೇ ಇದ್ದ ಆಫೀಸು ಕೋಣೆಗೆ ಹೋದರು.

ರಂಗವ್ನ್ನ ಯೋಚಿಸಲು ಶುರುಮಾಡಿದಳು. ಪ್ಯಾಟ್ಯಾಗೆ ಯಾವ ಸ್ವಸೆ ಬಂದ್ರೂ ತಣಿಗೆ ತೆಗೆಯುಲ್ಲ, ಕಸ ಮುಸುರೆ ಮಾಡುಲ್ಲ. ಈಗ ನಾನೂ ಮಾಡ್ತಿಲ್ಲ. ಮನ್ಲಿ ಆಳು ಕಾಳು ಇರ್ತಾರೆ. ಇನ್ನು ಇವನೇನು ಹಳ್ಳೀಲಿರಾಕುಲ್ಲ. ಜಾತಿ ಗೀತಿ ಹಳ್ಳೀಲಿ ಜಾಸ್ತಿ. ಇಲ್ಲಿ ಬಾಂಬ್ರ ಎಂಗ್ ಸರೆಲ್ಲ ಮನೆಗೆ ಬತ್ತಾರೆ. ಕಾಫಿ ಕುಡೀತಾರೆ. ಉಪ್ಪಿಟ್ಟು ತಿಂತಾರೆ. ಇವರ ಕುಟ್ಟಿ ಇಂಗ್ಲೀಷ್‌ನಲ್ಲಿ ಮಾತಾಡ್ತಾರೆ. ಪಟ್ಟಣದಾಗೆ ಜಾತಿ ಗೀತಿ ಎಲ್ಲ ತೊಳೆದುಹೋಗ್ಯದೆ. ಆದ್ರೂ ಶ್ರೀನಿವಾಸುಂಗೆ ಏಳಬೇಕು. ಇದು ವಳ್ಳೇದಲ್ಲ ಅಂತ ಕುಂಡ್ರಿಸ್ಕಂಡ್ ಒಪ್ಪಿಸ್‌ಬೇಕು. ಇದರವ್ಯಾಲೆ ಹಟಾನೇ ಮಾಡಿದ್ರೆ ಏನ್ ಮಾಡಕಾಯ್ತದೆ? ಅಪ್ಪ ಮಗ ಇಬ್‌ರೂ ಜೋಡಿ ಯಾಗಿ ಮಾಡಿಯೇ ಮಾಡ್ತೀನಿ ಅಂದ್ರೆ ನಂದೇನ್ ನಡೀತೈತೆ? ಅಲ್ಲ, ಅವಳ್ಯಾವ ಚೆಂದುಳ್ಳೆ ಎಣ್ಣು ಅಂತ ಇವನು ಒಪ್ಕಂಡವ್ನೆ! ನಮ್ದೇ ನೀಲಗಿರಿ ಕಡೇವು ಎಂತೆಂತಾ ಕೆಂಪನೆ ಎಣ್ಣುಗಳು ಸಿಕ್ಕಾಕುಲ್ಲ. ಅವಳು ನೋಡಿದರೆ ತಿಮ್ಲಾಪುರದ ವಕ್ಕಲಿಗ ಎಣ್ಣಿದ್ದಂಗೇ ಅವ್ಳೆ. ಏಟಾದ್‌ರೂ ಬಾಂಬ್ರ ಉಡುಗಿಯಲ್ವ, ಕಾಲೇಜು ಓದಿದೋಳು. ಕಳೆಕಳೆಯಾಗವ್ಳೆ.

೨

ಮರುದಿನ ಸಂಜೆ ಐದು ಗಂಟೆಯ ಹೊತ್ತಿಗೆ ಅವರ ಊರಿನ ಪರಿಶಿಷ್ಟ ವರ್ಗದ ಎಂ.ಎಲ್.ಎ. ಬೆಟ್ಟಯ್ಯನವರು ಮನೆಗೆ ಬಂದರು. ಈಗ ಅಸೆಂಬ್ಲಿ ನಡೆಯುತ್ತಿಲ್ಲ. ಅವರು ಯಾವುದೋ ಮುಖ್ಯ ಕೆಲಸದ ಮೇಲೆ ಬಂದಿದ್ದಾರೆ. ಹಜಾರದಲ್ಲಿ ಹಾಕಿದ್ದ ಸೋಫದ ಮೇಲೆ ಬೆಟ್ಟಯ್ಯನವರು ಕುಳಿತರು. ಪಕ್ಕದಲ್ಲಿಯೇ ಕುಳಿತು ಮಂತ್ರಿಗಳು ಊರ ಕಡೆಯ ಕುಶಲ ವಿಚಾರಿಸಿದರು. ತಿರುಮಲಾಪುರದಲ್ಲಾದರೆ ಬೆಟ್ಟಯ್ಯನವರು ಇವರ ಮನೆಯ ಒಳಕ್ಕೆ ಬರುವುದೂ ಇಲ್ಲ. ಇವರು ಕರೆಯು ವುದೂ ಇಲ್ಲ. ಜಗುಲಿಯ ಮೇಲಿನ ಕೋಣೆಯಲ್ಲಿ ಇಬ್ಬರ ಸಮಾಗಮವೂ ಮುಗಿಯುತ್ತದೆ. ಅದು ಹಳ್ಳಿ. ಆದರೆ ಇದು ಬೆಂಗಳೂರು. ವಾಸವಾಗಿರುವುದು ಸರ್ಕಾರವು ಕೊಟ್ಟಿರುವ ಮಂತ್ರಿಗಳ ಬಂಗ್ಲೆ. ಅದರ ಸುತ್ತಲಿನ ಕೈತೋಟ, ಮನೆಯ ಸ್ವಚ್ಛತೆ, ಒಳಗಿನ ಸೋಫ, ಕುರ್ಚಿ, ಮೇಜ, ಮಂಚ ಮೊದಲಾದು ವೆಲ್ಲ ಸರ್ಕಾರದ್ದು. ಇಲ್ಲಿ ಆ ರೀತಿಯ ಭೇದ ಸಲ್ಲುವುದಿಲ್ಲ. ಅಲ್ಲದೆ ಮೇಲಗಿರಿ ಗೌಡರು ಗಾಂಧೀಜಿಯ ಆಶ್ರಮದಲ್ಲಿದ್ದು ಬಂದವರು. ಅಸ್ಪೃಶ್ಯತೆಯನ್ನು ಮನೆಯ ಹೆಂಗಸರು ಮುದುಕರು ಅನುಸರಿಸಿಕೊಳ್ಳಲಿ. ಆದರೆ ಅವರ ಮಟ್ಟಿಗೆ ಅದೆಲ್ಲ ಇಲ್ಲ.

'ಇದೇನ್ ಈಟ್ ಹೊತ್ನಾಗೆ ಬಂದ್ರಿ? ಯಾವ ಮೋಟಾರಿತ್ತು?'

'ಹನ್ನೆಲ್ಡು ಗಂಟೇನಾಗ್ಲೇ ಬಂದೆ.'

'ಎಂ.ಎಲ್.ಎ. ಹಾಸ್ಟೆಲ್‌ಗೆ ಹೋಗಿದ್ರಾ? ಚೀಲ ಕೈಯಾಗೇ ಇದೆ?'

'ನಮ್ಮ ಜೋಯಿಸರು ಬಂದಿದ್ರು....'–ಎಂದ ಬೆಟ್ಟಯ್ಯನವರು, ಅದನ್ನು ತಾವು ಹೇಳಬಾರದಾಗಿತ್ತೆಂಬ ನೆನಪಾಗಿ ಅರ್ಧಕ್ಕೇ ನಿಲ್ಲಿಸಿದರು.

'ಅದೇನಪ್ಪ ಜಂಬ್ರ?'

'ಮಗಳನ್ನ ನೋಡಕ್ಕೆ ಅಂತ ಬಂದಿದ್ರು. ಮೋಟರು ತಡವಾಗಿ ಬಂತು. ಅವರ ಮಗಳ ಕಾಲೇಜಿಗೆ ಹ್ವಾಗಿ ರೂಮು ಹುಡುಕಿ ಅವರುನ್ನ ಅಲ್ಲಿಗೆ ಮುಟ್ಟಿಸಿದೆ. ಆ ಮಗ ತಿಂಡಿ ತಿಂದ್‌ಕಂಡ್ ಹ್ವಾಗ್ಬೇಕು ಅಂತು. ಈಟೋತ್ತಾಯ್ತು.'

ಮಂತ್ರಿಗಳು ಮುಗುಳ್ನಕ್ಕರು. ಅದರ ಅರ್ಥ ಇವರಿಗೆ ಆಯಿತು. ಅವರೇ ಕೇಳಿದರು: 'ನಮ್ಮ ಕೈಲ್ಯಾಕೆ ಮುಚ್ಚಿಡ್ತೀರ? ನಮ್ಮ ನಿಮ್ಮ ಮಧ್ಯ ಏನು ಗುಟ್ಟು? ಹೇಳ್‌ಬ್ಯಾಡ್ವಾ?'

'ನಿಮಗೇ ಯಲ್ಲಾ ಗೊತ್ತಿರೂವಾಗ ನಾನೇನ್ ಏಳಾದು?'

'ಅಂತೂ ನೀವಾಗೇ ಸುಳು ಕೊಡಾಕಿಲ್ಲ. ಪೂಜಾರಯ್ಯ ಯಾಕ್ ಬಂದಿದ್ದ?'

'ನಿಮಿಗ್ ಗೊತ್ತಿಲ್ವರಾ?'

'ಬೆಟ್ಟಯ್ಯನೋರೇ, ನೀವು ಇಂಗ್ಲೆಂಡ್ ದೇಶದ ಪ್ರೈಮ್ ಮಿನಿಸ್ಟರಾಗಬೇಕು. ತಂದೆ ಮಗಳು ಏನ್ ಮಾತಾಡ್ಕಂಡ್ರು ಹೇಳಿ.'

'ನಾನಲ್ಲಿರ್ನಿಲ್ಲ. ಬಂದ್‌ಬುಟ್ಟೆ.'

'ನನ್ ತಾವ ಮುಚ್ಚಬ್ಯಾಡಿ ಹ್ಯೇಳಿ.'

ಅವರು ಈಗಲೂ ಬಾಯಿಬಿಡಲಿಲ್ಲ. ಇವರೇ, 'ಆವಯ್ಯ ಮಗಳುನ್ನ ಬೈದಿರ್ಬೈದು. ನಂಗೂ ನಿಂಗೂ ಸಂಬಂಧ ಮುರೀತು ಅಂದಿರ್‌ಬೈದು. ಅಲ್ವಾ?'

'ಎಮ್ಮುಂಗಿಲ್ದೆ ಹೋದ್ರೂ ಹಿಂಗೇ ಆಯ್ತದೆ ಅಂತ ನಿಮಿಗ್ ಗೊತ್ತು. ತಂತ್ರ ಮಾಡಿ ಮಡಗಿದೀರಿ. ನನ್ನ ಕೇಳ್ತೀರಲ?'

'ಸಂಡಲ್ಲಪ್ಪ ತಂತ್ರ. ಹುಡುಗ ಹುಡುಗಿ ನೋಡಿ ಒಪ್ಕಂಡ್ರು. ನಂಗೂ ನೆನ್ನೆ ಗೊತ್ತಾಯ್ತು. ಇವಳಿಗೆ ತಿಳಿವಳಿಕೆ ಹೇಳ್ತಿದ್ದೆ. ಜಾತಿ ಪಾತಿ ಎಲ್ಲ ಸುಳ್ಳು. ಒಬ್ಬರಿಗೊಬ್ಬರು ನೀಯತ್ತಿನಿಂದಿರಾದೇ ಧರ್ಮ. ಏನ್ಹೇಳ್ತೀರಾ? ಈಗ ನಾನು ನೀವು ಒಂದು ಜಾತಿಯಾ? ಜಾತಿಯೇ ಸುಳ್ಳು. ಒಬ್ರಿಗೊಬ್ಬರು ನೀಯತ್ತಿನಿಂದಿದ್ರೆ ಸಾಲ್ದಾ? ಅಲ್ವೇನ್ರೀ? ಹಂಗೇ ಗಂಡ ಹೆಂಡ್ತಿ. ಒಬ್ಬರಿಗೊಬ್ಬರು ಸಪ್ರೋರ್ಟ್ ಮಾಡ್ಕ್ಯಂಡಿದ್ರೆ ಅದೇ ಸಂಸಾರ, ಅಲ್ವರಾ?'

ಇವರು ಪ್ರತಿಹೇಳುವಂತಹ ಮಾತಲ್ಲ ಅದು. ಅನಂತರ ಇವರೇ, ತಾವು ಬಂದ

ಕೆಲಸವನ್ನು ಹೇಳಿದರು: ಒಂದು, ಅವರ ಮಗಳು ಮೀರಾ ಮಿಡಲ್ ಸ್ಕೂಲು ಮೇಡಂ ಕೆಲಸಕ್ಕೆ ಅರ್ಜಿ ಹಾಕಿದ್ದಾಳೆ. ಅವಳಿಗೆ ತಕ್ಷಣ ಆರ್ಡರ್ ಆಗಿ ತಿರುಮಲಾಪುರಕ್ಕೆ ಹಾಕಿಸಬೇಕು. ಎರಡು, ತಾವರೆಕೆರೆ ತಾಲ್ಲೂಕ್ ಬೋರ್ಡಿ ಅಧ್ಯಕ್ಷಸ್ಥಾನಕ್ಕೆ ಮಂತ್ರಿಗಳ ಪಕ್ಷದ ಬೋರನಿಂಗೇಗೌಡರು ನಿಂತಿರುವುದು ಸರಿಯಷ್ಟೆ? ಆದರೆ ಕಸಬಾ ನಾರಾಯಣರಾಯರೂ ನಿಂತಿದ್ದಾರೆ. ಶಿವಗೆರೆ, ಹೆಗ್ಗುಂಟೆ, ಮತ್ತು ತಿಮ್ಮನಹಳ್ಳಿ ಹೋಬಳಿಗಳ ಕಡೆಯ ಓಟು ಅವರಿಗೆ ಹೋದರೆ ಬೋರನಿಂಗೇಗೌಡರು ಬಿದ್ದುಹೋದಂತೆ. ಮಂತ್ರಿಗಳು ತಕ್ಷಣ ಏನಾದರೂ ಮಾಡಬೇಕು. ಅದಕ್ಕಾಗಿ ಬೋರನಿಂಗೇಗೌಡರು ನೆನ್ನೆ ರಾತ್ರಿ ತಮ್ಮ ಕಾಲೊನಿಗೆ ಬಂದು ತಮ್ಮನ್ನು ಬೆಳಗಿನ ಬಸ್ಸಿಗೇ ಬೆಂಗಳೂರಿಗೆ ಕಳಿಸಿದ್ದಾರೆ.

ಎರಡನೆಯ ಸಂಗತಿಯನ್ನು ಕೇಳಿ ಮಂತ್ರಿಗಳು ಗಾಬರಿಯಾದರು. ತಾಲ್ಲೂಕ್ ಬೋರ್ಡ್ ಅಧ್ಯಕ್ಷಸ್ಥಾನದಲ್ಲಿ ತಮ್ಮವರಿಲ್ಲದಿದ್ದರೆ ಮುಂದಿನ ಅಸೆಂಬ್ಲಿ ಚುನಾವಣೆಯಲ್ಲಿ ತಮಗೆ ಅಪಾಯ ಕಟ್ಟಿಟ್ಟದ್ದು. ನಾರಾಯಣರಾಯರು ರಾಮ ಮನೋಹರ ಲೋಹಿಯಾನ ಶಿಷ್ಯ. ಹಾಗಂತ ಹೇಳಿಕೊತ್ತಾನೆ. ಒಂದು ಸಲ ಅವರು ಬೇರುಬಿಟ್ಟರೆ ಕೀಳೂದು ಕಷ್ಟ. ಆದ್ದರಿಂದ ಮೊಳೆಯದ ಹಾಗೆ ನೋಡಿಕೋಬೇಕು. ಅವರು ತಕ್ಷಣ ಟೆಲಿಫೋನ್ ತಿರುಗಿಸಿ ಮುಖ್ಯಮಂತ್ರಿಗಳೊಡನೆ ಮಾತನಾಡಿದರು. ಜವಾನನನ್ನು ಕೂಗಿ ಡ್ರೈವರನ್ನು ಕರೆಸಿದರು. 'ಈಗಲೇ ನಮ್ಮೂರಿಗೆ ಹೋಗಬೇಕು. ನಾಳೆ ಸಂಜೆಗೆ ಬರಾದು. ನೀ ಬೇಕಾದರೆ ಕಾರು ತಗಂಡು ಹ್ವಾಗಿ ಮನೇಲಿ ಹ್ಯೇಳಿ ಬಾ' – ಎಂದು ಡ್ರೈವರ್‌ನಿಗೆ ಹುಕುಂ ಮಾಡಿದರು.

೩

ಬೆಟ್ಟಯ್ಯನವರೂ ಮಂತ್ರಿಗಳ ಜೊತೆಯಲ್ಲೇ ಊರಿಗೆ ಹೊರಟರು. ಇಬ್ಬರೂ ಕಾರಿನ ಹಿಂಭಾಗದ ಸೀಟಿನಲ್ಲಿ ಕುಳಿತಿದ್ದರು. ನಗರದ ಎಲ್ಲೆಯನ್ನು ದಾಟಿದ ಮೇಲೆ ಮಂತ್ರಿಗಳು ಕೇಳಿದರು: 'ಪೂಜಾರಯ್ಯ ಒಪ್ಕಂತಾನೆ ಅಂತೀರಾ?'

'ಬಲು ಶಿಟ್ಟು ಮಾಡಿದ್ರು. ಎಕ್ಕಡ್‌ದಾಗೆ ಹೊಡೆದು ಆ ಹೆಣ್ಣುಮಗೀನ ಬೆನ್ನು ಬುಜ ಎಲ್ಲ ನತ್ತವಾಗಿ ಸೋರಿಬಿಡ್ತು. ಆ ಮಗೀನ ಸಹನೆ ದೊಡ್ಡದು. ಮಹಾತ್ಮರು ಹೇಳ್ತಿರಲಿಲ್ವ, ಸತ್ಯಾಗ್ರಹ ಅಂದ್ರೆ ಹ್ಯಂಗಿರಬೇಕು ಅಂತ. ಅಳಲಿಲ್ಲ, ಬೈಯಲಿಲ್ಲ. ನೋವು ಅನ್ಲಿಲ್ಲ. ಹೊಡೆದು ಹೊಡೆದು ಕೊನೆಗೆ ಅವುರ್ನೋರೇ ತಲೆತಿರುಗಿ ಬಿದ್ರು. ಆ ಮಗ ಅಪ್ಪನ್ನ ತೊಡೆಮ್ಯಾಲೆ ಇಟ್ಕಂಡಿ,

ನೀರು ತಟ್ಟಿ, ಗಾಳಿ ಬೀಸಿ ಸೇವೆ ಮಾಡ್ತು. ಆ ಮಗೀನ ಮನಸ್ಸು ಬದಲಾಯಿ ಸುಕ್ಕೆ ಯಾರ ಕುಟ್ಲೂ ಆಗಾಕುಲ್ಲ. ಅಯ್ನೋರಂತೂ ಒಪ್ಪೂಹಂಗಿಲ್ಲ.'

'ಸಮಾನತೆ ಅಂತೀವಿ. ಜಾತಿ ಕೆಟ್ಟದು ಅಂತೀವಿ. ಈ ಬ್ರಾಹ್ಮಣರಿರೂತಂಕ ಜಾತೀಯತೆ ಹೋಗುಲ್ಲ. ಏನಂತೀರಿ?'

ಈ ಮಾತಿಗೆ ಬೆಟ್ಟಯ್ಯನವರು ಉತ್ತರ ಹೇಳಲಿಲ್ಲ. ಈ ಪ್ರಶ್ನೆ ಅವರಿಗೆ ರುಚಿಸಲಿಲ್ಲವೆಂದು ಮಂತ್ರಿಗಳು ಅರ್ಥಮಾಡಿಕೊಂಡರು. ತಮಗೆ ಇಷ್ಟವಾಗದ ಮಾತು ಬಂದಾಗ ಸುಮ್ಮನಾಗಿಬಿಡುವುದು ಅವರ ಸ್ವಭಾವವೆಂಬುದನ್ನು ಇವರು ಬಲ್ಲರು. ಇದು ಅವರ ಹುಟ್ಟುಸ್ವಭಾವವೋ, ಅಥವಾ ಆಶ್ರಮದಲ್ಲಿ ರೂಢಿಸಿ ಕೊಂಡ ಗುಣವೋ ಇವರಿಗೆ ಸರಿಯಾಗಿ ಗೊತ್ತಿಲ್ಲ. ಏಕೆಂದರೆ ಒಂದೇ ಊರಿನವ ರಾಗಿ ಪರಸ್ಪರ ದೂರದ ಗುರುತಿದ್ದರೂ ಎದುರೆದುರು ಕೂತು ಮಾತನಾಡುವ ಸಂಪರ್ಕವಾದುದು ಅಹಮದಾಬಾದಿನ ಆಶ್ರಮದಲ್ಲೇ. ಆದುದರಿಂದ ಮಾತನ್ನು ಬದಲಿಸಿದರು.

'ಯಂಕಟೇಶನ ಹೆಂಡ್ತಿ ಹೆತ್ಲಾ?'

'ಊಂ. ನೆನ್ನೆ ನಾಮಕರಣವಾಯ್ತಂತೆ. ಗಂಡು ಮಗು.'

'ಪರವಾಗಿಲ್ಲ. ನಮ್ಮ ವೆಂಕಟರಮಣಯ್ನೋರು ಮೊಮ್ಮಗನ್ನ ಕಂಡ್ರು.'

ಕಾರಿನಲ್ಲಿ ಬೆಂಗಳೂರಿಗೂ ತಿರುಮಲಾಪುರಕ್ಕೂ ಎರಡೂ ಕಾಲು ಗಂಟೆಯ ಓಟ. ಎಂಬತ್ತೊಂದು ಮೈಲಿ ಮಾತ್ರ. ಬಸ್‌ಸ್ಟ್ಯಾಂಡಿನ ಹತ್ತಿರ ಇಳಿದು, 'ನಾಳೆ ಬೆಳಗ್ಗೆ ಮನೆ ತಾವ್ಕ್ ಬತ್ತೀನಿ' ಎಂದು ಹೇಳಿ ಬೆಟ್ಟಯ್ಯನವರು ಕೆರೆ ಕೆಳಗಿನ ಹಳ್ಳದ ಕಡೆಗೆ ನಡೆದರು. ತೋಟ, ಗದ್ದೆ, ಹಳ್ಳ, ಮತ್ತೆ ಗದ್ದೆ ತೋಟಗಳನ್ನು ಹಾಯ್ದು ಅವರು ತಮ್ಮ ಕೇರಿಗೆ ನಡೆಯಬೇಕಾಗಿತ್ತು. ಅದೇ ಹೊತ್ತಿಗೆ ಸರಿ ಯಾಗಿ ಬೆಂಗಳೂರಿನಿಂದ ಬಸ್ಸು ಬಂದು ನಿಂತಿತು. ಮಂತ್ರಿ ಮೇಲಗಿರಿಗೌಡರ ಕಾರು, ಬೆಟ್ಟಯ್ಯನವರು ಇಳಿದುದನ್ನು ವೆಂಕಟರಮಣಯ್ಯನವರು ನೋಡಿದರು. ಅವರು ಬಸ್ಸಿನಿಂದ ಇಳಿದುದನ್ನು ಮಂತ್ರಿಗಳೂ ನೋಡಿದರು. ವೆಂಕಟರಮಣಯ್ಯ ನವರ ಮುಖ ಭಾರವಾಗಿತ್ತು. ಅವರು ಮಂತ್ರಿಗಳನ್ನು ಕಂಡು ಮಾತನಾಡಿಸ ಲಿಲ್ಲ. ಆಡಿಸುವ ಮನಸ್ಸಿಲ್ಲವೆಂಬುದನ್ನು ಮುಖವೇ ಹೇಳುತ್ತಿತ್ತು. ಆದರೆ ಮಂತ್ರಿ ಗಳು ಅವರನ್ನು ನೋಡದವರಂತೆ ಇದ್ದುಬಿಟ್ಟರು. ಡ್ರೈವರ್ ಕಾರನ್ನು ಕೋಟೆ ಯೊಳಕ್ಕೆ ನಡೆಸಿದ.

ಹಿಂದಿನ ಕಾಲದ್ದಾದರೂ ತಿರುಮಲಾಪುರದ ಬೀದಿಗಳಲ್ಲಿ ಒಂದು ಕಾರು ಹೋಗಿ ಬರಲು ಯಾವ ತೊಂದರೆಯೂ ಇಲ್ಲ. ಆದರೆ ಮಂತ್ರಿಗಳ ದೊಡ್ಡ ಮನೆಯ ಬಾಗಿಲಿನ ತನಕ ಹೋಗಲು ಸಾಧ್ಯವಿಲ್ಲ. ಮನೆ ಇನ್ನೂ ಐವತ್ತು ಹೆಜ್ಜೆ ಇರು

ವಾಗಲೇ ಮೆಟ್ಟಿಲುಗಳು ಆರಂಭವಾಗುತ್ತವೆ. ಪಾಳೆಯಗಾರರು ಕಟ್ಟಿಸಿದ ಆ ಮನೆ ಊರಿನ ಎತ್ತರವಾದ ಪ್ರದೇಶದಲ್ಲಿದೆ. ಮಂತ್ರಿಗಳ ಕಾರನ್ನು ಕಂಡ ಮಾತ್ರಕ್ಕೆ ಬೀದಿಗಳಲ್ಲಿನ ಎಷ್ಟೋ ಜನ ಹಿಂದೆ ಹಿಂದೆ ಬಂದಿದ್ದರು. ಕೆಳಗೆ ಇಳಿದ ಅವರು ಅವರನ್ನೆಲ್ಲ ಮಾತನಾಡಿಸಿ, 'ಭಾಳ ಸಂತೋಷ' ಹೇಳಿ ಮನೆಗೆ ನಡೆದು ಹೋದರು. ಹೋದ ತಕ್ಷಣ ತಮ್ಮ ಜ್ಞಾತಿ ಕಾಳೇಗೌಡನನ್ನು ಕರೆದು, 'ಕೆಳಗೆ ಕಾರು ನಿಂತೈತೆ. ಕಡಗವಹಳ್ಳಿಗೆ ಹೋಗಿ ಬೋರನಿಂಗಪ್ಪಾರ್ನ ಕರ್ಕಂಡ್ ಬಾ' ಎಂದು ಹೇಳಿ ಒಳಗೆ ನಡೆದರು.

ಇವರು ಹೋಗುವ ವೇಳೆಗೆ ಯಜಮಾನರ ಸಂಜೆಯ ಪೂಜೆ ಮುಗಿದಿತ್ತು. ಅವರು ರಾತ್ರಿ ಊಟ ಮಾಡುವವರಲ್ಲ. ನಿಂಗಮ್ಮ ಅವರಿಗೆಂದು ಉಪ್ಪಿಟ್ಟು ಮಾಡಿದ್ದಳು. ಕೈ ಕಾಲಿಗೆ ನೀರು ಇಸಿದುಕೊಂಡು ಮಂತ್ರಿ ಮೇಲಗಿರಿಗೌಡರು ಮಣೆಯ ಮೇಲೆ ಊಟಕ್ಕೆ ಕುಳಿತರು. ಎದುರಿಗೆ ಒಂದು ಮಣೆಯ ಮೇಲೆ ಕೃಷ್ಣಾಜಿನ ಹಾಕಿಕೊಂಡು ಯಜಮಾನರು ಫಲಹಾರಕ್ಕೆ ಮಂಡಿಸಿದರು. ಮಗನೇ ಮಾತು ತೆಗೆದು ಶ್ರೀನಿವಾಸ ಮತ್ತು ಸತ್ಯಭಾಮೆಯ ಮದುವೆಯ ಸುದ್ದಿಯನ್ನು ತಿಳಿಸಿ, ಪೂಜಾರಯ್ಯ ಬೆಂಗಳೂರಿಗೆ ಹೋಗಿ ಅವಳನ್ನು ಹೊಡೆದದ್ದು, ಈಗ ತಾನೇ ಮೋಟಾರಿನಲ್ಲಿ ಹಿಂತಿರುಗಿದ್ದನ್ನೆಲ್ಲ ಹೇಳಿದರು. ಇಕ್ಕುತ್ತಿದ್ದ ನಿಂಗಮ್ಮನಿಗೆ ಇದನ್ನು ಕೇಳಿ ಸೋಜಿಗ. ದೊಡ್ಡ ಯಜಮಾನರು ಮಾತ್ರ ಗಂಭೀರವಾಗಿ ಕೇಳುತ್ತಿದ್ದರು.

ಮೊಸರಿನಲ್ಲಿ ಅನ್ನ ಕಲಸುತ್ತ ಮಗ ಕೇಳಿದರು: 'ಇದ್ಕೆ ಏನಂತೀರಾ? ನಿಮ್ಮುನ್ನ ಕೇಳಾಣಾ ಅಂತಲೇ ಬಂದೆ.'

'ಒಂದು ತರಕ್ಕೆ ಇದರಾಗೆ ತ್ಯಪ್ಪಿಲ್ಲ. ಒಂದು ತರಕ್ಕೆ ತ್ಯಪ್ಪು.'

'ಅದ್ ಹ್ಯಂಗೆ ತಪ್ಪು?'

'ಹಿಂದೆ ಕ್ಷತ್ರಿಯ ಕನ್ಯೇನ ಬ್ರಾಮ್ಮಣನಿಗೆ ಕೊಟ್ಟಿರೂದುಂಟು. ಆದರೆ ಬ್ರಾಮ್ಮಣ ಕನ್ಯೇನ ಕ್ಷತ್ರಿಯ ತಂದುಕೊಂಡಿರ್ಲಿಲ್ಲ.'

'ಅಂದ್‌ರೆ ಬ್ರಾಹ್ಮಣರು ಕ್ಷತ್ರಿಯರಿಗಿಂತ ಮೇಲಿನೋರು ಅಂತೀರಾ?'

'ಅದ್ ಹ್ಯಂಗಾಯ್ತದೆ? ಅವನ ಕೈ ಯಾವತ್ತೂ ಕೆಳಗೆ. ತಾ ಅಂತಾ ಬಿಕ್ಷೆ ಮಾಡೂ ಕೈ ತಾನೆ ಅವನದ್ದು? ಕೊಡೋರು ನಾವು. ನಾವೇ ಮೇಲು. ಕನ್ಯೇನೂ ಅಷ್ಟೇ. ದಾನ ಅಂತ ಅವನಿಗೆ ಕೊಡಭೌದು. ಅವನ ತಾವ್ನಿಂದ ತಗಾಬ್ಯಾಡ್ದು.'

'ಅಪ್ಪಾಜಿ, ನೀವು ಏನೇನೋ ಹೇಳ್ತಿದೀರಿ. ಹಿಂದೂ ಲಾನಲ್ಲಿ ಏನು ಹೇಳಿದೆ ಅಂತೀರ. ಮೇಲಿನೋರು ಕೆಳಗಿನೋರಿಗೆ ಹೆಣ್ಣು ಕೊಡೂದಿಲ್ಲ. ಕೆಳಗಿನೋರಿಂದ

ತಂದ್ರೆ ಅಡ್ಡಿ ಇಲ್ಲ. ಈ ಲೆಕ್ಕದಲ್ಲಿ ಹೇಳಿ. ಹಿಂದಿನ ಕಾಲದ ಶಾಸ್ತ್ರಕ್ಕೇ ಹಿಂದೂಲಾ ಅನ್ನೋದು.'

ದೊಡ್ಡ ಯಜಮಾನರಿಗೆ ಕಕ್ಕಾಬಿಕ್ಕಿಯಾಯಿತು. ಅವರು ಯೋಚಿಸುತ್ತಾ ಕುಳಿತರು. ಅಷ್ಟರಲ್ಲಿ ಇವರ ಮೊಸರನ್ನ ಮುಗಿದಿತ್ತು. ಇವರು ತಣಿಗೆಗೇ ಕೈ ತೊಳೆದುಕೊಂಡರು. ಅವರು ಎದ್ದು ಸೂರುಕಟ್ಟಿನ ಕೆಳಗಿನ ಕಲ್ಲುಚಪ್ಪಟಿಯ ಮೇಲೆ ಮುಸುರೆ ಕೈಗೆ ಬಿಸಿನೀರು ಹಾಕಿಸಿಕೊಂಡರು. ಅನಂತರ ಇಬ್ಬರೂ, ದೊಡ್ಡ ಯಜಮಾನರ ಮಲಗುವ ಕೋಣೆಗೆ ಹೋದರು. ದೊಡ್ಡವರು ಮಂಚದ ಮೇಲಿನ ಮೆತ್ತೆಯ ಮೇಲೆ ಹಾಸಿದ್ದ ಕೃಷ್ಣಾಜಿನದ ಮೇಲೆ ಕುಳಿತರು. ಚಿಕ್ಕವರು ಕೆಳಗೆ ಮುಂದಲಿಗೆಯ ಮೇಲೆ.

ಐದು ನಿಮಿಷ ತಮ್ಮಲ್ಲಿಯೇ ಯೋಚಿಸಿ ದೊಡ್ಡವರು ಎಂದರು: 'ಅವತ್ತು ಉತ್ತರದೇಶದ ಕಡೆಯೋರು ಬಂದಿದ್ರು ನೆಪ್ಪೈತಾ? ಕ್ಷತ್ರಿಯರು ಬ್ರಾಮ್ಮಣರಿಗಿಂತ ಮೇಲೆ ಅಂತ ಹ್ಯೇಳ್ಲಿಲ್ವಾ? ಅವರು ಬ್ರಾಮ್ಮಣ ಅಡಿಗೆಯೋರ ಕೈಯಾಗೆ ಉಣ್ಣಾಕಿಲ್ವಂತೆ. ಹಿಂದಿನ ಕಾಲ್‌ದಾಗೆ ಬ್ರಾಮ್ಮಣರಿಗೆ ಮಂತ್ರಶಕ್ತಿ ಇತ್ತು. ಈಗ ಎಲ್ಲಾ ಕಳ್ಕಂಡವ್ರೆ. ಆ ಯಂಕ್‌ಟೇಶನ್ನ ನೋಡ್‌ದ್ಯಾ, ಪೂಜಾರಿ ಕಸುಬೂ ಬೇಕು, ಹೋಟಲೂ ಮಡೀಕ್ಕಂಡವ್ನೆ. ಇಂತೋರ ಮನೆ ಎಣ್ ತರಾದು ಅಂದ್ರೆ ನಮ್ಮ ಮರ್ಯಾದೆ ಏನಾಯ್ತದೆ? ಎಣ್ಣು ಕೊಡಾಕೂ ತರಾಕೂ ಸಮುಗ್ಗೈ ಬೇಕು ಅಲ್ವಾ?'

ಸಮುಗ್ಗೈ ಎಂಬ ಮಾತಿನಿಂದ ಮಂತ್ರಿಗಳ ಮನಸ್ಸು ಬೇರೆಯೇ ದಾರಿಯಲ್ಲಿ ಯೋಚಿಸಲು ಮೊದಲುಮಾಡಿತು. ಈ ಮದುವೆಯಿಂದ ಏನೇನು ಆಗಭೌದು? ಬ್ರಾಹ್ಮಣರ ಜಂಬ ಅಡಗ್‌ತ್ತೈತೆ. ಅದರೆ ಜಂಬಪಡಾಕ್ ಅವ್‌ರ ತಾವ ಏನದೆ? ಬೆಳಗ್ಗೆದ್ರೆ ನನ್ ತಾವ ಒಂದು ಪ್ರೈಮರಿ ಸ್ಕೂಲ್ ಮೇಷ್ಟರ ಕೆಲ್ಸ ಕೊಡ್ಸಿ, ಮಗಂಗೆ ಗುಮಾಸ್ತೆ ಕೊಡ್ಸಿ, ಮಗಳು ಟೈಪಿಂಗ್ ಕಲಿತವ್ಳೆ, ನಿಮ್‌ತಾವ ಎಂಬತ್ತು ರೂಪಾಯಿ ಸಂಬಳ ಮಾಡ್ಸಿ ಅಂದ್‌ಕಂಡವೆ. ಜರ್ಮೀನ್ ಪರ್ಮೀನಿರೂ ಒಂದ್ ನಾಕ್ ಜನ, ಆ ತಾವರೇಗೆರೆ ನಾರಾಯಣರಾಯನ ಹಂಗೆ ಸೋಶಲಿಸ್ಟ ಗೀಶಲಿಸ್ಟ ಪಾರ್ಟಿ ಅಂತ ಪುಲಪುಲಗುಟ್ತವೆ. ಅಂಥೋರ ಜಾತೀಲಿ ಹೆಣ್ಣು ತಂದ್ರೆ ಅಪ್ಪಾಜಿ ಹೇಳೂ ಹಂಗೆ ನಮಗಿಂತ ಕೀಳೇ ಆಯ್ತು – ಎಂದು ಒಂದು ರೀತಿಯ ಆಲೋಚನೆ ಬರುತ್ತಿತ್ತು: ಆದರೆ ಇನ್ನೊಂದು ಮನಸ್ಸು ಬೇರೆ ರೀತಿ ನೆನೆಸಿಕೊಳ್ಳುತ್ತಿತ್ತು: ವೇದ, ಉಪನಿಷತ್ತು, ಶಾಸ್ತ್ರ, ಪುರಾಣ, ಎಲ್ಲಿ ನೋಡಿದರೂ ಇವರುಪ್ಪೇ. ಭೂಸುರರಂತೆ. ಪ್ರಪಂಚಕ್ಕೆ ಅವರೇ ದೇವರಂತೆ. ಬರ್‍ಕಂಡುದ್ದೇ ಬರ್‍ಕಂಡುದ್ದು. ನಾವು ಶೂದ್ರರು. ದುಡಿಯಾದೇ ನಮ್ಮ ಕರ್‍ಮ. ತಿನ್ನೋದು ಅವರ

ಹಕ್ಕು. ಅಧಿಕಾರವೂ ಅವರುದ್ದೇ ಇತ್ತು. ರಂಗಾಚಾರ್ಲು, ಶೇಷಾದ್ರಿ ಅಯ್ಯರ್, ವಿಶ್ವೇಶ್ವರಯ್ಯ. ಮಿರ್ಜಾಸಾಹೇಬರೊಬ್ಬರೇ ಬ್ಯಾರೆಯೋರು. ಆಮ್ಯಾಲೆ ಅರ್ಕಾಟು. ಆದರೆ ಇವರಿಬ್ಬರೂ ನಮ್ಮೋರಲ್ಲ. ಅವರೂ ಒಂದು ಜಾತಿ ಬ್ರಾಹ್ಮಣರೇ. ಯಾವ ಅಧಿಕಾರ ನೋಡಲಿ ಅವರೇ. ಊರ ಶ್ಯಾನುಭೋಗಿಕೆ ಎಲ್ಲ ಅವರುದ್ದೇ. ಅಂದಹಾಗೆ ಈಗ ನೆಪ್ಪು ಬಂತು. ಶ್ಯಾನುಭೋಗಿಕೆ ಕಿತ್‌ಹಾಕ್ ಬೇಕು ಅನ್ನೊ ಮಸೂದೆ ತರಾದು ಇನ್ನೂ ಯಾಕೆ ತಡಮಾಡ್ತಿದಾರೆ? ಚೀಫ್‌ಗೆ ಜ್ಞಾಪಿಸಬೇಕು. ಇವರ ಜಾತೀದ ಒಂದ್ಹೆಣ್ಣ ರಾಜಾರೋಷಾಗಿ ಮದುವೆ ಮಾಡ್ಕಂಡ್ ಪೇಪರಿನಾಗೆ ಹಾಕ್ಸಿ ಬೆಂಗಳೂರು ಮಿನಿಸ್ಟ್ರೀಲಿರೂ ಬ್ರಾಹ್ಮಣ ಆಫೀಸರುಗಳ್ನೆಲ್ಲ ರಿಸೆಪ್ಷನ್ನಿಗೆ ಕರಸ್‌ಬೇಕು. ಆಫೀಸರುಗಳ ಮಾತ್ಯಾಕೆ? ಹಂಗೂ ಸೈ ಹಿಂಗೂ ಸೈ. ನಗ್‌ನಗ್‌ತಾ ಹೆಂಡ್ತೀರ ಜೊತೆ ಬಂದು ಕಂಗ್ರಾ-ಚುಲೇಶನ್ಸ್ ಹೇಳಿ ಹೋಯ್ತಾರೆ. ಜಗಳಕ್ಕೆ ನಿಂತ್ರೆ ತಾನೆ, ಹೇಡಿ ಸೂಳೆಮುಕ್ಳು!

ಆದರೆ ಈ ಮದುವೆಯಿಂದ ನಮ್ಮ ಹಳ್ಳೀ ಕಡೆ ರೈತಸಮಾಜ ಏನು ತಿಳ್ಕಳುತ್ತೆ? ನಮ್ಮ ಜಾತೀಲಿ ಹೆಣ್ಣಿಲ್ಲ ಅಂತ ಬ್ರಾಹ್ಮಣರಲ್ಲಿ ಒಪ್ಕಂಡ ಅಂತ ತಿರುಗಿಬಿದ್‌ರೆ! ನಾನೇನೋ ಒಂದು ದೊಡ್ಡ ಭಾವನೆ ಇಟ್ಕಂಡ್ ಮಾಡಾಕ್ ಹೋದ್ರೆ ಇವರು ಹ್ಯಂಗೆ ಹ್ಯಂಗೋ ತಿರುಗಿಸಿದ್ರೆ ಕಷ್ಟ. ನಮ್ಮ ಜನ ಅಂದ್ರೆ ಬುದ್ಧಿ ಇಲ್‌ದೋವು. ಕುರಿಗಳ ಹಂಗೆ. ಇಲ್ದೆ ಇದ್ರೆ ಇವ್ಯಾಕೆ ಶೂದ್ರ ಅನ್ನಿಸ್ಕತ್ತಿದ್ವು? ಸಾವಿರ ಸಾವಿರ ವರ್ಷದಿಂದ ಶೂದ್ರರಾಗಿಯವ್ರೆ. ಆ ಬುದ್ಧಿ ಇದ್ದಿದ್ರೆ ಇವರೂ ಬ್ರಾಹ್ಮಣರಾಗ್ತಿದ್ರು. ಥೂ, ಅದು ಬ್ಯಾಡ, ಕ್ಷತ್ರಿಯರಾಗ್ತಿದ್ರು. ಈಗ ಪರವಾಗಿಲ್ಲ. ಜಾಗೃತಿಯಾಗ್ತಾ ಇವೆ. ಆದ್‌ರೂ ಸಾಲದು. ಕಂದಾಚಾರ ಬಿಡಾಕಿಲ್ಲ. ಅದು ಬಿಡದೆ ಇವರು ಮುಂದುವರಿಯಾಕಿಲ್ಲ. ಹ್ಯಂಗಾದ್‌ರೆ ಹಂಗಾಗ್‌ಲಿ. ಈ ಮದುವೆಯಾದ್ರೂ ನಮ್ಮ ತಾಲ್ಲೂಕಿನ, ನಮ್ಮ ಕಾನ್‌ಸ್ಟಿಟ್ಯೂಯೆನ್ಸಿಯ ರೈತಮುಖಂಡರನ್ನೆಲ್ಲ ಕರೆಸಿ ಅವರಿಗೆ ಹೇಳಿ, ಅವರೇ ಮುಂದೆನಿಂತು ಮಾಡ್ಸಿದ ಹಂಗೆ ಮಾಡ್ಸಸ್ ಬೇಕು. ಬ್ರಾಹ್ಮಣ ಜೋಯಿಸ್‌ರನ್ನ ಕರೆಸಿ ಸಂಸ್ಕೃತ ಮಂತ್ರ ಹೇಳ್ಸಕಾದು. ನಮ್ಮ ಥರಾ ಬಳಗ ಧಾರೆ ಎರೆಸಬೇಕು. ಬಳಗ ಧಾರೆಯಾಗಿ ಬೂವಾ ಉಂಡ್ ಬುಟ್ರೆ ಅವ್ಳು ನಮ್ಮೋಳೇ ಆಯ್ತಾಳೆ.

ಆದರೆ....ಎಂದು ಅವರ ವಿಚಾರವು ಇನ್ನೊಂದು ಮಗ್ಗುಲಿಗೆ ತಿರುಗುವ ಮೊದಲೇ ಹೊರಗಿನಿಂದ ಕಾಳೇಗೌಡರು ಬಂದರು. ಅವರ ಜೊತೆಯಲ್ಲೇ ತಾಲ್ಲೋಕ್ ಬೋರ್ಡ್ ಅಧ್ಯಕ್ಷಸ್ಥಾನದ ಅಭ್ಯರ್ಥಿ ಬೋರನಿಂಗೇಗೌಡರು.

'ಬಲ್ಲಿ, ಬಲ್ಲಿ' – ಎಂದು ಮಂತ್ರಿಗಳು ಮೇಲೆ ಎದ್ದರು: 'ಕಾಳಪ್ಪ, ಬೋರ ನಿಂಗಣ್ಣಾರಿಗೆ ಕೈಗೆ ನೀರು ಕೊಡ್ಸು.'

'ಇಲ್ಲ. ಉಂಡಾಗ್ಯದೆ.'

'ಏ, ವಸಿ ಉಣ್ರಿ.'

'ಇಲ್ಲ, ನಾನು ಹೋದಾಗ ಉಣ್ತಿದ್ರು. ನಾನು ಅಲ್ಲೇ ಮುರಿದು ಬಂದೆ.'

'ಹಂಗಾದ್ರೆ ಡ್ರೈವರಿಗೆ ನೀಡ್ಸು ನಡಿ. ನಂಗೂ ಬೋರಸಿಂಗಪ್ಪಾಗೂ ಮಾಡಿಮ್ಯಾಲೆ ಹಾಸಿಗೆ ಆಕ್ಸು.'

ಬೋರನಿಂಗೇಗೌಡರು ದೊಡ್ಡ ಯಜಮಾನರ ಮಂಚದ ಕಟ್ಟಿಗೆ ಹಣೆ ಮುಟ್ಟಿಸಿ ಅವರ ಆಶೀರ್ವಾದ ಪಡೆದರು. ಇಬ್ಬರೂ ಮಹಡಿಯ ಕಡೆಗೆ ಹೊರಟರು.

೪

ಬೋರನಿಂಗಪ್ಪನವರೂ ಮಂತ್ರಿಗಳೂ ಮಧ್ಯರಾತ್ರಿಯ ತನಕ ಮಾತನಾಡು ತ್ತಿದ್ದರು. ಯಾವ ಯಾವ ಊರುಗಳ ಒಲವು ಯಾವ ಕಡೆಗಿದೆ, ಉಳಿದ ಅಭ್ಯರ್ಥಿಗಳ ಜಾತಿಯ ಓಟುಗಳು ಯಾವ ಯಾವ ಹಳ್ಳಿಗಳಲ್ಲಿ ಎಷ್ಟೆಷ್ಟಿವೆ ಎಂಬ ಅಂಕಿ ಸಂಖ್ಯೆಗಳನ್ನೆಲ್ಲ ನೆನಪಿನಿಂದಲೇ ಹೊರತೆಗೆದರು. ತಾವು ತಕ್ಷಣ ಬಂದಿರು ವುದರಿಂದ ಭಯಕ್ಕೆ ಕಾರಣವಿಲ್ಲ – ಎಂಬ ನಿಶ್ಚಯಮಾಡಿಕೊಂಡು ಇಬ್ಬರೂ ಕಣ್ಣು ಮುಚ್ಚಿದಾಗ ಮಧ್ಯರಾತ್ರಿ ಕಳೆದಿತ್ತು.

ಬೆಳಗ್ಗೆ ಎದ್ದು ಮುಖ ತೊಳೆದು ಕಾಫಿ ಕುಡಿದ ಅವರು ವೆಂಕಟೇಶನಿಗೆ ಹೇಳಿ ಕಳಿಸಿದರು. ಅವನೂ ರಾತ್ರಿ ಸರಿಯಾಗಿ ನಿದ್ರೆ ಮಾಡಿದಂತೆ ಕಾಣಲಿಲ್ಲ.

'ಬಾ ಯಂಗ್‌ಟೇಶು, ಇದ್ಯಾಕ್ ಹುಷಾರಿಲ್ವ?' – ಎನ್ನುತ್ತಾ ಅವನನ್ನು ಸ್ವಾಗತಿಸಿ ಮಂತ್ರಿಗಳು ತಮ್ಮ ಮಂಚದ ಒಂದು ಬದಿಗೆ ಕೂರಿಸಿಕೊಂಡರು: 'ಲೇ, ಯಂಗ್‌ಟೇಶೂಗೆ ಹಾಲ್ ತಗಂಡ್ ಬನ್ರೇ ಕುಡಿಯಾಕೆ.'

'ಯಾಕೆ, ಅವರು ಕಾಫಿ ಕುಡಿಯಾಕಿಲ್ವ?' – ಎದುರಿಗೆ ನೆಲದ ಮೇಲೆ ಹಾಸಿದ್ದ ಹಾಸಿಗೆಯ ಮೇಲೆ ಕುಳಿತು ಶಾಲು ಹೊದೆದಿದ್ದ ಬೋರನಿಂಗಪ್ಪನವರು ಕೇಳಿದರು.

'ನಮ್ಮ ಯಂಗ್‌ಟೇಶು ಹಂಗೆಲ್ಲ ಭೇದ ಗೀದ ಮಾಡುಲ್ಲ. ಬೆಂಗಳೂರಿಗೆ ಬಂದ್ರೆ ನಮ್ಮನ್ಲೇ ಕಾಪಿ ತಿಂಡಿ ತಗಾತಾನೆ. ಇದೆಷ್ಟಾದ್ರೂ ಹಳ್ಳಿ ನೋಡಿ. ನಮ್ಮನೆಯೋರೇ ಯಾರಾದ್ರೂ ಹೊರಗಿನೋರ ಕೈಲಿ ಹೇಳಿಬಿಡ್‌ಛೌದು. ಊರಿ ನಲ್ಲಿ ದೊಡ್ಡ ಬ್ರಾಹ್ಮಣ ಸಮಾಜ. ಪುರಾತನದಿಂದ ಬಂದ ದೇವರ ಪೂಜೆ ಬ್ಯಾರೆ ಇದೆ' – ಮಂತ್ರಿಗಳು ಎಂದರು.

‘ಏನು, ದಿವಾನರು ಇದ್ದಕ್ಕಿದ್ದಾಗೇ ಅವತರಿಸಿಬಿಟ್ಟಿದೀರಲ್ಲ?’ – ವೆಂಕಟೇಶ ಕೇಳಿದ.

‘ನಿಂಗೂ ನಮ್ಮ ಬೋರನಿಂಗಪ್ಪಾರಿಗೂ ಸ್ನೇಹ ಮಾಡಿಸಾನ ಅಂತ ಬಂದೆ. ಅಯ್ಯಾರು ಹ್ಯಂಗವ್ರೆ?’



‘ಚನ್ನಾಗಿದಾರೆ.’

‘ಏನು, ನೆನ್ನೆ ಬೆಂಗಳೂರು ಬಸ್ನಲ್ಲಿ ಬಂದಹಂಗಿತ್ತಲ?’

‘ಇಲ್ಲೇ ಕುಣಿಗಲಿಗೆ ಹೋಗಿದ್ರು. ನಮ್ಮ ಬೀಗರ ತಂಗೀ ಮನ್ಲಿ ಏನೋ ಕಾರ್ಯವಿತ್ತಂತೆ.’

‘ನಿಂಗೆ ಗಂಡು ಮಗ ಆಯ್ತಂತೆ. ನಮಗೆ ಲಾಡು ಗೀಡು ತಿನ್ನುಸ್ ಬ್ಯಾಡ್ವಾ?’ – ಎಂದು ಪ್ರಾಸ್ತಾವಿಕ ಸ್ನೇಹ ಸಲಿಗೆಗಳನ್ನಾಡಿದ ನಂತರ ಮಂತ್ರಿಗಳು ಮುಖ್ಯ ವಿಷಯಕ್ಕೆ ಬಂದರು: ‘ನೋಡಪ್ಪಾ, ನಮ್ಮ ಬೋರ್‌ನಿಂಗಪ್ಪಾರ್ನ ತೇಲುಸ್ತೀಯೋ ಉಳುಸ್ತೀಯೋ?’

‘ಸಾಬ್ರ ಕೈಲಾಗುದ್ದು ಟೋಪಿ ಕೈಲಾಗುತ್ಯಾ?’

‘ಹಂಗಲ್ಲ. ಕಸಬಾ ನಾರಾಯಣರಾಯರು ನಿಂತಿದಾರಂತೆ. ನಾನೂ ಅವರೂ ಸ್ನೇಹಿತರೇ. ನಮಗೆ ಅವರು ಗೆದ್ರೂ ಒಂದೇ, ಬೋರ್‌ನಿಂಗಪ್ಪಾರು ಗೆದ್ರೂ ಒಂದೇ. ಆದರೆ ಬೋರ್‌ನಿಂಗಪ್ಪಾರು ನಮ್ಮ ಹೋಬಳಿಯೋರು. ನಾನು ಮಾತು ಕೊಟ್ಟುಬಿಟ್ಟಿದೀನಿ. ಶಿವಗೆರೆ ಹೆಗ್ಗುಂಟೆ ತಿಮ್ಮನಹಳ್ಳಿ ಕಡೆ ಅವರಿಗೆ ಸಪೋರ್ಟ್ ಐತಂತೆ. ಆ ಕಡೆ ಬ್ರಾಹ್ಮಣರು ಅವರಿಗೆ ಸಪೋರ್ಟ್ ಮಾಡ್ತಾರಂತೆ. ವಿಠಲಾಪುರದೋರು ಹ್ಯಾಂಗೂ ನಿಮ್ಮ ಬೀಗರು. ಅವರಿಗೆ ಹೇಳಿ ಬ್ರಾಹ್ಮಣರ ಓಟು ಈ ಕಡೆ ಬೀಳೂಹಂಗೆ ಮಾಡಬೇಕಲ?’

‘ಆ ಇಡೀ ಬ್ರಾಹ್ಮಣರದ್ದೆಲ್ಲ ಸೇರಿಸಿದರೆ ಒಂದು ಪರ್ಸೆಂಟ್ ಆಗುತ್ತೋ ಇಲ್ವೋ? ಲೆಕ್ಕಕ್ಕಿಲ್ಲ, ಜಮಾಕ್ಕಿಲ್ಲ. ಅದರಿಂದ ಏನಾಗುತ್ತೆ ಬಿಡಿ.’

‘ಹಂಗಲ್ಲ. ಅವರು ಕೆಲವರು ನಾರಾಯಣರಾಯರ ಪರ ಕೆಲಸ ಮಾಡಿ ಇತರೆಯೋರ ಓಟೂ ಬೀಳಾಹಂಗೆ ಮಾಡ್ತಾರೆ. ಅದುನ್ನ ಈ ಕಡೆ ತಿರುಗಿಸ್‌ಭೌದು.’

‘ನೋಡಿ, ಎಲೆಕ್ಷನ್ನಲ್ಲಿ ಕೆಲಸ ಮಾಡೂ ತಾಕತ್ತಿರೋರು ಒಂದ್ ಮೂರು ನಾಕು ಜನ. ಅದೂ ಏನು, ಇನ್ನು ಆರು ತಿಂಗಳತನಕ ಮನೇಲಿ ಅಕ್ಕಿ ಇರೋರು. ಉಳಿದೋರೆಲ್ಲ ಮಧ್ಯಾಹ್ನಕ್ಕಾದರೆ ಸಂಜೆಗಿಲ್ಲ, ಸಂಜೆಗಾದರೆ ಬೆಳಗ್ಗೆಗಿಲ್ಲದೋರು. ಅವರ ಹತ್ರಕ್ಕೆ ನಾನು ಹೋದೆ ಅನ್ನಿ. ‘ನಿಮ್ಮ ಮಂತ್ರಿಗಳಿಗೆ ಹೇಳಿ ನಮ್ಮ ಹುಡುಗುಂಗೆ ಪ್ರೈಮರಿ ಸ್ಕೂಲು ಮೇಷ್ಟರ ಕೆಲ್ಸ ಕೊಡಿಸ್ತೀಯಾ? ಹಾಗಂತ ಕೈ ಮುಟ್ಟಿ ಆಣೆಮಾಡು, ನಾವು ಓಟು ಕೊಡ್ತೀವಿ’ ಅಂತ ಕೇಳ್ತಾರೆ. ಆನೆ

ಮಾಡಿದ ಮ್ಯಾಲೆ ನಾಲಿಗೆ ಉಳುಸ್ಕೋಬೇಕು. ಅದೆಲ್ಲಾಗುತ್ತೆ ಹೇಳಿ."

ತಾವು ಚಾಪೆಯ ಕೆಳಗೆ ನುಸಿದರೆ ಇವನು ರಂಗೋಲಿಯ ಕೆಳಗೆ ನುಸಿಯುತ್ತಾನೆಂಬುದು ಮಂತ್ರಿಗಳಿಗೆ ಅರ್ಥವಾಯಿತು. ಆದರೆ ಈಗ ಅವನ ಸಹಾಯವಿಲ್ಲದೆ ಕೆಲಸ ಸಾಗುವುದಿಲ್ಲ. 'ಆದಷ್ಟು ಜನಸಹಾಯ ಮಾಡ್ಸಕ್ಕೆ ತಾನೇ ನಾವಿರೂದು? ಸರ್ಕಾರದ ರೂಲ್ಸು ಬ್ಯಾರೆ ಇರುತ್ತೆ. ಆದಷ್ಟು ನಾನು ಮಾಡ್ತೀನಪ್ಪ.'

ಆ 'ಆದಷ್ಟು' ಎಂಬ ಮಾತಿನ ಅರ್ಥವನ್ನು ಅವನಿಗೆ ಬೇರೆಯವರು ಹೇಳಿಕೊಡಬೇಕಾಗಿರಲಿಲ್ಲ. ಆದರೆ ಇವರೆದುರಿಗೆ ಒರಟುಕೊಳ್ಳುವುದು ಸಾಧುವೂ ಅಲ್ಲ. ಒರಟುಕೊಳ್ಳುವ ಶಕ್ತಿ ತನಗೆ ಇಲ್ಲವೂ ಇಲ್ಲವೆನ್ನುವುದು ಅವನಿಗೆ ಗೊತ್ತು. 'ಈ ನಮ್ಮ ಹೋಬಳಿ ಕಡೇನೂ ನೀನು ಕೆಲಸ ಮಾಡಬೇಕಪ್ಪ. ಎಲೆಕ್ಷನ್ ಮ್ಯಾನೇಜರೇ ನೀನು'– ಎಂದು ಮಂತ್ರಿಗಳು ಸೇರಿಸಿದರು: 'ನಾರಾಯಣರಾಯರು ನಿಮ್ಮೋರು. ಅವರ ವಿರುದ್ಧ ಕೆಲಸ ಮಾಡಬೇಕು ಅಂತ ಯೋಚನೆಮಾಡಬ್ಯಾಡ. ಬೋರ್‌ನಿಂಗಪ್ಪಾರು ನಿಂತ್ಕಳೂ ಮದಲೇ ನೀನೇ ನಿಂತ್ಕಳೂ ಇರಾದೆ ತೋರ್ಸಿದ್ರೆ ನಾನು ನಿನ್ನೇ ನಿಲ್ಲುಸ್ತಿದ್ದೆ. ಬೇಕಾದ ಸಪೋರ್ಟ್ ಮಾಡ್ತಿದ್ದೆ. ಅಲ್ವೇನ್ರಿ?' – ಎಂದು, ಬೋರನಿಂಗಪ್ಪನವರ ಮುಖ ನೋಡಿದುದಕ್ಕೆ ಅವರು, 'ಬೇಕಾದ್ರೆ ನಾನು ಈಗ್ಲೂ ವಿತ್‌ಡ್ರಾ ಮಾಡ್ಕಂತೀನಿ' ಎಂದರು.

ನಾಮಿನೇಶನ್ ಮಾಡುವ ತಾರೀಕು ಮೊನ್ನೆಗೇ ಮುಗಿದಿರುವುದು ವೆಂಕಟೇಶನಿಗೂ ಗೊತ್ತಿರುವ ಸಂಗತಿ. ಆದರೆ ಅವನು ಅದನ್ನು ಹೇಳಲಿಲ್ಲ. 'ನೋಡಿ ದಿವಾನ್‌ರೆ, ಎಲೆಕ್ಷನ್‌ಗೆ ನಿಲ್ಲೋರೇ ಒಂದು ಪಂಗಡ. ನಿಂತೋರ ಕಡೆ ಜೈ ಅಂತ ಕೂಗಿ ಕೂಗಿಸಿ ಕೆಲಸ ಮಾಡ್ತೋರೇ ಇನ್ನೊಂದು ಪಂಗಡ. ನಾನೇನಿದ್ರೂ ಎರಡನೇ ಪಂಗಡಕ್ಕೆ ಸೇರಿದೋನು. ನವಿಲು ಕುಣೀಬೇಕಾದದ್ದೇ. ಹಾಗಂತ ಕೆಂಬೂತ ಪುಕ್ಕ ತರ್‌ಕಂಡ್ರೆ ಆಗುತ್ತೆಯೆ? ಆ ನಾರಾಯಣರಾಯ, ಇದ್ದ ನಾಲ್ಕೆಕರೆ ಜಮೀನು ಕಳ್ಕಂಡ್ ನಿಜವಾದ ಸೋಶಲಿಸ್ಟ್ ಆಗ್ತಾನೆ ನೋಡಿ.'

ಕೊನೆಯ ವಾಕ್ಯದಿಂದ ಮಂತ್ರಿ ಮತ್ತು ಅಭ್ಯರ್ಥಿಗಳಿಬ್ಬರಿಗೂ ಸಂತೋಷವಾಯಿತು. ಎಂದರೆ ತಾನು ಬೋರನಿಂಗಪ್ಪನವರ ಪರ ತ್ರಿಕರಣಪೂರ್ವಕ ಕೆಲಸ ಮಾಡುವುದಾಗಿ ವೆಂಕಟೇಶ ಒಪ್ಪಿಕೊಂಡಂತೆ. ಅಷ್ಟರಲ್ಲಿ ಸಕ್ಕರೆ ಹಾಕಿದ ಒಂದು ದೊಡ್ಡ ಲೋಟ ಹಾಲು ಬಂತು. ಮಂತ್ರಿಗಳೇ ಇಸಿದುಕೊಂಡು ಅದನ್ನು ವೆಂಕಟೇಶನಿಗೆ ಕೊಟ್ಟರು. ಅವನು ಪೂರ್ತಿ ಕುಡಿದ. ಹಾಲು ಕುಡಿಯುವುದೆಂದರೆ ವಚನ ಕೊಟ್ಟಂತೆ. ಮಂತ್ರಿಗಳು ಕೆಲವು ಹಳ್ಳಿಗಳ ಕಡೆಗೆ ಹೋಗಬೇಕಾಗಿತ್ತು. ಅವರು ಇನ್ನೂ ಶೇವ್, ಸ್ನಾನ ಮುಗಿಸಿರಲಿಲ್ಲ. ವೆಂಕಟೇಶ ಅವರಿಂದ

ಬೀಳ್ಕೊಂಡು ಮನೆಗೆ ಬಂದ.

ಮಂತ್ರಿ ಹೇಳಿಕಳಿಸಿ ಮಗ ಹೋಗಿರುವುದು ತಂದೆ ವೆಂಕಟರಮಣಯ್ಯನವರಿಗೆ ಗೊತ್ತಿತ್ತು. ಆದುದರಿಂದ ಅವನು ಹಿಂತಿರುಗುವುದನ್ನೇ ಅವರು ಚಟಪಟಿಸುತ್ತಾ ಕಾಯುತ್ತಿದ್ದರು. ಬಂದ ತಕ್ಷಣ ಕೇಳಿದರು: 'ಅದೇನಪ್ಪ ಕೇಳ್ದ?'

'ನೀನ್ಯಾಕೆ ಯೋಚನೆ ಮಾಡ್ತಿಯಪ್ಪ. ಬೋರ್‌ಸಿಂಗನ ಎಲೆಕ್ಷನ್‌ಗೆ ಕೆಲಸ ಮಾಡು ಅಂತ ಕೇಳುಕ್ಕೆ ಹೇಳಿಕಳಿಸಿದ್ದ.'

'ಇವಳ ವಿಷಯ?'

'ನಾನ್ ಹೇಳ್‌ಲಿಲ್ವೆ ನಿಂಗೆ, ಇವಳು ಕಟ್ಕತ್ತೀನಿ ಅಂದ್ರೂ ಅವರು ಕಟ್ಟಿಸ್ಕೊಳುಲ್ಲ. ಬರೆದಿಟ್ಕೊ ಬೇಕಾದ್ರೆ.'

'ಅವರವರೇ ರಿಜಿಸ್ಟರ್ ಮಾಡ್ಕಂಡ್ರೆ? ಮೆಜಾರ್ಟಿಗೆ ಬಂದೋರು....ಸರ್ಕಾರದ ಕಾನೂನು....' – ಎಂಬ ಅವರ ಮಾತನ್ನು ಅರ್ಧಕ್ಕೇ ತಡೆದು ಅವನು ಹೇಳಿದ: 'ಕಾನೂನು ತಗಂಡು ನೀರೊಲೆಗೆ ಎಸ್ದು ಎದ್ದು ಮಡಿ ಉಟ್ಕಂಡ್ ತಿಂಡಿ ತಿನ್ನು. ನಿಂಗೆ ಹೇಳಿದ್ರೆ ತಿಳಿಯುಲ್ಲ ಮಾಡುಲ್ಲ. ನೆನ್ನೆ ರಾತ್ರಿಯೂ ಊಟ ಮಾಡ್ಲಿಲ್ಲ' – ಎಂದು ಅವನು ಬಚ್ಚಲುಮನೆಗೆ ಹೋದ.

೫

ಮಂತ್ರಿಗಳು ಬೋರನಿಂಗಪ್ಪನವರೊಡನೆ ಶಿವಗೆರೆಗೆ ಹೋದರು. ಊರಿಗೆ ಕಾರು ಬಂದಿದೆ. ಮಂತ್ರಿಗಳೇ ಬಂದಿದ್ದಾರೆ. ಜನಗಳಲ್ಲಿ ಸಂಭ್ರಮ. ಹುಡುಗರು ಮಕ್ಕಳು ಕಾರಿನ ಹೊಳೆಯುವ ಮೇಲ್ಮೈಯಲ್ಲಿ ತಮ್ಮ ತಮ್ಮ ಮುಖ ನೋಡಿಕೊಳ್ಳುತ್ತಾ ಸುತ್ತಲೂ ನೆರೆದರು. ಇವರಿಬ್ಬರೂ ಪಟೇಲ್ ಲಂಕೇಗೌಡರ ಮನೆಯಲ್ಲಿ ಸೇರಿದರು. ಶಿವಗೆರೆ ಹೆಚ್ಚು ಕಡಿಮೆ ತಿರುಮಲಾಪುರದಷ್ಟೇ ದೊಡ್ಡದು. ಆದರೆ ಅಷ್ಟು ಪುರಾತನವಾದುದೂ ಅಲ್ಲ, ಪ್ರಸಿದ್ಧಿಯನ್ನೂ ಪಡೆದಿಲ್ಲ. ಪಾಳೆಯಗಾರರ ಕಾಲದಲ್ಲಿ ಕಟ್ಟಿದ ಊರು ಎಂದು ಜನಪದ ಇತಿಹಾಸವಿದೆ. ಆದರೆ ಶಾಸನ ಇತ್ಯಾದಿ ಮಾಹಿತಿ ರುಜುವಾತುಗಳಿಲ್ಲ. ಫಲವತ್ತಾದ ಹೊಲ, ನೀರಿನ ತಾಣವಿರುವ ಗದ್ದೆ, ಮತ್ತು ಫಲ ತುಂಬಿದ ತೆಂಗಿನ ತೋಟಗಳ ಮಧ್ಯದಲ್ಲಿದೆ.

ಮಂತ್ರಿಗಳೇ ಬಂದಿದ್ದಾರೆಂದು ಹೇಳಿಕಳಿಸಿದುದರಿಂದ ಅರ್ಧ ಗಂಟೆಯಲ್ಲಿ ಊರಿನ ಪ್ರಮುಖ ರೈತ ಬಾಂಧವರು ಲಂಕೇಗೌಡರ ಮನೆಯ ಒಳತೊಟ್ಟಿಯಲ್ಲಿ ಸೇರಿದರು. ಗೋಡೆಯ ಬದಿಯಲ್ಲಿ ಎರಡು ಕುರ್ಚಿ ಇದ್ದರೂ ಮಂತ್ರಿಗಳು ಕೆಳಗೆ ಎಲ್ಲರ ಜೊತೆ ಕುಳಿತರು. ಜನವೆಲ್ಲ ಸೇರಿದ ಮೇಲೆ ಎದ್ದು ನಿಂತು ಭಾಷಣ

ಮಾಡಿದರು: 'ರೈತ ಬಾಂಧವರೆ, ಅಣ್ಣ ತಮ್ಮಂದಿರೇ, ನಾನು ಭಾಷಣ ಮಾಡುಕ್ಕೆ ಬಂದಿಲ್ಲ. ನಮ್ಮ ನಮ್ಮ ಹಿತಚಿಂತನೆ ಮಾಡುಕ್ಕೆ ನಿಂತಿದೀನಿ. ಬೋರ್‌ನಿಂಗಪ್ಪ ನೋರ ಜೊತೆ ಬಂದಿದೀನಿ ಅಂತ ಅವರಿಗೆ ಓಟು ಕೇಳಾಕೆ ಬಂದಿದೀನಿ ಅಂತ ತಿಳ್ಕಾಬ್ಯಾಡಿ. ಅವರು ಗೆಲ್ಲಾದೂ ಬಿಡಾದೂ ಮುಖ್ಯವಲ್ಲ. ನಮ್ಮ ಸಮಾಜಕ್ಕೆ ಮತ್ತೆ ಬೂದುಗುಂಬಳಕಾಯಿ ಕತೆ ಆಗದಿದ್ದರೆ ಸಾಕು. ನಮ್ಮ ಹೆಂಡಿರ ಕೊರಳಿನ ತಾಳಿ ಇನ್ನೊಂದು ಸಲ ಕಿತ್ತುಹೋಗದಿದ್ದರೆ ಸಾಕು....'

ಎದುರಿಗೆ ಕೂತಿದ್ದ ಇಪ್ಪತ್ತೆರಡು ಇಪ್ಪತ್ತಮೂರರ ಪ್ರಾಯದ ಒಬ್ಬ ಹುಡುಗ ಪಕ್ಕದಲ್ಲಿದ್ದ ಹಿರಿಯರೊಬ್ಬರನ್ನು, 'ಅದೇನು ಬೂದುಗುಂಬಳಕಾಯಿ ಕತೆ?' ಎಂದು ತಗ್ಗಿದ ಧ್ವನಿಯಲ್ಲಿ ಕೇಳಿದ. ಅದು ಮಂತ್ರಿಗಳಿಗೆ ಕೇಳಿಸಿತು. ಅವರು ಕೇಳಿದರು : 'ಸಣ್ಣ ಹುಡುಗರು. ನಿಮಗೆ ತಿಳಿಯೂದಿಲ್ಲ. ನಮ್ಮ ನಮ್ಮ ಇತಿಹಾಸ ನಾವು ತಿಳ್ಕಂಡಿರಬೇಕು. ಯಾರ ಮನೆಯಪ್ಪಾ ನೀನು?'

'ಕೊಪ್ಪಲಮನೆ ಮರಿಯಣ್ಣನ ಮಗ' – ಎಂದು ಪಕ್ಕದಲ್ಲಿ ಕುಳಿತಿದ್ದ ಲಂಕೇಗೌಡರು ಹೇಳಿದರು.

'ಮರಿಗೌಡರ ಮಗನಾ? ತುಮಕೂರಿನಾಗೆ ಓದ್ತಿದೀಯ? ಯಾವ ಕ್ಲಾಸು?'

ತಾನು ಓದುತ್ತಿರುವ ಊರು ನೆನಪಿನಲ್ಲಿರುವ ಮಟ್ಟಿಗೆ ಮಂತ್ರಿಗಳು ತನ್ನನ್ನೂ ತನ್ನ ತಂದೆಯನ್ನೂ ಬಲ್ಲರೆಂದು ತಿಳಿದು ಹುಡುಗನಿಗೆ ಹೆಮ್ಮೆಯಾಯಿತು. 'ಜೂನಿಯರ್ ಬಿ.ಎಸ್ಸಿ.' – ಎಂದ.

'ಗುಡ್. ಹಿಸ್ಟರಿ ಓದಿದ್ದರೆ ಗೊತ್ತಾಗ್ತಿತ್ತು. ನಾನೇ ಹೇಳ್ತೀನಿ ಕೇಳು: ಶ್ರೀರಾಮ ಕಾಡಿಗೆ ಹೋಗಿ ಇತ್ತಲಾಗಿ ದಶರಥನೂ ಸತ್ತಮ್ಯಾಲೆ ಭರತನ ರಾಜ್ಯ ವಾಯಿತು. ಮಂತ್ರಿ ಸುಮಂತ ಎಷ್ಟು ಹೇಳಿದರೂ ಭರತ ಕಂದಾಯ ವಸೂಲು ಮಾಡಲಿಲ್ಲ. ರೈತರ ಹಣ ಕಿತ್ಕಂಡು ಕಷ್ಟ ಯಾಕೆ ಕೊಡಬೇಕು ಅನ್ನೂ ಧರ್ಮ ಬುದ್ಧಿ ಭರತ ಮಹಾರಾಜಂದು. ರೈತರೆಲ್ಲ ಅನುಕೂಲವಾದರು. ಯುದ್ಧಮಾಡಿ ರಾವಣನನ್ನ ಕೊಂದು ಲಂಕೆಯಿಂದ ಶ್ರೀರಾಮ ಅಯೋಧ್ಯೆಗೆ ಬಂದನಲ್ಲ. ಅದ್ದೂರಿಯಿಂದ ಪಟ್ಟಾಭಿಷೇಕ ಮಾಡಿಸ್ಕಳಾಕೆ ಹಣ ಬೇಕಾಗಿತ್ತು. ಖಜಾನೆ ನೋಡಿದರೆ ಖಾಲಿ. 'ಭರತಾ, ಕಂದಾಯಾನೆಲ್ಲ ಏನು ಮಾಡ್ದೆ?' – ಅಂತ ಕೇಳಿದ. 'ಕಂದಾಯ ಎತ್ತಲೇ ಇಲ್ಲ. ದಿನಾ ನಾಲ್ಕು ಹೂವು ತಂದು ನಿನ್ನ ಪಾದಪೂಜೆ ಮಾಡ್ಕಂಡಿದ್ದೆ' – ಅಂತ ಭರತ ಉತ್ತರಕೊಟ್ಟ.

"ರೈತರು ಅನುಕೂಲವಾಗಿದ್ದುದ ಕಂಡು ಬ್ರಾಹ್ಮಣ ಮಂತ್ರಿ ಸುಮಂತನಿಗೆ ತಡೀಲಿಲ್ಲ. 'ಪ್ರಭೂ. ನಾನು ಮದಲೇ ಹೇಳ್ದೆ. ನೀವು ತಮ್ಮ ಕೇಳಲಿಲ್ಲ. ಈಗಲೂ ನಾನು ಹೇಳಿದ ಹಂಗೆ ಮಾಡಿ' – ಅಂತ ಅವನು ರಾಮನಿಗೆ ಒಂದು ಕುತಂತ್ರ

ಹೇಳಿಕೊಟ್ಟ. ಅದರಂತೆ ರಾಮ ರೈತರನ್ನೆಲ್ಲ ಕರೆದ. ಎಲ್ಲರಿಗೂ ಒಂದೊಂದು ಬೂದುಗುಂಬಳ ಬೀಜ ಕೊಟ್ಟು ಹೇಳಿದ: 'ನೋಡಿ, ನಾನೂ ಒಂದು ಬೀಜ ಇಟ್ಕೊಂಡಿದೀನಿ. ಇದನ್ನ ಹಾಕಿ ನಾನು ಬೆಳೀತೀನಿ. ನೀವು ಬೆಳೆದು ತಲಾ ಒಂದೊಂದು ದೊಡ್ಡ ಬೂದುಗುಂಬಳಕಾಯಿ ತರಬೇಕು. ನಿಮ್ಮ ಕಾಯಿ ನಾನು ಬೆಳೆದದ್ದರ ತೂಕ ಇರಬೇಕು. ಕಡಿಮೆಯಾಯ್ತು, ವ್ಯತ್ಯಾಸ ಬರುತ್ತಲ, ಅವರ ತೂಕ ಬಂಗಾರ ಕೊಡಬೇಕು. ಇಲ್ದೆ ಇದ್ರೆ ಶಿರಚ್ಛೇದನ ಮಾಡುಸ್ತೀನಿ.'

"ರೈತರದು ಯಾವಾಗಲೂ ನಂಬಿಕೆಯ ಸ್ವಭಾವ. ಅವರು ಸರಿಯಾಗಿ ಪರೀಕ್ಷೆ ಮಾಡಲೇ ಇಲ್ಲ. ಅವರಿಗೆ ಕೊಟ್ಟಿದ್ದ ಬೀಜಗಳನ್ನೆಲ್ಲ ಸುಮಂತ ಹುರಿಸಿ ಇಟ್ಟಿದ್ದ. ಬೀಜ ಹಾಕಿ, ಗೊಬ್ಬರ ಕೊಟ್ಟು ದಿನಾ ನೀರು ಹುಯ್ದರೂ ಅದು ಮೊಳೀಲೂ ಇಲ್ಲ. ರಾಮ ಹಾಕಿದ ಒಳ್ಳೇ ಬೀಜ ಮಾತ್ರ ಬೆಳೆದು ದಪ್ಪ ಕಾಯಿ ಬಿಟ್ಟಿತು. ಆಮೇಲೆ ಒಂದು ದಿನ ರಾಮ, 'ಎಲ್ಲರೂ ಬೂದುಕುಂಬಳಕಾಯಿ ತರಬೇಕು, ಇಲ್ಲವೆ ಇದ್ರೆ ಚಿನ್ನ ತರಬೇಕು' ಅಂತ ಡಂಗುರ ಸಾರಿಸಿದ. ರೈತರು ಬಂದು, 'ಪ್ರಭೂ, ನಾವು ಎಷ್ಟೇ ಕಷ್ಟಪಟ್ಟರೂ ಬೀಜ ಚಿಗುರಲಿಲ್ಲ' ಅಂತ ಅಡ್ಡ ಬಿದ್ದರು. ರಾಮ ಕೇಳ್ತಾನೆಯೆ? ರಾಜ ಕೇಳಿದರೂ ದುರಾಶೆಯ ಬ್ರಾಹ್ಮಣ ಮಂತ್ರಿ ಬಿಡ್ತಾನೆಯೆ? ಬಿಡಲೇ ಇಲ್ಲ. ಶಿರಚ್ಛೇದನದ ಭಯ ಹಾಕಿದರು. ಒಬ್ಬೊಬ್ಬ ರೈತನೂ ಒಂದು ಭಾರೀ ಬೂದುಗುಂಬಳಕಾಯಿ ತೂಕದ ಚಿನ್ನ ಎಲ್ಲಿ ತರ್ತಾನೆ? ಇದ್ದಬದ್ದದ್ದು ತಂದು ಹೇರಿದರೂ ತೂಕ ಏರಲಿಲ್ಲ. ಕೊನೆಗೆ ರೈತರು ತಮ್ಮ ಹೆಂಡತಿಯರ ಕೊರಳಿನ ತಾಳಿ ಕಿತ್ತು ತಂದು ಹಾಕೂತನಕ ಮಂತ್ರಿ ಸುಮ್ಮನಾಗಲಿಲ್ಲವಂತೆ. ಹೀಗೆ ಸುಮಂತ ರೈತ್ರನ್ನೆಲ್ಲ ಸೂರೆಮಾಡ್ದ."

ಬಿ.ಎಸ್‌ಸಿ.ಯಲ್ಲಿ ವಿಜ್ಞಾನ ಓದುವ ಹುಡುಗ ಭಾರತ ದೇಶದ ರೈತರ ಈ ಇತಿಹಾಸವನ್ನು ತದೇಕಚಿತ್ತನಾಗಿ ಕೇಳುತ್ತಿದ್ದ. ಅವನ ಕಣ್ಣುಗಳೆರಡೂ ಮಿಸುಕಾಡದೆ ತೆರೆದು ನಿಂತಿದ್ದುವು. ಮಂತ್ರಿಗಳು ಮುಂದೆ ಹೇಳಲು ಬಾಯಿ ತೆರೆಯುವವರಲ್ಲಿದ್ದರು. ಅಷ್ಟರಲ್ಲಿ ಭಾಗವತ ಚಿನ್ನೇಗೌಡ ಎದ್ದು ನಿಂತು ಮಾತನಾಡಿ ಬಿಟ್ಟ. ಚಿನ್ನೇಗೌಡ ಹದಿನೈದು ಯಕ್ಷಗಾನವನ್ನು ಬಾಯಿಪಾಠದಲ್ಲಿ ಕಲಿತಿರುವ ವಿದ್ವಾಂಸ. ಅವನು ಕಲಿಸಿದ 'ಕೃಷ್ಣಾರ್ಜುನರ ಕಾಳಗ'ಕ್ಕೆ ಮೈಸೂರಿನ ದಸರಾ ವಸ್ತುಪ್ರದರ್ಶನದಲ್ಲಿ ಸಹ ಆಡಿಸುವ ಅವಕಾಶ ಸಿಕ್ಕಿತ್ತು.

"ಮೂಲಕತೆ ಹಂಗಲ್ಲ ಇರೂದು. ಮಂತ್ರಿ ಸುಮಂತನ ಹೆಸರೇ ಬರೂದಿಲ್ಲ. ಶ್ರೀರಾಮಚಂದ್ರ ಹುರಿದ ಬೀಜಾನೂ ಕೊಡಲಿಲ್ಲ. ಒಳ್ಳೇ ಬೀಜಾನೇ ಕೊಟ್ಟಿದ್ದ. ಆದ್ರೆ ಅಹಂಕಾರದಿಂದ ಮದೋನ್ಮತ್ತರಾದ ರೈತರು ಬೀಜ ಹಾಕಲೇ ಇಲ್ಲ. ಕೊನೆಗೆ ಶ್ರೀರಾಮಚಂದ್ರನ ಕುಂಬಳಕಾಯಿಯ ಮೇಲೆ ಭೂಮಿತೂಕದ ಅಂಜ-

ನೇಯ ಸೊಳ್ಳೆಯ ರೂಪಮಂ ಧರಿಸಿ ಕೂತುಕೊತ್ತಾನೆ. ರೈತರು ಮಾಡಿಸಿದ್ದ ಚಿನ್ನದ ಗೂಟ, ಚಿನ್ನದ ಬೀಸೂಕಲ್ಲುಗಳು, ಚಿನ್ನದ ಒನಕೆ, ಚಿನ್ನದ ಹಂಡೆ, ಗಡಿಗೆ, ಚಿನ್ನದ ತಿರುವುವ ಗುಂಡುಗಳೆಲ್ಲ ಸೇರಿಯೂ ತಕ್ಕಡಿ ಏರದಿದ್ದಾಗ ರಾಮಚಂದ್ರ, 'ಲೇ, ನಿಮ್ಮ ಪತ್ನಿಯರ ಕೊರಳ ಮಾಂಗಲ್ಯಮಂ ತಂದು ತಕ್ಕಡಿಯ ತೋನಮಂ ಸರಿಮಾಡಿರಿ' ಅಂತ ಅಪ್ಪಣೆ ಮಾಡಲು, ಅವರೆಲ್ಲ ಪತ್ನಿಯರ ಕೊರಳಿಗೆ ಕೈ ಹಾಕಲು, ಅಂದರೇನರ್ಥ?, ಅವರ ಅಹಂಕಾರ ಅಳಿಯಲು ಕ್ಷಮಾಮತಿಯೂ ದಯಾಳುವೂ ಆದ ರಾಮಚಂದ್ರರ್ನೇ ರೈತರಿಗೆಲ್ಲ ಅಭಯವಿತ್ತು ಅವರವರ ಚಿನ್ನ ವನ್ನು ಅವರವರಿಗೇ ಕೊಟ್ಟು, ರಾಮರಾಜ್ಯದಲ್ಲಿ ಯಾರ ಕಣ್ಣಲ್ಲೂ ನೀರು ಬರ ಕೂಡದೆಂದು ಅಪ್ಪಣೆ ಮಾಡಿದನು."

ಭಾಗವತ ಚಿನ್ನೇಗೌಡನಿಗೆ ವ್ಯವಹಾರಜ್ಞಾನ ಕಡಿಮೆ ಎಂಬುದನ್ನು ಬಲ್ಲ ಪಟೇಲ ಲಂಕೇಗೌಡರು, 'ಲೇ ಭಾಗವತ, ಮುಚ್ಕಂಡ್ ಕುಂತ್‌ಕಳ್ಳಾ. ನಿನ್ಯಾರು ಕತೆ ಏಳು ಅಂತ ಕರ್‌ದೋರು?' ಎಂದರು. ಚಿನ್ನೇಗೌಡ ಪೆಚ್ಚಾಗಿ ಕುಳಿತುಕೊಂಡ. ಆದರೆ ತಾನು ತಿಳಿದಿರುವ ಕಥೆಯ ಸತ್ಯದ ಬಗೆಗೆ ಅವನ ಶ್ರದ್ಧೆ ಮಾತ್ರ ಅಚ್ಚ ಳಿಯಲಿಲ್ಲ. ಬೆಳಗ್ಗೆದ್ದರೆ ತಾಲ್ಲೂಕು ಜಾಗವಾದ ತಾವರೆಕೆರೆಯ ಸ್ಟ್ಯಾಂಡ್ ಹೋಟಲಿನಲ್ಲಿ ಸಾಂಬಾರ್ ತಿಂದು ರೂಢಿಯಾಗಿದ್ದ ಶಿಂಗೇಗೌಡರು ನಡುವೆ ಬಾಯಿಹಾಕಿದರು: 'ಆ ಭಾಗವತ ಅಂತಾನೆ ಅಂತ ಕೇಳಿ. ಇದೆಲ್ಲ ಸುಳ್ಳೇಯ. ಬೂದುಗುಂಬಳಕಾಯಿ ಮಜ್ಜಿಗೆ ಆನ್ರ ವೈನಾಗಿರ್ತದೆ. ಇದ್ನ ರೈತರೂ ತಿಂದ್ರೆ ನಮಗೆ ಸಿಕ್ಕಾಕುಲ್ಲ ಅಂತ ಯಾವನೋ ಹಾರುವಯ್ಯ ಹಿಂಗ್ ಕತೆ ಕಟ್ಟಿದನಂತೆ. ಹಂಗಂತ ಓಟಲು ಕ್ರಿಷ್ಣಬಟ್ಟರೇ ಅಂದ್ರು. ಉಡುಪಿ ಕಡೆ ಈ ಕತೆಯೇ ಇಲ್ವಂತೆ. ಈಗ ನಮ್ಮೂರ ರೈತರೆಲ್ಲ ಬೂದುಗುಂಬಳಕಾಯಿ ಎಸರು ಮಾಡ್ಕಂಡ್ ಮೋಪಾಗಿ ಹ್ವಡೀತಾರೆ.'

ಪಟೇಲ ಲಂಕೇಗೌಡರೂ ಸೇರಿ ಐದಾರು ಜನಗಳನ್ನು ಬಿಟ್ಟರೆ ಮಂತ್ರಿಗಳು ಹೇಳಿದ ಕಥಾರೂಪದ ಅಂತರಾರ್ಥ ಉಳಿದವರಿಗೆ ಆಗಲೇ ಇಲ್ಲ. ಭಾಗವತ ಚಿನ್ನೇಗೌಡ ಮತ್ತು ಶಿಂಗೇಗೌಡರನ್ನು ಗದ್ದರಿಸಿಕೊಳ್ಳಬೇಕೆಂಬಷ್ಟು ಸಿಟ್ಟು ಬಂತು ಮಂತ್ರಿಗಳಿಗೆ. ಆದರೆ ತಾಳ್ಮೆಗೆಡಬಾರದು. ಅಷ್ಟು ತಿಳಿವಳಿಕೆ ಇದ್ದರೆ ನಮ್ಮ ರೈತಜನಾಂಗ ಯಾಕೆ ಇಷ್ಟು ಹಿಂದಿಳಿಯುತ್ತಿತ್ತು ? ಅಲ್ಲದೆ ಚುನಾವಣೆ ವ್ಯವ- ಹಾರದಲ್ಲಿ ಜನಗಳೊಡನೆ ಸಿಟ್ಟು ತೋರಿಸುವವನು ಗೆಲ್ಲುವುದಿಲ್ಲ ಎಂಬ ನಿಧಾನ ದಿಂದ ಮತ್ತೆ ಮಾತನಾಡಲು ಆರಂಭಿಸಿದರು. 'ಒಂದೊಂದು ಕಡೆ ಒಂದೊಂದು ಥರ ಕತೆ ಇದೆ. ಯಾವ ಥರ ತಗಂಡ್ರೂ ಒಟ್ಟಿನಲ್ಲಿ 'ಗೋಸ್ವಾರೆ ಏನು? ಹಿಂದಿ ನಿಂದಲೂ ರೈತರನ್ನ ಉಳಿದೋರು ಸುಲಿದುತಿಂದರು. ಈಗಲೂ ತಿಂತಿದಾರೆ.

ಬ್ರಾಹ್ಮಣ ಮಂತ್ರಿಗಳೇ ಆಗಿರಭೌದು. ಕ್ಷತ್ರಿಯ ರಾಜರೇ ಆಗಿರಭೌದು. ನಮ್ಮ ಶಿಂಗೇಗೌಡರು ಹೇಳೂಹಂಗೆ ಈ ಕತೆಯೇ ಸುಳ್ಳಾಗಿ ಬೂದುಗುಂಬಳಕಾಯಿ ತಮಗೇ ಸಿಕ್ಕಲಿ ಅಂತ ಬ್ರಾಹ್ಮಣರು ಕಟ್ಟಿರೂದೇ ನಿಜವಾದರೂ, ಮೂರ್ಖರಾದ ರೈತಬಾಂಧವರನ್ನ ಸುಲಿದು ತಿನ್ನುಕ್ಕೆ ಅವರು ಕತೆ ಪುರಾಣ ಹುಟ್ಟಿಸಿದ್ದು ಸುಳ್ಳಲ್ಲವಲ್ಲ. ನಮ್ಮ ಜನ ಯಾವುದಕ್ಕೂ ಪರಾವಲಂಬಿಗಳಾಗಬ್ಯಾಡ್ದು. ದೇಶ ಸ್ವಾವಲಂಬಿಯಾಗಬೇಕು ಅಂತ ನೆಹ್ರೂ ಹೇಳ್ತಾರೆ. ಹಾಗೆಯೇ ರೈತ ಜನಾಂಗ ಕೂಡ ಪರಾವಲಂಬಿಯಾಗಬಾರದು. ನಮ್ಮ ಮದುವೇಲಿ ಕೂಡ ಬ್ರಾಹ್ಮಣ ಪುರೋಹಿತರನ್ನ ಯಾಕೆ ಕರೀಬೇಕು? ಜೋಯಿಸರ ಧಾರೆ ಬದಲು ಬಳಗಧಾರೆ ಮಾಡಿದರೆ ಮಕ್ಕಳಾಗುಲ್ಲ ಅಂತೈತಾ? ಅವರು ಸಾವಿರಾರು ವರ್ಷ ದಿಂದ ನಮ್ಮ ಎದೆ ಕೆರ್‍ಕಂಡು ತಿಂದದ್ದು ಸಾಕು. ಗುರುಗಳು ಅಂತ ಅವರನ್ನ ಪೂಜೆ ಮಾಡಿದ್ದೂ ಸಾಕು. ನಮ್ಮದೇ ಮಠ ಕಟ್ಟೋಣ. ನಮ್ಮದೇ ಸ್ಕೂಲು ಕಾಲೇಜು ತೆಗೆಯೋಣ. ಅಷ್ಟಾದರೆ ಸಾಲದು. ನಮ್ಮೋರೇ ಆಡಳಿತ ಮಾಡಬೇಕು. ರಾಜತ್ವ ಹೋಯಿತು. ಪ್ರಜಾಪ್ರಭುತ್ವ ತಂದಿದ್ದೀವಿ. ನಿಮಗೇ ಗೊತ್ತಿದೆ: ನಾನು ಮಹಾತ್ಮ ಗಾಂಧಿಯವರ ಆಶ್ರಮದಲ್ಲಿದ್ದೆ. ಜೈಲಿನಲ್ಲಿದ್ದೆ. ಪ್ರಜಾಪ್ರಭುತ್ವ ತರುಕ್ಕೆ ಅಂತ ಪಡಬಾರದ ಕಷ್ಟ ಬಿದ್ದೆ. ಅದೆಲ್ಲ ಯಾಕೆ? ನಮ್ಮ ರೈತ ಬಾಂಧವರು ಶೂದ್ರರಾಗಿರೂದು ಬಿಟ್ಟು ಮೇಲೆ ಬಂದು ಕ್ಷತ್ರಿಯರಾಗಬೇಕು, ರಾಜ್ಯ ಆಳಬೇಕು, ಎಲೆಕ್ಷನ್ನಲ್ಲಿ ನಿಂತು ಗೆಲ್ಲಬೇಕು ಅಂತ. ಇದರಲ್ಲಿ ನನ್ನ ಸ್ವಂತದ್ದು ಏನೂ ಇಲ್ಲ' ....ಎಂದು ಒಂದು ಗಂಟೆ ಭಾಷಣ ಮಾಡಿದರು. ಬಿ.ಎಸ್‍ಸಿ. ವಿದ್ಯಾರ್ಥಿ ನಂಜುಂಡೇಗೌಡ ಕೇಳುಕೇಳುತ್ತಾ ಮಂತ್ರಮುಗ್ಧನಾದ. ಉಳಿದವರು ಸಹ ಮೆಚ್ಚಿಕೊಂಡು, ಮಂತ್ರಿಗಳ ತಂದೆ ಪಟೇಲ್ ತಿರುಮಲೇಗೌಡರ ಪುಣ್ಯವನ್ನು ಕೊಂಡಾಡಿದರು. ಮಂತ್ರಿಗಳ ನಂತರ ಬೋರನಿಂಗಪ್ಪನವರು ಮಾತನಾಡಿ, ರೈತ ಸಮಾಜಕ್ಕೆ ತಮ್ಮ ಜೀವವನ್ನು ತೆಗೆದಿಟ್ಟಿರುವುದಾಗಿ ತಿಳಿಸಿದರು.

೬

ಉಳಿದ ಮುಖ್ಯವಾದ ಊರುಗಳನ್ನು ಸುತ್ತಿಕೊಂಡು ಮಂತ್ರಿಗಳು ಬೆಂಗಳೂರಿಗೆ ಹೋದಾಗ, ಮಂಡ್ಯ ಜಿಲ್ಲೆಯ ಧುರೀಣರಲ್ಲೊಬ್ಬರಾದ ನಾಗೇಗೌಡರು ಬರೆದಿದ್ದ ಕಾಗದ ಅವರ ಮೇಜದ ಮೇಲಿತ್ತು. ಕವರಿನ ಮೇಲೆ ಇಂಗ್ಲಿಷಿನಲ್ಲಿ 'ಪರ್ಸನಲ್' ಎಂದು ಬರೆದಿದ್ದುದರಿಂದ ಅವರ ಆಪ್ತಕಾರ್ಯದರ್ಶಿ ಅದನ್ನು ಒಡೆದಿರಲಿಲ್ಲ. ಪತ್ರದ ಸಾರಾಂಶ ಅನಿರೀಕ್ಷಿತವೂ ಅಪೇಕ್ಷಣೀಯವೂ ಆಗಿತ್ತು:

ಮಂಡ್ಯದ ಎಂ.ಎಲ್.ಎ. ಕೆಂಪಣ್ಣನವರು ಮಂತ್ರಿಗಳಿಗೆ ಗೊತ್ತಿರುವವರೇ. ಇಬ್ಬರೂ ಒಂದೇ ಜನಾಂಗ. ಒಂದೇ ಬೆಡಗಿಗೆ ಸೇರಿದವರು. ಕೆಂಪಣ್ಣನವರು ಧಂಡಿಯಾದ ಕುಳ: ಒಟ್ಟು ನೂರು ಎಕರೆ ಗದ್ದೆಯ ಜಮೀನುದಾರರಾಗಿರುವುದರ ಜೊತೆಗೆ ಸಕ್ಕರೆ ಕಾರ್ಖಾನೆಯ ಆಡಳಿತ ಸಮಿತಿಯ ಸದಸ್ಯರಾಗಿದ್ದಾರೆ. ಅವರ ಹತ್ತು ಬಸ್ಸುಗಳು ಮಳವಳ್ಳಿ, ತಿರುಮಕೂಡಲು ನರಸೀಪುರ ಮೊದಲಾದ ಕಡೆ ಲೈನುಗಳಲ್ಲಿ ತಿರುಗುತ್ತಿವೆ. ಅವರ ಎರಡನೆಯ ಮಗಳು ಚಿ॥ ಸೌ॥ ಕುಮುದಿನಿ ಮಂಡ್ಯದ ಕಾಲೇಜಿನಲ್ಲಿ ಇಂಟರ್‌ಮೀಡಿಯೆಟ್ ಓದಿದ್ದಾಳೆ. ತುಂಬ ಲಕ್ಷಣವಾದ ಹೆಣ್ಣು. ಮಂತ್ರಿಗಳಾದ ಮೇಲಗಿರಿಗೌಡರು ಮನಸ್ಸು ಮಾಡಿ ಅವರ ಮಗ ಶ್ರೀನಿವಾಸನಿಗೆ ತಂದುಕೊಂಡರೆ ಮುಂದೆ ಉಭಯತಾಪಿ ಕಲ್ಯಾಣವಾಗುತ್ತದೆ. ಈ ವಿಷಯದಲ್ಲಿ ತಕ್ಷಣ ಜವಾಬು ಬರೆಯಬೇಕು.

ಅವರು ಕಾಗದವನ್ನು ಓದಿ ಮುಗಿಸಿಡುವ ಹೊತ್ತಿಗೆ, ಹೊರಗೆ ಹೋಗಿದ್ದ ಶ್ರೀನಿವಾಸ ಮನೆಗೆ ಬಂದ. ತಂದೆ ಇದೀಗ ಬೆಂಗಳೂರಿಗೆ ಹಿಂತಿರುಗಿರುವುದನ್ನು, ಹೊರಗಿದ್ದ ಧೂಳು ಕೂತಿದ್ದ ಕಾರನ್ನು ನೋಡಿಯೇ ಅವನು ಅರ್ಥಮಾಡಿಕೊಂಡಿದ್ದ. ತಂದೆ, ಮಗ, ಇಬ್ಬರೂ ಕೂಡಿ ಊಟ ಮಾಡಿದರು. ಆದರೆ ಅವನು ತನ್ನ ಸತ್ಯಳ ಮದುವೆಯ ವಿಷಯವಾಗಿ ತಾನಾಗಿಯೇ ಮಾತು ತೆಗೆಯಲಿಲ್ಲ. ಊಟವಾದ ಮೇಲೆ ತನ್ನ ಕೋಣೆಗೆ ಹೊರಟುಹೋದ. ಮಂತ್ರಿಗಳು ಸಾಮಾನ್ಯವಾಗಿ ಮಲಗುವುದು ರಾತ್ರಿ ಹನ್ನೊಂದು ಹನ್ನೆರಡರ ಸುಮಾರಿಗೆ. ಆದರೆ ಈ ದಿನ ಅವರಿಗೆ ಆಯಾಸವಾಗಿತ್ತು. ತಾವು ಹಿಂತಿರುಗಿರುವ ವಿಷಯವನ್ನು ಟೆಲಿಫೋನ್ ಮಾಡಿ ಯಾರಿಗೂ ತಿಳಿಸಲಿಲ್ಲ. ತಮ್ಮ ಕೋಣೆಗೆ ಹೋಗಿ ಮಲಗಿದರು. ಆದರೆ ನಿದ್ರೆ ಬರಲಿಲ್ಲ. ಇನ್ನೂ ಹೊತ್ತಾಗಿಲ್ಲ, ಬಂದಿಲ್ಲ ಎಂದುಕೊಂಡು ಮಗ್ಗುಲು ಹೊರಳುತ್ತಿದ್ದರು. ಹನ್ನೆರಡು ಕಳೆದರೂ ಬರಲಿಲ್ಲ. ಗಂಡ ನಿದ್ದೆಮಾಡದೆ ಹೊರಳುತ್ತಿರುವುದು, ಪಕ್ಕದ ಮಂಚದಲ್ಲಿ ಮಲಗಿದ್ದ ರಂಗಮ್ಮನಿಗೆ ಕೇಳುತ್ತಿತ್ತು. ಆಕೆಗೂ ಬರಬೇಕಾಗಿದ್ದ ನಿದ್ದೆ ಬಂದಿರಲಿಲ್ಲ. ಅವಳೇ ಕೇಳಿದಳು: 'ಮಲ್ಲೇಶನ ಮದುವೆ ಏನು ಮಾಡ್ತೀರ?'

ಮಗ ಶ್ರೀನಿವಾಸನ ಹುಟ್ಟುಹೆಸರು ತಿರುಮಲೇಗೌಡ ಎಂದು. ಕಾಲೇಜಿಗೆ ಹೋದಮೇಲೆ ಅವನು ಶ್ರೀನಿವಾಸನೆಂದು ಬದಲಾಯಿಸಿಕೊಂಡಿದ್ದಾನೆ. ಆದರೆ ಮನೆಯಲ್ಲಿ ಮಲ್ಲೇಶನೆಂದು ಕೂಗುತ್ತಾರೆ. ತಿರುಮಲ ಎಂಬ ಅಜ್ಜನ ಹೆಸರೇನೋ ಸರಿ. ಆದರೆ ಅವರು ಬದುಕಿರುವಾಗ ಅದೇ ಹೆಸರನ್ನು ಚಿಕ್ಕವರು ಕೂಗಲು ಸಂಕೋಚವಾಗಿ ಮೊದಲ ಎರಡು ಅಕ್ಷರಗಳನ್ನು 'ಲ'ಕ್ಕೆ 'ಲ' ಒತ್ತು ಸೇರಿಸಿ ಕರೆಯುತ್ತಿದ್ದರು. ಹೊಸ ಹೆಸರು ಹೊರಗೆಲ್ಲ ಚಾಲ್ತಿಯಾಯಿತೇ ಹೊರತು

ಮನೆಯಲ್ಲಿ ಹಳೆಯ ರೂಢಿ ಹೋಗಲಿಲ್ಲ.

'ಹೂಂ. ಏನು ಮಾಡಾದು ನೀನೇ ಹ್ಯೇಳು.'

'ನಾನೇನು ಪೂರ್ತಿ ಯಜಮಾಂತಿಯಾ? ಊರಾಗೆ ದೊಡ್ಡಗೌಡರೇನಂದ್ರು?'

'ಅವರುದ್ ಹ್ಯಂಗಾರ ಆಯ್ತದೆ. ನಿಂದ್ ಹ್ಯೇಳು.'

'ನೀವೆಲ್ಲ ಹೂಂ ಅಂದ್ರೆ ನಂದೇನು?'

'ಅಡ್ಡ ಗ್ಯಾಡೆಮ್ಯಾಲೆ ದೀಪ ಇಟ್ಟ ಮಾತು ಬ್ಯಾಡ. ಆಗಭೌದು ಅಂತೀಯೋ ಬ್ಯಾಡ ಅಂತೀಯೋ, ನಿನ್ನ ಮನಸ್ಸು ಹೇಳು.'

'ಇರಾನೊಬ್ಬ ಮಗ. ಜೀವಕ್ಕೆ ಏನಾರ ಮಾಡ್ಕ್ಯಂಡ್ರೆ ಏನ್ ಗತಿ? ಅವಳುನ್ನೇ ಮಾಡ್ಕ್ಯಳ್ಳೇಳಿ.'

'ಪ್ರಾಣ ಕಣಕತ್ತೀನಿ ಅಂದ್ನಾ ನಿನ್‌ಕುಟ್ಟೆ?'

'ಹೂಂ.'

'ಆ ಹಾರುವರ ಹುಡುಗಿ ನಮ್ಮನ್ಲಿ ಹ್ಯಂಗೆ ವಗತನ ಮಾಡ್ತದಂತೆ?'

'ನಾನೇ ಬಿಡ್ಸಿ ಬಿಡ್ಸಿ ಕೇಳ್ದೆ. ಯಲ್ಲಾದಕ್ಕೂ ಒಪ್‌ಕಂಡ್ಲು. ಮಾಂಸ ಒಂದು ತಿನ್ನಾಕುಲ್ಲ. ಉಳಿದುದ್ದೆಲ್ಲ ಮಾಡ್ತೀನಿ. ನೀವೇನ್ ನನ್ನ ಕಾಣ್‌ದೋರಾ? ಈ ಜಾತಿ ಗೀತಿ ಅನ್ನಾದೆಲ್ಲ ಸುಳ್ಳು ಅಂತು.'

'ನೀನು ಅವ್ಳನ್ನ ನೋಡಾಕ್ ಹ್ವಾಗಿದ್ಯಾ?'

'ಅವಳೇ ಬಂದಿದ್ಲು. ಮಲ್ಲೇಶ ಇವತ್ ಬೆಳಗಿನಾಗ ಕರ್ಕಂಡ್‌ಬಂದಿದ್ದ.'

'ಅವರಪ್ಪ ಏನಂದನಂತೆ ಪೂಜಾರಯ್ಯ?'

"ಅದೇನೂ ಹ್ಯೇಳ್ಲಿಲ್ಲ. ಬುಜದ ಮ್ಯಾಲೆ, ತಲೆಬುಲ್ಡೇಮ್ಯಾಗೆ, ಬೆನ್ನಲ್ಲಿ ಅರಳೆ ಹಾಕಿ ಕಟ್ಟಿತ್ತು. ಇದೇನು ಅಂದೆ. 'ಮಾಡಿ ಮೆಟ್ಲು ಜಾರಿ ಬಿದ್‌ಬಿಟ್ಟೆ, ಗಾಯವಾಯ್ತು. ಆಸ್ಪತ್ರೇಲಿ ಔಸ್ತಿ ಹಾಕ್ಯವ್ರೆ' – ಅಂದ್ಲು. ಅವಳು ಹ್ವಾದ ಮ್ಯಾಲೆ ಮಲ್ಲೇಶ ಅಂದ: ಅವರ ಅಪ್ಪಾಜಿ ನ್ಯನ್ನೆ ಬಂದಿದ್ರಂತೆ. ಸಿಟ್‌ನಾಗೆ ಹ್ವಡದ್‌ರಂತೆ. ಎಷ್ಟಾದರೂ ಹೆತ್ತ ಅಪ್ಪ. ಇವತ್ತು ಹೊಡದ್ರು. ನಾಳೀಕ್ ಮರುಗ್ತಾರೆ ಅಂತಂತೆ."

'ಹೂಂ' – ಎಂದು ಯಜಮಾನರು ಬೇರೆ ಮಗ್ಗುಲಿಗೆ ಹೊರಳಿದರು. ಯಜಮಾಂತಿಯೇ ಕೇಳಿದಳು: 'ದೊಡ್ಡ ಗೌಡ್ರು ಏನಂದ್ರು?'

'ಹೂಂ. ನಂಗೀಗ ನಿದ್ದೆ ಬತ್ತೈತೆ ಸುಮ್ನೀಕ್ಕ. ನಾಳೆ ಹ್ಯೇಳ್ತೀನಿ.'

'ನಾಳೀಕೇ ಹ್ಯೇಳಿ. ದೊಡ್ಡ ಗೌಡ್ರು ಹ್ಯಂಗೂ ಮಾಂಸ ಮಡ್ಡಿ ತಿನ್ನಾಕುಲ್ಲ. ನಾವೂ ಬುಟ್‌ಬುಡಾನ. ಅಲ್ಲಿಗ್ ಸರಿಯಾಯ್ತದೆ.'

ಅವರು ಮತ್ತೆ ಮಾತನಾಡಲಿಲ್ಲ. ಆಕೆ ಕಣ್ಣು ಮುಚ್ಚಿದಳು. ಅರ್ಧ ಗಂಟೆ

ಯಲ್ಲಿ ನಿದ್ರೆಹೊತ್ತಿತು. ಯಜಮಾನರು ಮಾತ್ರ ಇನ್ನೂ ತುಂಬ ಹೊತ್ತು ಹೊರ ಳಾಡುತ್ತಲೇ ಇದ್ದರು.

ನಾಳೆಯೆಲ್ಲ ಅವರು ಗಡಿಬಿಡಿಯಲ್ಲಿದ್ದರು. ಜೋರನಿಂಗಪ್ಪನವರ ಚುನಾವಣೆಯ ಬಗೆಗೆ ಪಕ್ಷದ ಅಧ್ಯಕ್ಷರನ್ನು ಕಂಡು ತಮ್ಮ ಪ್ರವಾಸದ ವರದಿ ಒಪ್ಪಿಸಬೇಕಾಗಿತ್ತು. ಮುಂದೆ ಹೀಗೆ ಹೀಗೆಯೇ ಮಾಡಬೇಕೆಂದು ಅಭಿಪ್ರಾಯಕೊಡಬೇಕಾಗಿತ್ತು. ವಿಧಾನಸೌಧದ ತಮ್ಮ ಆಫೀಸಿಗೆ ಸ್ವಲ್ಪ ಹೊತ್ತು ಹೋಗುವ ಕೆಲಸವಿತ್ತು. ಇದನ್ನೆಲ್ಲ ಮುಗಿಸಿ ಮನೆಗೆ ಬರುವ ವೇಳೆಗೆ, ಇವರ ಇಲಾಖೆಗೆ ಸಂಬಂಧಿಸಿದ ಕೆಲಸ ಮಾಡಿಕೊಳ್ಳಲು ಕೋಲಾರದ ಕಡೆಯ ಇಬ್ಬರು ಧುರೀಣರು ಬಂದರು. ಅವರ ಕೆಲಸವಾದ ಮೇಲೆ ಭೂಹಿಡುವಳಿಯ ಪರಿಮಿತಿಯ ಬಗೆಗೆ ಮಾತನಾಡಲು ಆರಂಭಿಸಿದರು. ಹೀಗಾಗಿ ರಾತ್ರಿ ಅವರು ಊಟಕ್ಕೆ ಏಳುವುದು ಹತ್ತು ಗಂಟೆಯಾಯಿತು. ಊಟವಾದ ಮೇಲೆ ಮಲಗುವ ಕೋಣೆಗೆ ಹೋದಾಗ ಹೆಂಡತಿ ತಾನಾಗಿಯೇ ಮಾತು ತೆಗೆಯಲಿಲ್ಲ. ಆದರೆ ಈಗಲೇ ಆಕೆಯೊಡನೆ ಮಾತನಾಡುವುದು ವಿವೇಕವೆಂದು ಬಗೆದು ಆರಂಭಿಸಿದರು: 'ನೋಡು, ನಾನು ನೀನು ಏನು ಮಾಡಿದ್ರೂ ಅವನು ಬದುಕಬೇಕು ಅಂತಲೇ ಅಲ್ವಾ?'

'ಊಂ.'

'ನಮ್ಗೆ ಅವನ್ನ ಬಿಟ್ರೆ ಯಾರವ್ರೆ?'

'ಯಲ್ಲಾ ಅವನೇ.'

'ಅವನ ಹೆಂಡ್ತೀಲಿ ಮಕ್ಳು ಕಾಣಬ್ಯಾಡ್ವಾ ನಾವ್ರು?'

'ಇದೇನ್ ಹಿಂಗಂತೀರ? ಮದುವೆ ಮಾಡಾದೇ ಮಕ್ಳಾಗ್ಲಿ ಅಂತ.'

'ಅವಳ ಅಪ್ಪ ಮದುವೆಗೆ ಮುದ್ಲೇ ಎಕ್ಡ ತಗಂಡ್ ಹ್ವಡದವ್ನೆ. ಅವಳೇನೋ ಹಟಕ್ಕೆ ಇವನುನ್ನ ಕಟ್ಕಂತಾಳೆ. ಏಟಾದ್ರೂ ಬ್ರಾಹ್ಮಣಯ್ಯ: ಗುಡೀ ಪೂಜಾರಿ. ದೇವರಿಗೆ ಮಂಗಳಾರತಿ ಮಾಡ್ತಾ ಅವನು ಶಾಪ ಹಾಕಿದ್ರೆ, ಇವಳ ಹೊಟ್ಟೇಲಿ ಗರ್ಬ ಕುಂಡ್ರುತ್ತೈತಾ?'

ರಂಗಮ್ಮ ಗಾಬರಿಗೊಂಡಳು. ತಾನು ವಿಷಯವನ್ನು ಯೋಚಿಸಿಯೇ ಇರಲಿಲ್ಲ. ಆಕಸ್ಮಾತ್ ಹಿಂಗೆ ಆದ್ರೂ ಆಗ್‌ಬೈದು. ಆಗೇ ಆಗ್ತದೆ. ಬ್ರಾಮ್ಮಣಶಾಪ ಸಳ್ಳೇದಲ್ಲ. ಮಂತ್ರಿಗಳು ತೀರ್ಮಾನ ಹೇಳುವವರಂತೆ ಅಂದರು: 'ಮ್ಯಾಲೆ ಹರಿಯೂ ನೀರು ಮ್ಯಾಲೆ ಹರೀಬೇಕು. ಕೆಳಗಿರೂ ನೀರು ಕ್ಯಳಗಿರಬೇಕು. ಎರಡುನ್ನೂ ಏಕ ಮಾಡ್ತೀನಿ ಅಂದ್ರೆ ಊರು ಉಳೀತ್ತೈತಾ? ಮನೆ ಉಳೀತ್ತೈತಾ?'

ಯಜಮಾನರಿಗೆ ಸ್ವಲ್ಪ ಹೊತ್ತಿನಲ್ಲಿ ನಿದ್ದೆ ಹೊತ್ತಿತು. ಯಜಮಾಂತಿಯ ನಿದ್ದೆ ಹಾರಿತು. ಮಗ ಏಳಿದ್ದುಕ್ಕೆ ಇವರು ಮೊನ್ನೆ ದಿನ ಒಪ್ಕಂಡ ಹಂಗೇ ಇತ್ತು.

ನಾನೇ ತರಲಿ ಮಾಡ್ತೀನಿ ಅನ್ನೂ ಹಂಗೆ ಅಂದಿದ್ರು. ಈ ವಳಗಿನ ಮಾತ ನಂಗೆ ಬಿಡಿಸಿ ಏಳಿರಲೇ ಇಲ್ಲ. ಯಾವ್ದೂ ತಿಳೀದೆ ಮುಂಗನ ಹಂಗೆ ನಾನು ಮಲ್ಲೇಶನ ಕೈಲಿ, ಹೂಂ ಕಣಪ್ಪ ಆಗ್ಲಿ ಅಂದ್‌ಬುಟ್ಟೆ, ಎಂದು ಯೋಚಿಸಿದ ಆಕೆ ಗಂಡನನ್ನು ಮೆಲ್ಲಗೆ ಕೂಗಿ ಕೇಳಿದಳು: 'ಮನ್ನೆ ದಿನ ಯಾಕೆ ಆಗ್ಲಿ ಅಂದಿದ್ರಿ?'

"ಗಲಾಟೇಲಿ ಆ ಕಡೆ ಗ್ಯಾನ ಹ್ವಾಗಿರಲಿಲ್ಲ. ನೆನ್ನೆ ರಾತ್ರೀನಾಗ ಒಂದು ಕನಸಾಯ್ತು. ಮಲ್ಲೇಶ ಅವಳುನ್ನೇ ಮಾಡ್ಕಂಡ ಹಂಗೆ, ಎಷ್ಟು ವರ್ಷವಾದ್ರೂ ಅವಳ ಹ್ವಟ್ಟೇಲಿ ಮಕ್ಕಳಾಗದ ಹಂಗೆ ಆಗಿತ್ತು. ಮಕ್ಕಳಾಗ್‌ಲಿಲ್ಲ ಅಂತ ಇವನಿಗೆ ಬ್ಯಾರೆ ಮದುವೆ ಮಾಡಾಣ ಅಂದ್ರೆ ಆ ಚಿನ್ನಾಲಿ ಇವನ್ನ ಕೈಯಾಗ್ ಹಾಕ್ಕಂಡು ಅವ್‌ಕಾಶ ಕೊಡ್ತಿರಲಿಲ್ಲ. ಅಪ್ಪ ಅಮ್ಮನ ಕುಟ್ ಇದ್ರೆ ಬ್ಯಾರೆ ಮದುವೆ ಮಾಡ್ತಾರೆ ಅಂತ ಒಳಗಿಂದೊಳಗೇ ಉಪಾಯ ಮಾಡ್ಕಂಡು ಗಂಡನ್ನ ಬ್ಯಾರೆ ಕರಕಂಡ್ ಹ್ವಾಗಿದ್ಲು. ಅವಳಪ್ಪ ನನ್ನ ತಾಕೆ ಬಂದು, 'ಬ್ರಾಹ್ಮಣಶಾಪ ಅಂದ್ರೇನು ಗೊತ್ತಾಯ್ತೇ ಗೌಡನ್ನ?' ಅಂತಿದ್ದ. ಇದ್ಯಾಕ್ ಇಲ್ಲದ ತರಲೆ?"

ರಂಗಮ್ಮನ ಮಟ್ಟಿಗೆ ಭವಿಷ್ಯ ತಿಳಿಯಲು ಕನಸಿಗಿಂತ ಬೇರೆ ನಿಖರವಾದ ಮಾಧ್ಯಮವಿರಲಿಲ್ಲ. ಯಜಮಾನರಿಗೇ ಕಾಣಿಸಿಕೊಂಡಿರುವುದರಿಂದ ಇದು ನಿಜವೆಂದರೆ ನಿಜ. ದೇವರೇ, ಹಿಂಗಾಗಬ್ಯಾಡ ಎಂದು ಪ್ರಾರ್ಥಿಸಿಕೊಂಡು ಆಕೆ, ಮಲಗಿದಲ್ಲೇ ಕೈ ಮುಗಿದಳು. ಸ್ವಲ್ಪ ಹೊತ್ತಿನಲ್ಲಿ ಯಜಮಾನರಿಗೆ ನಿದ್ರೆ ಹೊತ್ತಿತು. ಹೊರಳಿ ಹೊರಳಿ ಚಿಂತಿಸಿದ ಎಷ್ಟೋ ಹೊತ್ತಿನ ಮೇಲೆ ಆಕೆಗೆ ಜೊಂಪು ಬಂತು. ಸ್ವಲ್ಪ ಹೊತ್ತಿನಲ್ಲಿಯೇ ಆಕೆಗೂ ಕನಸು ಕಾಣಿಸಿಕೊಂಡಿತು: ಮಲ್ಲೇಶ ಅವಳನ್ನೇ ಮಾಡಿಕೊಂಡಿದ್ದಾನೆ. ಎಷ್ಟು ವರ್ಷವಾದರೂ ಮಕ್ಕಳಾಗಿಲ್ಲ. ಊರಿನಲ್ಲಿರುವ ದೊಡ್ಡ ಗೌಡರಿಗೆ ಸಾಯುವ ಕಾಲ ಬಂದಿದೆ. 'ಮಾಡಬ್ಯಾಡದ್ದು ಮಾಡಿದರೆ ಆಗಬ್ಯಾಡದ್ದು ಆಯ್ತದೆ ಅಂತ ಗೊತ್ತಿಲ್ವಾ? ಈ ಮದುವೆಗೆ ನೀನ್ಯಾಕ್ ಹೂಂ ಅಂದೆ? ಈಗ ನನ್ನ ವಂಸ ನಿಂತ್ಹೋಯ್ತಲ, ಯಾರ ತಪ್ಪು? ಅಂತ ಅವರು ತನ್ನ ಮೇಲೆ ಸಿಟ್ಟು ಮಾಡ್ತಿದಾರೆ. ಪಾಳೇಗಾರರ ಮನೆಯೋರು ನನ್ನ ಮಗಳ ಜಾತಿ ಕೆಡಿಸಿದ್ರು, ಅವರ ವಂಸ ಹಾಳಾಗ ಅಂತ ಅವಳ ಅಪ್ಪಾಜಿ ಗುಡೀಲಿ ಬಲಗೈಲಿ ಗಂಟೆ ಬಾರಿಸ್ಕಂಡು ಎಡಗೈಲಿ ಮಂಗಳಾರ್ತಿ ಮಾಡ್ತಾ ಶಾಪ ನುಡಿತವ್ರೆ. ತಿರುಮಲಾಪುರದ ದೇವರ ಮುಖ, ಮಂಗಳಾರತಿ ಬೆಳಕಿನಲ್ಲಿ ಉರಿಯುತ್ತಿದೆ. ಬೆಳ್ಳಿಯ ಮೂರು ನಾಮ. ಕಣ್ಣಿಗೆ ಬೆಳ್ಳಿಯ ಪಟಲ. ತಲೆಗೆ ಕಿರೀಟ. 'ನಾನು ಈ ಊರಾಗೇ ಇರಲ್ಲ. ಈ ದೇವಸ್ಥಾನ ಕೆಡವಿ ಬ್ಯಾರೆ ಊರಿಗೆ ಹ್ವಂಟೋಯ್ತೀನಿ' – ಎಂದು, ಮೈಮೇಲೆ ಬಂದಾಗ ಅಮ್ಮನ ಪೂಜಾರಿ ಹೇಳುವಂತೆ ನುಡಿದು ನೆಲದ ಮೇಲೆ ಒದೆಯುತ್ತಿದೆ. ದೇವಸ್ಥಾನದ ಹಿಂಭಾಗದ ಗೋಡೆ ಕುಸಿಯುತ್ತಿದೆ.

ರಂಗಮ್ಮನಿಗೆ ತಕ್ಷಣ ಎಚ್ಚರವಾಯಿತು. ತನ್ನ ಕನಸಿನಲ್ಲೂ ಇದೇ ಬಂದಿದೆ. ಮಾಡಬಾರದ ಕೆಲಸ ಮಾಡಬಾರದು. ಈಗ ಜ್ಞಾಪಕಕ್ಕೆ ಬಂತು: ಗುಡಿಯ ಹಿಂಭಾಗದ ಗೋಡೆ ನಿಜವಾಗಿಯೂ ವಾಲಿದ ಹಂಗೆ ಕಾಣುತ್ತಿದೆ. ಅದಕ್ಕೆ ಒದೆ ಚಪ್ಪಡಿ ಕೊಟ್ಟಿದ್ದಾರೆ. ಅದು ಸಾಲದು. ಬೇರೆ ಗೋಡೆಯನ್ನೇ ಕಟ್ಟಿಸಬೇಕು. ಆಕೆ ಆಗಲೇ ಎದ್ದು, ದೇವರ ಪಟವನ್ನಿಟ್ಟಿದ್ದ ಕೋಣೆಗೆ ಹೋದಳು. ಪಟಕ್ಕೆ ಅರಶಿನ ಕುಂಕುಮ ಹಚ್ಚಿ ಒಂದು ಪಾವಲಿಯನ್ನು ಮುಂದಿಟ್ಟು ಕೇಳಿಕೊಂಡಳು: 'ನನ್ನಪ್ಪಾ, ನಿನ್ನ ಪೂಜಾರಯ್‌ನೋರ ಜಾತಿ ಕೆಡಿಸಾಕಿಲ್ಲ. ಇವನಿಗೆ ವಳ್ಳೇ ಬುದ್ದಿ ಕೊಡು. ಇವನು ನಮ್ಮದೇ ಗೌಡಗಳ ಜಾತೀಲಿ ಎಣ್ಣು ತಂದ್ ಮದ್ವೆ ಮಾಡ್ಕಂಡ್ರೆ ನಿನ್ನ ಗುಡೀಗೆ ಅ್ಯಾಸ ಗ್ವಾಡೆ ಕಟ್ಟುಸ್ತೀನಿ. ಅದೇಟಾರ ಕರ್ಚಾಗ್ಲಿ. ನಿನ್ನ ಕಣ್ಣು ಮುಂದೆ ಮದುವೆ ಮಾಡುಸ್ತೀನಿ. ನಿನ್ನ ಪೂಜಾರಯ್ಯನ ಕೈಲೇ ಗಂಡು ಎಣ್ಣಿಗೆ ಆಸೀರ್ವಾದ ಮಾಡ್ಸುಸ್ತೀನಿ.'

ಸ್ವಲ್ಪ ಹೊತ್ತಿನಲ್ಲಿ ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು. ಇನ್ನೊಮ್ಮೆ ಪಟವನ್ನು ಮುಟ್ಟಿ ಕಣ್ಣಿಗೆ ಒತ್ತಿಕೊಂಡು ಬಂದು ಅವಳು ಮಲಗಿದಳು. ತುಸು ಹೊತ್ತಿನಲ್ಲಿ ನಿದ್ದೆ ಬಂತು. ಮತ್ತೆ ಕನಸು ಬೀಳಲಿಲ್ಲ.

# ನಾಲ್ಕು

## ೧

ತಂಪೆ ಬಂದು ಹೋದ ಮೂರನೆಯ ಬೆಳಗ್ಗೆ ಸತ್ಯ ಎದ್ದು ಮುಖ ಮೊಣಕೈ ಮತ್ತು ಕಾಲುಗಳನ್ನು ತೊಳೆದಳು. ಬೆನ್ನು ಭುಜದ ಗಾಯಗಳಿಗೆ ಇನ್ನು ಒಂದು ವಾರವಾದರೂ ನೀರು ಸೋಕಿಸಕೂಡದೆಂದು ಡಾಕ್ಟರು ಹೇಳಿದ್ದುದರಿಂದ ಪೂರ್ತಿ ಸ್ನಾನ ಮಾಡುವಂತಿರಲಿಲ್ಲ. ಬಟ್ಟೆ ಬದಲಾಯಿಸಿ ತಿಂಡಿಗೆ ಹೋಟೆಲಿಗೆ ಹೊರಡಲು ಸಿದ್ಧಳಾಗುತ್ತಿದ್ದಳು. ಅಷ್ಟರಲ್ಲಿ ಶ್ರೀನಿವಾಸ ಬಂದ. ಅವನು ಈಗ ಬಂದದ್ದು ಅನಿರೀಕ್ಷಿತವಾದರೂ ಅಸಹಜವಾಗಿರಲಿಲ್ಲ. ಒಳಗೆ ಬಂದು ಮಂಚದ ಮೇಲೆ ಕುಳಿತು ಹೇಳಿದ: 'ನೆನ್ನೆ ಸಂಜೆ ತಂಕ ಜೊತೇಲೇ ಇದ್ದೆವಲ್ಲ. ಆದರೂ ಬೆಳಗ್ಗೆ ಎದ್ದ ತಕ್ಷಣ ನಿನ್ನ ನೋಡಬೇಕು ಅನ್ನಿಸ್ತು.'

'ಇರೂ ಆಕರ್ಷಣೆ ಎಲ್ಲ ಈಗಲೇ ಸುರಿದುಬಿಟ್ರೆ ಮುಂದುಕ್ಕೆ ಒಂದಿಷ್ಟು ಇಟ್ಟುಕೋಬ್ಯಾಡವೆ?'

'ನನ್ನ ಪ್ರೀತಿ ಶಾಶ್ವತವಲ್ಲ ಅಂತೀ ಏನು?' – ಎಂದು ಅವನು, ಹತ್ತಿರವೇ ನಿಂತಿದ್ದ ಅವಳ ಬೆನ್ನಿನ ಮೇಲೆ ಚಪ್ಪರಿಸಿದ. ಅವಳು ನೋವಿನಿಂದ ಹಾ ಎಂದಾಗ ಬೆನ್ನಿನ ತುಂಬ ಆಗಿದ್ದ ಗಾಯದ ನೆನಪಾಗಿ, 'ಸಾರಿ, ಪೆಟ್ಟಾಯ್ತಾ?' ಎಂದ.

ಇಬ್ಬರೂ ತಿಂಡಿಗೆ ಹೊರಟರು. ಅವಳು ಮೊದಲು ಹೊರಗೆ ಬಂದಾಗ ಮೇಲಿನ ಮನೆಯ ಹೆಂಗಸಲ್ಲದೆ ಗಂಡಸು ಸಹ ತಮ್ಮ ಹಾಲಿನ ಕಿಟಕಿಯ ತೆಳುವಾದ ತೆರೆಯಿಂದ ನೋಡುತ್ತಿದ್ದುದು ಗೊತ್ತಾಯಿತು. ಶ್ರೀನಿವಾಸನೂ ಹೊರಗೆ ಬಂದ. ಅವಳು ಬಾಗಿಲಿಗೆ ಬೀಗ ಹಾಕಿಕೊಂಡಳು. ಇಬ್ಬರೂ ಮೆಟ್ಟಿಲುಗಳನ್ನಿಳಿದ ಮೇಲೆ ಕೇಳಿದಳು: 'ನೆನ್ನೆ ರಾತ್ರಿ ನಿಮ್ಮ ತಂಪೆ ಕೈಲಿ ಮಾತಾಡಿದಿರಾ?'

'ಮಾತೇನಾಡೂದು! ನಮ್ಮಪ್ಪಾವ್ರದ್ದೇ ಅಬ್‌ಜೆಕ್ಷನಾ ಇದ್ದದ್ದು. ನಮ್ಮ ಫಾದರ್ ತುಂಬ ಲಿಬರಲ್. ಮದುವೆಯಾಯ್ತು ಅಂತಲೇ ಲೆಕ್ಕ. ಇವತ್ತಿನಿಂದ ನಿನ್ನ ರೂಮಿನಲ್ಲೇ ಇದ್ದುಬಿಡ್ತೀನಿ' – ಎಂದು ಅವನು ನಕ್ಕ.

ಅವನ ಮಾತಿನ ಒಳ-ಅರ್ಥ ತಿಳಿದು ಅವಳು ಉತ್ತರ ಕೊಟ್ಟಳು: 'ಮನೆಗೆ ಹೆಂಡ್ತೀನ ಕರಸಿಕೋಬೇಕೇ ಹೊರತು ಹೆಂಡ್ತೀನ ಬಾಡಿಗೆ ರೂಮಿನಲ್ಲಿಟ್ಟು ಅಲ್ಲಿಗೆ ಬರ್ತೀನಿ ಅನ್ನಬಾರ್ದು ಗಂಡಸರು.'

'ಘಾಟಿ ನೀನು....' – ಎಂದು ಅದೇನೋ ಹೇಳುತ್ತಿದ್ದವನು ತಕ್ಷಣ ಗಮನಿಸಿ

ದವನಂತೆ ಹೇಳಿದ: 'ಬೆಳಗ್ಗೆಯಿಂದ ನೀವು ಅಂತ ಬಹುವಚನ ಶುರು ಮಾಡಿದೀಯಲ್ಲ, ಯಾಕೆ?'

'ಯಾಕೆ ಅಂದ್ರೆ?' – ಅವಳು ಪ್ರತಿಯಾಗಿ ಕೇಳಿದಳು.

"ಅಲ್ಲ, ಇಷ್ಟು ದಿನ 'ನೀನು' ಅಂತಿದ್ದೆ."

'ಇಷ್ಟು ದಿನ ಬೇರೆ ಥರವಾಗಿತ್ತು. ನೆನ್ನೆ ನಿಮ್ಮ ತಾಯೀ ಎದುರಿಗೆ ನೀನು ಅಂದದ್ದು ಜ್ಞಾಪಕವಾಯಿತು. ಅವರಾದ್ರೂ ಏನಂತ ತಿಳ್ಕತ್ತಾರೆ? ಪದ್ಧತಿಯೇ ಹಾಗಿದೆಯಲ್ಲ ಬಹುವಚನದಲ್ಲಿ ಕೂಗೂದು.'

ಅವನು ಮಾತನಾಡಲಿಲ್ಲ. ಅವಳೇ, 'ಬಹುವಚನದಲ್ಲಿ ಕೂಗಿದರೆ ಗೌಡರಿಗೆ ಕುತ್ತಿಗೆ ಉದ್ದವಾಗುತ್ತೇನು?' ಎಂದಳು.

'ಗೌಡರು ಅಂತ ಯಾಕಂತೀಯ?' – ಅವನು ಇರಸುಮುರುಸಿನಿಂದ ಕೇಳಿದ.

'ಹಾಗಾದ್ರೆ. ನೀವು ಗೌಡರಲ್ಲವೆ?'

ಅವನು ಅಸಮ್ಮತಿ ಸೂಚಕ ಮೌನ ತಾಳಿದ. ಅವಳೇ, 'ಅದಕ್ಯಾಕೆ ಸಿಟ್ಟು? ಗೌಡ ಅಂದ್ರೆ ಯಜಮಾನ ಅಂತ: ನನಗೆ' ಎಂದಾಗ ಅವನ ಮುಖದ ಇರಸು ಮುರುಸು ಹೋಗಿ ನಗು ಕಾಣಿಸಿತು.

ಅವಳು ಹೇಳಿದಳು: 'ಎಷ್ಟು ಬೇಗ ಖುಷಿಯಾಯ್ತು! ನಾನು ನೀನು ಇಬ್ಬರೇ ಇದ್ದಾಗ ಗೌಡ್ರು ಅಂತೀನಿ. ಆದರೆ ನಿನ್ನ ಗೌಡಿಕೆ ಉಳಿದೋರ ಮೇಲೆ ತೋರಿಸ ಕೂಡದು. ಇದು ಡೆಮಾಕ್ರಸಿ ಕಾಲ.' ಅವನು ಸುಮ್ಮನೆ ನಕ್ಕ. ಅವಳೇ ಮುಂದು ವರಿಸಿದಳು: 'ನಿಮ್ಮ ಹೆಸರಿನ ಮುಂದೆ ಗೌಡ ಅಂತ ಇದ್ದಿದ್ರೆ ನಾನು ಖಂಡಿತ ಮದುವೆಗೆ ಒಪ್ತಿರಲಿಲ್ಲ. ಜಾತಿಸೂಚಕ ಅನ್ನೂದೊಂದೇ ಕಾರಣವಲ್ಲ. ಬಲು ಜಂಬದ ಟೈಟಲ್ ಅದು.'

'ರಾವ್ ಅಂತ ಇಟ್ಕಂಡಿದ್ರೆ?' – ಎಂದು ಚುಡಾಯಿಸಿದ.

'ರಾವ್ ಅನ್ನೂದು ಬ್ರಾಹ್ಮಣರಿಗೆ ಹ್ಯಾಗೆ ಬಂತೋ ಗೊತ್ತಿಲ್ಲ. ರಾಯ ಅನ್ನೂದು ರಾವ್ ಆಯಿತು. ರಾಜಸಿಂದ ರಾಯ ಬಂತು. ಬ್ರಾಹ್ಮಣರಿಗೆ ರಾಜ ಅನ್ನೂದು ಹ್ಯಾಗೆ ಸೇರುತ್ತೆ? ಪೇಶ್ವೆ ಬ್ರಾಹ್ಮಣರು ಆಳ್ತಿದ್ದಾಗ ಸೇರಿಸಿಕೊಂಡ ಈ ಬಿರುದು ಕರ್ನಾಟಕದ ಬ್ರಾಹ್ಮಣರಿಗೂ ಬಂತೋ ಏನೋ! ಇದರ ಹುಟ್ಟು ಬೆಳ ವಣಿಗೆಯ ಶೋಧನೆ ಮಾಡಬೇಕು. ಕರ್ನಾಟಕದ ಬ್ರಾಹ್ಮಣರಿಗೆ ಅಯ್ಯ ಅನ್ನೂದೇ ಮೊದಲಿನಿಂದ ಇದ್ದದ್ದು. ಅಂದ್ರೆ ಆರ್ಯ ಅನ್ನೂದ್ರಿಂದ ಬಂದದ್ದು.'

'ಪ್ಲೀಸ್, ಇತಿಹಾಸ ತುಂಬ ತೆಗೀಬ್ಯಾಡ. ಯಾವ ಶಬ್ದ ಹ್ಯಾಗೆ ಹುಟ್ಟಿದರೂ ನನಗೆ ಸಂಬಂಧವಿಲ್ಲ.'

'ಇತಿಹಾಸ ಗೊತ್ತಿಲ್ಲದೆ ಸಮಕಾಲೀನ ಜೀವನದಲ್ಲಿ ಏನೂ ಮಾಡುಕ್ಕೆ.

ಸಾಧ್ಯವಿಲ್ಲ. ನನ್ನ ಸಬ್‌ಜೆಕ್ಟ್‌ನ ಅಷ್ಟು ಕಳಪೆ ಮಾಡಬ್ಯಾಡಿ.'

'ಸಮಕಾಲೀನ ಜೀವನದಲ್ಲಿ ಯಾವ ದೊಡ್ಡದನ್ನೂ ಸಾಧಿಸೂದು ನನಗೆ ಬೇಕಿಲ್ಲ. ನಿನ್ನ ಮದುವೆಯಾಗೂದೊಂದು ಸಾಕು' – ಎಂದು ಅವನು ನಗುತ್ತಾ ಎಂದ.

'ಅದಕ್ಕೂ ಇತಿಹಾಸದ ಜ್ಞಾನ ಬೇಕು' – ಅವಳು ಗಂಭೀರಳಾಗಿ ತನ್ನಲ್ಲಿ ತಾನೇ ಎಂದುಕೊಳ್ಳುವವಳಂತೆ ಹೇಳಿದಳು.

ಅಷ್ಟರಲ್ಲಿ ಹೋಟಲು ಬಂದಿತು. ಇಬ್ಬರೂ ಮಹಡಿಯ ಮೇಲಿನ ಪ್ರತ್ಯೇಕ ಫ್ಯಾಮಿಲಿ ರೂಮಿನಲ್ಲಿ, ಸೋಫಾದಂತಹ ಉದ್ದನೆಯ ಒಂದೇ ಕುರ್ಚಿಯ ಮೇಲೆ ಕುಳಿತರು. ಮಾಣಿ ಒಳಗೆ ಬಂದು ಆರ್ಡರ್ ತೆಗೆದುಕೊಂಡು ಹೋದ. ಸತ್ಯ ಎಂದಳು: 'ಊರಿನಲ್ಲಿ ಏನಾಗಿದೆಯೋ ತಿಳೀಲಿಲ್ಲ. ಹೇಳೋರು ಯಾರೂ ಇಲ್ಲ.'

'ಯಾವ ವಿಷಯ?'

'ನಮ್ಮಪ್ಪ ಹ್ಯಾಗಿದಾರೋ? ನೋಡು, ನನಗೆ ಬುದ್ಧಿ ತಿಳಿದಾಗಿನಿಂದ ಅವರು ನನ್ನನ್ನ ಹೊಡೆದೋರಲ್ಲ. ತಾಯಿ ಸತ್ತ ಹೆಣ್ಣು ಮಗು ಅಂತ ಬಲು ಅಂತಃ ಕರಣದಿಂದ ಸಾಕಿದರು. ಅವತ್ತು ಅಷ್ಟು ಹೊಡೆಯಬೇಕಾದರೆ ಅವರಿಗೆ ಎಷ್ಟು ಸಿಟ್ಟು ಬಂದಿರಭೌದು! ಹೀಗೆ ಹೊಡೆದೆನಲ್ಲ ಅಂತ ಊರಿಗೆ ಹೋದಮೇಲೆ ಎಷ್ಟು ಮರುಗ್ತಾ ಇರ್ತಾರೋ!'

'ಈ ಮದುವೆಯಿಂದ ಅವರಿಗೆ ನೋವಾಗುತ್ತೆ ಅಂತ ನಿಂಗೆ ಗೊತ್ತೇ ಇತ್ತು. ಈಗ ಹೀಗೆ ವೀಕ್‌ನೆಸ್ ತೋರಿಸಿದರೆ ಹ್ಯಾಗೆ?'

'ವೀಕ್‌ನೆಸ್ ಅಲ್ಲ. ನಿಜವಾದ ಭಾವನೆ.'

ಶ್ರೀನಿವಾಸ ಮಾತನಾಡಲಿಲ್ಲ. ತನ್ನ ಬಲಗೈಯಿಂದ ಅವಳ ಎಡಹಸ್ತವನ್ನು ತಡಕಿ ಹಿಡಿದು ಅದುಮಿದ. ಅವನ ಕಣ್ಣು ಮಂಜುಗೊಂಡಿತು. ಅರ್ಧ ನಿಮಿಷ ದಲ್ಲಿ ಕಣ್ಣಿನ ತುಂಬ ನೀರು ತುಂಬಿ ಕೆಳಗೆ ಹರಿಯಿತು.

ಅವನ ಕಡೆಗೆ ತಿರುಗಿ ತನ್ನ ಬಲಗೈಯಿಂದ ಅವನ ತೋಳನ್ನು ಹಿಡಿದು ಸತ್ಯ ಎಂದಳು: 'ನಮ್ಮಪ್ಪನ್ನ ನೀನೂ ಚಿಕ್ಕವಯಸ್ಸಿನಿಂದ ಕಂಡಿದೀಯ. ಅವರ ವಿಷಯ ದಲ್ಲಿ ನೀನು ಇಷ್ಟು ಅಂತಃಕರಣ ಇಟ್ಕಂಡಿದೀಯ ಅಂತ ನಂಗೆ ಗೊತ್ತಿರಲಿಲ್ಲ. ಈಗ ಸಿಟ್ಟಾಗಿರಭೌದು. ಮುಂದೆ ಸಮಾಧಾನವಾದ ಮೇಲೆ ಅವರೇ ನಿನ್ನ ಗುಣ ಕಂಡು ಸಂತೋಷಪಡ್ತಾರೆ.'

ಆದರೆ ಅವನ ತಳಮಳದ ಕಾರಣ ಅವಳಿಗೆ ಅರ್ಥವಾಗಲಿಲ್ಲ. ಅವನೇ ಹೇಳಿದ: 'ನಿಮ್ಮ ತಂದೆ ಕಂಡ್ರೆ ನಂಗೂ ಗೌರವ ಇದೆ. ಆದರೆ ನನಗೆ ದುಃಖವಾದ ಕಾರಣ ಬೇರೆ.'

'ಏನು ಹೇಳು. ಪ್ಲೀಸ್' – ಎಂದು ಅವಳು ಅವನ ಕಣ್ಣೀರನ್ನು ತನ್ನ ಸೆರಗಿನಿಂದ ಒರೆಸಿದಳು. ಅದೇ ಸಮಯಕ್ಕೆ ಮಾಣಿ ಎರಡು ತಟ್ಟೆಗಳಲ್ಲಿ ಪೂರಿ ಸಾಗು, ಮತ್ತೆರಡರಲ್ಲಿ ಇಡ್ಲಿ ಸಾಂಬಾರುಗಳನ್ನು ಹಿಡಿದು ಒಳಗೆ ಬಂದ. ಶ್ರೀನಿವಾಸನಿಗೆ ಸಂಕೋಚವಾಯಿತು. ಆದರೆ ಸತ್ಯ ತನ್ನ ಪಾಡಿಗೆ ತಾನು ಅವನ ಕಣ್ಣೀರನ್ನು ಒರೆಸಿದಳು. ಮಾಣಿ ಹೊರಟುಹೋದ.

'ಪ್ಲೀಸ್, ಹೇಳು' – ಅವಳು ಒತ್ತಾಯಮಾಡಿ ಕೇಳಿದಳು.

'ನಿನಗೆ ತಂದೆಯ ಮೇಲೆ ಅಷ್ಟು ಪ್ರೀತಿ ಇದೆ. ಅವರಿಗೆ ಅಷ್ಟು ಸಿಟ್ಟು ಬಂದಿದೆ. ಅಕಸ್ಮಾತ್ ನೀನು ಮನಸ್ಸು ಬದಲಾಯಿಸಿದರೆ ನನ್ನ ಗತಿ ಏನು ಅಂತ ಯೋಚನೆ ಬಂತು.'

ಅವಳು ತನ್ನ ಬಲಗೈಯನ್ನು ಅವನ ಬಲಗೈಯಲ್ಲಿಟ್ಟು ಅದುಮಿ ಹೇಳಿದಳು: 'ನನ್ನ ಸ್ವಭಾವ ನಿನಗೆ ಇನ್ನೂ ಪೂರ್ತಿ ಅರ್ಥವಾಗಿಲ್ಲವೆ? ನನಗೆ ಸರಿ ಅನ್ನಿಸಿದ್ದನ್ನ ಯಾರು ವಿರೋಧಿಸಿದರೂ ಮಾಡದೆ ಇರುಲ್ಲ. ಅವರು ಬೆಳೆದ ವಾತಾವರಣ, ಅವರು ವಾಸಮಾಡ್ತಿರೂ ಸಮಾಜದಲ್ಲಿ ಇದಕ್ಕಿಂತ ಬೇರೆ ಪ್ರತಿಕ್ರಿಯೇನ ಹ್ಯಾಗೆ ನಿರೀಕ್ಷಿಸಭೌದು? ಅವರಿಗೆ ಸಿಟ್ಟು ಬರೂದು, ನೋವಾಗೂದು ಸಹಜವೇ. ನಾನು ಮೊದಲೇ ಅಂದಾಜು ಮಾಡಿದ್ದೆ. ಹಾಗಂತ ನನ್ನ ತೀರ್ಮಾನ ಎಂದಿಗೂ ಬದಲಾಯಿಸುಲ್ಲ.'

'ನಂಗೆ ಯಾಕೋ ಪೂರ್ತಿ ಧೈರ್ಯವಾಗ್ತಿಲ್ಲ.'

'ತಿಂಡಿ ಆರಿಹೋಗ್ತಿದೆ ತಗೊ. ಇಲ್ಲಿ ತುಂಬ ಹೊತ್ತು ಹೀಗೆ ಕೂತರೆ ಮಾಣಿ ಏನು ತಿಳಕೊಂಡಾನು?' – ಎಂದು ಬಲವಂತವಾಗಿ ಅವನ ಕೈಯನ್ನು ತಿಂಡಿಯ ತಟ್ಟೆಗೆ ತಗುಲಿಸಿ ತಾನೂ ಪೂರಿಯನ್ನು ಮಡಿಸಿ ಕೀಳುತ್ತಾ ಎಂದಳು: 'ಒಂದು ಕೆಲಸ ಮಾಡು. ಇವತ್ತೇ ಸಬ್‌ರಿಜಿಸ್ಟ್ರಾರರ ಕಛೇರಿಗೆ ಹೋಗಿ ನೀನು ಡಿಕ್ಲರೇಷನ್ ಕೊಟ್ಟು ಬಾ. ಇವತ್ತಿನ ಡಿಕ್ಲರೇಷನ್ನಿಗೆ ನಾನು ಬರೂ ಅಗತ್ಯವಿಲ್ಲ. ನಮ್ಮ ಪಾಡಿಗೆ ನಾವು ಇನ್ನು ಹದಿನೈದು ದಿನಕ್ಕೆ ಅವರ ರಿಜಿಸ್ಟರಿನಲ್ಲಿ ಮಾಡಿಕೊಂಡು ಬಿಡಾಣ. ಅಷ್ಟಾದರೆ ತಪ್ಪಿಸುಕ್ಕೆ ಹಿರಿಯರು ಏನೂ ಮಾಡೂಹಾಗಿಲ್ಲವಲ.'

ಈ ಮಾತಿನಿಂದ ಅವನ ಆತಂಕ ಕಡಿಮೆಯಾಯಿತು. ತಿಂಡಿ ತಿಂದನಂತರ ಮಾಣಿಯನ್ನು ಕರೆದು ಕಾಫಿಗೆ ಹೇಳಿದ ಮೇಲೆ ಅವನೇ ಎಂದ: 'ನಮ್ಮ ಮನೇಲಿ ಹ್ಯಾಗೂ ಒಪ್ಪಿದಾರೆ. ಶಾಸ್ತ್ರದ ರೀತಿ ಮದುವೆ ಮಾಡ್ಕಳೂಕೆ ಯಾವತ್ತೂ ತಯಾರು. ನಿಮ್ಮ ಮನೇಲಿ ತಾನೇ ವಿರೋಧ? ನನ್ನ ಅಮ್ಮ ಅಪ್ಪ ಒಪ್ಪಿರುವಾಗ ನಮಗೆ ನಾವೇ ರಿಜಿಸ್ಟರ್ ಮಾಡ್ಕಂಡ್‌ರೆ ಅವರಿಗೆ ಬೇಜಾರಾಗುತ್ತೆ. ಸುಮ್ ಸುಮ್ಮನೆ ಯಾಕೆ ವಿರೋಧ ಮಾಡ್ಕ್ಯಬೇಕು? ಶಾಸ್ತ್ರದ ರೀತಿಯೇ ಆಗಲಿ.'

'ಶಾಸ್ತ್ರ ಅಂದ್ರೆ ಯಾವ ಶಾಸ್ತ್ರದ ರೀತಿ? ಬ್ರಾಹ್ಮಣರು ಮಾಡೂಹಾಗೆ ಮೂರು ದಿನ ಮಂತ್ರ ವಟಗುಟ್ಟೋದ್ರಲ್ಲಿ ಅರ್ಥವಿಲ್ಲ. ಬಿಲ್‌ಕುಲ್ ಮಂತ್ರ ಬ್ಯಾಡ ಅಂತ, ಹತ್ತು ಜನ ಹಾಲು ನೀರು ಬಿಟ್ಟು, ಆಯ್ತು ಅನ್ನೊ ಬಳಗ-ಧಾರೇಲಿ ಸ್ವಾರಸ್ಯವಿಲ್ಲ. ನಾವು ಹ್ಯಾಗೆ ಮಾಡ್ಕಂಡ್ರೂ ನಮ್ಮ ತಂದೆಯಾಗಲಿ ಅಣ್ಣನಾಗಲಿ ಮದುವೆಗೆ ಬರುಲ್ಲ. ಕನ್ಯಾದಾನ ಮಾಡೂ ದಾತರೇ ಇಲ್ಲದಿರುವಾಗ ಧಾರೇಲಿ ಏನು ಅರ್ಥವಿದೆ? ನಾನು ನೀನು ಒಪ್ಪಿ, ನನ್ನ ನಿನ್ನ ಜವಾಬ್ದಾರಿಯಿಂದ ಆಗೂ ಮದುವೆ ಇದು. ಆದ್ದರಿಂದ ಯಾವ ರೂಪದಲ್ಲಿ ಆದರೂ ರಿಜಿಸ್ಟರ್ ಅರ್ಥವೇ ಆಗುತ್ತೆ.'

'ಆದರೆ ಹತ್ತು ಜನ ಕೂಡಬೇಕು ಅನ್ನೊ ಕಟ್ಟಳೆ ಬಿಡೂಕ್ಕಾಗುಲ್ಲ. ನಮ್ಮಪ್ಪನಿಗೆ ನಾನೊಬ್ಬನೇ ಮಗ. ಅವರ ಸ್ನೇಹಿತರು ಅಸೆಂಬ್ಲಿಯವರು, ಇತರ ಮಂತ್ರಿಗಳು, ಇವರನ್ನೆಲ್ಲ ಕರೆದು ಊಟ ಹಾಕುಕ್ಕೆ ಒಂದು ಅವಕಾಶ ಕೊಡಬೇಕಲ್ಲ. ಅವರೇ ಒಪ್ಪಿರುವಾಗ ನಾವ್ಯಾಕೆ ತಪ್ಪಿಸಬೇಕು?'

ಅಷ್ಟರಲ್ಲಿ ಸಪ್ಲೈಯರ್ ಒಳಗೆ ಬಂದು ಎರಡು ಲೋಟ ಕಾಫಿ, ಜೊತೆಯಲ್ಲಿ ಬಿಲ್ ಇಟ್ಟು ಹೋದ.

'ನಿನ್ನಿಷ್ಟ. ರಿಜಿಸ್ಟರ್ ಬೇಕು ಅಂತ ನಾನು ಹೇಳ್ಲಿಲ್ಲ. ನಿನ್ನ ಹೆದರಿಕೆಗೆ ಸಮಾಧಾನವಾಗಲಿ ಅಂತ ಅಂದೆ. ಇಷ್ಟಕ್ಕೂ ಮದುವೆಯಾಗೂದು ಗಂಡಿನ ಇಷ್ಟಕ್ಕೆ ಅನುಸಾರವಾಗಿ ತಾನೆ?' – ಎಂದು ಅವಳು ನಕ್ಕಳು. ವಾತಾವರಣ ಹಗುರವಾಯಿತು. ಕಾಫಿ ಕುಡಿಯುತ್ತಾ ಎರಡು ನಿಮಿಷ ತನ್ನಲ್ಲಿಯೇ ಮಗ್ನಳಾಗಿದ್ದು ಅನಂತರ ಎಂದಳು: 'ಯಾವ್ದಾದರೂ ಸರಿ. ಸುಮ್ಮನೆ ನಿಧಾನಮಾಡಬ್ಯಾಡಿ. ನಿಮ್ಮ ತಂದೆಗೆ ಹೇಳಿ ಬೇಗ ಶಾಸ್ತ್ರ ಮುಗಿಸಿಬಿಡಿ. ಇಂಥದು ಎಳೆದಷ್ಟೂ ಒಳ್ಳೇದಲ್ಲ. ನಾನಾದರೂ ಒಬ್ಬಳು ರೂಮು ಮಾಡ್ಕಂಡು ಯಾಕಿರಲಿ?'

ಇಬ್ಬರೂ ಕೆಳಗೆ ಇಳಿದು ಬಂದರು. ಬಾಗಿಲಿನಲ್ಲಿದ್ದ ಗಲ್ಲಾದ ಹತ್ತಿರ ಶ್ರೀನಿವಾಸ ಬಿಲ್ ಹಣ ಕೊಟ್ಟ. ಹೊರಗಿನ ಪೆಟ್ಟಿಗೆ-ಅಂಗಡಿಯಲ್ಲಿ ಇಬ್ಬರೂ ಪಾನ್ ತೆಗೆದುಕೊಂಡರು. ಅವನು ಒಂದು ಸಿಗರೇಟ್ ಕೊಂಡು, ಕವರುತ್ತಿದ್ದ ತೆಂಗಿನ ನಾರಿನ ಹುರಿಯಿಂದ ಹೊತ್ತಿಸಿಕೊಳ್ಳುತ್ತ ಕೇಳಿದ: 'ನೀನು ಕಾಲೇಜಿಗೆ ಎಷ್ಟು ಹೊತ್ತಿಗೆ ಹೋಗಬೇಕು?'

ತನ್ನ ಗಡಿಯಾರ ನೋಡಿಕೊಂಡು ಅವಳು ಗಾಬರಿಯಾದಳು. 'ಅಮ್ಮಾ, ಒಂಬತ್ತೂವರೆಯಾಯ್ತು. ಹನ್ನೊಂದು ಗಂಟೆಗೆ ಒಂದು ಪೀರಿಯಡ್ ಇದೆ. ಸ್ವಲ್ಪವೂ ಪ್ರಿಪೇರ್ ಮಾಡ್ಕಂಡಿಲ್ಲ.'

'ನಿನಗೆಂಥ ಪ್ರಿಪರೇಶನ್ ಬೇಕು, ಇಷ್ಟು ಬುದ್ಧಿವಂತೆಗೆ? ಇಷ್ಟು ಬ್ಯಾಗ

ಹೋಗಬೇಡ. ಇನ್ನೊಂದರ್ಧ ಗಂಟೆ ಎಲ್ಲಾದ್ರೂ ತಿರುಗಾಡ್ಕಂಡು ಬರಾಣ ಬಾ.'

'ಬ್ಯಾಡಿ ಪ್ಲೀಸ್. ಸಾಯಂಕಾಲ ನಾಕು ಗಂಟೆಗೆ ಬನ್ನಿ. ಎಲ್ಲಾದ್ರೂ ಹೋಗಾಣ. ಸಿದ್ಧವಾಗದೆ ಕ್ಲಾಸಿಗೆ ಹೋಗಬಾರದು.'

'ನಿನ್ನ ಕೆಲಸಾನೇ ಬಿಟ್‌ಬಿಡು. ಮಂತ್ರಿಗಳ ಸೊಸೆ ಕೆಲಸ ಯಾಕೆ ಮಾಡ ಬೇಕು?'

'ಯಾಕೆ ಮಾಡಬಾರದು? ಇದು ಶ್ರೀಮಂತ ರಾಜ್ಯದೋರು ಆಡೂ ಮಾತು; ಪ್ರಜಾರಾಜ್ಯದೋರು ಆಡೂದಲ್ಲ. ನಂಗೆ ಹೊತ್ತಾಯ್ತು. ರೂಮು ಕಡೆ ಹೋಗಾಣ. ನನ್ನ ತಲುಪಿಸಿ ನೀವು ಹೋಗಿ.'

'ಇಲ್ಲ. ನಾನು ನಿನ್ನ ರೂಮಿನಲ್ಲೇ ಕೂತಿರ್ತೀನಿ.'

'ನೀವಿದ್ರೆ ನಂಗೆ ಪ್ರಿಪೇರಾಗುಕ್ಕೆ ಆಗುಲ್ಲ. ಪ್ಲೀಸ್. ಹಟ ಮಾಡಬೇಡಿ.'

ಒಂದು ನಿಮಿಷ ಸುಮ್ಮನೆ ನಿಂತಿದ್ದ ಅವನು ಹೇಳಿದ: 'ಒಂದು ಆಟೋರಿಕ್ಷಾ ಮಾಡ್ಕಳಾಣ. ನಿನ್ನ ರೂಮಿನ ಹತ್ರ ಇಳಿಸಿ ನಾನು ಅದರಲ್ಲೇ ಬೇಗ ಮನೆಗೆ ಹೋಗ್ತೀನಿ. ಅಪ್ಪಾಜಿ ಆಫೀಸಿಗೆ ಹೋಗೂಕ್ ಮುಂಚೆ ಮಾತಾಡಿ ಬೇಗ ಡೇಟ್ ಸೆಟ್ಲ್ ಮಾಡುಸ್ತೀನಿ. ಮದುವೆಯಾಗಿಬಿಟ್ರೆ ನಾನು ನೀನು ದೂರ ಇರೂ ಹಾಗಿಲ್ಲ.'

ಅವಳ ಮುಖದ ಮೇಲೆ ನಗೆ ಬಿರಿಯಿತು. 'ಗಂಡಸರು ಯಾವಾಗಲೂ ಪ್ರಾಕ್ಟಿಕಲ್' – ಎಂದಳು.

ರಸ್ತೆಯಲ್ಲಿ ಹೋಗುತ್ತಿದ್ದ ಒಂದು ಖಾಲಿ ಆಟೋರಿಕ್ಷಾವನ್ನು ಕರೆದು ಇಬ್ಬರೂ ಕುಳಿತರು. ಅದು ಅವಳ ರೂಮಿನ ಕಡೆಗೆ ಹೋಗುತ್ತಿದ್ದಾಗ ಅವನು ಕೇಳಿದ: 'ಬೆಳಗ್ಗೆ ನಾನು ಬಂದಾಗ ಬಹುವಚನ ಶುರು ಮಾಡಿದ್ದೆ. ಹೋಟೆಲಿನಲ್ಲಿ ತಿಂಡಿ ತಿನ್ನುವಾಗ ಏಕವಚನ ಬಂತು. ಈಗ ಮತ್ತೆ ಬಹುವಚನ. ಇದೇನು?'

'ಹೌದಾ? ಏಕವಚನ ಉಪಯೋಗಿಸಿದ್ದು ನನ್ನ ಗಮನಕ್ಕೇ ಬರಲಿಲ್ಲ. ಆದರೆ ಬಹುವಚನ ಅಭ್ಯಾಸ ಮಾಡ್ಕಬೇಕಲ್ಲ, ಗೌಡರ ಗೌಡಿಕೆಯ ಗುರುತಿಗೆ!' – ಎಂದು ಚುಡಾಯಿಸಿದಳು.

ರೂಮಿನ ಕಟ್ಟಡದ ಮುಂಭಾಗದಲ್ಲಿ ಆಟೋರಿಕ್ಷಾ ನಿಲ್ಲಿಸಿ ಅವಳು ಇಳಿದಳು. ಅವನು ಕೈ ನೀಡಿ ಅವಳ ಬಲಗೈ ಎಳೆದುಕೊಂಡು ಶೇಕ್‌ಹ್ಯಾಂಡ್ ಮಾಡಿದ. ಅವಳು ಇಂಗ್ಲಿಷಿನಲ್ಲಿ, 'ಸಂಯಮವಿರಲಿ. ಇದು ಬೆಂಗಳೂರು. ಬರ್ಮಿಂಗ್‌ಹ್ಯಾಮ್ ಅಲ್ಲ. ಬೈ ಬೈ. ಗುಡ್‌ಲಕ್. ನಾಲ್ಕು ಗಂಟೆಗೆ ಬನ್ನಿ' – ಎಂದು ಹೇಳಿ ಕಾಂಪೌಂಡ್ ಪ್ರವೇಶಿಸಿ ಕಟ್ಟಡದ ಪಕ್ಕದಲ್ಲಿ ತಿರುಗಿ ಮೆಟ್ಟಲು ಹತ್ತಿ ಮಹಡಿಗೆ ಹೋದಳು. ರಿಕ್ಷಾ ಮುಂದೆ ಹೋಯಿತು.

೨

ಹನ್ನೊಂದು ಗಂಟೆಗೆ ಇಂಟರ್‌ಮೀಡಿಯೆಟ್ ಕ್ಲಾಸು. 'ಗ್ರೀಸ್ ದೇಶದ ಭೌಗೋಳಿಕ ವಿವರಣೆ ಮತ್ತು ಆ ದೇಶದ ಇತಿಹಾಸದ ಮೇಲೆ ಅದರ ಪ್ರಭಾವ' ಎಂಬ ವಿಷಯ ಹೇಳಬೇಕು. ತನ್ನ ನೆನಪನ್ನು ಹೊಸತು ಮಾಡಿಕೊಂಡರೆ ಸಾಕು. ಸತ್ಯ ವಿದ್ಯಾರ್ಥಿನಿಯಾಗಿದ್ದಾಗ ಎಂದೂ ಉಪನ್ಯಾಸಕರು ಹೇಳಿದ ಪಾಠ, ಬರೆಸಿದ ಟಿಪ್ಪಣಿಗಳನ್ನು ಅವಲಂಬಿಸುತ್ತಿರಲಿಲ್ಲ. ಪರೀಕ್ಷೆ ಪಾಸು ಮಾಡಲು ಸಿಕ್ಕುತ್ತಿದ್ದ ಸುಲಭ ಪುಸ್ತಕಗಳನ್ನು ಓದುತ್ತಿರಲಿಲ್ಲ. ಒಂದೊಂದು ವಿಷಯಕ್ಕೂ ವಿವರವಾದ ನಾಲ್ಕೈದು ಗ್ರಂಥಗಳನ್ನು ಓದಿ ತುಲನೆ ಮಾಡಿ ಗ್ರಹಿಸುತ್ತಿದ್ದಳು. ಆದುದರಿಂದ ಪಾಠ ಹೇಳುವ ಈ ಮೊದಲನೇ ಅನುಭವವು ಸ್ವಲ್ಪವೂ ಕಷ್ಟಕರ ವಾಗಿರಲಿಲ್ಲ. ಆದರೂ ಎಚ್ಚರತಪ್ಪಬಾರದೆಂದು, ಕಾಲೇಜು ಪುಸ್ತಕ ಭಂಡಾರ ದಿಂದ ತಂದ ಎರಡು ಪುಸ್ತಕಗಳನ್ನು ತೆಗೆದು ನೋಡಿ ಸಣ್ಣ ಟಿಪ್ಪಣಿ ಮಾಡಿಕೊಳ್ಳ ತೊಡಗಿದಳು. ಅದು ಹತ್ತು ಹದಿನೈದು ನಿಮಿಷದ ಕೆಲಸ. ಆ ಮೇಲೆ ಮಧ್ಯಾಹ್ನ ಎರಡರಿಂದ ಮೂರರತನಕ ಜೂನಿಯರ್ ಬಿ.ಎ.ಗೆ ಭಾರತದ ಇತಿಹಾಸವಿದೆ. ಭಾರತದ ಇತಿಹಾಸವೆಂದರೆ ಅವಳಿಗೆ ಇನ್ನೂ ಹೆಚ್ಚು ಪರಿಚಿತವಾದ ನೆಲ. ಈ ದಿನ, 'ವೇದಕಾಲದ ಧರ್ಮ ಮತ್ತು ಸಮಾಜ ಪದ್ಧತಿಗಳು' ಎಂಬುದನ್ನು ಹೇಳ ಬೇಕಾಗಿತ್ತು. ಆ ಬಗೆಗೆ ಎಷ್ಟೇ ಓದಿ ವಿಚಾರಮಾಡಿದ್ದರೂ, ಹನ್ನೆರಡರಿಂದ ಎರಡು ಗಂಟೆಯ ತನಕದ ಬಿಡುವಿನಲ್ಲಿ ಅರ್ಧ ಗಂಟೆ ಊಟಕ್ಕೆ ಉಪಯೋಗಿಸಿ, ಉಳಿದಂತೆ ಪುಸ್ತಕ ಭಂಡಾರದಲ್ಲಿ ಕುಳಿತು ವಿಷಯವನ್ನು ಮನಸ್ಸಿನಲ್ಲಿ ವ್ಯವಸ್ಥೆ ಗೊಳಿಸಿಕೊಳ್ಳಬೇಕು. ಹಾಗೆಯೇ, ನಾಳೆಯ ಪಾಠದ ಸಿದ್ಧತೆಯನ್ನೂ ಮುಗಿಸಿಟ್ಟು ಕೊಳ್ಳಬೇಕು ಎಂದು ಯೋಚಿಸಿದಳು.

ಅವಳು ಪುಸ್ತಕ ಹಿಡಿದು ಕೂತು ಐದು ನಿಮಿಷವಾಗಿತ್ತು. ಹೊರಗಿನಿಂದ ಯಾರೋ ಬಾಗಿಲು ತಟ್ಟಿದರು. ಎದ್ದು ಹೋಗಿ ತೆರೆದಳು. ಬಂದಿದ್ದವರು ಮನೆಯ ಮಾಲೀಕರು. ಸುಮಾರು ಅರವತ್ತು ವರ್ಷದ ಮುದುಕ. ನುಣ್ಣಗಿನ ತಲೆಯಲ್ಲಿ ಉಳಿದಿದ್ದ ಬಿಳಿಯ ಕೂದಲನ್ನು ಎಡಕ್ಕೆ ಬೈತಲೆ ತೆಗೆದು ಬಾಚಿದ್ದಾರೆ. ಒಂದು ಗೆರೆ ಕಲಾಪತ್ತಿನ ಪಂಚೆ ಉಟ್ಟು, ಮೈಗೆ ಅರ್ಧತೋಳಿನ ಹೊಲಿದ ಬನೀನು ತೊಟ್ಟಿದ್ದಾರೆ. ಹಣೆಯ ಮೇಲೆ ಎದ್ದುಕಾಣುವಂತಹ ಎರಡು ಬಿಳಿ, ಮಧ್ಯ ಒಂದು ಕೆಂಪು ನಾಮ. ಇವಳು ಬಾಗಿಲು ತೆರೆದ ತಕ್ಷಣ, ಸಿದ್ಧಪಡಿಸಿಟ್ಟು ಕೊಂಡಿದ್ದಂತೆ ಹೇಳಿದರು: 'ಇವತ್ತು ಸಾಯಂಕಾಲದ ಹೊತ್ತಿಗೆ ನಮ್ಮ ರೂಮು ಖಾಲಿ ಮಾಡಿಕೊಡಿ. ಪ್ಲೀಸ್, ನಮ್ಮ ನಂಟರು ಬರ್ತಾರೆ. ಅರ್ಜೆಂಟ್ ಬೇಕು.'

ಅವಳಿಗೆ ಏನೂ ಅರ್ಥವಾಗಲಿಲ್ಲ. ಸೋಜಿಗದಿಂದ ಅವರ ಮುಖ ನೋಡಿದಳು. ಅವರೇ, 'ನಾನು ಸೀರಿಯಸ್ಸಾಗಿ ಹೇಳ್ತಿದೀನಿ. ಹೂಂ. ಗೊತ್ತಾಗ್ಹೋಯ್ತೇ? ನಮ್ಮ ರೂಮು ನಮಗೆ ಬೇಕು. ಇಷ್ಟು ದಿನ ಇದ್ದದ್ದಕ್ಕೆ ಮುರಕೊಂಡು, ಅಡ್ವಾನ್ಸಿನಲ್ಲಿ ಉಳಿದುದ್ದ ಕೊಟ್ಟುಬಿಡ್ತೀನಿ. ನಾನು ಬರೀ ದುಡ್ಡು ಸಂಪಾದನೆ ಮಾಡುಕ್ಕೆ ಅಂತ ರೂಮು ಕಟ್ಟಿಸಿಲ್ಲ' ಎಂದು ಹೇಳಿ ಅವರು ಹಿಂತಿರುಗಿ ನಡೆದು ಮೆಟ್ಟಲುಗಳನ್ನಿಳಿದು ಹೋದರು.

ಎರಡು ನಿಮಿಷ ಹಾಗೆಯೇ ನಿಂತಿದ್ದ ಅವಳು ಮೆಟ್ಟಲಿನ ಹತ್ತಿರ ಹೋಗಿ ಎಡಗಡೆಯಲ್ಲಿ ಬಾಗಿ ಕೂಗಿದಳು: 'ಮಿಸ್ಟರ್ ಕೇಶವಯ್ಯಂಗಾರೇ.' ತಮ್ಮ ವಾಸದ ಭಾಗದ ತುಳಸೀ ಕಟ್ಟೆಯ ಎದುರಿಗೆ ಕೈಮುಗಿದುಕೊಂಡು ನಿಂತಿದ್ದ ಅವರು ತಲೆ ಎತ್ತಿ ನೋಡಿ, 'ಏನು?' ಎಂದರು. 'ಸ್ವಲ್ಪ ಮೇಲೆ ಬನ್ನಿ ಮಾತಾಡಬೇಕು' – ಎಂದು ಹೇಳಿ ಅಲ್ಲಿ ನಿಲ್ಲದೆ ಅವಳು ತನ್ನ ರೂಮಿಗೆ ಹೋದಳು.

ಎರಡು ನಿಮಿಷದಲ್ಲಿ ಮೇಲೆ ಬಂದ ಅವರು ಹೊಸಲಿನ ಹೊರಗೆ ನಿಂತೇ ಕೇಳಿದರು: 'ನಾನು ದೇವರ ಸ್ತೋತ್ರ ಮಾಡ್ತಿದ್ದೆ. ಅದೇನು ಹೇಳಿಬಿಡಿ. ಹೂಂ ಪ್ಲೀಸ್.'

'ಇದ್ದಕ್ಕಿದ್ದ ಹಾಗೇ ರೂಮು ಖಾಲಿ ಮಾಡುಕ್ಕೆ ಕೇಳಿದರೆ ಹ್ಯಾಗಾಗುತ್ತೆ? ನಿಮಗಾಗಿರೂ ತೊಂದರೆ ಏನು?'

'ನಾನು ಆಗಲೇ ಹೇಳಿಬಿಟ್ನಲ್ಲ. ನಾನು ಬರೀ ದುಡ್ಡು ಸಂಪಾದನೆ ಮಾಡುಕ್ಕೆ ಅಂತ ರೂಮು ಕಟ್ಟಿಸಿಲ್ಲ ಅಂತ. ಅರ್ಥ ಮಾಡ್ಕಂಡ್‌ಬಿಡಿ.'

'ಅದರಲ್ಲಿ ಅರ್ಥ ಮಾಡ್ಕಳೋವಂಥದು ಏನಿದೆ?'

'ಬಿಡಿಸಿ ಹೇಳಬೇಕೇನು? ದುಡ್ಡು ಸಂಪಾದನೆ ಮಾಡುಕ್ಕೆ ಹೋಟಲಿನವರು ಕಟ್ಟುಸ್ತಾರೆ. ಅಲ್ಲಿ ಏನು ಬೇಕಾದ್ರೂ ಮಾಡಭೌದು. ನಮ್ಮನೇಲಿ ಹೆಣ್ಣುಮಕ್ಕಳಿದಾರೆ. ಉಳಿದ ಬಾಡಿಗೆಯೋರು ಅಬ್‌ಜೆಕ್ಟ್ ಮಾಡ್ತಾರೆ. ಹೂಂ. ಇವತ್ತು ಖಾಲಿ ಮಾಡಿಬಿಡಿ. ನಿಮಗೆ ಏಟ್ ಅವರ್ಸ್ ಟೈಂ ಕೊಟ್ಟಿದೀನಿ. ಹೂಂ.'

ಸತ್ಯಳಿಗೆ ರೇಗಿತು: 'ನೀವು ಹುಡುಗಾಟದ ಮಾತಾಡ್ತಿದೀರೋ ಹ್ಯಾಗೆ? ಏನು ನಿಮ್ಮ ಮಾತಿನ ಅರ್ಥ?'

'ಬಾಯಿ ಜೋರು ಮಾಡಿದ್ರೆ ಹೆದರ್ಕತ್ತೀನೇನು ನಾನು? ಎಂಥೆಂಥೋರುನ್ನ ನೋಡಿದೀನಿ. ಇಂಜಿನೀಯರಾಗಿ ರಿಟೈರಾಗಿದೀನಿ ನಾನು ಗೊತ್ತಾ? ಹೂಂ. ಬೀದೀಲಿ ಆಟೋರಿಕ್ಷಾದಿಂದ ಇಳಿದು ಗಂಡಸಿನ ಕೈ ಹಿಡಕಂಡು ಶೇಕ್‌ಹ್ಯಾಂಡ್ ಕೊಟ್ರಲ, ಯಾವನು ಅವನು? ನಮ್ಮ ಹೆಣ್ಣುಮಕ್ಕಳು ನೋಡಿದರೆ ಏನಾಗುತ್ತೆ

ಪರಿಣಾಮ? ನಾವು ಎಂಥಾ ಮನೆತನದೋರು ಗೊತ್ತಾ? ಹೂಂ.'

ಅಷ್ಟರಲ್ಲಿ ಮೇಲಿನ ಮನೆಯ ಯಜಮಾನರು ಕಾದುಕೊಂಡಿದ್ದವರಂತೆ ಅಲ್ಲಿಗೆ ಬಂದು ತಮ್ಮ ಹೇಳಿಕೆ ನೀಡಿದರು. ಬಿಳಿಯ ಪಂಚೆಯಲ್ಲಿ ಸೈಕಲ್ ಕಚ್ಚೆ ಹಾಕಿ ಕ್ಲೋಸ್ ಕಾಲರ್ ಕಾಟನ್ ಕೋಟು ಹಾಕಿದ್ದ ಆತ ಕರಿಯ ಟೋಪಿ ಇಟ್ಟುಕೊಂಡಿದ್ದರು. ಹಣೆಯ ಮೇಲೆ ಮತ್ತು ಕಣ್ಣುಗಳ ಹತ್ತಿರ ಎರಡು ಬದಿಗಳಲ್ಲೂ ಹೊಡೆದಿದ್ದ ಮುದ್ರೆ ಸ್ಪಷ್ಟವಾಗಿ ಕಾಣುತ್ತಿತ್ತು.

'ನಾನು ಎದುರಿಗೇ ಹೇಳ್ತೀನಿ. ಹಿಂದೆ ಮುಂದೆ ಮಾತಾಡೋನಲ್ಲ. ನೋಡಿದರೆ ಹೊಲೇರೋನ ಹಾಗೆ ಕಾಣ್ತಿದ್ದನಂತೆ. ಗಾಂಧೀಟೋಪಿ. ಹೊಲೇರೋನು ಅಂತ ಅವರ ಮಾತಿನಲ್ಲೇ ಗೊತ್ತಾಯ್ತಂತೆ. ಅವನನ್ನ, ಈ ಲೇಡಿ ರೂಮಿನ ಒಳಕ್ಕೆ ಸೇರಿಸಿದ್ದರಂತೆ. ಇವರ ಅಪ್ಪ, ಇವರನ್ನ ಹಿಡಕೊಂಡು ಎಕ್ಕಡದಲ್ಲಿ ಜೊಡೆದು ಹೊಡೆದು ಇಟ್ಟರಂತೆ. ಈ ಲೇಡಿ, ಶೂದ್ರ ಹುಡುಗನ್ನ ಮದುವೆಯಾಗಬೇಕು ಅಂತ ಹಟ ಮಾಡ್ತಿದಾರಂತೆ. ಅವನು ಇವತ್ತು ಬೆಳಗ್ಗೆಯೂ ಈ ರೂಮಿಗೆ ಬಂದಿದ್ದ. ಇಂಥದೆಲ್ಲ ಆದರೆ ನಾವು ಈ ಮನೇಲಿ ಇರೂದು ಹ್ಯಾಗೆ? ನಾವು ಬಾಡಿಗೆ ಕೊಡೂದು....' – ಎಂಬ ಹೇಳಿಕೆಯ ಅರ್ಥಕ್ಕೆ ಪ್ರವೇಶಿಸಿದ ಮಾಲೀಕರು, 'ನಾನು ಆಗಲೇ ಅಂದೆನಲ್ಲ. ಹೂಂ. ಬರೀ ದುಡ್ಡಿಗೆ ಅಂತ ನಾನು ಕಟ್ಟಿಸಿಲ್ಲ' ಎಂದರು.

ಅಷ್ಟರಲ್ಲಿ ಹಿಂಭಾಗದ ಕಟ್ಟಡದ ಮಹಡಿಯ ಮೇಲೆ ಏಳೆಂಟು ಜನ ಹೆಂಗಸರು ಗಂಡಸರು ಮಕ್ಕಳು ಸೇರಿ ಈ ದೃಶ್ಯವನ್ನೇ ನೋಡುತ್ತಿದ್ದರು. ತನ್ನ ಪಕ್ಕದ ಮನೆಯ ಹೆಂಗಸೇ ಅಲ್ಲದೆ, ಆಕೆಯ ಎರಡು ಪುಟ್ಟ ಮಕ್ಕಳೂ ಹೊರಗೆ ಬಂದು ನೋಡುತ್ತಿದ್ದರು. ತಾನು ಬಾಯಿ ಹಾಕಲು, ಆ ಹೆಂಗಸು ಕಾಯ್ದು ನಿಂತಿರುವಂತೆ ಕಾಣುತ್ತಿತ್ತು. ಸತ್ಯಳಿಗೆ ನಾಚಿಕೆಯಾಯಿತು. 'ರೂಮು ಖಾಲಿ ಮಾಡಬೇಕಾದರೆ ಮಾಡ್ತೀನಿ. ಸಾಯಂಕಾಲ ಅಂದ್ರೆ, ಸಾಯಂಕಾಲ ಸಾಧ್ಯವಿಲ್ಲ. ಒಂದೆರಡು ಮೂರು ದಿನ ತಾಳಿ' – ಎಂದು ಹೇಳಿ ಕೋಣೆಯ ಬಾಗಿಲನ್ನು ಥಪ್ಪನೆ ಹಾಕಿಕೊಂಡಳು.

'ಥ್ಯಾಂಕ್ಯೂ. ಸೋಮವಾರದೊಳಗೆ ಖಾಲಿ ಮಾಡಲೇ ಬೇಕು. ಹೂಂ' – ಎಂದು ಕೇಶವಯ್ಯಂಗಾರರು ಹಿಂತಿರುಗಿದ ಶಬ್ದ ಕೇಳಿಸಿತು. ಅವರು ನಾಲ್ಕೈದು ಹೆಜ್ಜೆ ನಡೆದ ಶಬ್ದ ಕೇಳಿತು. ಅನಂತರ, 'ನೀವೆಲ್ಲ ಯಾಕೆ ಇಲ್ಲಿಗೆ ಬಂದ್ರಮ್ಮ? ಇಂಥ ಹೆಂಗಸಿನ ಎದುರು ಮಾತಾಡ್ತಿರೂವಾಗ ನೀವು ದೂರದಲ್ಲಿ ಕೂಡ ನೋಡಬಾರದು. ಬೆಳೆದ ಹೆಣ್ಣು ಮಕ್ಕಳು ನೀವು' ಎಂದದ್ದು ಸ್ಪಷ್ಟವಾಗಿ ತಿಳಿಯಿತು. ಸತ್ಯ ಬೀದಿಯ ಕಡೆಗಿದ್ದ ಕಿಟಕಿಯಲ್ಲಿ ನೋಡುತ್ತಾ ಸುಮ್ಮನೆ ಕೋಣೆ

ಯಲ್ಲಿ ನಿಂತಳು. ಐದು ನಿಮಿಷದಲ್ಲಿ ಮೇಲಿನ ಮನೆಯ ಪದ್ಮನಾಭಾಚಾರ್ಯರು ಕುಪ್ಪಳಿಸಿ ಕುಪ್ಪಳಿಸಿ ಸೈಕಲ್ ಹತ್ತುವುದು ಕಾಣಿಸಿತು.

ಕಾಲೇಜಿಗೆ ಹೊತ್ತಾಗುತ್ತಿತ್ತು. ಬೆಳಗ್ಗೆ ಬದಲಾಯಿಸಿದ್ದ ಬಟ್ಟೆಯೇ ಸಾಕಾಗುತ್ತಿತ್ತು. ತನ್ನ ಪರ್ಸನ್ನು ಎಡಮೊಣಕೈಗೆ ನೇತುಹಾಕಿಕೊಂಡು ಕೈಲಿ ಎರಡು ಪುಸ್ತಕ ಹಿಡಿದು ಕೋಣೆಗೆ ಬೀಗ ಹಾಕಿ ಅವಳು ಹೊರಗೆ ಬಂದಳು. ಪದ್ಮನಾಭಾಚಾರ್ಯರ ಹೆಂಡತಿ ಫಲ್ಗೂಬಾಯಿ ತಂತಿ-ಬಾಗಿಲಿನ ಹಿಂಬದಿಯ ತೆರೆಯ ಹಿಂದೆ ನಿಂತು ನೋಡುತ್ತಿದ್ದುದು ತಿಳಿಯಿತು.

ಸತ್ಯಳಿಗೆ ತುಂಬ ಸಿಟ್ಟು ಬಂದಿತ್ತು. ಈಗ ನಡೆದಿರುವುದನ್ನು ಅವಳು ನಿರೀಕ್ಷಿಸಿರಲಿಲ್ಲ. ಮೆಲ್ಲನೆ ಮಾತನಾಡಿ ಎಂದು ಹೇಳಿದರೂ ಅವಳ ತಂದೆ ಧ್ವನಿ ತಗ್ಗಿಸಿರಲಿಲ್ಲ. ಸಿಟ್ಟಿನಲ್ಲಿ ಯಾರಾದರೂ ಹಾಗೆಯೇ. ಅಲ್ಲದೆ ಮೆಲ್ಲಗೆ ಮಾತನಾಡುವುದು ಹಳ್ಳಿಯವರಿಗೆ ಕಷ್ಟವೇ. ಕೇಶವಯ್ಯಂಗಾರರ ಮನೆಯಲ್ಲಿ ನಾಲ್ಕು ಜನ ಬೆಳೆದ ಹುಡುಗಿಯರಿದ್ದಾರೆ. ಇಪ್ಪತ್ತೆಂಟರಿಂದ ಹದಿನೆಂಟರ ತನಕ ವಯಸ್ಸಿನವರು. ಇಬ್ಬರು ಎಲ್ಲೋ ಕೆಲಸಕ್ಕೆ ಹೋಗುತ್ತಾರೆ. ಆದರೆ ನನ್ನದು ದಾರಿ ತಪ್ಪಿದ ನಡತೆ ಎಂದು ಅವರ ಕಲ್ಪನೆ. ಅಪಮಾನದಿಂದ ಅವಳ ಮನಸ್ಸು ಕುದಿಯುತ್ತಿತ್ತು. 'ಬಾಡಿಗೆ ಬಿಸ್ಹಾಕಿದೀನಿ. ಇಲ್ಲಿ ನಿಂತು ಬಗುಳುಕ್ಕೆ ನಿನಗೆ ಅಧಿಕಾರವಿಲ್ಲ. ಗೆಟ್ ಔಟ್'—ಎಂದೇಕೆ ನಾನು ಹೇಳಲಿಲ್ಲ, ಎಂದು ತನ್ನನ್ನು ತಾನೇ ಹಳಿದುಕೊಂಡಳು. ಇಷ್ಟು ಜನ ಅವರು, ಎದುರು ಮಹಡಿಯ ಮೇಲೆ ಅಷ್ಟು ಜನ ಪ್ರೇಕ್ಷಕರು ಇರುವಾಗ ಹೆಂಗಸಾದ ನಾನು ಹೇಗೆ ಮಾತನಾಡಬಹುದಾಗಿತ್ತು? ಅಲ್ಲದೆ ಈ ಊರಿಗೆ, ಈ ಮೊಹಲ್ಲಾಕ್ಕೆ, ಈ ಜನಕ್ಕೆ ನಾನು ಇಷ್ಟು ಹೊಸಬಳು ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡಳು.

ಸಿದ್ಧತೆಯ ಅಗತ್ಯವೇನೂ ಇರಲಿಲ್ಲ. ಆದರೆ ಮನಸ್ಸಿನ ಸಮಾಧಾನ ತಪ್ಪಿದುದರಿಂದ ಆ ದಿನ ಸರಿಯಾಗಿ ಪಾಠ ಹೇಳಲು ಅವಳಿಗೆ ಆಗಲಿಲ್ಲ. ವಿಷಯ ಸಂಪತ್ತೂ, ಸ್ಪಷ್ಟವಾಗಿ ತಿಳಿಸಿಹೇಳುವ ಶಕ್ತಿಯೂ ಇದ್ದುದರಿಂದ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಪಾಠವು ಎಂದಿನಂತೆ ಆಕರ್ಷಕವಾಗಿ ಕಂಡಿತಾದರೂ ಅವಳಿಗೆ ಅಸಮರ್ಪಕವೆನಿಸಿತು. ಪೀರಿಯಡ್ ಕಳೆದ ಮೇಲೆ ಪುಸ್ತಕಭಂಡಾರದಲ್ಲಿ ಕುಳಿತಳು. ಯೋಚನೆ ಶುರುವಾಯಿತು. ಬೇರೆ ಕೋಣೆ ಹುಡುಕಬೇಕು. ಬೇಕು ಎಂದ ತಕ್ಷಣ ಈ ಊರಿನಲ್ಲಿ ಒಂದು ರೂಮು ಸಿಕ್ಕುವುದೂ ಕಷ್ಟ. ಹೊಸ ರೂಮು ಹುಡುಕುವುದು ಮಾತ್ರವಲ್ಲ, ಈಗ ಇರುವಲ್ಲಿಂದ ಅಪಮಾನಿತಳಾಗಿ ಹೋಗಬೇಕಾಗಿದೆ. ಅಪಮಾನಿತಳಾಗಲು ನಾನು ಮಾಡಿರುವ ಕೆಟ್ಟ ಕೆಲಸವಾವುದೂ ಏನು—ಎಂದು ತನ್ನನ್ನು ತಾನೇ ಕೇಳಿಕೊಂಡಳು. ಅವರೂ ಈ ಜನರಿಂದ

ದೂರ ಹೋಗಬೇಕು. ಬ್ರಾಹ್ಮಣರು ವಾಸವಾಗಿರುವ ಸುತ್ತಿನಿಂದ ಹೋಗಬೇಕು. ಯಾರಾದರೂ ಒಕ್ಕಲಿಗರು, ಮುಸಲ್ಮಾನರು, ಕ್ರೈಸ್ತರು ಅಥವಾ ಹರಿಜನರು ಮಾಲೀಕರಾಗಿರುವ ಕೋಣೆಯನ್ನು ಹುಡುಕಬೇಕು ಎನಿಸಿತು. ಆದರೆ ಎಷ್ಟು ದಿನ ರೂಮಿನಲ್ಲಿರುವುದು? ಹೆಚ್ಚೆಂದರೆ ಇನ್ನು ಇಪ್ಪತ್ತು ದಿನ, ಒಂದು ತಿಂಗಳಿನಲ್ಲಿ ಮದುವೆಯಾಗುತ್ತೆ. ಆ ಮೇಲೆ ಕೋಣೆಯ ಅಗತ್ಯವಿಲ್ಲ. ಅಲ್ಲಿಯ ತನಕ ಯಾವುದಾದರೂ ಹೋಟೆಲಿನಲ್ಲಿ ಇದ್ದರೆ, ಎಂಬ ಯೋಚನೆ ಬಂತು. ಆದರೆ ಹೆಂಗಸಾದ ತಾನು ಒಬ್ಬಳೇ ಹೋಟೆಲಿನಲ್ಲಿ ರೂಮು ಮಾಡಿಕೊಂಡಿರುವುದು ಈ ದೇಶದಲ್ಲಿ, ಅದರಲ್ಲೂ ಬೆಂಗಳೂರಿನಲ್ಲಿ ಸಾಧ್ಯವಿಲ್ಲ ಎನಿಸಿತು.

ಎರಡರಿಂದ ಮೂರು ಗಂಟೆಯ ಪಾಠವನ್ನು ಮುಗಿಸಿದವಳು ನೇರವಾಗಿ ಕೋಣೆಗೆ ಹೊರಟಳು. ನಾಲ್ಕಕ್ಕೆ ಸರಿಯಾಗಿ ಶ್ರೀನಿವಾಸ ಬರುತ್ತಾನೆ. ಅವನ ಕೈಲೇ ಹೇಳುವುದು, ಅವನು ಹೇಗೆ ಮಾಡು ಅಂದರೆ ಹಾಗೆ ಮಾಡುವುದು ಎಂದು ನಿರ್ಧರಿಸಿ ಹೆಜ್ಜೆ ಹಾಕಿದಳು. ಕಾಂಪೌಂಡು ದಾಟಿ ಮನೆಯ ಪಕ್ಕದಲ್ಲಿ ನಡೆಯುವಾಗ ಕೇಶವಯ್ಯಂಗಾರರ ಮನೆಯ ಇಬ್ಬರು ಹುಡುಗಿಯರು ಎರಡು ಪ್ರತ್ಯೇಕ ಕಿಟಕಿಗಳಲ್ಲಿ ಅವಳನ್ನು ನೋಡುತ್ತಿದ್ದರು. ಒಬ್ಬಳು ನೋಡುತ್ತಿರುವುದು ಪ್ರಾಯಶಃ ಮತ್ತೊಬ್ಬಳಿಗೆ ಗೊತ್ತಿಲ್ಲ. ಮೆಟ್ಟಲು ಹತ್ತಿ ಬಾಗಿಲು ತೆಗೆಯುವ ಶಬ್ದವಾದಾಗ ಘಲ್ಗೂಬಾಯಿ ತಂತಿಬಲೆಯ ಹಿಂದಿನ ತೆರೆಯ ಮರೆಯಲ್ಲಿ ಬಂದು ನಿಂತದ್ದು ಕಾಣಿಸಿತು. ಆ ಹೆಂಗಸಿನ ಬಗೆಗೆ ಸತ್ಯಳಿಗೆ ವಿಪರೀತ ಕೋಪ ಬಂತು. ಮನೆಯಲ್ಲಿ ಅವಳಿಗೆ ಬೇರೆ ಕೆಲಸವೇ ಇಲ್ಲವೇ – ಎನಿಸಿತು. ಗಾಲ್ಕು ಗಂಟೆಗೆ ಶ್ರೀನಿವಾಸ ಬಂದಾಗಲೂ ಹೀಗೆಯೇ ನೋಡುತ್ತಾಳೆ. ಸದಾ ಮನೆಯಲ್ಲೇ ಇರುವ ಕೇಶವಯ್ಯಂಗಾರಿಯೂ ನೋಡುತ್ತಾನೆ. ಶ್ರೀನಿವಾಸನ ಹಿಂದೆಯೇ ಮೆಟ್ಟಲು ಹತ್ತಿ ಬಂದು ಅವನು ಜಗಳ ತೆಗೆಯಬಹುದು. ಕೆಟ್ಟ ಮಾತಾಡಬಹುದು. ಶ್ರೀನಿವಾಸ ಸ್ವಲ್ಪ ಸಿಟ್ಟಿನ ಸ್ವಭಾವದವನು. ತಕ್ಷಣ ಹಿಂತಿರುಗಿ ಉತ್ತರ ಕೊಡುತ್ತಾನೆ. ಜಗಳವೇ ಆದೀತು. ಆದರೆ ಒಂದು ವಿಷಯದಲ್ಲಿ ಅವಳಿಗೆ ಪೂರ್ತಿ ನಂಬಿಕೆ ಇತ್ತು: 'ಜಗಳವಾದರೂ ಇವರು ಹೊಡೆದಾಟ ಮಾಡುವವರಲ್ಲ. ಆ ಶಕ್ತಿ ಇವರಿಗಿಲ್ಲ. ಇದ್ದರೆ ಇವರೇಕೆ ಹೀಗಿರುತ್ತಿದ್ದರು' – ಎನಿಸಿತು.

ನಾಲ್ಕು ಗಂಟೆಗೆ ಶ್ರೀನಿವಾಸ ಬರಲಿಲ್ಲ. ನಾಲ್ಕೂಕಾಲಾದರೂ ಬರಲಿಲ್ಲ. ನಾಲ್ಕೂವರೆ, ನಾಲ್ಕೂ ನಲವತ್ತು, ನಲವತ್ತೈದಾದರೂ ಬರಲಿಲ್ಲ. ಅವನ ತಂದೆ ಏನಾದರೂ ಕೆಲಸ ಹೇಳಿದಾರೇನೋ! ಅಥವಾ ಸರಿಯಾದ ಟೈಂ ಮರೆತು ನಿದ್ದೆಮಾಡ್ತಾ ಮಲಗಿದಾನೋ! ಆದರೆ ತನ್ನನ್ನು ನೋಡಲು ಬರುವುದನ್ನು ಅವನು ಮರೆಯುವುದು ಹೇಗೆ, ಮರೆತು ನಿದ್ದೆ ಮಾಡುವುದು ಹೇಗೆ, ಎಂದು

ಸಮಾಧಾನ ತಂದುಕೊಂಡಳು. ಈ ಸಮಾಧಾನದಿಂದ ಹೆಮ್ಮೆಯೂ ಎನಿಸಿತು. ಮತ್ತೆ ಅರ್ಧ ಗಂಟೆ ಕಳೆಯಿತು. ಈ ರೂಮು ಬಿಡಬೇಕು. ಬೇರೆಯದು ಹುಡುಕಬೇಕು. ಇನ್ನು ಎಷ್ಟು ದಿನಕ್ಕೆ ಬೇಕು ಬೇರೆ ರೂಮು? – ಎಂಬ ಹಳೆಯ ಪ್ರಶ್ನೆ ಮತ್ತೆ ಹುಟ್ಟಿತು. ಶ್ರೀನಿವಾಸ ಬೇಗ ಬರಬಾರದೆ? ಐದೂವರೆ ಕಳೆಯಿತು. ಇನ್ನೆಷ್ಟು ದಿನಕ್ಕೆ ಎಂಬುದು ನಿಶ್ಚಯವಾದರೆ ಏನಾದರೂ ಏರ್ಪಾಡು ಮಾಡಬಹುದು. ಇವನು ಯಾಕೆ ಬರಲಿಲ್ಲ ಇನ್ನೂ?

ಅಷ್ಟರಲ್ಲಿ ಪಕ್ಕದ ಮನೆಯ ಪದ್ಮನಾಭಾಚಾರ್ಯರು ಬಂದ ಶಬ್ದವಾಯಿತು. ಅವರ ಮನೆಯ ಬಾಗಿಲು ತಟ್ಟಿದ ಶಬ್ದ ಕೇಳಿಸಿತು. ಬಾಗಿಲು ತೆಗೆದ ಕೀರ್‍ರ್ ಎಂಬ ಸದ್ದು. ಒಳಗೆ ಹೋದ ತಕ್ಷಣ ಆತ ಹೆಂಡತಿಯನ್ನು ಪಿಸುಮಾತಿನಲ್ಲಿ ಕೇಳುತ್ತಾರೆ. ನಾನು ಇಷ್ಟು ಹೊತ್ತಿಗೇ ರೂಮಿನಿಂದ ಹೋದೆ, ಇಷ್ಟು ಹೊತ್ತಿಗೇ ಹಿಂತಿರುಗಿದೆ ಎಂದು ಆ ಗೃಹಿಣಿ ವರದಿ ಒಪ್ಪಿಸುತ್ತಾಳೆ. ಗಂಡ ಹೆಂಡರಿಬ್ಬರಿಗೂ ಮದುವೆಯಾದ ಹೊಸತರಲ್ಲಿಯೂ ಪರಸ್ಪರ ಇರದಿದ್ದ ಉತ್ಕಟ ಅನ್ಯೋನ್ಯ ಈ ವಿಷಯದಲ್ಲಿ ಇರುತ್ತದೆ ಎಂದುಕೊಂಡು ತನ್ನಲ್ಲಿಯೇ ನಕ್ಕಳು. ತಕ್ಷಣ ಸಿಟ್ಟು ಬಂತು. ಬೆಳಗ್ಗೆ ಆತ ಹಾಗೆ ಹೇಳುತ್ತಿದ್ದರೆ ನಾನೇಕೆ ಸುಮ್ಮನಿದ್ದೆ, ದಬಾಯಿಸಿ ಬಿಡಬೇಕಾಗಿತ್ತು, ಎಂದುಕೊಂಡಳು.

ಎರಡು ನಿಮಿಷದಲ್ಲಿ ಒಂದು ಯೋಚನೆ ಬಂತು. ಎದ್ದು ಬಾಗಿಲು ತೆರೆದು ಹೊರಗೆ ಬಂದಳು. ಆ ಶಬ್ದಕ್ಕೆ ಫಲ್ಗೂಬಾಯಿ ತನ್ನ ಮನೆಯ ಒಳಗಿನ ತೆರೆಯ ಹಿಂದೆ ಬಂದು ನಿಂತದ್ದು ಇವಳಿಗೆ ಗೊತ್ತಾಯಿತು. ಮೆಟ್ಟಿಲಿನ ಹತ್ತಿರ ಹೋಗಿ ಎಡಭಾಗಕ್ಕೆ ಬಾಗಿ, 'ಮಿಸ್ಟರ್ ಐಯ್ಯಂಗಾರ್' ಎಂದು ಕೂಗಿದಳು. ತುಳಸಿಯ ಹತ್ತಿರದ ನಲ್ಲಿಯ ಕಟ್ಟೆಯ ಮೇಲೆ ಎಡಗಾಲು ಇಟ್ಟುಕೊಂಡು ಕೈಲಿ ಒಂದು ಗುಲಾಬಿ ಹೂವು ಹಿಡಿದು ಸಿನಿಮಾ ಹಾಡು ಹೇಳಿಕೊಂಡು, ತನ್ನಲ್ಲಿಯೇ ಅಭಿನಯಿಸಿಕೊಳ್ಳುತ್ತಿದ್ದ ಇಪ್ಪತ್ತೆಂಟು ವರ್ಷದ ಅವರ ಅವಿವಾಹಿತ ಹಿರಿಯ ಮಗಳು ತಲೆ ಎತ್ತಿ ನೋಡಿದಳು. 'ನಾನು ಕರೀತಿದೀನಿ ಅಂತ ನಿಮ್ಮ ತಂದೆಗೆ ಹೇಳಿ' – ಎಂದು ಇಂಗ್ಲಿಷಿನಲ್ಲಿ ಹೇಳಿ ಅವಳು ತನ್ನ ರೂಮಿಗೆ ಬಂದಳು.

ಎರಡು ನಿಮಿಷದಲ್ಲಿ ಕೇಶವಯ್ಯಂಗಾರರು ಮೇಲೆ ಬಂದು ರೂಮಿನ ಬಾಗಿಲ ಮುಂದೆ ನಿಂತರು. ಈಗಲೂ ಅವರು ಬೆಳಗ್ಗೆ ಇದ್ದ ವೇಷದಲ್ಲೇ ಇದ್ದರು. ಅವರನ್ನು ಒಳಗೆ ಕರೆಯದೆ ಸತ್ಯಳೇ ಹೊರಗೆ ಬಂದು ಹೇಳಿದಳು: 'ನಾನು ಈ ರೂಮು ಬಿಡುಲ್ಲ. ಬಿಡಿಸಲೇ ಬೇಕು ಅನ್ನೋದಿದ್ರೆ ನೀವು ಕೋರ್ಟಿಗೆ ಹೋಗಬೌದು.'

ಅವರು ಅವಾಕ್ಕಾದರು. ಪ್ರತಿ-ಉತ್ತರ ಹೊಳೆಯಬೇಕಾದರೆ ಒಂದು ನಿಮಿಷ

ಹಿಡಿಯಿತು. 'ಏನು ನೀವನ್ನೂದು? ನಾನು ರೂಮು ಕಟ್ಟಿಸಿರೂದು, ಹೂಂ....' ಎಂಬ ಅವರ ವಾಕ್ಯವನ್ನು ಅವಳು ಅರ್ಧಕ್ಕೆ ಕತ್ತರಿಸಿದಳು: 'ಅವಮಾನವಾಗುವಂಥ ಮಾತು ನಿಮ್ಮ ಬಾಯಲ್ಲಿ ಬಂದ್ರೆ ಪೋಲೀಸರಿಗೆ ಕಂಪ್ಲೇಂಟು ಕೊಡ್ತೀನಿ. ಒಬ್ಬಂಟಿ ಹೆಂಗಸಿನ ಹತ್ತಿರ ಮರ್ಯಾದೆಯಾಗಿ ಮಾತಾಡಬೇಕು.'

'ಮರ್ಯಾದೆಯಾಗಿಯೇ ಮಾತಾಡ್ತಿದೀನಮ್ಮ' – ಎಂದು ಉಗುಳು ನುಂಗಿಕೊಂಡು ಅವರು ಧ್ವನಿ ಬದಲಾಯಿಸಿದರು: 'ನನ್ನ ಹಿರೀ ಮಗಳು ಚಾರ್ಟರ್ಡ್ ಅಕೌಂಟೆನ್ಸಿ ಪರೀಕ್ಷೆಗೆ ಕಟ್ಟಬೇಕು. ಅವಳು ಓದಿಕಳುಕ್ಕೆ ರೂಂ ಬೇಕು. ಹೂಂ. ಪ್ಲೀಸ್ ವೆಕೇಟ್ ಮಾಡಿಕೊಡಿ.'

'ನಂಗೆ ಬೇರೆ ರೂಂ ಸಿಕ್ಕೂತನಕ ಬಿಡುಲ್ಲ. ಅದಕ್ಕೆ ಮುಂಚೆ ನೀವೇ ಆಗಲಿ ಬೇರೆ ಯಾರಾದರೂ ಬಾಡಿಗೆಯೋರೇ ಆಗಲಿ, ಹೆಚ್ಚು ಕಮ್ಮಿ ಮಾತಾಡಿದರೆ ನಾನು ಸುಮ್ಮನಿರುಲ್ಲ. ನನ್ನ ರೂಮಿಗೆ ಬರೋರು ಯಾರು ಎಂತು ಅಂತ ಕೇಳೂ ಅಧಿಕಾರ ಯಾರಿಗೂ ಇಲ್ಲ. ನಾನು ಇಳಿಯುವಾಗ ಹತ್ತುವಾಗ ಯಾರೂ ಕಿಟಕೀಲಿ ಇಣಿಕಿ ನೋಡಕೂಡದು. ನನ್ನ ರೂಮಿಗೆ ಬರೋರು ಬೇರೆ ಯಾರೂ ಅಲ್ಲ. ಇನ್ನು ಹದಿನೈದು ದಿನದಲ್ಲೇ ನನಗೂ ಅವರಿಗೂ ಮದುವೆಯಾಗುತ್ತೆ.'

'ಅದು ನಿಮ್ಮ ಇಷ್ಟ. ಹೂಂ. ನಿಮ್ಮ ಪರ್ಸನಲ್ ವಿಷಯ ನನಗ್ಯಾಕೆ? ನಾನು ಹೇಳಿದ್ದು ನನ್ನ ರೂಮು....'

'ನಾನು ಬಿಡೂತನಕ ಮಾತಾಡಕೂಡದು. ತಿಂಗಳು ತುಂಬೂತ್ಲು ಬಾಡಿಗೆ ತಗೊಂಡು ಹೋಗಿ. ಹೆಚ್ಚು ಕಮ್ಮಿ ಆದರೆ ರೆಂಟ್ ಕಂಟ್ರೋಲರ್ ಇದಾರೆ' – ಎಂದು ಹೇಳಿ ಕೋಣೆಯ ಒಳಗೆ ಬಂದು ಬಾಗಿಲು ಹಾಕಿಕೊಂಡಳು.

ಮಾಲೀಕರು ಮರುಮಾತಿಲ್ಲದೆ ಹೊರಟುಹೋದ ಸದ್ದು ಕೇಳಿಸಿತು.

೩

ಅವಳು ಒಂದು ಹೋಟೆಲು ಎಂದು ನಿಶ್ಚಯಿಸಿಕೊಂಡಿರಲಿಲ್ಲ. ಹೀಗೆ ಮುಂದೆ ಎಷ್ಟು ದಿನ ಊಟ ಮಾಡುವುದು ಎಂಬುದೇ ನಿಶ್ಚಯವಾಗಿಲ್ಲದಿರುವಾಗ ತಿಂಗಳ ಲೆಕ್ಕದಲ್ಲಿ ಗೊತ್ತುಮಾಡಿಕೊಳ್ಳುವುದು ಹೇಗೆ ಎಂದು ಯೋಚಿಸಿ, ಹತ್ತಿರ ಸಿಕ್ಕಿದ ಯಾವ ಹೋಟೆಲಿನಲ್ಲಾದರೂ ಊಟ ಮಾಡುತ್ತಿದ್ದಳು. ಸಂಜೆ ಏಳೂವರೆಯಾದರೂ ಶ್ರೀನಿವಾಸ ಬರಲಿಲ್ಲ. ಯಾಕೆ ಬರಲಿಲ್ಲ ಎಂಬ ಆತಂಕ ಒಂದು ಕಡೆಯಾದರೆ, ನಾನು ಊಟಕ್ಕೆಂದು ಹೋದಾಗ ಅವನು ಬಂದು ಎಲ್ಲೆಂದು ಹುಡುಕಿಯಾನು ಎಂಬ ಯೋಚನೆ ಇನ್ನೊಂದು ಕಡೆ. ಅವನನ್ನು ನೋಡಲು ಮನಸ್ಸು

ತವಕಿಸುತ್ತಿತ್ತು. ಅಲ್ಲದೆ ಮದುವೆಯ ದಿನವನ್ನು ತಂದೆಯ ಕೂಡ ಮಾತ ನಾಡುವುದಾಗಿ ಹೇಳಿ ಅವನು ಹೋಗಿದ್ದ. ಅವರ ಅಭಿಪ್ರಾಯದಲ್ಲಿ ಏನಾದರೂ ಬದಲಾವಣೆಯಾಗಿದೆಯೇ ಎಂಬ ಸಂಶಯ ತಲೆಹಾಕಿತು. ಇಷ್ಟಕ್ಕೂ ಅವರು ಯಾವ ಕಾರಣದಿಂದ ಹಿಂದ್‌ಲೇಟು ಹಾಕಬಹುದು? ಮೇಲುಜಾತಿಯ ಹುಡುಗಿ ಎಂಬ ಭಯ ಸಂಕೋಚಗಳು, ವಿದ್ಯಾವಂತೆಯಲ್ಲದ ರಂಗಮ್ಮನಿಗೆ ಇರುವುದು ಸಹಜ. ಅವೂ ಪರಿಹಾರವಾಗಿವೆ. ವಿದ್ಯಾವಂತರಾಗಿ, ಗಾಂಧೀಜಿಯ ಆಶ್ರಮ ದಲ್ಲಿದ್ದು, ಮಂತ್ರಿಗಳಾಗಿ, ಇಷ್ಟೆಲ್ಲ ಪ್ರಪಂಚವನ್ನು ಬಲ್ಲ ಇವರಿಗೆ ಇಂತಹ ಅಡ್ಡಿ ಆತಂಕಗಳು ಇರುವುದಿಲ್ಲ. ಊರಿನಲ್ಲಿ ನಮ್ಮ ಅಪ್ಪನ ವಿರೋಧ ಕಟ್ಟಿಕೊಳ್ಳಬಾರ ದೆಂಬ ಒಂದು ಲೆಕ್ಕಾಚಾರ ಇರಬಹುದು. ಆದರೆ ಮಗ ಇಷ್ಟು ಗಟ್ಟಿಯಾಗಿ ಹಟಹಿಡಿದಿರುವಾಗ ಅವರು ಅದನ್ನು ಅಷ್ಟಾಗಿ ಗಮನಕ್ಕೆ ತಂದುಕೊಳ್ಳುವುದಿಲ್ಲ. ಇಷ್ಟು ದೊಡ್ಡ ಸ್ಥಿತಿಯಲ್ಲಿರುವ ಅವರಿಗೆ ಅದು ಲೆಕ್ಕಿಸಬೇಕಾದಂತಹ ಅಡಚಣೆ ಯಲ್ಲ. ರೂಢಿಗೆ ವಿರೋಧವಾದ ಏನು ಮಾಡಬೇಕಾದರೂ ಇಂಥದು ಬಂದೇ ಬರುತ್ತದೆಂಬ ತಿಳಿವಳಿಕೆ ಗಾಂಧಿಯ ಆಶ್ರಮದಲ್ಲಿದ್ದ ಅವರಿಗೆ ಗೊತ್ತಿಲ್ಲವೆ? – ಎಂದು ಸಮಾಧಾನ ತಂದುಕೊಂಡಳು.

ಶ್ರೀನಿವಾಸ ಎಂಟು ಗಂಟೆಯ ಹೊತ್ತಿಗೆ ಬಂದ. ಅವನ ಮುಖ ಮಂಕಾಗಿತ್ತು. 'ನೀನು ಎಲ್ಲಿ ಊಟಕ್ಕೆ ಹೋಗಿರ್ತಿಯೋ ಅಂತಿದ್ದೆ' – ಎಂದು ಕುಳಿತುಕೊಂಡ.

'ಇದ್ಯಾಕಿಷ್ಟು ತಡ? ಹಸಿವಾಗಿತ್ತು. ಆದರೆ ನಿನ್ನನ್ನೇ ಕಾಯ್ತಾ ಕೂತಿದ್ದೆ.'

'ನಾನೂ ಮಧ್ಯಾನ ಊಟ ಮಾಡಿಲ್ಲ.'

'ಯಾಕೆ? ಮನೇಲಿ ಏನಾದರೂ ಬದಲಾವಣೆಯಾಗಿದೆಯ?' – ಎಂದು ಅವನ ಬಲಭುಜದ ಮೇಲೆ ಕೈ ಇಟ್ಟು ಅವಳು ಕೇಳಿದಳು.

'ಹೆಂಗಸರ ಬುದ್ಧಿಯೇ ಹೀಗೆ.'

'ನಿಮ್ಮ ತಾಯಿಗೆ ಮತ್ತೆ ಹೆದರಿಕೆಯಾಗಿದೆ ಏನು?'

'ಅವರಿಗೆ ಕನಸಿನಲ್ಲಿ ಬಂತಂತೆ. ಇವಳನ್ನ ಮಾಡ್ಕಂಡ್ರೆ ಮಕ್ಕಳಾಗುಲ್ಲ, ಮುಂದೆ ವಂಶ ಬೆಳೆಯುಲ್ಲ ಅಂತ ನಮ್ಮೂರ ಶ್ರೀನಿವಾಸ ದೇವರೇ ಹೇಳ್ತಂತೆ. ಒಂದೇಸಮ ಪಟ್ಟು ಹಿಡಿದು ಕುಂತವ್ರೆ.'

'ಇದು ಮೌಢ್ಯ ಅಂತ ನೀನು ಬಿಡಿಸಿಹೇಳಲಿಲ್ವೆ?'

"ಬೆಳಗ್ಗಿನಿಂದ ಒಂದೇಸಮಕ್ಕೆ ಹೇಳಿದೆ. ಮಧ್ಯಾನ ನಾನು ಊಟಾನೂ ಮಾಡಲಿಲ್ಲ. ಅವರೂ ಮಾಡಲಿಲ್ಲ. ಅಪ್ಪಾಜಿಗಾದರೂ ಹೇಳಾಣ ಅಂತ ಆಫೀಸಿಗೆ ಫೋನು ಮಾಡಿದೆ. ತುಂಬ ಬಿಸೀಲಿದ್ರು. 'ಸಾಯಂಕಾಲ ಬರ್ತೀನಿ ತಾಳು, ಮಾತಾಡಣ ಅಂದ್ರು. ಐದು ಗಂಟೆ ತನಕ ಕಾಯ್ದೆ. ಬರಲಿಲ್ಲ. ಮತ್ತೆ ಫೋನ್

ಮಾಡಿದೆ. ಇಲ್ಲಿ ಮೀಟಿಂಗ್‌ನಲ್ಲಿದೀನಿ. ರಾಜಕಾರಣದ ಕೆಲಸ. ಅದಕ್ಕಿಂತ ನಿನ್ನ ಮದುವೆ ಅರ್ಜೆಂಟಾಯ್ತಾ? ಸ್ವಲ್ಪ ತಡಿ' – ಅಂತ ಬೇಜಾರು ತೋರಿಸಿದ್ರು. ಏಳು ಗಂಟೆಗೆ ಮನೆಗೆ ಬಂದ್ರು. ಅಪ್ಪ ಇವತ್ತು ಹೀಗೆ ಮನಸ್ಸು ಬದಲಾಯಿಸಿದ್ದಾರೆ ಅಂದೆ."

'ಏನಂದ್ರು?'

"'ನೋಡಪ್ಪ, ನಾನು ಏನಾದರೂ ಅಂದ್ರೆ ಚೆನ್ನಾಗಿರುಲ್ಲ. ಇವನು ಹಿಂದಿನ ಕಾಲದ ಮೂಢ ನಂಬಿಕೆ ಇಟ್ಟುಕೊಂಡೋನು ಅನ್ನಭೌದು. ನಂಗೇನು, ನೀನು ಅವ್ಳುನ್ನೇ ಮಾಡ್ಕಂಡ್ರೂ ಸರಿ, ಬಿಟ್ರೂ ಸರಿ. ಮದುವೆಯ ವಿಷಯದಲ್ಲಿ ಮಕ್ಕಳಿಗೆ ಪೂರ್ತಿ ಸ್ವಾತಂತ್ರ್ಯ ಕೊಡಬೇಕು ಅನ್ನೊ ಡೆಮಾಕ್ರಾಟ್ ನಾನು. ನೀನುಂಟು, ನಿಮ್ಮಪ್ಪ ಉಂಟು' ಅಂದ್ರು. ಅಪ್ಪನಿಗೆ ನೀವು ಹೇಳಿ ಅಂದೆ. 'ಅಲ್ವೋ, ಪ್ರೀತಿ ಮಗ ಇಷ್ಟು ಹೇಳಿದ್ರೂ ಕೇಳದಿರೂ ಅವಳು, ನಾನು ಹೇಳಿದ್ರೆ ಕೇಳ್ತಾಳೇನೋ? ಮದುವೆ, ಮಕ್ಳು, ಅನ್ನೊ ಶುಭಕೆಲಸ ಏನಿದ್ರೂ ಹೊತ್ತು ಹೆತ್ತು ಸಾಕಿ ಸಲಹಿದ ತಾಯಿಯ ಇಚ್ಛೆಗೆ ವಿರೋಧವಾಗಿ ನಡೆಸಬಾರದಪ್ಪ. ಇದು ನಮ್ಮ ಹಿಂದಿನ ಕಾಲದೋರ ನೀತಿ. ಈಗಿನ ಕಾಲದ ನೀವು ಏನು ಬೇಕಾದ್ರೂ ಮಾಡ್ಕಳಿ' – ಅಂದ್ರು. ಅಷ್ಟರಲ್ಲಿ ಮನೆಗೆ ಯಾರೋ ಬಂದ್ರು. ಮುಂದೆ ಮಾತಾಡುಕ್ಕಾಗಲಿಲ್ಲ. ಸೀದಾ ಇಲ್ಲಿಗೆ ಬಂದೆ."

ಸತ್ಯ ಗಂಭೀರಳಾದಳು. ಅವರ ಮನಸ್ಸಿನಿಂದ ಈ ವೈಮನಸ್ಯವನ್ನು ಪರಿಹರಿಸುವುದು ಹೇಗೆ ಎಂಬ ಯೋಚನೆ ಬಂದು ಹೇಳಿದಳು: 'ನಾಳೆ ನಾನೇ ಬಂದು ನಿಮ್ಮ ತಾಯಿಯ ಕೈಲಿ ಇನ್ನೊಂದ್ಸಲ ಮಾತಾಡಲೇ?'

'ಬ್ಯಾಡ. ನಿನ್ನ ಹೆಸರೆತ್ತಿದರೆ ಅವ್ವ ಕೆಣಕಿದ ಹಾಗೆ ಆಡ್ತಾಳೆ. ನನ್ನ ಮಗನಿಗೆ ಮಾಟ ಮಾಡಿದಾಳೆ ಸುಕನಾತಿ ಮುಂಡೆ ಅಂತ ಕೆಟ್ಟ ಕೆಟ್ಟ ಮಾತೆಲ್ಲ ಬೈತಾಳೆ. ಎದುರಿಗೆ ಹೋದ್ರೆ ಬರೀ ಬೈಗುಳ ಕೇಳಬೇಕು. ಪ್ರಯೋಜನವಾಗುಲ್ಲ.'

'ಈಗ ಏನು ಮಾಡಾಣ?'

'ನನಗೆ ಏನೂ ತಿಳೀತಿಲ್ಲ. ಮಧ್ಯಾನ ಅಳು ಬರೂಹಂಗಾಯ್ತು. ನಿನ್ನೇ ಕೇಳಾಣ ಅಂತ ಬಂದಿದೀನಿ.'

ಒಂದು ನಿಮಿಷ ಯೋಚಿಸಿ ಅವಳು ಹೇಳಿದಳು: 'ನಾನು ಬೆಳಗ್ಗೆ ಹೇಳಲಿಲ್ವೆ, ಹಾಗೆ ಮಾಡಬೇಕು. ನಾಳೆ ಹೋಗಿ ನೀನು ಸಬ್‌ರಿಜಿಸ್ಟ್ರಾರರ ಹತ್ತಿರ ಡಿಕ್ಲೇರ್ ಮಾಡಿ ಬಾ. ಹದಿನೈದು ದಿನಕ್ಕೆ ಸರಿಯಾಗಿ ಇಬ್ಬರು ಸಾಕ್ಷಿಗಳ ಸಮೇತ ಹೋಗಿ ರಿಜಿಸ್ಟರ್ ಮಾಡಿಸ್ಕಳಾಣ. ಆಗೂದಾದ ಮೇಲೆ ಅವರೇ ಒಪ್ಕತ್ತಾರೆ.'

'ಅಪ್ಪಾಜಿ ಸಿಟ್ಟಾದ್ರೆ?'

'ಸಿಟ್ಟಾಗಿ ಏನು ಮಾಡ್ತಾರೆ? ಹೆಚ್ಚು ಅಂದ್ರೆ ನಮ್ಮ ತಂದೆ ನನ್ನ ಹೊಡೆದ ಹಾಗೆ ಹೊಡೀಭೌದು. ಇದೂ ಒಂದು ಥರ ಸತ್ಯಾಗ್ರಹ ಅಂತ ತಿಳ್ಕಂಡು ಸುಮ್ಮನೆ ನಿಂತುಬಿಡು. ಕೈ ನೋವು ಬಂದು ಸುಮ್ನಾಗ್ತಾರೆ.'

'ಅವರು ಹಾಗೆ ಮಾಡುಲ್ಲ. ಎಷ್ಟಾದರೂ ಎಜುಕೇಟೆಡ್. ಹೊಡೆಯೂದು ಗಿಡಿಯೋದೆಲ್ಲ ಹಳ್ಳಿಯೋರ ಪದ್ಧತಿ.'

'ಹ್ಯಾಗಾದರೂ ಆಗಲಿ. ಇದೊಂದೇ ಉಪಾಯ.'

ಅವನನ್ನೂ ಕರೆದುಕೊಂಡು ಅವಳು ಹೋಟೆಲಿಗೆ ಹೋದಳು. ಇಬ್ಬರಿಗೂ ಹಸಿವಾಗಿತ್ತು. ಆದರೆ ಯಾರಿಗೂ ಊಟ ಸೇರಲಿಲ್ಲ. ಕೈ ತೊಳೆದು ಹೊರಗೆ ಬಂದು ಇಬ್ಬರೂ ಸ್ವಲ್ಪ ಹೊತ್ತು ತಿರುಗಾಡುತ್ತಾ ಮಾತನಾಡುತ್ತಿದ್ದರು. ನಾಳೆ ಬೆಳಗ್ಗೆ ತಾನು ಬರುವುದಿಲ್ಲ, ಹನ್ನೊಂದು ಗಂಟೆಗೆ ಸಬ್‌ರಿಜಿಸ್ಟ್ರಾರರ ಆಫೀಸಿನಲ್ಲಿ ಕೆಲಸ ಮಾಡಿಕೊಂಡು ಮಧ್ಯಾಹ್ನ ಎರಡೂವರೆಗೆ ಬರುತ್ತೇನೆ ಎಂದು ಹೇಳಿ ಅವನು ಹೊರಟುಹೋದ. ನಾಳೆ ಎರಡು ಗಂಟೆಗೇ ಕಾಲೇಜಿನಲ್ಲಿ ಅವಳ ಪಾಠ ಮುಗಿಯುತ್ತಿತ್ತು.

೪

ಶ್ರೀನಿವಾಸ ಮರುದಿನ ಹೋಗಿ ಡಿಕ್ಲೇರ್ ಮಾಡಿಕೊಂಡು ಬಂದ. ಅವರ ಹಾದಿ ನಿಶ್ಚಯವಾಯಿತು. ಬಿ.ಎಲ್. ಪರೀಕ್ಷೆಯಲ್ಲಿ ಫೇಲಾಗಿದ್ದುದರಿಂದ ಅವನು ಪುನಃ ಕಟ್ಟಬೇಕಾಗಿತ್ತು. ಲಾಯರಾಗುವುದೋ ಸರ್ಕಾರಿ ಕೆಲಸಕ್ಕೆ ಸೇರುವುದೋ ಮತ್ತೆ ಯಾವುದಾದರೂ ವ್ಯಾಪಾರ ಮಾಡುವುದೋ, ಅಥವಾ ಊರಿನಲ್ಲಿರುವ ಜಮೀನನ್ನು ಆಧುನಿಕ ರೀತಿಯಲ್ಲಿ ಬೇಸಾಯ ಮಾಡಿಸುವುದೋ, ಯಾವುದನ್ನೂ ಅವನು ನಿಶ್ಚಯಿಸಿರಲಿಲ್ಲ. ಈಗ ಪರಿಸ್ಥಿತಿ ಬದಲಾಯಿಸಿದೆ. ರಿಜಿಸ್ಟರ್ ಮದುವೆ ಯಾದ ಮೇಲೆ ಅಪ್ಪಾಜಿಗೂ ಸಿಟ್ಟು ಬರಬಹುದು. ಅದು ಇಳಿಯುವತನಕ ತಾನು ಏನು ಮಾಡುವುದು, ಎಂಬ ಯೋಚನೆ ಅವನನ್ನು ಕಾಡುತ್ತಿತ್ತು. 'ನನಗೆ ಹ್ಯಾಗೂ ಸಂಬಳ ಬರುತ್ತಿದೆ. ಒಂದು ಸಣ್ಣ ಮನೆ ಮಾಡೋಣ' – ಎಂದು ಸತ್ಯ ಹೇಳಿದಳು.

ಅವನು ಮನೆಯಲ್ಲಿ ಮದುವೆಯ ವಿಷಯ ಮಾತನಾಡುವುದನ್ನೇ ನಿಲ್ಲಿಸಿದ. ತನ್ನ ಪಾಡಿಗೆ ತಾನು ಒಂದು ರೂಮಿನಲ್ಲಿರುತ್ತಿದ್ದ. ಸಂಜೆಯ ಹೊತ್ತು ಅವಳ ರೂಮಿಗೆ ಬಂದು ಕುಳಿತು ಮಾತನಾಡುತ್ತಿದ್ದ.

ಅವನ ಸ್ನೇಹಿತರು ಸಹಪಾಠಿಗಳು ಹಲವರು ಬೆಂಗಳೂರಿನಲ್ಲಿ ಕೆಲಸವಲ್ಲಿದ್ದರು.

ಅವರಲ್ಲಿ ಮೂರು ಜನರನ್ನು ಸಾಕ್ಷಿಗೆ ಕರೆದುಕೊಂಡು, ಮದುವೆಯಾಗಬೇಕಾದ ದಿನ ಇಬ್ಬರೂ ಸಬ್‌ರಿಜಿಸ್ಟ್ರಾರರ ಆಫೀಸಿಗೆ ಹೋದರು. ವಿಶೇಷ ವೇಷಭೂಷಣಗಳೇನೂ ಇಲ್ಲ. ಇಬ್ಬರೂ ತಮ್ಮ ನಿತ್ಯದ ಉಡಿಗೆ ತೊಡಿಗೆಯಲ್ಲಿದ್ದರು. ಆಫೀಸಿನ ಮುಖ್ಯ ಗುಮಾಸ್ತೆ ಹೇಳಿದ: 'ಇವತ್ತು ಸಾಹೇಬರು ರಜದ ಮೇಲಿದಾರೆ. ರಿಜಿಸ್ಟರ್ ಆಗುಲ್ಲ ಸಾರ್?'

'ಅವರಿಲ್ಲದಿದ್ದರೆ ಅವರ ಡೆಪ್ಯೂಟಿ ಯಾರಾದರೂ ಇರಬೇಕು. ಹ್ಯಾಗೆ ಆಗುಲ್ಲ?' – ಶ್ರೀನಿವಾಸ ಕೇಳಿದ.

'ನಾನೇನು ಮಾಡಾಣ ಸಾರ್? ನಮ್ಮನ್ನ ತಪ್ಪಿಗೆ ಸಿಕ್ಕಿಸಬ್ಯಾಡಿ.'

'ಉಳಿದ ರಿಜಿಸ್ಟ್ರಿಗಳನ್ನ ಹ್ಯಾಗೆ ಮಾಡ್ತಿದೀರಿ? ಅದಕ್ಕೆ ಸಾಹೇಬರು ಬ್ಯಾಡವೆ?'

ಉತ್ತರ ತೋಚದೆ ಮುಖ್ಯ ಗುಮಾಸ್ತೆ ತಬ್ಬಿಬ್ಬಾದ. ಕೊನೆಗೆ ಏನೋ ನಿರ್ಧರಿಸಿದಂತೆ, 'ನಿಮ್ಮಲ್ಲಿ ಶ್ರೀನಿವಾಸ ಅನ್ನೋರು ಯಾರು?' – ಎಂದು ಕೇಳಿದ. ಅನಂತರ ಅವನ ಭುಜದ ಮೇಲೆ ಕೈ ಇಟ್ಟು ಒಳಗಿನ ಒಂದು ಕೋಣೆಗೆ ಕರೆದುಕೊಂಡು ಹೋಗಿ ಪಿಸುಮಾತಿನಲ್ಲಿ ಹೇಳಿದ: 'ಸಾರ್, ನಾವು ಬಡ ನೌಕರರು. ದಯವಿಟ್ಟು ಮಿಸ್ಟೇಕ್ ಮಾಡ್ಕಾಬಾರದು.'

'ಅದೇನು ಹೇಳಿ.'

'ನಾವು ಮದುವೆ ಮಾಡ್ಸಕ್ಕೆ ಆಗುಲ್ಲ. ಆಕ್ಷೇಪ ಬಂದಿದೆ.'

'ಯಾರಿಂದ? ಆಕ್ಷೇಪದ ಕಾಗದ ತೋರಿಸಿ.'

'ಕಾಗದದ ಮೇಲಲ್ಲ. ನಾನು ಬಿಡಿಸಿಯೇ ಹೇಳಿಬಿಡ್ತೀನಿ. ನೀವು ಮಂತ್ರಿಗಳ ಮಗ ಅಂತ ನಮಗೆ ಗೊತ್ತಿರಲಿಲ್ಲ. ಆದರೆ ನಿಮ್ಮ ಫಾದರ್ರೇ ಅವರ ಪಿ.ಎ. ಕೈಲಿ ಹೇಳಿಕಳ್ಸಿ, ಇದನ್ನ ಮಾಡಕೂಡದು ಅಂತ ಡೈರೆಕ್ಟ್ ಮಾಡಿದಾರೆ.'

'ಅವರಿಗೆ ಯಾರು ತಿಳಿಸಿದೋರು?'

'ಅವರ ಪಿ.ಎ. ಬಂದು, ಹೀಗೇನಾದರೂ ಡಿಕ್ಲೇರ್ ಮಾಡಿದಾರಾ ಅಂತ ಆಫೀಸಿನಲ್ಲಿ ವಿಚಾರಿಸಿದ. ನಮಗೇನು ಗೊತ್ತು? ನೋಟೀಸ್ ಬೋರ್ಡಿನಲ್ಲಿ ಹಾಕಿದ್ದ ಹಾಳೇನೆಲ್ಲ ತೋರಿಸಿದೆವು.'

ಶ್ರೀನಿವಾಸ ಕೋಪದಿಂದ ಉರಿದುಬಿಟ್ಟ. ತನ್ನ ಅಪ್ಪ ಈ ರೀತಿ ಮಾಡುತ್ತಾರೆಂದು ಅವನು ನಿರೀಕ್ಷಿಸಿರಲಿಲ್ಲ. ಗುಮಾಸ್ತೆಯನ್ನು ಕೇಳಿದ: 'ನಿಮಗೆ ಯಾವ ರಿಟನ್ ಅಬ್‌ಜೆಕ್ಷನ್ನೂ ಬಂದಿಲ್ಲ. ರಿಜಿಸ್ಟರ್ ಮಾಡಿಸಿಬಿಟ್ರೆ ಏನಾಗುತ್ತೆ?'

'ನಾವು ನೌಕರರು ಸಾರ್. ನಮಗೆ ತೊಂದರೆಯಾಗುತ್ತೆ.'

'ಇವತ್ತು ಮಾಡಿಸಲೇಬೇಕು ಅಂತ ನಾನು ಡಿಮಾಂಡ್ ಮಾಡ್ತೀನಿ.'

'ಕಾನೂನು ಪ್ರಕಾರ ನೀವು ಡಿಮಾಂಡ್ ಮಾಡಬಹುದು. ಅದಕ್ಕೇ ನಮ್ಮ ಸಾಹೇಬರು ನಾಲ್ಕು ದಿನ ರಜದ ಮ್ಯಾಲಿದಾರೆ. ಮೇಲಧಿಕಾರಿ ಇಲ್ಲದ್ದರಿಂದ ಸದರಿ ಪಾರ್ಟಿಯು ನಾಲ್ಕು ದಿನದ ನಂತರ ಬರತಕ್ಕದ್ದು ಅಂತ ಬೇಕಾದರೆ ನಿಮಗೆ ಬರೆದುಕೊಡೋ ಅಧಿಕಾರ ನನಗಿದೆ.'

ಶ್ರೀನಿವಾಸ ಕೋಪದಿಂದ ಬುಸುಗುಡುತ್ತಿದ್ದ. ಆದರೆ ಗುಮಾಸ್ತೆಯ ಮೇಲೆ ರೇಗಬಾರದೆಂಬ ಪ್ರಜ್ಞೆಯಿತ್ತು. ಹೊರಗೆ ಬಂದು ಸತ್ಯಳಿಗೂ ಉಳಿದವರಿಗೂ ವಿಷಯ ಹೇಳಿದ. ಸತ್ಯ ಸ್ತಂಭೀಭೂತಳಾದಳು. ಮದುವೆಗೆ ವಿರೋಧ ಬರೀ ಯಜಮಾಂತಿಯದಲ್ಲ, ಅಥವಾ ಯಜಮಾಂತಿಯದು ಅಲ್ಲವೇ ಅಲ್ಲ, ಯಜಮಾನರದೇ ಎಂಬುದು ಅವಳಿಗೆ ತಕ್ಷಣ ಅರ್ಥವಾಯಿತು. 'ನನ್ನ ಮದುವೇಲಿ ಕೈ ಹಾಕುಕ್ಕೆ ಅವನಿಗೇನು ಅಧಿಕಾರ? ರಾಸ್ಕಲ್ ತಂದು. ಹೋಗಿ ಮಾಡ್ತೀನಿ' – ಎಂದು ಶ್ರೀನಿವಾಸ ಅಲ್ಲಿಂದ ಹೊರಟ. ಅವನನ್ನು ತಡೆದು ಅವಳು ಹೇಳಿದಳು:

"ಹೀಗೆ ರೇಗಬಾರದು. ಗುಮಾಸ್ತರು ಏನು ಬರೆದುಕೊಡ್ತಾರೋ ಬರೆಸ್ಕಳಿ. ನಾಲ್ಕು ದಿನವಲ್ಲ, ಇನ್ನು ಆರು ದಿನ ಕಳೀಲಿ. ನಾವಿಬ್ರೂ ವಯಸ್ಕರಾಗಿರೂದ್ರಿಂದ ಈ ಮದುವೆ ತಡೆಯುಕ್ಕೆ ರಾಷ್ಟ್ರಾಧ್ಯಕ್ಷರಿಗೂ ಅಧಿಕಾರವಿಲ್ಲ. ಸಬ್ ರಿಜಿಸ್ಟ್ರಾರ್ ಬಂದಮೇಲೆ, 'ನೀವು ಇದನ್ನ ರಿಜಿಸ್ಟರ್ ಮಾಡದೆ ಇದ್ರೆ ನಾವು ಕೋರ್ಟಿಗೆ ಹೋಗಿ ನಿಮ್ಮ ಮೇಲೆ ನೋಟೀಸ್ ಕೊಡುಸ್ತೀವಿ' ಅನ್ನಾಣ."

'ಅದು ಹಾಗಾಗುಲ್ಲ ಕಣ್ರಿ' – ಸಾಕ್ಷಿಯಾಗಿ ಬಂದಿದ್ದ ಶ್ರೀನಿವಾಸನ ಸ್ನೇಹಿತರ ಪೈಕಿ ರಾಜೇಗೌಡ ಎಂಬಾತ ಹೇಳಿದ: "ನಾನು ಸರ್ಕಾರಿ ನೌಕರಿಲಿದೀನಿ. ಕೋರ್ಟು ಗೀರ್ಟು ನಡೆಯುಲ್ಲ. ನಾನು ಹೇಳಿದ ಹಾಗೆ ಮಾಡಿ. ಇವತ್ತು ಸುಮ್ಮನಿದ್ದುಬಿಡಿ. ಗುಟ್ಟಿನಲ್ಲಿ ಒಂದು ನಾಲ್ಕು ಜನ ಸ್ನೇಹಿತರನ್ನ ಕರ್ಕಂಡು ನಂದಿಗೋ ಬನಶಂಕರಿಗೋ ಹೋಗಿ. ಹಾರ ಹಾಕಿದ ಶಾಸ್ತ್ರ ಮಾಡ್ಕ್ಯಂಡ್‌ಬಿಡಿ. ಬೆಳಗ್ಗೆ ಪೇಪರಿನಲ್ಲಿ, 'ಟಿ. ಎಂ. ಶ್ರೀನಿವಾಸ ಮತ್ತು ಟಿ. ವಿ. ಸತ್ಯಭಾಮಾ ಇವರ ವಿವಾಹವು ಇಂಥ ಕಡೆ ನೆರವೇರಿತು' ಅಂತ ಹಾಕಿಸ್ಬಿಡಿ. ಸರಿಯಾಗುತ್ತೆ."

ಇದು ಸಾಧುವೆಂದು ಸತ್ಯಳಿಗೆ ಕಾಣಿಸಿತು. ಆದರೆ ಶ್ರೀನಿವಾಸ ಕೇಳಲಿಲ್ಲ. 'ಇವನಿಗೆ ನಾನು ಸೋಲಬೇಕೇನು? ತಾನು ಮಂತ್ರಿ ಅಂತ ನಮ್ಮಪ್ಪ ತಂತ್ರ ಮಾಡುಕ್ಕೆ ಹೊರಟವ್ನೆ. ಗುಳ್ಳೆನರಿ ಕೆಲಸ ಇದು. ನಾನೂ ಪಾಳೆಗಾರರ ವಂಶದೋನು. ರಾಜ್ಯ ಆಳಿದ ರಕ್ತ ನಂಗೂ ಇದೆ. ಹೆದರೂದಿಲ್ಲ. ಮನೆಗೆ ಹೋಗಿ ತರಾಟಿಗೆ ತಗಾತೀನಿ. ಇಲ್ಲಾ, ಈ ಆಫೀಸಿನಲ್ಲೇ ಆಗಬೇಕು, ಇಲ್ಲಾ, ಆನರೇ ಒಪ್ಪಿ ಮಾಡಬೇಕು' – ಎಂದು ಅಲ್ಲಿಂದ ಹೊರಟ.

ಅವನ ತೋಳು ಹಿಡಿದು ಸತ್ಯ ಎಂದಳು: 'ರೇಗಬಾರದು. ನೀವು ಹೋಗಿ ಅವರ ಕೈಲಿ ಜಗಳಕಾಯಬೇಡಿ. ಸುಮ್ಮನೆ ಇದ್ದು ರಾಜೇಗೌಡರು ಹೇಳಿದಹಾಗೆ ಮಾಡಿ.'

'ಅವರಿಗೆ ಹೆದರೂ ಗಂಡು ಮಗ ಅಲ್ಲ ನಾನು. ರಾಜಾರೋಷೇ ಮದುವೆ ಯಾಗ್ತೀನಿ. ಕದ್ದಲ್ಲ. ನೀನು ರೂಮಿಗೆ ನಡಿ. ನಾ ಬತ್ತೀನಿ' – ಎಂದು ಕೊಸರಿ ಕೊಂಡು ಅವನು ಮುಂದೆ ಹೊರಟೇಬಿಟ್ಟ. ಅವಳು ತಡೆದರೆ ನಿಲ್ಲಲಿಲ್ಲ. ಆಫೀಸು ಕಾಂಪೌಂಡಿನ ಹೊರಗೆ ಆಟೋರಿಕ್ಷಾಗಳು ನಿಂತಿದ್ದುವು. ಅವುಗಳಲ್ಲಿ ಒಂದನ್ನು ಹತ್ತಿ ಕುಳಿತು ಅವಳಿಗೆ, 'ನೀನು ಕಾಲೇಜಿಗೆ ಹೋಗಿ ಅಲ್ಲಿಂದ ರೂಮಿನಲ್ಲಿರು' ಎಂದು, 'ನಿಮಗೆ ಫ಼ೋನ್ ಮಾಡ್ತೀನಿ' ಎಂದು ಸ್ನೇಹಿತರಿಗೆ ಹೇಳಿ, ರಿಕ್ಷಾವನ್ನು ನಡೆಸುವಂತೆ ಚಾಲಕನಿಗೆ ಹೇಳಿದ.

೫

ಮನೆ ತಲುಪುವ ಹೊತ್ತಿಗೆ ಶ್ರೀನಿವಾಸನ ಕೋಪ ಸಿಡಿಯುವಷ್ಟಾಗಿತ್ತು. ಅಪ್ಪ ಮನೆಯಲ್ಲಿರಲಿಲ್ಲ: ಆಫೀಸಿಗೆ ಹೋಗಿದ್ದರು. ತಾಯಿ ಒಂದು ರೂಮಿನಲ್ಲಿ ಕೂತಿದ್ದರು. ಕಳೆದ ಹದಿನೈದು ದಿನದಿಂದ ಅವನು ತಾಯಿಯ ಸಂಗಡ ಮಾತಾ ಡುತ್ತಿರಲಿಲ್ಲ. ಅಪ್ಪನ ಕೈಲಿ, ಪ್ರಕೃತಕ್ಕೆ ಅಗತ್ಯವಾದಷ್ಟು ಆಡುತ್ತಿದ್ದ. ಈಗ, ತಾನೇ ತಾಯಿಯ ಕೋಣೆಗೆ ಹೋಗಿ ಹೇಳಿದ: 'ಇವನು ಇಂತಾ ಹಲ್ಕಾ ಕೆಲ್ಸ ಮಾಡಭೌದಾ?'

'ಏನಪ್ಪಾ ಅದು?'

'ತಾನು ಮಂತ್ರಿಯಾಗಿದೀನಿ ಅಂತ ಸರ್ಕಾರಿ ಆಫೀಸರಿಗೆಲ್ಲ, ಹಿಂಗ್ ಮಾಡಿ ಹಿಂಗ್ ಮಾಡಬ್ಯಾಡಿ ಅಂತ ಹೇಳಭೌದಾ?'

ಆಕೆಗೆ ಇದರ ಹಿನ್ನೆಲೆ ತಿಳಿದಿರಲಿಲ್ಲ. 'ಮಂತ್ರಿಗಳಾಗಿರಾದ್ಯಾಕೆ? ಹಾಫೀಸ ರಿಗೆ ಹಿಂಗಿಂಗ್ ಮಾಡಿ ಅಂತ ಹ್ಯೇಳಿ ರಾಜ್ಯ ಆಳಾಕೇ ಅಲ್ವಾ?'

'ತನಗೆ ಸಂಬಂಧವಿಲ್ಲದೋರ ಹತ್ರ ಏನು ಹೇಳಾದು?'

'ಅದೇನಾಯ್ತು, ಹೇಳೋ ಮಲ್ಲೇಶ, ಹಿಂಗ್ಯಾಕ್ ಆಡ್ತಿ?'

'ನಾನು ಅವನ ಎದುರ್ಗೇ ಹ್ಯೇಳ್ತೀನಿ. ಈಗಲೇ ಮನೆಗೆ ಕರಸು.'

'ನೀನೇ ಟೆಲಿಫ಼ೋನ್ ಮಾಡೊ.'

'ನಾನು ಮಾಡುಲ್ಲ ಆ ರಾಸ್ಕಲ್‌ಗೆ.'

ಅವನ ಕಣ್ಣು ಕೆಂಪಗೆ ಉರಿಯುತ್ತಿತ್ತು. ಅಪ್ಪನನ್ನು ಅವನು ಎಂದೂ

ಇಂತಹ ಮಾತಿನಿಂದ ಅಂದಿರಲಿಲ್ಲ. ಇರುವ ಒಬ್ಬನೇ ಮಗ ಹೀಗೆ ಆಡುವುದನ್ನು ಕಂಡ ಆಕೆಗೆ ಗಾಬರಿಯಾಯಿತು. ತಾನೇ ಹಾಲಿಗೆ ಬಂದು ಟೆಲಿಫೋನ್ ನಂಬರ್ ತಿರುಗಿಸಿ, 'ಮಲ್ಲೇಶ ಹ್ಯಂಗ್‌ಹ್ಯಂಗೋ ಆಡ್ತನೆ. ಬ್ಯಾಗ ಬಲ್ಲಿ. ನಂಗ್ ಹ್ಯದರಿಕೆಯಾಯ್ತದೆ' – ಎಂದರು. ಹತ್ತು ನಿಮಿಷದಲ್ಲಿ ಬರುವುದಾಗಿ ಉತ್ತರ ಬಂತು.

ಯಜಮಾನರು ಮನೆಗೆ ಬರುವ ತನಕ ಶ್ರೀನಿವಾಸ ತಾಯಿಯ ಕೈಲಿ ಏನೂ ಮಾತನಾಡದೆ ಸೋಫಾದ ಮೇಲೆ ಒರಗಿ ಕೂತಿದ್ದ. ಹೊರಗೆ ಕಾರು ನಿಂತ ಶಬ್ದವಾಗಿ ಅದರ ಬಾಗಿಲು ತೆಗೆದು, ಅನಂತರ ಅವರು ಮನೆಯ ಬಾಗಿಲನ್ನು ಪ್ರವೇಶಿಸಿದ ತಕ್ಷಣ ಎದ್ದುನಿಂತು ಕೇಳಿದ: 'ಈ ಗುಳ್ಳೆಕಂಕನ ವಿದ್ಯ ಎಷ್ಟು ದಿನ ದಿಂದ ಕಲ್ತಿದ್ದೆ ನೀನು?'

ಮಗನ ಈ ಬಗೆಯ ಪ್ರತಿಕ್ರಿಯೆಯನ್ನು ಮಂತ್ರಿಗಳು ನಿರೀಕ್ಷಿಸಿರಲಿಲ್ಲ. ಅವನ ವರ್ತನೆ ಅನಿರೀಕ್ಷಿತವಾಗಿದ್ದರೂ ಅವರು ಸಿಟ್ಟು ಮಾಡಿಕೊಳ್ಳಲಿಲ್ಲ. 'ಸಿಟ್ಟಾದೋರ ತಾವ ಸಿಟ್ಟುಮಾಡ್ಕಬ್ಯಾಡ ಅಂತ ಮಹಾತ್ಮ ಗಾಂಧಿಯೋರು ಹೇಳ್ತನೇ ಇದ್ರು. ಇಲ್ಲಿ ಬ್ಯಾಡ ಮಾತು. ಆ ರೂಮಿಗೆ ಬಾ' – ಎಂದು ತಮ್ಮ ಮಲಗುವ ಕೋಣೆಗೆ ನಡೆದರು. ರಂಗಮ್ಮ ಗಂಡನನ್ನು ಅನುಸರಿಸಿದಳು.

'ಮಾಡಾದು ಹಲ್ಕಾ ಕೆಲಸ, ಸಿಟ್ಟೆಲ್ಲಿ ಬರ್ತೈತೆ ನಿಂಗೆ?' – ಎಂದು ಶ್ರೀನಿವಾಸ ಅವರ ಹಿಂದೆಯೇ ಹೋದ: 'ನಾನು ಮಾಡ್ಕಂಡೇ ಮಾಡ್ಕತ್ತೀನಿ ಅಂದ್ರೆ ನೀನೇನ್ ಕಡೀತೀಯ? ನಂಗೆ ನಿನ್ನ ಆಸ್ತಿ ಏನು ಬ್ಯಾಡ. ಯಾವುದಾದ್ರೂ ಬೀದೀಲಿ ಪೆಟ್ಟಿಗೆ-ಅಂಗಡಿ ಮಡೀಕಂಡ್ ಜೀವನ ಮಾಡ್ತೀನಿ.'

'ಹೆತ್ತ ಅಪ್ಪನ್ನ ಹಿಂಗಂತಾರೇನೋ ತಮ್ಮಯ್ಯ?' – ಎಂದು ತಾಯಿ ಸಮಾಧಾನ ಹೇಳಬಂದರು.

'ಅವನು ಹಂಗಂತನೆ ಅಂತ ನೀನು ನೊಂದ್‌ಕಾಬ್ಯಾಡ. ಅವನ ಒಳ್ಳೆದಕ್ಕೇ ನಾನು ಈ ಕೆಲಸ ಮಾಡಿದೀನಿ' – ಯಜಮಾನರು ಎಂದರು.

'ನನ್ನ ಒಳ್ಳೇದಕ್ಕೇನು ಮಾಡ್ತಿ ನೀನು? ಗಮಾರ್. ನಿನ್ನ ಗಾಂಧೀ ತತ್ವವೆಲ್ಲ ಥಳಕು.'

'ನೀನು ಏನಾದರೂ ಅಂದ್‌ಕೊ. ನಿಂಗೆ ಮಾತೃಹತ್ಯಾದೋಷ ಬರ್ತಿತ್ತು. ಅದ ತಪ್ಪಿಸುಕ್ಕೆ ನಾನು ಹಾಗೆ ಮಾಡ್ದೆ. ನಿನ್ನ ಹೆತ್ತ ತಾಯಿ ಬದುಕಬೇಕಾ ಗಿತ್ತೋ ಸಾಯಬೇಕಾಗಿತ್ತೋ?'

'ಏನಾಯ್ತು?' – ತಾಯಿ ಕೇಳಿದಳು.

'ಅವಳುನ್ನ ರಿಜಿಸ್ಟರ್ ಮದುವೆಯಾಗುಕ್ಕೆ ಇವನು ಹೋಗಿ ರಿಕಾರ್ಡ್‌ಮಾಡಿ

ಬಂದಿದ್ದ. ಈಗ ಹನ್ನೊಂದು ಗಂಟೇಲಿ ಅವಳು, ಇವನು, ಮೂರು ಜನ ಸ್ನೇಹಿತರು ಆ ಆಫೀಸಿಗೆ ಹೋಗಿದ್ದರು. ಮದುವೆ ಮಾಡಿಸ್‌ಬ್ಯಾಡಿ, ಒಂದು ನಾಕು ದಿನ ತಡೀರಿ ಅಂತ ನಾನು ಅವರಿಗೆ ಹೇಳಿ ನಿಲ್ಲಿಸಿದೆ. ಇವನು ಹೀಗೆ ಮಾಡಿದ್‌ರೆ ನೀನು ಸುಮ್ನಿರ್‌ತಿದ್ಯಾ? ನೇಣ್‌ಗೀಣ್ ಹಾಕ್ಯಂಡು ಪ್ರಾಣ ಕಳ್ಕ ತ್ತಿರ್‌ಲಿಲ್ವೆ? ತಾಯೀನ ಕೊಂದ ಪಾಪಾನ ಇವನು ಏಳು ಜನ್ಮ ಎತ್ತಿ ಬಂದ್ರೂ ತೀರಿಸುಕ್ಯಾಗ್ತಿತ್ತೆ?'

ಈ ಮಾತು ತನ್ನ ಕೆಲಸ ಮಾಡಿತು. ಮಗ ತನಗೆ ಗೊತ್ತಿಲ್ಲದ ಹಾಗೆ ಆ ಸುಕನಾತಿಯನ್ನು ಮದುವೆಯಾಗಹೋಗಿದ್ದ ವಿಷಯ ತಿಳಿದು ತಾಯಿ ಹೌ ಹಾರಿದಳು. ಊರಿನ ಶ್ರೀನಿವಾಸ ದೇವರ ನೆನಪು ಬಂತು. 'ಬ್ಯಾಡ ಕಣೋ ತಮ್ಮಯ್ಯ' – ಎಂದು ಕಣ್ಣಿನಲ್ಲಿ ನೀರು ತುಂಬಿಕೊಂಡು ಹೇಳಿದಳು.

'ಇವತ್ತಲ್ಲದಿದ್ರೆ ಇನ್ನು ನಾಕು ದಿನವಾದ ಮೇಲಾದ್ರೂ ಮಾಡ್ಕಂಡೇ ಮಾಡ್ಕಂತೀನಿ. ಅದೇನ್ ಮಾಡ್ತೀ?' – ಎಂದು ಅವನು ಸವಾಲು ಹಾಕುವವ ನಂತೆ ಕೇಳಿದ.

'ಒಂದ್ ಹಗ್ಗ ತಗಂಡ್ ನೇಣ್ ಆಕ್ಯತ್ತೀನಿ' – ಎಂದು ರಂಗಮ್ಮ ತಕ್ಷಣ ಉತ್ತರ ಕೊಟ್ಟಳು. ಹೊಸ ಒಂದು ದಾರಿ ಅವಳಿಗೆ ಗೋಚರಿಸಿತು. ಹಾಗೆಂದವಳೇ ಉಗ್ರಾಣದ ರೂಮಿಗೆ ಹೋಗಿ, ಕಾರಿನ ಮೇಲೆ ಸಾಮಾನು ಬಿಗಿಯಲು ಉಪ ಯೋಗಿಸುತ್ತಿದ್ದ ಉದ್ದನೆಯ ಶಣಬಿನ ಹಗ್ಗವನ್ನು ತಂದು, ಫ್ಯಾನ್ ತಗುಲಿಸಲು ರೂಮಿನಲ್ಲಿ ಹಾಕಿದ್ದ ಕೊಕ್ಕೆಗೆ ಕುಣಿಕೆ ಮಾಡಿ ಅವನ ಎದುರಿಗೇ ಎಸೆದಳು.

ಯಜಮಾನರು ಗಡಿಯಾರ ನೋಡಿಕೊಂಡರು. 'ಮಂತ್ರಿಮಂಡಳದ ಸಭೆ ನಡೀತಿತ್ತು. ದೇಶದ ರೈತರೆಲ್ಲ ಬಡತನದಾಗೆ ಬೇಯ್ತಿದಾರೆ. ಎಷ್ಟೋ ಕಡೆ ಕ್ಷಾಮ ಬಂದು ಹೆಣ ಬೀಳ್ತಿವೆ. ಏನು ಮಾಡಬೇಕು ಅಂತ ಚರ್ಚೆ ಮಾಡ್ತಿದ್ವು. ಮಧ್ಯೆ ಟೆಲಿಫೋನ್ ಬಂತು ಅಂತ ನಾನು ಮನೆಗೆ ಬಂದೆ. ನನ್ನ ಮನೆ ಕಷ್ಟ ಸುಖ ಮುಖ್ಯವಲ್ಲ. ಜನದ ಕಷ್ಟ ಮುಖ್ಯ. ನಾನ್ ಹೋಯ್ತೀನಿ. ನಿನ್ನ ತಾಯಿ ನಿನ್ನ ಜವಾಬ್ದಾರಿ. ಅವಳು ಸತ್‌ರೂ ನಾನು ಕೇಳುಲ್ಲ. ಹೆತ್ತ ತಾಯೀನ ಕೊಲ್ಲೂಕೆ ತಾನೆ ಮಗ ಹುಟ್ಟೋದು?' – ಎಂದು ಹೇಳಿ ನೇರವಾಗಿ ಹೊರಟು ಹೋದರು. ಹೊರಗೆ ಕಾರು ಸ್ಟಾರ್ಟ್ ಆಗಿ, ಮುಂದೆ ನಡೆದ ಸದ್ದು ಕೇಳಿಸಿತು.

ಒಳಗೆ ಆಕೆ ಹಗ್ಗಕ್ಕೆ ಜೀರುಕುಣಿಕೆ ಹಾಕುತ್ತಿದ್ದಳು. ಶ್ರೀನಿವಾಸನಿಗೆ ಇನ್ನೂ ರೇಗಿತು. 'ನಿಂಗೇನ್ ಬುದ್ಧಿ ಸ್ವಟ್ಟಗೈತೋ ಇಲ್ವೊ?' – ಎಂದು ನುಗ್ಗಿ ಹಗ್ಗ ವನ್ನು ಜಾಡಿಸಿ ಕಿತ್ತುಕೊಂಡು, ಕೊಕ್ಕೆಗೆ ಹಾಕಿದ್ದ ಕುಣಿಕೆಯನ್ನು ಬಿಡಿಸಿದ. ಅಡಿಗೆಮನೆಗೆ ಹೋಗಿ ಒಂದು ಚಾಕು ತಂದು ಅವಳ ಎದುರಿಗೇ ಹಗ್ಗವನ್ನು

ಒಂದೊಂದು ಗೇಣು ಉದ್ದಕ್ಕೆ ಚೂರು ಚೂರು ಮಾಡಿ ಹಾಕಿದ. 'ಇದ ಕುಯ್ದ್ ಆಕಿದ್ರೆ ಮನ್ಲಿ ಬ್ಯಾರೆ ಹಗ್ಗ ಹುರಿ ಇಲ್ಲ ಅಂತಿ ಏನೋ?' – ತಾಯಿ ಕೇಳಿದಳು.

'ಅದ್ ಹ್ಯಂಗ್ ಹಾಕ್ಕತ್ತೀಯೋ ಹಾಕ್ಕೊ' – ಎಂದು ಅವನು, ಅವಳ ತೋಳು ಹಿಡಿದುಕೊಂಡ.

'ನಾನು ತುಟಿ ಹಿಡಕೊಂಡು ತುಪ್ಪ ಕುಡಿಸಿ ದಪ್ಪಗೆ ಮಾಡಿ ಸಾಕಿದ್ದುಕ್ಕೆ; ಶಗ್ತಿಯಾಗಿದೀನಿ ಅಂತ ನನ್ನ ರಟ್ಟೆ ಹಿಡಕಂಡ್ ನಿಲ್ಲುಸ್ತೀಯಾ? ನಿಲ್ಸು. ನೀನೇನ್ ಮನ್ಲೇ ಕುಂತಿರ್ತೀಯಾ ನೋಡ್ಕಂಡು? ಆ ಸುಕನಾತಿ ನೋಡಾಕ್ ಹೋಗಾಕೇ ಇಲ್ವಾ? ಹೋಗು. ನಾನು ನೇಣ್ ಹಾಕ್ಯಂಡೇ ಹಾಕ್ಯತ್ತೀನಿ.'

'ನಾನಿಲ್ಲೇ ಕುಂತಿರ್ತೀನಿ. ಅದ್ ಹ್ಯಂಗ್ ಹಾಕ್ಯತ್ತೀಯ ನೋಡಾಸ' – ಎಂದು ಅವನು ಮಂಚದ ಮೇಲೆ ಕುಳಿತ. ಆಕೆ ನೆಲದ ಮೇಲೆ ಮಲಗಿ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಅವಳು ಅಳುವುದನ್ನು ಅಲ್ಲಿ ಕೂತು ನೋಡಲು ಬೇಸರ ವಾಯಿತು. ಎದ್ದು ಕೋಣೆಯ ಎರಡು ಬಾಗಿಲನ್ನೂ ತೆಗೆದು ಹೊರಗಿನ ಹಾಲಿಗೆ ಬಂದು ಸೋಫಾದ ಮೇಕೆ ಒರಗಿದ. ಆದರೆ ಧ್ಯಾನವೆಲ್ಲ ಕೋಣೆಯ ಕಡೆಗೇ ಇತ್ತು.

ತಾಯಿಯ ಮೌಢ್ಯ ಮತ್ತು ಹಟಮಾರಿತನಕ್ಕೆ ಅವನಿಗೆ ರೇಗುತ್ತಿತ್ತು. ಅವಳು ತಾಯಿಯೇ ಅಲ್ಲದಿದ್ದರೆ ಅವನು ಹಿಡಿದು ನಾಲ್ಕು ಬಾರಿಸಿಬಿಡುತ್ತಿದ್ದ ನೇನೋ. ಇಂಥ ಗುಗ್ಗುಗಳ ಮೇಲೆ ಸಿಟ್ಟು ಮಾಡಿಕೊಳ್ಳದೆ ಇರೂದು ಹ್ಯಾಗೆ? ರೇಗಬಾರದು ಅಂತ ಸತ್ಯ ಹೇಳ್ತಾಳೆ. ಈ ಲುಚ್ಚಾಗಳ ಮೇಲೆ ರೇಗದೆ ಏನು ಮಾಡಬೇಕು? ಹೆತ್ತ ತಾಯಿ ದೇವರ ಸಮಾನ ಅಂತಾರೆ. ಎಲ್ಲಾ ಮಗನ ಒಳ್ಳೇದಕ್ಕೇ ಮಾಡ್ತಾಳೆ ಅಂತಾರೆ. ಅದೆಲ್ಲ ಸುಳ್ಳು. ಮಕ್ಕಳ ಮೊದಲನೆಯ ಶತ್ರು ಅಂದ್ರೆ ತಾಯಿಯೇ. ಮಕ್ಕಳ ಮನಸ್ಸು. ಅವರ ಆಶೆ. ಇಷ್ಟ. ಅವಳಿಗೇನು ಗೊತ್ತಾಗುತ್ತೆ? ಅಪ್ಪ, ಅಪ್ಪನ ಕಡೆಯೇ ಮಾತಾಡಿದ. ಎಷ್ಟಾದರೂ ಗಂಡ ಹೆಂಡತಿ ಅವರವರೇ ಒಂದು. ಕೊನೆಗೆ ನನಗೆ ನೇಣುಗಟ್ಟೋದು ಬೇಕಾಗಿದೆ ಇವರಿಗೆ – ಎಂದುಕೊಂಡ.

ಮಧ್ಯಾಹ್ನ ಮೂರು ಗಂಟೆಯ ತನಕ ಅವನು ಹಾಗೆಯೇ ಕುಳಿತಿದ್ದ. ಕೋಣೆಯಲ್ಲಿ ಅವನಿಗೆ ಕಾಣುವಂತೆ ತಾಯಿ ನೆಲದ ಮೇಲೆ ಬೋರಲಾಗಿ ಮಲಗಿದ್ದಳು. ಕೂತು ಕೂತು ಬೇಸರವಾಯಿತು. ಇಷ್ಟು ಹೊತ್ತಿಗೆ ಸತ್ಯ ಕಾಲೇಜಿನಿಂದ ರೂಮಿಗೆ ಹೋಗಿರ್ತಾಳೆ. ಅಲ್ಲಿಗಾದರೂ ಹೋಗಬೇಕು – ಎನಿಸಿತು. ಎದ್ದು ಹೊರಗೆ ನಡೆದ. ಮುಂಭಾಗದ ದೊಡ್ಡ ಕೈತೋಟದ ಗೇಟಿಗೆ

ಬಂದಾಗ, ಈ ಇಡೀ ಜಾಗದಲ್ಲಿ ಗೇಟಿನ ಹತ್ತಿರ ನಿಂತಿರುವ ಒಬ್ಬ ಕಾನಿಸ್ಟೇಬಲನ್ನು ಬಿಟ್ಟರೆ ಬೇರೆ ಯಾರೂ ಇಲ್ಲ. ನಾನು ಅಲ್ಲಿಗೆ ಹೋದಾಗ ಅವ್ವ ಇಲ್ಲಿ ನೇಣು ಗಟ್ಟಿಕೊಂಡರೆ! – ಎಂಬ ಯೋಚನೆ ಬಂತು. ಹೆಂಗಸಿನ ಬುದ್ಧಿ. ಅಲ್ಲದೆ ಹಳ್ಳೀ ಹೆಂಗಸಿನ ಮೂರ್ಖ ಬುದ್ಧಿ ಎಂಬ ನೆನಪಾಗಿ, ಹಿಂತಿರುಗಿ ಹೋಗಿ ಮತ್ತೆ ಸೋಫಾದ ಮೇಲೆ ಕುಳಿತುಕೊಂಡ. ಅವ್ವ ಹಾಗೆಯೇ ಮಲಗಿದ್ದಳು. ನನಗೆ ತಾಯಿ ಇಲ್ಲದಿದ್ದರೆ ಏನಾಗ್ತಿತ್ತು? ಸತ್ಯನಿಗೆ ಚಿಕ್ಕ ವಯಸ್ಸಿನಲ್ಲೇ ಅವರಪ್ಪ ತೀರಿ ಹೋದರು. ಅವಳೇನು ಬೆಳೆದಿಲ್ವೆ? ವಿದ್ಯೆ ಕಲೀಲಿಲ್ವೆ? ಗಂಡಸರ ಮಾತು ಬ್ಯಾರೆ. ಅವರ ತಂದೆ ಸಿಟ್ಟು ಬಂದಾಗ ಹೊಡದ್ರು. ಊರಿಗೆ ಹೊರಟುಹೋದರು. ಆದರೆ ಪ್ರಾಣ ಕಳ್ಕತ್ತೀನಿ ಅಂತ ಹೆದರಿಸಲಿಲ್ಲ. ಇವೆಲ್ಲ ಹೆಂಗಸುಜಾತಿಯ ಆಟ. ಹೇಡಿ ಜಾತಿ, ಕುರಿಸುರಿ ಜಾತಿ ಹೆಂಗಸು ಅಂದ್ರೆ – ಎಂದು ಯೋಚಿಸುತ್ತಾ ಸೋಫಾದ ಮೇಲೆ ಕಾಲು ಚಾಚಿ ಒಂದು ಒರಗುದಿಂಬಿಗೆ ತಲೆಯನ್ನು ಆನಿಸಿ ಕೊಂಡು ಕುಳಿತ. ಗಮನ ಮಾತ್ರ ರೂಮಿನ ಕಡೆಗೇ ಇತ್ತು.

ನಾಲ್ಕು ಗಂಟೆಯ ಹೊತ್ತಿಗೆ ಕಾರು ಬಂದ ಶಬ್ದವಾಯಿತು. ಅಪ್ಪ ಒಳಗೆ ಬಂದರು. ತಮ್ಮ ಕೋಣೆಗೆ ಹೋದರು. ನೆಲದ ಮೇಲೆ ಮಲಗಿದ್ದ ಹೆಂಡತಿ ಯನ್ನು ಮಾತನಾಡಿಸಲಿಲ್ಲ. ಬೀರುವಿನ ಬಾಗಿಲು ತೆಗೆದು, ಇಸ್ತ್ರಿಯಾದ ಎರಡು ಜುಬ್ಬ, ಒಂದು ವೇಸ್ಟ್ ಕೋಟ್ಟು ಹೊಸ ಟೋಪಿಗಳನ್ನು ತೆಗೆದಿರಿಸಿದರು. ಪ್ರಯಾಣದ ಒಂದು ಹೋಲ್ಡಾಲ್ ಯಾವಾಗಲೂ ಸಿದ್ಧವಾಗಿರುತ್ತಿತ್ತು. ಡ್ರೈವರ್ ಬಂದು ಹೋಲ್ಡಾಲ್ ಮತ್ತು ಬಟ್ಟೆಯ ಸಣ್ಣ ಪೆಟ್ಟಿಗೆಯನ್ನು ತೆಗೆದು ಕೊಂಡು ಹೋದ. ಡಿಕ್ಕಿಯ ಬಾಗಿಲು ತೆಗೆದು ಹಾಕಿದ ಸದ್ದಾಯಿತು. ಯಜ ಮಾನರು ಹೊರಗೆ ಬಂದು, 'ನಂಗೆ ಟೈಮಿಲ್ಲ. ಬರ ಬಂದಿರೂ ಪ್ರದೇಶದಲ್ಲಿ ಟೂರ್ ಮಾಡಿ ಬರಬೇಕು. ನಾಳೆ ಸಂಜೆಗೆ ವಾಪಸ್ ಬತ್ತೀನಿ. ರಾತ್ರಿ ನೀನು ನಿದ್ದೆ ಮಾಡುವಾಗ ನಿಮ್ಮವ್ವ ಏನಾರ ಮಾಡ್ಕಂಡಾಳು. ಜ್ವಾಪಾನ' ಎಂದು ಇವನಿಗೆ ಹೇಳಿ ಹೊರಟುಹೋದರು. ಕಾರು ಸ್ಟಾರ್ಟ್ ಆಗಿ ಮುಂದೆ ಹೋದ ಶಬ್ದವಾಯಿತು.

ಶ್ರೀನಿವಾಸ ಬೆಳಗ್ಗೆ ಸತ್ಯ ಮತ್ತು ಮೂವರು ಸ್ನೇಹಿತರ ಜೊತೆ ಹೋಟೆಲಿನಲ್ಲಿ ತಿಂಡಿ ತಿಂದದ್ದು ಬಿಟ್ಟರೆ ಮತ್ತೆ ಏನೂ ತಿಂದಿರಲಿಲ್ಲ. ಅವನ ಮನೆಯಲ್ಲಿ ತಾಯಿಯೇ ಅಡುಗೆ ಮಾಡುತ್ತಿದ್ದರು. ಸುತ್ತಲ ಕೆಲಸ ಮಾಡಲು ಒಬ್ಬ ಹೆಣ್ಣಾಳಿದ್ದಳಾದರೂ, ಅವಳು ಈ ಬಂಗ್ಲೆಯ[illegible]ಸುತ್ತಿರಲಿಲ್ಲ. ಅವನಿಗೆ ಹಸಿ ವೇನೋ ಆಗುತ್ತಿತ್ತು. ಅಡಿಗೆಯ ಮನೆಯ[illegible] ಮಾಡಿದ ಅಡಿಗೆಯೂ ಇದ್ದಿರಬಹುದು. ಆದರೆ ಅವ್ವನೂ ಊ[illegible]ಾಡಿದ ಹಾಗೆಯೇ

ಮಲಗಿದ್ದಾಳೆ. ಎದ್ದು ಇಕ್ಕು ಎಂದು ಕೇಳುವುದು ಸಾಧ್ಯವಿರಲಿಲ್ಲ. ತಾನೇ ಹೋಗಿ ಇಕ್ಕಿಕೊಂಡು ಉಣ್ಣಲು ಅಭಿಮಾನ ಅಡ್ಡಬರುತ್ತಿತ್ತು. ಆದುದರಿಂದ ರಾತ್ರಿಯಾದರೂ ಊಟ ಮಾಡದೆ ಹಾಗೆಯೇ ಇದ್ದ. ರಾತ್ರಿ ಒಂಬತ್ತು ಗಂಟೆಯ ಹೊತ್ತಿಗೆ ಅಪ್ಪ ಎದ್ದು ಬಚ್ಚಲುಮನೆಗೆ ಹೋಗಿ ಬಂದಳು. 'ಮಧ್ಯಾಹ್ನ ಮಾಡಿದ್ದೈತೆ ಉಣ್ಣು ಬಾ' – ಎಂದು ಕರೆದಳು. 'ನಂಗ್ ಬ್ಯಾಡ, ನೀನೇ ಉಣ್ಣು' – ಎಂದು ಅವನು ಹೇಳಿದ. ಅವಳು ರೂಮಿಗೆ ಹೋಗಿ, ಮಧ್ಯಾಹ್ನ ದಿಂದ ಮಲಗಿದ್ದ ನೆಲದ ಮೇಲೆ ಮತ್ತೆ ಉರುಟಿಕೊಂಡಳು.

ಉಣ್ಣು ಬಾ ಎಂದು ಅವಳೇ ಮಾತನಾಡಿಸಿದಾಳೆ. ಇನ್ನು ನೇಣುಗೀಣು ಹಾಕ್ಯಳೂದಿಲ್ಲ ಎಂಬ ಸಮಾಧಾನವಾಯಿತು. ಈಗಲಾದರೂ ಸತ್ಯಳ ರೂಮಿಗೆ ಹೋಗಿ ಬರೋಣವೇ ಎನ್ನುವ ಯೋಚನೆ ಬಂತು. ಆದರೆ ಇಡೀ ಬಂಗ್ಲೆಯಲ್ಲಿ ಮತ್ತೆ ಯಾರೂ ಇಲ್ಲ. ಹೆಂಗಸಿನ ಮನಸ್ಸು ಹೇಳುವುದು ಹ್ಯಾಗೆ, ಎಂಬ ಅನು ಮಾನವಾಯಿತು. ಮನೆ ಬಿಟ್ಟು ಹೋಗಲು ಧೈರ್ಯ ಬರಲಿಲ್ಲ. ಮೇಲೆ ಏಳದೆ ಹಾಗೆಯೇ ಮಲಗಿದ. ಸ್ವಲ್ಪ ಹೊತ್ತಿನಲ್ಲಿ ಥಂಡಿಗಾಳಿ ಬೀಸಿತು. ಎದ್ದು ಬಂಗಲೆಯ ಮುಂಬಾಗಿಲು ಹಾಕಿಕೊಂಡ. ಹೊರಗೆ ಕೈತೋಟದಲ್ಲಿ ಕಾನಿಸ್ಟೇಬಲ್ ಸುತ್ತುಹಾಕುತ್ತಿದ್ದ. ಶ್ರೀನಿವಾಸ ಸೋಫಾದ ಮೇಲೆ ಒರಗಿದ. ದೀಪ ಉರಿ ಯುತ್ತಲೇ ಇತ್ತು. ಸ್ವಲ್ಪ ಹೊತ್ತಿನಲ್ಲಿ ನಿದ್ದೆ ಬಂತು.

ನಡುವೆ ನಾಲ್ಕು ಸಲ ಎಚ್ಚರವಾಯಿತು. ಕುತ್ತಿಗೆ ತಿರುಗಿಸಿ ರೂಮಿನ ಕಡೆಗೆ ನೋಡುತ್ತಿದ್ದ. ಅಪ್ಪ ಹಾಗೆಯೇ ಮಲಗಿದ್ದಳು. ಮಧ್ಯಮಧ್ಯ ತಪ್ಪಿದರೂ ಬೆಳಗಿನ ತನಕ ನಿದ್ರೆಯಾಯಿತು. ಅವನೇ ಮೊದಲು ಎದ್ದು ಬ್ರಶ್ಶಿನಲ್ಲಿ ಹಲ್ಲು ತಿಕ್ಕಿ ಮುಖ ತೊಳೆದುಕೊಂಡ. ಮತ್ತೆ ಬಂದು ಬಂಗಲೆಯ ಮುಂಬಾಗಿಲು ತೆಗೆದು ಸೋಫಾದ ಮೇಲೆ ಮಲಗಿದ.

ಹಾಲಿನ ಹೆಂಗಸು ಬಂದಳು. ತರಕಾರಿಯವಳು ಬಂದಳು. ಕೆಲಸದವಳು ಬಂದಳು. ಅಪ್ಪ ಎದ್ದು ಅಡಿಗೆಮನೆಗೆ ಹೋದಳು. ಸೋಫಾದ ಹತ್ತಿರ ಬಂದು, 'ನಾಷ್ಟಾ ಏನು ಮಾಡ್ತೀಯೊ?' – ಎಂದು ಕೇಳಿದಳು. 'ಏನೂ ಬ್ಯಾಡ' – ಅವನು ಹೇಳಿದ. ಅವಳು ಒಳಗೆ ಹೋದಳು. ಈಗ ಹ್ಯಾಗೂ ಕೆಲಸದ ಹೆಂಗಸು ಬಂದಿದಾಳೆ. ನಾನು ಸತ್ಯಳ ರೂಮಿಗೆ ಹೋಗಿಬರಲೆ? – ಎಂಬ ಯೋಚನೆ ಬಂತು. ಆದರೆ ಕೆಲಸದವಳು ಸದಾ ಇಲ್ಲಿರೂದಿಲ್ಲ. ತನ್ನ ಕೆಲಸ ಮಾಡಿ ಹೊರಟುಹೋಗ್ತಾಳೆ. ಮತೆ [illegible]ಧ್ಯಾಹ್ನ ಬರ್ತಾಳೆ. ನಾನಿಲ್ಲದಿದ್ದಾಗ ಇವಳು ಏನಾದರೂ ಮಾಡಿಕೊ[illegible] ಅನುಮಾನ ಭಯಗಳುಂಟಾದುವು. ಮೇಲೆ ಏಳದೆ ಹಾಗೆ[illegible]ಹ್ನ ಊಟಕ್ಕೂ ಏಳಲಿಲ್ಲ.

೬

ಸಂಜೆ ನಾಲ್ಕು ಗಂಟೆಯ ಹೊತ್ತಿಗೆ ಅಪ್ಪ ಮನೆಗೆ ಬಂದರು. ಒಳಗೆ ಹೋಗಿ ಅವ್ವನ ಕೈಲಿ ಏನೋ ಮಾತಾಡಿದರು. ಅವನು ಮಲಗಿದಂತೆಯೇ ಇದ್ದ. ಆಮೇಲೆ ಅವನ ಹತ್ತಿರ ಬಂದು ಹೇಳಿದರು: 'ನೋಡು, ನಂಗೆ ಯಾವ್ದಾದರೂ ಸರಿ. ನೀನು ಹಟ ಮಾಡೂದೇ ನ್ಯಾಯವಿರಭೌದು. ನಿಮ್ಮವ್ವ ಬ್ಯಾಡ ಅನ್ನೂದೇ ನ್ಯಾಯವಿರಭೌದು. ನಮ್ಮೆಲ್ಲರಿಗಿಂತ ಹಿರೀಕರು ಊರಲ್ಲವ್ರೆ. ನೀನು, ಅವಳು, ಇಬ್ಬರೂ ಊರಿಗೆ ನಡೀರಿ. ಅವರು ಹೇಳಿದ ಹಾಗೆ ಕೇಳಿಬಿಡಿ.'

ಅವನು ಮಾತನಾಡಲಿಲ್ಲ. ಅವರು, 'ಕೇಳ್ಲಿಲ್ವಾ?' ಎಂದು ಮತ್ತೆ ಅದನ್ನೇ ಹೇಳಿದರು.

'ಆ ಹಳ್ಳೀ ಮುದುಕ ಏನು ಹೇಳುತ್ತೆ ನಂಗ್ ಗೊತ್ತು. ನಾ ಬರುಲ್ಲ.'

'ಅದು ಹಳ್ಳೀ ಮುದುಕ. ನೀನು ಹುಟ್ಟಿದ್ದು ದಿಳ್ಳೀಲಲ್ವ? ಹುಟ್ಟಿ ಹೈಸ್ಕೂಲ್ ತಂಕ ಓದಿದ್ದು ಹಳ್ಳೀಲಿ. ಈಗೆಲ್ಲೋ ಐದಾರು ವರ್ಷ ಮೈಸೂರಾಗಿದ್ದೆ ಅಂತ ಭಾಳಾ ಮುಂದುವರೀಬ್ಯಾಡ. ಅಜ್ಜ ಹೇಳಿದ್ದು ಒಂದು ಮಾತು ಕೇಳು. ನೀನು ಹ್ಯಾಗೂ ಸ್ವತಂತ್ರ. ಆನ್ಮ್ಯಾಲಾದ್ರೂ ನಿಂಗ್ ತಿಳಿದಹಂಗೆ ಮಾಡು.'

ಅವರು ಹೆಂಡತಿಗೂ ಹೇಳಿದರು. ಬಲವಂತ ಮಾಡಿ ಇಬ್ಬರನ್ನೂ ಸ್ವಲ್ಪಸ್ವಲ್ಪ ಊಟ ಮಾಡುವಂತೆ ಮಾಡಿದರು. ಅವರ ಕಟ್ಟಿದ ಹೋಲ್ಡಾಲ್ ಹ್ಯಾಗೂ ಇತ್ತು. ಇವರಿಗೂ ಒಂದಿಷ್ಟು ಬಟ್ಟೆ ಬರೆಗಳನ್ನು ತಾವೇ ತೆಗೆದುಕೊಂಡರು. ಬಂಗಲೆಗೆ ಬೀಗ ಹಾಕಿ, ಮುಂಭಾಗದಲ್ಲಿದ್ದ ಪೋಲೀಸಿನವನಿಗೆ ಹೇಳಿದರು. ಡ್ರೈವರನ ಪಕ್ಕದಲ್ಲಿ ಶ್ರೀನಿವಾಸ ಕುಳಿತ. ಹಿಂಭಾಗದಲ್ಲಿ ಹೆಂಡತಿಯೊಡನೆ ಅವರು ಕುಳಿತರು.

ಎಂಟು ಗಂಟೆಯ ಹೊತ್ತಿಗೆ ಅವರು ಊರು ಮುಟ್ಟಿದರು. ಅಷ್ಟರಲ್ಲಿ ದೊಡ್ಡ ಗೌಡರ ಪೂಜೆ ಮುಗಿದಿತ್ತು. ತಕ್ಷಣ ಎಲ್ಲರಿಗೂ ತಣಿಗೆ ಹಾಕಿದರು. ಇವರನ್ನು ನಿರೀಕ್ಷಿಸಿದ್ದಂತೆ ನಿಂಗಮ್ಮ ಬಿಸಿಬಿಸಿಯಾಗಿ ಅಡಿಗೆ ಮಾಡಿದ್ದಳು. ರಂಗಮ್ಮ ಎಂದೂ ಮಾವನವರ ಎದುರು ಕೂತು ಉಂಡವಳಲ್ಲ. ಆದುದರಿಂದ ಒಳಗೆ ಕೂತಳು. ಅಪ್ಪ ಮಗ ಒಟ್ಟಿಗೆ ಕೂತರು. ದೊಡ್ಡವರ ಫಲಾಹಾರ ಎದುರು ಗೋಡೆಯ ಹತ್ತಿರ ಆಯಿತು.

ಊಟವಾದ ಮೇಲೆ ದೊಡ್ಡ ಯಜಮಾನರು ತಮ್ಮ ಕೋಣೆಯ ಮಂಚದ ಮೇಲಿನ ದೊಡ್ಡ ಕೃಷ್ಣಾಜಿನದ ಮೇಲೆ ಮಂಡಿಸಿದರು. ಈ ಮೂವರೂ ಕೆಳಗೆ ಮಂದಲಿಗೆಗಳ ಮೇಲೆ ಕುಳಿತರು. ಅಜ್ಜನೇ ಮಾತನ್ನು ಪ್ರಾರಂಭಮಾಡಿದರು:

'ಅಜ್ಜನ ಹ್ಯಸರೇಳ್ತಾನೆ, ಹ್ಯಸರುಳುಸ್ತಾನೆ ಅಂತ ತಾನೆ ಮಮ್ಮಗ್‌ಗೆ ಅಜ್ಜನ ಎಸರು ಇಡಾದು? ನಿಂಗೆ ತಿರುಮಲೇಶಗೌಡ ಅಂತ ಇಟ್ಟದ್ದು ಯಾಕಣ್ಣ?'

'ತಿರುಮಲನ್ನೂ ಬಿಟ್ಟು ಗೌಡ ಅನ್ನೂದ್ನೂ ಬಿಟ್ಟು ಶ್ರೀನಿವಾಸ ಅಂತ ಮಾಡ್ಕ್ಯಂಡೀದಾನಲ' – ಮಂತ್ರಿ ಮೇಲಗಿರಿಗೌಡರು ಟಿಪ್ಪಣಿ ಮಾಡಿದರು.

'ಶ್ರೀನಿವಾಸ ಅಂದ್ರೂ ಅದೇ ಹ್ಯಸರು. ಒಟ್ನಲ್ಲಿ ಹಿರೀಕರ ಮರ್ಯಾದೆ ಉಳಿಸ್ಬೇಕು ಮಕ್ಳು.'

'ಅಜ್ಜಯ್ಯ, ನೀವು ಏನಂತೀರ ನಂಗೆ ಗೊತ್ತದೆ' – ಅದುವರೆಗೂ ಮೂಕನಂತೆ ಕುಳಿತಿದ್ದ ಶ್ರೀನಿವಾಸ ಮಾತನಾಡಿದ: 'ನಿಮ್ಮ ಮರ್ಯಾದೆ ಕಳೆಯೂವಂಥದು ನಾನೇನೂ ಮಾಡಿಲ್ಲ.'

'ಮಾಡಿಲ್ಲ. ಮಾಡಾಕ್ ಹ್ವಂಟಿದ್ದೆ. ರಿಜಿಸ್ಟ್ರಿ ಮದುವೆ ಅಂದ್‌ರೆ ಮನೆ ಮಠ ಇರೋರು ಮಾಡಾ ಕೆಲ್ಸನಾ? ಸ್ವಧರ್ಮೇ ನಿಧಾನ ಶ್ರೇಯಃ ಅಂತ ಪರಮಾತ್ಮ ಹೇಳಿಲ್ವಾ? ನಮ್ಮ ಧರ್ಮ ಯಾವ್ದು? ಆ ಧರ್ಮದ ಕನ್ಯಾಮಣೀನೇ ತಂದು ಲಗ್ನವಾಗಬೇಕು. ನೀನು ಹುಟ್ಟಿರಾದು ರಾಜ್ಯ ಆಳಿದ ಮನೇಲಿ, ರಾಜ್ಯ ಆಳ್ತೀರಾ ಅಪ್ಪನಿಗೆ. ಕ್ಷತ್ರಿಯ, ಕ್ಷತ್ರಿಯ ರಕ್ತ ನಿಂದು. ಪೂಜಾರಯ್ಯನ ಮಗಳನ್ನ ಕಟ್ಕಳಾಕ್ ಹ್ವಂಟಿದೀಯಲಾ, ಧರ್ಮವಾ ಇದು?'

'ಕ್ಷತ್ರಿಯರು ಅಂತ ಎಷ್ಟ ಅಂದ್‌ಕಂಡ್ರೂ ನಾವ ಕ್ಷತ್ರಿಯರಾಗುಲ್ಲ. ಹತ್ ಹದಿನೈದು ವರ್ಷದಿಂದ ನಿಮ್ಮ ತಲೆಗೆ ಹೊಕ್ಕದೆ. ಅದ್ ಬಿಟ್‌ಬಿಡಿ' – ಮೊಮ್ಮಗ ಅಂದ.

'ಕೇಳ್ತೀನೋ ಮಗ?' – ಎಂದು ಮಗನಿಗೆ ಒಪ್ಪಿಸುವಂತೆ ಅಜ್ಜ ಪ್ರತಿಭಟಿಸಿದರು: 'ನಾನು ಹುಲಿಯಲ್ಲ ನಾಯಿಮರಿ ಅಂದ್‌ಕಳೂ ಹುಲಿಮರಿಗೆ ಏನ್ ಮಾಡ್ತಿಯಾ? ನೀನು ಊರ ಪಟೇಲ್‌ರಾಗಿರೂದು ಸುಳ್ಳಾ? ಊರು ಸುತ್ತಾ ಜಮೀನಿರಾದು ಸುಳ್ಳಾ? ಬೀದೀಲಿ ಹ್ವಂಟ್‌ರೆ ಜಗಲಿಮ್ಯಾಲೆ ಕುಂತಿದ್ದೋರೆಲ್ಲ, ನೀಡಿದ್ದ ಕಾಲು ಮ್ಯಾಲಕ್ಕೆ ಮುದ್‌ರಿಕಳಾದು ಸುಳ್ಳಾ? ದೇವರು ಕೊಟ್ಟಿರಾ ಘನಂದಾರೀನ ವಲ್ಲೆ ಅನ್ನೂ ಯಡವಟ್ಟನಿಗೆ ಏನು ಮಾಡಬೇಕು?'

'ಅಜ್ಜಯ್ಯಾ, ಇದು ದುರಹಂಕಾರ. ಪಾಳೇಗಾರಿಕೆ, ಪಟೇಲಿಕೆ, ಇವೆಲ್ಲ ಈ ಕಾಲದಲ್ಲಿ ನಡೆಯುಲ್ಲ. ಈಗ ಎಲ್ಲಾ ಒಂದೇ. ಅವರವರ ಗುಣ ಯೋಗ್ಯತೆ ನೋಡಿ ಗೌರವ ಕೊಡಬೇಕು. ಜಾತಿ ಪಾತಿ ಎಲ್ಲ ಸುಳ್ಳು.'

ಅಜ್ಜನಿಗೆ ರೇಗಿತು: 'ಹಂಗಾದ್‌ರೆ ನೀನು ವಕ್ಕಲಿಗನಿಗೆ ಹುಟ್ಟಿದ್ದು ಸುಳ್ಳೇನೋ? ವಕ್ಕಲಿಗ ಅವ್ವ ಹೆತ್ತದ್ದು ಸುಳ್ಳಾ?'

ದೊಡ್ಡ ಗೌಡರು ತಮ್ಮ ಪಕ್ಷದ ವಾದವನ್ನು ದುರ್ಬಲಗೊಳಿಸುತ್ತಿದ್ದಾರೆಂದು

ಮಂತ್ರಿಗಳಿಗೆ ಅರ್ಥವಾಯಿತು. ಅವರು ಬಾಯಿಹಾಕಿದರು: 'ಎಷ್ಟೇ ಬದಲಾಯಿಸಿದರೂ ನಮ್ಮ ಪರಂಪರೆ ಬಿಡಾಕ್ ಆಗುಲ್ಲ. ತಾಯಿಬೇರು ಕಿತ್‌ಹಾಕಿದ ಗಿಡ ಒಣಗಿಹೋಗ್ತದೆ. ಅದೇ ಮಾತ ಯಜಮಾನ್ರು ಬ್ಯಾರೆ ಥರ ಹೇಳ್ತಿದಾರೆ. ಮಹಾತ್ಮರು ಅಹಿಂಸೆ ಅಂತ ಏನ್ ಹೇಳ್ತಿದ್ರು ಅದು ಮುಖ್ಯ. ತಡೀ ಹೇಳ್ತೀನಿ.' ಆಮೇಲೆ ಕೋಣೆಯಿಂದ ಹೊರಗೆ ಬಂದು, 'ಲೇ, ಅದ್ಯಾರ್ಲೇ ಅಲ್ಲಿ?' ಎಂದು ಕೂಗಿದರು. ಒಬ್ಬ ಆಳುಮಗ ಹತ್ತಿರ ಬಂದ. 'ಪೂಜೇಮನೆ ಯಂಗ್‌ಟೇಶಯ್ಯಾರುನ್ನ ಕರ್ಕಂಬಾ. ಓಡ್ಯಲೆ ಹ್ವಾಗು' – ಎಂದು ಅವನನ್ನು ಕಳಿಸಿದರು.

ವೆಂಕಟೇಶ ಬರುವ ತನಕ ಅವರು ಮತ್ತೆ ಮಾತನಾಡಲಿಲ್ಲ. ಕೋಣೆಯ ಬಾಗಿಲಿನಲ್ಲಿ ಕಾಳೇಗೌಡ ಮತ್ತು ನಿಂಗಮ್ಮ ನಿಂತಿದ್ದರು. ದೊಡ್ಡ ಯಜಮಾನರು ಮತ್ತು ಮಂತ್ರಿ ಮೇಲಗಿರಿಗೌಡರು ಇರುವಾಗ ಒಳಗೆ ಬಂದು ಕೂತುಕೊಳ್ಳುವ ಧೈರ್ಯ ಆ ದಂಪತಿಗಳಿಗೆ ಇರಲಿಲ್ಲ. ಹತ್ತು ನಿಮಿಷವಲ್ಲಿ ವೆಂಕಟೇಶ ಬಂದ. ಮಂತ್ರಿಗಳು ಕುಳಿತಿದ್ದ ಮುಂದಲಿಗೆಯ ಮೇಲೆ ಕುಳಿತ. ಅವನೂ ಶ್ರೀನಿವಾಸನೂ ಹೆಚ್ಚುಕಡಿಮೆ ಒಂದೇ ವಯಸ್ಸಿನವರು. ಅವನೇ ಶ್ರೀನಿವಾಸನನ್ನು ಮಾತನಾಡಿಸಿದ: 'ಏನಪ್ಪಾ ದೊರೆ ಮಗ, ಹ್ಯಾಗಿದೀಯ?'

ಮಂತ್ರಿಗಳು ಹೇಳಿದರು: 'ಯಂಗ್ಟೇಶ, ನೀನು ಒಂದು ಚೂರೂ ಮುಚ್ಚಿಕೊಳ್ಳದೆ ಮಾತಾಡಬೇಕು. ಈ ಮದುವೆ ವಿಚಾರದಲ್ಲಿ ನಿಮ್ಮ ಮನೇಲಿ ಏನು ನಡೆದದೆ, ನಿಮ್ಮ ತಂದೆಯೋರು ಏನಂತಾರೆ, ಕರಕ್ಟ ಹೇಳಿಬಿಡು.'

'ತಂದೆಯೋರೇನು ಇನ್ನೊಂದ್ ಎರಡು ತಿಂಗ್ಳಲ್ಲಿ ಹರಹರ ಮಹದೇವ ಅಂತಾರೆ. ಅವತ್ತು ಬೆಂಗಳೂರಿಂದ ಬಂದಾಗಿನಿಂದ ನೆಟ್ಟಗೆ ತುತ್ತು ಎತ್ತಿಲ್ಲ. ಹೊರಗಡಿಗೆ ಮುಖ ತೋರಿಸಿಲ್ಲ. ಊರಲ್ಲಿ ಐಯ್ಯಂಗಾರ್ರು ಮಾಧ್ವರು ಜೊತೆಯಾಗಿ, ನೋಡಿದ್ಯಾ ಸ್ಮಾರ್ತರ ಬ್ಯಾಳೆಕಾಳಾ ಅಂತ ಮಾತಾಡ್ಕತ್ತಿದಾರೆ. ಮುಂದಿನ ತಿಂಗಳು ನಮ್ಮಮ್ಮನ ತಿಥಿ ಬಂದಾಗ ಸ್ಮಾರ್ತರ ಪೈಕಿ ಯಾರೂ ಬ್ರಾಹ್ಮಣಾರ್ಥಕ್ಕೆ ಬರುಲ್ಲ ಅಂದ್ರೆ ಏನು ಮಾಡೂದು ಅಂತ ಯೋಚನೆಯಾಗಿದೆ.'

ಇದುವರೆಗೂ ಸುಮ್ಮನಿದ್ದ ರಂಗಮ್ಮ ಬಾಯಿ ಹಾಕಿದಳು: 'ಕೇಳ್ತೀನೋ ಮಲ್ಲೇಶ. ಯಂಗಟ್‌ರಮಣಯ್ಯಾರು ಅಂದ್ರೆ ನಮ್ಮನೆಗೇ ಗುರುಗಳಲ್ವೇನೊ? ಅವರ ಮಗಳುನ್ನ ಕ್ಯಡಸಿದ್ರೆ ನಿನ್ನ ಹ್ವಟ್ಟ್ಯಾಗೆ ಮಕ್ಳಾಯ್ತದೇನೊ?'

ವೆಂಕಟೇಶನ ತಂದೆ ವೆಂಕಟರಮಣಯ್ಯನವರು ತಮ್ಮ ಮನೆಗೆ ಗುರುಗಳೆಂಬುದೇನೋ ನಿಜ. ಶ್ರೀನಿವಾಸ ಈ ಊರಿನಲ್ಲಿದ್ದು ಹೈಸ್ಕೂಲು ಓದುವತನಕ ಪ್ರತಿ ಶನಿವಾರವೂ ಬೆಳಗ್ಗೆ ಉಪವಾಸವಿದ್ದು, ತಮ್ಮ ಮನೆದೇವರಾದ ತಿರುಮಲ

ಸ್ವಾಮಿಯ ಮಂದಿರಕ್ಕೆ ಹೋಗುತ್ತಿದ್ದ. ಅವರು ಮಂಗಳಾರತಿ ಮಾಡಿ ಕೊಟ್ಟ ತೀರ್ಥ ಪ್ರಸಾದಗಳನ್ನು ಭಕ್ತಿಯಿಂದ ಸ್ವೀಕರಿಸುತ್ತಿದ್ದ. ಮಾಳಪಕ್ಷ ಅಮಾವಾಸ್ಯೆಯ ದಿನ ಪಿತೃಗಳ ಹೆಸರಿನಲ್ಲಿ ನವಗ್ರಹ ದಾನ ಕೊಟ್ಟಾಗ ಅವರೇ ಬರುತ್ತಿದ್ದರು. ಆಗ ಮನೆಯವರೆಲ್ಲ, ತನ್ನ ತಂದೆ ಮತ್ತು ಅಜ್ಜ ಸಹ, ಅವರಿಗೆ ನಮಸ್ಕಾರ ಮಾಡುತ್ತಿದ್ದರು. ಈಗ ನಾಲ್ಕು ವರ್ಷದಿಂದ ಮಾತ್ರ ಅಜ್ಜನು ಬ್ರಾಹ್ಮಣರಿಗೆ ನಮಸ್ಕಾರ ಮಾಡುವುದನ್ನು ನಿಲ್ಲಿಸಿ ಬರೀ ಕೈಮುಗಿಯುತ್ತಾರೆ. ಆದರೆ ನವಗ್ರಹ ದಾನ ಮೊದಲಾದುವನ್ನು ತಪ್ಪದೆ ಕೊಡುತ್ತಾರೆ. ಹಾಗೆ ನೋಡಿದರೆ ಊರಿನಲ್ಲಿರುವವರು ಇವರೊಬ್ಬರೇ ಪುರೋಹಿತರಲ್ಲ. ಸುತ್ತ ಹಳ್ಳಿಗಳಲ್ಲಿ ರೈತರ ಮನೆಯ ಕೆಲಸ ಕಾರ್ಯಗಳನ್ನು ಮಾಡಿಸಲು ಬೇರೆ ಜೋಯಿಸರಿದ್ದಾರೆ. ಅವರು ವೆಂಕಟರಮಣಯ್ಯನವರಷ್ಟು ವಿದ್ಯಾವಂತರಲ್ಲ, ಕುರುಡು ಮಂತ್ರದವರು. ತಾವು ಊರ ಗೌಡರೆಂಬ ಗೌರವದಿಂದ ಮಾತ್ರ ಇವರು ತಮ್ಮ ಮನೆಯ ದಾನ ಧರ್ಮ ಸ್ವೀಕರಿಸಲು ಬರುತ್ತಾರೆ. ದೇವರ ಇನಾಮತಿ ಮಾತ್ರವಲ್ಲದೆ ಸ್ವಂತ ಜಮೀನೂ ಇರುವ ಇವರಿಗೆ ಪೌರೋಹಿತ್ಯ ಮಾಡುವ ಅಗತ್ಯವೇನಿಲ್ಲ.

ಶ್ರೀನಿವಾಸನ ಕಡೆಗೆ ನೇರವಾಗಿ ತಿರುಗಿ ವೆಂಕಟೇಶ ಹೇಳಿದ: 'ನೋಡಪ್ಪಾ, ನೀವೆಲ್ಲ ಸಿಟೀಲಿ ಓದ್‌ದೋರಾಗಿರಭೌದು. ಈ ಹಳ್ಳೀ ಜನ ಕಟ್‌ಕಂಡು ನಮಗೇನು – ನಮ್ಮ ಪಾಡಿಗೆ ನಾವು ಅನ್‌ಭೌದು. ಆದರೆ ನಿಮ್ಮ ತಂದೆ ತಾಯಿ ಬಂಧು ಬಳಗವೆಲ್ಲ ಹಳ್ಳೀಲಿದಾರೆ. ಇಲ್ಲಿ ಇವರ ಜೀವನ ನರಕ ಮಾಡಿ ಶಾಪ ತಿಂದ್‌ರೆ ಅಲ್ಲಿ ನಿಮ್ಮ ಜೀವನ ಸುಖವಾಗಿರುಲ್ಲ. ಆ ಕತ್ತೆಲೌಡಿ ತಲೆಗೆ ಹೊತ್ತಿಸಿದ್ಲು ಅಂತ ತಿಳಿಸ್ಲಿಕಷ್ಟ ನೀನು ಹೀಗ್ ಹಟ ಮಾಡಿ ಲೈಲಾ ಮಜ್ನು ಕಥೆ ಮಾಡಬಾರದು. ನಿನ್ನ ತಂದೆ ಅಜ್ಜ ಮುತ್ತಜ್ಜರ ಅಂತಸ್ತಿಗೆ ತಕ್ಕ ಕೆಲಸ ಮಾಡಬೇಕು. ವಿನಾಶ ಕಾಲೇ ವಿಪರೀತ ಬುದ್ಧಿ ಆಗಬಾರದು.'

ವೆಂಕಟೇಶ ಪರೀಕ್ಷೆಯಲ್ಲಿ ಫೇಲಾದರೂ ಮಾತಿನಲ್ಲಿ ಬುದ್ಧಿವಂತನೆಂದು ಶ್ರೀನಿವಾಸನಿಗೆ ಗೊತ್ತು. ಹೈಸ್ಕೂಲಿನಲ್ಲಿ ತನಗಿಂತ ಎರಡು ಕ್ಲಾಸು ಮುಂದೆ ಓದುತ್ತಿದ್ದ. ಇಂಟರ್‌ಮೀಡಿಯೆಟ್‌ನಲ್ಲಿ ಅವನು ಯಾಕೆ ಫೇಲಾದನೆಂದು ತನಗೆ ಗೊತ್ತು. ಆದರೆ ಈಗ ಊರಿನಲ್ಲಿ ಒಬ್ಬ ಪ್ರತಿಷ್ಠಿತ ವ್ಯಕ್ತಿಯಾಗಿದ್ದಾನೆ. ಇಡೀ ತಾಲ್ಲೂಕಿನ ಚುನಾವಣೆಯ ತಂತ್ರ ಕೆಲಸಗಳಲ್ಲಿ ತನ್ನ ತಂದೆಗೆ ಸಹಾಯಮಾಡಬಲ್ಲವನಾಗಿದ್ದಾನೆ. ಅವನಿಗೆ ಪ್ರತಿಯಾಗಿ ಉತ್ತರ ಹೇಳಬೇಕು: ನಾಲ್ಕು ಜನ ಮೂಢನಂಬಿಕೆಯವರಿಗೆ ನೋವಾಗುತ್ತೆ ಅಂತ ಹಿಂದ್‌ಲೇಟು ಹಾಕಿದರೆ ರೂಢಿ ಮುರಿಯುಲ್ಲ; ಇವತ್ತು ನಾವು ಹೆದರಿದರೆ ಅದೇ ಕಾರಣದಿಂದ ಮುಂದೆ ನಮ್ಮ ಮಕ್ಕಳು ಮೊಮ್ಮಕ್ಕಳೂ ಹೆದರಬಹುದು; ರೂಢಿಯನ್ನು ಮುರಿದ ಯಶಸ್ಸ

ನಮ್ಮದೇ ಯಾಕಾಗಬಾರದು? – ಎನ್ನಬೇಕೆಂಬ ವಿಚಾರ ಮನಸ್ಸಿನಲ್ಲಿ ಬಂತು. ವೆಂಕಟೇಶ ಬುದ್ಧಿವಂತ. ಶಾಸ್ತ್ರ ಸಂಬಂಧ, ಗೀತೆ ಉಪನಿಷತ್ತು ಅಂತ ಹೇಳಿಸಿಕೊಂಡಿದಾನೆ, ಅದರಲ್ಲಿ ಯಾವುದೋ ಒಂದು ಶ್ಲೋಕ ತೆಗೆದು ವಾದ ಮಾಡ್ತಾನೆ. ಸತ್ಯ ಆದ್ರೆ ಇವನಲ್ಲ ಇವನ ಅಪ್ಪನ ಪಾಪಾನಾದ್ರೂ ಕತ್ತರಿಸಿ ಉತ್ತರ ಹೇಳ್ತಿದ್ಲು. ಅವಳ ಕೈಲಿ ಮಾತಾಡುಕ್ಕೆ ಇವರೆಲ್ಲ ಹೆದರ್ತಾರೆ – ಎಂದುಕೊಂಡ. ತಾನು ವಾದಕ್ಕೆ ಇಳಿಯಲಿಲ್ಲ.

ಅಷ್ಟರಲ್ಲಿ ಕಾಳೇಗೌಡ ಮತ್ತು ನಿಂಗಮ್ಮರು ಒಳಗೆ ಬಂದರು. ವಾವೆಯಲ್ಲಿ ಅವನಿಗೆ ಅವರು ಚಿಕ್ಕಪ್ಪ ಚಿಕ್ಕಮ್ಮರಾಗುತ್ತಾರೆ. ಚಿಕ್ಕಪ್ಪ ಎಂದ: 'ಏನ್ಲಾ ತಮ್ಮಯ್ಯ, ಈಟೊಂದ್ ಜನ ಏಳಿದ್ರೂ ಹಿಂಗ್ ಮುರ್ಕತೀಯಲಾ, ನಿಂಗ್ ಪಳ್ಳೇದಾಯ್ತುದಾ? ಪಾಳೇಗಾರ್ರ ಮನ್ಲಿ ಮಾಡ್‌ಬ್ಯಾಡ್ದ ಕೆಲ್ಸ ಆಯ್ತು ಅಂತ ಊರೆಲ್ಲ ತಿಕ ಬಡಕಂಡು ನಗಾಕುಲ್ವಾ?'

ಚಿಕ್ಕಮ್ಮ ನಡುವೆಯೇ ಮಾತನಾಡಿದಳು: 'ಊರ ಎಂಗುಸ್ರೆಲ್ಲಾ ಮಾತಾಡ್ಕ್ಯಂಡ್ ನಗ್ತವ್ರೆ.'

ಇವರೆಲ್ಲರೂ ತನ್ನ ನಿರ್ಣಯದ ವಿರುದ್ಧ ಮಾತನಾಡುವವರೇ ಎಂಬುದು ಚೆನ್ನಾಗಿ ತಿಳಿದಿದ್ದುದೇ. ಅಜ್ಜ ಏನು ಹೇಳುತ್ತಾರೆಂಬುದು ಮೊದಲೇ ಗೊತ್ತಿತ್ತು. ವೆಂಕಟೇಶನನ್ನು ಕರೆಸುತ್ತಾರೆಂದು ತಾನು ನಿರೀಕ್ಷಿಸಿರಲಿಲ್ಲ. ಆದರೆ ಊರಿಗೆ ಬರಲು ತಾನೇಕೆ ಒಪ್ಪಿಕೊಂಡೆ? ಅಪ್ಪ ಬಂದ ತಕ್ಷಣ ಅಪ್ಪನನ್ನು ನೋಡಿಕೊಳ್ಳೋ ತನ್ನ ಜವಾಬ್ದಾರಿ ಕಳೆಯಿತು ಅಂತ ಹೇಳಿ ಯಾಕೆ ಮನೆಯಿಂದ ಹೊರಟುಹೋಗಲಿಲ್ಲ? ಹೋಗಿ ಸತ್ಯಳನ್ನು ಕಂಡು ಅವಳ ಕೋಣೆಯಲ್ಲೇ ಇದ್ದುಬಿಡಬೇಕಾಗಿತ್ತು. ರಾಜೇಗೌಡ ಹೇಳಿದ ಹಾಗೆ ನಾಲ್ಕು ಸ್ನೇಹಿತರೆದುರು ಶಾಸ್ತ್ರ ಮಾಡಿ ಪೇಪರಿನಲ್ಲಿ ಹಾಕಿಸಿಬಿಡಬೇಕಾಗಿತ್ತು. ಇವರೆಲ್ಲ ಒಟ್ಟು ಸೇರಿ ಬುದ್ಧಿ ಹೇಳುವುದಕ್ಕೆ ನಿಂತಾಗ ಪ್ರತಿ-ಹೇಳುವ, ರೇಗುವ ಮನಸ್ಸೂ ಇಲ್ಲವಾಗುತ್ತಿದೆ. ಎಷ್ಟು ಹೊತ್ತು ಅಂತ ಇವರಿಗೆ ಮಾತಾಡುವ ಅವಕಾಶ ಕೊಡಬೇಕು? ಆದರೆ ಉತ್ತರ ಹೇಳಲು ಮನಸ್ಸೇ ಬರುತ್ತಿಲ್ಲ. ಉತ್ತರವಿಲ್ಲದೆ ಇಲ್ಲ. ಸತ್ಯಳ ಕೈಲಿ ಚರ್ಚಿಸುತ್ತಿದ್ದಾಗ, ಉಳಿದ ಸ್ನೇಹಿತರೊಡನೆ ಮಾತನಾಡುತ್ತಿದ್ದಾಗ, ಕಾಲೇಜಿನಲ್ಲಿ ಇಂಥ ವಿಷಯದ ಬಗ್ಗೆ ಡಿಬೇಟ್ ಮಾಡುವಾಗ ಎಷ್ಟೊಂದು ವಾದ ಪ್ರತಿವಾದಗಳನ್ನು ಕೇಳಿರಲಿಲ್ಲ, ತಾನೇ ಮಾಡಿರಲಿಲ್ಲ! ಅವುಗಳಲ್ಲಿ ನಾಲ್ಕು ಮಾತನ್ನಾದರೂ ಆಡಬೇಕು – ಎನಿಸಿತು. ಆದರೆ ಯಾಕೋ ಮನಸ್ಸು ಬರುತ್ತಿಲ್ಲ. ಇವರೆಲ್ಲ ಹೇಳುತ್ತಿರುವುದು ಪಾಶ್ಚ್ಯ, ರೂಢಿ, ಎಂದು ತನ್ನ ಅಂತರಂಗ ಹೇಳುತ್ತಿದೆ. ಅದರಂತೆ ಮಾತ್ರ ತಾನು ನಡೆಯಬೇಕು ಎಂದುಕೊಂಡ. ಕುಳಿತಲ್ಲಿಂದ ಎದ್ದು ಬೇರೆ ಕೋಣೆಗೆ

ಹೊರಟುಹೋದ. ಊರಿಗೆ ಬಂದಾಗ ಅವನು ಮಲಗುವ ಕೋಣೆ ಅದು.

ದೊಡ್ಡ ಯಜಮಾನರ ಕೋಣೆಯಲ್ಲಿ ಉಳಿದ ಇವರು, ತಕ್ಷಣ ಏನೂ ಮಾತ ನಾಡಲಿಲ್ಲ. ಐದು ನಿಮಿಷದ ನಂತರ ವೆಂಕಟೇಶ ಎಂದ: 'ಸಿನಿಮಾ ಗಿನಿಮಾ ನೋಡ್ತವೆ. ಬೆಳೆಯೂ ವಯಸ್ಸು. ಲೈಲಾ ಮಜ್ನು ಕಥೆಯೇ ತಲೇಲಿರುತ್ತೆ. ಹೀಗಾಡ್ತುವೆ. ಗಟ್ಟಿ ಹಿಡುದ್ರೆ ಸುಮ್ನಾಗ್ತುವೆ ಬಿಡಿ.'

ಮಂತ್ರಿಗಳು ತಾವು ಮಲಗುವ ಮಹಡಿಗೆ ವೆಂಕಟೇಶನನ್ನು ಕರೆದುಕೊಂಡು ಹೋದರು. ಬೋರನಿಂಗಪ್ಪನವರ ಚುನಾವಣೆಗೆ ಇನ್ನು ಎಂಟು ದಿನ ಮಾತ್ರ ಉಳಿದಿತ್ತು.

೭

ಶ್ರೀನಿವಾಸ ಏಳು ಗಂಟೆಯ ಹೊತ್ತಿಗೆ ಎದ್ದ. ಮನೆಯ ಹಿಂಭಾಗದ ಹಿತ್ತಿಲಿನ ಮೂಲೆಯಲ್ಲಿ ತನ್ನ ತಂದೆ ಈಗ ಹತ್ತು ವರ್ಷದಲ್ಲಿ ಕಟ್ಟಿಸಿದ್ದ ಸೆಪ್ಟಿಕ್ ಟ್ಯಾಂಕಿನ ಕಕ್ಕಸಿಗೆ ಹೋಗಿ ಬಂದ. ಅಷ್ಟರಲ್ಲಿ ಅವನ ತಾಯಿ ಹತ್ತಿರ ಬಂದಳು. ಆಗಲೇ ಸ್ನಾನ ಮಾಡಿ ದೊಡ್ಡ ಅಂಚಿನ ಸೀರೆಯುಟ್ಟಿದ್ದ ಅವಳು ಹೇಳಿದಳು: 'ಗುಡೀಗೆ ಹೋಗಿ ಬರಾನ. ಬ್ಯಾಗ ಮೈ ತೊಳ್ಕ.'

'ನಾನು ಬರುಲ್ಲ.'

'ಮನೆ ದೇವರ ಗುಡೀಗೆ ಬರುಲ್ಲ ಅಂತಾರೇನೋ?'

'ಅದ್ಯಾವ ದೇವ್ರುದ್ದಾದ್ರೂ ನಾನು ಬರುಲ್ಲ. ಬೇಕಾದ್ರೆ ನೀನೇ ಹೋಗು.'

'ರಾತ್ರಿ ಗಂಟೆ ಜಾತಿ ಇಲ್ಲ ಅಂತಿದ್ದೆ. ಈಗ ದೇವ್ರೂ ಇಲ್ಲ ಅಂತಿಯೇನೋ?' – ಎಂದು ರೇಗಿದ ಅವಳ ಕಣ್ಣಿನಲ್ಲಿ ನೀರು ಬಂತು.

'ನೀನು ಉಟ್ಟಿದ್ದೇ ಆ ದೇವರ ಹರಕೆಯಿಂದ. ನಿಂಗೊತ್ತಿಲ್ವಾ, ಐದು ವರ್ಷ ಮಕ್ಳು ದಕ್ಲಿಲ್ಲ. ಆಮ್ಯಾಲೆ ಹೊಟ್ಟೇಲಿ ನೀನೂ ಉಳೀತಿರ್ಲಿಲ್ಲ. ಗೋಪುರದ ಕಳಸಕ್ಕೆ ಚಿನ್ನದ ತಗಡು ಹ್ವಡುಸ್ತೀವಿ ಅಂತ ಹರಕೆ ಮಾಡ್ಕಳೂತ್ಲು ನೀನು ಹುಟ್ಟಿದೆ. ಈಗ ಆ ದೇವರೇ ಇಲ್ಲ ಅಂತೀಯ? ನಾಳೀಕೆ ನಿನ್ನ ಹುಟ್ಟಿಸಿದ ಅಪ್ಪನ್ನೇ ಇಲ್ಲಾ ಅಂತೀಯಾ?'

ಈ ಮಾತುಗಳಿಂದ, ಇಂತಹ ವಾದಗಳಿಂದ ಅವನ ಮನಸ್ಸಿಗೆ ಇರುಸು ಮುರುಸು ಆಗುತ್ತಿತ್ತು. 'ನೀವು ಬೆಂಗಳೂರಿಗೆ ಯಾವಾಗ ಹೋಗ್ತೀರಾ?' – ಎಂದು ಅವನು ಕೇಳಿದ.

'ನಿಮ್ಮಪ್ಪಾಜಿ ಕೇಳು.'

'ನೀವು ಬೇಕಾದಾಗ ಬನ್ನಿ. ನಾನು ಒಂಬತ್ತು ಗಂಟೆ ಮೋಟಾರಿಗೆ ಹೋಗ್ತೀನಿ.'

ಅಸ್ವ ಹೋಗಿ ಯಜಮಾನರನ್ನು ಕೇಳಿ ಬಂದು ಹೇಳಿದಳು: 'ಅವರು ಇಲ್ಲೇ ಹಳ್ಳೀಕಡೀಕ್ ಹ್ವಾಗಿ ಬರ‍್ತಾರಂತೆ. ಓಟ್ ಹೊತ್ತಿಗೆ ನಾವು ಗುಡಿಗೆ ಹ್ವಾಗಿ ಬರಾನ. ಜೊತೀಲೇ ಹ್ವಾಗಾನ. ನೀನೊಬ್ಬನೇ ಹ್ವಾಗಿ ಏನು ಮಾಡ್ತಿಯ?'

ಅವನು ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಕೊಂಡ. ಸ್ನಾನ ಮಾಡಿ ಪಂಚೆ ಉಟ್ಟು, ಮೇಲೆ ಶರಟು ಹಾಕಿಕೊಂಡ. ಅವನ ತಾಯಿ ಬಾಳೇಹಣ್ಣು, ತೆಂಗಿನ ಕಾಯಿ, ಹೂವು, ಅರಿಶಿನ ಕುಂಕುಮ, ಊದುಗಡ್ಡಿ, ವೀಳ್ಯದೆಲೆ ಅಡಿಕೆಗಳನ್ನು ಇಟ್ಟ ಒಂದು ದೊಡ್ಡ ಬೆಳ್ಳಿಯ ತಟ್ಟೆಯನ್ನು ಹಿಡಿದುಕೊಂಡಳು. ಅವನು ಅವಳ ಹಿಂದೆ ನಡೆದ. ಬೀದಿಯಲ್ಲಿ ಹೋಗುವಾಗ ದೊಡ್ಡ ಹೆಂಗಸರು ಗಂಡಸರು ಇವರನ್ನೇ ನೋಡುತ್ತಿದ್ದರು. ಅಯ್ಯಂಗಾರರ ಕೇರಿಯಲ್ಲಿ ಹೋಗುವಾಗ ಒಬ್ಬ ಮುದುಕಿ ತಮಿಳಿನಲ್ಲಿ, 'ದೇವಸ್ಥಾನಕ್ಕೆ ಹೋಗ್ತಿದಾರೆ ಅಂತ ಕಾಣುತ್ತೆ. ಶೂದ್ರರ ಜೊತೆ ಸಂಬಂಧ ಮಾಡಿದ ಮೇಲೆ ವಿಷ್ಣುದೇವರ ಪೂಜೆ ಮಾಡೋ ಅಧಿಕಾರ ಆ ಸ್ಮಾರ್ತನಿಗೆ ಹ್ಯಾಗೆ ಉಳಿಯುತ್ತೆ? ಅವನೇ ದಿವಾನ ಅಂತ ಆಡಿದ ಹಾಗೆ ಆಡಿದ್ರೆ ಆಗುತ್ಯೇ? ಮಹಾರಾಜರ ಹತ್ರಕ್ಕೇ ಹೋಗಿ ಅಹವಾಲು ಮಾಡಬೇಕು' ಎಂದು ಇನ್ನೊಬ್ಬ ಮುದುಕಿಗೆ ಹೇಳಿದುದು ಅವನಿಗೆ ಸ್ಪಷ್ಟವಾಗಿ ತಿಳಿಯಿತು.

ಕೋಟೆಯ ಉತ್ತರ ಭಾಗದ ಕಂಡಿಯಲ್ಲಿ ಹಾಯ್ದು ಮುಂದೆ ಸಿಕ್ಕುವ ಮೋಟಾರು-ರಸ್ತೆಯನ್ನು ದಾಟಿ, ತೂಬಿನ ಕಾಲುವೆಯ ಮೇಲಿನ ಸೇತುವೆಯ ಮೇಲೆ ನಡೆದು ಅವರು ದೇವಸ್ಥಾನಕ್ಕೆ ಬರುವ ವೇಳೆಗೆ ಎಳೆಬಿಸಿಲು ಕಾವಾಗುತ್ತಿತ್ತು. 'ನೋಡು. ನೀನು ಹುಟ್ಟಿದಾಗ ಚಿನ್ನದ ತಗಡು ಹ್ವಡಸಿದ ಕಳಸ ಹ್ಯಂಗ್ ಹ್ವಳೀತದೆ' – ಎಂದು ರಂಗಮ್ಮ ಮಗನಿಗೆ ತೋರಿಸಿದಳು. ಅದು ಅವನು ನೋಡದ ಗುಡಿಯಲ್ಲ, ಅವನು ಕಾಣದ ಕಳಸವಲ್ಲ. ಅದರ ಮೇಲೆ ಹೊಳೆಯುವ ಚಿನ್ನದ ತಗಡು, ತಾನು ಹುಟ್ಟಿದ್ದಕ್ಕೆ ಹೊದಿಸಿದುದೆಂಬುದನ್ನು ಅವನು ಮಾತ್ರವಲ್ಲ, ಸುತ್ತ ಹತ್ತು ಹಳ್ಳಿಗಳವರೂ ಬಲ್ಲರು. ಆದರೂ ಕುತೂಹಲದಿಂದ ನೋಡಿದ. ಅದು ಬೆಳಗಿನ ಬಿಸಿಲಿನಲ್ಲಿ ಥಳಥಳನೆ ಹೊಳೆಯುತ್ತಿತ್ತು. ದುಡ್ಡಿದೆ ಅಂತ ಪಟೇಲರ ಮನೆಯವರು ಮಾಡಿಸಿದ ಜಂಬದ ಗುರುತಲ್ಲವೆ ಇದು, ಎನಿಸಿತು. ಒಂದೊಮ್ಮೆ ಈ ವಿಷಯ ಬಂದಾಗ, ಸತ್ಯ ಹೇಳಿದ ಮಾತು ಇದು ಎಂಬ ನೆನಪಾಯಿತು. ದೇವರಿಗೆ ಭಕ್ತಿ ಮುಖ್ಯ. ಚಿನ್ನದ ತಗಡು ಹೊದಿಸುವ ಶಕ್ತಿ ಇಲ್ಲದವರು ಹರಕೆ ಮಾಡಿಕೊಳ್ಳಲೇ ಬೇಡವೇ ಎನಿಸಿತು. ಅಲ್ಲದೆ ಇಂತಹ ಹರಕೆಗೂ ತಾನು ಹುಟ್ಟಿದ್ದಕ್ಕೂ ಏನು ಸಂಬಂಧ? – ಎಂಬ ಅನುಮಾನವೂ ಹುಟ್ಟಿತು.

ಗುಡಿಯ ಹೆಬ್ಬಾಗಿಲನ್ನು ದಾಟಿದ ಮೇಲೆ, ತಾಯಿ ಮಗನನ್ನು ಕರೆದುಕೊಂಡು ಬಲಭಾಗದಿಂದ ಒಂದು ಸುತ್ತು ಹೊರಟಳು. ಗುಡಿಯ ಹಿಂಭಾಗದ,

ಎಂದರೆ ಗರ್ಭಗುಡಿಯ ಬೆನ್ನುಗೋಡೆ ವಾಲಿತ್ತು. ಅದಕ್ಕೆ ದೊಡ್ಡ ದೊಡ್ಡ ಕಲ್ಲು-ಚಪ್ಪಡಿಗಳನ್ನು ಒಡೆಕೊಟ್ಟಿದ್ದಾರೆ. ಒಡೆಕಲ್ಲು ಎಷ್ಟು ದಿನ ಬಂದೀತು? ಇಡೀ ಕಲ್ಲು-ಗೋಡೆಯನ್ನು ಮತ್ತೆ ಕಟ್ಟಿಸಬೇಕು. ಈ ಕಾಲದಲ್ಲಿ ಅಂಥಾ ಕೆಲಸಗಾರರು ಯಾರಿದ್ದಾರು? ಬೆಂಗಳೂರಿನಿಂದ ಸರ್ಕಾರಿ ಇಂಜಿನಿಯರನ್ನೇ ಕರೆಸಬೇಕು. ಇವನು ಮನೆತನಸ್ಥ ಹುಡುಗೀನ ಮಾಡ್ಕಂಡ್ ಹ್ವಟ್ಟೇಲಿ ಗಂಡುಮಗು ಆದ್ರೆ ಸಾಕು – ಎಂದು ಅವಳು ತನ್ನ ನಿಶ್ಚಯವನ್ನು ಮತ್ತೆ ಗಟ್ಟಿಮಾಡಿಕೊಂಡು ಮುಂದೆ ನಡೆದಳು.

ಪೂಜೆಗೆ ವೆಂಕಟೇಶ ಬಂದಿರುತ್ತಾನೆಂದು ಶ್ರೀನಿವಾಸ ನಿರೀಕ್ಷಿಸಿದ್ದ. ಆದರೆ ಒಳಗೆ ಹೋದಾಗ ಕಾಣಿಸಿತು: ವೆಂಕಟೇಶನ ತಂದೆ ವೆಂಕಟರಮಣಯ್ಯನವರು ಮಂತ್ರ ಹೇಳಿಕೊಂಡು ವಿಗ್ರಹದ ಪಾದಕ್ಕೆ ಒಂದಾದಮೇಲೆ ಒಂದರಂತೆ ಹೂವು ಹಾಕುತ್ತಿದ್ದರು. ಇವರು ಒಳಗೆ ಬಂದದ್ದನ್ನು ಅವರು ಗಮನಿಸಲಿಲ್ಲ. ಗರ್ಭಗುಡಿಯ ಹೊರಬಾಗಿಲಿನತನಕ ಹೋಗಿ ಇಬ್ಬರೂ ನಿಂತರು. ಅದೇನು ಒಂದು ಸಾವಿರ ಹೆಸರು ಹೇಳಿದರೋ ಏನೋ, ಶ್ರೀನಿವಾಸನಿಗೆ ತಿಳಿಯಲಿಲ್ಲ. ಒಟ್ಟಿನಲ್ಲಿ ಪೂಜೆ ಕಾಲು ಗಂಟೆ ನಡೆಯಿತು. ತಾವು ತಂದಿದ್ದ ಬಾಳೆಹಣ್ಣಿನ ತೊಟ್ಟು ಮುರಿದು ಅವರು ಮಂಗಳಾರತಿಗೆ ಹಚ್ಚಬೇಕು, ಅಷ್ಟರಲ್ಲಿ ರಂಗಮ್ಮ, 'ನಮ್ಮ ಹಣ್ಣು-ಕಾಯೀನೂ ಮಾಡಿ' ಎಂದಳು. ಅವರು ಹಿಂತಿರುಗಿ ನೋಡಿದರು. ಶ್ರೀನಿವಾಸನಿಗೆ ಸ್ಪಷ್ಟವಾಗಿ ಕಾಣಿಸಿತು. ಈಗ ಎರಡು ತಿಂಗಳಿನ ಹಿಂದೆ ತಾನು ನೋಡಿದ್ದುದಕ್ಕೂ ಈಗ್ಗೂ ಅವರು ಇಳಿದುಹೋಗಿದ್ದಾರೆ. ಒಂದು ಕಸೆಪಂಚೆ ಉಟ್ಟು ಎದೆ ಕಾಣುವಂತೆ ಚೌಕ ಹೊದೆದಿದ್ದ ಅವರ ಮೈಯ ಮೂಳೆಗಳು ಕಾಣುತ್ತಿವೆ. ರಂಗಮ್ಮ ಹೊಸಲಿನ ಮೇಲೆ ಇಟ್ಟಿದ್ದ ಹಣ್ಣು ಕಾಯಿ ಹೂವು ಗಂಧದ ಕಡ್ಡಿಗಳನ್ನು ತೆಗೆದುಕೊಂಡರು. ಬಾಳೆಹಣ್ಣಿನ ತೊಟ್ಟು ಮುರಿದು ಕಾಯಿ ಒಡೆದರು. ಹೂವನ್ನು ದೇವರ ಪಾದಕ್ಕೆ ಒಪ್ಪಿಸಿದರು. ತಮ್ಮ ಮನೆತನದ ಗುರುಗಳಾದ ಇವರು ಹೀಗೆ ಸೊರಗಿಹೋಗುತ್ತಿರುವುದು ಶ್ರೀನಿವಾಸನ ಮನಸ್ಸನ್ನು ಕೊರೆಯಲು ಶುರುವಾಯಿತು. ಇವರ ರೂಢಿ ಎಷ್ಟು ಗಟ್ಟಿಯಾಗಿದೆ ಎನಿಸಿತು. ಆದರೆ ಇವರ ಹೊಟ್ಟೆಯಲ್ಲೇ ಹುಟ್ಟಿದ ಸತ್ಯಳ ವಿಚಾರಶಕ್ತಿ ಎಷ್ಟು ಹೆಚ್ಚಿನದು ಎಂಬ ಆಲೋಚನೆ ಬಂತು. ಅಷ್ಟರಲ್ಲಿ ಅವರು ದೊಡ್ಡ ಬತ್ತಿಯ ಮಂಗಳಾರತಿ ಹಲಗೆಯನ್ನು ಹೊತ್ತಿಸಿ ಎಡಗೈಲಿ ಗಂಟೆ ಬಾರಿಸಲು ಪ್ರಾರಂಭಿಸಿದರು. ಬಲಗೈಯ ಮಂಗಳಾರತಿ ನಿಧಾನವಾಗಿ ವಿಗ್ರಹದ ಮೇಲ್ಭಾಗಕ್ಕೆ ಏರಿತು. ದೇವರ ಎತ್ತರವಾದ ನಿಲುವು. ಎದ್ದುಕಾಣುವ ಜರಿಯ ಪಂಚೆ. ಹೊಳೆಯುವ ಭುಜಕೀರ್ತಿ. ಎದೆಯ ಮೇಲೆ ಇಳಿಬಿದ್ದಿರುವ ಮೂರು ಹಾರಗಳು. ಕಪ್ಪು ಮುಖದ ಕಣ್ಣು

ಗಳನ್ನು ಫಳಫಳನೆ ಮುಚ್ಚಿರುವ ಬೆಳ್ಳಿಯ ಕಟ್ಟುಗಳು. ಹಣೆಯ ಮೇಲೆ ಹೊಳೆಯುವ ನಾಮ. ಕೋರೈಸುವಂತಹ ಕೆಂಪು ಬಿಳುಪು ನೀಲಿ ಹಸುರು ಹಳದಿ ಮಣಿಗಳ ಕಿರೀಟ. ಮುಖದ ಹತ್ತಿರ ಬಂದ ಮಂಗಳಾರತಿ ಹಾಗೆಯೇ ನಿಂತಿತು. ಗಂಟೆ ಮಾತ್ರ ಒಂದೇ ಲಯವಲ್ಲಿ ನಿಂತಂತೆ ನುಡಿಯುತ್ತಿತ್ತು. ಶ್ರೀನಿವಾಸ ದೇವರ ಮುಖ, ಕಣ್ಣುಕಟ್ಟುಗಳನ್ನೇ ನೋಡುತ್ತಿದ್ದ. ನಿಂತ ಮಂಗಳಾರತಿ ನಿಂತಲ್ಲಿಯೇ ಇತ್ತು. ಒಂದು ನಿಮಿಷ, ಎರಡು ನಿಮಿಷ. ಅವನಿಗೆ ಸಣ್ಣಗೆ ಸ್ವೈ ಬೆವೆತಂತಾಯಿತು. ಸ್ವಲ್ಪ ತಲೆ ಸುತ್ತಿದಂತೆ ಆಗಿ, ತಾನು ಕೆಳಗೆ ಬೀಳುವ ಭಯವಾಯಿತು. ಹಾಗೆಯೇ ಬಾಗಿಲುವಾಡವನ್ನು ಒರಗಿಕೊಂಡ. ಮತ್ತೆ ತಲೆ ಎತ್ತಿ ವಿಗ್ರಹವನ್ನು ನೋಡಲಾಗಲಿಲ್ಲ. ದೃಷ್ಟಿಯನ್ನು ಕೆಳಗು ಮಾಡಿದ. ತಲೆ ಸುತ್ತುವುದು ಕಡಿಮೆಯಾಯಿತಾದರೂ, ತಾನು ಕೆಳಗೆ ಬಿದ್ದೇನೆಂಬ ಭಯದಿಂದ ಮತ್ತೆ ಕತ್ತೆತ್ತಿ ನೋಡಲಿಲ್ಲ.

ಮಂಗಳಾರತಿ ಇನ್ನೂ ಸ್ವಲ್ಪ ಹೊತ್ತು ನಡೆಯಿತು. ಆಮೇಲೆ ಅದೇ ಹಲಗೆಯನ್ನು ಹಿಡಿದು ಅವರು ಗಡಿಬಿಡಿಯಲ್ಲೆಂಬಂತೆ ಹೊರ ಅಂಕಣಕ್ಕೆ ಬಂದು, ಉಳಿದ ದೇವ ದೇವಿಯರಿಗೆ ನಡುಸಾಲೆಯ ಕಂಬಗಳಿಗೆ ಮಾಡಿ ಬಂದು ಮಂಗಳಾರತಿಯನ್ನು ಅವನ ತಾಯಿಗೆ ಕೊಟ್ಟರು. ಭಕ್ತಿಯಿಂದ ಆಕೆ ನಾಲ್ಕಾಣೆಯನ್ನು ಹಾಕಿ ಕೈ ಆಡಿಸಿ ಕಣ್ಣಿಗೆ ಒತ್ತಿಕೊಂಡಳು. ಅವರು ಅವನ ಮುಂದೆ ಮಾತ್ರ ಹಿಡಿಯಲಿಲ್ಲ. ಒಳಗೆ ಹೊರಟುಹೋದರು. ಅನಂತರ ಬೆಳ್ಳಿಯ ತೀರ್ಥಪಾತ್ರೆಯನ್ನು ಹಿಡಿದು ತಂದು ಅವಳಿಗೆ ತೀರ್ಥ ಕೊಟ್ಟರು. ಅವನ ಇರುವನ್ನೇ ಅಲಕ್ಷ್ಯಸಿದವರಂತೆ ಒಳಗೆ ಹೊರಟುಹೋದರು.

ಅವನ ತಾಯಿಯೇ, 'ಅಯ್ನೋರೇ, ಅದು ಹುಡುಗುಬುದ್ದಿ. ತಪ್ಪು ಯೋಚನೆ ಮಾಡ್ತು. ನೀವು ಕ್ವಾಪ ಮಾಡ್ಕಬ್ಯಾಡಿ. ಅದ್ಕೂ ತೀರ್ತ ಕೊಡಿ' ಎಂದಳು. ಅವರು ಮಾತೂ ಆಡಲಿಲ್ಲ, ತೀರ್ಥವನ್ನೂ ಕೊಡಲಿಲ್ಲ.

ಒಂದು ನಿಮಿಷ ಕಾದು ಅವಳೇ, 'ಅದರ ಮುಕ ನೋಡಬ್ಯಾಡಿ. ನಾವೆಲ್ಲ ಇರೂವಾಗ ಈ ಮದುವೆ ಆಗಾಕ್ ಬುಡಾಕಿಲ್ಲ. ನೀವು ತೀರ್ತ ಕೂಡಿ' ಎಂದಳು.

ಅವರು ಒಳಗಿನಿಂದ ತೀರ್ಥಪಾತ್ರೆ ಹಿಡಿದು ಹತ್ತಿರ ಬಂದರು. ಆದರೆ ಶ್ರೀನಿವಾಸ ಕೈ ನೀಡಲಿಲ್ಲ.

'ದೇವರ ಮುಂದಲ್ಲ ನಿನ್ನ ಜಂಬ, ಕೈ ನೀಡೋ' – ಎಂದು ತಾಯಿ ಸಿಟ್ಟಿನಿಂದ ಕಿರುಚಿ, ಅವನ ಕೈಗೆ ಒಂದು ಪಾವಲಿಯ ನಾಣ್ಯವನ್ನು ತುರುಕಿದರು. ಅವನು ಅದನ್ನು ತಟ್ಟೆಗೆ ಹಾಕಿ ಕೈ ನೀಡಿದ. ದೋಣಿಗೂಡಿಸಿದ ಅಂಗೈಗೆ ಬಿದ್ದ ಹಾಲು ನೀರಿನ ತೀರ್ಥವನ್ನು ಕುಡಿದ.

# ಐದು

## ೧

ಸಬ್ ರಿಜಿಸ್ಟ್ರಾರರ ಆಫೀಸಿನಿಂದ ಬಂದು ಎರಡು ದಿನವಾದರೂ ಶ್ರೀನಿವಾಸ ರೂಮಿನ ಕಡೆ ಬರದಿದ್ದುದರಿಂದ ಸತ್ಯ ಆತಂಕಗೊಂಡಳು. ಇವನು ಹೋಗಿ ಕೋಪದಲ್ಲಿ ಕೆಟ್ಟ ಮಾತಾಡಿದ್ದಾನೆ. ಅವರೂ ರೇಗಿ ಏನಾದರೂ ಮಾಡಿರ ಬಹುದೇ, ಎಂಬ ಭಯವಾಯಿತು. ಆದರೆ ಆ 'ಏನಾದರೂ' ಎಂಬುದು ಸ್ಪಷ್ಟ ವಾಗಿ ಕಲ್ಪನೆಗೆ ಬರಲಿಲ್ಲ. ಅವನು ಕೋಪದಲ್ಲಿ ಹೋಗಬಾರದಿತ್ತು. ರೇಗಿದವನು ಸೋಲುತ್ತಾನೆ, ಕೊನೆಗೆ ಸೋಲನ್ನೊಪ್ಪುತ್ತಾನೆ ಎಂಬ ಒಳನುಡಿ ಕೇಳಿಸಿತು. ಅವರು ಮಂತ್ರಿಗಳು. ಸರ್ಕಾರದ ಯಾವ ಆಫೀಸಿನಲ್ಲಿ ಏನು ಬೇಕಾದರೂ ಕೆಲಸ ಮಾಡಿಸಬಹುದು. ಆದರೆ ಇದು ನವಾಬಸರ್ಕಾರವಲ್ಲ. ಮುಘಲ ಸರ್ಕಾರವಾಗಿ ದ್ದರೆ ನನ್ನನ್ನು ಜೀವಸಹಿತ ಸಮಾಧಿಯಲ್ಲಿ ನಿಲ್ಲಿಸಿ, ಮೇಲೆ ಇಟ್ಟಿಗೆ ಗಾರೆ ಮುಚ್ಚಿ-ಸುತ್ತಿದ್ದರು. ಆದರೆ ಆ ಮಟ್ಟಿಗೆ ದೇಶ ಮುಂದುವರಿದಿದೆ ಎಂದುಕೊಂಡಳು. ಮೂರನೆಯ ದಿನ ಏನಾದರೂ ಮಾಡಿ ಅವನನ್ನು ಕಾಣಬೇಕು, ಅವನೊಡನೆ ಮಾತನಾಡಬೇಕು ಎಂದು ತವಕಿಸಿದಳು. ಶ್ರೀನಿವಾಸನನ್ನು ಕಂಡು ವರ್ತಮಾನ ತರುವಂತಹ ಸ್ನೇಹಿತರು ಬೆಂಗಳೂರಿಗೆ ಹೊಸಬಳಾದ ಅವಳಿಗೆ ಯಾರೂ ಇರಲಿಲ್ಲ. ಸಬ್‌ರಿಜಿಸ್ಟ್ರಾರರ ಆಫೀಸಿಗೆ ಬಂದಿದ್ದ ಮೂವರ ವಿಳಾಸ ಅಥವಾ ಟೆಲಿಫೋನ್ ನಂಬರನ್ನು ಕೂಡ ತಾನು ಕೇಳಿ ತೆಗೆದುಕೊಂಡಿರಲಿಲ್ಲ.

ಹೇಗಾದರೂ ಆಗಲಿ ಎಂದು ಹತ್ತಿರದ ಒಂದು ಹೋಟೆಲಿಗೆ ಹೋಗಿ ನಾಲ್ಕಾಣೆ ಕೊಟ್ಟು ಮಂತ್ರಿಗಳ ಮನೆಗೆ ಫೋನ್ ಮಾಡಿದಳು. ಯಾರೂ ಮನೆಯಲ್ಲಿಲ್ಲ, ಊರಿಗೆ ಹೋಗಿದ್ದಾರೆಂದು ಆಪ್ತಸಹಾಯಕ ಉತ್ತರಿಸಿದ. ಹಾಗಾದರೆ ಊರಿನ ನಾಲ್ಕು ಜನರಿಂದ ಅವನಿಗೆ ಹೇಳಿಸಬಹುದು ಎಂಬ ಅನುಮಾನ ಹುಟ್ಟಿತು. ಬೇಕಾದಷ್ಟು ಜನರ ಕೈಲಿ. ಬೇಕಾದವರ ಕೈಲಿ ಹೇಳಿಸಲಿ. ಅವರಿಗೆ ತಿಳಿದಷ್ಟು ಮಾಡಿಸುವ ಸ್ವಾತಂತ್ರ್ಯ ಅವರಿಗಿದೆ. ನನಗೆ ತಿಳಿದ ಹಾಗೆ ಮಾಡುವ ಗಟ್ಟಿತನ, ತಾಳ್ಮೆ, ಇರುವತನಕ ಯಾರೂ ಏನೂ ಮಾಡುವ ಹಾಗಿಲ್ಲ – ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡಳು.

ಅದೇ ದಿನ ಮಧ್ಯಾಹ್ನ ಮೂರು ಗಂಟೆಗೆ ಅವಳ ಪಾಠ ಮುಗಿದು ತರಗತಿ ಯಿಂದ ಹೊರಗೆ ಬಂದ ತಕ್ಷಣ ಜವಾನ ಹತ್ತಿರ ಬಂದು, 'ಪ್ರಿನ್ಸಿಪಾಲರು ಕರೀ

ತಾರೆ' ಎಂದ. ಸ್ಟಾಫ್‌ರೂಮಿಗೆ ಹೋಗಿ ಸೀಮೆಸುಣ್ಣದ ಕೈ ತೊಳೆದುಕೊಂಡು ಅವಳು ಅವರ ಆಫೀಸಿಗೆ ಹೋದಳು. ಪ್ರಿನ್ಸಿಪಾಲ್ ರಾಜಾರಾಯರು ಐವತ್ತೇಳು ವರ್ಷದ ಪಿತೃಗುಣದ ಮನುಷ್ಯರು. ಸರ್ಕಾರೀ ಕಾಲೇಜಿನಲ್ಲಿ ಉಪನ್ಯಾಸಕ ರಾಗಿದ್ದು ಎರಡು ವರ್ಷದ ಹಿಂದೆ ನಿವೃತ್ತರಾದ ಮೇಲೆ ಈ ಕಾಲೇಜನ್ನು ಸೇರಿ ದ್ದರು. ಪಾಠ ಪ್ರವಚನಗಳು ಚೆನ್ನಾಗಿ ನಡೆದು ತಮ್ಮ ಕಾಲೇಜಿನ ಹೆಸರು ಮುಂದೆ ಬರಬೇಕೆಂದು ಶ್ರಮಿಸುತ್ತಿದ್ದರು. 'ಗುಡ್ ಆಫ್ಟರ್‌ನೂನ್, ಬನ್ನಿ ಬನ್ನಿ. ಟೇಕ್ ಯುವರ್ ಸೀಟ್' – ಎಂದು ಸೌಜನ್ಯದಿಂದ ಅವಳನ್ನು ಬರಮಾಡಿಕೊಂಡರು. ಅವಳ ತರಗತಿ, ಪಾಠ, ವಿದ್ಯಾರ್ಥಿ ವಿದ್ಯಾರ್ಥಿನಿಯರ ಬಗೆಗೆ ವಿಚಾರಿಸಿದ ನಂತರ ಎಂದರು: 'ನಿಮ್ಮ ಪರ್ಸನಲ್ ವಿಷಯ ಮಾತಾಡ್ತಿದೀನಿ ಅಂತ ಬೇಜಾರು ಮಾಡಿಕೊಬೇಡಿ. ನಿಮಗೆ ಇಷ್ಟವಿಲ್ಲದಿದ್ದರೆ ಮೊದಲೇ ಹೇಳಿಬಿಡಿ.'

'ಯಾವ ವಿಷಯ ಅಂತ ಗೊತ್ತಾಗದೆ ಹ್ಯಾಗೆ ಹೇಳಲಿ?'

'ನಿಮ್ಮ ಮದುವೇದು.'

ಸತ್ಯಳಿಗೆ ಆಶ್ಚರ್ಯವಾಯಿತು. ಪ್ರಿನ್ಸಿಪಾಲರಿಗೆ ಇದು ಹ್ಯಾಗೆ ತಿಳಿಯಿತು? ಮಂತ್ರಿಗಳೇ ತಿಳಿಸಿರಬಹುದು. ಅವರು ಏನು ಬೇಕಾದರೂ ಮಾಡಿಸಬಲ್ಲರು. ಹೆಚ್ಚೆಂದರೆ ತನ್ನ ಕೆಲಸ ತೆಗೆಸಬಹುದು. ಅದಕ್ಕಿಂತ ಇನ್ನೇನು ಮಾಡಿಯಾರು? – ಎಂದು ಮನಸ್ಸಿನಲ್ಲೇ ಗಟ್ಟಿ ನಿಶ್ಚಯವನ್ನೂ ಮಾಡಿಕೊಂಡಳು. 'ಸಾರ್, ನಾನೇನು ಕದ್ದು ಮುಚ್ಚಿ ಮಾಡ್ತಿಲ್ಲ. ನನ್ನನ್ನ ಕಾಲೇಜಿನಲ್ಲಿ ಇಟ್ಕೊಳುಕ್ಕೆ ನಿಮಗಾಗಲಿ ಆಡಳಿತವರ್ಗಕ್ಕಾಗಲಿ ಇಷ್ಟವಿಲ್ಲದೆ ಇದ್ರೆ ಹೇಳಿಬಿಡಿ. ನಾನೇ ರಾಜಿನಾಮೆ ಕೊಡ್ತೀನಿ. ನೀವಾಗಿ ತೆಗೆದುಹಾಕುವ ಕಷ್ಟ ತಗೋಬೇಕಾಗಿಲ್ಲ.'

'ಛೇ ಛೇ, ನೀವು ಸಿಟ್ಯಾಕೆ ಆಗ್ತೀರಿ? ವೈಯಕ್ತಿಕ ಮಾತು ನಿಮಗೆ ಇಷ್ಟ ವಿಲ್ಲದಿದ್ದರೆ ಹೇಳಿಬಿಡಿ ಅಂತ ನಾನು ಮೊದಲೇ ಹೇಳಿದೆ. ನಾನು ಮಾತಾಡುವ ಮುಂಚೆಯೇ ನೀವು ಯಾಕೆ ಇಷ್ಟೊಂದು ಉದ್ರಿಕ್ತರಾಗ್ತೀರಿ?'

'ಸಾರಿ, ನೀವು ಏನು ಕೇಳಬೇಕು ಅಂತೀರೋ ದಯವಿಟ್ಟು ಕೇಳಿ.'

'ಶೂದ್ರ ಹುಡುಗನನ್ನ ಮದುವೆಯಾಗೂದು ನಿಜವೇ?'

'ನಿಜ. ನಾನು ಆ ವ್ಯತ್ಯಾಸ ನಂಬುಲ್ಲ.'

'ನೀವು ನಂಬುಲ್ಲ. ನಾನೂ ನಂಬ್ತಿರಲಿಲ್ಲ. ಈಗ ನಂಬ್ತೀನಿ. ಯಾಕೆ ಗೊತ್ತೆ?'

'ನನಗೆ ಅರ್ಥವಾಗುತ್ತೆ. ನೀವು ಇಷ್ಟು ಬುದ್ಧಿವಂತರೂ ವಿದ್ವಾಂಸರೂ ಆದ ಮೇಷ್ಟ್ರು. ನಿಮ್ಮನ್ನ ಲೆಕ್ಚರರ್ ಆಗಿಯೇ ರಿಟೈರ್ಡ್ ಆಗೂತನಕ ಕೊಳೆಸಿದರು. ನಿಮ್ಮ ಶಿಷ್ಯರಲ್ಲಿ ಕೆಲವರನ್ನ ನಿಮಗಿಂತ ಮೇಲೆ ಏರಿಸಿ ಕೂರಿಸಿದರು, ಅವರ ಜಾತಿಯೋರು ಅಂತ. ನಿಮ್ಮ ಮನಸ್ಸಿನಲ್ಲಿ ಕಹಿ ಹುಟ್ಟೊದು ಸಹಜವೇ. ನಾನು

ಇಂಟರ್‌ಮೀಡಿಯೆಟ್ ಓದ್‌ತಾ ಇದ್ದಾಗ ನೀವು ಬಿ.ಎ.ಗೆ ಪಾಠ ಮಾಡ್ತಿದ್ರಿ. ನಾನು ಆಶೆಯಿಂದ ನಿಮ್ಮ ಕ್ಲಾಸಿಗೆ ಬಂದು ಕೂತುಕೊತಿದ್ದೆ. ನಾನೂ ನಿಮ್ಮ ವಿದ್ಯಾರ್ಥಿನಿಯೇ.'

'ಹೌದಾ, ನಂಗೆ ಹೇಳಲೇ ಇಲ್ವಲಮ್ಮ?' – ತಮ್ಮ ಬಗೆಗೆ ಮೆಚ್ಚುಗೆ ನುಡಿದದ್ದರಿಂದ ಅವರಿಗೆ ಅವಳಮೇಲೆ ಅಭಿಮಾನ ಹುಟ್ಟಿತು: "ರಿಟೈರಾಗೂದು ಇನ್ನೂ ಎರಡು ವರ್ಷವಿರುವಾಗ ನನ್ನನ್ನ ಆಕ್ಟಿಂಗ್ ಅಸಿಸ್ಟಂಟ್ ಪ್ರೊಫೆಸರ್ ಮಾಡಿದ್ದರು. ನನ್ನ ಸ್ಟೂಡೆಂಟೇ ಒಬ್ಬ ಶುದ್ಧ ದಡ್ಡ, ಅವನ ಹೆಸರು ನಾನು ಹೇಳುಲ್ಲ, ಹೇಳದಿದ್ದರೂ ನಿಮಗೆ ಗೊತ್ತಾಗುತ್ತೆ, 'ಶೂದ್ರರಲ್ಲಿ ನಾನು ಒಂದು ವಿಶಿಷ್ಟ ಒಳಪಂಗಡಕ್ಕೆ ಸೇರಿದೋನು. ನಮ್ಮ ಪಂಗಡದಲ್ಲಿ ಯಾರೂ ಗೆಜಿಟೆಡ್ ಪೋಸ್ಟಿನಲ್ಲಿಲ್ಲ. ಆದ್ದರಿಂದ ಇದನ್ನ ನನಗೆ ಕೊಡಬೇಕು' ಅಂತ ಮೇಲೆ ಹೋಗಿ ಹೇಳ್ಕಂಡ. ನನ್ನನ್ನ ರಿವರ್ಟ್ ಮಾಡಿ ಆ ಜಾಗಾನ ಅವನಿಗೆ ಕೊಟ್ಟರು. ಅವನು ಹೆಡ್ ಆಫ್ ದಿ ಡಿಪಾರ್ಟ್‌ಮೆಂಟ್ ಆಗಿ ನಾನು ಅವನ ಕೈಕೆಳಗೆ ಕೆಲಸ ಮಾಡಬೇಕಾಯ್ತು. ಹೆಂಡತಿ ಇಲ್ಲದಿದ್ರೆ, ಇನ್ನೂ ಸೆಟಲ್ ಆಗದ ಮಕ್ಕಳಿಲ್ಲದಿದ್ರೆ ಅವತ್ತೇ ರಾಜೀನಾಮೆ ಒಗೆದು ಮನೆಗೆ ಬರ್ತಿದ್ದೆ. ಏನು ಮಾಡ್ತೀರ, ಸಂಸಾರಸ್ಥನ ಜೀವನ ಕಷ್ಟ."

ಅವರ ಅನುಭವವನ್ನು ಕೇಳಿ ಅವಳಿಗೆ ವ್ಯಸನವಾಯಿತು. ಆದರೆ ಇದು ಅಪರೂಪದ ಘಟನೆಯಲ್ಲ. ಕಳೆದ ಹಲವು ವರ್ಷಗಳಿಂದ ಸರ್ಕಾರದ, ಸಾರ್ವಜನಿಕ ಸೇವೆಯ, ನೀತಿಯಾಗಿದೆ. ಈ ಬಗೆಗೆ ಅವಳು ಹಲವು ಸಲ ಯೋಚಿಸಿದ್ದಾಳೆ. ಅವಳ ಅಭಿಪ್ರಾಯ ಬೇರೆಯೇ ಆಗಿದೆ. ಅದನ್ನು ಬ್ರಾಹ್ಮಣರ ಎದುರು ಹೇಳಿದರೆ ರುಚಿಸುವುದಿಲ್ಲ. ಅಲ್ಲದೆ ವೃತ್ತಿಯಲ್ಲಿ ನೊಂದಿರುವ ಈ ಪ್ರಿನ್ಸಿಪಾಲರ ಎದುರು ಹೇಳುವುದರಿಂದ ಅವರ ಕಹಿಭಾವನೆ ಹೆಚ್ಚಾಗುತ್ತದೆ ಎಂಬ ವ್ಯಾವಹಾರಿಕ ವಿವೇಕ ಅವಳಲ್ಲಿ ಹುಟ್ಟಿತು. ಅವರೇ, 'ಏನು ಹೇಳ್ತೀರಮ್ಮ ಇದುಕ್ಕೆ? ಅವರು ಇಡೀ ಸರ್ಕಾರದಲ್ಲಿ, ದೇಶಕ್ಕೆ ದೇಶದಲ್ಲಿ ಹೀಗೆ ಮಾಡಭೌದು. ನಾವು, ನಮ್ಮ ಕೈಕೆಳಗಿರೋ ಒಂದೆರಡು ಕಾಲೇಜು, ಸ್ಕೂಲಿನಲ್ಲಿ ನಮ್ಮೋರಿಗೆ ಕೆಲಸ ಕೊಟ್ರೆ ಇವರು ಜಾತೀಯತೆ ಮಾಡ್ತಾರೆ ಅಂತ ಬೊಬ್ಬೆಹೊಡೀತಾರೆ. ಉದಾಹರಣೆಗೆ ನಿಮ್ಮ ಅಪ್ಪಾಂಟ್‌ಮೆಂಟ್ ನೋಡಿ. ಬ್ರಾಹ್ಮಣರನ್ನೇ ತಗಂಡ್ರು ಅಂತ ಕೆಲವರು ಟೀಕೆ ಮಾಡಿದರು. ಆದರೆ ಫಸ್ಟ್‌ಕ್ಲಾಸ್ ಫಸ್ಟಿನಲ್ಲಿ ಪಾಸು ಮಾಡಿದ ನೀವು ಗ್ಯಾಂಗರೆದಿದ್‌ರೂ ಸರ್ಕಾರ್‌ದೋರು ಅವರ ಕಾಲೇಜಿನಲ್ಲಿ ತಗೋತಿರಲಿಲ್ಲ. ನಾವು ತಗಳ್ದೆ ಇದ್‌ರೆ ಇನ್ಯಾರು ಕೊಡಬೇಕಾಗಿತ್ತು?'

'ಸಾರ್, ಒಂದು ಮಾತು. ನನ್ನ ಇಂಟರ್‌ವ್ಯೂ ಮಾಡಿದಾಗ ನೀವೂ ಇದ್ರಿ.

ನನ್ನ ಸರ್ಟಿಫಿಕೇಟ್ ಎಲ್ಲ ನೋಡಿದಿರಿ. ಈ ಕೆಲಸಕ್ಕೆ ಅರ್ಹಳು ಅಂತ ತಗೊಂಡಿರಾ? ಅಥವಾ ಬ್ರಾಹ್ಮಣರೋಳು ಅಂತ ಆರಿಸಿದಿರಾ?'

'ನೋಡಿ, ಯು ಆರ್ ಎನ್ ಇಂಟಲಿಜೆಂಟ್ ಲೇಡಿ. ನನ್ನ ಹತ್ರ ಸೂಕ್ಷ್ಮವಾಗಿ ಮಾತಾಡಿ ಉತ್ತರ ತೆಗೀಬ್ಯಾಡಿ. ನಾನೇ ಹೇಳಿಬಿಡ್ತೀನಿ. ನನಗೆಂಥ ಭಯ? ನಾನೇನು ಅವರ ಸರ್ಕಾರದ ನೌಕರೀಲಿಲ್ಲ. ಕೆಲಸಕ್ಕೆ ಬೇಕು ಅಂದ್ರೆ ಈ ಕಾಲದಲ್ಲಿ ಮೆರಿಟ್ ಇರೋರು ಎಷ್ಟು ಜನ ಸಿಕ್ಕಲ್ಲ? ಫಸ್ಟ್‌ಕ್ಲಾಸ್ ಅಲ್ದೆ ಇದ್ರೆ ಸೆಕೆಂಡ್ ಕ್ಲಾಸಿನೋರಾದ್ರೂ ಸಿಕ್ತಿದ್ರು.'

ತಾನು ಈಗ ಸ್ಪಷ್ಟವಾಗಿ ಮಾತನಾಡಬೇಕೆನಿಸಿತು, ಹೇಳಿದಳು: 'ನಿಮಗೆ ಈಗ ಟೈಮ್ ಇದೆಯೋ ಇಲ್ಲವೋ ಕಾಣೆ. ಇದ್ದರೆ ಒಂದು ಹತ್ತು ನಿಮಿಷ ಮಾತಾಡ್ತೀನಿ, ನೀವು ಅನುಮತಿ ಕೊಟ್ಟರೆ ಮಾತ್ರ.'

'ಹೇಳಿ, ಹೇಳಿ. ನಾನು ಯಾವಾಗಲೂ ಚರ್ಚೆಗೆ ಸಿದ್ಧ.'

'ಅವರು ಹಾಗೆ ಮಾಡ್ತಾರೆ ಅಂತ ನಾವು ಹೀಗೆ ಮಾಡೂದು ಸರಿಯಲ್ಲ. ಅವರು ಹಾಗೆ ಮಾಡುಕ್ಕೂ ಸಾಕಷ್ಟು ಕಾರಣವಿದೆ. ಸಹಸ್ರಾರು ವರ್ಷದಿಂದ ಅವರಿಗೆ ವಿದ್ಯೆ, ಅಧಿಕಾರದ ಅವಕಾಶ ಇರಲಿಲ್ಲ. ಈಗ ಅವಕಾಶ ಸಿಕ್ಕಿರುವಾಗ ಸ್ವಲ್ಪ ಘಾತಕತನ ತೋರಿಸ್ತಾರೆ. ಅದು ಸ್ವಾಭಾವಿಕವೇ.'

'ಸ್ವಾಭಾವಿಕವೇ ಅಂದ್ರೆ ನ್ಯಾಯವಾಗುತ್ತೆಯೆ? ಜಸ್ಟೀಸ್ ಮುಖ್ಯ.'

'ಇಂಡಿಯಾ ದೇಶದ ಇತಿಹಾಸ ಆರಂಭವಾದಾಗಿನಿಂದ ಇಲ್ಲೀತನಕ ನೀವು ಮಾಡಿದ್ದು ನ್ಯಾಯವೇ ಅಂತ ಅವರು ಕೇಳ್ತಾರೆ. ನ್ಯಾಯದ ಅರ್ಥಮಾಡುವಾಗ ಇಡೀ ಇತಿಹಾಸಾನೇ ನೋಡಬೇಕು.'

'ನಿಮ್ಮ ಸಬ್ಜೆಕ್ಟು ಹಿಸ್ಟರಿ. ಸರಿ, ಸರಿ' – ಎಂದ ಪ್ರಿನ್ಸಿಪಾಲರ ಧ್ವನಿ ಸ್ವಲ್ಪ ವ್ಯಂಗ್ಯವಾಗಿತ್ತು. 'ಮದರಾಸ್‌ನಲ್ಲಿ ಜಸ್ಟೀಸ್ ಪಾರ್ಟಿ ಅಂತ ಮಾಡ್ಕಂಡಿದಾರಲ, ಐ ಮೀನ್ ಮಾಡ್ಕಂಡಿದ್ರಲ, ಅವರು ಹೇಳೂದೂ ಹೀಗೆಯೆ. ದಿವಾನ್ ಆರ್ಕಾಟ್ ಹೀಗಂದಿದ್ದರೆ ಆಶ್ಚರ್ಯವಾಗ್ತಿರಲಿಲ್ಲ. ನೀವು, ಬ್ರಾಹ್ಮಣರಾಗಿದ್ದುಕೊಂಡು.... ಹೋಗಲಿ, ಪರ್ಸನಲ್ ಆಗೋದು ಬ್ಯಾಡಿ. ಯಾವನೋ ನನ್ನ ಮುತ್ತಾತ ಮಾಡಿದ ಪಾಪಕ್ಕೆ ನಾನು ಶಿಕ್ಷೆ ಅನುಭವಿಸಬೇಕೆ! ತೋಳ ಹೇಳ್ತಲ: ನೀನಲ್ಲದೆ ಇದ್ರೆ ನಿನ್ನ ತಾತ ಮಾಡ್ದಾ ಅಂತ, ಹಾಗಾಯ್ತು.'

ಈ ಮಾತು ಮತ್ತು ಆಡಿದ ಧ್ವನಿಯು ಅವಳನ್ನು ಪ್ರಚೋದಿಸಿದುವು. ಅವಳು ಹೇಳಿದಳು: 'ತಾತ ಮಾಡಿದ ಆಸ್ತೀಲಿ ನಾವು ಹಕ್ಕು ಕೇಳ್ತೀವಿ. ಮುತ್ತಾತ ಮಾಡಿದ ಪುಣ್ಯ ನಮ್ಮನ್ನ ಕಾಪಾಡಬೇಕು ಅಂತ ಪ್ರಾರ್ಥನೆ ಮಾಡ್ತೀವಿ. ಆದರೆ ಅವರು ಮಾಡಿದ ಪಾಪದ ಫಲ ಅನುಭವಿಸು ಅಂದಾಗ ನಾನು ಜವಾಬ್ದಾರನಲ್ಲ

ಅಂತೀವಿ. ಇದು ನೈತಿಕ ಪಲಾಯನವಲ್ಲವೆ?'

'ವೆರಿ ಗುಡ್ ಆರ್ಗ್ಯುಮೆಂಟ್. ಸಾಹಿತ್ಯದಲ್ಲಿ, ಕ್ರಿಶ್ಚಿಯನ್ ಕಥೆ ಇರೂ ರುದ್ರಕಥೆಗಳಲ್ಲಿ ಇದು ಚನ್ನಾಗಿರುತ್ತೆ. ಆದರೆ ಇದೇ ವಾದ ಹಿಡಿದು ಹೊರಟರೆ ಯಾರು ಯಾರನ್ನು ಬೇಕಾದರೂ ನೇಣುಗಟ್ಟಿಸಬೌದು. ಯಾವ ತಲೆಮಾರಲ್ಲೂ ಪಾಪವೇ ಮಾಡ್ದೆ ಇರೂ ಜನ ಯಾರೂ ಇಲ್ಲ.'

'ಈ ಪಾಪ ಪುಣ್ಯ ಸಿದ್ಧಾಂತನ ನಾನು ನಂಬ್ತೀನಿ ಅಂತ ನನ್ನ ಮಾತಿನ ಅರ್ಥವಲ್ಲ. ಅವರು ಮಾಡ್ತಿರೂದು ಸರಿ ಅಂತಲೂ ಅಭಿಪ್ರಾಯವಲ್ಲ. ಇಲ್ಲೀತನಕ ಕೆಲವು ವೃತ್ತಿಗಳನ್ನು ಕೆಲವು ಜಾತಿಯೋರು ಮಾತ್ರ ಮಾಡ್ತಿದ್ರು. ಈಗ ಸಮಾಜರಚನೆ ಬದಲಾಯಿಸ್ತಾ ಇದೆ. ವೃತ್ತಿಗೂ ಜಾತಿಗೂ ಸಂಬಂಧವಿಲ್ಲವಾಗ್ತಿದೆ. ನಾವು ಮಾಡ್ತಿದ್ದ ವೃತ್ತಿಗೆ ಅವರೂ ಬಂದಿದಾರೆ. ಅವರನ್ನ ಬೈಯುವ ಬದಲು ನಾವ್ಯಾಕೆ ಬೇರೆ ವೃತ್ತಿ ಹುಡುಕಿಕೊಬಾರ್ದು?'

'ಮೊದಲಿನಿಂದ ಬಂದ ವೃತ್ತಿ ಬದಲಾಯಿಸೂದು ಹುಡುಗಾಟವೆ? ನೀವ್ಯಾಕೆ ಈ ಅಧ್ಯಾಪಕವೃತ್ತಿಗೆ ಬಂದಿರಿ? ಬೇರೆ ಏನಾದರೂ ಯಾಕೆ ಮಾಡಲಿಲ್ಲ?'

ಈ ಪ್ರಶ್ನೆ ಅವಳನ್ನು ನಾಟಿತು. ತನ್ನನ್ನು ಛೇಡಿಸಲೆಂದು ಪ್ರಿನ್ಸಿಪಾಲರು ಆಡಿದ್ದರೋ, ಅಥವಾ ಕೇವಲ ಉದಾಹರಣೆಗೆಂದು ತನ್ನ ಸಂಗತಿಯನ್ನು ನಿರ್ದೇಶಿಸಿದ್ದರೋ ಎಂಬುದು ಅವಳಿಗೆ ಮುಖ್ಯವಾಗಿರಲಿಲ್ಲ. ತಾನು ಈ ವೃತ್ತಿಗೆ ಯಾಕೆ ಬಂದೆ? ಓದಿನಲ್ಲಿ ಮುಂದೆ ಇದ್ದೆ. ಇನ್ನೂ ಹೆಚ್ಚು ಓದಬೇಕೆಂಬ ಸ್ವಾಭಾವಿಕ ಕುತೂಹಲ ಆಸ್ಥೆಗಳಿವೆ. ಇಂಥವರಿಗೆ ಮಾತ್ರ ಅಧ್ಯಾಪಕರಾಗುವ ಪರಿಕರವಿರುತ್ತದೆ. ಬೇರೆ ವೃತ್ತಿಗೆ ಹೋದರೆ ತನ್ನ ಆಸ್ಥೆಯನ್ನು ಪೂರೈಸಿಕೊಳ್ಳಲು ಸಾಧ್ಯವಿಲ್ಲ. ಆದುದರಿಂದ ಇದಕ್ಕೆ ಬಂದಿದ್ದೇನೆ. ಆದರೆ ಬ್ರಾಹ್ಮಣರಲ್ಲಿ ಬಹುಮಂದಿಗೆ ಬೇರೆ ಉದ್ಯೋಗದ ಹಿನ್ನೆಲೆಯೇ ಇಲ್ಲ. ಓದು ನೌಕರಿಗಳೇ ಅವರಿಗಿರುವ ಹಿನ್ನೆಲೆ, ಆಸ್ಥೆಗಳು. ಅವರಿಗಿರುವ ಆಸ್ಥೆಗೆ ಸೊನ್ನೆ ಹಾಕುವುದು ಯಾವ ನ್ಯಾಯ? – ಎಂಬ ವಿಚಾರ ಸಹಜವಾಗಿಯೇ ಬಂತು.

ಆದರೆ ಅವಳ ಮೂಲ ವಿಚಾರವು ಬೇರೆ ರೀತಿಯಲ್ಲಿ ನೋಡಿತು. ಅದನ್ನು ಪ್ರಿನ್ಸಿಪಾಲರಿಗೆ ಹೇಳಿದಳು: 'ಪ್ರತಿಯೊಬ್ಬ ಮನುಷ್ಯನ ಆಸ್ಥೆಗೆ ತಕ್ಕ ವೃತ್ತಿ ಸಿಕ್ಕೂದು ನ್ಯಾಯ. ಹಾಗೆಯೇ ಇರಬೇಕು. ಅವರಲ್ಲಿ ಕೂಡ ವಿದ್ಯಾವಂತರಾಗ್ತಿದಾರೆ. ಅವರಲ್ಲೂ ಓದಿ ಬರೆಯುವ, ಅಧ್ಯಾಪಕರಾಗುವ ಆಸ್ಥೆ ಹುಟ್ತಿದೆ. ಚಿಕ್ಕ ವಯಸ್ಸಿನಿಂದ ಮಕ್ಕಳಿಗೆ ಕಟ್ಟುಪಾಡು ಹಾಕದೆ ಎಲ್ಲ ಕಸಬುಗಳ ಪರಿಚಯಾನೂ ಮಾಡಿಕೊಟ್ರೆ, ಜಾತಿಗೂ ಆಸ್ಥೆಗೂ ಸಂಬಂಧವಿಲ್ಲವಾಗುತ್ತೆ. ಮೂಲದಲ್ಲಿ ಜಾತಿ ಬೆಳೆದದ್ದು ಕಸುಬಿನ ಆಧಾರದ ಮೇಲೆ. ಈಗ ಹುಟ್ಟಿನ ಕಟ್ಟುಪಾಡನ್ನು ಕಸುಬಿ

ನಿಂದ ತೆಗೆದುಹಾಕುವ ಕಾಲ ಬಂದಿದೆ. ವಾಸ್ತವವಾಗಿ ಈ ಕಟ್ಟುಪಾಡು ಕಳಚಿ ಬಿದ್ದಿದೆ. ಆದ್ದರಿಂದ ಜಾತಿ ಅನ್ನುವ ಹಳೇ ಪದ್ಧತೀನ ಬಿಟ್ಟುಬಿಡೂದೊಂದೇ ವಿವೇಕದ ದಾರಿ.'

ಇವಳ ಸಂಗಡ ವಾದ ಮಾಡುವುದು ಪ್ರಿನ್ಸಿಪಾಲರಿಗೆ ಹಿತವೆನಿಸಲಿಲ್ಲ. ಕಾಲೇಜಿನ ಮುಖ್ಯಾಧಿಕಾರಿಯಾದ ಅವರು, ಇಷ್ಟು ಚನ್ನಾಗಿ ಪಾಠ ಹೇಳುವ ತಮ್ಮ ಜಾತಿಯ ಈ ಹುಡುಗಿಯ ಬಗೆಗೆ ಅಭಿಮಾನವಿಟ್ಟುಕೊಂಡಿದ್ದರು. ಅವಳ ಒಳ್ಳೆಯದಕ್ಕೆಂದು ಬುದ್ಧಿವಾದ ಹೇಳಲು ಕರೆಸಿದ್ದರು. ಆದರೆ ಅವಳು ಬುದ್ಧಿವಾದವನ್ನು ಸಮಾಜ, ನ್ಯಾಯ, ನೀತಿ, ಧರ್ಮಗಳ ಚರ್ಚೆಗೆ ತಿರುಗಿಸಿ ಮಾತಿನ ಹದವನ್ನೇ ಬದಲಾಯಿಸಿಬಿಟ್ಟಿದ್ದಳು. ಇಂತಹ ತಲೆಹರಟೆಯವರಿಗೆ ಹೇಳಿ ಪ್ರಯೋಜನವೂ ಇಲ್ಲ. ಹಾಗೆಂದು ಈಗ ಸುಮ್ಮನಾದರೆ ತಮ್ಮ ಹುದ್ದೆಯ ಗೌರವವೇನಾಗಬೇಕು? ಆದುದರಿಂದ ಹೇಳಿದರು: 'ನಾವು ಜಾತಿ ಬಿಡ್ತೀವಿ ಅಂದ್ರೂ ಅವರೇ ತಂದು ನಮ್ಮ ಮೇಲೆ ಹೇರ್ತಾ ಇದಾರಲ್ಲ.'

'ನಾವು ಪೂರ್ತಿ ಬಿಟ್ಟಿಲ್ಲ. ನಮ್ಮ ಹೆಣ್ಣುಮಕ್ಳನ್ನ ಅವರಿಗೆ ಕೊಡ್ತೀವೇನು? ಅವರ ಹೆಣ್ಣುಮಕ್ಳನ್ನ ತಂದುಕೊತ್ತೀವೇನು?'

'ಮದುವೆ ಅಂದ್ರೆ ಸಣ್ಣ ಮಾತಲ್ಲ. ವಿದ್ಯಾವಂತರಾದರೂ ನಮಗೂ ಅವರಿಗೂ ಜೀವನವಿಧಾನದಲ್ಲಿ, ಸಂಸ್ಕೃತಿಯಲ್ಲಿ ಎಷ್ಟು ವ್ಯತ್ಯಾಸವಿದೆ!'

ಈ ಮಾತು ಅವಳ ಮನಸ್ಸನ್ನು ಹೊಕ್ಕಿತು. ಅವರಿಗೂ ತನಗೂ ಇರುವ ಸಾಂಸ್ಕೃತಿಕ ವ್ಯತ್ಯಾಸವನ್ನು, ಹಳ್ಳಿಯಲ್ಲಿರುವ ತಾನು ಹೆಚ್ಚು ಚನ್ನಾಗಿ ಬಲ್ಲಳು. ಆದರೆ ಇದನ್ನು ತೊಡೆಯುವುದು ಹೇಗೆ? ನಾವು ಅವರೊಡನೆ ಪೂರ್ತಿಯಾಗಿ ಬೆರೆಯದೆ ಈ ವ್ಯತ್ಯಾಸವನ್ನು ಅಳಿಸಲಾಗುವುದಿಲ್ಲ. ಇನ್ನು ಮೂರು ನಾಲ್ಕು ತಲೆ-ಮಾರಿನಲ್ಲಿ ಅವರಲ್ಲಿ ಪೂರ್ಣ ವಿದ್ಯಾಭ್ಯಾಸ ಬೆಳೆದ ನಂತರ ಅದು ತೀರ ಕಮ್ಮಿಯಾಗಬಹುದು. ಆದರೆ ಯಾವುದು ಅಪೇಕ್ಷಣೀಯವೋ, ನ್ಯಾಯವೋ, ಅದನ್ನು ಮಾಡೆಂದು, ಇನ್ನೂ ಹುಟ್ಟದ ನಮ್ಮ ಮರಿಮಕ್ಕಳಿಂದ ಯಾಕೆ ನಿರೀಕ್ಷಿಸಬೇಕು?' ನಾವೇ ಯಾಕೆ ಮಾಡಬಾರದು – ಎಂಬುದು ಅವಳ ದೃಷ್ಟಿ.

ಈ ಚರ್ಚೆಯನ್ನು ಮುಂದುವರಿಸುವುದು ಪ್ರಿನ್ಸಿಪಾಲರಿಗೆ ಬೇಡವಾಗಿತ್ತು. ಅವರು ವಾಸ್ತವವಾಗಿ ಇವಳನ್ನು ಚರ್ಚೆಗೆಂದು ಆಹ್ವಾನಿಸಿರಲಿಲ್ಲ. ತಮ್ಮ ಪಿತೃ ಪಟ್ಟದ ಸ್ಥಾನವನ್ನು ಗುರುತಿಸಿ ಗೌರವಿಸದೆ ಅವಳು ಸರಿಸಮಾನಳಂತೆ ವಾದಕ್ಕೆ ನಿಂತುಬಿಟ್ಟಳು. ಬುದ್ಧಿವಾದ ಕೇಳಲು ತಾನು ಸಿದ್ಧಳಿಲ್ಲವೆಂದು ಅವಳ ಇಂಗಿತ. 'ನಿಮ್ಮಿಷ್ಟ ಅಮ್ಮ. ನೀವು ಸ್ವತಂತ್ರರು. ಆದರೆ ನಮ್ಮ ಇಡೀ ಸಮಾಜಕ್ಕೆ ಕೆಟ್ಟ ಹೆಸರು ಬರುತ್ತೆ, ಅವರು ನಮ್ಮ ಸಮಾಜಾನ ಆಡಿಕೊತ್ತಾರೆ ಅಂತ ಮನಸ್ಸು

ತಡೀದೇ ಹೇಳಿದೆ' – ಎಂದು ಮಾತಿಗೆ ಕೊನೆಯನ್ನು ಸೂಚಿಸುವಾಗ ಅವರ ಮುಖ ಪೆಚ್ಚಾಗಿದ್ದುದು ಮಾತ್ರವಲ್ಲ, ಗೌರವಭಂಗವಾದಂತೆ ಕಾಣುತ್ತಿತ್ತು.

'ಕ್ಷಮಿಸಿ ಸಾರ್. ತಮಗೆ ಎದುರಾಡುಕ್ಕೆ ನಂಗೆ ಇಷ್ಟವಿರಲಿಲ್ಲ. ಹೀಗೇ ನನ್ನ ಅಭಿಪ್ರಾಯ ಅಂದೆ. ಅಂದ ಹಾಗೆ ತಮಗೆ ಈ ವಿಚಾರ ಯಾರು ಹೇಳಿದರು?'

'ಹೀಗೇ ಮಾತು ಬಂತು. ಮ್ಯಾನೇಜಿಂಗ್ ಕಮಿಟಿ ಮೆಂಬರುಗಳ ಹತ್ತಿರಕ್ಕೂ ಹೋಗಿದೆ ಅಂತ ಕಾಣುತ್ತೆ. ನಾನು ನಿಮ್ಮ ಹಿತೈಷಿ. ನೀವೂ ಯೋಚನೆ ಮಾಡಿದರೆ ಒಳ್ಳೇದು. ಇದರ ಮೇಲೆ ನಿಮ್ಮಿಷ್ಟ.'

ಯಾವ ರೀತಿಯ ಪ್ರತ್ಯುತ್ತರ ಹೇಳುವುದೂ ಹಿತವಾಗುವುದಿಲ್ಲವೆಂದು ಅರ್ಥ ಮಾಡಿಕೊಂಡ ಅವಳು, 'ನೀವು ಇಷ್ಟು ಅಭಿಮಾನ ಇಟ್ಟಿದೀರಿ. ನಾನು ಯಾವಾಗಲೂ ಕೃತಜ್ಞಳು' – ಎಂದು ಹೇಳಿ ಎದ್ದು ನಿಂತು ತುಸು ತಲೆ ಬಾಗಿ ಕೈಮುಗಿದು ಹೊರಗೆ ಬಂದಳು.

## ೨

ಊರಿನಲ್ಲಿ ಪ್ರೈಮರಿ ಸ್ಕೂಲು ಓದುವಾಗ ಸತ್ಯನ ಸ್ನೇಹಿತೆ ಹೊನ್ನಮ್ಮ, ಸ್ಕೂಲಿಗೆ ಅವರೇಕಾಳು ರೊಟ್ಟಿ ತಂದಿದ್ದಳು. ತಾಯಿ ಇಲ್ಲದ ಸತ್ಯಳ ಮನೆಯಲ್ಲಿ ಅದನ್ನೆಲ್ಲ ಮಾಡುವವರಾರು? ತಂದೆಯದೇ ಅಡಿಗೆ. ಅನ್ನ, ಸಾರು ಅಥವಾ ಹುಳಿ. ತಿಂಡಿಗೆ ಉಪ್ಪಿಟ್ಟು. ಸುಲಭವಾಗಿ ಆಗುವ ಅಡಿಗೆಗಳನ್ನು ಬಿಟ್ಟು ಮುಜುಗರದ ತಿಂಡಿಗಳನ್ನು ಮಾಡಲು ಗಂಡಸಾದ ಅವರಿಗೆ ಸಾಧ್ಯವಾಗುತ್ತಿರಲಿಲ್ಲ. ಹೊನ್ನಮ್ಮ ಕೊಟ್ಟದ್ದನ್ನು ಅವಳು ತಿಂದಳು. ಶೂದ್ರರ ಮನೆಯ ಬೆಂದ ಪದಾರ್ಥ ತಿನ್ನುವುದು ತಪ್ಪೆಂದು ಅವಳಿಗೆ ಗೊತ್ತಿಲ್ಲದೆ ಇರಲಿಲ್ಲ. ಆದರೆ ಅದು ಹ್ಯಾಗೆ ತಪ್ಪಾಗುತ್ತೆ? ಒಂದೇ ಬಾವಿಯಲ್ಲಿ ಅವರೂ ನೀರು ಸೇದಿಕೊಳ್ತಾರೆ, ನಾವೂ ಸೇದ್ತೀವಿ. ಆ ನೀರು ಹಾಕಿ ಬೇಯಿಸಿದ ಮಾತ್ರಕ್ಕೆ ಮೈಲಿಗೆಯಾಗುತ್ತೆಯೇ? ಗಂಗಮ್ಮನಿಗೆ ಮುಟ್ಟಿಲ್ಲ, ಹಾಲಿಗೆ ಕಟ್ಟಿಲ್ಲ ಅನ್ನುವ ಮಾತನ್ನೂ ಜನರು ಹೇಳುತ್ತಿದ್ದರು. ಸತ್ಯಳಿಗೆ ಇದರಲ್ಲಿ ಅರ್ಥ ಕಾಣುತ್ತಿರಲಿಲ್ಲ. ಅವಳು ಅದರ ಬಗೆಗೆ ಹೆಚ್ಚು ಯೋಚಿಸುತ್ತಿರಲಿಲ್ಲ. ಹೊನ್ನಮ್ಮ ಮುಚ್ಚಿ ಕೊಡುತ್ತಿದ್ದಳು. ಇವಳು ಅಷ್ಟೇ ಮರೆಯಲ್ಲಿ ಮೆಲುಕು ಹಾಕಿ ಮುಗಿಸುತ್ತಿದ್ದಳು.

ಆದರೆ ಅದು ಬ್ರಾಹ್ಮಣ ಹುಡುಗಿಯರಿಗೆ ಗೊತ್ತಾಗಿ, ಅವರು ಅವಳ ಅಪ್ಪನಿಗೆ ಹೇಳಿ, ಅಪ್ಪ ಅವಳನ್ನು ಒಂದು ದಿನ ಹೊಡೆಯುವವರೆಗೆ ಬಂದಿದ್ದರು. ತಾಯಿ ಸತ್ತ ಹೆಣ್ಣು ಹುಡುಗಿ ಎಂಬ ನೆನಪಾಗಿ ಎತ್ತಿದ ಕೈಯನ್ನು ಇಳಿಬಿಟ್ಟು,

'ಅಮ್ಮಾ ನೀನು ನನ್ನ ಮರ್ಯಾದೆ ಕಳೆಯುಕ್ಕೆ ಹುಟ್ಟಿಬಿಟ್ಟೆ' ಎಂದಿದ್ದರು. ಮರುದಿನದಿಂದ ಅವಳು, ಹೊನ್ನಮ್ಮ ಕೊಟ್ಟ ತಿಂಡಿಯನ್ನು ಮುಟ್ಟಲಿಲ್ಲ. ಹೊನ್ನಮ್ಮ ಅಪಮಾನದಿಂದ ಇವಳ ಸ್ನೇಹವನ್ನೇ ಬಿಟ್ಟಳು. ಈ ಒಂದು ಕಾರಣ ದಿಂದ, ಅಷ್ಟೊಂದು ಪ್ರೀತಿಯಿಂದಿದ್ದ ಇವರಿಬ್ಬರೂ ಮಾತನಾಡುವುದೂ ನಿಂತು ಹೋಯಿತು.

ನ್ಯಾಯವನ್ನು ತಿಳಿಯುವುದೊಂದೇ ಮುಖ್ಯವಲ್ಲ. ಅದರಂತೆ ನಡೆಯಬೇಕು ಎಂಬ ಸ್ಪಷ್ಟ ತಿಳಿವಳಿಕೆ ಅವಳಿಗೆ ಬಂದದ್ದು ಕಾಲೇಜು ಸೇರಿದ ಮೇಲೆ.

ಊರಿನಲ್ಲಿ ಜೊತೆಯಲ್ಲಿ ಹೈಸ್ಕೂಲು ಓದುತ್ತಿದ್ದಾಗ ಶ್ರೀನಿವಾಸನ ಹೆಸರು ತಿರುಮಲೇಶಗೌಡ ಎಂದೇ ಇತ್ತು. ಹಳ್ಳಿಯಾದರೂ ಅವರಿಬ್ಬರೂ ಒಬ್ಬರೊಡ ನೊಬ್ಬರು ಮಾತನಾಡುತ್ತಿದ್ದರು. ಅವನು ಎಂದಾದರೊಂದು ದಿನ ಅವಳ ಮನೆಗೆ ಬಂದು ಅವಳ ತಂದೆಯ ಕೈಲಿ ಮಾತನಾಡುತ್ತಿದ್ದ. ಊರಿನಲ್ಲಿ ಎಷ್ಟೇ ಪರಿಚಯವಾಗಿದ್ದರೂ ಅವರ ನಿಜವಾದ ಸ್ನೇಹ ಬೆಳೆದದ್ದು ಮೈಸೂರಿನಲ್ಲಿ. ಇಂಟರ್‌ಮೀಡಿಯೆಟ್ ಓದಲು ಅವಳು ಮಹಾರಾಣಿ ಕಾಲೇಜಿಗೆ ಸೇರಿ ಹೆಣ್ಣು ಮಕ್ಕಳ ಹಾಸ್ಟೆಲಿನಲ್ಲಿದ್ದಳು. ಅವನು ಯುವರಾಜಾ ಕಾಲೇಜಿಗೆ ಸೇರಿ ಗಂಡು ಮಕ್ಕಳ ಹಾಸ್ಟೆಲಿನಲ್ಲಿದ್ದ. ಇಬ್ಬರೂ ವಾರಕ್ಕೆ ಎರಡು ಮೂರು ದಿನವಾದರೂ ಭೇಟಿಯಾಗುತ್ತಿದ್ದರು. ಊರು, ಮಳೆ, ಬೆಳೆ, ಯಾರಾದರೂ ಸತ್ತವರು, ಯಾರ ಮನೆಯಲ್ಲಾದರೂ ಮದುವೆ ಮುಂಜಿಗಳಾದದ್ದು, ಹೀಗೆ ಊರಿನ ವಿಷಯಗಳನ್ನು ಮಾತಾಡಿಕೊಳ್ಳುತ್ತಿದ್ದರು. ಒಂದು ದಿನ ಅವನು ಊರಿಗೆ ಹೋಗಿದ್ದ. ಕೊರೆ ಗಾಲ. ಬರುವಾಗ ಅವರೇಕಾಳು-ಕಡುಬು ತಂದಿದ್ದ. ಅದೇ ದಿನ ಸಂಜೆ ಇವಳ ಹಾಸ್ಟೆಲು ಹತ್ತಿರ ಬಂದು ಭೇಟಿಯಾದಾಗ ಊರಿನ ಮಳೆ ಬೆಳೆಗಳ ವರದಿ ಹೇಳುತ್ತಾ, 'ಈ ಸಲವಂತೂ ಅದೇನಾಡಿ ಅವರೇಗಿಡ ಬೆಳೆದಿದೆ ಅಂತಿಯಾ. ಬೆಳೆದು ಮಲಗಿಬಿಟ್ಟಿದೆ. ಒಂದೊಂದು ಗೊಂಚಲು ಎಳೆದರೆ ಹತ್ತು ಹದಿನೈದು ಬಲಿತ ಕಾಯಿ ಬರುತ್ತೆ. ಕಾಯಿ ಆರಿಸಿ ಕುಯ್ಯಬೇಕಾಗಿಲ್ಲ. ಕಣ್ಣುಮುಚ್ಚಿ ಕಂಡು ತರ್‌ದುಬಿಟ್ರೆ ಸಾಕು. ನೂರು ಏಣಿಸೂದ್‌ರಲ್ಲಿ ಒನಿಯೂಕುಕ್ಕೆ ತುಂಬಿ ಹೋಗುತ್ತೆ' ಎಂದ.

'ಬಾಯಲ್ಲಿ ನೀರು ಬರೂ ಹಾಗೆ ಹೇಳ್ತೀಯ. ನಂಗೊಂದಿಷ್ಟು ತಂದೆ ಏನು?'

'ತಂದ್‌ರೆ ಇಲ್ಲಿ ಎಲ್ಲಿ ಅಡಿಗೆ ಮಾಡ್ತೀಯ? ಸೊಗಡು ಸೊಗಡಾಗಿರೂ ಅವರೇ-ಕಾಳು ಕಡುಬು ಮಾಡಿಸ್ಕಂಡ್ ಬಂದಿದೀನಿ. ತಿಂತೀಯ?'

'ಪೆಂಗುಡ್.'

'ಪೆಂಗುಡ್ ಅಂತೀಯ. ಆದರೆ ಒಕ್ಕಲಿಗರು ಮಾಡಿದ್ದು ತಿಂತೀಯಾ, ಅದ್ರಲ್ಲೂ

ಪುರೋಹಿತರ ಮಗಳು.'

ಅವಳಿಗೆ ಹೊನ್ನಮ್ಮನ ನೆನಪಾಯಿತು. ಅದನ್ನು ಅವಳು ತಿರುಮಲೇಶ ಗೌಡನಿಗೆ ಹೇಳಿದಳು. ಅವನೆಂದ: 'ಹೊನ್ನಮ್ಮ ನಂಗೆ ಗೊತ್ತು. ಮಂಚೇ ಗೌಡರ ಮಗಳಲ್ವೆ? ಕೋಡಿಹಳ್ಳಿಗೆ ಕೊಟ್ಟಿದೆ. ಈಗ ಎರಡು ಮಕ್ಕಳ ತಾಯಿ ಯಾಗಿದಾಳೆ. ಅವಳು ಹ್ಯಾಗೆ ನಿನ್ನ ಕೈಲಿ ಮಾತು ಬಿಟ್ಟಳೋ ಹಾಗೆ ನಾನೂ ಬಿಡ್ತೀನಿ, ನೀನು ಕಡುಬು ತಿನ್ನದೆ ಇದ್ರೆ.'

'ಈ ಸಣ್ಣ ವಿಷಯಕ್ಕೆ ಸ್ನೇಹ ಬಿಡೂದಿದ್ರೆ ಬಿಡಪ್ಪ' – ಎಂದು ಸತ್ಯ ಖಿನ್ನಳಾಗಿ ಹೇಳಿದಳು.

ತಾನು ಅವಳನ್ನು ನೋಯಿಸಿದೆನೆಂದು ಅನಿಸಿ ಅವನು ಹೇಳಿದ: 'ನೀನು ತಿನ್ನು, ತಿನ್ನದೆ ಇರು. ನಿನ್ನ ಸ್ನೇಹ ಬಿಡುಕ್ಕೆ ಆಗುಲ್ಲ. ಈ ಊರಿಗೆ ಬಂದು ಒಂದೂವರೆ ವರ್ಷವಾಯ್ತು. ಆದರೂ ನಿನ್ನ ಕೈಲಿ ಮಾತಾಡಿದರೆ ಆಗೂ ತೃಪ್ತಿ ಇನ್ಯಾರ ಕೈಲಿ ಆಡಿದ್ರೂ ಆಗುಲ್ಲ.'

ಹೊನ್ನಮ್ಮನ ಅವರೇಕಾಳು ರೊಟ್ಟಿಯನ್ನು ತಿಂದರೆ ತಪ್ಪೇನು ಎಂಬ ಪ್ರಶ್ನೆ ಅವಳಿಗೆ ಪ್ರೈಮರಿ ಸ್ಕೂಲು ಓದುವಾಗಲೇ ಬಂದಿತ್ತು. ತಿರುಮಲೇಶನ ಮನೆಯ ಕಡುಬು ತಿಂದರೆ ತಪ್ಪು ಎಂಬ ಭಾವನೆ ಈಗ ಇಷ್ಟು ಓದಿದ ನಂತರ, ಒಂದೂ ವರೆ ವರ್ಷ ಮೈಸೂರಿನಲ್ಲಿ ಹಾಸ್ಟೆಲಿನಲ್ಲಿ ಇದ್ದ ನಂತರ ಬರುವುದು ಸಾಧ್ಯವಿರಲಿಲ್ಲ. ಅಲ್ಲದೆ ತಾನು ಊಟ ಮಾಡುತ್ತಿದ್ದ ಹಾಸ್ಟೆಲಿನಲ್ಲಿ, ತಿಂಡಿ ತಿನ್ನುತ್ತಿದ್ದ ಹೋಟೆಲು ಗಳಲ್ಲಿ ಬ್ರಾಹ್ಮಣರೇ ಅಡಿಗೆ ಮಾಡುತ್ತಿರಲಿಲ್ಲ. ಅವಳು ಆಗಲೇ ಎಷ್ಟೋ ಪುಸ್ತಕ ಗಳನ್ನು ಓದಿದ್ದಳು. ಸ್ವಂತವಾಗಿ ವಿಚಾರ ಮಾಡುವುದನ್ನು ಅಭ್ಯಾಸ ಮಾಡಿ ಕೊಳ್ಳುತ್ತಿದ್ದಳು. ಆದರೆ ಹಾಗೆ ತಿನ್ನುವ, ತಿನ್ನು ಎಂದು ತಿರುಮಲೇಶಗೌಡನು ಕೇಳುವ, ಪ್ರಸಂಗ ಬಂದಿರಲಿಲ್ಲ. ಈಗ ಬಂದಿದೆ. ಅವಳೇ ಕೇಳಿದಳು: 'ಹಾಗಾದ್ರೆ ನಿನ್ನ ಹಾಸ್ಟೆಲಿಗೆ ಹೋಗಿ ತಗಂಡು ಬಾ ತಿಂತೀನಿ.'

'ನೀನೇನು ತಿನ್ನಬ್ಯಾಡ. ನಾನು ಸ್ನೇಹ ಬಿಡುಲ್ಲ' – ಅವನೆಂದ.

'ಈ ಸಣ್ಣ ವಿಷಯಕ್ಕೆಲ್ಲ ಸ್ನೇಹ ಇಡೂದು ಬಿಡೂದು ಮೂರ್ಖತನ. ನಾನು ಅದನ್ನ ಹೇಳ್ಲಿಲ್ಲ. ತಿಂದ್ರೆ ನಿಜವಾಗಿಯೂ ತಪ್ಪಿಲ್ಲ. ತಗಂಡು ಬಾ ಹೋಗು.'

ಇಬ್ಬರೂ ನಡೆದು ಅವನ ಹಾಸ್ಟೆಲಿನತನಕ ಹೋದರು. ಅವಳು ಹೊರಗೆ ನಿಂತಳು. ಅವನು ಒಳಗೆ ಹೋಗಿ ಒಂದು ಕೈಚೀಲ ಹಿಡಿದು ಹಿಂತಿರುಗಿದ. ಇಬ್ಬರೂ ಕುಕ್ಕರಹಳ್ಳಿಯ ಕೆರೆಯ ಹತ್ತಿರಕ್ಕೆ ಹೋಗಿ ತಿಂದು ಕೈತೊಳೆದು ಕೊಂಡರು. ಅವಳಿಗೆ ರಾತ್ರಿ ಊಟವೇ ಬೇಕಾಗಲಿಲ್ಲ.

ಇಬ್ಬರಿಗೂ ಪಾಸಾಯಿತು. ಅವಳು ಇತಿಹಾಸದ ಆನರ್ಸ್ ತೆಗೆದುಕೊಂಡು

ಮಹಾರಾಜಾ ಕಾಲೇಜು ಸೇರಿದಳು. ಇತಿಹಾಸ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಗಳನ್ನು ಆರಿಸಿಕೊಂಡು ಅವನೂ ಅದೇ ಕಾಲೇಜಿನಲ್ಲಿ ಬಿ.ಎ.ಗೆ ಸೇರಿದ. ಊರಿ ನಲ್ಲಿದ್ದಾಗ ಸತ್ಯ ತಂದೆಯಿಂದ ಈಶಾವಾಸ್ಯದಂತಹ ಕೆಲವು ಸಣ್ಣ ಸಣ್ಣ ಉಪ ನಿಷತ್ತುಗಳು, ಭಗವದ್ಗೀತೆ, ಮೊದಲಾಗಿ ಹೇಳಿಸಿಕೊಂಡಿದ್ದಳು. ಇಂಟರ್ ಮೀಡಿಯೆಟ್ ಓದುವಾಗಲೇ, ವೇದಕಾಲದಲ್ಲಿ ಸ್ತ್ರೀಯ ಸ್ಥಾನಮಾನ, ಭಾರತೀಯ ಸಂಸ್ಕೃತಿ ಮೊದಲಾಗಿ ಕೆಲವು ಜನಪ್ರಿಯ ಇಂಗ್ಲಿಷ್ ಪುಸ್ತಕಗಳನ್ನು ಓದಿದ್ದಳು. ಈಗ ಭಾರತ ಮತ್ತು ಇತರ ದೇಶಗಳ ಇತಿಹಾಸವನ್ನು ಆಳವಾಗಿ ವ್ಯಾಸಂಗ ಮಾಡತೊಡಗಿದಳು. ವೇದದ ಕಾಲದಲ್ಲಿ ಜಾತಿಯ ಕಟ್ಟುಗಳು ಹೀಗೆ ಇರಲಿಲ್ಲ ವೆಂಬುದು ಅವಳಿಗೆ ಮೊದಲೇ ತಿಳಿದಿತ್ತು. ಅದು ಹೇಗೆ ಜಿಗುಟಾಯಿತು, ಜಾತಿ ಜಾತಿಗಳ ಸ್ಪರ್ಧೆ ವೈಷಮ್ಯಗಳು ಹೇಗೆ ಬೆಳೆದುವು ಎಂಬುದನ್ನು ವಿವರವಾಗಿ ಅಭ್ಯಾಸ ಮಾಡುವಾಗ, ಅವಳಿಗೆ ತನ್ನ ಊರಿನಲ್ಲಿ ಕಾಣುತ್ತಿದ್ದ ಸಾಮಾಜಿಕ ಜೀವನದ ನೆನಪಾಗುತ್ತಿತ್ತು. ಅದೇ ತನ್ನ ವಿಶೇಷ ವ್ಯಾಸಂಗದ ವಿಷಯವೆಂಬಂತೆ ಓದುತ್ತಿದ್ದಳು.

'ನಮ್ಮ ದೇಶದಲ್ಲಿ ಜಾತೀಯತೆಯಿಂದ ಆಗಿರುವ ವಿನಾಶ' ಎಂಬ ವಿಷಯ ವನ್ನು ಕುರಿತು ಕಾಲೇಜಿನಲ್ಲಿ ಒಂದು ಭಾಷಣಸ್ಪರ್ಧೆ ಇಟ್ಟದ್ದರು. ಅದರಲ್ಲಿ ಶ್ರೀನಿವಾಸ ಮಾತನಾಡಿದ; ಅವಳೂ ಆಡಿದಳು. ಅವಳಿಗೆ ಪ್ರಥಮ ಬಹುಮಾನ ಬಂತು. ಅದರಿಂದ ಅವನಿಗೆ ಮತ್ಸರವೆನಿಸಲಿಲ್ಲ. ತನ್ನ ಊರಿನವಳು, ತನ್ನ ಸ್ನೇಹಿತೆ, ಇಷ್ಟು ಚನ್ನಾಗಿ ಮಾತನಾಡಿ ಇಷ್ಟೆಲ್ಲ ವಿಷಯವನ್ನು ಹೇಳಿ ಬಹುಮಾನ ಪಡೆದಿ ದ್ದಾಳೆ ಎಂಬ ಸಂತೋಷದಿಂದ ಅವಳನ್ನು ಹೋಟೆಲಿಗೆ ಕರೆದುಕೊಂಡು ಹೋಗಿ, ಎರಡು ಸಿಹಿ ಎರಡು ಖಾರ, ಮೇಲೆ ಕಾಫಿ ಕೊಡಿಸಿದ. ಅವಳು ಹೇಳಿದಳು: 'ಬರೀ ಭಾಷಣ ಮಾಡಿದರೆ ಸಾಲದು. ಈ ರೋಗ ಹೋಗುವ ಹಾಗೆ ನಮ್ಮ ಶರೀರವನ್ನು ಪ್ರವೇಶಿಸದ ಹಾಗೆ ನಾವು ಆರೋಗ್ಯಕರ ಜೀವನ ನಡೆಸಬೇಕು.'

'ಅದು ನಿಜ. ವಿದ್ಯಾರ್ಥಿಗಳಾದ ನಾವು ಏನು ಮಾಡುಕ್ಕಾಗುತ್ತೆ? ಎಲ್ಲಾ ದೊಡ್ಡೋರು....'

'ವಿದ್ಯಾರ್ಥಿಗಳಾದ ನಾವು ಮಾಡದೆ ದೊಡ್ಡೋರು ಮಾಡಬೇಕು ಅಂತ ನಿರೀಕ್ಷಿಸೋದು ಮೂರ್ಖತನ.'

'ಮೂರ್ಖತನ ಅನ್ನೊ ಮಾತು ನೀನು ಬಲು ಉಪಯೋಗುಸ್ತೀಯ. ನಾನು ಎಣಿಸಿಕಂಡೆ: ಇವತ್ತು ನೀನು ಮಾಡಿದ ಹನ್ನೆರಡು ನಿಮಿಷದ ಭಾಷಣದಲ್ಲಿ ಹದಿನೈದು ಸಲ ಉಪಯೋಗಿಸಿದೆ. ಯಾರಿಗೆ ಹಾಗಂದೆ? ಈಗ ಅಂದದ್ದು ಮಾತ್ರ ನನಗೆ ಅಲ್ಲವೆ?'

ಪುರೋಹಿತರಿ. ನಿನ್ನಲ್ಲಿ ಜಾತೀಯತೆ ಇಲ್ಲ.'

'ಅವರೇಕಾಳು ಕಡುಬು ತಿನ್ನುಸ್ದೆ ಅಂತಲೆ?'

ಸತ್ಯ ಇದ್ದಕ್ಕಿದ್ದಹಾಗೆಯೇ ಸುಮ್ಮನಾದಳು. ಅವಳ ಮನಸ್ಸು ಅದೇನೋ ಯೋಚಿಸತೊಡಗಿತ್ತು. ಒಂದು ನಿಮಿಷದ ನಂತರ ಅವಳು ಎಂದಳು: 'ನೋಡು, ಹೋಟೆಲ್‌ಗಳಿಗೆ ಬ್ರಾಹ್ಮಣರ ಕಾಫೀ ಕ್ಲಬ್, ವೀರಶೈವರ ಭೋಜನಶಾಲೆ, ಗಂಗಡಿಕಾರ ಮಿಲಿಟರಿ ಹೋಟೆಲ್ ಅಂತ ಬೋರ್ಡು ಹಾಕ್ತಾರೆ. ಇಂಥದನ್ನ ಬ್ಯಾನ್ ಮಾಡಬೇಕು. ಜಾತಿಸೂಚಕ ಹೆಸರೇ ಇರಕೂಡ್‌ದು.'

'ನಿಜ.'

ಇಬ್ಬರೂ ಹೀಗೆಯೇ ಅದೆಷ್ಟೋ ಸಲಹೆ ಸೂಚನೆಗಳನ್ನು ಮಾತನಾಡಿದರು.

ಮರುದಿನ ಕಾಲೇಜಿನಲ್ಲಿ ಸಿಕ್ಕಿದಾಗ ಅವಳು ಹೇಳಿದಳು: 'ಸುಧಾರಣೆ ಸ್ವಂತ ದಿಂದ ಶುರುವಾಗಬೇಕು. ನಿನ್ನ ಹೆಸರನ್ನ ಯಾಕೆ ಬದಲಾಯಿಸಿಕೊಬಾರದು? ತಿರುಮಲೇಶಗೌಡ ಅನ್ನೂದ ತಿರುಮಲೇಶ ಅಂತ ಮಾಡಿಕೊಂಡ್‌ರೆ ಹ್ಯಾಗೆ?'

ಈ ಸೂಚನೆ ತಕ್ಷಣ ಅವನ ಮನಸ್ಸನ್ನು ಹಿಡಿಯಿತು. ಪಾಳೆಯಗಾರರ ವಂಶ ದವನಾಗಿ, ಊರಿಗೇ ಶ್ರೀಮಂತ ಮನೆತನದವನಾಗಿ, ಲಾಯರಾಗಿ ಸ್ವಾತಂತ್ರ್ಯಂ-ದೋಲನದಲ್ಲಿ ಭಾಗವಹಿಸಿ ಹೆಸರುವಾಸಿಯಾದ ತಂದೆಯ ಮಗನಾದ ಅವನಿಗೆ, ಎಂದೂ ಸಂಕೋಚ ಪಡುವ ಪ್ರಸಂಗ ಬಂದಿರಲಿಲ್ಲ. ಆದರೆ ಬ್ರಾಹ್ಮಣ ಸಹಪಾಠಿ ಗಳು, ಉಪಾಧ್ಯಾಯರು, ತಿರುಮಲೇಶಗೌಡ ಎಂದು ಕರೆದಾಗ ಒಂದು ತೆರನಾದ ಇರುಸುಮುರುಸಾಗುತ್ತಿತ್ತು. ತಿರುಮಲಾಪುರದಲ್ಲಿ ಹೈಸ್ಕೂಲು ಓದುತ್ತಿರುವಾಗ ಇಲ್ಲದ್ದು ಮೈಸೂರಿಗೆ ಬಂದನಂತರ ಅನಿಸುತ್ತಿದೆ. ಜೂನಿಯರ್ ಇಂಟರ್‌ಮೀಡಿ ಯೆಟ್ ಓದುವಾಗ ಅವನ ಸಹಪಾಠಿಯೊಬ್ಬ ಅಮಾಸೆಗೌಡ ಎಂಬ ಹೆಸರನ್ನು ಅಮರೇಶ ಎಂದು ಬದಲಾಯಿಸಿಕೊಂಡಿದ್ದ. ಉಳಿದ ಹುಡುಗರಂತೆ ಇವನೂ ಅದನ್ನು ಆಡಿಕೊಂಡಿದ್ದರೂ, ತಾನು ಏಕೆ ಬೇರೆ ಮಾಡಿಕೊಳ್ಳಬಾರದೆಂಬ ಯೋಚನೆ ಹುಟ್ಟಿತ್ತು. ಆ ಬಗೆಗೆ ಸತ್ಯಳನ್ನು ಕೇಳಬೇಕೆನಿಸಿತು. ಆದರೆ ತಾನು ಅಮಾಸೇಗೌಡನನ್ನು ಆಡಿಕೊಂಡಂತೆ ಅವಳು ತನ್ನ ಈ ವಿಚಾರವನ್ನು ಗೇಲಿ ಮಾಡಿಯಾಳೆಂದು ಕೇಳಲಿಲ್ಲ. ಆ ವಿಚಾರ ಅಲ್ಲಿಗೇ ನಿಂತುಹೋಗಿತ್ತು.

ಈಗ ಸತ್ಯಳೇ ಈ ಸಲಹೆ ಮಾಡಿದ್ದಾಳೆ. ಅಮಾಸೆಗೌಡ ಅಮರೇಶನಾದುದು ತನ್ನ ಮೂಲ ಹೆಸರು ಚನ್ನಾಗಿಲ್ಲವೆಂಬ ಕಾರಣದಿಂದ. ಸತ್ಯ ಹೇಳಿದಂತೆ ಜಾತಿ-ಸೂಚಕವೆಂದೇನಲ್ಲ. ಬ್ರಾಹ್ಮಣರಲ್ಲೂ ಎಂಥೆಂಥ ನಿರಾಕರ್ಷಕ ಹೆಸರುಗಳಿಲ್ಲ? ನಮ್ಮ ಊರಿನಲ್ಲೇ ತಿಪ್ಪಯ್ಯ, ಅಪ್ಪಣ್ಣಯ್ಯ, ಗುಂಡ್ಡೈಯ್ಯಂಗಾರ್, ಕುಪ್ಪಣ್ಣ ಯ್ಯಂಗಾರ್ ಎಂಬಂತಹ ಹೆಸರುಗಳ ಬ್ರಾಹ್ಮಣರಿದ್ದಾರೆ. ಅಯ್ಯಂಗಾರ್ ಎಂಬ

ಅಂತಹ ಜಾತಿಸೂಚಕಗಳನ್ನು ತೆಗೆದುಹಾಕಿದರೆ ಉಳಿದುವುಗಳಿಗೂ ಶ.ಶಾಸ್ತ್ರ ಹೆಸರುಗಳಿಗೂ ವ್ಯತ್ಯಾಸವೇ ಇಲ್ಲ. ಕೇಳಿದರೆ ಕಿವಿಗೆ ಇಂಪಾಗುವಂಥ ಹೆಸರೇ ಇಲ್ಲವೆ ನಮ್ಮ ಕಡೆ, ಎನಿಸಿತು. ಹಿಂದಿ ಸಿನಿಮಾಗಳಲ್ಲಿ, ಶರಚ್ಚಂದ್ರರ ಬಂಗಾಳಿ ಕಾದಂಬರಿಗಳಲ್ಲಿ ಎಷ್ಟು ಚನ್ನಾದ ಹೆಸರಿಟ್ಟುಕೊಂಡಿರುತ್ತಾರೆ!

ತಾನು ಹೆಸರು ಬದಲಿಸಬೇಕೆಂದು ನಿಶ್ಚಯಿಸಿಬಿಟ್ಟ. ಹೊಸದು ಯಾವು ದೆಂದು ಇನ್ನೂ ನಿಶ್ಚಯವಾಗಿರಲಿಲ್ಲ. ನೂರೆಂಟು ಹೊಳೆಯುತ್ತಿವೆ: ಸುರೇಶ್, ರಮೇಶ್, ರಜನೀಕಾಂತ್, ವಿನೋದ್, ದಿಲೀಪ್, ಕಿಶೋರ್, ವಿದ್ಯಾಸಾಗರ್, ಆನಂದ್, ಎಂತೆಂತಹ ಒಳ್ಳೆಯ ಹೆಸರುಗಳು! ಸತ್ಯಳನ್ನೇ ಕೇಳಿ, ಅವಳು ಒಪ್ಪಿದ ಯಾವುದಾದರೊಂದನ್ನು ನಿಶ್ಚಯಿಸಬೇಕೆಂದು ಮರುದಿನ ಅವಳ ಹತ್ತಿರ ಹೋದ. ಆದರೆ ತಾನಾಗಿಯೇ ಈ ಹೆಸರುಗಳನ್ನು ಹೇಳಲು ಅದೇಕೋ ನಾಚಿಕೆಯಾಯಿತು. ಸುತ್ತಿ ಬಳಸಿ ಮಾತನಾಡಿ, 'ಮೊನ್ನೆ ನೀನು ಅಂದೆಯಲ್ಲ. ಅದು ನ್ಯಾಯ. ನಾನು ಹೆಸರು ಬದಲಾಯಿಸಿಕೊಬೇಕು ಅಂತ ತೀರ್ಮಾನಿಸಿದೀನಿ. ನೀನೇ ಒಂದು ಹೆಸರು ಹೇಳಿಬಿಡು' ಎಂದು ಸೂಚಿಸಿದ.

'ಗೌಡ ಅನ್ನೂದ ಕೈಬಿಟ್ಟರೆ ಸಾಕು. ಉಳಿದದ್ದು ಹಾಗೇ ಇರಲಿ' – ಅವಳು ಎಂದಳು.

'ಉಳಿದದ್ದನ್ನೂ ಬದಲಾಯಿಸಿದರೆ ಹ್ಯಾಗೆ?'

'ಬದಲಾಯಿಸು. ಮಾಡರ್ನ್ ಆಗಿ ಆಕರ್ಷಕವಾಗಬೇಕೇನು ಗೌಡ್ರು?' – ಎಂದು ಅವಳು ನಕ್ಕಳು.

ಅವಳೇನೋ ಸಹಜವಾಗಿ ಸ್ನೇಹಭಾವದ ತಮಾಷೆಯಿಂದ ಮಾತನಾಡಿ ನಕ್ಕಳು. ಆದರೆ ಅವನಿಗೆ ನಾಚಿಕೆಯಾಗಿ ಅಸಮಾಧಾನವಾಯಿತು.

'ಬದಲಾಯಿಸು ಅಂತಲೂ ಅಂತೀಯ. ಬದಲಾಯಿಸ್ತೀನಿ ಅಂದಾಗ ತಮಾಷೇನೂ ಮಾಡ್ತೀಯಲ. ಸೀರಿಯಸ್ಸಾಗಿ ಮಾತಾಡು.'

'ನೋಡು ನನಗನ್ನಸ್ತೆ: ದೇವರ ಹೆಸರುಗಳನ್ನ ಕೂಡ ಇಟ್ಟುಕೊಳ್ಳೂದ ಬಿಡಬೇಕು. ಒಂದೊಂದು ದೇವರ ಹೆಸರಿಗೂ ಒಂದೊಂದು ಜಾತಿಯ ಸೂತಕ ಅಂಟಿಕೊಂಡಿರುತ್ತೆ. ತಿರುಮಲ ಅಂದ್ರೆ ವೈಷ್ಣವ, ಶಂಕರ ಅಂದ್ರೆ ಶೈವ, ಶಿವಣ್ಣ ಅಂದ್ರೆ ಸಾಮಾನ್ಯವಾಗಿ ಲಿಂಗಾಯತ. ಶಿವಪ್ಪ ಲಿಂಗಾಯಿತನೂ ಆದೀತು, ಒಕ್ಕಲಿಗನೂ ಆದೀತು. ಶಿವಸ್ವಾಮಿ ಬ್ರಾಹ್ಮಣನಾಗುತ್ತೆ. ಇದರ ಬದಲು ಪ್ರಕೃತಿ, ಹೂವು, ನಮ್ಮ ಜೀವನದ ಆಶೆ ಆಕಾಂಕ್ಷೆ ಇಂಥವುಗಳ ಹೆಸರು ಎಷ್ಟು ಚಂದ! ಕಮಲ ಅನ್ನೂದು ಎಷ್ಟು ಚನ್ನಾದ ಹೆಸರು! ಆದರೆ ಕಮಲದಿಂದ ಲಕ್ಷ್ಮಿ ಹುಟ್ಟಿ, ಅವಳು ವಿಷ್ಣುವಿನ ಹೆಂಡತಿಯಾಗಿ, ಆ ಮೂಲಕ ವೈಷ್ಣವ ಪಂಥದ

ಜಾತಿಸೂತಕ ಬಡಿದು ಕಮಲದ ಮೂಲ ಸೊಬಗೇ ಹಾಳಾಯ್ತು.'

'ಭಾಮಾ ಅನ್ನೋದ ತೆಗೆದುಹಾಕಿದರೆ ಉಳಿಯುವ ಸತ್ಯ ಅನ್ನೋ ನಿನ್ನ ಹೆಸರೂ ಚನ್ನಾಗಿರುತ್ತೆ' – ಅವನೆಂದ.

'ತುಂಬ ಒಳ್ಳೇ ಐಡಿಯಾ. ಆದರೆ ಸತ್ಯ ಅನ್ನುವಂಥಾ ದೊಡ್ಡ ಹೆಸರು ನನಗೆ ತಡೆಯುತ್ತೋ ಇಲ್ಲವೋ!' – ಎಂದು ಅವಳು ಗಂಭೀರಳಾಗಿ ಹೇಳಿದಳು. ಅವನಿಗೆ ಆ ಮಾತಿನ ಆಳ ತಿಳಿಯಲಿಲ್ಲ. ಅವಳೇ ಅಂದಳು: 'ಇಂಗ್ಲಿಷಿನಲ್ಲಿ ಹೋಪ್ ಅನ್ನೋ ಪದ ಎಷ್ಟು ಚನ್ನಾಗಿದೆ! ಅಂಥ ಹೆಸರಿರಬೇಕು. ಹೋಗ್ಲಿ ನೀನು ಏನಂತ ಇಟ್ಕೊತ್ತಿಯ?'

'ನೀನೇ ಹೇಳು.'

'ರಜನೀಶ್, ದಿನೇಶ್, ಥೂ. ನೋಡು, ದಿನೇಶ್ ಒಳ್ಳೇ ಹೆಸರು. ಸೂರ್ಯ. ಆದರೆ ಅದನ್ನ ಸೂರ್ಯನಾರಾಯಣನನ್ನ ಮಾಡಿ ವೈಷ್ಣವ ಪಂಥಕ್ಕೆ ತಳ್ಳಿಬಿಟ್ಟಿದಾರಲ್ಲ. ನಾಯಿಯನ್ನ ಬ್ರಾಹ್ಮಣರ ಮಡಿಹೆಂಗಸರು ದೂರ ಇಡೂ ಹಾಗೆ ಶಿವಭಕ್ತರು ಈ ಹೆಸರನ್ನ ದೂರ ಇಡ್ತಾರೆ.'

ರಜನೀಶ್ ಎಂಬ ಹೆಸರು ಅವನಿಗೆ ಒಪ್ಪಿತು. ಅದು ಶೈವವೂ ಅಲ್ಲ, ವೈಷ್ಣವವೂ ಅಲ್ಲ. ಅದನ್ನೇ ಇಟ್ಟುಕೊಳ್ಳಬೇಕೆಂದು ನಿಶ್ಚಯಿಸಿದ. ಮ್ಯಾಜಿಸ್ಟ್ರೇಟರ ಮುಂದೆ ಪ್ರಮಾಣಪತ್ರಕ್ಕೆ ಸಹಿ ಮಾಡಿ ಹತ್ತು ರೂಪಾಯಿ ಫೀಜು ಕೊಟ್ಟು, ಅನಂತರ ಆ ಪತ್ರದ ನಕಲನ್ನು ಪ್ರಿನ್ಸಿಪಾಲರ ಮೂಲಕ ವಿಶ್ವವಿದ್ಯಾನಿಲಯಕ್ಕೆ ಕಳಿಸಬೇಕು. ಅಲ್ಲಿಂದ ಒಪ್ಪಿಗೆ ಬಂದಮೇಲೆ ಪೇಪರಿಗೆ ಹಾಕಿಸುವುದು. ಮತ್ತೆ ಏನು ಮಾಡಬೇಕೆಂಬುದನ್ನು ಯಾರಾದರೂ ತಿಳಿದವರಿಂದ ವಿಚಾರಿಸಬೇಕು. ನಾಳೆಯೇ ಮ್ಯಾಜಿಸ್ಟ್ರೇಟರ ಕೋರ್ಟಿಗೆ ಹೋಗುವುದೆಂದು ನಿಶ್ಚಯಿಸಿಕೊಂಡು ರಾತ್ರಿ ಮಲಗಿದ್ದಾಗ ಇದ್ದಕ್ಕಿದ್ದಹಾಗೆಯೇ ಒಂದು ನೆನಪು ಬಂದುಬಿಟ್ಟಿತು. ತಾನು ಹುಟ್ಟುವಾಗ ಹೆರಿಗೆ ತುಂಬ ಕಷ್ಟವಾಗಿತ್ತಂತೆ. ತನಗಿಂತ ಮೊದಲು ಮೂರು ಸಲ ಬಸುರಾಗಿ ಮೈಯಿಳಿದಿತ್ತಂತೆ. ಹೆರಿಗೆಯಲ್ಲಿ ಬಸುರಿಯ ಜೀವಕ್ಕೂ ಅಪಾಯವಿದೆ; ಮಗು ಉಳಿದೀತೋ ಇಲ್ಲವೋ ಹೇಳುಕ್ಕಾಗುಲ್ಲ – ಎಂದು ತುಮಕೂರು ದೊಡ್ಡಾಸ್ಪತ್ರೆಯ ಲೇಡಿ ಡಾಕ್ಟರು ಎಂದಿದ್ದರು. ಸರಿಯಾಗಿ ಹೆರಿಗೆಯಾಗಿ ಮಗು ಬದುಕಿಕೊಂಡರೆ ನಿನ್ನ ಕಳಸಕ್ಕೆ ಚಿನ್ನದ ತಗಡು ಹೊಡೆಸ್ತೀವಿ ಅಂತ ಮನೆದೇವರಾದ ತಿರುಮಲಸ್ವಾಮಿಗೆ ಹರಕೆ ಮಾಡಿಕೊಂಡರಂತೆ. ಕಷ್ಟವಾದರೂ ತಾಯಿ ಮಗು ಬದುಕಿಕೊಂಡದ್ದು ಮಾತ್ರವಲ್ಲ; ನಾನು ಗಂಡಾಗಿಯೇ ಹುಟ್ಟಿದೆ. ಗುಡಿಯ ಕಳಸಕ್ಕೆ ಚಿನ್ನದ ತಗಡನ್ನೂ ಹೊಡಿಸಿದರು. ಆ ಕಳಸ ಈಗ ಬಿಸಿಲು ಬೆಳದಿಂಗಳುಗಳಲ್ಲಿ ಏಕಸಮನಾಗಿ ಮಿರಮಿರ ಮಿಂಚುತ್ತಿದೆ. ಆನೇ

ದೇವರ ಹೆಸರಿಡುವುದು ನಮ್ಮ ಮನೆತನದ ಪದ್ಧತಿಯೇ. ಅಜ್ಜ ತಿರುಮಲೇಗೌಡರು, ಅಪ್ಪ ಮೇಲಗಿರಿಗೌಡರು. ತನ್ನದು ಮನೆದೇವರ ಹೆಸರೂ ಆಯಿತು; ಅಜ್ಜನದೂ ಆಯಿತು. ವ್ಯತ್ಯಾಸವಿಷ್ಟೆ: ತಿರುಮಲೇಗೌಡ ಎಂಬುದಕ್ಕೆ ಬದಲಾಗಿ ತಿರುಮಲೇಶಗೌಡನೆಂದು ಮಾಡಿದರು. ಅಷ್ಟು ಹೊತ್ತಿಗೆ ಅಪ್ಪ ಮದರಾಸಿನಲ್ಲಿ ಬಿ.ಎಲ್. ಮಾಡಿದ್ದುದರಿಂದ ಈ ಮಟ್ಟಿನ ಆಧುನಿಕತೆ ಬಂತೇನೋ!

ಈಗ ತನ್ನ ಹೆಸರನ್ನು ಇದ್ದಕ್ಕಿದ್ದಹಾಗೆಯೇ ರಜನೀಶನೆಂದು ಬದಲಾಯಿಸಿಕೊಂಡರೆ ಮನೆಯಲ್ಲಿ ಸುಮ್ಮನಿರುವುದಿಲ್ಲವೆನಿಸಿತು. ಹೇಗಾದರೂ ಸರಿ, ಅವರನ್ನು ಕೇಳಿಯೇ ತೀರ್ಮಾನ ಮಾಡಬೇಕೆಂದು ಯೋಚಿಸಿ, ಮುಂದಿನ ಸಲ ಊರಿಗೆ ಹೋದಾಗ ಅಜ್ಜನಿಗೆ ಹೇಳಿದ.

ಅವರು ನಕ್ಕುಬಿಟ್ಟರು. ಆಮೇಲೆ ಎಂದರು: 'ಅಪ್ಪ ಅವ್ವ ಇಟ್ಟ ಹ್ಯಸರು ಬ್ಯಾಡ ಅಂತೀಯ. ಈ ಅಪ್ಪ ಅಮ್ಮನೇ ಬ್ಯಾಡ ಅಂದ ಹಂಗೆ ಅಲ್ವಾ ಅದು?'

'ಅದ್ ಹ್ಯಂಗ್ ಆಯ್ತುವಜ್ಜ?'

'ಗೌಡ ಅಂದ್ರೆ ಮನೆತನದ ಮರ್ಯಾದೆ, ಗೌರವ ಇದ್ದಂಗೆ; ಬಿರುದು ಇದ್ದಂಗೆ. ಅದೇ ಬ್ಯಾಡ ಅಂದ್ರೆ ಅಪ್ಪ ಅವ್ವನೇ ಬ್ಯಾಡ ಅಂದ್ಹಂಗೇ ಅರ್ತ.'

ಈ ಅಜ್ಜನ ಕೈಲಿ ಯಾವುದನ್ನೂ ವಾದಮಾಡುವುದು ಕಷ್ಟವೆಂದು ಅವನಿಗೆ ಗೊತ್ತಿತ್ತು. ಈಗಲೂ ಕಷ್ಟವೇ ಆಯಿತು. ಗೌಡ ಎಂಬ ಹೆಸರು ಬೇಡ, ಕಾಲೇಜಿನಲ್ಲಿ ಉಳಿದ ಹುಡುಗರೆಲ್ಲ ಲೇವಡಿ ಮಾಡ್ತಾರೆ; ಅದು ಹಳ್ಳಿಯ ಹೆಸರು ಅಂತಾರೆ ಎಂಬ ಕಾರಣಗಳನ್ನು ಹೇಳಿದ. ಜಾತಿಸೂಚಕವು ಹೆಸರಿನ ಮುಂದೆ ಇರುವುದು ತನಗೆ ಇಷ್ಟವಿಲ್ಲವೆಂದು ನಿಜ ಹೇಳಿದ್ದರೆ ಅವರು ಸುಮ್ಮನಿರುತ್ತಿರಲಿಲ್ಲವೆಂಬುದು ಅವನಿಗೆ ಗೊತ್ತು. ಅವರೆಂದರು: 'ಗೌಡ ಅನ್ನಾದು ಬ್ಯಾಡ ಅಂದ್ರೆ ರಾಜ ಅಂತ ಮಡೀಕೊ. ತಿರುಮಲೇಶರಾಜ ಅಂದ್ಕೊ. ಚಂದ.'

'ರಾಜ ಅಂತ ಹ್ಯಾಗೆ ಇಟ್ಕಳಾದು? ನಾವೇನು ರಾಜರೇ? ರಾಜ ಮಹಾರಾಜರ ಕಾಲ ಮುಗಿದ್ಹೋಯ್ತು.'

'ರಾಜ್ಯ ಆಳಿದೋರ ಮನೆ ನಮ್ದು.'

ಅಜ್ಜನ ಕೈಲಿ ಹೆಚ್ಚು ವಾದಿಸುವುದರಿಂದ ಪ್ರಯೋಜನವಿಲ್ಲವೆಂದು ಅವನು ಸುಮ್ಮನಾದ. ತಂದೆ ತಾಯಿಗಳನ್ನು ಕೇಳಬೇಕು. ಕಾಲ ಬದಲಾಗಿರುವುದು ಅಜ್ಜನಿಗಿಂತ ಅಪ್ಪನಿಗೆ ಚನ್ನಾಗಿ ಗೊತ್ತಿದೆ ಎಂದುಕೊಂಡು ಬೆಂಗಳೂರಿಗೆ ಹೋದ. ಅಪ್ಪ ಆಗ ಅಸೆಂಬ್ಲಿ ಮೆಂಬರಾಗಿದ್ದರು; ಇನ್ನೂ ಮಂತ್ರಿಗಳಾಗಿರಲಿಲ್ಲ. ಆದರೂ ಒಂದು ಬಾಡಿಗೆ ಮನೆ ಮಾಡಿಕೊಂಡು ಬೆಂಗಳೂರಿನಲ್ಲೇ ವಾಸಮಾಡುತ್ತಿದ್ದರು. ಗೌಡ ಎಂಬ ಹೆಸರನ್ನು ತೆಗೆದುಹಾಕಲು ಅಪ್ಪ ಆಕ್ಷೇಪ ತೆಗೆಯಲಿಲ್ಲ; ಅವ್ವನಿಂದಲೂ

ವಿರೋಧ ಬರಲಿಲ್ಲ. ಆದರೆ ಯಾವ ದೇವರ ಹರಕೆಯಿಂದ ಅವನು ಜೀವಾಪಾಯವಿಲ್ಲದೆ ಹುಟ್ಟಿದನೋ, ಹೆರಿಗೆಯಲ್ಲಿ ತಾನು ಬದುಕಿಕೊಂಡಳೋ, ಆ ಹೆಸರನ್ನೇ ಬಿಟ್ಟು ರಜನೀಶ ಎಂಬ ಸಿನಿಮಾ ರೀತಿಯ ಹೆಸರಿಟ್ಟುಕೊಳ್ಳಲು ತಾಯಿ ಉಗ್ರವಾಗಿ ವಿರೋಧಿಸಿದಳು. ಅಪ್ಪ ತಮ್ಮ ಅಭಿಪ್ರಾಯವನ್ನು ನೇರವಾಗಿ ಹೇಳಲಿಲ್ಲ. 'ನಿಮ್ಮವ್ವ ಹೇಳೂದು ನ್ಯಾಯ' – ಎಂದರು. ಗೌಡ ಎಂಬುದನ್ನು ಬಿಟ್ಟು ಬರೀ ತಿರುಮಲೇಶ ಎಂದಿಟ್ಟುಕೊಂಡರೆ ಆಯಿತು ಎಂದು ಸಲಹೆ ಮಾಡಿದರು. ಆದರೆ ರಜನೀಶ ಎಂಬ ಹೆಸರಿನ ಆಕರ್ಷಕ ಪ್ರಖರತೆಯಲ್ಲಿ ತಿರುಮಲೇಶ ಎಂಬುದು ಮಂಕಾಗಿ ಕಾಣುತ್ತಿದ್ದುದರಿಂದ ಅವನು ಒಪ್ಪಲಿಲ್ಲ. ಈಗ ಇರುವ ದೇವರ ಹೆಸರನ್ನು ಬಿಲ್‌ಕುಲ್ ಬದಲಾಯಿಸಕೂಡದೆಂದು ತಾಯಿ ಹಟಹಿಡಿದಳು. ಮಧ್ಯಸ್ಥಿಕೆಯ ಸೂತ್ರವೆಂದು ತಂದೆ ಸಲಹೆ ಮಾಡಿದರು: 'ಶ್ರೀನಿವಾಸ ಅಂತ ಮಾಡಿಕೊ. ಅದೇ ದೇವರ ಹೆಸರೇ ಆಯ್ತು. ಗೌಡ ಅನ್ನೂದ ಬಿಟ್ಟುಬಿಡು.'

ಇದು ತಾಯಿಗೂ ಒಪ್ಪಿತು. ಬೇರೆ ಉಪಾಯವಿಲ್ಲದ್ದರಿಂದ ಅವನಿಗೂ ಒಪ್ಪಿತು.

ಮೈಸೂರಿಗೆ ಬಂದು ಸತ್ಯಳ ಕೈಲಿ, ತನಗೆ ನಿಶ್ಚಯವಾದ ಹೊಸ ಹೆಸರನ್ನು ಹೇಳಿದಾಗ ಅವಳೆಂದಳು: 'ಹಳೇದುಕ್ಕಿಂತ ಇದು ಉತ್ತಮ. ಆದರೆ ವೈಷ್ಣವ ಮನೆ ದೇವರ ಹೆಸರನ್ನು ಎತ್ತಿತೋರಿಸುತ್ತೆ.'

ಅಂತೂ ತಿರುಮಲೇಶಗೌಡ ಹತ್ತು ರೂಪಾಯಿ ಕೊಟ್ಟು, ಮ್ಯಾಜಿಸ್ಟ್ರೇಟರ ಮುಂದೆ ಪ್ರಮಾಣ ಪತ್ರ ಸಲ್ಲಿಸಿ ಶ್ರೀನಿವಾಸನಾದ. ಕಾಲೇಜಿನ ಸಹಪಾಠಿಗಳು ಕೀಟಲೆಗೆ ಹಳೆಯ ಹೆಸರನ್ನೇ ಕೂಗುತ್ತಿದ್ದರು. ಕೆಲವರು ಶ್ರೀನಿವಾಸಗೌಡನೆನ್ನುತ್ತಿದ್ದರು. ಮತ್ತೆ ಕೆಲವರು, 'ಸ್ವೀಟು ಖಾರ ಕಾಫಿ ಕುಡಿಸಿದರೇ ನಿನ್ನ ಹೊಸ ನಾಮಕರಣಾ ಒಪ್ಪಿಕೊತ್ತೀವಿ' ಎಂದು, ಕಾಲೇಜು ಕ್ಯಾಂಟೀನಿನಲ್ಲಿ ಅವನಿಂದ ಕಾಸು ಖರ್ಚು ಮಾಡಿಸಿದರು. ಕೆಲವು ತಿಂಗಳುಗಳಲ್ಲಿ ಮೈಸೂರಿನಲ್ಲಿ ಅವನು ಶ್ರೀನಿವಾಸನಾದ. ಊರಿನಲ್ಲಿ ಮಾತ್ರ ಹಳೇ ಹೆಸರು ಹೋಗುವುದು ಸಾಧ್ಯವಿರಲಿಲ್ಲ. ಊರಿನ ಬ್ರಾಹ್ಮಣರು, 'ಹೆಸರು ಬದಲಾಯಿಸ್ಕಂಡ್‌ರೆ ಕಾಗೆ ಕೋಗಿಲೆಯಾಗುತ್ತೆಯೆ?' – ಎಂದು ತಮ್ಮತಮ್ಮಲ್ಲಿಯೇ ಟೀಕೆ ಮಾಡಿಕೊಂಡರು. ಮೊದಲಿನಿಂದ ಕೂಗುತ್ತಿದ್ದ ಮಲ್ಲೇಶ ಎನ್ನುವ ಅಭ್ಯಾಸವನ್ನು ಅವನ ಮನೆಯವರು ಮಾತ್ರ ಬಿಡಲಿಲ್ಲ.

## ೭

ಮತ್ತೆ ನಾಲ್ಕು ದಿನ ಕಳೆದರೂ ಶ್ರೀನಿವಾಸ ಅವಳ ರೂಮಿಗೆ ಬರಲಿಲ್ಲ. ಈಗ ಬಂದಾನು ಆಗ ಬಂದಾನು, ಅಕಸ್ಮಾತ್ ತಾನು ಇಲ್ಲದಿರುವಾಗ ಬಂದಾನು ಎಂದು ನಿರೀಕ್ಷಿಸುತ್ತಾ, ಅವಳು ಕಾಲೇಜಿಗೆ ಹೋಗಿ ಪಾಠ ಹೇಳಿ ಬರುವುದು ಮತ್ತು ಹೋಟೆಲಿನಲ್ಲಿ ತಿಂಡಿ ಊಟ ಮಾಡುವುದನ್ನು ಬಿಟ್ಟರೆ, ಉಳಿದಂತೆಲ್ಲ ಕೋಣೆಯಲ್ಲಿಯೇ ಇರುತ್ತಿದ್ದಳು. ಮತ್ತೊಂದು ಸಲ ಮಂತ್ರಿಗಳ ಮನೆಗೆ ಫೋನ್ ಮಾಡಿದಳು. ಯಾರೋ ರಿಸೀವರ್ ಎತ್ತಿಕೊಂಡು ಮಾತನಾಡಿದರು. ತಾವು ಮಂತ್ರಿಗಳ ಆಪ್ತಸಹಾಯಕರೆಂದು ಹೇಳಿದರು. 'ಮಂತ್ರಿಗಳ ಹೆಂಡತಿ ಮತ್ತು ಮಗ ಊರಿಗೆ ಹೋಗಿದಾರೆ. ಯಾವಾಗ ಬತ್ತಾರೋ ಗೊತ್ತಿಲ್ಲ. ಯಾವಾಗ ಬತ್ತಾರೆ ಅಂತ ನಾನು ಅವರನ್ನ ಕೇಳೂದು ಹ್ಯಾಗೆ? ಮಂತ್ರಿಗಳು ಮಾತ್ರ ಎಲ್ಲೋ ಹೊರಗೆ ಹೋಗಿದಾರೆ. ನಿಮ್ಮ ಹೆಸರೇನು?'

'ಸತ್ಯಭಾಮಾ' – ಎಂದು ಅವಳು ಸಹಜವಾಗಿ ಹೇಳಿದಳು.

ಎಂದರೆ ಶ್ರೀನಿವಾಸ ಊರಿಗೆ ಹೋಗಿ ಆರೇಳು ದಿನದ ಮೇಲಾಗಿದೆ. ತಾಯಿಯೂ ಅಲ್ಲೇ ಇದ್ದಾರೆ. ಈಗ ಯಾವುದೂ ಹಬ್ಬ ಹುಣ್ಣಿಮೆ ಇಲ್ಲ. ಇದರ ಅರ್ಥವೇನು? ಅವಳ ಮನಸ್ಸಿಗೆ ಆತಂಕವಾಯಿತು. ಈ ಮದುವೆಯನ್ನು ತಪ್ಪಿಸಲು ಅವರು ಅವನನ್ನು ಊರಿಗೆ ಕರೆದುಕೊಂಡು ಹೋಗಿರಬೇಕು. ಅಲ್ಲಿ ಅಜ್ಜನ ಕೈಲಿ ಹೇಳಿಸಿರಬೇಕು. ಅವರನ್ನು ಬಿಟ್ಟರೆ ಅವನಿಗೆ ಹೇಳುವಂಥವರು, ಹೇಳಿಸುವಂಥವರು ಯಾರೂ ಇಲ್ಲ. ಆದರೆ ಅವನ್ಯಾಕೆ ಅಲ್ಲಿ ಉಳಿದಿದ್ದಾನೆ? ಬಲವಂತವಾಗಿ ಕಟ್ಟಿ ಕೂರಿಸಲು ಮಗುವೇನಲ್ಲ. ಅಥವಾ ಕಾಹಿಲೆ ಗೀಹಿಲೆ ಬಿದ್ದಿದಾನೊ? ಕಾಹಿಲೆಯೇ ಆಗಿದ್ದರೆ ಬೆಂಗಳೂರಿಗೆ ಕರ್‌ಕೊಂಡು ಬರೂದ ಬಿಟ್ಟು ಊರಿನಲ್ಲಿ ಯಾಕೆ ಇಟ್ಕೊಂತಿದ್‌ರು. ಬೇರೆ ಯಾವುದೇ ಕೆಲಸಕ್ಕೆ ಅಂತ ಹೋಗಿ ಅಲ್ಲಿ ಉಳಿಯುವ ಸಂದರ್ಭ ಬಿದ್ದಿದ್ದರೂ, ಅವನು ಇಷ್ಟು ದಿನವಾದರೂ ಒಂದು ಕಾಗದಾನಾದ್‌ರೂ ಯಾಕೆ ಬರೀಲಿಲ್ಲ? ರೂಮಿನ ವಿಳಾಸ ನೆನಪಿಲ್ಲದೆ ಇರಬಹುದು. ಕಾಲೇಜಿನ ವಿಳಾಸಕ್ಕೆ ಬರೀಬಹುದಲ್ಲ?

ಅಧ್ಯಾಪಕರ ಕೋಣೆಯ ಒಂದು ಬೋರ್ಡಿಗೆ, ಅಧ್ಯಾಪಕರಿಗೆ ಬಂದ ಕಾಗದ ಗಳನ್ನು ಸಿಕ್ಕಿಸುತ್ತಿದ್ದರು. ಅವಳು ದಿನಾ ಆ ಬೋರ್ಡನ್ನು ನೋಡುತ್ತಿದ್ದಳು. ಅಕಸ್ಮಾತ್ ಮರೆತು ಆಫೀಸಿನಲ್ಲಿ ಹಾಕಿದ್ದಾರೆಂದು, ಅಲ್ಲಿ ಕೂಡ ವಿಚಾರಿಸಿದಳು. ವಿದ್ಯಾರ್ಥಿಗಳ ಕಾಗದಗಳನ್ನು ಹಾಕುವ ಬೋರ್ಡಿನಲ್ಲಿ ನೋಡಿ ಬರುವಂತೆ ಜವಾನನನ್ನು ಕಳಿಸಿದಳು. ಮತ್ತೆ ಎರಡು ದಿನವಾಯಿತು. ಅವನ ಮುಖವೂ ಇಲ್ಲ.

ಒಂದು ಕಾಗದವೂ ಇಲ್ಲ. ಇದುವರೆಗೂ ಇದ್ದ ಆತಂಕ ಈಗ ಅನುಮಾನಕ್ಕೆ ತಿರುಗಿತು. ಎಂಥದೇ ಸಂದರ್ಭ ಬಂದು ಊರಿನಲ್ಲಿ ಉಳಿದಿರಲಿ, ಒಂದು ಕಾಗದ ಬರೆಯಲು ಅವನನ್ನು ತಡೆಯುವವರು ಯಾರೂ ಇಲ್ಲ. ಅಷ್ಟು ಮಾಡದಿರುವುದನ್ನು ನೋಡಿದರೆ ಅವನ ಮನಸ್ಸೇ ಬದಲಾಯಿಸಿದೆ; ತಾಯಿ ಅಜ್ಜ ತಂದೆಯರ ಬಲ ವಂತಕ್ಕೆ ಬಲಿಬಿದ್ದಿದೆ. ಈ ಅನುಮಾನವನ್ನು ಸಹ ಸಹಿಸುವುದು ಅವಳಿಗೆ ಸಾಧ್ಯ ವಾಗಲಿಲ್ಲ. ಕಣ್ಣಿನಲ್ಲಿ ನೀರು ತುಂಬಿಕೊಂಡಿತು. ಅರ್ಧ ನಿಮಿಷದಲ್ಲಿ ಒತ್ತಿಕೊಂಡು ಅಳು ಬಂತು. ಕೋಣೆಯ ಬಾಗಿಲು ಹಾಕಿತ್ತು. ಗಟ್ಟಿಯಾಗಿ ಎರಡು ನಿಮಿಷ ಅತ್ತೂ ಬಿಟ್ಟಳು. ಹೊರಗಿನ ಪದ್ಮನಾಭಾಚಾರ್ಯ ಮತ್ತು ಫಲ್ಗುಬಾಯಿಯವರಿಗೆ ಕೇಳಿಸೀತೆಂದು ಸೆರಗನ್ನು ಬಾಯಿಗೆ ಕೊಟ್ಟು ಅಳುವಿನ ಸದ್ದನ್ನು ಕಡಿಮೆಮಾಡಿ ಕೊಂಡಳು. ಹತ್ತು ನಿಮಿಷದ ಮೇಲೆ ತನಗೆ ತಾನೇ ಎಂದುಕೊಂಡಳು: ವಾಸ್ತವವಾಗಿ ಅಲ್ಲಿ ಏನಾಗಿದೆಯೋ ಗೊತ್ತಿಲ್ಲ. ಇಲ್ಲದ ಯೋಚನೆ ಮಾಡಿಕೊಂಡು ನಾನ್ಯಾಕೆ ಅತ್ತೆ? ತಾವು ಕಂಡ ಆಟ ಆಡುವುದು ಅವರ ಮಟ್ಟಿಗೆ ಸಹಜವೇ. ಈ ಆಟದಲ್ಲಿ ನನ್ನ ಅಪ್ಪ, ಅಣ್ಣ, ಅವನ ಅಜ್ಜ, ಅಮ್ಮ, ಅಪ್ಪ, ಎಲ್ಲ ಒಂದು ಗೂಡಿರುತ್ತಾರೆ. ಆದರೆ ಅವನೊಬ್ಬ ಗಟ್ಟಿಯಾಗಿ ನಿಂತರೆ ಇವರಲ್ಲ, ಇಡೀ ಊರಿನ ಜನ ಸೇರಿದರೂ ಏನೂ ಮಾಡುವ ಹಾಗಿಲ್ಲ.

ಆದರೆ ಅವನು ಒಂದು ಕಾಗದ ಕೂಡ ಯಾಕೆ ಬರೆದಿಲ್ಲ – ಎಂಬ ಪ್ರಶ್ನೆಗೆ ಸಮಂಜಸವಾದ ಬೇರೆ ಉತ್ತರ ಹೊಳೆಯಲಿಲ್ಲ. ಬುದ್ಧಿಗೆ ಹೊಳೆದು ಸಮಂಜಸ ವಾಗಿ ಕಾಣುವ ಕಾರಣವನ್ನು, ಮನಸ್ಸಿಗೆ ಅಪ್ರಿಯವಾಗುತ್ತದೆಂಬ ಕಾರಣದಿಂದ ತಳ್ಳಿಹಾಕುವುದು ಅವಳ ಸ್ವಭಾವವಾಗಿರಲಿಲ್ಲ. ಅವನು ಅವರ ಒತ್ತಡಕ್ಕೆ ಪಕ್ಕಾ ಗಿರುವುದೇ ನಿಜವೆಂದು ಭಾವಿಸಿಕೊಂಡಳು. ಹುಡುಗ ಹುಡುಗಿಯರು ಸ್ವಾತಂತ್ರ್ಯ ವಹಿಸಿ ಮದುವೆಯಾಗಹೋಗುವ ನೂರಕ್ಕೆ ತೊಂಭತ್ತು ಭಾಗ ಆಗುತ್ತಿರುವುದೇ ಹೀಗೆ. ಇದೂ ಹೀಗಾದರೆ ಆಶ್ಚರ್ಯವಲ್ಲ ಎಂದು ಅವಳ ಬುದ್ಧಿಯೇ ಹೇಳಿತು. ಆದರೆ ಶ್ರೀನಿವಾಸ ಹಾಗೆ ಮಾಡುವನೆ? ಚಿಕ್ಕಂದಿನಿಂದ ಜೊತೆಯಲ್ಲಿ ಬೆಳೆದು, ಕಾಲೇಜಿನಲ್ಲಿ ಜೊತೆಯಲ್ಲಿ ಓದಿ, ಭವಿಷ್ಯದ ಬಗೆಗೆ ಇಷ್ಟೆಲ್ಲ ಕನಸು ಕಂಡಮೇಲೆ ಅವನು ಹಿರಿಯರಿಗೆ ಬಲಿಬೀಳುತ್ತಾನೆಯೆ? – ಎಂಬ ಸಮಾಧಾನವನ್ನು ಮನಸ್ಸು ಕೊಟ್ಟಿತು. ಪೂರ್ತಿ ವಿಷಯ ತಿಳಿಯದಿರುವಾಗ ಕಲ್ಪನೆಯಲ್ಲಿ ತೊಡಗುವುದಕ್ಕಿಂತ ಸುಮ್ಮನಿರುವುದು ಮೇಲು ಎಂದುಕೊಂಡು ಸಮಾಧಾನದಿಂದಿರಲು ಯತ್ನಿಸಿದಳು. ಆದರೆ ಈ ಬಗೆಯ ಸಾವಧಾನ ಸಮಾಧಾನಗಳು ಇಂತಹ ವಿಷಯಗಳಲ್ಲಿ ಅಸಾಧ್ಯ ವಾಗಿತ್ತು. ಯಾಕೆ ಹೀಗೆ ಮಾಡಿದ ಅವನು – ಎಂಬ ಪ್ರಶ್ನೆ ಉತ್ತರ ಕಾಣದೆ ಅಲೆಯುತ್ತಿತ್ತು.

ಊರಿಗೆ ಹೋಗಿ ವಿಚಾರಿಸಿ ತಿಳಿಸುವವರು ಯಾರೂ ಇಲ್ಲ. ಬೆಟ್ಟಯ್ಯನವರಿಂದ ಏನಾದರೂ ಸುದ್ದಿ ತಿಳಿಯಬಹುದು. ಆದರೆ ಅಸೆಂಬ್ಲಿ ನಡೆಯುತ್ತಿಲ್ಲದ ಈಗ ಅವರು ಬೆಂಗಳೂರಿನಲ್ಲಿರುವುದಿಲ್ಲ. ತಾನೇ ಊರಿಗೆ ಹೋಗಿ ಬರಲೆ? – ಎಂಬ ಯೋಚನೆ ಬಂತು. ಈ ಸಮಯದಲ್ಲಿ ಹೋದರೆ ವೃಥಾ ಎಲ್ಲರ ಮನಸ್ಸಿಗೂ ಕಿರಿಕಿರಿ ಎಂದು ಸುಮ್ಮನಾದಳು. ಬೇಡ, ಇಲ್ಲಿಯೇ ಮೇಲಗಿರಿಗೌಡರ ಬಂಗ್ಲೆಗೆ ಹೋಗಿ ಬಂದರೆ ಹೇಗೆ? ಅಥವಾ ಫೋನು ಮಾಡಲೆ? – ಎನಿಸಿತು. ನನಗಿರುವ ಆತಂಕ ಅವನಿಗೂ ಇರುತ್ತದೆ, ಇರಬೇಕು. ಅವನೇ ಬರದಿರುವಾಗ ನಾನೇಕೆ ಸಮಾಧಾನದಿಂದಿರಬಾರದು? – ಎಂಬ ವಿಚಾರ ಇದ್ದಕ್ಕಿದ್ದಹಾಗೆಯೇ ಬಂದು ಸುಮ್ಮನಾಗಿಬಿಟ್ಟಳು. ಆದರೆ ಈ ನಿರ್ಧಾರ ಗಟ್ಟಿಯಾಗಿದ್ದುದು ಒಂದೇ ದಿನ ಮಾತ್ರ. ಮರುದಿನ ಬೆಳಗ್ಗೆ ಕಾಲೇಜಿಗೆ ಹೋಗುವಾಗ ಒಂದು ಹೋಟೆಲಿಗೆ ಹೋಗಿ, ಅಲ್ಲಿಂದ ಮಂತ್ರಿ ಮೇಲಗಿರಿಗೌಡರ ಬಂಗ್ಲೆಗೆ ಫೋನು ಮಾಡಿದಳು. ಹಲೋ ಎಂಬ ಧ್ವನಿ ಮತ್ತು ರೀತಿಯಲ್ಲಿ, ಫೋನು ಎತ್ತಿಕೊಂಡಿರುವವರು ರಂಗಮ್ಮನೆಂದು ತಿಳಿಯಿತು. ಅವರನ್ನು ಹೇಗೆ ಕೇಳುವುದು ಎಂಬ ಸಂಕೋಚ, ಅನುಮಾನ, ಭಯಗಳೂ ಉಂಟಾದುವು.

'ಯಾರು ಮಾತಾಡಾರೂ?' – ರಂಗಮ್ಮ ಕೇಳಿದಳು.

'ಶ್ರೀನಿವಾಸ್ ಬೇಕಾಗಿತ್ತು.'

'ನೀವ್ಯಾರು ಹ್ಯೇಳಿ.'

'ಸತ್ಯಭಾಮಾ.'

'ಆಹಾ ತಾಟಗಿತ್ತಿ ನಮ್ಮವ್ವ. ಅವನು ಬೆಂಗಳೂರಾಗಿಲ್ಲ. ನಿನ್ನ ಪಾಡಿಗ್ ನೀನಿರು. ತಿಮ್ಲಾಪುರದಾಗೆಲ್ಲ ಮರ್ವಾದೆ ಹೋಗ್ಯದೆ ನಿಂದು. ಅವ್ನು ಗಂಡು ಹುಡ್ಗ. ಯಾರೂ ಕೇಳೂದಿಲ್ಲ. ನೀನು ಹಿಂಗಾಗಬೌದಾ ದಗಾಬಾಜಿ?'

ಫೋನಿನಲ್ಲಿ ಈ ರೀತಿಯ ಮಾತು ನಡೆಯುತ್ತದೆಂದು ಅವಳು ನಿರೀಕ್ಷಿಸಿರಲಿಲ್ಲ. ರಂಗಮ್ಮ ಫೋನು ಎತ್ತಿಕೊಳ್ಳುತ್ತಾರೆಂದೂ ಕಲ್ಪಿಸಿಕೊಂಡಿರಲಿಲ್ಲ. ಅವರಿಗೆ ತಕ್ಷಣ ಏನು ಉತ್ತರ ಕೊಡಬೇಕೆಂಬುದೂ ಹೊಳೆಯಲಿಲ್ಲ. ಅಲ್ಲದೆ ಅವಳು ಗಲ್ಲಾ ಮೇಜದ ಪಕ್ಕದಲ್ಲಿ ನಿಂತು ಮಾತನಾಡುತ್ತಿದ್ದಳು. ಮಾಲೀಕನು ಹತ್ತಿರವೇ ಕುಳಿತಿದ್ದಾನೆ. ಬಿಲ್ಲಿನ ದುಡ್ಡು ಕೊಡಲು ನಿಂತಿರುವ ಮೂವರು ಗಿರಾಕಿಗಳ ಕಿವಿಯು ಇವಳ ಬಾಯಿಯ ಕಡೆಗೇ ಇದೆ. ಹೆಂಗಸು ಹೋಟೆಲಿನಿಂದ ಫೋನು ಮಾಡುತ್ತಿರುವಾಗ ಜನರ ಕುತೂಹಲ ಅಸಾಧ್ಯ ಎಂಬ ಅರಿವಾಗಿ ಅವಳು ಮಾತನಾಡಲಿಲ್ಲ.

ರಂಗಮ್ಮನೇ ಎನ್ನುತ್ತಿದ್ದರು: '....ಕುದುರೆ ಗೊಂತ್ನಾಗೆ ಕುದುರೆ ಇರಬೇಕು.

ಕತ್ತೆ ಗೊಂತ್ನಾಗೆ ಕತ್ತೆ ಇರಬೇಕು. ನಿನ್ನ ಜಾತಿ ಮರ್ಯಾದಿ ಮರ್ತು ಬ್ಯಾರೆಯೋರ ತಣಿಗೇಲಿ ಎಂಜಲು ತಿನ್ನಾಕ್ ಯಾಕ್ ಬತ್ತೀಯೇ ನನ್ ತಾಯಿ!....'

ಅವಳು ತಕ್ಷಣ ರಿಸೀವರನ್ನು ಕೆಳಗಿಟ್ಟುಬಿಟ್ಟಳು. ನಾಲ್ಕಾಣೆ ಬಿಲ್ಲೆಯನ್ನು ಗಲ್ಲಾದ ಮೇಲಿಟ್ಟು ಕಾಲೇಜು ಕಡೆಗೆ ಹೆಜ್ಜೆ ಹಾಕಿದಳು. ಹಳ್ಳಿಯಲ್ಲೇ ಹುಟ್ಟಿ ಬೆಳೆದ ಅವಳಿಗೆ ಈ ಮಾತುಗಳಲ್ಲಿ ಹೊಸತೇನೂ ಇರಲಿಲ್ಲ. ಆದರೆ ತನ್ನನ್ನು ಇದುವರೆಗೆ ಯಾರೂ ಇಂತಹ ಮಾತುಗಳಿಂದ ಆಡಿರಲಿಲ್ಲ. ಅಪಮಾನವಾದಂತಾಗಿ ಮನಸ್ಸು ಕುದಿಯುತ್ತಿತ್ತು. ಈ ಮನಃಸ್ಥಿತಿಯಲ್ಲಿ ತರಗತಿಗೆ ಹೋದರೂ ವಿದ್ಯಾರ್ಥಿಗಳ ಎದುರಿಗೆ ನಿಂತು ಪಾಠ ಹೇಳುವುದು ಸಾಧ್ಯವಿಲ್ಲವೆನಿಸುತ್ತಿತ್ತು. ಹಾಗೆಯೇ ಕಾಲೇಜಿಗೆ ನಡೆದು ಅಧ್ಯಾಪಕರ ಕೋಣೆಗೆ ಹೋಗಿ ಕುಳಿತಳು. ಇವಳು ಹೋದ ಒಂದು ನಿಮಿಷದಲ್ಲಿ ಜವಾನ ಒಂದು ಕಾಗದವನ್ನು ತಂದು ಅವಳ ಮುಂದಿಟ್ಟ. ಲಕೋಟೆ. ಶ್ರೀನಿವಾಸನ ಅಕ್ಷರದ ತನ್ನ ಹೆಸರು ವಿಳಾಸಗಳು. ಏನು ಬರೆದಿರಬಹುದೆಂದು ಅವಳ ಅಂತಃಪ್ರಜ್ಞೆಯೇ ಥಟ್ಟನೆ ಹೇಳಿತು. ಆದರೂ ಕಾತರದಿಂದ ಲಕೋಟೆಯನ್ನು ಹರಿದು ಓದಿಕೊಂಡಳು. ಮೈಸೂರು ಎಂದು ಊರಿನ ಹೆಸರು ಮತ್ತು ವಿಳಾಸವನ್ನು ಹಾಕಿ ಅವನು ಬರೆದಿದ್ದ:

ಸತ್ಯ,

ನಾನು ಅನಿರೀಕ್ಷಿತ ಮತ್ತು ದುಃಖದಾಯಕವಾದ ತೀರ್ಮಾನಕ್ಕೆ ಬಂದಿದ್ದೇನೆ. ಇದರಿಂದ ನನಗಾಗಿರುವಂತೆ ನಿನಗೂ ತುಂಬ ದುಃಖವಾಗುತ್ತದೆಂದು ಬಿಚ್ಚಿ ಬರೆಯಬೇಕಾಗಿಲ್ಲ. ಆದರೆ ನಾವಿಬ್ಬರೂ ಇದನ್ನು ಸಹಿಸಬೇಕು. ಆ ಶಕ್ತಿಯು ನನಗಿಂತ ನಿನಗೆ ಹೆಚ್ಚಾಗಿದೆ ಎಂದು ನಾನು ಬಲ್ಲೆ.

ವರ್ಣಧರ್ಮದಲ್ಲಿ ನನಗೆ ಈಗಲೂ ವಿಶ್ವಾಸವಿಲ್ಲ. ಆದರೆ ಈ ವ್ಯವಸ್ಥೆಯು ಸೃಷ್ಟಿಸಿರುವ ಅಂತರವನ್ನು ದಾಟಿ ಒಂದಾಗುವ ಕಾಲ ಇನ್ನೂ ಬಂದಿಲ್ಲ. ಮದುವೆ ಎಂಬುದು ಬರೀ ಗಂಡು ಹೆಣ್ಣುಗಳ ಪರಸ್ಪರ ಸುಖಕ್ಕಾಗಿ ಮಾಡಿಕೊಳ್ಳುವ ವ್ಯವಸ್ಥೆಯಲ್ಲ. ಎಲ್ಲರೂ ಒಪ್ಪಿ ನಡೆಸಬೇಕಾದುದು. ಇನ್ನು ಎರಡು ಮೂರು ತಲೆಮಾರು ಕಳೆದನಂತರ ಸಮಾಜದ ಶ್ರದ್ಧೆ ಮನೋಭಾವಗಳು ವಿಶಾಲವಾಗಿ ಬೆಳೆದು, ವರ್ಣವ್ಯವಸ್ಥೆಯನ್ನು ದಾಟಲು ಯುವಕ ಯುವತಿಯರಿಗೆ ಸಾಧ್ಯವಾಗಬಹುದೇನೋ! ನಾವು ಈಗಲೇ ಆ ಕೆಲಸವನ್ನು ಸಾಧಿಸಹೊರಟರೆ ಇಲ್ಲದ ಅನಾಹುತವಾಗಬಹುದು. ನನ್ನ ತಾಯಿ ನೇಣುಗಟ್ಟಿಕೊಳ್ಳಬಹುದು. ನಿನ್ನ ತಂದೆ ಕೊರಗಿನಿಂದ ಸಾಯಬಹುದು. ಇಂಥವೇನಾದರೂ ಆದರೆ ನಮ್ಮಿಬ್ಬರಲ್ಲಿ ಯಾರೂ ಸುಖವಾಗಿರುವುದಿಲ್ಲ.

ಇವನು ಗೊಡ್ಡು ಮುದುಕರು ಆಡುವ ಬುದ್ಧಿವಂತಿಕೆಯ ಮಾತುಗಳನ್ನು ಬರೆಯುತ್ತಿದ್ದಾನೆ ಎಂದುಕೊಳ್ಳಬೇಡ. ಊರಿನಲ್ಲಿ ದೇವಸ್ಥಾನಕ್ಕೆ ಹೋಗಿದ್ದೆ. ನಿನ್ನ ತಂದೆ ಮಂಗಳಾರತಿ ಮಾಡುತ್ತಿದ್ದರು. ದೇವರ ಮುಂದೆ ನಿಂತು ಯೋಚಿಸುತ್ತಿರುವಾಗ ಇದ್ದಕ್ಕಿದ್ದಹಾಗೆಯೇ ನನ್ನ ಅಂತರಾತ್ಮವು ಹೀಗೆ ನುಡಿಯಿತು. ಅದನ್ನು ಮುಚ್ಚುವುದು ಸಾಧ್ಯವಾಗಲಿಲ್ಲ.

ಊರಿನಲ್ಲಿರಲು ಸಾಧ್ಯವಾಗಲಿಲ್ಲ. ಬೆಂಗಳೂರಿನಲ್ಲಿ ಕೂಡ ಇರಲಾರೆ. ಆದುದರಿಂದ ಫೇಲಾಗಿರುವ ಬಿ.ಎಲ್. ಪರೀಕ್ಷೆಗೆ ಕೂತು ಮತ್ತೆ ಓದುತ್ತೇನೆಂಬ ನೆಪಹಾಕಿ ಮೈಸೂರಿಗೆ ಬಂದಿದ್ದೇನೆ. ಈ ಊರಿನಲ್ಲಿ ಯಾವ ಬೀದಿಯಲ್ಲಿ ತಿರುಗಿದರೂ ನಿನ್ನ ನೆನಪೇ ತುಂಬಿದೆ. ನಿನ್ನ ಉಸುರಿನ ಸ್ಪರ್ಶವಿಲ್ಲದ ಗಾಳಿಯು ಈ ನಗರದಲ್ಲಿರುವುದು ಸಾಧ್ಯವಿಲ್ಲ. ನಿನ್ನ ನೆನಪೊಂದೇ ನನ್ನ ಮುಂದಿನ ಜೀವನ. ಬೇರೆ ಹೆಣ್ಣು ನನ್ನ ಜೀವನವನ್ನು ಪ್ರವೇಶಿಸುವುದು ಎಂದೆಂದಿಗೂ ಸಾಧ್ಯವಿಲ್ಲ. ದೇವರಾಣೆಗೂ. ನನ್ನನ್ನು ಮರೆತುಬಿಡು.

ಊರಿನಲ್ಲಿ ನಿನ್ನ ತಂದೆ ಕೃಶರಾಗಿದ್ದಾರೆ. ವೆಂಕಟೇಶ ಚನ್ನಾಗಿದ್ದಾನೆ.

ಇತಿ ನಿರ್ಭಾಗ್ಯ, ಶ್ರೀನಿವಾಸ.

ಕಾಗದವನ್ನು ಓದಿದ ತಕ್ಷಣ ಸತ್ಯಳ ಬುದ್ಧಿಗೆ ಮಂಕುಹಿಡಿದಂತಾಯಿತು. ಇದೇನು ಇವನೇ ಬರೆದಿದ್ದಾನೆಯೋ, ಅಥವಾ ಯಾರಾದರೂ ಹೇಳಿ ಬರೆಸಿದರೋ ಎಂಬ ಅನುಮಾನವಾಯಿತು. ಶ್ರೀನಿವಾಸ ಹೀಗೆ ಬರೆಯುತ್ತಾನೆಂದು ಕಲ್ಪಿಸಿಕೊಳ್ಳುವುದೂ ಸಾಧ್ಯವಿರಲಿಲ್ಲ. ಒಳಗಿನಿಂದ ಅಳು ಉಕ್ಕಿಬಂತು. ತಾನು ಕೂತಿರುವುದು ಅಧ್ಯಾಪಕರ ಕೋಣೆಯಲ್ಲಿ ಎಂಬ ಅರಿವಾಯಿತು. ಆದರೆ ಸಮಾಧಾನಪಡಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಪರ್ಸ್ ಎಡಮೊಣಕೈಯಲ್ಲಿತ್ತು. ಶ್ರೀನಿವಾಸನ ಕಾಗದವನ್ನು ಹಾಗೆಯೇ ಕೈಯಲ್ಲಿ ಹಿಡಿದು ಕೋಣೆಯ ಹೊರಗೆ ಬಂದಳು. ಎಲ್ಲ ತರಗತಿಗಳಲ್ಲೂ ಪಾಠ ನಡೆಯುತ್ತಿದ್ದುದರಿಂದ ಯಾವ ಹುಡುಗರೂ ಎದುರಿಗೆ ಇರಲಿಲ್ಲ. ನೇರವಾಗಿ ಹೊರಗಿನ ಗೇಟನ್ನು ದಾಟಿ ರಸ್ತೆಗೆ ಬಂದಳು. ಏನು ಮಾಡಬೇಕು, ಎಲ್ಲಿಗೆ ಹೋಗಬೇಕು ಎಂಬುದು ತಿಳಿಯಲಿಲ್ಲ. ಒಂದು ಮರದ ಕೆಳಗೆ ನಿಂತು ಸೆರಗಿನಿಂದ ಕಣ್ಣನ್ನು ಒರಸಿಕೊಂಡಳು. ತಡೆಯಲಾರದಷ್ಟು ಅಳು ಒತ್ತಿ ಒತ್ತಿಕೊಂಡು ಉಕ್ಕಿತು. ಸುಮ್ಮನೆ ಬಿಕ್ಕಿಬಿಕ್ಕಿ ಅತ್ತುಬಿಟ್ಟಳು. ಬೀದಿಯಲ್ಲಿ ಹೋಗುತ್ತಿದ್ದವರ ಪೈಕಿ ಇದನ್ನು ಗಮನಿಸಿದ ನಾಲ್ಕು ಜನ ಏನೋ ಕುತೂಹಲವನ್ನು ಕಂಡವರಂತೆ ನಿಂತು ನೋಡತೊಡಗಿದರು. ಅಲ್ಲಿ ನಿಲ್ಲದೆ ಅವಳು ಮುಂದೆ ನಡೆದಳು. ಹತ್ತು ನಿಮಿಷ ಹೆಜ್ಜೆ ಹಾಕುವುದರಲ್ಲಿ ಬಿಕ್ಕಿ ಬರುತ್ತಿದ್ದ ಅಳು ತಹಬಂದಿಗೆ ಬಂದು ಒಳಸರಿಯಿತು. ತಾನೀಗ ಎಲ್ಲಿಗೆ ಬರುತ್ತಿದ್ದೇನೆಂಬ ಅರಿವು

ಆಯಿತು. ಈಗ ಎಲ್ಲಿಗೆ ಹೋಗುವುದು? ಕೋಣೆಗೆ, ಅಥವಾ ಪುನಃ ಕಾಲೇಜಿಗೆ? ಕಾಲೇಜಿಗೆ ಹೋಗುವುದು ಸಾಧುವಲ್ಲ. ಈ ಅಳು ಮತ್ತೆ ಬರಬಹುದು, ಬರುತ್ತದೆ. ಕ್ಲಾಸಿಗೆ ಹೋಗಿ ಹುಡುಗರ ಎದುರು ಅಳುತ್ತಾ ನಿಲ್ಲಬಾರದು – ಎಂದು ತೀರ್ಮಾನಿಸಿಕೊಂಡಳು. ಕೋಣೆಗೆ ಹೋಗಲು ಮನಸ್ಸು ಬರಲಿಲ್ಲ.

ಇದ್ದಕ್ಕಿದ್ದಹಾಗೆಯೇ ಒಂದು ಯೋಚನೆ ಬಂತು. ಕೈಲಿದ್ದ ಕಾಗದವನ್ನು ಪುನಃ ತೆಗೆದು ನೋಡಿದಳು. ಶ್ರೀನಿವಾಸ ತನ್ನ ಕೋಣೆಯ ವಿಳಾಸವನ್ನು ಕೊಟ್ಟಿದ್ದ. ಬಾಡಿಗೆ ಕೋಣೆಗಳ ಆ ಕಟ್ಟಡವನ್ನು ಅವಳು ನೋಡಿದ್ದಳು. ನೇರವಾಗಿ ಮೈಸೂರಿಗೆ ಹೋಗಿ ಅವನನ್ನೇ ನೋಡಬೇಕೆನಿಸಿತು. ರಸ್ತೆಯಲ್ಲಿ ಹೋಗುತ್ತಿದ್ದ ಒಂದು ರಿಕ್ಷಾವನ್ನು ಕೂಗಿ ಕುಳಿತು ಕಲಾಸಿಪಾಳ್ಯದ ಬಸ್ ಸ್ಟ್ಯಾಂಡಿಗೆ ಬಂದಳು. ಮೈಸೂರಿಗೆ ಬೇಕಾದಷ್ಟು ಮೋಟರುಗಳು ಹೋಗುತ್ತಿರುತ್ತವೆ. ಇಲ್ಲದಿದ್ದರೆ ಹತ್ತು ಹದಿನೈದು ನಿಮಿಷಗಳಿಗೆ ಒಂದರಂತೆ ಟ್ಯಾಕ್ಸಿ ಹೋಗುತ್ತಿರುತ್ತದೆಂಬುದು ಅವಳಿಗೆ ತಿಳಿದಿತ್ತು. ಅವಳು ಬಂದ ಐದು ನಿಮಿಷಕ್ಕೇ ಒಂದು ಟ್ಯಾಕ್ಸಿ ಸಿಕ್ಕಿತು. ಇವಳಲ್ಲದೆ ಮತ್ತೆ ಇಬ್ಬರು ಹೆಂಗಸರು ಇಬ್ಬರು ಗಂಡಸರು ಒಂದು ಕೈ-ಮಗುವಿದ್ದ ಟ್ಯಾಕ್ಸಿ ತಕ್ಷಣ ಹೊರಟಿತು. ಮೈಸೂರು ತಲುಪಿದ ತಕ್ಷಣ ನೇರವಾಗಿ ಶ್ರೀನಿವಾಸನ ಕೋಣೆಗೆ ಹೋಗಬೇಕು. ಇದೆಂತಹ ಹೇಡಿತನ ಬಂತು ನಿನಗೆ ಅಂತ ಕೇಳಬೇಕು. ಟ್ಯಾಕ್ಸಿಯಾದರೂ ಇದು ಸಾಕಾದಷ್ಟು ಬೇಗ ಓಡುತ್ತಿಲ್ಲವೆನಿಸಿತು.

ಅವನ ಕಾಗದವನ್ನು ತೆಗೆದು ಇತರ ಪ್ರಯಾಣಿಕರಿಗೆ ಕಾಣದಂತೆ ಹಿಡಿದು ಮತ್ತೊಮ್ಮೆ ಓದಿಕೊಂಡಳು: ಹೊಸ ವಿಚಾರವನ್ನು ಅನುಸರಿಸಿರುವ ಉತ್ಸಾಹ ವಿದ್ದರೂ ಹಳೆಯದನ್ನು ಬಿಡಲಾರದ, ಬಿಡಲು ಹೆದರುವ ಹೇಡಿಗಳ ಧಾಟಿಯಂತೆ ಕಾಣಿಸಿತು. 'ಮದುವೆ ಎಂಬುದು ಬರೀ ಗಂಡು ಹೆಣ್ಣುಗಳ ಪರಸ್ಪರ ಸುಖಕ್ಕಾಗಿ ಮಾಡಿಕೊಳ್ಳುವ ವ್ಯವಸ್ಥೆಯಲ್ಲ, ಎಲ್ಲರೂ ಒಪ್ಪಿ ನಡೆಸಬೇಕಾದುದು.' ಗೊಡ್ಡುಗಳು ಎಷ್ಟು ತಲೆಮಾರುಗಳಿಂದ ಹೇಳುತ್ತಾ ಬಂದರೋ, ಆ ಮಾತನ್ನು ಇವನು ನನಗೆ ಬರೆದಿದ್ದಾನೆ. 'ಇನ್ನು ಎರಡು ಮೂರು ತಲೆಮಾರು ಕಳೆದನಂತರ ಸಮಾಜದ ಶ್ರದ್ಧೆ ಮನೋಭಾವಗಳು ವಿಶಾಲವಾಗಿ ಬೆಳೆದು, ವರ್ಣ ವ್ಯವಸ್ಥೆಯನ್ನು ದಾಟಲು ಯುವಕ ಯುವತಿಯರಿಗೆ ಸಾಧ್ಯವಾಗಬಹುದೇನೋ! ನಾವು ಈಗಲೇ ಆ ಕೆಲಸವನ್ನು ಸಾಧಿಸಹೊರಟರೆ ಇಲ್ಲದ ಅನಾಹುತವಾಗಬಹುದು. ನನ್ನ ತಾಯಿ ನೇಣುಗಟ್ಟಿಕೊಳ್ಳಬಹುದು. ನಿನ್ನ ತಂದೆ ಕೊರಗಿನಿಂದ ಸಾಯಬಹುದು.' ಎದ್ದು ಧಡಕ್ಕನೆ ಮುನ್ನುಗ್ಗುವ ಯೋಗ್ಯತೆ ಇಲ್ಲದ ರಣಹೇಡಿಯ ಶಾಂತಿಪಾಠ ಇದು ಎನಿಸಿತು. 'ಇವನು ಗೊಡ್ಡು ಮುದುಕರು ಆಡುವ

ಬುದ್ಧಿವಂತಿಕೆಯ ಮಾತುಗಳನ್ನು ಬರೆಯುತ್ತಿದ್ದಾನೆ ಎಂದುಕೊಳ್ಳಬೇಡ. ಊರಿನಲ್ಲಿ ದೇವಸ್ಥಾನಕ್ಕೆ ಹೋಗಿದ್ದೆ. ನಿನ್ನ ತಂದೆ ಮಂಗಳಾರತಿ ಮಾಡುತ್ತಿದ್ದರು. ದೇವರ ಮುಂದೆ ನಿಂತು ಯೋಚಿಸುತ್ತಿರುವಾಗ ಇದ್ದಕ್ಕಿದ್ದಹಾಗೆಯೇ ನನ್ನ ಅಂತರಾತ್ಮವು ಹೀಗೆ ನುಡಿಯಿತು. ಅದನ್ನು ಮುಚ್ಚುವುದು ಸಾಧ್ಯವಿಲ್ಲ.' ಇವನು ದೇವಸ್ಥಾನಕ್ಕೆ ಯಾಕೆ ಹೋಗಿದ್ದ? ಮನೆದೇವರಿಗೆ ಮಂಗಳಾರತಿ ಮಾಡಿಸುವುದಕ್ಕಿರಬಹುದು. ನನ್ನ ತಂದೆ ದೇವರ ಎದುರು ನಿಂತು ಮಂಗಳಾರತಿ ಮಾಡುತ್ತಿದ್ದರು. ಅಲ್ಲಿ ನಿಂತಾಗ ಇವನಿಗೆ ಅನ್ನಿಸಿರಬಹುದು: 'ನಾನು ಶೂದ್ರ, ಇವರು ದೇವರ ಗರ್ಭಗುಡಿಯಲ್ಲಿ ನಿಲ್ಲುವ ಬ್ರಹ್ಮರು. ಬ್ರಾಹ್ಮಣರ ಮಗಳನ್ನು ಶೂದ್ರನಾದ ನಾನು ಹೇಗೆ ಹೆಂಡತಿ ಎಂದು ಪರಿಗ್ರಹಿಸಲಿ?' ಕೆಳಗಿನದು ಮೇಲಿನದಕ್ಕೆ ಕಾಣಿಕೆ ನೀಡಬೇಕು. ಮೇಲಿನದರಿಂದ ಪಡೆಯಬಾರದು. ಮೇಲಿನವರಿಂದ ಬೇಡುವುದು ಬರೀ ಆಶೀರ್ವಾದವನ್ನು ಮಾತ್ರ. ಇವನ ಶೂದ್ರತ್ವ ಕಳೆದಿಲ್ಲ. ಇಂಗ್ಲಿಷ್ ಓದಿದಾನೆ. ಇಷ್ಟು ನನ್ನ ಒಡನಾಡಿದಾನೆ. ಚರ್ಚೆ ಮಾಡಿದಾನೆ. ಹೆಸರು ಬದಲಾಯಿಸಿಕೊಂಡಿದಾನೆ. ಬದಲಾಯಿಸಿಕೊಂಡದ್ದಾದರೂ ಏನು? ಅದೇ ಮನೆ-ದೇವರ ಹೆಸರು. ಇವನಲ್ಲಿ ಧೈರ್ಯ ತುಂಬುವುದು ಹೇಗೆ? ನೀನು ಶೂದ್ರನಲ್ಲ, ಯಾವ ಪರಂಪರೆಯನ್ನು ನೀನು ನಂಬಿದ್ದೀಯೋ ಅದರ ಉತ್ತಮ ಮಟ್ಟದಲ್ಲಿ ನಿಲ್ಲುವುದೂ, ಅಧಮ ಆಳಕ್ಕೆ ಜಾರುವುದೂ ನಿನ್ನ ಶ್ರದ್ಧೆಯ ಗಟ್ಟಿತನವನ್ನವಲಂಬಿಸಿದೆ ಎಂದು ಹೇಳಬೇಕು. ನಿನ್ನ ಹೇಡಿತನಕ್ಕೆ ನನಗೆ ನಾಚಿಕೆಯಾಗುತ್ತಿದೆ ಎಂದು ಛೇಡಿಸಬೇಕು – ಎಂದು ಮನಸ್ಸಿನಲ್ಲೇ ಕುಪಿತಳಾದಳು.

ಅತ್ತ ಗುರುತು ಇದುವರೆಗೂ ಕಾಣುತ್ತಿದ್ದ ಅವಳ ಮುಖದ ಛಾಯೆಯು ಈಗ ಬದಲಾಯಿಸಿತು. ಕಣ್ಣೀರು ಸುರಿದು ಸ್ವಲ್ಪ ಊದಿ ಕೆಂಪಗಾಗಿದ್ದ ಕಣ್ಣು, ಅದೇ ಕೆಂಪು ಬಣ್ಣದಿಂದ ಕೋಪವನ್ನು ಪ್ರಕಟಿಸುತ್ತಿತ್ತು. ಮುಖದ ಮೇಲೆ ಕಠೋರತೆ ವ್ಯಕ್ತವಾಯಿತು. ಇದುವರೆಗೂ ಇದ್ದ ನಿರಾಶೆ ಮಾರ್ದವತೆಗಳು ಮಾಯವಾಗಿ, ಜಯಾಪಜಯಗಳಿಗೆ ಕೆಂದದ ಸೈನಿಕನ ಭಾವವು ಹುಟ್ಟಿತು.

ಅಷ್ಟರಲ್ಲಿ ಮದ್ದೂರು ಬಂತು. ಒಂದು ಹೋಟೆಲಿನ ಹತ್ತಿರ ಟ್ಯಾಕ್ಸಿಯನ್ನು ನಿಲ್ಲಿಸಿದ ಡ್ರೈವರ್, 'ಕಾಫಿಗೀಫಿ ಕುಡೀರಿ. ಹತ್ತು ನಿಮಿಷ ಇಂಜನ್ ತಣ್ಣಗಾಗಲಿ' ಎಂದು ಇಳಿದ. ಉಳಿದ ಪ್ರಯಾಣಿಕರೂ ಇಳಿದರು. ಅವಳು ಮಾತ್ರ ಹಾಗೆಯೇ ಕುಳಿತಳು. ತಾಯಿ ನೇಣುಗಟ್ಟಿಕೊಳ್ಳುವ ಭಯದಿಂದ ತೊಳಲುವ ಇವನು ಗಟ್ಟಿಗತನವನ್ನು ಎಂದಿಗೂ ಮಾಡಲಾರ. ರಜನೀಶನೆಂದು ಹೆಸರು ಬದಲಾಯಿಸಿಕೊಳ್ಳಲು ಸಹ ತಾಯಿಯೇ ಅಡ್ಡಬಂದರಂತೆ. ಇವನು

ಹುಟ್ಟಿದಾಗ ಹರಕೆ ಮಾಡಿಕೊಂಡಿದ್ದ ದೇವರ ಹೆಸರೇ ಆಗಬೇಕೆಂದು ಹಟಹಿಡಿದ ರಂತೆ. ಆಗಲೂ ಇವನು ತಾಯಿಯ ಮಾತನ್ನೇ ಕೇಳಿದ. ಮಾತೃಭಕ್ತಿಪರಂಪರೆ ಯನ್ನು ಕಿತ್ತೊಗೆಯುವ ತನಕ ಪೂರ್ವಾಚಾರ-ಪರಂಪರೆ ಹೋಗುವುದಿಲ್ಲ. ಅಥವಾ ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸಿ, ಮುಂದಿನ ತಾಯಂದಿರ ಮನೋಭಾವವನ್ನೇ ತಿದ್ದಬೇಕು – ಎಂದು ಯೋಚಿಸುತ್ತಾ ಕುಳಿತಿದ್ದಳು. ಉಳಿದ ಪ್ರಯಾಣಿಕರೂ ಬಂದು ಕುಳಿತರು. ಡ್ರೈವರ್ ಬಂದು ಪುನಃ ಟ್ಯಾಕ್ಸಿಯನ್ನು ಮುಂದೆ ನಡೆಸಿದ. ಇಬ್ಬರು ಹೆಂಗಸರಿದ್ದರೂ ಅವರು ಅವಳನ್ನು ಮಾತನಾಡಿಸ ಲಿಲ್ಲ. ಅವರು ಮಾತನಾಡಿಸುವುದು ಇವಳಿಗೂ ಬೇಡವಾಗಿತ್ತು.

ಈಗ ನಾನು ಮೈಸೂರಿಗೆ ಹೋಗಿ ಏನು ಮಾಡುವುದು? – ಎಂಬ ಪ್ರಶ್ನೆ ತಲೆಯಲ್ಲಿ ಹುಟ್ಟಿತು. ಅವನನ್ನು ಬೈಯಬಹುದು. ಅವನ ಮೇಲೆ ಕೋಪ ತೋರಿಸಬಹುದು. ಇಲ್ಲಿಯತನಕ ಉತ್ಸಾಹದಿಂದ ನನ್ನ ಜೊತೆಯಲ್ಲಿ ನಡೆದು ಈಗ ನನ್ನನ್ನು ಕೈಬಿಡುವುದು ಯಾವ ಧರ್ಮವೆಂದು ಕೇಳಬಹುದು. ನಮ್ಮಿಬ್ಬರ ಮದುವೆಯ ಪ್ರಸ್ತಾಪ ಹುಟ್ಟಿದ್ದುದು ಅವನಿಂದಲೇ. ಆ ಭಾವ ಇಬ್ಬರಲ್ಲಿ ಯಾರಲ್ಲಿ ಮೊದಲು ಹುಟ್ಟಿತೆಂದು ಹೇಳುವುದು ಕಷ್ಟ. ಚಿಕ್ಕವಯಸ್ಸಿನಿಂದ ಜೊತೆ ಯಲ್ಲಿ ಬೆಳೆದ ಹುಡುಗ ಹುಡುಗಿಯ ಸ್ನೇಹದಲ್ಲಿ ಪ್ರೇಮವಾಗುವ ಹದ ಮತ್ತು ಬಿಂದುಗಳನ್ನು ಗುರುತಿಸುವುದು ಅಸಾಧ್ಯ. ಆದರೆ ಅವಕ್ಕೆ ಸ್ಪಷ್ಟ ವ್ಯಕ್ತರೂಪ ಕೊಟ್ಟವನು ಅವನೇ. 'ಸತ್ಯ, ನೀನು ಬ್ರಾಹ್ಮಣ ನಾನು ಗೌಡ ಆಗದೆ, ಒಂದೇ ಜಾತಿಯಲ್ಲಿ ಹುಟ್ಟಿದ್ದರೆ ಎಷ್ಟು ಚೆನ್ನಾಗಿತ್ತು!' – ಎಂದು ಒಂದು ದಿನ ಹೇಳಿದ. ನಾನು ಮಾತನಾಡಲಿಲ್ಲ. ಮುಂದಕ್ಕೆ ಏನೂ ಹೇಳದೆ ಸಂಕೋಚದಿಂದ ಸುಮ್ಮ ನಾಗಿಬಿಟ್ಟ. ಆಮೇಲೆ ನಾಲ್ಕು ದಿನ ನನ್ನ ಕಣ್ಣುತಪ್ಪಿಸಿ ತಿರುಗಿದ. ಮತ್ತೆ ಅವನೇ ಮಾತನಾಡಿಸಿಕೊಂಡು ಬಂದ. ಇನ್ನೊಂದು ದಿನ, 'ಅಪತ್ತು ನಾನಂದ ದ್ದಕ್ಕೆ ನಿಂಗೆ ಸಿಟ್ಟುಬಂತೆ?' ಎಂದು ಕೇಳಿದ. ಅದಕ್ಕೂ ಉತ್ತರ ಹೇಳದೆ ನಾನು ಮಾತನ್ನು ಬೇರೆ ಕಡೆ ತಿರುಗಿಸಿದೆ. ಇನ್ನೊಂದು ದಿನ ಅವನೇ, 'ಸತ್ಯ, ನೀನು ಬ್ರಾಹ್ಮಣಳಾಗಿ ನಾನು ಶೂದ್ರನಾಗಿ ಹುಟ್ಟಿದ್ದರೆ ಏನಾಯಿತು? ನಾವಿಬ್ಬರೂ ಅವನ್ನು ಸ್ವಲ್ಪವೂ ನಂಬೂದಿಲ್ಲ' – ಎಂದು ಅಪೂರ್ಣಾರ್ಥವಾಗಿಯೇ ವಾಕ್ಯವನ್ನು ನಿಲ್ಲಿಸಿಬಿಟ್ಟ. ಅವನ ಮುಖವೂ ಸಂಕೋಚ ಮತ್ತು ಅರ್ಥ ತಪ್ಪಿದ ಭಾವಗಳಿಂದ ಕೆಂಪಗೆ ಮುದುಡಿಕೊಳ್ಳುತ್ತಿತ್ತು.

ಇಷ್ಟೆಲ್ಲ ದೂರ ಬಂದು ಊರಿನಲ್ಲಿ ನನ್ನ ತಂದೆ ಅಣ್ಣರಿಗೂ ತಿಳಿಸಿ, ಊರಿಗೆಲ್ಲ ಗೊತ್ತಾದ ಮೇಲೆ ಹೀಗೆ ಹೆಗಲು ತಪ್ಪಿಸಿಕೊಳ್ಳುತ್ತಿದ್ದಾನೆ. ನೇಣುಗಟ್ಟಿ ಕೊಳ್ಳುವ ಮಾತನ್ನು ಬಿಟ್ಟರೆ ಬೇರೆ ಬೆದರಿಕೆಯ ಮಾತು ಯಾವ ತಾಯಿಯ

ಹತ್ತಿರವಿದೆ? ಅದಕ್ಕೆ ಹೆದರಿ ಕಟ್ಟುಬಿದ್ದು ವೇದಾಂತಿಕ ಮನೋಭಾವ ತಾಳುವ ಅವನ ಎದುರು ನಿಂತು ನಾನು ಏನಂತ ಕೇಳಲಿ? 'ಶ್ರೀನಿವಾಸ, ನಿನ್ನ ಮಾತಿನಿಂದ ನಾನು ಮದುವೆಗೆ ಒಪ್ಪಿದೆ. ನಿನ್ನ ಧೈರ್ಯದಿಂದ ನಮ್ಮಪ್ಪನಿಗೆ ಹೇಳಿದೆ. ಈಗ ನೀನು ಕೈಬಿಟ್ಟರೆ ನನ್ನ ಗತಿ ಏನು? ಹೀಗೆ ಕೈಬಿಡುವುದು ನಿನಗೆ ಧರ್ಮವಲ್ಲ' – ಅನ್ನಲೆ? ಅವಳ ಆತ್ಮಗೌರವವನ್ನು ಕೆಣಕಿದಂತಾಯಿತು.

ಅಥವಾ ಮುದುಡಿ ಕೆಳಗೆ ಕುಸಿಯುವ ಇವನನ್ನು ನಾನು ಎಷ್ಟು ದಿನ ಹೀಗೆ ಎತ್ತಿಹಿಡಿಯಬಲ್ಲೆ? ಇವಳ ಬಲವಂತದಿಂದ ನಾನು ಕಟ್ಟಿಕೊಂಡೆ ಎಂಬ ಭಾವನೆ ಅವನಿಗೆ ಬರಬಾರದು. ಜಾತಿ ಎಂಬುದು ತಪ್ಪು, ನಮ್ಮ ಧರ್ಮಪರಂಪರೆಗಳ ಅತ್ಯಂತ ಅಧರ್ಮ ಮತ್ತು ಹೀನ ಪದ್ಧತಿಯೇ ವರ್ಣವ್ಯವಸ್ಥೆ ಎಂಬ ಶ್ರದ್ಧೆ ನನ್ನದು. ಅದನ್ನು ಎಲ್ಲರೊಡನೆಯೂ ಬಿಚ್ಚುಮಾತಿನಿಂದ ಚರ್ಚಿಸುತ್ತಿದ್ದೆ. ಅವನೊಡನೆಯಂತೂ ವಿಶೇಷ ಉತ್ಸಾಹದಿಂದ ಹೇಳುತ್ತಿದ್ದೆ. ಆದರೆ ನನ್ನ ಕೈ ಬಿಡಬೇಡವೆಂಬ ಮೊರೆಯ ಶ್ರುತಿಯಲ್ಲಿ ಈಗ ಆ ಭವ್ಯರಾಗವನ್ನು ಹಾಡಲೆ? ಅವಳಿಗೆ ಅಪಮಾನವೆನಿಸಿತು. ಹೋಗಿ ಅವನ ಸಂಗಡ ಏನು ಮಾತನಾಡಲಿ, ಹೇಗೆ ಆಡಲಿ, ಎಂಬ ಪ್ರಶ್ನೆಗೆ ಉತ್ತರ ಸಿಕ್ಕಲಿಲ್ಲ. ಅದನ್ನೇ ಯೋಚಿಸುತ್ತಿರುವಾಗ ಶ್ರೀರಂಗಪಟ್ಟಣ ಕಳೆಯಿತು. ಮುಂದಿನ ದಾರಿ, ಎರಡು ಕಡೆಗೂ ಹರಡಿರುವ ಗದ್ದೆಗಳು, ಮುಂದೆ ದೂರದಲ್ಲಿ ಕಾಣುವ ಮೈಸೂರಿನ ಅಸ್ಪಷ್ಟ ಚಿತ್ರ, ಅದಕ್ಕೆ ಹಿಂದೆ ನೀಲಿಯ ಹಿನ್ನೆಲೆಯನ್ನು ಕೊಟ್ಟು ನಿಂತ ಬೆಟ್ಟ, ಇವುಗಳು ಕಣ್ಣಿಗೆ ಬಿದ್ದನಂತರ ತಲೆಯು ಕೆಲಸ ಮಾಡುವುದನ್ನು ನಿಲ್ಲಿಸಿತು. ಹೋದ ವರ್ಷ ತಾನೇ ಅವಳು ಅವನೊಡನೆ ಹಟಕಟ್ಟಿ ಮೈಸೂರಿನಿಂದ ಶ್ರೀರಂಗಪಟ್ಟಣಕ್ಕೆ ನಡೆದು ಬಂದಿದ್ದಳು. ಕೋಟೆ ಗಂಜಾಮುಗಳನ್ನೆಲ್ಲ ನಡೆದೇ ಸುತ್ತಿದ್ದಳು. ಕಾಲು ಸಾಕಷ್ಟು ನೋಯುತ್ತಿದ್ದರೂ ಹಿಂತಿರುಗಿ ಸಹ ನಡೆದು ಹೋಗಲು ತಾನು ಸಿದ್ಧಳೆಂದು ನಿಂತಳು. ಅವನಿಗೆ ನನ್ನಷ್ಟು ಕಾಲುನೋವು ಇರಲಿಲ್ಲ. ಎಷ್ಟಾದರೂ ಹೆಚ್ಚು ಶಕ್ತಿವಂತ. ಆದರೂ, 'ನೀನಂತೀಯ ಅಂತ ವಾಪಸು ನಡೆಸಿ ನಿನ್ನ ಕೋಮಲ ಪಾದ ಊದಿಕೊಂಡರೆ ಶಾಖ ಕೊಡುಕ್ಕೆ ಬಿಸಿನೀರು ಎಲ್ಲಿ ಕಾಯಿಸಲಿ? ನಾವಿರೂದು ಬೇರೆಬೇರೆ ಹಾಸ್ಟೆಲಿನಲ್ಲಿ' ಎಂದು ಬಸ್ಸಿಗೆ ಕರೆದುಕೊಂಡು ಹೋಗಿದ್ದ.

ಮೈಸೂರು ಬಂತು. ಟೌನ್‌ಹಾಲಿನ ಹಿಂಭಾಗಕ್ಕೆ ಬಂದು ಟ್ಯಾಕ್ಸಿ ನಿಂತಿತು. ಅವಳು ಕೆಳಗೆ ಇಳಿದಳು. ಅವನಿರುವ ಕೋಣೆ ಅಲ್ಲಿಂದ ನಾಲ್ಕು ಫರ್ಲಾಂಗ್ ದೂರವಲ್ಲಿಸಿ. ಹತ್ತು ನಿಮಿಷದ ದಾರಿ. ಈಗಿನ್ನೂ ಮಧ್ಯಾಹ್ನ ಮೂರೂವರೆ ಗಂಟೆ. ಇಷ್ಟು ಹೊತ್ತಿನಲ್ಲಿ ಕೋಣೆಯಲ್ಲೇ ಇರುತ್ತಾನೆ. ಮತ್ತೆ ಎಲ್ಲಿಗೆ ಹೋಗಿ

ದ್ದಾನು? ಸ್ನೇಹಿತರ ಜೊತೆ ಸುತ್ತಲು ಹೋಗುವ ಮನಸ್ಸು ಅವನಿಗೂ ಇರುವು ದಿಲ್ಲ. ತನಗಾಗಿರುವಷ್ಟೇ ನೋವು ಅವನಿಗೂ ಆಗಿರುತ್ತದೆ. ಸ್ನೇಹಿತರನ್ನು ತಪ್ಪಿಸಬೇಕೆಂದೇ ಹಾಸ್ಟೆಲನ್ನು ಬಿಟ್ಟು ಬೇರೆಯಾಗಿ ಬಾಡಿಗೆಯ ಕೋಣೆ ಮಾಡಿದ್ದಾನೆ. ಕಿಟಕಿಯ ಬಾಗಿಲು ಹಾಕಿಕೊಂಡು ಒಬ್ಬನೇ ಮಲಗಿರುತ್ತಾನೆ – ಎಂದುಕೊಂಡು ಹೆಜ್ಜೆಹಾಕಿದಳು.

ಸುಮಾರು ಒಂದು ಫರ್ಲಾಂಗ್ ನಡೆದಳು. ಲ್ಯಾನ್ಸ್‌ಡೌನ್ ಕಟ್ಟಡದ ಅಂಗಡಿಯ ಸಾಲೆ ಮುಗಿದಿತ್ತು. ಕೋಣೆಗೆ ಹೋಗಿ ಅವನನ್ನು ಏನೆಂದು ಕೇಳು ವುದು ಎಂಬ ಪ್ರಶ್ನೆ ಎದ್ದುನಿಂತಿತು. ಏನು ಕೇಳುವುದು? ಏನು ಹೇಳುವುದು? ಕೋಪ ತೋರಿಸುವುದೇ? ಕಣ್ಣೀರು ಹಾಕುವುದೇ? ನನ್ನನ್ನು ನಡುನೀರಿನಲ್ಲಿ ಮುಳುಗಿಸಬೇಡ ಎಂದು ಅನುನಯ ಮಾಡುವುದೆ? ಯಾವುದೂ ತಿಳಿಯಲಿಲ್ಲ. ಸುಮ್ಮನೆ ಹೋಗಿ ಅವನ ಎದುರಿಗೆ ನಿಲ್ಲುವುದು. ಅವನೇ ಏನಾದರೂ ಮಾತ ನಾಡಲಿ ಎಂಬ ಯೋಚನೆ ಬಂತು. 'ಸತ್ಯ, ನಿನಗೆ ಒಂದು ಕಾಗದ ಬರೆದಿದ್ದೆ. ನೆನ್ನೆ ಪೋಸ್ಟ್ ಮಾಡಿದೆ. ನಿನಗೆ ತಲುಪಲಿಲ್ಲವೇ' – ಅಂತ ಕೇಳಿದರೆ? ಅವನು ಹೇಳುವುದನ್ನು ಹೇಳಿಯಾಗಿದೆ. ಅದಕ್ಕೆ ಪ್ರತಿಹೇಳುವುದು, ಪ್ರತಿವಾದಿಸು ವುದು, ಪ್ರತಿರೋಧ ಮಾಡುವುದು ಬೇಡ. ಅವಳು ಹೆಜ್ಜೆಯ ಗತಿಯನ್ನು ನಿಧಾನ ಮಾಡಿದಳು. ಈ ವಿಚಾರ ಘನರೂಪ ತಾಳಲು ಮೊದಲಾಯಿತು. ಅವಳು ಹಾಗೆಯೇ ನಿಂತಳು. ನಿಂತ ಜಾಗದಲ್ಲೇ ಐದು ನಿಮಿಷ ನಿಂತಿದ್ದಳು. ತಿರುಗಾಡುವ ಇತರ ಜನ ಮತ್ತು ಹತ್ತಿರದ ಅಂಗಡಿಗಳವರು ತನ್ನ ಕಡೆಗೇ ನೋಡಲು ಶುರು ಮಾಡಿದರು. ಸಂಕೋಚವಾಯಿತು. ತಾನು ಮುಂದೆ ಅಥವಾ ಹಿಂದೆ ನಡೆಯ ಬೇಕು. ಹೀಗೆ ನಿಂತಿರುವುದು ಸಾಧ್ಯವಿಲ್ಲವೆನಿಸಿತು. ಏನನ್ನೋ ಮರೆತವರು ತಕ್ಷಣ ಜ್ಞಾಪಿಸಿಕೊಂಡು ಹಿಂತಿರುಗುವಂತೆ ತಿರುಗಿ ನಡೆದಳು. ಎಲ್ಲಿಗೆ ಎಂಬ ಯೋಚನೆ ಬರುವ ಮೊದಲೇ ಮುಕ್ಕಾಲು ಭಾಗಕ್ಕೂ ಹೆಚ್ಚು ನಡೆದು ಟ್ಯಾಕ್ಸಿ ಸ್ಟ್ಯಾಂಡಿನ ಹತ್ತಿರಕ್ಕೆ ಬಂದಿದ್ದಳು. ಒಬ್ಬ ಏಜೆಂಟ್ ಇವಳ ಹತ್ತಿರವೇ, 'ಬೆಂಗಳೂರು ಟ್ಯಾಕ್ಸಿ, ಅರ್ಜೆಂಟ್, ಎಂಟು ರೂಪಾಯಿ, ರೆಡಿಯಾಗಿವೆ' ಎಂದು ಕೂಗುತ್ತಿದ್ದ. 'ನಾನು ಬರ್ತೀನಪ್ಪ' – ಎಂದು ಹೇಳಿ ಅವನ ಸಂಗಡ ಹೋಗಿ, ಸಾಲಿನಲ್ಲಿ ಮೊದಲನೆಯದಾಗಿ ನಿಂತಿದ್ದ ಟ್ಯಾಕ್ಸಿಯಲ್ಲಿ ಕುಳಿತುಬಿಟ್ಟಳು.

೪

ಸಂಜೆ ಏಳು ಗಂಟೆಯ ಹೊತ್ತಿಗೆ ಬೆಂಗಳೂರು ತಲುಪಿದಾಗ ಮೈ ಕೈ ಎಲ್ಲ ಮುದುರಿ ಬೀಳುವಷ್ಟು ಸುಸ್ತಾಗಿತ್ತು. ಬೆಳಗ್ಗೆ ತಿಂದ ತಿಂಡಿಯನ್ನು ಬಿಟ್ಟರೆ ಏನೂ ಇಲ್ಲದೆ, ಹೊಟ್ಟೆಯಲ್ಲಿ ಉರಿ ಹೊತ್ತಿದಂತೆ ಆಗುತ್ತಿತ್ತು. ಆದರೆ ಊಟ ಮಾಡುವ ಮನಸ್ಸಿರಲಿಲ್ಲ. ಬಲವಂತವಾಗಿ ಹೋಟೆಲಿಗೆ ಹೋಗಿ ಕುಳಿತರೂ ತಿನ್ನಲು ಸೇರುವುದಿಲ್ಲವೆನಿಸಿತು. ಎದುರಿಗಿದ್ದ ಒಂದು ಪೆಟ್ಟಿಗೆ-ಅಂಗಡಿಯಲ್ಲಿ ಎರಡು ಬಾಳೆಹಣ್ಣು ತೆಗೆದುಕೊಂಡು ಒಂದು ರಿಕ್ಷಾದಲ್ಲಿ ಕುಳಿತಳು.

ಮಲಗಿದರೆ ನಿದ್ರೆ ಬರಲಿಲ್ಲ. ಹೇಗಾದರೂ ಬಲವಂತವಾಗಿ ಸೇರಿಸಿಕೊಂಡು ಏನಾದರೂ ತಿಂದಿದ್ದರೆ ಸ್ವಲ್ಪ ಬರುತ್ತಿತ್ತೇನೋ ಎನಿಸಿತು. ತಿಂದಿದ್ದರೂ ಬರುತ್ತಿರಲಿಲ್ಲವೆಂದು ಅದೇ ಮನಸ್ಸು ಹೇಳಿತು. ಬುದ್ಧಿಯು ಯಾವುದನ್ನೂ ಸ್ಪಷ್ಟವಾಗಿ ಯೋಚಿಸುತ್ತಿರಲಿಲ್ಲ. ಹಿಂದಿನ ನೆನಪು, ಮುಂದಿನ ಕಲ್ಪನೆ, ಮೊದಲಾಗಿ ಯಾವ ನಿಶ್ಚಿತ ಅಂಶವೂ ಕಾಣಿಸುತ್ತಿರಲಿಲ್ಲ. ಶ್ರೀನಿವಾಸನ ಮೇಲೆ ಪ್ರಚಂಡ ಸಿಟ್ಟು ಬರುತ್ತಿತ್ತು. ಆದರೆ ಸಿಟ್ಟುಮಾಡಕೊಳ್ಳಬಾರದೆಂಬ ವಿಚಾರವು ಹಿಂದೆಯೇ ಬರುವುದು. ಮುಂದೆ ತನ್ನ ಜೀವನದ ಗತಿ ಏನು ಎಂಬ ಪ್ರಶ್ನೆ ಮಾತ್ರ ಒಮ್ಮೆಯೂ ಸುಳಿಯಲಿಲ್ಲ.

ಬೆಳಕು ಹರಿಯುವ ವೇಳೆಗೆ ಜೊಂಪು ಹೊತ್ತಿದಂತೆ ಆಯಿತು. ಆದರೆ ಅಕ್ಕಪಕ್ಕದ ಮನೆಗಳ ನಲ್ಲಿಗಳ ಮತ್ತು ಆಗಾಗ್ಗೆ ರಸ್ತೆಯಲ್ಲಿ ಹೋಗುತ್ತಿದ್ದ ವಾಹನಗಳ ಸದ್ದು ಸ್ಪಷ್ಟವಾಗಿ ಕೇಳಿಸುತ್ತಿತ್ತು. ಅದೇ ಸ್ಥಿತಿಯಲ್ಲಿ ಸ್ವಲ್ಪ ಹೊತ್ತು ಕಳೆಯುವಲ್ಲಿ ಕಿಟಕಿಯಿಂದ ಗುಬ್ಬಚ್ಚಿಗಳು ನುಗ್ಗಿದುವು. ಆ ಜೊಂಪೂ ತಪ್ಪಿತು. ಎದ್ದು ಸ್ನಾನಕ್ಕೆ ಹೋದಳು. ಬೆನ್ನು ತಿಕ್ಕಿಕೊಳ್ಳುವಾಗ ಗೊತ್ತಾಯಿತು: ಅವಳ ತಂದೆ ಎಕ್ಕಡದಲ್ಲಿ ಹೊಡೆದು ಆಗಿದ್ದ ಗಾಯ ತಕ್ಕಮಟ್ಟಿಗೆ ಮಾಯ್ದಿತ್ತು. ಆದರೆ ಈಗ ಸ್ವಲ್ಪ ನೋಯುತ್ತಿದೆ. ನೆನ್ನೆ ಟ್ಯಾಕ್ಸಿಯಲ್ಲಿ ಹೋಗಿ ಬರುವಾಗ ಒಂದೇ ಸಮನೆ ಒರಗಿ ಕೂತಿದ್ದಕ್ಕೆ ಹೀಗಾಗಿದೆ ಎಂಬ ನೆನಪಾಯಿತು. ಕೈಗೆ ಸಿಕ್ಕಿದ ಭಾಗಗಳನ್ನು ತಡಕಿ ನೋಡಿಕೊಂಡಳು. ಏನೂ ಕೇತಿಲ್ಲ. ಸ್ವಲ್ಪ ನೋವು ಕಾಣುತ್ತಿದೆ ಮಾತ್ರ. ಟವೆಲಿನಿಂದ ಉಪಾಯವಾಗಿ ಬೆನ್ನನ್ನು ಸವರಿ ಮೈ ಒರೆಸಿಕೊಂಡು ಕೋಣೆಗೆ ಬಂದಳು. ಈಗ ಹೋಟೆಲಿಗೆ ಹೋಗಿ ಏನಾದರೂ ತಿನ್ನಲೇ ಬೇಕು. ಇಲ್ಲದಿದ್ದರೆ ಕಾಲೇಜಿಗೆ ಹೋಗಲಾಗುವುದಿಲ್ಲ. ಹೋದರೂ ಪಾಠ ಮಾಡುವುದು ಸಾಧ್ಯವಿಲ್ಲ. ಆದರೆ ರಜಾ ಅರ್ಜಿಯನ್ನಾದರೂ ಕೊಟ್ಟು ಬರಬಹುದು. ಇಷ್ಟು ಹತ್ತಿರ ಇರುವ ಕಾಲೇಜಿಗೆ ಹೋಗಿ ರಜಾ ಅರ್ಜಿ ಕೊಟ್ಟು

ಬರುವವರು ಸಹ ಅಕ್ಕಪಕ್ಕದಲ್ಲಿ ಇಲ್ಲ. ಮನೆಯ ಮಾಲೀಕರು, ಮೇಲೆಯೇ ಇರುವ ಪದ್ಮನಾಭಾಚಾರ್ಯ ಫಲ್ಗೂಬಾಯಿಯವರು, ಇವಳೊಡನೆ ಬಿಲ್‌ಕುಲ್ ಮಾತು ನಿಲ್ಲಿಸಿದ್ದಾರೆ. ಇವಳ ನೆರಳು ಕಂಡರೆ ಒಳಗೆ ಹೋಗಿ ಬಾಗಿಲು ಹಾಕಿಕೊಳ್ಳುತ್ತಾರೆ.

ಹೋಟೆಲಿಗೆ ಹೋಗಿ, ಸೇರಿಸಿಕೊಂಡು ಎರಡು ಇಡ್ಲಿ ತಿಂದು ಕಾಫಿ ಕುಡಿದಳು. ದುಡ್ಡು ಕೊಡುವಾಗ ಗೊತ್ತಾಯಿತು: ನೆನ್ನೆ ಟ್ಯಾಕ್ಸಿ ಮತ್ತು ರಿಕ್ಷಾಗಳಿಗೆ ಒಟ್ಟು ಹದಿನೇಳೂವರೆ ರೂಪಾಯಿ ಖರ್ಚಾಗಿದೆ. ಇನ್ನು ಹತ್ತಿರ ಹತ್ತು ರೂಪಾಯಿಯಷ್ಟಿದೆ. ಹೋದ ತಿಂಗಳ ಮಧ್ಯದಲ್ಲಿ ಸೇರಿದುದರಿಂದ ಈ ತಿಂಗಳ ಒಂದನೆಯ ತಾರೀಕು ಸಂಬಳ ಬರಲಿಲ್ಲ. ಇದ್ದ ದುಡ್ಡಿನಲ್ಲಿ ಮನೆಗೆ ಒಂದನೆಯ ತಾರೀಕು ಬಾಡಿಗೆ ಕೊಟ್ಟು, ಉಳಿದದ್ದರಲ್ಲಿ ಮಿತವಾಗಿ ಖರ್ಚು ಮಾಡುತ್ತಿದ್ದಳು. ದುಡ್ಡಿಗೆ ಅವಳು ಈ ಮೊದಲು ಯೋಚಿಸಿರಲಿಲ್ಲ. ಸಾಲದಿದ್ದರೆ ಶ್ರೀನಿವಾಸ ಕೊಡುತ್ತಾನೆ. ಅಲ್ಲದೆ ತಾನು ಈ ಬಾಡಿಗೆ ರೂಮಿನಲ್ಲಿರುವುದು ಇನ್ನೆಷ್ಟು ದಿನ, ಎಂಬ ಒಂದು ಸಮಾಧಾನವೂ ಇತ್ತು. ಆದರೆ ಈಗ ಇದ್ದಕ್ಕಿದ್ದಹಾಗೆಯೇ ಎರಡೂ ಕುಸಿದುಹೋಗಿವೆ. ಮುಂದಿನ ಒಂದನೆಯ ತಾರೀಕು ಸಂಬಳ ಬರುವ ತನಕ ಹೇಗೆ ನಿಭಾಯಿಸುವುದು? ಅವಳಿಗೆ ಸಹೋದ್ಯೋಗಿಗಳಲ್ಲಿ ಕೂಡ ಯಾರೂ ಹೆಚ್ಚು ಗುರುತಾಗಿಲ್ಲ. ಅಧ್ಯಾಪಕರ ಕೋಣೆಗೆ ಹೋದರೆ ಕೆಲವರು 'ಗುಡ್ ಮಾರ್ನಿಂಗ್' ಹೇಳುತ್ತಾರೆ. ಇವಳೂ ಪ್ರತಿಯಾಗಿ 'ಗುಡ್‌ಮಾರ್ನಿಂಗ್' ಎನ್ನುತ್ತಾಳೆ. ಒಟ್ಟು ಇಪ್ಪತ್ತಾರು ಜನ ಗಂಡಸರು ಏಳು ಜನ ಹೆಂಗಸರು ಇರುವ ಸಹೋದ್ಯೋಗಿಗಳಲ್ಲಿ ಯಾರೂ ಇವಳ ಹತ್ತಿರ ಸುಳಿದಿಲ್ಲ. ಸ್ನೇಹ ಮಾಡಿಕೊಳ್ಳಬೇಕೆಂದು ತಾನೂ ಪ್ರಯತ್ನಪಟ್ಟಿಲ್ಲ. ಇಲ್ಲಿಗೆ ಸೇರಿದಾಗಿನಿಂದ ತನ್ನ ಮದುವೆಯ ಸಮಸ್ಯೆಯೇ ತಲೆಯಲ್ಲಿ ತುಂಬಿದೆ. ದಿನಕ್ಕೊಂದು ಹೊಸ ಹೊಸ ಘಟ್ಟವನ್ನು ಮುಟ್ಟುತ್ತಾ ತಲೆತಿನ್ನುತ್ತಿದ್ದ ಅದು, ಉಳಿದವರೊಡನೆ ಸ್ನೇಹವಾಗುವ ಸಲಿಲತೆಯನ್ನೇ ಕೊಟ್ಟಿಲ್ಲ. ಈ ಮನಃಸ್ಥಿತಿಯಲ್ಲಿ ವಿದ್ಯಾರ್ಥಿಗಳು ಸಂತುಷ್ಟರಾಗುವಂತೆ ತಾನು ಪಾಠ ಮಾಡುತ್ತಿರುವುದೇ ಒಂದು ಸಾಧನೆಯಾಗಿದೆ – ಎಂದುಕೊಂಡು ಕೋಣೆಗೆ ಹಿಂತಿರುಗಿದಳು. ದುಡ್ಡಿಗೆ ಯಾರನ್ನು ಕೇಳುವುದು? ಸಹೋದ್ಯೋಗಿಗಳನ್ನು ಕೇಳುವ ಹೀನಾಯ ಕೆಲಸ ಬೇಡ. ಊರಿನಲ್ಲಿ ತಂದೆ ಅಥವಾ ಅಣ್ಣನಿಗೆ ಬರೆಯುವ ಕಾಲ ತನ್ನ ಜೀವನದಲ್ಲಿ ಮುಗಿದುಹೋಗಿದೆ. ಏನಾದರೂ ಮಾರುವಂತಹ ವಸ್ತು ತನ್ನಲ್ಲಿ ಯಾವುದಿದೆ? ನಾಲ್ಕು ಸೀರೆ ನಾಲ್ಕು ರೌಕೆ ಸಣ್ಣ ಪೋಲ್ಡಾಲುಗಳೊಡನೆ ಮೈಸೂರಿಗೆ ಬಂದವಳು. ಅಲ್ಲಿಂದ ನೇರವಾಗಿ ಬೆಂಗಳೂರಿಗೆ ಬಂದಿದ್ದೇನೆ. ಅಮ್ಮ ಬದುಕಿದ್ದಾಗ ಹಾಕಿಕೊಳ್ಳುತ್ತಿದ್ದ

ಚಿನ್ನದ ಚೈನು-ಸರವನ್ನು ಹಾಕಿಕೊ ಎಂದು ಅಪ್ಪ ಬಲವಂತ ಮಾಡಿ-ಕ್ಕೋಣೆಗೆ ಚಿನ್ನ ಆಭರಣಗಳ ಮೇಲೆ ಆಸ್ಥೆಯೇ ಇಲ್ಲದ ತಾನು ಅದನ್ನು ಎಂದೂ ಒ ಕೊಳ್ಳಲಿಲ್ಲ. ಅದಾದರೂ ಇದ್ದರೆ ಮಾರಬಹುದಾಗಿತ್ತು; ಅಥವಾ ಅಡವು ಇಡ ಬಹುದಾಗಿತ್ತು. ಕಿವಿಯ ಎರಡು ಸಾದಾ ಬೆಂಡೋಲೆ ಕೈಯ ಗಡಿಯಾರವನ್ನು ಬಿಟ್ಟರೆ ಬೆಲೆ ಬಾಳುವ ಯಾವ ವಸ್ತುವೂ ಇಲ್ಲ. ಈ ಎರಡರಲ್ಲಿ ಯಾವುದನ್ನು ಮಾರಿದರೂ ಸೆಕೆಂಡ್‌ಹ್ಯಾಂಡ್ ಎಂದು ನಲವತ್ತು ಐವತ್ತಕ್ಕಿಂತ ಹೆಚ್ಚು ಬರುವುದಿಲ್ಲ. ಆದರೆ ಬರೀ ಕಿವಿ ಅಥವಾ ಬರೀ ಕೈಯಲ್ಲಿ ಕಾಲೇಜಿಗೆ ಹೋಗು ವುದು ಹೇಗೆ?

ಸಮಸ್ಯೆ ಬಗೆಹರಿಯುಲಿಲ್ಲ. ಈ ಐದು ರೂಪಾಯಿ ಮುಗಿಯುವುದರೊಳಗೆ ಏನಾದರೂ ಮಾಡಬೇಕು. ಬೆಂಡೋಲೆಗಳನ್ನು ಮಾರಿ ಅಥವಾ ಅಡವು ಇಟ್ಟು, ಕಿವಿಗೆ ಒಂದು ಜೊತೆ ನಕಲಿ ಓಲೆಗಳನ್ನು ಕೊಳ್ಳುವುದೇ ಉಳಿದಿರುವ ಉಪಾಯ. ಆ ಕೆಲಸವನ್ನು ಇವತ್ತು ಸಂಜೆಯೇ ಮಾಡಬೇಕು – ಎಂದು ಯೋಚಿಸಿಕೊಂಡು ಕೋಣೆ ತಲಪಿದಳು. ಮಂಚದ ಮೇಲೆ ಬಲಮಗ್ಗುಲಾಗಿ ಸ್ವಲ್ಪ ಹೊತ್ತು ಮಲಗಿದಳು. ಬೆನ್ನಿನಮೇಲೆ ಒರಗಿ ಅಂಗಾತಳಾದಾಗ ಸ್ವಲ್ಪ ನೋವಾಗುತ್ತಿತ್ತು.

ಹನ್ನೊಂದು ಗಂಟೆಗೆ ಒಂದು ಕ್ಲಾಸಿತ್ತು. ಹತ್ತೂವರೆಯ ಹೊತ್ತಿಗೆ ಅಧ್ಯಾಪಕರ ಕೋಣೆಗೆ ಹೋಗಿ ಕುಳಿತಳು. ಎರಡು ನಿಮಿಷದಲ್ಲಿ ಜವಾನ ಬಂದು ಅವಳಿಂದ ರುಜು ಮಾಡಿಸಿಕೊಂಡು ಒಂದು ಕಾಗದವನ್ನು ಕೊಟ್ಟು ಹೋದ. ಓದಿಕೊಂಡ ಅವಳ ಮೈ ಮುಖಗಳು ಬೆವರಿದುವು. ಪ್ರಿನ್ಸಿಪಾಲರು ಬರೆದಿದ್ದರು: 'ನೀವು ಕಾಲೇಜಿಗೆ ಸೇರಿದಾಗಿನಿಂದ ಸರಿಯಾಗಿ ತರಗತಿಗಳನ್ನು ತೆಗೆದುಕೊಳ್ಳು ತ್ತಿಲ್ಲವೆಂಬುದನ್ನು ಗಮನಿಸಲಾಗಿದೆ. ಉದಾಹರಣೆಗೆ, ಈ ದಿನ ಕಾಲೇಜಿಗೆ ಬಂದಿದ್ದ ನೀವು ಹೇಳದೆ ಕೇಳದೆ ಹೊರಟುಹೋದಿರಿ. ಇಂತಹ ಜವಾಬ್ದಾರಿಹೀನತೆಯಿಂದ ವಿದ್ಯಾರ್ಥಿಗಳ ಪಾಠಕ್ಕೆ ತೊಂದರೆಯಾಗಿ ಕಾಲೇಜಿನ ಉತ್ತಮ ಹೆಸರೂ ಹಾಳಾಗುತ್ತದೆ. ಇಂತಹ ನಡವಳಿಕೆಗೆ ನಿಮ್ಮ ಮೇಲೆ ಏಕೆ 'ಕ್ರಮ ಕೈಗೊಳ್ಳ ಬಾರದೆಂದು ನಿಮ್ಮಿಂದ ಸಮರ್ಥನಾಯಿಸಿ ಕೇಳಲಾಗಿದೆ' – ನೆನ್ನೆಯ ತಾರೀಕು ಹಾಕಿ ಸಂಜೆ ನಾಲ್ಕು ಗಂಟೆ ಎಂದು ಕೂಡ ತೋರಿಸಿದ್ದರು.

ನೆನ್ನೆ ಒಂದು ದಿನವನ್ನು ಬಿಟ್ಟರೆ ಅವಳು ಎಂದೂ ಕ್ಲಾಸು ತಪ್ಪಿಸಿದವಳಲ್ಲ. ಪಾಠದ ಸಿದ್ಧತೆಯಲ್ಲಿ ಎಂದೂ ಬೇಕಾಬಿಟ್ಟಿ ಮಾಡಿದವಳಲ್ಲ. ನೆನ್ನೆ ನಾನಿದ್ದ ಮನಃಸ್ಥಿತಿಯಲ್ಲಿ ಪಾಠ ಮಾಡುವುದು ಯಾರಿಗೆ ತಾನೆ ಸಾಧ್ಯ? ಹೋಗುವ ಮೊದಲು ನಾನು ಇವರಿಗೆ ಒಂದು ರಜಾ ಚೀಟಿ ಬರೆದುಕೊಡಬೇಕಾಗಿತ್ತು. ಆದರೆ ಅದ್ಯಾವುದೂ ಆ ಸ್ಥಿತಿಯಲ್ಲಿ ಹೊಳೆಯಲಿಲ್ಲ. ನೆನ್ನೆಯ ದಿನಕ್ಕೆ ರಜಾ

ಬರುವವರ'ಎಂದು ಈಗಲೂ ಒಂದು ಚೀಟಿ ಬರೆದುಕೊಟ್ಟರೆ ಆದೀತು. ಆದರೆ ಇಷ್ಟು ಸಣ್ಣ ವಿಷಯಕ್ಕೆ ಇಂತಹ ಕ್ರಮ ಕೈಗೊಳ್ಳುವ ಇವರಿಗೆ ನಾನು ಇಲ್ಲಿರುವುದೇ ಇಷ್ಟವಿಲ್ಲವೇನೋ! – ಎಂಬ ಯೋಚನೆ ಬಂದು ಅವಳು ಛಾವಣಿ ಗೋಡೆಯ ಕಡೆ ನೋಡುತ್ತಾ ಕುಳಿತಳು. 'ಎಕ್ಸ್‌ಕ್ಯೂಸ್ ಮಿ' – ಎಂದು ಅವಳ ಸಹೋದ್ಯೋಗಿಯೊಬ್ಬರು ಹತ್ತಿರ ಬಂದು ಅವಳ ಪಕ್ಕದ ಕುರ್ಚಿಯಲ್ಲಿ ಕುಳಿತರು. ತಿರುಗಿ ನೋಡಿದಳು. ಅವರು ಮುದ್ದೇಗೌಡರು. ಅರ್ಥಶಾಸ್ತ್ರದ ಉಪನ್ಯಾಸಕ. ಇಪ್ಪತ್ತೇಳು ಇಪ್ಪತ್ತೆಂಟು ವಯಸ್ಸಿನ ಆತ ಇಡೀ ಕಾಲೇಜಿನಲ್ಲಿ ಇದ್ದ ಏಕೈಕ ಬ್ರಾಹ್ಮಣೇತರ. ಅಥವಾ ಇನ್ನೂ ಒಬ್ಬಿಬ್ಬರು ಇದ್ದಾರೆಯೋ ಅವಳಿಗೆ ತಿಳಿಯದು.

ಅವರು ಕೇಳಿದರು: 'ಇದೇನು ಪ್ರಿನ್ಸಿಪಾಲರ ಕಾಗದವಲ್ಲವೆ? ಸಮುರ್ಥಾಯಿಷಿ ಕೇಳಿ ಬರೆದಿದಾರೆ ಅಲ್ಲವೆ?'

ಎರಡು ನೂರು ದಿನ ಪರಸ್ಪರ ಗುಡ್‌ಮಾರ್ನಿಂಗ್ ಹೇಳಿದುದನ್ನು ಬಿಟ್ಟರೆ ಅವಳಿಗೆ ಅವರೊಡನೆ ಹೆಚ್ಚು ಪರಿಚಯವಿರಲಿಲ್ಲ. ಅವರೇ ಹೇಳಿದರು: 'ನಿಮಗೆ ಇಂಥ ಕಾಗದ ಕಳುಸ್ತಾರೆ ಅಂತ ನೆನ್ನೆ ಸ್ಟಾಫ್‌ರೂಮಿನಲ್ಲಿ ಮಾತಾಡ್ಕತ್ತಿದ್ದದ್ದು ನನ್ನ ಕಿವಿಗೆ ಬಿತ್ತು. ಅದಕ್ಕೆ ಕೇಳಿದೆ. ನೆನ್ನೆ ನಿಮಗೆ ಒಂದು ಕಾಗದ ಬಂತು. ಅದನ್ನ ಓದಿಕೊಂಡು ದುಃಖದಿಂದ ಹೊರಟುಹೋದಿರಿ. ಅದನ್ನ ನಾನೇ ನೋಡಿದೆ. ನೆನ್ನೆ ಒಂದು ದಿನ ಬಿಟ್ಟರೆ ನೀವು ಯಾವತ್ತೂ ಕ್ಲಾಸು ತಪ್ಪಿಸಿಲ್ಲ. ತುಂಬ ಚನ್ನಾಗಿ ಪಾಠ ಹೇಳ್ತೀರಿ ಅಂತ ಹುಡುಗರೆಲ್ಲ ಹೊಗಳ್ತಾರೆ.'

'ಮತ್ತೆ ಇವರ್‍ಯಾಕೆ ಹೀಗೆ ನೋಟೀಸ್ ಕೊಟ್ಟಿದಾರೆ?' – ಎಂದು ಪ್ರಿನ್ಸಿಪಾಲರ ಕಾಗದವನ್ನು ಅವರ ಕೈಗೆ ಕೊಟ್ಟಳು.

ಓದಿಕೊಂಡು ಅವರು ಹೇಳಿದರು: 'ನನಗೆ ಅನ್ನಿಸುತ್ತೆ: ಗೌಡರ ಹುಡುಗನ್ನ ಮದುವೆಯಾಗ್ತೀರಿ ಅಂತ ನಿಮ್ಮ ಮೇಲೆ ಎಲ್ಲರಿಗೂ ಅಸಮಾಧಾನವಿದೆ. ಪ್ರಿನ್ಸಿಪಾಲರ ಕೈಲಿ ಈ ವಿಷಯದಲ್ಲಿ ತುಂಬ ಅಹಂಕಾರದಿಂದ ಮಾತಾಡಿದಿರಂತೆ ನೀವು. ನಿಮ್ಮನ್ನ ಈ ಕಾಲೇಜಿನಿಂದ ತೆಗೆಯೂ ದಿನ ದೂರವಿಲ್ಲ.'

ಅವಳು ನಿಂತಿದ್ದ ಒಂಟಿ ಕಾಲೂ ಮುರಿದಂತಾಯಿತು. 'ಈಗ ನಾನು ಏನು ಮಾಡಲಿ?' – ಎಂದು ಕೇಳಿದಳು.

"ನೆನ್ನೆ ದಿನದ ತಾರೀಕು ಹಾಕಿ, 'ನನಗೆ ಮೈ ಹುಶಾರಿಲ್ಲದ್ದರಿಂದ ಮನೆಗೆ ಹೋಗ್ತಿದೀನಿ. ಇವತ್ತಿಗೆ ರಜಾ ಕೊಡಿ' ಅಂತ ಒಂದು ಕಾಗದ ಬರೆದು ಕಳಿಸಿ."

'ಇವತ್ತು ಪಾಠ ಮಾಡುಕ್ಕೂ ನನಗೆ ಸಾಧ್ಯವಿಲ್ಲ.'

'ಇವತ್ತಿಗೂ ರಜಾ ಕೇಳಿ ಇನ್ನೊಂದು ಚೀಟಿ ಬರೆಯಿರಿ.'

ಅವರು ಹೇಳಿದಂತೆ ಅವಳು ಬರೆದಳು. 'ಮುದ್ದೇಗೌಡರೆ, ನಿಮ್ಮ ಕೈಲಿ

ಒಂದೆರಡು ಕಷ್ಟ ಸುಖ ಮಾತಾಡಬೇಕು. ದಯವಿಟ್ಟು ನನ್ನ ಕೋಣೆಗೆ ಬರ್ತೀರಾ?'

'ಎರಡು ಗಂಟೆಗೆ ನನ್ನ ಕ್ಲಾಸೆಲ್ಲ ಮುಗಿಯುತ್ತೆ.'

'ಬನ್ನಿ. ಕಾಯ್ತಿರ್ತೀನಿ' – ಎಂದು ತನ್ನ ರೂಮಿನ ಮನೆಯ ನಂಬರು ಮತ್ತು ಗುರುತು ಹೇಳಿ, ರಜೆಯ ಚೀಟಿಯನ್ನು ಅವರ ಕೈಯಲ್ಲೇ ಕೊಟ್ಟು ಅಲ್ಲಿಂದ ಹೊರಟುಬಂದಳು. ಮನಸ್ಸು ಕೋಪದಿಂದ ಕುದಿಯುತ್ತಿತ್ತು. ಪ್ರಿನ್ಸಿಪಾಲರ ಕೈಲಿ ಜಗಳಕಾಯಬೇಕೆಂದು ಅವಳ ಇಚ್ಛೆ ಇರಲಿಲ್ಲ; ಕಾಯಲೂ ಇಲ್ಲ. ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಿದ್ದಳು ಅಷ್ಟೆ. ಆದರೆ ಇವರು ಈ ಮಟ್ಟಕ್ಕೆ ಹೋಗುತ್ತಾರೆ ಎಂದು ಕಲ್ಪಿಸಿಕೊಂಡೂ ಇರಲಿಲ್ಲ. ಇವರಿಗೆ ಏನು ಮಾಡುವುದು ಎಂದು ಯೋಚಿಸುತ್ತಾ ರಸ್ತೆಯಲ್ಲಿ ಬರುವಾಗ, ಅವಳು ಮಧ್ಯಾಹ್ನದ ಹೊತ್ತು ಸಾಮಾನ್ಯವಾಗಿ ಊಟ ಮಾಡುವ ಹೋಟೆಲು ಕಾಣಿಸಿತು. ಏನಾದರೂ ತಿನ್ನದಿದ್ದರೆ ನಡೆಯಲು ಶಕ್ತಿ ಇರುವುದಿಲ್ಲವೆಂಬ ಅರಿವಾಗಿ ಅದನ್ನು ಪ್ರವೇಶಿಸಿದಳು. ಒಂದು ಪ್ಲೇಟ್ ಊಟಕ್ಕೆ ಹೇಳುವಾಗ ಅದರ ಬೆಲೆ ಒಂದು ರೂಪಾಯಿ ಕೊಟ್ಟ ಮೇಲೆ ಇನ್ನು ತನ್ನ ಹತ್ತಿರ ನಾಲ್ಕು ರೂಪಾಯಿ ಮಾತ್ರ ಉಳಿಯುತ್ತದೆ, ಇನ್ನು ಈ ಕೆಲಸವೂ ಹೋಗುತ್ತದೆ, ಹೋಗಿಯೇ ಇದೆ ಎಂಬ ಜ್ಞಾಪಕವಾಯಿತು.

ಕೋಣೆಗೆ ಬಂದು ಬಲಮಗ್ಗುಲಾಗಿ ಮಲಗಿದರೆ ಶ್ರೀನಿವಾಸನ ನೆನಪೇ ಮನಸ್ಸನ್ನು ತುಂಬಿತು. ಇವನ್ಯಾಕೆ ಹೀಗೆ ಮಾಡಿದ? ನಾನೇ ಅವನ ಸ್ವಭಾವವನ್ನು ಪೂರ್ತಿ ತಿಳಿದುಕೊಳ್ಳಲಿಲ್ಲವೆ, ಎಂಬ ಪ್ರಶ್ನೆಯು ಆ ನೆನಪನ್ನು ಅನುಸರಿಸಿತು. ಇದೇ ಯೋಚನೆಯಲ್ಲಿ ಸ್ವಲ್ಪ ಮಂಪರು ಬಂತು. ಎಚ್ಚರವಾದಾಗ ಬಾಗಿಲು ಬಡಿದ ಶಬ್ದವಾಗುತ್ತಿತ್ತು. ಅವಳು ಕೋಣೆಯ ಒಂದು ಬಾಗಿಲನ್ನು ಹಾಕಿ ಇನ್ನೊಂದನ್ನು ಅರ್ಧ ಓರೆ ಮಾಡಿದ್ದಳು. ಇವಳು ಮಲಗಿರುವುದನ್ನು ಕಂಡ ಮುದ್ದೇಗೌಡರು ಹೊಸಲಿನ ಹೊರಗೆ ನಿಂತೇ, ಎಚ್ಚರವಾಗಲೆಂದು ಮೃದುವಾಗಿ ಬಾಗಿಲು ಬಡಿಯುತ್ತಿದ್ದರು. ಎದ್ದು ಅವರನ್ನು ಒಳಗೆ ಕರೆದು, ಕೂರಲು ಕುರ್ಚಿಯನ್ನು ಸರಿಸಿ, ಬಚ್ಚಲಿಗೆ ಹೋಗಿ ಕಣ್ಣು ತೊಳೆದುಕೊಂಡು ಬಂದು ತಾನು ಮಂಚದ ಮೇಲೆ ಕುಳಿತಳು.

ಮುದ್ದೇಗೌಡರೇ ಮಾತು ಶುರುಮಾಡಿದರು: 'ಇವರಿಗೆ ನೀವ್ಯಾಕೆ ಹೆದರಬೇಕು? ಆದಷ್ಟು ಬೇಗ ಮದುವೆ ಮಾಡ್ಕಂಡು ಸುಖವಾಗಿರಿ. ಕೆಲಸ ಇಲ್ದೆ ಇದ್ರೆ ಆಗಾಕಿಲ್ವಾ?'

'ಅದೇ ವಿಷಯ ನಿಮ್ಮ ಕೈಲಿ ಹೇಳಬೇಕು ಅಂತ ಕರೆದೆ' – ಎಂದು ತನ್ನ,

ಶ್ರೀನಿವಾಸನ ಊರು, ಇಬ್ಬರ ತಂದೆ ತಾಯಿಯರ ಹಿನ್ನೆಲೆ ಮತ್ತು ಪ್ರತಿಕ್ರಿಯೆಗಳನ್ನು ತಿಳಿಸಿ, ನೆನ್ನೆ ಅವನಿಂದ ಬಂದ ಕಾಗದವನ್ನು ಅವರ ಕೈಗೆ ಕೊಟ್ಟಳು.

ಅದನ್ನು ಓದಿಕೊಂಡ ಅವರ ಮುಖದಲ್ಲಿ ಖಿನ್ನತೆ ಮೂಡಿತು. ಈ ಮದುವೆಯ ಬಗೆಗೆ ಮೂರು ನಾಲ್ಕು ಪ್ರಶ್ನೆಗಳನ್ನು ಕೇಳಿ ತಿಳಿದುಕೊಂಡರು. ಅನಂತರ ಎರಡು ನಿಮಿಷ ಯೋಚಿಸಿ ಎಂದರು: 'ಹಾಗಾದರೆ ಕಾಲೇಜಿನೋರು ನಿಮ್ಮನ್ನ ತೆಗೆದುಹಾಕೂದೇ ಖಂಡಿತ.'

'ಅದು ನನಗೂ ಅನ್ನಿಸಿದೆ' – ಎಂದು, ಪ್ರಿನ್ಸಿಪಾಲರು ಹಿಂದೆ ಒಂದು ದಿನ ತನ್ನನ್ನು ಕರೆಸಿ ಮಾತನಾಡಿದುದನ್ನೂ ವಿವರಿಸಿ ಕೇಳಿದಳು: 'ಪ್ರಿನ್ಸಿಪಾಲರಿಗೆ ಈ ವಿಷಯ ಹ್ಯಾಗೆ ತಿಳಿಯಿತೊ?'

'ಮನೆ ಮಾಲೀಕರ ಕೈಲಿ ನೀವು ಜಗಳ ಕಾದಿದಿರಂತೆ. ಮನೆ ಬಿಡುಲ್ಲ ಅಂದಿರಂತೆ. ರೂಮಿಗೆ ಬೇರೆ ಜಾತಿಯೋನನ್ನ ಕರಕೊಂಡು ಕೆಟ್ಟಕೆಲಸ ಮಾಡ್ತಿದೀರಂತೆ. ಅವರು ಕಾಲೇಜು ಕಮಿಟಿಯ ಒಬ್ಬ ಮೆಂಬರಿಗೆ ಹೇಳಿದರಂತೆ. ಅವರಿಂದ ಸೆಕ್ರೆಟರಿಗೆ ಹೋಗಿ ಅದು ಪ್ರಿನ್ಸಿಪಾಲರ ಮೂಲಕ ಕೆಲಸ ಮಾಡಿದೆ.'

ಈಗ ಅವಳಿಗೆ ವಿಷಯ ಸ್ಪಷ್ಟವಾಯಿತು. ತಾನು ಈ ಕೋಣೆಯನ್ನು ಬಿಟ್ಟುಬಿಟ್ಟಿದ್ದರೆ ಇಷ್ಟೆಲ್ಲ ಆಗುತ್ತಿರಲಿಲ್ಲವೇನೊ! ಅವರು ಎಷ್ಟೇ ವ್ಯಂಗ್ಯವಾಗಿ ಆಡಿದ್ದರೂ ಸಹಿಸಿಕೊಂಡು ಸುಮ್ಮನೆ ಬೇರೆ ಕೋಣೆ ಹುಡುಕಿಕೊಳ್ಳಬೇಕಾಗಿತ್ತು. ಆದರೆ ಇವರು ಒಳಗೇ ಇಷ್ಟೆಲ್ಲ ಮಾಡುತ್ತಾರೆಂದು ಹೇಗೆ ತಿಳಿಯಬೇಕಾಗಿತ್ತು? – ಎಂಬ ಪ್ರಶ್ನೆ ಬಂತು. ಅದರ ಹಿಂದೆಯೇ, ಹೀಗಾಗುತ್ತೆ ಅಂತ ಗೊತ್ತಿದ್ದರೂ ನಾನು ಬಗ್ಗಿ ನಡೀತಿದ್ದೆನೆ? ವಿರೋಧಿಸುತ್ತಲೇ ಇದ್ದೆ. ಹಟ ಕೆಟ್ಟದ್ದು ಅಂತ ಅಪ್ಪ ನನಗೆ ಚಿಕ್ಕ ಹುಡುಗಿಯಿಂದಲೂ ಹೇಳ್ತಿದ್ದ. 'ಈಗ ನನ್ನ ಹತ್ರ ಹಟ ನಡೆಯುತ್ತೆ. ತಬ್ಬಲಿ ಮಗಳು ಅಂತ ನಾನು ಕೇಳ್ತೀನಿ. ಆದರೆ ಮುಂದೆ ನಿನಗೆ ತಲೆಗೆ ಬಡಿದು ಪೆಟ್ಟಾಗುತ್ತೆ' – ಅಂತ ಎಷ್ಟೋ ದಿನ ಅಂದಿದ್ದ. ಆಗ ನನಗೆ ಯಾವುದೂ ಅರ್ಥವಾಗ್ತಿರಲಿಲ್ಲ ಎಂದುಕೊಂಡಳು.

ಮುದ್ದೇಗೌಡರು ಎಂದರು: 'ಈ ಜಾತಿಯ ಕೋಟಲೆ ವಿಪರೀತ. ಇನ್ನೊಂದು ಅಂತ ಅಲ್ಲ. ಹೆಜ್ಜೆ ಹೆಜ್ಜೆಗೂ ಕಾಲಿಗೆ ತೊಡರುತ್ತೆ. ಮುಂದೆ ನಡೆಯುಕ್ಕೇ ಆಗುಲ್ಲ.'

'ಅಂದ ಹಾಗೆ ನೋಡಿ. ಈ ಕಾಲೇಜಿನಲ್ಲಿ ಬ್ರಾಹ್ಮಣರಲ್ಲದೋರು ಎಷ್ಟು ಜನ ಇದಾರೆ?'

'ನಾನೊಬ್ಬನೇ.'

'ನಿಮ್ಮೊಬ್ಬರನ್ನಾದ್ರೂ ಯಾಕೆ ತಗಂಡ್ರು?'

"ಒಂದೇ ಜಾತಿಯೋರನ್ನ ತುಂಬಿಕತ್ತಾರೆ ಅಂತ ಜನ ಅನ್ನಬಾರ್ದು ಅಂತ. ಸ್ಟಾಫ್ ರೂಮಿನಲ್ಲಿ ನನ್ನ ಬೀರು ಇದೆಯಲ್ಲ, ಅದರ ಹಿಂದ್ಗಡೆ ಒಂದು ದಿನ ನಿಂತಿದ್ದೆ. ಆಚೆಕಡೆ ಕುರ್ಚಿಮ್ಯಾಲೆ ಕೂತುಕೊಂಡು ಇಬ್ಬರು ಮಾತಾಡ್ಕತ್ತಿದ್ರು. ನಾನಿದೀನಿ ಅಂತ ಗೊತ್ತಿರಲಿಲ್ಲ. 'ಇಪ್ಪತ್ತೈದು ಜನದ ಮಂತ್ರಿಮಂಡಲದಲ್ಲಿ ಒಬ್ಬ ಬ್ರಾಹ್ಮಣನನ್ನ ಹೆಸರಿಗೆ ಇಟ್ಟುಕೊತ್ತಾರಲ, ಹಾಗೆ ಈ ಮುದ್ದೇಗೌಡ್ರನ್ನ ನಮ್ಮ ಕಾಲೇಜು ಸ್ಟಾಫಿನಲ್ಲಿ ಇಟ್ಕಂಡಿದೀವಿ, ಸ್ಯಾಂಪಲ್ ಅಂತ' – ಅಂತಿದ್ರು. ಕೇಳಿಸ್ಕಂಡು ಸಿಟ್ಟೇನೋ ಬಂತು. ಆಮೇಲೆ ಅದೂ ನಿಜ ಅನ್ನಿಸ್ತು."

'ನೀವು ಈ ಕಾಲೇಜಿಗೆ ಯಾಕೆ ಸೇರ್ಕಂಡ್ರಿ? ಸರ್ಕಾರೀ ಕಾಲೇಜಿಗೆ ಸೇರ್ಕ ಭೌದಾಗಿತ್ತಲ?'

'ಭೌದಾಗಿರುಕ್ಕೆ ನನ್ನ ಕೈಲಿದೆಯೆ? ಈಗ ನಮ್ಮ ಜಾತೀಲೂ ಎಲ್ರಿಗೂ ಕೆಲ್ಸ ಸಿಕ್ಕಲ್ಲ. ಕೊಡುಕ್ಕೆ ಎಲ್ಲಿದೆ ಕೆಲ್ಸ? ಈಗ ಹದಿನೈದು ಇಪ್ಪತ್ತು ವರ್ಷದ ಹಿಂದೆ ಬ್ರಾಹ್ಮಣೇತರ್ರಿಗೆಲ್ಲ ಗ್ಯಾರಂಟಿಯಾಗಿ ಸಿಕ್ತಿತ್ತು. ಈಗ ನಮ್ಮಲ್ಲೂ ಓದ್ತಾ ಇರೋರ ಸಂಖ್ಯೆ ಹೆಚ್ಚಾಗಿದೆ. ನಾನು ಬಡವ. ಶಿಫಾರಸಿಲ್ಲದೋನು. ಸರ್ಕಾರೀ ಕಾಲೇಜಿನಲ್ಲಿ ಸಿಕ್ಕೊ ಛಾನ್ಸ್ ಇಲ್ಲವೇ ಇಲ್ಲ. ನೋಡಿ, ಅರ್ಥಶಾಸ್ತ್ರ ಓದಿರೋನು, ನಾನು ಹೇಳ್ತೀನಿ: ಉದ್ಯೋಗದ ಅಗತ್ಯ, ಖಾಲಿಯಾಗುವ ಮತ್ತು ಸೃಷ್ಟಿಯಾಗುವ ಕೆಲಸಗಳ ಸಂಖ್ಯೆಯ ಪ್ರಪೋರ್ಶನ್ ಬದಲಾಗ್ತಾ ಹೋದ ಹಾಗೆ ಜಾತಿಯ ಸಮಸ್ಯೆಯೂ ಬದಲಾಗ್ತಾ ಹೋಗುತ್ತೆ. ಈಗಾಗಲೇ ಬ್ರಾಹ್ಮಣ ಬ್ರಾಹ್ಮಣೇತರ ಅನ್ನೊ ಜಗಳ ಮುಗಿದುಹೋಗಿದೆ. ಬ್ರಾಹ್ಮಣೇತರರೊಳಗೇ ಬೇರೆ ಬೇರೆ ಗುಂಪಿನ ಜಗಳ ಆರಂಭವಾಗಿದೆ. ಇನ್ನು ಹತ್ತು ಹದಿನೈದು ವರ್ಷ ದಲ್ಲಿ ಜಗಳ ಬೇರೆ ರೀತಿಯಾಗುತ್ತೆ. ಪರಿಸ್ಥಿತಿ ಖಂಡಿತ ಬದಲಾಯಿಸುತ್ತೆ. ಆದರೆ ಒಂದು ಪರಿಸ್ಥಿತಿಯ ಅನುಕೂಲಕ್ಕೆ ಅಂತ ಬೆಳೆಸಿಕೊಂಡ ವಿಷ ಮಾತ್ರ ಬೆಳೀ ತಲೇ ಇರುತ್ತೆ. ಹೊಸ ಹೊಸ ಪರಿಸ್ಥಿತಿಗೆ ತಕ್ಕ ವಿಷಗಳು ಹುಟ್ಟುತ್ತವೆ. ಅವೆಲ್ಲ ಬದುಕಿ ಬೆಳೀತವೆ' ಎಂದ ಅವರು ಕೋಟಿನ ಜೇಬಿನಿಂದ ಗಣೇಶ ಬೀಡಿಯ ಪ್ಯಾಕೆಟ್ ತೆಗೆದು, 'ಸೇದ್‌ಭೌದು ತಾನೆ?' – ಎಂದು ಅವಳ ಅನುಮತಿ ಕೇಳಿ ದರು.

ಅನಂತರ ಬೀಡಿ ಹಚ್ಚಿ ಒಂದು ಸಲ ಹೊಗೆ ಬಿಟ್ಟು ಎಂದರು: 'ಇವನು ಬೀಡಿ ಯಾಕೆ ಸೇದ್ತಾನೆ ಕಾಲೇಜ್ ಲೆಕ್ಚರರ್ ಆಗಿದ್ದುಕಂಡು, ಅಂದ್ಕತ್ತಿರೇನು? ಇದು ಎಕನಾಮಿಕಲ್. ಬರೂ ಈ ಸಂಬಳದಲ್ಲಿ ಕೋಣೆ ಬಾಡಿಗೆ ಕೊಟ್ಟು, ಹೋಟೆಲಿನಲ್ಲಿ ಊಟ ಮಾಡಿ, ಊರಿಗೆ ಕಳಿಸಿದ ಮೇಲೆ ಸಿಗರೇಟಿಗೆ ಎಲ್ಲಿ ಉಳಿಯುತ್ತೆ?'

ಈ ಕಾಲೇಜಿನಲ್ಲಿ ಒಬ್ಬರೇ ಇದೀರಲ, ಬೇಜಾರಾಗುಲ್ವೆ ನಿಮಗೆ? ಯಾರೂ ಭೇದ ಮಾಡುಲ್ವೆ?'

"ಹಾಗೆ ತಿಳಕಂಡ್ರೆ ಹಾಗೆ, ಹೀಗೆ ತಿಳಕಂಡ್ರೆ ಹೀಗೆ. ನನ್ನ ಕೈಲಿ ಎಲ್ಲಾ ತುಂಬ ವಿಶ್ವಾಸವಾಗಿರ್ತಾರೆ. ವೆಂಕಟರಾಮಯ್ಯ್‌ನೋರು ಅಂತ ಮ್ಯಾಥ ಮ್ಯಾಟಿಕ್ಸ್ ಮೇಷ್ಟ್ರು ಇದಾರೆ ನೋಡಿ. ಉಳಿದೋರ ಜೊತೆ ಸೇರಿದಾಗ ಬರೀ ಶೂದ್ರರನ್ನ ಬೈಯ್ತಿರ್‌ತಾರೆ. ನನ್ನ ಕೈಲಿ ಬರೀ ಬ್ರಾಹ್ಮಣರನ್ನ ಬೈಯ್ತಾರೆ. ನಿಮ್ಮ ವಿಷಯ ಎಲ್ಲ ನನಗೆ ಹೇಳಿ, ಪ್ರಿನ್ಸಿಪಾಲ್ರನ್ನ, ಕಾಲೇಜು ಕಮಿಟಿಯೋರನ್ನ ಎಷ್ಟು ಬೈದ್ರು ಅಂತ. ನೀವು ಇವತ್ತು ಬರೆದು ಕೊಟ್ಟ ಲೀವ್‌ಲೆಟರ್‌ನ ಜವಾನನ ಕೈಲಿ ಕೊಟ್ಟು, 'ಇದನ್ನ ಸತ್ಯಭಾನುಮ್ಮನೋರು ನೆನ್ನೆ ಹನ್ನೊಂದು ಗಂಟೇಲೇ ನನ್ನ ಕೈಲಿ ಕೊಟ್ಟುಹೋದ್ರು. ತಕ್ಷಣ ಕಳಿಸೋದ ಮರೆತಿದ್ದೆ' ಅಂತ ನಾನಂದೆ ಅಂತ ಪ್ರಿನ್ಸಿಪಾಲರಿಗೆ ಹೇಳು ಅಂತ ಕಳುಸ್ದೆ. ಇದು ಸುಳ್ಳು ಅಂತ ಯಾರಿಗಾದರೂ ಗೊತ್ತಾಗುತ್ತೆ. ಇಷ್ಟು ಧೈರ್ಯ ನಿಮ್ಮ ಜಾತಿಯ ಯಾರಿಗೂ ಇರುಕ್ಕೆ ಸಾಧ್ಯವಿಲ್ಲ. ಯಾಕೆ ಗೊತ್ತಾ?"

ಸತ್ಯ ಸುಮ್ಮನೆ ಅವರ ಮುಖವನ್ನೇ ನೋಡುತ್ತಿದ್ದಳು.

ಅವರೇ ಅಂದರು: 'ನನ್ನ ಮೇಲೆ ಅವರು ಏನೂ ಕ್ರಮ ತಗೋಳಲ್ಲ. ಹಾಗೇನಾದ್‌ರೂ ಮಾಡಿದ್‌ರೆ, ಈ ಬ್ರಾಹ್ಮಣ ಕಾಲೇಜಿನೋರು ಅಬ್ರಾಹ್ಮಣ ಅಧ್ಯಾಪಕರನ್ನ ಹೊರಕ್ಕೆ ಹಾಕಬೇಕು ಅಂತ ಹೀಗೆ ಮಾಡಿದಾರೆ ಅಂತ ನಾನು ಗಲಾಟೆ ಎಬ್ಬಿಸಭೌದು ಅಂತ ಅವರಿಗೇ ಭಯವಿದೆ. ಅವರಿಗೆ ಈ ಭಯ ಮೊದಲಿನಿಂದ ಇರೂದನ್ನ ನನಗೆ ಹೇಳ್ದೋರೂ ವೆಂಕಟರಾಮಯ್ಯನೋರೇ. ನನಗೆ ಕೆಲಸ ಕೊಡುಕ್ಕೆ ನಮ್ಮ ಜನ ಸಹಾಯ ಮಾಡದೆ ಇರಭೌದು. ಆದರೆ ಇಂಥ ತರಲೆ ತೆಗೆದರೆ ಮಾತ್ರ ಬೇಕಾದ ಬೊಬ್ಬೆಹಾಕ್ತಾರೆ. ಸರ್ಕಾರವೂ ನನ್ನ ಸಹಾಯಕ್ಕೆ ಬರುತ್ತೆ.'

ಅವಳು ಕೇಳಿದಳು: 'ಸದ್ಯಕ್ಕೆ ನಾನು, ಇವರು ಕೇಳಿರುವ ಸಮರ್ಥನಾಯಿಷಿಗೆ ಏನಂತ ಜವಾಬು ಕೊಡಲಿ?'

'ನಾನು ಯಾವತ್ತೂ ಕ್ಲಾಸು ಬಿಟ್ಟಿಲ್ಲ. ನೆನ್ನೆಯ ದಿನ ಕಾಲೇಜಿಗೆ ಬಂದಿದ್ದೆ. ರಜ ಚೀಟಿ ಬರೆದು ಮುಷ್ಟೇಗೌಡರ ಕೈಲಿ ಕೊಟ್ಟು ಹೋಗಿದ್ದೆ ಅಂತ ಬರೆದು ಕಳಿಸಿ. ಇವತ್ತು ಬೇಡ, ನಾಳೆ ಕಾಲೇಜಿಗೆ ಬಂದ ಮೇಲೆ. ಮನಸ್ಸು ಸಮಾಧಾನ ದಲ್ಲಿಲ್ಲದಿದ್ದರೆ ನಾಳೆಯೂ ರಜಾ ಹಾಕಿ' – ಎಂದು ಹೇಳಿ ಅವರು ಹೊರಟರು.

ಬಂದವರಿಗೆ ಕೊಡಲು ರೂಮಿನಲ್ಲಿ ಯಾವ ತಿಂಡಿಯೂ ಇರಲಿಲ್ಲ. 'ಕೆಳಗೆ ನಾನೂ ಬರ್ತೀನಿ. ಕಾಫಿ ತಗೋಳಾಣ' – ಎಂದು ತಾನೂ ಎದ್ದಳು.

'ಅದೆಲ್ಲ ಉಪಚಾರ ಬೇಡಿ' – ಎಂದು ಅವರು ಹೊರಟುಹೋದರು.

ಈಗ ಅವಳ ಮನಸ್ಸನ್ನು ಬರೀ ಕಾಲೇಜಿನ, ತನ್ನ ನೌಕರಿಯ ಸಮಸ್ಯೆಯೇ ತಿನ್ನತೊಡಗಿತು. ಕೆಳಗೆ ಇಳಿದು ಹೋಗಿ ಮನೆಯ ಮಾಲೀಕರನ್ನು ದಬಾಯಿಸಿ ಬಿಡಬೇಕೆನ್ನುವಷ್ಟು ಸಿಟ್ಟು ಬರುತ್ತಿತ್ತು. ಆದರೆ ತಾಳ್ಮೆಯಿಂದಿರಬೇಕೆಂದು ಅದನ್ನು ಸಹಿಸಿಕೊಂಡು ಸುಮ್ಮನಾದಳು. ತನ್ನ ಹತ್ತಿರ ಇನ್ನು ನಾಲ್ಕು ರೂಪಾಯಿ ಉಳಿದಿದೆ. ಒಂದನೆಯ ತಾರೀಕು ಬಂದರೆ ಕೋಣೆಗೆ ಬಾಡಿಗೆ ಕೊಡ ಬೇಕು. ಇಲ್ಲದಿದ್ದರೆ ತಾನೇ ತೆರವು ಮಾಡಬೇಕು. ಅವರ ಉದ್ದೇಶ ಫಲಿಸಿದಂತಾ ಯಿತು. ಅವರು ಗೆಲ್ಲುವ ಅಥವಾ ತಾನು ಸೋಲುವ ಪ್ರಶ್ನೆಯೇ ಅಲ್ಲ. ಅವ ರೊಡನೆ ಪೈಪೋಟಿ ಹೂಡಲು ತಾನು ಇಲ್ಲಿ ಬಂದಿಲ್ಲ. ಆದರೆ ತನ್ನ ನೌಕರಿಯ ಮತ್ತು ಜೀವನದ ಪ್ರಶ್ನೆ ಏನು? ಊರಿನ ಕಡೆಗೆ ತಿರುಗಿ ನೋಡುವಂತಿಲ್ಲ. ಶ್ರೀನಿವಾಸ ತಪ್ಪಿಸಿಕೊಂಡ. ಅವನ ಸಲುವಾಗಿಯೇ ಮನೆಯ ಮಾಲೀಕನೊಡನೆ ಆದ ಜಗಳದಿಂದ ಕೆಲಸ ಹೋಯಿತು. ಪ್ರಿನ್ಸಿಪಾಲರು ಹಿಂದೆ ಒಂದು ದಿನ ಕರೆಸಿದುದು ಈ ಕೇಶವಯ್ಯಂಗಾರರ ವರದಿಯಿಂದಲೇ ಎಂದು ಈಗ ಅರ್ಥ ವಾಯಿತು.

ಅವಳು ಮರುದಿನವೂ ಬೆಳಗ್ಗೆ ಒಂಬತ್ತು ಗಂಟೆಗೆ ಹೋಗಿ ಕಾಲೇಜಿನ ಜವಾನನ ಕೈಲಿ ರಜಾ ಚೀಟಿ ಕೊಟ್ಟು ಬಂದಳು. ಇದ್ದ ನಾಲ್ಕು ರೂಪಾಯಿ ಯಲ್ಲಿ ಮಧ್ಯಾಹ್ನ ಒಂದು ಪ್ಲೇಟು ಊಟ ಮಾಡಿ ರಾತ್ರಿ ಎರಡು ಇಡ್ಲಿ ತಿಂದು ಕಾಲ ಕಳೆದಳು. ಇನ್ನು ಎರಡೂ ಮುಕ್ಕಾಲು ರೂಪಾಯಿ ಉಳಿದಿತ್ತು. ಮರು ದಿನ ಎದ್ದು ಸ್ನಾನಮಾಡಿ ಬಟ್ಟೆ ಬದಲಿಸಿ ಪಾಠಕ್ಕೆ ಸ್ವಲ್ಪ ಸಿದ್ಧತೆ ಮಾಡಿ ಕೊಂಡಳು. ದಾರಿಯಲ್ಲಿ ಎರಡು ಇಡ್ಲಿ ತಿಂದು ಕಾಲೇಜಿಗೆ ಹೋದಳು. ಅಧ್ಯಾ ಪಕರ ಕೋಣೆಗೆ ಯಾರೂ ಬಂದಿರಲಿಲ್ಲ. ಆದರೆ ಇವಳು ಒಳಗೆ ಹೋಗಿ ಕೂತ ಐದು ನಿಮಿಷಕ್ಕೇ ಜವಾನ ಬಂದು, 'ಪ್ರಿನ್ಸಿಪಾಲರು ಕರೀತಾರೆ' ಎಂದ. ಅವರಿಗೆ ತಾಳ್ಮೆಯಿಂದ ಉತ್ತರ ಕೊಡಬೇಕೆಂದು ನಿರ್ಧರಿಸಿಕೊಂಡು ಎದ್ದು ಹೋದಳು.

ಪ್ರಿನ್ಸಿಪಾಲರೇನೂ ಸಿಟ್ಟು ತೋರಿಸಲಿಲ್ಲ. ಸೌಜನ್ಯದಿಂದಲೇ ಮಾತ ನಾಡಿದರು. ಅವರೇ ಮಾತು ತೆಗೆದು, 'ನಿಮ್ಮ ಮದುವೆ ತಪ್ಪಿಹೋಯಿತಂತೆ ನಿಜವೆ?' – ಎಂದು ಕೇಳಿದರು. ಈ ವಿಷಯ ಬರುತ್ತದೆಂದು ಅವಳು ನಿರೀಕ್ಷಿಸಿರ ಲಿಲ್ಲ. ತಾನು ಸಿಟ್ಟಿನ ಅಥವಾ ಅಪ್ರಿಯ ಮಾತನಾಡಬಾರದೆಂದು ನಿರ್ಧರಿಸಿದ್ದುದ ರಿಂದ ಸುಮ್ಮನೆ 'ಹೂಂ' ಎಂದಳು.

'ಹುಡುಗನ ತಂದೆ ಮಂತ್ರಿಗಳಂತೆ. ಅವರ ಕಡೆಯೋರೇ ಹೇಳಿಕೊಟ್ಟು ಹುಡುಗ ತಪ್ಪಿಸಿಕೊಳ್ಳೊ ಹಾಗೆ ಮಾಡಿದರಂತೆ.'

'ಹಾಗೆ ಕಾಣಿಸುತ್ತೆ. ಆದರೆ ಇದೇ ನಿಜವಾದ ಕಾರಣ ಅಂತ ನನಗೆ ಸದ್ಯಕ್ಕೆ ಗೊತ್ತಿಲ್ಲ.'

'ನಿಮಗೆ ಗೊತ್ತಿಲ್ಲ. ಆದರೆ ನಾನು ಹೇಳ್ತೀನಿ ಕೇಳಿ. ಇದು ಯಾವ ಕಾಲಕ್ಕೂ ನಡೆದು ಬಂದಿರೋದೇ. ಮೇಲಿನ ಜಾತಿ ಹೆಂಗಸರನ್ನ ಕೆಡಿಸಿ ಕೈಬಿಡೋದು ಅಂದ್ರೆ ಕೀಳು ಜಾತಿಯೋರು ಯಾವಾಗಲೂ ಒಂದು. ಅಪ್ಪ ಅಮ್ಮನೇ ಮೊದಲು ಅವನಿಗೆ ಪ್ರೋತ್ಸಾಹ ಕೊಟ್ಟಿರಬಹುದು. ಮದುವೆಯ ಮಾತು ಬಂದಾಗ ಬ್ಯಾಡ ಅಂದಿರಬಹುದು.'

ಇವನ್ನು ಕೇಳಿದ ತಕ್ಷಣ ಅವಳಿಗೆ ರೇಗಿಹೋಯಿತು. ಆದರೆ ತಾಳ್ಮೆಗೆಡಬಾರದೆಂಬ ನೆನಪಾಗಿ ಸುಮ್ಮನಾದಳು. ತಾನು ತೀರ ಸುಮ್ಮನೆ ಕೂತರೆ ಅವರ ಮಾತಿನ ಹಿಂದಿದ್ದ ಆರೋಪವನ್ನು ಒಪ್ಪಿಕೊಂಡಂತಾಗುತ್ತದೆನ್ನುವ ಅರಿವಾಗಿ ಉತ್ತರ ಹೇಳಿದಳು: 'ನೀವು ದೊಡ್ಡೋರು. ನೀವೇ ಹೀಗಂದ್‌ರೆ ನಾನೇನು ಹೇಳಲಿ?'

'ನಾನೇನಂದೆ?'

'ಮೇಲಿನ ಜಾತಿಯ ಹೆಂಗಸರನ್ನ ಕೆಡಿಸಿ ಕೈಬಿಡೋದು ಅಂದಿರಿ. ಅಂದ್‌ರೆ ನಾನು ಕೆಟ್ಟಿದೀನಿ ಅಂತಲೇ ಅರ್ಥ?'

ಪ್ರಿನ್ಸಿಪಾಲರಿಗೆ ಪೆಚ್ಚಾಯಿತು. ಇವಳು ಹೀಗೆ ವಾಕ್ಯವಾಕ್ಯದ ಅರ್ಥವನ್ನೂ ಹಿಡಿದು ಕೇಳುವುದು ಅವರಿಗೆ ಅಧಿಕಪ್ರಸಂಗಿತನವೆಂದು ಕಂಡಿತು. ಆದರೂ ತಮ್ಮ ಅಸಮಾಧಾನವನ್ನು ತೋರ್ಪಡಿಸಿಕೊಳ್ಳದೆ, 'ಕೆಡಿಸೋದು ಅಂದ್‌ರೆ ನನ್ನ ಅರ್ಥ ಕೆಟ್ಟಿದ್ದೀನೀ ಅಲ್ಲ. ಜನದಲ್ಲಿ ಹೆಸರು ಕೆಡಿಸೋದು ಅಂತ. ಈಗ ನೋಡಿ. ನಿಮ್ಮ ಊರಿನಲ್ಲಿ, ಸ್ನೇಹಿತರು ಸಹೋದ್ಯೋಗಿಗಳ ಪೈಕಿ ಎಲ್ಲ, ಅವನನ್ನೇ ಮಾಡಿಕೊಳ್ತೀನಿ ಎಂದು ನೀವು ಹಟ ಹಿಡಿದದ್ದು ಗೊತ್ತಿದೆ. ಈಗ ಅವನೇ ಬೇಡ ಅಂತ ದೂರ ಮಾಡಿದ. ಅಂದ್ರೆ ಯಾರು ಕೀಳಾಯಿತು? ನೀವೇ. ಸ್ವಧರ್ಮೇ ನಿಧನಂ ಶ್ರೇಯಃ ಅನ್ನೋ ಮಾತಿನ ಅರ್ಥ ಇಷ್ಟೇ. ನಮ್ಮ ಹೆಣ್ಣುಮಕ್ಕಳು ಎಚ್ಚರವಾಗಿರಬೇಕು. ನಮ್ಮ ನೌಕರಿ ಹೋಯ್ತು. ನಮ್ಮ ಪ್ರಮೋಶನ್ ಹೋಯ್ತು. ನಮ್ಮ ಪೌರೋಹಿತ್ಯ ಹೋಯ್ತು. ನಮ್ಮ ಹೆಣ್ಣುಮಕ್ಕಳ ಗೌರವವೂ ಹೋದರೆ ಉಳಿಯೋದೇನು?'

ಅವಳು ಯಾವ ಮಾತೂ ಆಡಲಿಲ್ಲ: ಸುಮ್ಮನೆ ಕುಳಿತಿದ್ದಳು. ಎರಡು ನಿಮಿಷ ಅವಳ ಉತ್ತರ ಅಥವಾ ಪ್ರತಿಕ್ರಿಯೆಗೆ ಕಾದನಂತರ ಪ್ರಿನ್ಸಿಪಾಲರೇ ಮುಂದುವರಿಸಿದರು: 'ಅವತ್ತು ನಾನು ಕರೆದು ಕೇಳಿದ ದಿನ ದೊಡ್ಡ ಲೆಕ್ಚರ್ ಮಾಡಿದಿರಿ. ನೀವು ಇತಿಹಾಸ ಓದಿದೋರು. ಈಗಿನ ಕಾಲದೋರು. ಇದು ಕಲಿಗಾಲ ಅನ್ನೋದು ಸುಳ್ಳಲ್ಲ. ಕೀಳು ಜಾತಿಯೋರು ಮೇಲೆ ಬಂದು ನಮ್ಮನ್ನ

ತುಳೀತಿರೂದು ಸುಳ್ಳಲ್ಲ. ನಾನು ಅನುಭವಿಸಿರೂದೇ ಇದಕ್ಕೆ ಸಾಕ್ಷಿ. ಈಗ ಲಾದ್ರೂ ದೊಡ್ಡೋರು ಹೇಳಿದ ಮಾತು ಕೇಳೂದ ಕಲ್ತುಕೊಳ್ಳಿ. ನಿಮ್ಮ ತಂದೆ ಹತ್ತಿರ ಹೋಗಿ ತಪ್ಪಾಯ್ತು ಅಂತ ಕ್ಷಮಾಪಣೆ ಕೇಳ್ಕಳಿ.'

ಇನ್ನು ಸುಮ್ಮನಿದ್ದು ಅವರು ಹೇಳುವುದನ್ನು ಮೌನವಾಗಿ ಕೇಳಿ ಅದಕ್ಕೆ ತನ್ನ ಸಮ್ಮತಿ ಇದೆ ಎಂಬ ಅರ್ಥ ಅವರ ಮನಸ್ಸಿನಲ್ಲಿ ಹುಟ್ಟಲು ಅವಕಾಶ ಕೊಡುವುದು ಅವಳಿಗೆ ಸಾಧ್ಯವಾಗಲಿಲ್ಲ. ಆದರೆ ತಾಳ್ಮೆ ಕಳೆದುಕೊಳ್ಳಕೂಡದೆಂಬ ಪ್ರಜ್ಞೆಯೂ ಹೋಗಲಿಲ್ಲ. ಅವಳು ನಿಧಾನವಾಗಿ ಹೇಳಿದಳು: 'ಅವರು ತಪ್ಪು ಮಾಡಿರಬಹುದು. ನಾನು ನಂಬಿದ ಮನುಷ್ಯ ಹೇಡಿಯಾಗಿರಬಹುದು. ಆದರೆ ನಾನು ಮಾಡಿದ್ದು ತಪ್ಪಲ್ಲ. ವರ್ಣವ್ಯವಸ್ಥೆ ಮತ್ತು ಬ್ರಹ್ಮ ಶೂದ್ರ ಭೇದಗಳು ಅನೀತಿ, ಅಧರ್ಮದ್ದು ಅನ್ನುವ ನನ್ನ ನಂಬಿಕೆ ಇವತ್ತಿಗೂ ಗಟ್ಟಿಯಾಗಿದೆ. ಅದು ತಪ್ಪು ಅಂತ ಯಾರನ್ನೂ ಯಾವತ್ತೂ ಕೇಳುವ ಅಗತ್ಯವಿಲ್ಲ.'

ಪ್ರಿನ್ಸಿಪಾಲರಿಗೆ ಮುಖಕ್ಕೆ ಹೊಡೆದಂತೆ ಆಯಿತು. ಅದನ್ನು ತೋರ್ಪಡಿಸಿ ಕೊಳ್ಳದೆ ಇರುವುದು ಅವರಿಗೆ ಸಾಧ್ಯವಾಗಲಿಲ್ಲ. 'ಆಲ್‌ರೈಟ್. ನೀವು ಹೋಗ ಬಹುದು' – ಎಂದರು.

ಅವರ ಮಾತು ಮತ್ತು ಧ್ವನಿಯ ಅರ್ಥ ಅವಳಿಗೆ ಆಯಿತು. ಅವಳೇ ಶಾಂತವಾದ ಧ್ವನಿಯಲ್ಲಿ ಹೇಳಿದಳು: 'ನಾನು ಸರಿಯಾಗಿ ಕ್ಲಾಸು ತಗೋತಿಲ್ಲ ಅಂತ ತಮಗೆ ಯಾರೋ ತಪ್ಪು ವರ್ತಮಾನ ಕೊಟ್ಟಿದಾರೆ. ಬೇಕಾದರೆ ಕ್ಲಾಸಿಗೆ ಬಂದು ವಿದ್ಯಾರ್ಥಿಗಳನ್ನೇ ಕೇಳಿ. ಆಚೆ ಮೊನ್ನೆ ಕಾಲೇಜಿಗೆ ಬಂದಿದ್ದೆ. ಹುಶಾರಿರ ಲಿಲ್ಲ. ರಜಾ ಚೀಟಿ ಕೊಟ್ಟು ಹೋದೆ. ಮೊನ್ನೆ ನೆನ್ನೆಯೂ ಮಲಗಿಯೇ ಇದ್ದೆ. ರಜಾ ಚೀಟಿ ತಮಗೆ ತಲುಪಿರಬಹುದು.'

'ಆಲ್ರೈಟ್' – ಎಂದರು ಅವರು. ಮತ್ತೆ ಏನೂ ಮಾತನಾಡಲಿಲ್ಲ. ತಾನಾಗಿ ಮಾತನಾಡುವುದು ಏನೂ ಇರಲಿಲ್ಲ. ಸುಮ್ಮನೆ ಕೂಡಲು ಮುಜುಗರವಾಯಿತು. 'ಬರ್ತೀನಿ. ನಮಸ್ಕಾರ' – ಎಂದು ಅವಳು ಎದ್ದು ಹೊರಟುಬಂದಳು.

ಆ ದಿನ ತನಗಿದ್ದ ಎರಡು ಕ್ಲಾಸುಗಳನ್ನೂ ತೆಗೆದುಕೊಂಡಳು. ಅವಳು ಅಧ್ಯಾಪಕರ ಕೋಣೆಯಲ್ಲಿದ್ದಾಗ ಮುದ್ದೇಗೌಡರು ತರಗತಿಗೆ ಹೋಗಿದ್ದರು. ಅವರು ಬರುವ ತನಕ ಒಬ್ಬಳೇ ಕೂತಿರುವುದು ಬೇಸರವೆನಿಸುತ್ತಿತ್ತು. ಕೋಣೆ ಯಲ್ಲಿದ್ದ ಇತರ ಕೆಲವು ಅಧ್ಯಾಪಕರು ಮತ್ತು ಅಧ್ಯಾಪಿಕೆಯರು ತಮ್ಮ ಪಾಡಿಗೆ ತಾವಿದ್ದರು. ಯಾರೂ ಬಾಯಿ ಬಿಟ್ಟು ಆಡದಿದ್ದರೂ, ತನ್ನ ಮದುವೆ ತಪ್ಪಿರುವ ಸಂಗತಿ ಎಲ್ಲರಿಗೂ ತಿಳಿದಿದೆ ಎಂದು ಅವಳಿಗೆ ಎನಿಸಿತು. ಇದನ್ನು ಪ್ರಿನ್ಸಿಪಾಲ ರಿಗೆ ಯಾರು ಹೇಳಿರಬಹುದು, ಎಂಬ ಅನುಮಾನ ಬಂತು. ಹೇಗಾದರೂ ಸರಿ,

ಅವರನ್ನು ಕೇಳಬೇಕೆಂದು ಕಾದು ಕುಳಿತಳು. ಗಂಟೆಯಾದ ಎರಡು ನಿಮಿಷಕ್ಕೆ ಮುದ್ದೇಗೌಡರು ಸೀಮೆಸುಣ್ಣದ ಹಿಟ್ಟು ಬಳಿದ ಬಲಗೈಯನ್ನು ಕೋಟಿನಿಂದ ದೂರ ಹಿಡಿದುಕೊಂಡು ಬಂದರು. ತಾವೇ ಇವಳ ಹತ್ತಿರ ಬಂದು, 'ಪ್ರಿನ್ಸಿಪಾಲರು ಕರೆಸಿದ್ದರಂತೆ?' – ಎಂದರು.

'ಹೌದು.'

'ನಿಮ್ಮ ಕ್ಲಾಸೆಲ್ಲ ಮುಗೀತಾ?'

'ಹೂಂ. ನಿಮ್ಮುನ್ನೇ ಕಾಯ್ತಿದ್ದೆ.'

'ನಿಮ್ಮ ಕೋಣೆಗೆ ನಡೀರಿ. ಅರ್ಧ ಗಂಟೇಲಿ ಬರ್ತೀನಿ. ಇಲ್ಲಿ ಮಾತು ಬ್ಯಾಡ' – ಎಂದು ಹೇಳಿ ಅವರು ಕೈ ತೊಳೆದುಕೊಳ್ಳಲು ಹೋದರು. ಅವಳು ಎದ್ದು ನಡೆದು ಹೋಟೆಲಿಗೆ ಹೋಗಿ ಒಂದು ರೂಪಾಯಿ ಕೊಟ್ಟು, ಒಂದು ಪ್ಲೇಟ್ ಊಟ ಮಾಡಿ ಕೋಣೆಗೆ ಬಂದ ಹತ್ತು ನಿಮಿಷದಲ್ಲಿ ಅವರು ಬಂದರು. ಜೊತೆಯಲ್ಲಿ ಅವರ ಸ್ನೇಹಿತರಾದ ವೆಂಕಟರಾಮಯ್ಯನವರು. ವೆಂಕಟರಾಮಯ್ಯನವರ ವಯಸ್ಸು ಸುಮಾರು ಐವತ್ತು. ಮುಂಭಾಗ ಬೊಕ್ಕಾದ ತಲೆ. ಉದ್ದ ಮೂಗು ಸಣ್ಣ ಕಣ್ಣುಗಳ ಕಪ್ಪು ಬಣ್ಣದ ಮುಖ. ಕಾಟನ್ ಸೂಟು ಹಾಕುತ್ತಾರೆ. ಅವರಿಗೂ ಮುದ್ದೇಗೌಡರಿಗೂ ತುಂಬ ವಿಶ್ವಾಸ ಎಂದು ಯಾರಾದರೂ ಹೇಳಬಹುದು. ಒಳಗೆ ಬಂದ ತಕ್ಷಣ ಅವರೇ ಎಂದರು: 'ಇವ್ರನ್ಯಾಕೆ ಕರ್ಕಂಡು ಬಂದ್ರಿ ಅಂತ ಮುದ್ದೇಗೌಡುರ್‌ನ್ನ ಕೇಳಬ್ಯಾಡಿ. ನಿಮ್ಮ ಹಿತೈಷಿಯಾದದ್ದರಿಂದಲೇ ನಾನೂ ಬಂದಿದೀನಿ. ಪ್ರಿನ್ಸಿಪಾಲರ ಹತ್ತಿರ ಏನು ಮಾತಾಯಿತು ಹೇಳಿ.'

ನಡೆದದ್ದನ್ನೆಲ್ಲ ಅವಳು ವಾಸ್ತವವಾಗಿ ಹೇಳಿದಳು. ಅನಂತರ ಅವಳೇ ಕೇಳಿದಳು: 'ಮದುವೆ ತಪ್ಪಿಹೋಗಿದೆ ಅಂತ ಅವರಿಗೆ ಹ್ಯಾಗೆ ಗೊತ್ತಾಯ್ತು?'

ವೆಂಕಟರಾಮಯ್ಯನವರು ತಕ್ಷಣ ಹೇಳಿದರು: 'ಮೊನ್ನೆ ನಿಮ್ಮ ರೂಮಿನಿಂದ ಬಂದ ಕೂಡಲೇ ಮುದ್ದೇಗೌಡರು ನನಗೆ ಹೇಳಿದರು. ನಿಮಗೆ ಸಹಾಯ ಮಾಡಬೇಕು ಅಂತ ನನಗೆ ಅನ್ನುಸ್ತು. ಶೂದ್ರನನ್ನ ಬ್ರಾಹ್ಮಣ ಕನ್ಯೆ ಕಟ್ಕಂಡು ವರ್ಣಸಂಕರವಾಗುತ್ತಲ ಅನ್ನೂ ಸಿಟ್ಟಿಗೆ ಕಮಿಟಿಯ ಮುದಿಗೂಬೆಗಳೆಲ್ಲ ನಿಮ್ಮ ಮೇಲೆ ಸಿಟ್ಟಾಗಿದ್ದರು. ಈ ಮದುವೆಯೇ ನಿಂತುಹೋಯ್ತು ಅಂತ ಗೊತ್ತಾದರೆ ಅವರ ಸಿಟ್ಟು ಇಳಿಯುತ್ತೆ ಅಂತ ನಾನೇ ಪ್ರಿನ್ಸಿಪಾಲರಿಗೆ ನೆನ್ನೆ ಹೇಳಿದೆ.'

ಮುದ್ದೇಗೌಡರೆಂದರು: 'ಇವರೇ ಬೇಡ ಅಂದ್ರು ಅಂತ ಗೊತ್ತಾಗಿದ್ರೆ ಅವರಿಗೆ ಸಮಾಧಾನವಾಗ್ತಿತ್ತು. ಶೂದ್ರ ಹುಡುಗನೇ ಬ್ಯಾಡ ಅಂದದ್ದರಿಂದ ಪೂರ್ತಿ ಸಮಾಧಾನವಾಗಿಲ್ಲ.'

'ಅದಕ್ಕೇನು ಮುಟ್ಟಿಸಬೇಕ್ರೀ? ಇಲ್ಲಾ ಸಾರ್, ಈ ಹುಡುಗಿಯೇ ಬ್ಯಾಡ

ಅಂದರಂತೆ. ಏನೋ ಒಂದು ಕೆಟ್ಟ ಗಳಿಗೇಲಿ ಈ ಯೋಚನೆ ಬಂದಿತ್ತು. ಇದು ತಪ್ಪು ಅಂತ ಈಗ ಆಕೆಯೇ ಪಶ್ಚಾತ್ತಾಪ ಪಟ್ಟಿದಾರೆ ಅಂತ ನಾನು ಬೇಕಾದ್ರೆ ಅವರ ಕೈಲಿ ತಿರುಗಿಸಿಹೇಳಬಲ್ಲೆ. ಇವರು ಯಾಕೆ ಹೋಗಿ ಆ ಮುದಿಗೂಬೆ ಕೈಲಿ ನಾನು ನಂಬಿದ್ದೇ ಧರ್ಮ ಅಂತ ಅನ್ನಬೇಕಾಗಿತ್ತು? ಇಂಥಾ ವಿಷಯದಲ್ಲಿ ಡಿಪ್ಲೊಮಸಿ ಇದ್ರೆ ಸಾಕು.'

'ಈಗ ಏನು ಮಾಡ್‌ಭೌದು ಹೇಳಿ' – ಮುದ್ದೇಗೌಡರು ಕೇಳಿದರು.

'ನೋಡ್ರೀ, ನಾನು ಇಷ್ಟು ಸೀನಿಯರ್ ಆಗಿರೋನು. ನನ್ನನ್ನ ಪ್ರಿನ್ಸಿಪಾಲ್ ಮಾಡುಕ್ಕೇನಾಗಿತ್ತು? ಅಧ್ಯಕ್ಷರು ಸೆಕ್ರೆಟರಿಗಳ ಒಳಪಂಗಡಕ್ಕೆ ಸೇರಿದ ಬ್ರಾಹ್ಮಣ ಅಲ್ಲ ಅಂತ ನನ್ನನ್ನ ಕೈಬಿಟ್ಟು, ಅವರ ಒಳಜಾತಿಯೋನು ಅಂತ ಆ ರಿಟೈರಾದ ಗೂಬೇನ ತಂದು ಕೂರಿಸಿದ್ರು. ನಾನು ಪ್ರಿನ್ಸಿಪಲ್ ಆಗಿದ್ರೆ ಇಂಥದನ್ನೆಲ್ಲ ಇಗ್ನೋರ್ ಮಾಡ್ತಿದ್ದೆ. ಇದಕ್ಕೂ ನಮ್ಮ ಕಾಲೇಜಿಗೂ ಸಂಬಂಧವಿಲ್ಲ, ಸರಿಯಾಗಿ ಪಾಠ ಮಾಡಿಬಿಟ್ರೆ ಸಾಕು, ಅವರವರ ಪರ್ಸನಲ್ ಲೈಫ್ ನಮಗ್ಯಾಕೆ, ಶಟ್ ಅಪ್ ಅಂತಿದ್ದೆ.'

'ಈಗ ಏನು ಮಾಡಭೌದು ಅದ ಹೇಳಿ' – ಮುದ್ದೇಗೌಡರು ತಮ್ಮ ಪ್ರಶ್ನೆಯನ್ನು ಜ್ಞಾಪಿಸಿದರು.

"'ನಾನೇ ಈ ಮದುವೇನ ಬ್ಯಾಡ ಅಂದೆ. ಕೆಟ್ಟ ಗಳಿಗೇಲಿ ನನಗೆ ಆ ಯೋಚನೆ ಬಂದಿತ್ತು. ಈಗ ಆ ಗಳಿಗೆ ಕಳೀತು' ಅಂತ ಇವರು ಅಂದುಬಿಡ್ಲಿ. ಇವರು, ನಾನು, ಇಬ್ಬರೂ ಸ್ಮಾರ್ತರೇಯ. ಕಮಿಟಿ ಮೆಂಬರ್ ಸುಬ್ಬರಾಯರೂ ಸ್ಮಾರ್ತರೇಯ. ಅವರು ಮುರುಕುನಾಡಿನೋರಾಗಿರಬಹುದು. ನಾನು ಬಡಗನಾಡಿನೋನಾಗಿರಬಹುದು. ಅಂದ ಹಾಗೆ ನಿಮ್ಮ ಬೆಡಗು ಯಾವ್ದ್ರೀ?" – ಎಂದು ಸತ್ಯಳನ್ನು ಕೇಳಿದರು.

'ಅವರೂ ಸ್ಮಾರ್ತರೇ. ಇರಲಿ. ಈಗ ಏನು ಮಾಡಬೇಕು ಹೇಳಿ' – ಮುದ್ದೇಗೌಡರು ಅವರನ್ನು ಮತ್ತೆ ಕಂಬಿಯ ಮೇಲೆ ತಂದರು.

'ಸುಬ್ಬರಾಯರ ಹತ್ರ ಇವರು ಬಂದು ಹಾಗಂದ್ರೆ ಸಾಕು. ಅವರು ಕೆಲಸ ಮಾಡ್ತಾರೆ. ಈ ಪ್ರಿನ್ಸಿಪಾಲ್ ಅನ್ನಿಸ್ಕಂಡಿರೂ ಗೂಬೇಕೈಲೂ ಒಂದು ಮಾತು ಇವರು ಅನ್ಲಿ. ನೋಡಿ, ಈಗ ಇವರು ಪ್ರೊಬೇಶನ್‌ನಲ್ಲಿದಾರೆ. ಅವರು ತೆಗೆದರೂ ಏನೂ ಮಾಡೂಕ್ಕಾಗುಲ್ಲ. ಎರಡು ವರ್ಷ ಕಳೆದು ಪರ್ಮನೆಂಟ್ ಆರ್ಡರ್ ಕೈಗೆ ಬಂದುಬಿಟ್ಟರೆ ಸಾಕು. ಒಬ್ಬ ಹೊಲೇರುನ್ನ ಮದುವೆ ಮಾಡ್ಕಂಡ್ರೂ ಕಮಿಟಿಯೋರು ಏನೂ ಮಾಡುಕ್ಕಾಗುಲ್ಲ. ಜಾತೀಲೇನಿದೆ? ಕನಕದಾಸರು ಯಾವ ಜನ? ನಾವೂ ಕನಕ ಜಯಂತಿ ಮಾಡುಕ್ಕೆ ಶುರು ಮಾಡಿಲ್ವೆ

ಈಗ....ಡೆಮಾಕ್ರಸಿ ಬಂದ ಮೇಲೆ....'

ವೆಂಕಟರಾಮಯ್ಯನವರು ಇನ್ನೂ ಮುಂದೆ ಮಾತನಾಡುತ್ತಿದ್ದರು. ಆದರೆ ಅವರನ್ನು ತಡೆದು ಮುದ್ದೇಗೌಡರು ಮುಖ್ಯ ಅಂಶಕ್ಕೆ ಬಂದು ಸತ್ಯಳನ್ನು ಕೇಳಿದರು: 'ಇವರು ಹೇಳೂ ಡಿಪ್ಲೊಮಸಿಗೆ ನೀವು ಸಿದ್ಧವಾಗಿದೀರಾ?'

ಅವರು ಕೇಳುವ ಮೊದಲೇ ಸತ್ಯಳ ಮನಸ್ಸು ಅದರ ಬಗೆಗೆ ಯೋಚಿಸುತ್ತಿತ್ತು. ಡಿಪ್ಲೊಮಸಿ ಎಂದರೆ ಏನು? ಯಾರ ಯಾರ ಎದುರಿಗೆ ಹೇಗೆ ಹೇಗೆ ಬೇಕೋ ಹಾಗೆ ಹಾಗೆ ಮಾತನಾಡಿ ತನ್ನ ಉದ್ದೇಶವನ್ನು ಸಾಧಿಸಿಕೊಳ್ಳುವುದು. ಸದ್ಯಕ್ಕೆ ತನ್ನ ಉದ್ದೇಶವೇನು? ಆದರೆ ಈ ಪ್ರಶ್ನೆಗೆ ಉತ್ತರ ಸಿಕ್ಕಲಿಲ್ಲ. ಈ ಕಾಲೇಜಿನಲ್ಲಿ ನೌಕರಿಯನ್ನು ಉಳಿಸಿಕೊಳ್ಳುವುದು ಸದ್ಯಕ್ಕೆ ಅಗತ್ಯವಾಗಿದೆ. ಆದರೆ ಅದು ತನ್ನ ಉದ್ದೇಶವಲ್ಲ. ಇದಕ್ಕೆ ಸೇರುವಾಗ, ಇದರಲ್ಲೇ ಮುಂದುವರಿದು ಜೀವನ ಕಳೆಯುವುದು ತನ್ನ ಉದ್ದೇಶವಾಗಿರಲಿಲ್ಲ. ಈಗ ಇದ್ದಕ್ಕಿದ್ದಹಾಗೆ ಪರಿಸ್ಥಿತಿ ಬದಲಾಯಿಸಿದೆ. ನೌಕರಿ ಇಲ್ಲದೆ ತಾನು ಜೀವನ ಮಾಡುವುದು ಸಾಧ್ಯವಿಲ್ಲ. ಆದರೆ ಇದೇ ತನ್ನ ಮುಖ್ಯ ಉದ್ದೇಶವೆ? ಅದಕ್ಕಾಗಿ ತನ್ನ ವಿಶ್ವಾಸ ಶ್ರದ್ಧೆಗಳನ್ನು ಮುಚ್ಚಿಟ್ಟು ಸುಳ್ಳು ಹೇಳಬೇಕೆ? ಅದು ತುಂಬ ಅಪಮಾನಕರವೆನಿಸಿತು. (ತಪ್ಪೊಪ್ಪಿಕೊಳ್ಳುವುದು ಅಪಮಾನಕರವಲ್ಲ. ತಪ್ಪಲ್ಲದುದನ್ನು ತಪ್ಪೆಂದು ಒಪ್ಪಿಕೊಂಡು ಸದ್ಯದ ಕೆಲಸ ಸಾಧಿಸಿಕೊಳ್ಳುವುದು ನೀಚತನ. ತಾನೇ ತನ್ನ ವ್ಯಕ್ತಿತ್ವವನ್ನು ಬಲಿಕೊಟ್ಟುಕೊಂಡಂತೆ ಅದು.) ಎನಿಸಿತು.

ಈ ಕೆಲಸವೇ ಇಲ್ಲದಿದ್ದರೆ ಏನಾಗುತ್ತೆ, ಎಂಬ ಪ್ರಶ್ನೆ ಹುಟ್ಟಿತು. ಈ ಊರಿನಲ್ಲಿ ಬೇರೆ ಯಾವ ಕೆಲಸವೂ ಸಿಕ್ಕುವುದಿಲ್ಲವೆ? ಕೆಲಸ ಸಿಕ್ಕುವ ಕಷ್ಟ ಎಷ್ಟೆಂಬುದು ಅವಳಿಗೆ ಗೊತ್ತು. ಅಲ್ಲದೆ ಅವಳಿಗೆ ತಕ್ಷಣ ಕೆಲಸ, ಸಂಬಳ ಬೇಕಾಗಿತ್ತು. ಹತ್ತಿರ ಇರುವ ದುಡ್ಡು ಇವತ್ತು ರಾತ್ರಿಯ ಪ್ಲೇಟ್ ಊಟ, ನಾಳೆ ಬೆಳಗ್ಗೆಯ ತಿಂಡಿಗೆ ಮುಗಿದುಹೋಗುತ್ತೆ. ಮುಂದೆ ಮಾಡುವುದೇನು? ಅವಳಿಗೆ ಇದ್ದಕ್ಕಿದ್ದಹಾಗೆಯೇ ಶ್ರೀನಿವಾಸನ ಮೇಲೆ ಪ್ರಚಂಡ ಕೋಪ ಬಂತು. ಒಂದೆರಡು ಬೈಗುಳಗಳೂ ಮನಸ್ಸಿನಲ್ಲಿ ಹುಟ್ಟಿದುವು. ಆದರೆ ತಕ್ಷಣ ವಿವೇಕ ಜಾಗ್ರತವಾಗಿ, ನೌಕರಿಗೋಸ್ಕರ ಪ್ರಿನ್ಸಿಪಾಲರ ಎದುರಿಗೆ ಪಶ್ಚಾತ್ತಾಪ ವ್ಯಕ್ತಪಡಿಸುವುದು ಎಷ್ಟು ನೀಚ ಕೆಲಸವೋ, ಶ್ರೀನಿವಾಸನನ್ನು ಬೈಯುವುದೂ ಅಷ್ಟೇ ನೀಚಮನೋಭಾವವೆನಿಸಿತು. ನಾಳೆಯಿಂದ ತಾನು ಅನುಭವಿಸಬೇಕಾದ ಉಪವಾಸ. ಒಂದನೆಯ ತಾರೀಕಿನಿಂದ ವಾಸಕ್ಕೆ ಜಾಗವಿಲ್ಲದೆ ಪಡಬೇಕಾದ ಬವಣೆಗಳ ಕಲ್ಪನೆಯಿಂದ ಮನಸ್ಸು ನಿರ್ವೇದಗೊಂಡಿತು. ಆದರೆ ಸ್ವಲ್ಪ ಹೊತ್ತಿನಲ್ಲೇ ಬುದ್ಧಿ ಹೇಳಿತು: ಇಂತಹ ಇದಕ್ಕಿಂತ ಕಷ್ಟದ ಪರಿಸ್ಥಿತಿಯಲ್ಲೇ ಮನುಷ್ಯನ ವಿಶ್ವಾಸದ

ಆಳ ಗೊತ್ತಾಗುವುದು.

'ಏನಂತೀರ ಹೇಳಿ' – ವೆಂಕಟರಾಮಯ್ಯನವರು ಕೇಳಿದರು.

'ನಾನು ಯಾರನ್ನೂ ನೋಡುಲ್ಲ. ಯಾರ ಕೈಲೂ ನಂದು ತಪ್ಪು ಅಂತ ಒಪ್ಕಳುಲ್ಲ.'

'ನೋಡಿ, ಯೋಚನೆ ಮಾಡಿ. ಹಣೆ ಗಟ್ಟಿಯಾಗಿದೆ ಅಂತ ಗೋಡೆ ಹಾಯ ಬಾರ್ದು.'

'ವೆಂಕಟರಾಮಯ್ಯನೋರೇ, ಅವರು ಯೋಚನೆ ಮಾಡದೆ ಮಾತಾಡುಲ್ಲ. ನೀವು ಸುಮ್ಮನಿರಿ' – ಎಂದು ಮುದ್ದೇಗೌಡರು ತೀರ್ಮಾನ ಹೇಳಿದರು.

೫

ಅದೇ ದಿನ ಸಂಜೆ ಅವಳು ಚಿಕ್ಕಪೇಟೆಗೆ ಹೋಗಿ ಒಂದು ಚಿನ್ನ ಬೆಳ್ಳಿಯ ಅಂಗಡಿಯಲ್ಲಿ ತನ್ನ ಎರಡು ಬೆಂಡೋಲೆಗಳನ್ನು ಮಾರಿದಳು. ಐವತ್ತು ರೂಪಾಯಿ ಬಂತು. ಅಲ್ಲಿಯೇ ಇನ್ನೊಂದು ಅಂಗಡಿಯಲ್ಲಿ ಐದು ರೂಪಾಯಿ ಕೊಟ್ಟು ಒಂದು ಜೊತೆ ನಕಲಿ ಓಲೆಗಳನ್ನು ಕೊಂಡು ಕಿವಿಗೆ ಇಟ್ಟುಕೊಂಡಳು. ಹಸಿವಾಗುತ್ತಿತ್ತು. ದಾರಿಯಲ್ಲಿ ಸಿಕ್ಕಿದ ಒಂದು ಹೋಟಿಲಿಗೆ ಹೋದಳು. ಹತ್ತಿರ ಬಂದ ಮಾಣಿಯನ್ನು ಏನೇನಿವೆ ಎಂದು ಕೇಳಿದುದಕ್ಕೆ, 'ಜಿಲೇಬಿ, ಜಾಮೂನ್, ಜಾಂಗೀರ್, ಮೈಸೂರು ಪಾಕ್' – ಎಂದು ಏಳೆಂಟು ಸಿಹಿ ತಿಂಡಿಗಳ ಹೆಸರು ಹೇಳಿ, ಅನಂತರ ಖಾರದ ಹೆಸರಿನ ಪಟ್ಟಿಯನ್ನು ಪ್ರಾರಂಭಿಸಿದ.

'ಒಂದೊಂದು ಜಿಲೇಬಿ, ಜಾಮೂನ್, ಜಾಂಗೀರ್, ಮೈಸೂರು ಪಾಕ್ ಕೊಡಿ' – ಎಂದಳು.

ಮಾಣಿಗೂ ಆಶ್ಚರ್ಯವಾಯಿತು. 'ನಾಲ್ಕೂನೂವಾ ಒಟ್ಟಿಗೆ?' – ಎಂದು ಕೇಳಿದ. ಇವಳು 'ಹೂಂ' ಎಂದಳು. ಎಲ್ಲ ಸಿಹಿಯನ್ನೂ ತಿಂದು, ಮೇಲೆ ಒಂದು ದೋಸೆ ಒಂದು ಕಾಫಿ ಮುಗಿಸಿ ಎರಡೂಕಾಲು ರೂಪಾಯಿ ಬಿಲ್ಲು ಕೊಟ್ಟು ಹೊರಗೆ ಬಂದಮೇಲೆ ಎನಿಸಿತು: ಈಗ ಇದ್ದಕ್ಕಿದ್ದಹಾಗೆಯೇ ನಾಲ್ಕು ಸಿಹಿ ತಿನ್ನುವ ಮನಸ್ಸು ನನಗೆ ಏಕೆ ಬಂತು? ಎರಡೂಕಾಲು ರೂಪಾಯಿ ಖರ್ಚು ಮಾಡದೆ ಇದ್ದರೆ ಮಿತವಾಗಿ ಒಂದೂವರೆ ದಿನ ಕಳೆಯಬಹುದಾಗಿತ್ತಲ? ಅವ ದ್ದಕ್ಕೆ ಯೋಚಿಸಬಾರದೆಂದು ಸಿಟಿ ಮಾರ್ಕೆಟ್ ಹತ್ತಿರದ ಬಸ್‌ಸ್ಟಾಪಿಗೆ ನಡೆದು ಬಸ್ ಹತ್ತಿ ಕೋಣೆಗೆ ಬಂದು ಮಲಗಿದಳು. ಸ್ವಲ್ಪ ಹೊತ್ತಿಗೆ ನಿದ್ದೆ ಬಂತು.

ತಾನಾಗಿಯೇ ಕಾಲೇಜಿಗೆ ಹೋಗುವುದನ್ನು ಬಿಡಬಾರದೆಂದು ಬೆಳಗ್ಗೆ ಎದ್ದು

ರವನ್ನು ಸಿದ್ಧಮಾಡಿಕೊಂಡಳು. ಹನ್ನೊಂದು ಗಂಟೆಗೆ ಹೊರಟು ದಾರಿಯ ಹೋಟೆಲಿನಲ್ಲಿ ಒಂದು ಪ್ಲೇಟ್ ಊಟ ಮಾಡಿ ಹನ್ನೊಂದೂ ಮುಕ್ಕಾಲಿಗೆ ಕಾಲೇಜು ತಲುಪಿದಳು. ಕ್ಲಾಸು ಹನ್ನೆರಡಕ್ಕಿತ್ತು. ಇವಳು ಹೋಗಿ ಅಧ್ಯಾಪಕರ ಕೋಣೆಯಲ್ಲಿ ಕುಳಿತ ಹತ್ತು ನಿಮಿಷಕ್ಕೆ ಜವಾನ ಬಂದು ರುಜು ಮಾಡಿಸಿ ಕೊಂಡು ಒಂದು ಲಕೋಟೆಯನ್ನು ಕೊಟ್ಟ. ಅದೇನಿರಬಹುದೆಂಬ ಬಗೆಗೆ ಅವಳಿಗೆ ಸಂಶಯವಿರಲಿಲ್ಲ. ಲಕೋಟೆಯನ್ನು ಒಡೆದು ಒಳಗಿದ್ದ ಕಾಗದವನ್ನು ಓದಿ ಕೊಂಡಳು. ಪ್ರಿನ್ಸಿಪಾಲರು ಬರೆದಿದ್ದರು: 'ಸರಿಯಾಗಿ ತರಗತಿಗಳನ್ನು ತೆಗೆದು ಕೊಳ್ಳದೆ, ರಜಾ ಚೀಟಿ ಕೊಡದೆ ಕಾಲೇಜಿಗೇ ಬರದೆ ಇದ್ದ ತಪ್ಪಿಗಾಗಿ ನಿಮ್ಮ ಸಮಝಾಯಿಷಿ ಕೇಳಿದ್ದಕ್ಕೆ ಇದುವರೆಗೂ ನಿಮ್ಮಿಂದ ಉತ್ತರವಿಲ್ಲ. ಅಲ್ಲದೆ ಪುನಃ ಎರಡು ದಿನ ರಜಾ ಚೀಟಿ ಕೊಡದೆ ಕಾಲೇಜಿನಿಂದ ತಪ್ಪಿಸಿಕೊಂಡಿದ್ದೀರಿ. ಆದುದರಿಂದ ನಿಮ್ಮ ಸೇವೆಯನ್ನು ಈ ದಿನದಿಂದ ವಜಾ ಮಾಡಲಾಗಿದೆ.'

ರಜಾ ಚೀಟಿಯನ್ನು ಮುದ್ದೇಗೌಡರು ಆಫೀಸಿಗೆ ತಲುಪಿಸಿರುವ ಬಗೆಗೆ ಅವಳಿಗೆ ಅನುಮಾನವಿರಲಿಲ್ಲ. ಆದರೆ ಯಾರು ರಜಾ ಚೀಟಿ ಕಳಿಸಿದರೂ, ಕಳಿಸಿ ದ್ದಕ್ಕೆ ದಾಖಲೆ ಇರುವುದಿಲ್ಲ. ಮೇಲಧಿಕಾರಿಯು ಅದು ತಲುಪಲೇ ಇಲ್ಲವೆನ್ನ ಬಹುದು. ತನ್ನನ್ನು ಕೆಲಸದಿಂದ ತೆಗೆಯಬೇಕಾದರೆ ಇವರು ಇಷ್ಟು ಸುಳ್ಳು ಹೇಳಬೇಕೆ, ಎನಿಸಿತು. ಸುಮ್ಮನೆ ಎದ್ದು ಹೊರಟು ರೂಮಿಗೆ ಬಂದಳು. ಇನ್ನು ಮುಂದಿನ ಯೋಚನೆ ಮಾಡಬೇಕು. ಬೇರೆ ಕೆಲಸ ಹುಡುಕಬೇಕು. ಈ ಊರಿ ನಲ್ಲಿ ಇಷ್ಟು ಹೈಸ್ಕೂಲುಗಳಿವೆ. ಎಲ್ಲಾದರೂ ಕೆಲಸ ಸಿಕ್ಕಬಹುದು. ಬ್ಯಾಂಕು, ಅಂಗಡಿಗಳಲ್ಲಿ ಗುಮಾಸ್ತೆಯಾಗುವ ಅವಕಾಶ ದೊರೆಯಬಹುದು. ಯಾವು ದಾದರೂ ವೃತ್ತಪತ್ರಿಕೆಯ ಆಫೀಸಿನಲ್ಲಿ ಪ್ರಯತ್ನಿಸಬಹುದು. ಕೆಲಸ ಸಿಕ್ಕು ವುದಕ್ಕೂ ಪರಿಚಯ ಬೇಕು. ತನಗೆ ಈ ಊರಿನಲ್ಲಿ ಪರಿಚಯದವರೇ ಇಲ್ಲ. ನಾಳೆಯಿಂದ ದಿನಾ ಪತ್ರಿಕೆಯಲ್ಲಿ ಖಾಲಿ ಇರುವ ಜಾಗ ನೋಡಬೇಕು. ಹಿಂದೂ, ಟೈಮ್ಸ್ ಆಫ್ ಇಂಡಿಯಾಗಳಂತಹ ಪೇಪರು ನೋಡುತ್ತಿರಬೇಕು. ನೌಕರಿ ಬೇಕಾಗಿರುವಾಗ ಈ ಊರೇ ಆಗಬೇಕೆಂದಿಲ್ಲ. ಮದರಾಸು, ಬೊಂಬಾಯಿ, ಯಾವ ಊರಾದರೂ ಸರಿ – ಎಂದುಕೊಂಡು ಮನಸ್ಸಿಗೆ ಸಮಾಧಾನ ತಂದು ಕೊಳ್ಳಲು ಯತ್ನಿಸುತ್ತಿದ್ದಳು.

ಮೂರೂಕಾಲು ಗಂಟೆಯ ಹೊತ್ತಿಗೆ ಮುದ್ದೇಗೌಡರು ಬಂದರು. ಕುರ್ಚಿಯ ಮೇಲೆ ಕೂತ ತಕ್ಷಣ ಅವರೇ, 'ಪ್ರಿನ್ಸಿಪಾಲರ ಆರ್ಡರ್ ವಿಷಯ ಎಲ್ಲರಿಗೂ ಗೊತ್ತಾಗಿದೆ. ಕೆಲವರು ಬೇಜಾರು ಮಾಡಿಕೊಂಡಿದಾರೆ. ಬೇಕಾದರೆ ಚಿತಾವಣೆ ಮಾಡಿ ಹುಡುಗರಿಂದ ಸ್ಟ್ರೈಕ್ ಮಾಡಿಸಬಹುದು. ನಾನು ಕೆಲವು ಮಟ್ಟಿಗೆ

ಒಳಗೇ ಕೆಲಸ ಮಾಡಬಲ್ಲೆ. ನೀವು ಗಟ್ಟಿಯಾಗಿ ನಿಲ್ತೀರಾ?' ಎಂದರು.

'ನಿಂತು ಜಗಳ ಕಾಯ್ದು ಅಲ್ಲೇ ಸೇರಿದೆ ಅನ್ನಿ. ನಾನು ಮನಶ್ಶಾಂತಿಯಿಂದ ಇರುಕ್ಕೆ ಸಾಧ್ಯವಿಲ್ಲ. ಆ ಕೆಲಸ ಬೇಡಿ.'

'ಮುಂದೆ ಏನು ಮಾಡ್ತೀರಾ?'

'ಊರಿಗೆ ಹೋಗೂ ಹಾಗಿಲ್ಲ. ಇಲ್ಲೇ ಕೆಲ್ಸ ಹುಡುಕಬೇಕು. ನನಗೆ ಈ ಊರಿನಲ್ಲಿ ಪರಿಚಯವೂ ಇಲ್ಲ. ನಿಮಗೆ ಗೊತ್ತಿದ್ರೆ ಯಾವುದಾದರೂ ಹೈಸ್ಕೂಲಿನಲ್ಲೋ ಅಂಗ್ಡಿಲೋ ಎಂಥದಾದ್ರೂ ಒಂದು ಕೆಲಸಕ್ಕೆ ಯತ್ನಿಸಿ ದಯವಿಟ್ಟು.'

'ಇಷ್ಟು ಬುದ್ಧಿವಂತರಾದ ನೀವು ಹೈಸ್ಕೂಲಿಗೋ ಅಂಗಡಿಗೋ ಸೇರೂದೆ?'

'ಈಗ ಐವತ್ತು ವರ್ಷದ ಹಿಂದೆ ಶೂದ್ರಳಾಗಿ ಹುಟ್ಟಿದ್ದೆ ಅಂತ ತಿಳ್ಕತ್ತೀನಿ' – ಎಂದು ನಕ್ಕಳು. ಅನಂತರ ಅವಳೇ ಗಂಭೀರಳಾಗಿ ಹೇಳಿದಳು: 'ಹೆಂಗಸರೂ ಶೂದ್ರರೂ ಸಮಾನರು. ಇಬ್ಬರಿಗೂ ವಿದ್ಯೆಯ ಹಕ್ಕಿಲ್ಲ. ನಾನು ಇಷ್ಟು ಓದಿದ್ದೇ ಇಷ್ಟೆಲ್ಲ ಹಗರಣ ಆದದ್ದರ ಕಾರಣ. ಆದ್ದರಿಂದ ಏನೂ ಓದಿಯೇ ಇಲ್ಲ ಅಂತ ತಿಳ್ಕತ್ತೀನಿ. ಹೊಟ್ಟೆ ಹೊರೆಯುಕ್ಕೆ ಒಂದು ಕೆಲಸ ಬೇಕಲ್ಲ, ಹೊಲದಲ್ಲಿ ಸಸಿ ಹಾಕಿ ಕಳೆ ಕೀಳುವಂಥದು.'

ಈ ಮಾತುಗಳನ್ನು ಕೇಳಿ ಮುದ್ದೇಗೌಡರೇ ಖಿನ್ನರಾದರು. ಅವಳು, ಸದ್ಯದ ತನ್ನ ಮಾತನ್ನು ಹೇಳುತ್ತಿಲ್ಲವೆಂಬುದು ಅವರಿಗೆ ತಿಳಿಯುತ್ತಿತ್ತು. ಸುಮ್ಮನೆ ಅವಳ ಮುಖವನ್ನೇ ನೋಡುತ್ತಾ ಕುಳಿತರು. ನೆನ್ನೆ ತಾವು ನೋಡುತ್ತಿದ್ದುದಕ್ಕೂ ಇವತ್ತಿಗೂ ಅವಳ ಮುಖದಲ್ಲಿ ಏನೋ ವ್ಯತ್ಯಾಸ ಕಾಣುತ್ತಿತ್ತು. ಅದೇನೆಂದು ಸ್ಪಷ್ಟವಾಗಿ ತಿಳಿಯುತ್ತಿರಲಿಲ್ಲ. ಇದುವರೆಗೂ ಅವರು ಅವಳನ್ನು ಇಷ್ಟು ನೇರವಾಗಿ ನೋಡಿರಲೂ ಇಲ್ಲ. ಎರಡು ನಿಮಿಷ ಜ್ಞಾಪಿಸಿಕೊಂಡ ಮೇಲೆ ಹೊಳೆಯಿತು. ಕೇಳಿದರು: 'ನೀವು ನೆನ್ನೆ ಇಟ್ಟುಕೊಂಡಿದ್ದಕ್ಕಿಂತ ಇವತ್ತು ಬೇರೆ ಓಲೆ ಇಟ್ಕಂಡಿದೀರಾ?'

'ಹೂಂ. ಕಾಲೇಜಿನೋರು ಕೆಲಸದಿಂದ ತೆಗೀತಾರೆ ಅಂತ ಹೊಸದು ಕೊಂಡುಕೊಂಡೆ.'

ಅವರಿಗೆ ಅರ್ಥವಾಗಲಿಲ್ಲ. 'ತಿಳೀಲಿಲ್ಲ' – ಎಂದರು.

ನಿಜ ವಿಷಯವನ್ನು ಅವರಿಗೆ ಹೇಳುವುದೋ ಬೇಡವೋ ಎಂದು ಅವಳು ಎರಡು ನಿಮಿಷ ತನ್ನಲ್ಲಿಯೇ ಒದ್ದಾಡಿದಳು. ಹೇಳಿದರೆ ತಪ್ಪೇನು? ಅದರಲ್ಲೇನು ಅಪಮಾನ ಎಂದುಕೊಂಡು ಅನಂತರ ಎಂದಳು: 'ಊಟಕ್ಕೆ ದುಡ್ಡಿರಲಿಲ್ಲ. ಇದ್ದ ಚಿನ್ನದ ಓಲೇನ ಐವತ್ತು ರೂಪಾಯಿಗೆ ಮಾರಿ ಐದು ರೂಪಾಯಿಗೆ ಈ ನಕಲಿ ಕೊಂಡುಕೊಂಡೆ. ಅದು ಬಿಳೀ ಹರಳಿಂದು. ನನ್ನ ಕಪ್ಪು ಬಣ್ಣಕ್ಕೆ ಎದ್ದು

ಕಾಣ್ತಿತ್ತು. ಈ ಕೆಂಪು ಹರಳು, ಅದರಲ್ಲೂ ನಕಲೀದು, ಡಲ್ ಆಗಿ ಕಾಣಿಸುತ್ತೆ. ಅದಕ್ಕೇ ನಿಮಗೆ ವ್ಯತ್ಯಾಸ ಬೇಗ ತಿಳೀತು.'

ಈ ಮಾತನ್ನು ಕೇಳಿ ಅವರು ಇನ್ನೂ ಖಿನ್ನರಾದರು. 'ಈ ರೂಮಿಗೆ ಬಾಡಿಗೆ ಎಷ್ಟು?' – ಎಂದರು.

'ನಲ್ವತ್ತು. ಒಂದನೆ ತಾರೀಕು ಕೊಡದಿದ್ರೆ ರೂಮು ಬಿಡಿಸ್ತಾರೆ. ನನಗೆ ಬಾಡಿಗೆ ಕೊಡೂ ಶಕ್ತಿ ಇಲ್ಲದ ಹಾಗಾಗ್ಲಿ ಅಂತಲೇ ಅವರ ಉದ್ದೇಶವಾಗಿತ್ತು.'

ಒಂದು ನಿಮಿಷ ಯೋಚನೆಮಾಡಿದ ಅವರು ಹೇಳಿದರು: 'ಒಂದನೇ ತಾರೀಕು ನಾನು ನಿಮಗೆ ಅರವತ್ತು ಎಪ್ಪತ್ತು ರೂಪಾಯಿಯಷ್ಟು ತಂದು ಕೊಡ್ತೀನಿ. ನಿಮಗೆ ಆದಾಗ, ಕೆಲಸ ಸಿಕ್ಕಿದ ಮೇಲೆ ಕೊಡಿ. ಒಂದು ಪಕ್ಷ ಕೊಡಾಕ್ ಆಗದೆ ಇದ್ರೂ ಪರವಾಗಿಲ್ಲ. ಈ ಕೋಣೆ ಬಿಡಬ್ಯಾಡಿ.'

'ಇವರ ಮೇಲಿನ ಹಟದಿಂದ ಇಷ್ಟು ಬಾಡಿಗೆ ಎಷ್ಟು ದಿನ ಅಂತ ಕೊಡಲಿ?'

'ಇದಕ್ಕಿಂತ ಕಮ್ಮಿ ನಿಮಗೆ ಎಲ್ಲೂ ಸಿಕ್ಕಲ್ಲ. ನನ್ನ ಅಂದಾಜಿನಲ್ಲಿ ಇವರೂ ನಿಮಗೆ ಇಷ್ಟಕ್ಕೆ ಕೊಡ್ತಿರಲಿಲ್ಲ. ಬೇರೆ ಗಂಡಸರಿಗೆ ಕೊಟ್ಟರೆ ಯಾರಾದರೂ ಐವತ್ತು ರೂಪಾಯಿ ಕೊಟ್ಟಾರು.'

'ಹಾಗಾದರೆ ನನಗೆ ಯಾಕೆ ಇಷ್ಟಕ್ಕೆ ಕೊಟ್ಟರು?'

'ಮನೆ ಮಾಲೀಕರಿಗೆ ಮದುವೆಯಾಗದ ಹೆಣ್ಣುಮಕ್ಕಳಿರಬೌದು' – ಎಂದು ಅವರು ನಕ್ಕರು.

ಮರುದಿನ ಅವಳು ಕಾಲೇಜಿನ ಪುಸ್ತಕ ಭಂಡಾರಕ್ಕೆ ಹೋಗಿ, ತನ್ನಲ್ಲಿದ್ದ ಪುಸ್ತಕಗಳನ್ನು ಹಿಂತಿರುಗಿಸಿ, ಬಾಕಿ ಇಲ್ಲ ಎಂದು ಬರೆಸಿಕೊಂಡಳು. ಇದು ವರೆಗೂ ಕೆಲಸ ಮಾಡಿದ ಸಂಬಳವನ್ನು ಒಂದನೇ ತಾರೀಕು ತಪ್ಪದೆ ಕೊಡ ದಿದ್ದರೆ ಮುಂದಿನ ಕ್ರಮ ಜರುಗಿಸುವುದಾಗಿ ಬರೆದು ಪ್ರಿನ್ಸಿಪಾಲರ ಹೆಸರಿಗೆ ರಿಜಿಸ್ಟರ್ ರಶೀತಿಯಲ್ಲಿ ಕಳಿಸಿದಳು.

# ಆರು

## ೧

ಮಗಳನ್ನು ಎಕ್ಕಡದಲ್ಲಿ ಹೊಡೆದು ಬಂದ ನಂತರವೂ ವೆಂಕಟರಮಣಯ್ಯ ನವರ ಕೋಪ ಇಳಿಯಲಿಲ್ಲ. ಇಂಥ ಚಾಂಡಾಲಿ ಹುಟ್ಟದಿದ್ದರೆ ಒಳ್ಳೆಯದಾಗಿತ್ತು, ಈ ಅಪಮಾನ ಊರಿನಲ್ಲಿ ಹಬ್ಬುವ ಮೊದಲೇ ಅವಳು ಏನಾದರೂ ರೋಗ ಬಂದು ಸತ್ತಿದ್ದರೆ ಚನ್ನಾಗಿತ್ತು ಎಂದುಕೊಳ್ಳುತ್ತಿದ್ದರು. ಈ ಮದುವೆ ಹೇಗಾದರೂ ತಪ್ಪಲಿ ಎಂದು ದಿನವೂ ಪೂಜೆ ಮಾಡುವಾಗ ತಿರುಮಲಸ್ವಾಮಿಯನ್ನು ಅನನ್ಯ ಭಕ್ತಿಯಿಂದ ಬೇಡಿಕೊಳ್ಳುತ್ತಿದ್ದರು. ಕೋಪ ಅಪಮಾನ ಮತ್ತು ನಿಸ್ಸಹಾಯ-ಕತೆಗೆ ಸಿಕ್ಕಿ ಅವರಿಗೆ ಊಟದಲ್ಲಿ ರುಚಿ ಹೊರಟುಹೋಗಿತ್ತು. ರಾತ್ರಿಯ ನಿದ್ರೆ ಹಾರಿಹೋಗಿತ್ತು.

ಅವರ ಪ್ರಾರ್ಥನೆ ಹದಿನೈದು ಹದಿನೆಂಟು ದಿನಗಳಲ್ಲೇ ನೆರವೇರಿತು. ಅವಳನ್ನು ಮದುವೆಯಾಗುವುದಿಲ್ಲವೆಂದು ತಿರುಮಲೇಶ, ಅಜ್ಜ ಮತ್ತು ತಾಯಿಯ ಕೈ ಮುಟ್ಟಿದನಂತೆ. ಬೆಂಗಳೂರಿಗೇ ಹೋಗುವುದಿಲ್ಲವೆಂದು ಮೈಸೂರಿಗೆ ಹೋದ ನಂತೆ. ಈ ಖಚಿತ ಸುದ್ದಿಯನ್ನು ರಾತ್ರಿ ಮನೆಗೆ ಬಂದು ವೆಂಕಟೇಶ ಹೇಳಿದ. ಇನ್ನು ಚಿಂತೆ ಕಳೆಯಿತು. ರಾತ್ರಿ ನಿಶ್ಚಿಂತೆಯಿಂದ ನಿದ್ದೆ ಮಾಡಬಹುದು. ಆದರೆ ಅವರಿಗೆ ಆ ರಾತ್ರಿಯೂ ಕಣ್ಣು ಹೊತ್ತಲಿಲ್ಲ. ಈ ಸುದ್ದಿ ಹೇಳುವಾಗಲೇ ವೆಂಕ ಟೇಶ ವ್ಯಾಖ್ಯಾನ ಮಾಡಿದ್ದ: 'ಈಗ ಅವನು ಸುಮ್ಮನಾದ. ಇನ್ನೊಂದಿಷ್ಟು ದಿನ ಕಳದ್ರೆ ಅವನ ಜಾತೀದೇ ಒಂದು ಹೆಣ್ಣು ತಂದು ಮದುವೇನೂ ಮಾಡ್ತಾರೆ. ಎಷ್ಟಾದರೂ ಗಂಡಸು. ಎಂಜಲಾಸೆಗೆ ಹೋದ ಇದೇ ಕೆಟ್ಟು ಕೂತದ್ದು.'

ಇದು ಬರೀ ವೆಂಕಟೇಶನ ಮಾತಲ್ಲ. ಊರಿನ ಬ್ರಾಹ್ಮಣರು ಮಾತ್ರವಲ್ಲದೆ ಇತರರೂ ಇದೇ ಆಡುತ್ತಾರೆ. ಅವರಿಗೆ ಮಗಳ ಮೇಲೆ ಇನ್ನೂ ಹೆಚ್ಚು ಕೋಪ ಬಂತು. ರಾತ್ರಿ ಕತ್ತಲೆಯಲ್ಲಿ ಮಲಗಿರುವಾಗಲೇ ಕಟಕಟನೆ ಹಲ್ಲು ಕಡಿದರು. ಯಾವುದೋ ಹೊತ್ತಿನಲ್ಲಿ ಸ್ವಲ್ಪ ಜೊಂಪು ಹೊತ್ತಿದರೂ ಹಲ್ಲು ಕಡಿಯುವುದನ್ನು ನಿಲ್ಲಿಸಲಿಲ್ಲ. ಒಳಗಿನ ಸಾಲೆಯಲ್ಲಿ ಮಲಗಿದ್ದ ವೆಂಕಟೇಶ, 'ಯಾಕಣ್ಣಾ ಹೀಗೆ ಹಲ್ಲು ಕಡೀತಿಯ?' ಎಂದು ಕೂಗಿದಾಗ –'ಹೌದೆ!' ಎನಿಸುತ್ತಿತ್ತು. ಬುದ್ಧಿ ವಂತೆಯಾಗಲಿ ಅಂತ ಸ್ಕೂಲಿಗೆ ಕಳಿಸಿದೆ. ಫಸ್ಟ್ ಕ್ಲಾಸಿನಲ್ಲಿ ಪಾಸು ಮಾಡಿತು. ಹಟ ಮಾಡಿತು. ಹೆಡ್ಮಾಷ್ಟರೇ ಹೇಳಿದರು ಅಂತ ಕಾಲೇಜಿಗೆ ಕಳಿಸಿದೆ. ಇದು

ವಿದ್ಯಾ ಕಲೀತು. ಏನು ಸಾರ್ಥಕ? ಜಾತಿ ಮತ ಸುಳ್ಳು, ಮೊದಲು ಹಾಗಿತ್ತು ಆಮೇಲೆ ಹೀಗಾಯ್ತು. ಭಗವದ್ಗೀತೇಲಿ ಹೇಳಿರೂ ಅರ್ಥ ಬೇರೆಯೇ ಇದೆ – ಅಂತ ರಜದಲ್ಲಿ ಬಂದಾಗ ನನ್ನ ಕೈಲೇ ವಾದ ಮಾಡ್ತಿತ್ತು. ಏನೋ ಹೆಣ್ಣು ಹುಡುಗಿ, ಮಾತಾಡ್ಕಳ್ಳಿ ಅಂತ ಸುಮ್ಮನಿದ್ದೆ. ಕೊಂಬೆ ಬೆಳೆದು ಕೊಡಲಿ ಕಾವಾಗಿ ಬುಡಕ್ಕೇ ಮೃತ್ಯುವಾಯ್ತು.

ನಾಲ್ಕಾರು ದಿನದಲ್ಲಿ, ಅವರು ನಿರೀಕ್ಷಿಸಿದ ಹಾಗೆಯೇ ಊರಿನವರು ಮಾತಾಡಿಕೊಳ್ಳಲು ಶುರು ಮಾಡಿದರು. ಎಂಜಲಾಸೆಗೆ ಹೋದ ಇದೇ ಕೆಟ್ಟಿತು ಎಂಬ ಮಾತು ವೆಂಕಟೇಶನ ಕಿವಿಗೆ ಬಿದ್ದು ಅವನು ದಿನಾ ತಂದು ಹೇಳುತ್ತಿದ್ದ. ಕೆಲವರು ಇದೇ ಮಾತನ್ನು, ನಯವಾಗಿ, ಅವರ ಎದುರಿಗೇ, ಸಮಾಧಾನಮಾಡು ವವರಂತೆ ಅಂದರು. ಅವರಿಗೆ ಒಂದು ದಿನ ಇದ್ದಕ್ಕಿದ್ದ ಹಾಗೆಯೇ ಶ್ರೀನಿವಾಸನ ಮೇಲೆ ಕೋಪ ಬಂತು. ಎರಡೂ ಕೈ ಸೇರಿದರೆ ಚಪ್ಪಾಳೆ. ಇವನು ಜೊತೆ ಸೇರಿ ಗದ್ದಲಾನೂ ಮಾಡಿಸಿದ. ಈಗ ಪೆಟ್ಟಿಗೆ ಸಿಕ್ಕದೆ ತಪ್ಪಿಸಿಕೊಂಡೂ ಬಿಟ್ಟ. ಹಾಗಾದರೂ ಒಂದೇ, ಹೀಗಾದರೂ ಒಂದೇ. ಏಟಿಗೆ ಬಿದ್ದದ್ದು ಮಾತ್ರ ಇದೇ. ಹೀಗಾಗುತ್ತೆ ಅಂತ ಗೊತ್ತಿರಲಿಲ್ಲವೆ? ಇಷ್ಟೆಲ್ಲ ಓದಿ ತಿಳಿವಳಿಕೆ ಇರಲಿಲ್ಲವೆ? ಅದಕ್ಕೆ ಅಗಾಧ ಬುದ್ಧಿ ಇದೆ. ಅಷ್ಟೆಲ್ಲ ದಪ್ಪ ದಪ್ಪ ಪುಸ್ತಕ ಓದಿದೆ. ನಾನು ಹೇಳಿ ಕೊಟ್ಟ ಗೀತೆ ಉಪನಿಷತ್ತುಗಳನ್ನು ಮೈಸೂರಿಗೆ ಹೋದ ಮೇಲೆ ಮತ್ತೆ ಮತ್ತೆ ಓದಿಕೊಂಡಿದೆ. ಇಷ್ಟೆಲ್ಲ ಆದರೂ ಈ ಹುಚ್ಚು ಯಾಕೆ ಬಂತು? ತಮ್ಮ ಎಕ್ಕಡ ದಲ್ಲಿ ಏಟು ತಿಂದ ಮೇಲೂ ಸಮಾಧಾನವಾಗಿಯೇ ಹೇಳಿತು: 'ವ್ಯತ್ಯಾಸವೆಲ್ಲ ಸುಳ್ಳು ಅಂತ ಎಲ್ಲ ವೇದಾಂತವೂ ಹೇಳುತ್ತೆ. ದಾಸರೆಲ್ಲ ಅದನ್ನೇ ಅಂದ್ರು. ಯಾರು ಅಂದದ್ದೂ ಅನ್ನೂದೂ ಮುಖ್ಯವಲ್ಲ. ನಮ್ಮ ನಮ್ಮ ಅಂತರಂಗವೇ ನಿಜ ನುಡಿಯುತ್ತೆ. ನಮ್ಮ ನಮ್ಮ ಅನುಭವವೇ ದಿಕ್ಕು ತೋರಿಸುತ್ತೆ. ಆದರೆ ರೂಢಿ ಅಂತರಂಗಾನ ಮುಚ್ಚಿಹಾಕುತ್ತೆ. ಧೈರ್ಯವಿದ್ದೋರು ರೂಢೀನ ಗೆಲ್ತಾರೆ. ಗೆದ್ದು ಬದುಕ್ತಾರೆ. ಹೇಡಿಗಳು ಮನಸ್ಸಿನ ಮೇಲೆ ಮಣ್ಣು ಮುಚ್ಚಿಕೊಂಡು ಮಣ್ಣುಹುಳುವಿನ ಹಾಗೆ ಜೀವನ ಮಾಡ್ತಾರೆ.'

ಅಂತರಂಗವೇ ನಿಜ ನುಡಿಯುತ್ತೆ. ರೂಢಿ ಅಂತರಂಗಾನ ಮುಚ್ಚಿಹಾಕುತ್ತೆ. ಅವಳ ಅಂತರಂಗ ಯಾವ ನಿಜ ನುಡೀತು? ಜಾತಿ ಮತ ಸುಳ್ಳು ಅಂತಲೆ? ಅದನ್ನೇ ಹೇಳಿದಳಲ್ಲ ಸ್ಪಷ್ಟವಾಗಿ ಬೆಟ್ಟಯ್ಯನ ಎದುರಿಗೇ. ನನಗೇ ಅಂದಳಲ್ಲ: 'ನೋಡಿ, ಬೆಟ್ಟಯ್ಯನೋರ ಬಣ್ಣ ಕಪ್ಪು. ನಿಮ್ಮ ಬಣ್ಣವೂ ಕಪ್ಪು. ಅವರ ಹಾಗೆಯೇ ದಪ್ಪ ಮೂಗು ಗಡಸು ತುಟಿ ನಿಮಗೂ ಇವೆ. ನನ್ನ ಬಣ್ಣ ನೋಡಿ. ನಾನೂ ಕಪ್ಪಗಿದೀನಿ. ಬೆಟ್ಟಯ್ಯನೋರ ಮಗಳಿಗೂ ನನಗೂ ಬಣ್ಣ, ರೂಪ,

ನಿಲುವಿನಲ್ಲಿ ವ್ಯತ್ಯಾಸವಿಲ್ಲ. ಅವಳು ಬಿಸಿಲಿನಲ್ಲಿ ತಿರುಗಿ ನನಗಿಂತ ಕಪ್ಪಗಿದಾಳೆ.' ಹಾಗಾದರೆ ಹೊಲೆ ಮಾದಿಗರಿಗೂ ಬ್ರಾಹ್ಮಣರಿಗೂ ವ್ಯತ್ಯಾಸವೇ ಇಲ್ಲವೇ? ಬಣ್ಣ ದೇವರು ಕೊಟ್ಟದ್ದು. ಜಾತಿಯೂ ದೇವರು ಮಾಡಿದ್ದೇ. ಬಣ್ಣ ಒಂದು ಅಂತ ಜಾತಿಯೂ ಒಂದಾಗೂದು ಹ್ಯಾಗೆ? ಅವಳೇ ಇನ್ನೊಂದು ಹೇಳಿದಳು: ಆ ಮಾದಗಿತ್ತಿ ಮಾತಂಗಿ ಒಂದು ದಿನ ನಮ್ಮ ತ್ವಾಟದಲ್ಲಿ ಕುರುಂಬಾಳೆ ಕಟ್ಕತ್ತಿದ್ಲಂತೆ. ಇವಳು ನನ್ನ ಹುಡಿಕ್ಕಂಡ್ ಹೋಗಿದ್ಲಂತೆ. ಯಾರೋ ಪರ ಊರಿನೋರು ಇಬ್ರನ್ನೂ ನೋಡಿ ತಾಯಿ ಮಗಳು ಅಂತ ತಿಳ್ಕಂಡ್ರಂತೆ. ಪರ ಊರಿನೋರು ತಿಳಿಕಂಡಾಕ್ಷಣ ಇವಳು ಅವಳ ಮಗಳಾದಳೆ?

ಈ ಯೋಚನೆ ಬಂದ ದಿನದಿಂದ ಅವರ ಅಂತರಂಗವು ಕದಡಿತು. ಮೂರು ನಾಲ್ಕು ದಿನದಲ್ಲಿ ಮುಖ್ಯ ವಿಷಯವೇ ಮರೆತುಹೋಗಿ ಬೇರೊಂದು ವಿಚಾರ ಅವರ ತಲೆಯನ್ನು ತುಂಬಿಕೊಂಡಿತು. ಜೊತೆಗೇ ಅವಳು ಹೇಳಿದ, 'ಅಂತರಂಗವೇ ನಿಜ ನುಡಿಯುತ್ತೆ. ರೂಢಿ ಅಂತರಂಗಾನ ಮುಚ್ಚಿಹಾಕುತ್ತೆ' ಎಂಬ ಮಾತು ಒಳಗಿನಿಂದ ಮಿಡಿಯಲು ಶುರುವಾಯಿತು. ಮಾತಂಗಿಯನ್ನು ಪರ ಊರಿನವರು ಇವಳ ತಾಯಿ ಅಂತ ತಿಳ್ಕಂಡರಂತೆ. ಆ ಮಾತಂಗಿಯ ನೆನಪೇ ತುಂಬಿಕೊಂಡು, ಮಗಳು ಈಗ ಮಾಡಿಕೊಂಡಿರುವ ಹಲ್ಲಂಡೆ ಮರೆಗೆ ಸರಿಯಿತು. ಇಷ್ಟು ದಿನ ಇಲ್ಲದಿದ್ದ ಮಾತಂಗಿಯ ಜ್ಞಾಪಕವನ್ನು ಮಾಡಿಸಿದಳಲ್ಲ, ಇವಳಿಗೇನಾದರೂ ವಿಷಯ ಗೊತ್ತೆ? ಹ್ಯಾಗೆ ಗೊತ್ತಿರಬೇಕು? ಅಥವಾ ಸುಮ್ಮನೆ ಉದಾಹರಣೆಗೆ ಅಂತ ಹೇಳಿದಳೊ? ಮಾತಂಗಿಯ ನೆನಪು ವಿವರ ವಿವರವಾಗಿ ಬರಲು ಆರಂಭವಾಯಿತು: ರಾತ್ರಿ ಮಲಗಿದಾಗ, ಸ್ನಾನ ಮಾಡುವಾಗ, ಯಜ್ಞೋಪವೀತದ ಬ್ರಹ್ಮಗಂಟನ್ನು ಕೈಲಿ ಹಿಡಿದು ಓಂ ತತ್ ಸವಿತೃವರೇಣ್ಯಂ ಹೇಳುವಾಗ, ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿ ಮಂಗಳಾರತಿಹಲಗೆಯನ್ನು ಎತ್ತಿ ದೇವರ ಮುಖಕ್ಕೆ ಹಿಡಿಯುವಾಗ.

೨

ಹೆಂಡತಿ ಸತ್ತಾಗ ಮಗ ವೆಂಕಟೇಶನಿಗೆ ಎಂಟು ವರ್ಷ. ಸತ್ಯಳಿಗೆ ನಾಲ್ಕು. ಆವಾಗಿದ್ದ ಆಸ್ತಿಯಲ್ಲಿ ಮತ್ತೆ ಹೆಣ್ಣುಕೊಡುವವರಿಗೆ ಕಡಿಮೆ ಇರಲಿಲ್ಲ. ಇನ್ನೂ ಇಪ್ಪತ್ತೊಂಬತ್ತು ಮೂವತ್ತು ವರ್ಷದ ಪ್ರಾಯ. ಆದರೂ ವೆಂಕಟರಮಣಯ್ಯನವರು ಎರಡನೇ ಮದುವೆ ಮಾಡಿಕೊಳ್ಳಲಿಲ್ಲ. ಮೊದಲು ಐದು ವರ್ಷ ತಾವರೆಕೆರೆಯ ಒಬ್ಬ ವೃದ್ಧೆ, ಅಡಿಗೆ ಮಾಡಿ ಹಾಕಲು ಸಿಕ್ಕಿವಳು. ವರ್ಷಕ್ಕೆರಡು

ಕೆಂಪು ಸೀರೆ ಐವತ್ತು ರೂಪಾಯಿಗೆ ಅಡಿಗೆ ಊಟ ಮಕ್ಕಳ ನೀರುನಿಡಿಗಳನ್ನೆಲ್ಲ ನೋಡಿಕೊಳ್ಳುತ್ತಿದ್ದಳು. ಆಮೇಲೆ ಅವಳ ಮಗನಿಗೆ ತುಮಕೂರಿನ ತಾಲ್ಲೂಕ್ ಆಫೀಸಿನಲ್ಲಿ ಗುಮಾಸ್ತರ ಕೆಲಸವಾದಮೇಲೆ ಆಕೆ ಹೊರಟುಹೋದಳು. ಅನಂತರ ಅಡಿಗೆಯನ್ನೂ ತಾವೇ ಮಾಡಿ ಮಕ್ಕಳನ್ನು ಸಾಕಿದರು.

ಹೆಂಡತಿ ಸತ್ತು ಎರಡು ವರ್ಷವಾಗಿತ್ತು. ಬೇರೆ ಮದುವೆಯಾಗುವುದಿಲ್ಲವೆಂದು, ಕೇಳಿದವರಿಗೆಲ್ಲ ಅವರು ಖಡಾಖಂಡಿತವಾಗಿ ಹೇಳಿಬಿಟ್ಟಿದ್ದರು. ಆದರೆ ಪತ್ನೀವಿಯೋಗದ ದುಃಖದ ಹೊಸತರಲ್ಲಿ ಮನಸ್ಸನ್ನು ಆವರಿಸಿದ್ದ ವೈರಾಗ್ಯ ದಿನ ಕಳೆದಂತೆ ಇಳಿಯುತ್ತಿತ್ತು. ಶರೀರದ ಕಾಮನೆಗಳು ಕೆರಳಿ ಮನಸ್ಸು ಎತ್ತೆತ್ತಲೋ ಹೋಗುತ್ತಿತ್ತು. ದೇವಸ್ಥಾನದಲ್ಲಿ ಪೂಜೆ ಮಾಡುವಾಗ ಸಹ ಕಲ್ಪನೆಯು ಬೇರೆ ಕಡೆಗೆ ಎಳೆದುಕೊಂಡು ಹೋಗುತ್ತಿತ್ತು. ತಮಗೆ ಆಗುತ್ತಿರುವುದರಲ್ಲಿ ಅಸಹಜವಾದುವೇನೂ ಇಲ್ಲವೆಂಬುದು ಅವರಿಗೆ ಗೊತ್ತು. ಇನ್ನೊಂದು ಮದುವೆಯೇ ಇದಕ್ಕೆ ಮದ್ದು ಎಂಬುದು ತಿಳಿಯುತ್ತಿತ್ತು. ಆದರೆ ಮಕ್ಕಳಿರುವಾಗ ಎರಡನೆಯ ಮದುವೆಯಾದರೆ ಅವುಗಳು ತಮ್ಮ ಮನೆಯಲ್ಲೇ ಹೊರಗಿನವಾಗುತ್ತವೆ ಎಂಬುದೂ ಬುದ್ಧಿಯಲ್ಲಿ ಜಾಗ್ರತವಾಗಿರುತ್ತಿತ್ತು. ಏನಾದರೂ ಸರಿ, ಇನ್ನೊಬ್ಬ ಹೆಂಗಸನ್ನು ತಂದು ಈ ಮನೆಗೆ ಯಜಮಾಂತಿಯಾಗಿ ಮಾಡಿ, ನನ್ನ ಹುಡುಗರ ಮೇಲೆ ಅಧಿಕಾರ ನಡೆಸಿ ಮಲತಾಯಿ ಮತ್ಸರ ಮಾಡಲು ಬಿಡುವುದಿಲ್ಲವೆಂಬ ತಮ್ಮ ಮೊದಲಿನ ನಿಶ್ಚಯವನ್ನು ಗಟ್ಟಿಮಾಡಿಕೊಳ್ಳುತ್ತಿದ್ದರು. ಇದಕ್ಕಿರುವುದು ಒಂದೇ ಉಪಾಯ: ಯಾರನ್ನಾದರೂ ಇಟ್ಟುಕೊಳ್ಳುವುದು. ಅದೇನು ಯಾರೂ ಮಾಡದ ಕೆಲಸವಲ್ಲ. ಜನ ನಾಲ್ಕು ದಿನ ಆಡಿಕೊಳ್ಳುತ್ತಾರೆ. ಆಮೇಲೆ ಅದೇ ಹೊಂದಿಕೊಳ್ಳುತ್ತದೆ. ಪುಟ್ಟೇಗೌಡರ ಸೂಳೆ, ಗುಂಡೈಯ್ಯಂಗಾರರು ಇಟ್ಕಂಡೋಳು ಎಂದು ಕೆಲವು ಹೆಂಗಸರನ್ನು ಕರೆಯುತ್ತಿದ್ದರೂ, ಇದರಿಂದ ಆ ಯಜಮಾನರುಗಳಿಗಾಗಲಿ ಹೆಂಗಸಿಗಾಗಲಿ ಕೀಳುಭಾವನೆ ತೋರಿಸುತ್ತಿರಲಿಲ್ಲ. ತಾವು ಒಬ್ಬಳನ್ನು ಇಟ್ಟುಕೊಳ್ಳಬಹುದು. ವರ್ಷಕ್ಕೆ ಒಂದಿಷ್ಟು ರಾಗಿ, ಕಾಳು, ತೆಂಗಿನಕಾಯಿ, ಎರಡು ಸೀರೆ ಕೊಟ್ಟರೆ ಸಾಕು. ಹೆಚ್ಚು ಹೊಣೆ ಏನೂ ಇರುವುದಿಲ್ಲ – ಎಂಬ ಯೋಚನೆ ಹಲವು ಸಲ ಬರುತ್ತಿತ್ತು.

ಆದರೆ ತಾನು ದೇವಸ್ಥಾನದ ಪೂಜಾರಿ. ಪೂಜಾರಿಯಾದವನು ಹೀಗೆ ಮಾಡಬಾರದೆಂಬ ಕಟ್ಟೇನೂ ಇಲ್ಲ. ಗುಡಿಗೌಡರಾದ ತಿರುಮಲೇಗೌಡರು ಕೇಳಬಹುದು. ಅದೆಲ್ಲ ಸುಳ್ಳು ಎನ್ನಬಹುದು. ಸಂಬಂಧವನ್ನು ಹೊಸತರಲ್ಲಿ ನಾಲ್ಕು ದಿನ ಗುಟ್ಟಿನಲ್ಲಿಟ್ಟಿರಬಹುದು. ಆದರೆ ವಿಷ್ಣು ದೇವರ ಪೂಜೆಯು ಸ್ಮಾರ್ತನ ವಂಶೀಕರಲ್ಲಿರುವುದನ್ನು ಊರಿನಲ್ಲಿರುವ ಶ್ರೀವೈಷ್ಣವ ಬ್ರಾಹ್ಮಣರು ಇವತ್ತಿಗೂ ಸಹಿಸುತ್ತಿಲ್ಲ.

ಅವರಿಗೆ ತಿಳಿದರೆ – ತಿಳಿದೇ ತಿಳಿಯುತ್ತದೆ – ಸರ್ಕಾರದ ತನಕ ಹೋಗುತ್ತಾರೆ. ಇಂಥಾ ಕೆಲಸ ಮಾಡುವವನು ದೇವರ ಪೂಜೆ ಮಾಡಿ ಅಪವಿತ್ರ ಮಾಡುತ್ತಾನೆ. ಇವನನ್ನು ತಪ್ಪಿಸಬೇಕು ಎಂದು ಮುಜರಾಯಿ ಕಮಿಶನರ ತನಕವಾದರೂ ಹೋಗುತ್ತಾರೆ. ನನ್ನನ್ನು ತಪ್ಪಿಸಿದ ಮೇಲೆ ಇದು ಶ್ರೀವೈಷ್ಣವ ಅರ್ಚಕರಿಗೆ ಸೇರಬೇಕು ಅಂತ ಹಳೆಯ ಕಿತಾಪತಿ ಶುರುಮಾಡುತ್ತಾರೆ. ಹಿಂದಿನಿಂದ ಬಂದ ಪೂಜೆಯನ್ನು ಬಿಡುವುದೆ? ಅದರಲ್ಲೂ ಮೂರು ನಾಮದ ಜಾತಿಗೆ ಸಿಕ್ಕುವ ಹಾಗೆ ಮಾಡುವುದೆ?

ಇಂಥದೇ ಯೋಚನೆಗಳಲ್ಲಿ ನಾಲ್ಕೈದು ತಿಂಗಳು ಕಳೆಯಿತು. ಆದರೆ ಯಾವ ಹೆಂಗಸೂ ಸಿಕ್ಕಲಿಲ್ಲ. ಧೈರ್ಯವಾಗಿ ಯಾರಾದರೂ ಅಂತಹ ನಾಲ್ಕು ಜನರ ಕೈಲಿ ಹೇಳಿದರೆ ತಾನೆ ಯಾರನ್ನಾದರೂ ಇಟ್ಟುಕೊಳ್ಳುವ ಅಗತ್ಯವಿರುವ ಒಬ್ಬಳು ಸಿಕ್ಕುವುದು? ಮಾತನಾಡುವುದಕ್ಕೇ ಅವರಿಗೆ ಅಳುಕು. ದೇವರ ಅರ್ಚಕತನ ಪೊಂದಿಲ್ಲದಿದ್ದರೆ ಅವರು ಏನು ಮಾಡುವುದಕ್ಕೂ ಹೆದರಬೇಕಾಗಿರಲಿಲ್ಲ. ಹಾಗೆ ನೋಡಿದರೆ ದೇವರ ಜಮೀನು ಇಲ್ಲದಿದ್ದರೂ ಅವರ ಜೀವನಕ್ಕೆ ತೊಂದರೆ ಇಲ್ಲ. ಸ್ವಂತದ್ದೇ ಮುನ್ನೂರು ತೆಂಗಿನ ಮರ, ಆರು ಎಕರೆ ಹೊಲ, ಎರಡು ಎಕರೆ ಗದ್ದೆಗಳಿವೆ. ಒಂದು ಸಂಸಾರಕ್ಕೆ ಇದಕ್ಕಿಂತ ಹೆಚ್ಚೇನು ಬೇಕು? ಆದರೆ ಯಾವ ಕಷ್ಟವೂ ಇಲ್ಲದೆ ಹಿಂದಿನಿಂದ ಬಂದ ಎಂಟು ಎಕರೆ ಗದ್ದೆ, ಹತ್ತು ಎಕರೆ ಹೊಲದ ಇನಾಮನ್ನು ಯಾಕೆ ಕಳೆದುಕೊಳ್ಳಬೇಕು ಎಂಬ ವ್ಯವಹಾರಜ್ಞಾನ.

ಇದೇ ದಿನಗಳಲ್ಲಿ ಒಂದು ದಿನ ಮಾತಂಗಿ ಇವರ ಕಣ್ಣಿಗೆ ಬಿದ್ದಳು. ಅವಳೇನೂ ಇವರು ಅದುವರೆಗೆ ಕಾಣದ ಹೆಂಗಸಲ್ಲ. ಮಾದಿಗ ಕೇರಿಯವಳು. ಸ್ವಂತ ಗುಡಿಸಲನ್ನು ಬಿಟ್ಟರೆ ಬೇರೆ ಆಸ್ತಿ ಇಲ್ಲ. ಇಪ್ಪತ್ತಾರು ಇಪ್ಪತ್ತೇಳು ವಯಸ್ಸಿನ ವಿಧವೆ. ಯಾರಾದರೂ ಎರಡನೇ ಮದುವೆ ಮಾಡಿಕೊಳ್ಳುವವರು ಸಿಕ್ಕಿದರೆ ಸಿದ್ಧಳಾಗಿದ್ದಳು. ಅವಳ ಜಾತಿಯಲ್ಲಿ ಯಾರೂ ಸಿಕ್ಕಿರಲಿಲ್ಲ. ಮಾತಂಗಿಯ ಬಣ್ಣ ಕಪ್ಪಿರಬಹುದು. ಆದರೆ ಹೊಸ ಮುಳಕದಂತೆ ಮೋಪಾಗಿದ್ದಳು. ಅವತ್ತು ಸತ್ಯ ಹೇಳಿದ ಮಾತು ನಿಜ. ಪರ ಊರಿನವರು ಕಂಡರೆ ಸತ್ಯಳ ತಾಯಿ ಎಂದೇ ಅನ್ನಬೇಕು. ಕಪ್ಪು ಕಟ್ಟಿಸಿದ ಹಲ್ಲನ್ನು ಮುಚ್ಚಿಕೊಂಡರೆ ಏನೂ ವ್ಯತ್ಯಾಸವಿಲ್ಲ. ಸಂಜೆಯ ಮಬ್ಬು ಕವಿಯುತ್ತಿತ್ತು. ಇವರು ತಮ್ಮ ಗದ್ದೆಯ ನೀರು ನೋಡಿಕೊಂಡ ಮೇಲೆ ತೋಟಕ್ಕೆ ಹೋದರು. ಅವಳು ಇವರ ತೋಟದಲ್ಲಿ ಸೋಗೆ ಕಟ್ಟಿಕೊಳ್ಳುತ್ತಿದ್ದಳು. ಹಿಂದಿನಿಂದ ಬಂದ ಇವರು ಅವಳಿಗೆ ಕಾಣಲಿಲ್ಲ. 'ಏನೇ ಇದು?' – ಎಂದದ್ದಕ್ಕೆ ಹೆದರಿಬಿಟ್ಟಳು. 'ಇಟ್ ಬೇಸಾಕ್ ಸದ್ಯ ಪುಳ್ಳೆ ಇರ್ನಿಲ್ಲ ಕಣ್ರಯ್ಯಾ' – ಎಂದು ಹೆದರುತ್ತಾ ನಿಂತುಕೊಂಡಳು. ಅವಳ ಮೈಕಟ್ಟು ತಕ್ಷಣ ಇವರಿಗೆ ಬೇಕಾದುದನ್ನು

ಸೂಚಿಸಿಬಿಟ್ಟಿತು. ಆದರೆ ಹೇಗೆ ಮಾತನಾಡಬೇಕೆಂಬುದು ತಕ್ಷಣ ತಿಳಿಯದು.

'ತಗ ತಗ ನಾನೇನ್ ಬ್ಯಾಡ ಅನ್ನಿಲ್ಲ. ರೊಟ್ಟೀಗ್ ಕಾಯಿ ಗೀಯಿ ಬೇಕಾ?'

'ಕೊಟ್ರೆ ಬಡಮುಂಡೆ ಕಡ್ಕಂಡ್ ತಿಂತೀನಿ ಕಣ್ರಯ್ಯಾ.'

ಮುಂದೆ ಮಾತನಾಡಲು ಇವರಿಗೂ ತಿಳಿಯಲಿಲ್ಲ. ಇವರ ಆಶಯ ಅವಳಿಗೂ ತಿಳಿಯಲಿಲ್ಲ. ಸೋಗೆಯ ಹೊರೆಯನ್ನು ಎತ್ತಿ ತಲೆಯ ಮೇಲೆ ಇಟ್ಟುಕೊಂಡಳು.

'ಅದ್ಯಾಕ್ ಹ್ವಂಟೆ, ಇರು' – ಇವರೆಂದರು.

'ಕತ್ಲಾತು ಕಣ್ರಯ್ಯಾ' – ಎಂದು ಅವಳು ಹೊರೆ ಹೊತ್ತುಕೊಂಡಳು. ಈಗ ಮಾತನಾಡಲೇ ಬೇಕು, ಇಲ್ಲದಿದ್ದರೆ ಅವಳು ಹೊರಟುಹೋಗುತ್ತಾಳೆ ಎಂದು ಯೋಚಿಸಿದ ಅವರು, 'ಹ್ವರೆ ಇಳ್ಸು. ಕಾಯಿ ಕೊಡ್ತೀನಿ' ಎಂದರು. ಅವಳು ಕೆಳಗೆ ಇಳಿಸಿ ನಿಂತಳು.

ಇನ್ನು ಮುಂದೆ ಹೇಗೆ ಮಾತನಾಡಬೇಕೆಂಬುದು ತಿಳಿಯದೆ ಇವರು ಹೆಣಗುತ್ತಿದ್ದರು. ಕೊನೆಗೆ, 'ಇದ್ಯಾಕಿಂತ ಹರಕು ಸೀರೆ ಉಟ್ಕಂಡಿದೀಯ?' ಎಂದರು.

'ಬಡ ಮುಂಡೆಗೆ ಯಾರ್‍ರಯ್ಯಾ ತಂದ್‌ಕೊಡಾರು?'

'ನಾನು ದುಡ್ ಕೊಡ್ತೀನಿ, ಸಂತೇಲಿ ತಗ.'

ಅವಳು ಸುಮ್ಮನೆ ನಿಂತಳು. ಇವರೇ, 'ತಿಳೀಲಿಲ್ವೇನೇ?' ಎಂದರು.

ಅವಳಿಗೆ ಅರ್ಥವಾಯಿತು. ಈ ಅಯ್ಯನವರ ಹೆಂಡತಿ ತೀರಿ ಮೂರು ವರ್ಷವಾಗಿದೆ. ಇನ್ನೂ ಮೂವತ್ತು ಮೂವತ್ತೆರಡರ ಪ್ರಾಯ. ಅವರು ಕೇಳುವುದರಲ್ಲಿ ತಪ್ಪೇನೂ ಇಲ್ಲ. ತಮ್ಮ ಕೇರಿಯ ತನ್ನಂಥ ಹೆಂಗಸರನ್ನು ಕೆಲವು ಹಾರುವರು ಮುಟ್ಟಿಸಿಕೊಳ್ಳುವುದು ಅವಳಿಗೆ ತಿಳಿಯದ ಮಾತಲ್ಲ. ಆದರೆ ಇವರು ದೇವರ ಪೂಜಾರಿಗಳು. ಒಳಗಿರುವ ಕರೀ ಕಲ್ಲಿನ ಸ್ವಾಮಿಯನ್ನು ಮುಟ್ಟಿ ಪೂಜೆ ಮಾಡುವವರು. ಆ ದೇವರನ್ನು ಅವಳು ಎಂದೂ ಕಂಡಿರಲಿಲ್ಲ. ಅವಳ ಜಾತಿಯ ಜನ ಮಾರಮ್ಮನ ಗುಡಿಗೆ ಹೋಗಬಹುದೇ ಹೊರತು, ಮೇಲಿನ ಜಾತಿಯ ಗುಡಿಯ ಒಳಕ್ಕೆ ಹೋಗುವುದು ಎಂದಿಗೂ ಸಾಧ್ಯವಿಲ್ಲ. ಹೋಗಲೂ ಬಾರದು. ಆದರೆ ಈ ಮೇಲಿನ ಜಾತಿಯ ದೇವರು, ತಮ್ಮ ಮಾರಮ್ಮನಿಗಿಂತ ಗಟ್ಟಿಯಾದುದೆಂದು ಅವಳಿಗೆ ಗೊತ್ತು. ಅದರ ಪೂಜೆ ಮಾಡುವವರು ತಮ್ಮ ಜಾಂಬವರಿಗಿಂತ ಹೆಚ್ಚಿನವರು. ಅಂಥವರು ತನ್ನನ್ನು ಮುಟ್ಟಿದರೆ ದೇವರು ತನಗೆ, ತನ್ನ ಕೇರಿಗೆ ಏನಾದರೂ ಮಾಡಿದರೆ ಗತಿ ಏನು, ಎಂಬ ಭಯ ಅವಳದು.

'ಯಾಕೆ? ಏನಂತೀಯ?' – ಅವರು ಮತ್ತೆ ಕೇಳಿದರು.

'ನೀವು ಗುಡಿ ಪೂಜೆ ಮಾಡ್ತೀರಲ್ರಯ್ಯ?'

ಅವರಿಗೆ ಮುಖಕ್ಕೆ ಹೊಡೆದಂತೆ ಆಯಿತು. ಯಾವ ಕಸಬು ತಮ್ಮನ್ನು

ಇಷ್ಟು ದಿನ ತೊಳಲಿ ಹಿಂತೆಗೆಯುವಂತೆ ಮಾಡಿತೋ, ಯಾವ ಮಾತು ತಮ್ಮ ಪ್ರತಿಸ್ಪರ್ಧಿ ಜಾತಿಯವರಾದ ಶ್ರೀವೈಷ್ಣವರ ತರಲೆಯಿಂದ ಹುಟ್ಟಬಹುದೆಂದು ನಿರೀಕ್ಷಿಸಿದ್ದರೋ, ಅದನ್ನು ಇವಳೇ ಹೇಳುತ್ತಿದ್ದಾಳೆ. ಇವಳಿಗೆ ಏನೆಂದು ಸಮಾಧಾನ ಹೇಳುವುದು? ಮಾತಂಗಿ ಸುಮ್ಮನೆ ತಲೆತಗ್ಗಿಸಿ ನಿಂತಿದ್ದಳು. ಸುತ್ತ ಚನ್ನಾಗಿ ಕತ್ತಲು ಕವಿಯುತ್ತಿತ್ತು. ಹತ್ತು ಮಾರು ದೂರದಿಂದ ನೋಡಿದರೆ ಅವಳೊಂದು ಮೋಟು ತೆಂಗಿನಮರದಂತೆ ಕಾಣುತ್ತಿದ್ದಳು. 'ಯಾರು ಕಾಣಾಕ್ ಬತ್ತಾರೆ ಅಂತ ಹೆದರ್ಕತ್ತೀಯೇ?' – ಎಂದು ಮುಂದೆ ಹೋಗಿ ಮುಟ್ಟಿಯೇ ಬಿಟ್ಟರು.

ಬೇಲಿಯ ಸಂದಿಯಿಂದ ನುಸಿದ ಅವಳಿಗೆ ಇವರೇ ಸೋಗೆಯ ಹೊರೆಯನ್ನು ಕೊಟ್ಟರು. ತೋಟದ ದಾರಿಯಲ್ಲಿ ಇಳಿದು ನೀರಿನ ಹಳ್ಳ ದಾಟಿ ಮೇಲಿನ ಗದ್ದೆಗಳ ಬದುವಿನಲ್ಲಿ ನಡೆದು ತೋಟದ ಸಂದಿಯಲ್ಲಿ ಹಾಯ್ದು ಅವಳು ತನ್ನ ಕೇರಿಯನ್ನು ತಲುಪಿದಳು.

ಕತ್ತಲಲ್ಲಿ ನಡೆದು ಅವರು ಮನೆಗೆ ಬಂದಾಗ ಪಡಸಾಲೆಯಲ್ಲಿ ಲಾಟೀನಿನ ಮುಂದೆ ಕೂತು ವೆಂಕಟೇಶ ಸತ್ಯರು ಓದಿಕೊಳ್ಳುತ್ತಿದ್ದುದು ಕಣ್ಣಿಗೆ ಬಿತ್ತು. ತಾವು ಇನ್ನೇನು ಹೊಸಲು ದಾಟಬೇಕೆನ್ನುವಾಗ ಮಾದಿಗಿತ್ತಿಯನ್ನು ಮುಟ್ಟಿಸಿಕೊಂಡಿದ್ದ ನೆನಪಾಯಿತು. ಹೀಗೆ ಹ್ಯಾಗೆ ಒಳಗೆ ಹೋಗುವುದು? ಹಾಗೆಯೇ ಹಿಂತಿರುಗಿ ತೋಟದ ಕಡೆಗೆ ನಡೆದರು. ತೋಟದಲ್ಲೇ ಒಂದು ಸಣ್ಣ ಕೊಳವಿದೆ. ಉಟ್ಟ ಪಂಚೆ ತೊಟ್ಟ ಅಂಗಿ ಮತ್ತು ಹೆಗಲಿನ ಚೌಕಗಳ ಸಮೇತ ನೀರಿನಲ್ಲಿ ಇಳಿದು, ತಲೆಗೂ ಮುಳುಗು ಹಾಕಿ ಮೇಲೆ ಬಂದರು. ಅನಂತರ ಬಟ್ಟೆಗಳನ್ನು ಬಿಚ್ಚಿ ಚನ್ನಾಗಿ ಹಿಂಡಿ ಅವನ್ನೇ ಉಟ್ಟುಕೊಂಡು ಮನೆಗೆ ಹಿಂತಿರುಗಿದರು. ಕಾಲಿಗೆ ಮೆಟ್ಟಿಕೊಳ್ಳುವ ಚಕ್ಕಳದ ಎಕ್ಕಡ ಮಾದಿಗರು ಮಾಡಿದುದಾದರೂ ಅದಕ್ಕೆ ಮೈಲಿಗೆ ಇಲ್ಲ. ?

ಏಳು ವರ್ಷದ ಹುಡುಗಿ ಸತ್ಯ ಕೇಳಿದಳು: 'ಅಪ್ಪ, ಇಷ್ಟು ಹೊತ್ನಲ್ಲಿ ಒದ್ದೆ ಬಟ್ಟೆ ಉಟ್ಕಂಡು ನೆಂದ ತಲೇಲಿ ಬಂದಿದೀಯಲ ಯಾಕೆ?'

'ಸ್ನಾನ ಮಾಡ್ದೆ ಪುಟ್ಟೀಕೆರೇಲಿ.'

'ಅದ್ಯಾಕ್ ಮಾಡ್ದೆ ತಣ್ಣೀರಲ್ಲಿ? ಮನ್ಲಿ ಬಿಸಿ ನೀರು ಕಾಯ್ಸಕ್ಕಾಗ್ತಿರಲಿಲ್ವೆ? ಬೆಳಗ್ಗೆ ಹೊತ್ನಲ್ಲಲ್ವೆ ಮಡಿ ಉಟ್ಕಳೂದು?'

ಚುರುಕು ಬುದ್ಧಿಯ ಈ ಹುಡುಗಿಗೆ ಏನು ಹೇಳಬೇಕೆಂದು ಅವರಿಗೆ ತಕ್ಷಣ ತಿಳಿಯಲಿಲ್ಲ. ಆದರೆ ಹುಡುಗಿ ತನ್ನ ಪ್ರಶ್ನೆಯನ್ನು ಬಿಡಲಿಲ್ಲ. 'ದೂರದ ಒಬ್ಬ ನೆಂಟರು ಸತ್ತ ಸಮಾಚಾರ ತಿಳೀತು. ಸ್ನಾನ ಮಾಡಿದೆ' – ಎಂದು ಹೇಳಿ,

ಒಣಗಿದ ಬಟ್ಟೆ ಹಾಕಿಕೊಂಡರು. ಒಳಗಿನಿಂದ ಒಣಗಿದ ಪಂಚೆ ಅಂಗಿಗಳನ್ನು ತಂದುಕೊಟ್ಟ ಸತ್ಯಭಾಮೆಯೇ ಕೇಳಿದಳು: 'ಅಣ್ಣ, ಸೂತಕದ ಸ್ನಾನ ಮಾಡಿದ ಮೇಲೆ ಬೇರೆ ಜನಿವಾರ ಹಾಕ್ಕಾಬ್ಯಾಡವೆ?'

ಹೌದು, ಅವಳು ಹೇಳುವುದು ನಿಜ. ಬ್ರಹ್ಮಗಂಟು ಹಾಕಿರುವ ಜನಿವಾರ ಬರೀ ನೆನೆದರೆ ಶುದ್ಧವಾಗುವುದಿಲ್ಲ. ಮಾದಿಗಿತ್ತಿಯನ್ನು ಮುಟ್ಟಿಸಿಕೊಂಡಮೇಲೆ ಅದನ್ನು ಬದಲಾಯಿಸಲೇ ಬೇಕು. ಇಲ್ಲವೆ ನಾಳೆ ದೇವಸ್ಥಾನದಲ್ಲಿ ಪೂಜೆ ಮಾಡುವುದು ಹ್ಯಾಗೆ ಎನಿಸಿ, ರೇಶ್ಮೆಯ ಮಕುಟ ಉಟ್ಟು, ಮನೆಯಲ್ಲಿ ಇದ್ದ ಹೊಸ ಜೊತೆ ಜನಿವಾರವನ್ನು 'ಯಜ್ಞೋಪವೀತಂ ಪರಮಂ ಪವಿತ್ರಂ' ಹೇಳುತ್ತಾ ಹಾಕಿಕೊಂಡರು.

ಅಡಿಗೆಯ ಅಜ್ಜಿ ಬಡಿಸಿತು. ಇಬ್ಬರು ಮಕ್ಕಳೊಡನೆಯೂ ಕೂತು ಇವರು ಊಟ ಮಾಡಿದರು. ನಂತರ ಎಂದಿನಂತೆ ಮೂರು ಹಾಸಿಗೆ ಹಾಕಿಕೊಂಡರು. ಒಂದು ಪಕ್ಕಕ್ಕೆ ವೆಂಕಟೇಶ ಇನ್ನೊಂದು ಪಕ್ಕಕ್ಕೆ ಸತ್ಯ ಮಲಗಿಕೊಂಡರು. ಅಜ್ಜಿ ಒಳಗಿನ ಕೋಣೆಯಲ್ಲಿ ಮಲಗಿತು. ಆ ದಿನ ಮನಸ್ಸಿಗೇನೋ ನೆಮ್ಮದಿ ಎನಿಸಿತ್ತು. ಹೀಗಾಗುತ್ತದೆಂಬ ಕಲ್ಪನೆ ಬರುವುದೂ ಸಾಧ್ಯವಿರಲಿಲ್ಲ. ಅಷ್ಟು ಅನಿರೀಕ್ಷಿತವಾಗಿ, ಅಷ್ಟು ಬೇಗ, ಎಲ್ಲವೂ ನೆರವೇರಿಹೋಯಿತು. ಯುಗ ಯುಗಾಂತರವಾಗಿತ್ತೇನೋ ಜನ್ಮಜನ್ಮಾಂತರಗಳು ಸಂದಿತ್ತೇನೋ ಆ ಸುಖ ಕಂಡು, ಎನಿಸಿತ್ತು. ಕತ್ತಲಿನಲ್ಲಿ ಏನನ್ನೋ ತಡಕಾಡುತ್ತಿದ್ದಾಗ ಅಕಸ್ಮಾತ್ ಸುಖವೇ ಮೈತಳೆದು ಕೈಗೆ ಸಿಕ್ಕಿದಂತೆ ಆಗಿತ್ತು ಇವತ್ತು. ಆದರೆ ಎಲ್ಲ ಬಿಟ್ಟು ತಾನು ಮಾದಿಗಿತ್ತಿಯನ್ನು ಮುಟ್ಟಿದೆನಲ್ಲ; ಸಾಮಾನ್ಯ ಲೌಕಿಕ ಗೃಹಸ್ಥನಾಗಿದ್ದರೆ ಬೇರೆ ಮಾತು. ಬ್ರಹ್ಮರಥೋತ್ಸವ ನಡೆಯುವ ಬ್ರಾಹ್ಮಣ ದೇವರ ಅರ್ಚನೆ ಮಾಡುವ ತಾನು ಹೀಗೆ ಮಾಡಿದುದು ನ್ಯಾಯವೆ? – ಎಂಬ ಯೋಚನೆ ಮನಸ್ಸನ್ನು ಕೊರೆಯುತ್ತಲೇ ಇತ್ತು. ಇವತ್ತು ಆದದ್ದು ಆಯಿತು. ಇನ್ನುಮೇಲೆ ಅವಳನ್ನು ತಿರುಗಿ ನೋಡಬಾರದೆಂಬ ಯೋಚನೆ ಎರಡು ಸಲ ಮನಸ್ಸಿನಲ್ಲಿ ಬಂತು. ಆದರೆ ಅದು ಸಾಧ್ಯವಿಲ್ಲವೆಂದು ಅದೇ ಮನಸ್ಸು, ಆ ಯೋಚನೆಯ ಜೊತೆಗೇ ಶ್ರುತಿಯಂತೆ ನುಡಿಯುತ್ತಿತ್ತು.

ಮರುದಿನವೂ ಅವರು ಸಂಜೆಯಾಗಿ ಕತ್ತಲಾದ ಮೇಲೆ ತೋಟಕ್ಕೆ ಹೋದರು. ಇವರು ಹೋದ ಸ್ವಲ್ಪ ಹೊತ್ತಿಗೆ ಮಾತಂಗಿ ಬಂದಳು. ಸೋಗೆಯ ಬಟ್ಟಲಿನ ಸಂದಿಯಲ್ಲಿ ಅವಳನ್ನು ಮುಟ್ಟಿಕೊಳ್ಳುವ ಮೊದಲು ಇವರು ತಮ್ಮ ಪಂಚೆ ಅಂಗಿಗಳನ್ನು ಬಿಚ್ಚಿ ಒಂದು ಕಡೆ ಇಟ್ಟು, ಹೆಗಲ ಮೇಲೆ ಹಾಕಿಕೊಳ್ಳುವ ಚೌಕವನ್ನು ಸುತ್ತಿಕೊಂಡರು. ನೆನ್ನೆ ಅವರು ಪರಸ್ಪರ ಹೆಚ್ಚು ಮಾತೇ ಆಡಿರಲಿಲ್ಲ. ಈ ದಿನ

ಸ್ವಲ್ಪ ವಿರಾಮವಾಗಿ ಆಡಿದರು. ತಮ್ಮ ಕೈಲಿ ಮಡಿಸಿ ಇಟ್ಟುಕೊಂಡಿದ್ದ ಹತ್ತು ರೂಪಾಯಿಯನ್ನು ಇಸಿದುಕೊಂಡು ಅವಳು ಬಾಳೆಕಾಯಿಗೆ ಗಿಡಿಗಿಕೊಂಡಳು.

'ದುಡ್ಡು ಏನು ಮಾಡ್ತೀಯ?'

'ಮಡೀಕಣ್ತೀನಿ.'

'ಶಾಲೆ ತಗಾಳಾಕುಲ್ವ?'

'ನೀವ್ರ ಕೊಟ್ರ ಅಂತ ತಗಂಡ್ರೆ ನಮ್ ಅಟ್ಟೆಯೋರ್ಗೆ ಶಂಕೆ ಬರಾಕಿಲ್ವ? ಮಾರಮ್ಮನ ಅಬ್ಬಕ್ಕೆ ತಗಾತೀನಿ.'

ಅವಳ ಸೂಕ್ಷ್ಮಬುದ್ಧಿಯನ್ನು ಕಂಡು ಅವರಿಗೆ ಮೆಚ್ಚುಗೆಯಾಯಿತು. ಮನಸ್ಸಿಗೆ ಧೈರ್ಯವೂ ಬಂತು: 'ನೋಡು ಮಾತಂಗಿ, ಯಾರಿಗೂ ಗೊತ್ತಾಗಾ ಕಾದು.'

'ಐ, ಅದ್ಯಾಕ್ ಯೇಚ್ಣೆ ಮಾಡೀರ ಬುದ್ರಯ್ಯ? ಮಾತಂಗಿ ಅಂದ್ರೆ ನಿಯತ್ತಿನ ಎಣ್ಣು.'

ಅವಳು ಹೋದಮೇಲೆ ಅವರು, ಸುತ್ತಿಕೊಂಡ ಚೌಕದಲ್ಲಿಯೇ ಕೊಳದ ನೀರಿನಲ್ಲಿ ಮುಳುಗಿ ಸ್ನಾನ ಮಾಡಿದರು. ಅನಂತರ ಮೇಲೆಎದ್ದು ಅದೇ ಚೌಕ ವನ್ನು ಹಿಂಡಿ ಮೈ ಒರೆಸಿಕೊಂಡರು. ಸೋಗೆಯ ಹತ್ತಿರ ಬಿಚ್ಚಿ ಇಟ್ಟದ್ದ ಪಂಚೆ ಉಟ್ಟು ಅಂಗಿ ತೊಟ್ಟು, ಬಿಗಿಯಾಗಿ ಹಿಂಡಿದ ಚೌಕವನ್ನು ತಲೆಯ ಮೇಲೆ ಹಾಕಿಕೊಂಡು ಕಾಲಿಗೆ ಎಕ್ಕಡ ಮೆಟ್ಟಿ ಮನೆಗೆ ಬಂದರು. ತಲೆಯ ಮೇಲಿನ ಒದ್ದೆ ಚೌಕವನ್ನು ಮಗಳಾಗಲಿ ಮಗನಾಗಲಿ ಗಮನಿಸಲಿಲ್ಲ. ಅದನ್ನು ಬಚ್ಚಲು ಮನೆಯ ಗಳುವಿನ ಮೇಲೆ ಒಣಗಹಾಕಿದ ನಂತರ ನೆನಪು ಬಂತು: ಇವತ್ತೂ ಜನಿವಾರ ಮೈಲಿಗೆಯಾಗಿದೆ. ಮನೆಯಲ್ಲಿ ಇನ್ನೂ ನಾಲ್ಕೈದು ಜೊತೆ ಇದೆ. ಆದರೆ ದಿನಾ ಒಂದೊಂದು ಹೊಸ ಜೊತೆಯಂತೆ ಎಲ್ಲಿ ಹೊಂದಿಸುವುದು? ಇದಕ್ಕೆ ಏನು ಉಪಾಯ ಎಂಬ ಯೋಚನೆಯಲ್ಲಿಯೇ ದೇವರ ಮನೆಗೆ ಹೋಗಿ ಮಕುಟ ಉಟ್ಟು, ಗಟ್ಟಿಯಾಗಿ ಹೇಳದೆ ಮನಸ್ಸಿನಲ್ಲೇ, 'ಯಜ್ಞೋಪವೀತಂ ಪರಮಂ ಪವಿತ್ರಂ....' ಹೇಳಿಕೊಂಡು ಹೊಸ ಜನಿವಾರ ಧರಿಸಿದರು.

ಆ ದಿನ ರಾತ್ರಿ ಮಲಗಿದಾಗ ಒಂದೇ ಯೋಚನೆ ಕೊರೆಯುತ್ತಿತ್ತು. ಜನಿ ವಾರಕ್ಕೆ ಮೈಲಿಗೆಯಾಗದ ಹಾಗೆ ಏನು ಮಾಡುವುದು? ದಿನಾ ಹೊಸ ಜನಿವಾರ ಹೊಂದಿಸುವುದಂತೂ ಸಾಧ್ಯವಿಲ್ಲ. ಯೋಚಿಸಿ ಯೋಚಿಸಿ ಯೋಚಿಸಿದನಂತರ ಒಂದು ಉಪಾಯ ಹೊಳೆಯಿತು: ಮನೇಲಿ ಹ್ಯಾಗೂ ರೇಶ್ಮೆಯ ಉತ್ತರೀಯ ಇದೆ. ಅದನ್ನ ಹೆಗಲ ಮೇಲೆ ಹಾಕಿಕೊಂಡು ಹೋಗೂದು. ರೇಶ್ಮೆಗೆ ಮುಟ್ಟಿಲ್ಲ, ಗಂಗೆಗೆ ಚಟ್ಟಿಲ್ಲ ಅಂತ ಗಾದೆಯೇ ಇದೆ. ಅವಳನ್ನ ಮುಟ್ಟಿಸಿಕೊಳ್ಳುವಾಗ

ಜನಿವಾರವನ್ನ ಸೊಂಟಕ್ಕೆ ಸುತ್ತುಹಾಕಿ ಅದರ ಮೇಲೆ ರೇಶ್ಮೆಯ ಚೌಕ ಬರೂ ಹಾಗೆ ಮಾಡಿದರೆ ಸರಿ. ಆಮೇಲೆ ಚೌಕಾನೂ ಒಗೆಯದಿದ್ದರೂ ಆಗುತ್ತೆ. ನಾನು ಹ್ಯಾಗೂ ಸ್ನಾನ ಮಾಡ್ತೀನಿ. ಜೊತೆಗೆ ಜನಿವಾರಾನೂ ನೆನೆಸೂದು. ಅಲ್ಲಿಗೆ ಸಮಸ್ಯೆ ಬಗೆಹರಿಯಿತು.

ಮರುದಿನ ಸಂಜೆ ಮಾತಂಗಿ ಪಿಸುಮಾತಿನಲ್ಲಿ ಕೇಳಿದಳು: 'ದಿನಾ ಬತ್ತಿದ್ರೆ ಯಾರೂ ಕಾಣಾಕಿಲ್ವ?'

'ಯಾರು ಕಾಣ್ತಾರ‍್ಯೆ?'

'ಕಳ್ ನನ್ಮಕ್ಳು ಕಂಡ್ರಯ್ಯ ಈ ಊರೋರು. ಅಮಾಸೆ ಮದ್ಲು ಕತ್ಲಿ ತ್ರೈತೆ. ದಿನಾ ಬರಾನ. ತಿಂಗಳ ಬೆಳಕು ಇರೂವಾಗ ಬರಾರ್ದೇ ಬ್ಯಾಡ.'

'ಅಂದ್ರೆ ತಿಂಗ್ಳಿಗೆ ಹದಿನೈದು ದಿನ ಇಲ್ದೆ ಇರಬೇಕಲ.'

'ಅಮಾಸೆ ಕಳ್ದ ಎಲ್ಡು ಮೂರು ದಿನ ತಿಂಗಳು ಬ್ಯಾಗ ಮುಣಿಕ್ಕಳಾಕಿಲ್ವಾ?'

'ಹೂಂ. ಹನ್ನೆರಡು ದಿನ.'

'ತೆವಲು ಶಾನೆ ಮಾಡ್ಕ್ಯಬ್ಯಾಡ್ದು ಕಣ್ರಯ್ಯ.'

ಇವಳು ತನಗೆ ಬುದ್ಧಿ ಹೇಳುವುದನ್ನು ಕಂಡು ಅವರಿಗೆ ನಗುವೂ ಬಂತು, ಸಿಟ್ಟೂ ಬಂತು. ಅವಳೇ ಎಂದಳು: 'ತ್ವಾಟದ ಬೇಲಿ ಬಂದೂಬಸ್ತ್ ಮಾಡ್ಸಿ. ಕತ್ಲಾದ ಮ್ಯಾಲೆ ಒಳಿಕ್ಕೆ ಬಂದ ಮ್ಯಾಗೆ ತದ್ದಲ ಸಂದೀಲಿ ಕೈ ಹಟ್ಟೆ ಬೀಗ ಅಮಿಕ್ಕಂಡ್ ಬಂದ್ರೆ ಹ್ಯದ್ರಿಕೆಯಾಗಾಕುಲ್ಲ.'

ಅವಳ ತಿಳಿವಳಿಕೆಯನ್ನು ಕಂಡು ಅವರಿಗೆ ಮೆಚ್ಚುಗೆಯಾಯಿತು. ಮರು ದಿನವೇ ಆಳುಗಳನ್ನು ಗೊತ್ತುಮಾಡಿ ಬದಿರುಮುಳ್ಳು ಕಡಿಸಿದರು. ತೋಟದ ಸುತ್ತ ಇದ್ದ ಬೇಲಿಯ ಮೇಲೆ ಎರಡು ಥೋಡಿ ಹಾಕಿಸಿ ಒಂದು ವಾರದಲ್ಲಿ ಮುಗಿಸಿದರು. ಹೊಳೆ ಬಾಗಿಲಿಗೆ ದೊಡ್ಡ ತದ್ದಲು ಕಟ್ಟಿಸಿ ಹೊಸ ಬೀಗ ತಂದರು.

'ಊರಲ್ಲಿ ಕಳ್ಳರು ಹೆಚ್ಕಂಡಿದಾರೆ. ಈ ಮಾದಿಗ ಕೇರಿಯೋರು ಹಾಗೆ ಬಂದು ಹೀಗೆ ಕಾಯಿ ಕೆಡಿಕ್ಕಂಡ್ ಹೋಗ್ತಾರೆ. ಅವರ ಮನೆ ಹಾಳಾಗಿ ಹೋಗ' – ಎಂದು, ಸಿಕ್ಕಿದವರೆದುರಿಗೆ ಹೇಳಿದರು.

ಒಂದು ದಿನ ಮಾತಂಗಿ ಕೇಳಿದಳು: 'ಅಯ್ಯಾರೇ, ನೀವು ಗುಡಿ ಪೂಜೆ ಮಾಡ್ತೀರಲ, ನಂಗೆ ಏನೂ ಆಗಾಕುಲ್ವ?'

'ನಿಂಗೇನಾಗುತ್ಯೆ?'

'ದೇವರು ಕ್ವಾಪ ಮಾಡ್ಕಂಡು ಬಡ್ದುಬುಟ್ರೆ?'

'ಏನೂ ಆಗುಲ್ಲ. ರೇಷ್ಮೆ ಚೌಕ ಸುತ್ತಿಕಂಡಿಲ್ವಾ ನಾನು? ಎದ್ದಮ್ಯಾಲೆ ಕೊಳದಲ್ಲಿ ಮುಳುಗಿ ಮಡಿ ಉಟ್ಕತ್ತೀನಿ.'

ಆ ಉತ್ತರದಿಂದ ಅವಳಿಗೆ ಸಮಾಧಾನವಾಯಿತೋ ಇಲ್ಲವೋ! ಆದರೆ ಅವರ ಮನಸ್ಸಿನಲ್ಲೇ ಒಂದು ಶಂಕೆ ಹುಟ್ಟಿತು. ಮರುದಿನ ಗುಡಿಯಲ್ಲಿ ಪೂಜೆ ಮಾಡಿ ಮಂತ್ರ ಹೇಳಿಕೊಂಡು ಮಂಗಳಾರತಿ ಎತ್ತುವಾಗ ಒಂದು ನಿಮಿಷ ಮೈ ಜುಂ ಎಂದಂತೆ ಆಗಿ ಭಯವಾಯಿತು. ಯಾವ ಕಾಲದಲ್ಲಿ ಮಾಡಿಸಿದ ಮಂಗಳಾರತಿ ಹಲಗೆಯೋ ಅದು! ಐದು ಪಾತ್ರಗಳಿವೆ. ಒಂದೊಂದಕ್ಕೂ ನಾಲ್ಕು ನಾಲ್ಕು ಬತ್ತಿಗಳನ್ನು ಹಾಕಿಸಿ ಹೊತ್ತಿಸಿದರೂ ಅಷ್ಟು ಅಗಲ ಪ್ರಕಾಶವಾಗುತ್ತದೆ. ದೇವರ ಕಣ್ಣಿನ ಬೆಳ್ಳಿಯ ಕಟ್ಟು, ಹಣೆಯ ನಾಮ, ತಲೆಯ ಕಿರೀಟಗಳು ಅದರ ಬೆಳಕಿನಲ್ಲಿ ಥಳಥಳಿಸುತ್ತವೆ. 'ಸಾಮ್ರಾಜ್ಯಂ ಭೋಜ್ಯಂ' ಹೇಳುತ್ತಾ ಹಲಗೆಯನ್ನು ದೇವರ ಮುಖದ ಹತ್ತಿರ ಹಿಡಿದುಕೊಂಡಾಗ ಅವರಿಗೇ ಹೆದರಿಕೆಯಾಯಿತು. ನೆನ್ನೆ ಮಾತಂಗಿ ಕೇಳಿದ ಪ್ರಶ್ನೆಯು ತಲೆಯಲ್ಲಿ ಹೊಡೆಯಲು ಶುರುವಾಯಿತು. ಮಂಗಳಾರತಿಯನ್ನು ಬೇಗ ಮುಗಿಸಿದರು. ದೇವರ ಬೆಳ್ಳಿಯ ಕಣ್ಣುಕಟ್ಟಿನ ಪ್ರಕಾಶ ಕಡಿಮೆಯಾದಮೇಲೆ ಅವರ ಭಯವೂ ಹಿಡಿತಕ್ಕೆ ಬಂತು. ಸ್ನಾನ ಮಾಡಿ ಶುದ್ಧಾಚಮನ ಮಾಡಿದ ಮೇಲೆ ಎಂತಹ ಮೈಲಿಗೆ ಉಳಿಯುತ್ತೆ? ಅಕಸ್ಮಾತ್ ನಾಯಿ ಮುಟ್ಟಿದರೆ ಏನು ಮಾಡ್ತೀವಿ? ಸ್ನಾನ ಮಾಡಿ ಆಚಮನ ಮಾಡ್ತೀವಿ. ಮಾತಂಗಿ ಮುಟ್ಟಿದರೂ ಅಷ್ಟೇ. ಇಷ್ಟಕ್ಕೂ ಜನಿವಾರ ಸ್ಪರ್ಶವಾಗದ ಹಾಗೆ ಇರ್ತೀನಿ. ಹೆದರ್‌ಕಳೂ ಕಾರಣ ಏನಿದೆ, ಎಂದು ತಮಗೆ ತಾವೇ ಸಮಾಧಾನ ಮಾಡಿಕೊಂಡರು. ಆದರೆ ಆ ದಿನದಿಂದ ಮಂಗಳಾರತಿ ಹಲಗೆಯನ್ನು ಹತ್ತಿರ ಹಿಡಿದಿದ್ದಾಗ ಅವರು ದೇವರ ಮುಖವನ್ನು ಸರಿಯಾಗಿ ನೋಡುವುದನ್ನೇ ಬಿಟ್ಟುಬಿಟ್ಟರು.

೩

ಮಾತಂಗಿಯ ಜೊತೆ ಮೂರು ವರ್ಷ ಕಳೆದಿತ್ತು. ಮನೆಯಲ್ಲಿ ಅಡಿಗೆ ಮಾಡುತ್ತಿದ್ದ ಅಜ್ಜಿ ಒಂದು ತಿಂಗಳ ಹಿಂದೆ ತುಮಕೂರಿಗೆ ತನ್ನ ಮಗನ ಮನೆಗೆ ಹೊರಟುಹೋಗಿತ್ತು. ಆದುದರಿಂದ ಅಡುಗೆಯ ಕೆಲಸ ಇವರ ಮೇಲೇ ಬಿದ್ದಿತ್ತು. ಹತ್ತು ವರ್ಷದ ಸತ್ಯಭಾಮೆ ಮತ್ತು ಹದಿನಾಲ್ಕರ ವೆಂಕಟೇಶ ಮನೆಯಲ್ಲಿದ್ದರೂ, ಹುಡುಗರಿಗೆ ಕಷ್ಟಕೊಡದೆ ಅವರೇ ಅಡಿಗೆ ಮಾಡುತ್ತಿದ್ದರು.

ಒಂದು ರಾತ್ರಿ ಮಾತಂಗಿ ಕೇಳಿದಳು: 'ಯಡವಟ್ಟಾಗೈತಲ್ರಯ್ಯ.'

'ಏನೇ ಅದು?' – ದುಡ್ಡು ಕೇಳಲು ಪೀಠಿಕೆ ಹಾಕುತ್ತಿದ್ದಾಳೆಂದು ಭಾವಿಸಿ ಇವರು ಕೇಳಿದರು.

'ನಾನು ಬಿಮುನ್ನಿಯಾಗಿರಬ್ಬೈದು.'

'ಇದೇನೇ ಹಿಂಗಂತೀಯ?' – ಅವಳು ಬಸುರಿಯಾಗಿರುವುದರಲ್ಲಿ ಅಸಹಜ ವಾದುದೇನೂ ಇರಲಿಲ್ಲವಾದರೂ ಅವರು ಗಾಬರಿಯಿಂದ ಕೇಳಿದರು.

'ಒಂದು ತಿಂಗಳಿಂದ ಸೀರೆಯಾಗಿಲ್ಲ. ಬಿದಿರ ಕಳಲೆ ಮಾಡ್ಕಂಡ್ ಕುಡ್ದೆ. ಸೀರೆ ಹ್ವಂಡಲೇ ಇಲ್ಲ.'

ಆ ದಿನ ಅವರು ಅವಳನ್ನು ಸರಿಯಾಗಿ ಮುಟ್ಟಲಿಲ್ಲ. ತಲೆಯ ಮೇಲೆ ಕೈ ಹೊತ್ತು, ಸೋಗೆ ಅಟ್ಟಿನ ಸಂದಿಯಲ್ಲಿ ಅವಳ ಪಕ್ಕದಲ್ಲಿ ಕುಳಿತುಬಿಟ್ಟರು. ಅವರು ಎಷ್ಟಾದರೂ ದುಡ್ಡು ಕೊಡಲು ಸಿದ್ಧರಿದ್ದರು. ಆದರೆ ತುಮಕೂರಿನಂಥ ದೊಡ್ಡ ಊರಿಗೆ ಹೋಗಿ ಸರಿಮಾಡಿಸಿಕೊಂಡು ಬರುವ ಜವಾಬ್ದಾರಿ ಹೊರುವವರು ಯಾರು? ಇಂಥದೆಲ್ಲ ಅವರು ಕೇಳಿದ್ದರೇ ಹೊರತು ಕಂಡಿಲ್ಲ. ನೇರವಾಗಿ ತಿಳಿದಿಲ್ಲ.

'ನಿಮ್ಮ ಕೇರೀಲಿ ಕೇಳಿದ್ರೆ ಇನ್ಯಾರ ಹೆಸರೂ ಹೇಳಕ್ಕಾಗುಲ್ವೇನೆ?'

'ನಿಮ್ಮ ಪಾದ ಮುಟ್ಟಿದ ಮ್ಯಾಲೆ ಎಂಜಲಿಗೆ ಕಣ್ಣು ಆಯ್ಸಿಲ್ಲ.'

ಅದು ಅವರಿಗೂ ಗೊತ್ತು. ಆದರೆ ಈಗ ಬಂದಿರುವ ಕುತ್ತಿನಿಂದ ಪಾರಾಗು ವುದು ಹೇಗೆ?

ಮಾತಂಗಿ ವ್ಯವಹಾರದಲ್ಲಿ ತುಂಬ ಎಚ್ಚರಿಕೆಯ ಹೆಣ್ಣು. ಇವರು ಕೊಡುತ್ತಿದ್ದ ದುಡ್ಡಿನಲ್ಲಿ ಹೊಸ ಬಟ್ಟೆಬರೆಗಳನ್ನು ಕೊಳ್ಳುತ್ತಿರಲಿಲ್ಲ. ಕೂಲಿ ಮಾಡುವುದನ್ನು ಬಿಡಲಿಲ್ಲ. 'ದಿಮ್ಮನೆ ಇರಾಕ್ ಹ್ವಂಟ್ರೆ ಇವ್ಳಿಗೆಲ್ಲಿ ಬಂತು ಅಂತ ಸಂಕೆ ಬರಾಕಿಲ್ವೇನ್ರಯ್ಯ ಕೇರಿಯೋರಿಗೆ?' – ಎಂದು ಅವಳೇ ಹೇಳಿದ್ದಳು. ಹೊರಗಿನ ಯಾರಿಗೂ ಅನುಮಾನ ಬರದಂತೆ ಜೀವನ ಮಾಡುತ್ತಿದ್ದಳು. ಹಗಲು ಹೊತ್ತು ಹೊಲ ಗದ್ದೆ ತೋಟಗಳಲ್ಲಿ ಕೂಲಿ ಮಾಡುವಾಗ ಅಕಸ್ಮಾತ್ ಇವರು ಆ ಕಡೆ ಬಂದರೂ ಕತ್ತೆತ್ತಿ ನೋಡದೆ, ತನ್ನ ನೆರಳು ಹತ್ತು ಮಾರಿಗಿಂತ ಹತ್ತಿರ ಬೀಳದಂತೆ ಜಾತಿಧರ್ಮವನ್ನು ಕಾಯ್ದುಕೊಂಡಿರುತ್ತಿದ್ದಳು. ಎಂದೂ ತಾನಾಗಿಯೇ ದುಡ್ಡು ಕೇಳಿಲ್ಲ. ಇವರು ತಾವಾಗಿಯೇ ಕೊಟ್ಟಿದ್ದನ್ನು ತನ್ನ ಗುಡಿಸಿಲಿನಲ್ಲಿ ಜೋಪಾನ ವಾಗಿ ಇಟ್ಟುಕೊಂಡಿರುತ್ತಾಳೆ. ಗುಡ್ಡೆ ಹಾಕಿ ಇವರ ಕೈಲೇ ಕೊಟ್ಟು, ತಾವರೆ ಕೆರೆಯಿಂದ ಒಡವೆ ಮಾಡಿಸಿಕೊಂಡಿದ್ದಾಳೆ. ಈಗಾಗಲೇ ಅವಳ ಹತ್ತಿರ ಸುಮಾರು ಒಂದು ಸಾವಿರ ರೂಪಾಯಿಯ ನಗವಿದೆ. ಆದರೆ ಅದನ್ನು ಒಂದು ದಿನವೂ ಮೈ ಮೇಲೆ ಇಟ್ಟುಕೊಂಡಿಲ್ಲ. ನಿಂಗೆಲ್ಲಿ ಬಂತು ಈಟೊಂತರ ನಗ, ಎಂದು ಕೇರಿಯ ಯಾರಾದರೂ ಕೇಳಿದರೆ ಏನು ಮಾಡುವುದು, ಎಂಬ ಎಚ್ಚರ.

ಮರುದಿನ ಸಂಧಿಸಿದಾಗಲೂ ಅವರು ಇದೇ ವಿಷಯ ಮಾತನಾಡಿಕೊಂಡರು. ಇವರು ಅವಳ ಕೈಹಿಡಿದು, 'ಮಾತಂಗಿ, ನಾನು ಯಾವತ್ತೂ ನಿನ್ನ ಕೈಮೇಲೆ

ಹೊಡೆದಿಲ್ಲ. ನನ್ನ ಮರ್ಯಾದೆ ಕಾಪಾಡೂದು ನಿನ್ನ ಕೈಲಿದೆ' ಎಂದರು.

'ಅಯ್ಯ, ನಿಮ್ಮ ಪಾದ ಬ್ಯಾರೆಯಾ? ಕ್ಯರೆ ಕೆಳಗಿನ ಗುಡಿ ತಿಮ್ಮಪ್ಪನ ಪಾದ ಬ್ಯಾರೆಯಾ? ಮರ್ವಾದಿ ಕಳೆಯೂ ಮುಂಡೆಯಲ್ಲ ನಾನು' – ಎಂದು ಅವರ ಕಾಲನ್ನು ಮುಟ್ಟಿ ಅವಳು ಹೇಳಿದಳು.

ಮರುದಿನ ಸಂಜೆ ಕಳೆದ ಮೇಲೆ ಇವರು ಎಂದಿನಂತೆ ತೋಟ ಕಾಯಲು ಹೋದರು. ಕತ್ತಲಾಯಿತು. ಅವಳು ಬರಲಿಲ್ಲ. ರಾತ್ರಿಯಾಯಿತು. ಅವಳು ಬರಲಿಲ್ಲ. ರಾತ್ರಿ ಏರಿತು. ಅವಳು ಬರಲೇ ಇಲ್ಲ. ಕಾದು ಕಾದು ಸಾಕಾಗಿ ಇವರು ಮನೆಗೆ ಬಂದರು. ಮರುದಿನ ಸಂಜೆಯೂ ಹೀಗೆಯೇ ಆಯಿತು. ಅವಳು ಬರಲಿಲ್ಲ. ಅವಳ ಹತ್ತಿರ ತೋಟದ ಒಂದು ಬೀಗದ ಕೈ ಕೊಟ್ಟಿದ್ದರು. ಒಬ್ಬರಿಲ್ಲದ ವೇಳೆಯಲ್ಲಿ ಒಬ್ಬರು ಬಂದು ಕಾದು ಹೋಗಿದ್ದರೆ ಇನ್ನೊಬ್ಬರಿಗೆ ತಿಳಿಯಲಿ ಎಂದು ಸೋಗೆಯ ಅಟ್ಟದ ಸಂದಿಯಲ್ಲಿ ಇಡುವ ಸನ್ನೆಯ ಹೆಡೆದಿಬ್ಬಿಯನ್ನು ನೋಡಿದರು. ಅವಳು ಬಂದಿದ್ದ ಗುರುತಿರಲಿಲ್ಲ. ಮರುದಿನವೂ ಹೀಗೆಯೇ ಆಯಿತು. ಅವಳು ಬರಲಿಲ್ಲ. ಅದರ ಮರುದಿನವೂ ಇದೇ ಆಗಿ ಅವರು ಯೋಚಿಸಲು ಪ್ರಾರಂಭಿಸಿದರು. ತಾವರೆಕೆರೆಯ ಆಚೆ ಹೆಗ್ಗಟ್ಟದಲ್ಲಿ ಅವರ ನೆಂಟರಿದ್ದಾರೆ ಎಂಬುದಷ್ಟು ಅವರಿಗೆ ಗೊತ್ತಿತ್ತು. 'ನಮ್ಮ ಚಿಗವ್ವ ಅಲ್ಲೈ' – ಎಂದು ಅವಳು ಹೇಳಿದ್ದುದೆಷ್ಟೋ ಅಷ್ಟು. ಅವಳು ಯಾವ ರೀತಿಯ ಚಿಗವ್ವ, ತಾಯಿಯ ತಂಗಿಯೇ, ತಂದೆಯ ತಮ್ಮನ ಹೆಂಡತಿಯೇ, ಅಥವಾ ವಾವೆಯ ಸಂಬಂಧವೇ, ಅವರಿಗೆ ಸರಿಯಾಗಿ ಗೊತ್ತಿಲ್ಲ. ಅವಳು ಅಲ್ಲಿಗೆ ಹೋಗಿರಬಹುದು. ಮತ್ತೆಲ್ಲಿಯಾದರೂ ಹೋಗಿರಬಹುದು. ಕೂತಿರುವ ಗರ್ಭವನ್ನು ತೆಗೆಸಿಕೊಂಡು ಬರುವುದಕ್ಕೇ ಹೋಗಿದ್ದಾಳೆ. ತೆಗೆಯುವಾಗ ಅವಳ ಜೀವಕ್ಕೆ ಏನೂ ತೊಂದರೆಯಾಗದಿದ್ದರೆ ಸಾಕು, ಎಂದು ಮನಸ್ಸಿನಲ್ಲೇ ಕೇಳಿಕೊಳ್ಳುತ್ತಿದ್ದರು.

ಹದಿನೈದು ದಿನವಾದರೂ ಅವಳ ಸುದ್ದಿ ಹತ್ತಲಿಲ್ಲ. ಇಪ್ಪತ್ತು ದಿನ ಕಳೆದರೂ ತಿಳಿಯಲಿಲ್ಲ. ಮಾದಿಗರ ಕೇರಿ ಹೊಲೆಗೇರಿಗಳವರು ಎಷ್ಟೋ ಜನ ಹೊಲ ಗದ್ದೆಗಳಲ್ಲಿ ಕೂಲಿ ಮಾಡುತ್ತಿದ್ದರು. ಇವರು ಯಾವುದಕ್ಕಾದರೂ ಮಾತನಾಡಿಸಿದರೆ, ನಿಂತಲ್ಲಿಂದ ತುಸು ದೂರ ಹೋಗಿ ನಿಂತು ನೆಲ ನೋಡುತ್ತಾ ಉತ್ತರ ಹೇಳುತ್ತಿದ್ದರು. ಉಳಿದವರ ವಿಷಯದಲ್ಲಿ ಇಂತಹ ಕಟ್ಟನ್ನು ಹೆಚ್ಚಾಗಿ ಪಾಲಿಸುತ್ತಿರಲಿಲ್ಲ. ಆದರೆ ಇವರು ಗುಡಿ ದೇವರ ಪೂಜಾರರು ಎಂಬ ವಿಶೇಷ ಭಯವಿತ್ತು. 'ನಿಮ್ಮ ಕೇರಿಯ ಮಾತಂಗಿ ಎಲ್ಲಿ ಕಾಣಾಕೇ ಇಲ್ಲ. ಕೂಲಿ ದುಡ್ಡು ತಗಾಬೇಕಾಗಿತ್ತು' – ಎಂದು ಯಾರನ್ನಾದರೂ ಕೇಳುವ ಮನಸ್ಸಾಯಿತು. ಆದರೆ ಇದರಿಂದ ಯಾರಿಗಾದರೂ ಅನುಮಾನ ಬರಬಹುದೆಂಬ ಭಯವಾಗಿ ಕೇಳಲಿಲ್ಲ. ಈ

ಪಾಪದ ಹೆಂಗಸು ಏನಾದರೂ ಪ್ರಾಣಗೀಣ ಕಳೆದುಕೊಂಡಳೋ ಎಂಬ ದಿಗಿಲೂ ಆಯಿತು. ಅಂಥದೇನಾದರೂ ಆಗಿದ್ದರೆ ಇಷ್ಟು ಹೊತ್ತಿಗೆ ಸುದ್ದಿ ಹಬ್ಬಬೇಕಾಗಿತ್ತು ಎಂದು ಸಮಾಧಾನ ತಂದುಕೊಂಡರು.

ಒಂದು ತಿಂಗಳು ಕಳೆದ ಮೇಲೆ ತಿಳಿಯಿತು: ಶಿವಗೆರೆಯ ಕೊಪ್ಪಲಿನಲ್ಲಿ ಅವಳ ಜಾತಿಯವನೇ ಒಬ್ಬ ಹೆಂಡತಿ ಸತ್ತವನಿದ್ದ. ಸೀರುಡಿಕೆ ಮಾಡಿಕೊಂಡು ಅವಳು ಈಗ ಅಲ್ಲಿ ಇದ್ದಾಳಂತೆ. ಹೆಗ್ಗಟ್ಟದ ಅವಳ ಚಿಗವ್ವ ಗೊತ್ತು ಮಾಡಿದ ಈ ಕೂಡಿಕೆ ಈಗ ಹದಿನೈದು ದಿನದಲ್ಲಿ ಆಯಿತಂತೆ. ಮಾತಂಗಿ ತಿಮ್ಲಾಪುರದ ತನ್ನ ಕೇರಿಯನ್ನು ಬಿಟ್ಟೇ ಬಿಟ್ಟಳು. ಅವಳ ಗುಡ್ಲಿಗೆ ಬೀಗ ಹಾಕಿಕೊಂಡು ಹೋಗಿದ್ದಾಳೆ. ಇಲ್ಲಿಗೆ ಮತ್ತೆ ಯಾಕೆ ಬಂದಾಳು? ಅವಳು ಬಸುರಿಯಾದ ಸಮಸ್ಯೆ ಇಷ್ಟು ಹಗುರವಾಗಿ ಬಗೆಹರಿದದ್ದಕ್ಕೆ ಅವರಿಗೆ ಸಮಾಧಾನವಾಯಿತು. ಎರಡು ದಿನ ಹಾಯಾಗಿದ್ದರು. ಆದರೆ ಅವಳು ಊರನ್ನೇ ಬಿಟ್ಟು ಹೊರಟು ಹೋಗಿ ಇನ್ನು ಎಂದೆಂದಿಗೂ ಅವಳ ಸಂಪರ್ಕವಿಲ್ಲದಂತಾದುದಕ್ಕೆ ವ್ಯಸನವಾಯಿತು. ಎರಡು ಮೂರು ದಿನದಲ್ಲಿ ಅವಳ ಹುಚ್ಚೇ ಹಿಡಿಯಿತು. ತೋಟಕ್ಕೆ ಹೋಗಿ, ತೆಂಗಿನ ಒಟ್ಟಲಿನ ಸಂದಿಯಲ್ಲಿ ತಾವು ಅವಳು ಕೂಡುತ್ತಿದ್ದ ಜಾಗವನ್ನು ನೋಡುತ್ತಾ ನಿಲ್ಲುತ್ತಿದ್ದರು. ಒಂದೊಂದು ದಿನ, ಹೋಗಿ ಆ ಜಾಗದಲ್ಲಿ ಸುಮ್ಮನೆ ಕುಳಿತುಬಿಡುತ್ತಿದ್ದರು. ಅನಂತರ ಎದ್ದು ಉಟ್ಟ ಬಟ್ಟೆಯ ಸಮೇತ ಕೊಳದಲ್ಲಿ ಸ್ನಾನಮಾಡಿ ಏಳುತ್ತಿದ್ದರು. ಆಮೇಲೆ, 'ನಾನ್ಯಾಕೆ ಸುಮ್ಮಸುಮ್ಮನೆ ನೀರಿಗಿಳಿದು ಮೈ ನೆನೆಸಿಕೊಂಡೆ?' ಎಂದು ಬಟ್ಟೆ ಒಣಗಿಸಿಕೊಂಡು ಉಟ್ಟು ಮನೆಗೆ ಬರುತ್ತಿದ್ದರು. ಮಾತಂಗಿ ಇದ್ದು ಹೆಚ್ಚು ಕಡಿಮೆ ದಿನವೂ ಸಂಧಿಸುತ್ತಿದ್ದಾಗ ಅವರಿಗೆ ಅವಳ ವೈಶಿಷ್ಟ್ಯವು ಅರಿವಿಗೆ ಬಂದಿರಲಿಲ್ಲ. ಒಂಬತ್ತು ವರ್ಷ ಅವರು ತಮ್ಮ ಹೆಂಡತಿಯೊಡನೆ ಸಂಸಾರ ಮಾಡಿದ್ದರು. ಮಾತಂಗಿಯನ್ನು ಮುಟ್ಟಿಕೊಳ್ಳುತ್ತಿದ್ದುದು ಸುಮಾರು ಮೂರು ವರ್ಷ. ಎರಡನ್ನೂ ಹೋಲಿಸಿಕೊಂಡಾಗ ಮಾತಂಗಿಯಲ್ಲಿ ತಾವು ಕಂಡ ಹೆಣ್ಣುತನವನ್ನು ತಮ್ಮ ಹೆಂಡತಿಯಲ್ಲಿ ಕಂಡಿರಲಿಲ್ಲವೆಂಬುದು ಅವರಿಗೇ ತಿಳಿಯಿತು. ಇಷ್ಟಕ್ಕೂ ಅವರು ಅವಳನ್ನು ಬೆಳಕಿನಲ್ಲಿ ನೋಡುತ್ತಿರಲಿಲ್ಲ. ರಾತ್ರಿಯ ಕತ್ತಲೆಯಲ್ಲಿ ಇನ್ನೂ ಹೆಚ್ಚು ಕತ್ತಲು ಬಣ್ಣದ ಆಕೃತಿಯಾಗಿದ್ದ ಅವಳು ಏನನ್ನೂ ಕೇಳದೆಯೇ ಇವರ ಮನಸ್ಸನ್ನೆಲ್ಲ ಹೀರಿಕೊಂಡು ಹೋಗಿದ್ದಳು. ಯಾವುದಾದರೂ ಕೆಲಸವಿದೆ ಎಂದೋ, ಅಥವಾ ಒಂದು ಹಸು ತಪ್ಪಿಸಿಕೊಂಡಿದೆ ಎಂದೋ ನೆವಹಾಕಿ ಶಿವಗೆರೆಯ ಕೊಪ್ಪಲಿನ ಕಡೆ ಹುಡುಕಲು ಹೋಗಿ ಅವಳನ್ನು ಮಾತನಾಡಿಸಿಕೊಂಡು ಬರಲೆ? ಅದೇನು ಐಗಂಚಿ, ಇಲ್ಲಿಗೆ ಒಂಬತ್ತು ಮೈಲಿ ಎಂಬ ಹಂಬಲ ಕಾಡುತ್ತಿತ್ತು. ಆದರೆ ಬರೀ ಮಾತನಾಡಿಸಿ

ಏನು ಸಾರ್ಥಕ? ರಾಜಾರೋಷವಾಗಿ ಅವಳನ್ನು ಕರೆದುಕೊಂಡು ಬಂದು ಇಟ್ಟು ಕೊಳ್ಳುವ ಧೈರ್ಯ ತನಗಿದೆಯೆ? ಈ ದೇವರ ಪೂಜೆಯೊಂದಿಲ್ಲದಿದ್ದರೆ ಇಟ್ಟುಕೊಳ್ಳ ಬಹುದಾಗಿತ್ತು. ಆದರೆ ಹಿಂದಿನಿಂದ ಬಂದ ಪೂಜೆ ಇನಾಮತಿಗಳನ್ನು ಕಳೆಯ ಬಾರದು – ಎಂದು ವಿವೇಕ ಹೇಳುತ್ತಿತ್ತು. ಇನಾಮತಿಯೊಂದೇ ಮುಖ್ಯವಲ್ಲ. ಗರ್ಭಗುಡಿಯಲ್ಲಿ ನಿಂತು ಪೂಜೆ ಮಾಡುವ ಸ್ಥಾನ ಮುಖ್ಯ. ಇನತ್ತೂ ನಾನು ಬಿಟ್ಟರೆ ಎಷ್ಟು ಜನ ತಾವು ಮಾಡ್ತೀವಿ ಅಂತ ಮುಂದೆ ಬರುಲ್ಲ? ಜಮೀನಿಲ್ಲ ದ್ದಿದರೆ ಬ್ಯಾಡ, ನಮ್ಮ ಮತಕ್ಕೆ ಸೇರಿದ್ದು ಅಂತ ಐಯ್ಯಂಗಾರರ ಜಾತಿಯೋರು ಕಾಯ್ತಿದಾರೆ. ಅದನ್ನ ಹ್ಯಾಗೆ ಬಿಡೂದು? ಯಾಕೆ ಬಿಡೂದು?

ಅವರು ತೋಟಕ್ಕೆ ಹೆಚ್ಚಾಗಿ ಹೋಗುವುದನ್ನೇ ಬಿಟ್ಟುಬಿಟ್ಟರು. ವೆಂಕಟೇಶನಿಗೆ ಹವಿನೈದು ನಡೆಯುತ್ತಿತ್ತು. ಜಮೀನು ಮತ್ತು ಮನೆಯ ಆದಾಯ ವೆಚ್ಚದಲ್ಲಿ ಅವನು ಆಗಲೇ ತುಂಬ ಬುದ್ಧಿವಂತನಾಗಿದ್ದ. ದಿನಾ ಬೆಳಗ್ಗೆ ತೋಟಕ್ಕೆ ಹೋಗಿ ನೋಡಿಕೊಂಡು ಬರುತ್ತಿದ್ದ. ಇಂಥ ಮರದಲ್ಲಿ ಇಷ್ಟೇ ಗೊನೆ ಇದೆ. ಇಂಥಿಂಥ ಗೊನೆ ಇದೇ ಆಕಾರಕ್ಕಿದೆ. ಇಂಥ ಗೊನೆಯಲ್ಲಿ ನಾಲ್ಕು ಕಾಯಿಯಿಲ್ಲ. ಅದರ ತೊಟ್ಟು ಗೊನೆಗೆ ಅಂಟಿಕೊಂಡಿಲ್ಲದುದರಿಂದ ಉದುರಿದ ಹಣ್ಣುಗಾಯಿಯಲ್ಲ, ಕಳ್ಳರೇ ಮುರಿದಿದ್ದಾರೆ ಎಂದು ಹೇಳಿಬಿಡುತ್ತಿದ್ದ. ಹೊಲೆಗೇರಿಯ ಇಂಥವನ ಕೆಲಸವೇ ಇದು. ಇಂಥ ಹೆಂಡದಂಗಡಿಗೇ ಹೋಗಿದೆ ಕಾಯಿ, ಎಂದೂ ಊಹೆ ಮಾಡುತ್ತಿದ್ದ. ತೋಟ ನೋಡಿಕೊಳ್ಳುವುದನ್ನು ಅವನ ಜವಾಬ್ದಾರಿಗೆ ಹೇಳಿ ಅವರು ಮೊದಲಿಗಿಂತ ಹೆಚ್ಚಾಗಿ ದೇವರ ಪೂಜೆಗೆ ನಿಂತರು. ಸಂಜೆಯ ಹೊತ್ತು ತೋಟ ನೋಡಲು ಯಾರೂ ಹೋಗುತ್ತಿರಲಿಲ್ಲ. ಸಾಮಾನ್ಯವಾಗಿ ಹೆಂಡ ಕುಡುಕರು ಕದ್ದು ಕಾಯಿ ಕೀಳುತ್ತಿದ್ದುದು ಸಂಜೆಯ ಕತ್ತಲು ಕವಿದಮೇಲೆ. ಕಿತ್ತ ಕಾಯಿಯನ್ನು ಯಾರಿಗೂ ತಿಳಿಯದಂತೆ ನೇರವಾಗಿ ಹೆಂಡದ ಅಂಗಡಿಗೆ ಹಾಕಿ ಕುಡಿದು ಬರಲು ಅನುಕೂಲವಾದ ಹೊತ್ತು ಅದು. ಆ ಹೊತ್ತಿನಲ್ಲಿ ಓದಿಕೊಳ್ಳು ವುದನ್ನು ಬಿಟ್ಟು ತೋಟ ಕಾಯಲು ವೆಂಕಟೇಶ ಹೋಗುವುದು ಅವರಿಗೆ ಬೇಕಿರ ಲಿಲ್ಲ. ತಾವು ಹೋಗಲು ಮನಸ್ಸು ಬರುತ್ತಿರಲಿಲ್ಲ. ಆದರೆ ತಿಮ್ಮಪ್ಪಯ್ಯನ ಪೂಜಾರಿಯ ತೋಟವೆಂದು ಇವರ ತೋಟದಲ್ಲಿ ಕದಿಯಲು ಸಾಮಾನ್ಯವಾಗಿ ಕುಡುಕರು ಹೆದರುತ್ತಿದ್ದರು.

ಅವರು ಹೆಚ್ಚುಹೆಚ್ಚಾಗಿ ದೇವರ ಪೂಜೆ ಮಾಡಲು ಆರಂಭಿಸಿದರು. ದಿನವೂ ಸಹಸ್ರನಾಮ ಹೇಳುವರು. ತುಂಬ ಹೂವುಗಳನ್ನು ಕುಯ್ದು ಏರಿಸುತ್ತಿದ್ದರು. ಉಪವಾಸ ಮಡಿ ಮೊದಲಾದ ನಿಷ್ಠೆಗಳನ್ನೂ ಹೆಚ್ಚು ಮಾಡಿದರು. ಆದರೆ ಕಣ್ಣಿಗೆ ಕಟ್ಟು ಹಾಕಿಕೊಂಡ ದೇವರ ಮುಖವನ್ನು ದಿಟ್ಟಿಸಿ ನೋಡಲು ಮಾತ್ರ

ಭಯವಾಗುತ್ತಿತ್ತು. ಮಂಗಳಾರತಿ ಮಾಡುವಾಗ ವಿಗ್ರಹದ ಪಾದ ಮೈಗಳನ್ನು ನೋಡುವರು. ಮುಖದ ಕಡೆಗೆ ಮಾತ್ರ ತಮ್ಮ ದೃಷ್ಟಿಯನ್ನು ಏರಿಸುತ್ತಿರಲಿಲ್ಲ.

ಇದೇ ಸಮಯದಲ್ಲಿ ಊರಿನಲ್ಲಿ ಮಾತ್ರವಲ್ಲದೆ ಹೊಲೆ ಮತ್ತು ಮಾದಿಗರ ಕೇರಿಯಲ್ಲೂ ಕೆಲವು ಸಂಗತಿಗಳು ನಡೆದುವು. ಮಾದಿಗರ ಕೇರಿಯ ಬೆಟ್ಟಯ್ಯ ಹೆಂಡತಿ ಮಕ್ಕಳನ್ನು ಬಿಟ್ಟು ಹೋಗಿದ್ದವನು ಹಿಂತಿರುಗಿದ. ಮಾದಿಗನಾದರೂ ಅವನಿಗೆ ಒಂದು ನಾಡಹೆಂಚಿನ ಮನೆ, ಮೂರು ಎಕರೆ ಹೊಲ, ಇಪ್ಪತ್ತು ತೆಂಗಿನ ಮರಗಳಿದ್ದುವು. ಅವನಷ್ಟು ಚೆನ್ನಾಗಿ ಜೋಡು ಹೊಲಿಯುವವರು ಸುತ್ತ ಹತ್ತು ಮೈಲಿ ಫಾಸಲೆಯಲ್ಲೇ ಇರಲಿಲ್ಲ. ಅವನ ಅಪ್ಪ ಗೊಂಗಡಿಯೂ ಹಾಗೆಯೇ. ಎರಡು ಜೋಡಿ ಚಕ್ಕಳ ಕೊಟ್ಟು ಬಾಳಿಕೆ ಬರುವಂತೆ ಮಾಡಿದರೂ, ಎಕ್ಕಡ ಮೃದುವಾಗಿರುವಂತೆ ಚರ್ಮವನ್ನು ಹದಮಾಡುತ್ತಿದ್ದ. ಆದರೆ ಬೆಟ್ಟ ಇದ್ದಕ್ಕಿದ್ದ ಹಾಗೆಯೇ ಒಂದು ದಿನ ಹೆಂಡತಿ ಮಕ್ಕಳನ್ನು ಬಿಟ್ಟು ಅದೆಲ್ಲೋ ಹೋಗಿಬಿಟ್ಟ. ಇದ್ದಕ್ಕಿದ್ದ ಹಾಗೆಯೇ ಎಂದರೆ ಕಾರಣವಿಲ್ಲದಿಲ್ಲ. ಮಾದಿಗ ಮಾದಿಗನಿಗೆ ತಕ್ಕ ಹಾಗಿರದೆ, ತನಗೆ ಹೆಂಚಿನ ಮನೆ ಮೂರೆಕರೆ ಹೊಲ ಇಪ್ಪತ್ತು ತೆಂಗಿನ ಮರವಿದೆ ಅನ್ನುವ ಹಮ್ಮಿನಿಂದ ಮೀಸೆ ಬೆಳೆಸಿದ. ಬೆಳೆಸಿದರೂ ಚಿಂತೆಯಿಲ್ಲ. ತುದಿಯು ಕೆಳಭಾಗಕ್ಕೆ ಇಳಿಬಿದ್ದಿರುವಂತೆ ಮಾಡಿಕೊಳ್ಳದೆ ಎರಡು ಕಡೆಯೂ ಮೇಲಕ್ಕೆ ಏರಿರುವ ಹಾಗೆ ಮಾಡಿಸಿಕೊಂಡ. ಅವನು ಹೊಸದಾಗಿ ಬೆಳೆಸಿಕೊಂಡನೋ ಯಾವ ಆಕಾರಕ್ಕೆ ಬಿಡಿಸಿಕೊಂಡನೋ ವೆಂಕಟರಮಣಯ್ಯನವರಿಗೆ ಗೊತ್ತಿಲ್ಲ. ಆದರೆ ಅದು ಊರನ್ನೇ ಆಳುವ ದಣಿ ಪಟೇಲ ತಿರುಮಲೇಗೌಡರಿಗೆ ತಿಳಿಯಿತು. ಅವನನ್ನು ಕರೆಸಿ ಕೇಳಿದರೆ, 'ಅವನವನಿಗೆ ಖುಸಿ ಬಂದ್ಹಂಗೆ ಬಿಟ್ರೆ ಏನ್ರಯ್ಯಾ ತೆಪ್ಪು?' ಎಂದನಂತೆ.

ದೊಡ್ಡ ಮೀಸೆ ಬೆಳೆಸುವುದೂ, ಮೇಲೆ ತಿರುಗಿಸಿ ನೀವಿಕೊಳ್ಳುವುದೂ, ಊರು ಆಳುವ ಪಟೇಲ ಮನೆತನದ ಗುರುತು. ಈ ಮಾದಿಗನಿಗೆ ಇಷ್ಟು ಹೆಮ್ಮು ಬಂದದ್ದನ್ನು ದೊಡ್ಡ ಗೌಡರು ಸಹಿಸಿಯಾರೆ? ತಮ್ಮ ಮನೆಯಲ್ಲಿ ಜೀತಮಾಡುವ ಇಬ್ಬರು ಹೊಲೆಯರನ್ನು ಕರೆದು, ಬೆಟ್ಟನನ್ನು ಕಂಬಕ್ಕೆ ಕಟ್ಟಿ ಬಾರುಕೋಲಿನಲ್ಲಿ ಶಿಕ್ಷೆಯಂತೆ ಹುಕುಂ ಮಾಡಿದರು. ಮಾದಿಗ ಆಳುಗಳಾಗಿದ್ದರೆ ತಮ್ಮ ಕೇರಿಯ ಮೇಟಿಕುಳವನ್ನು ಮುಟ್ಟಿ ಹೊಡೆಯುತ್ತಿದ್ದರೋ ಇಲ್ಲವೋ. ಆದರೆ ಇವರು ಹೊಲೆಯರು. ಮಾದಿಗರಿಗಿಂತ ಶ್ರೇಷ್ಠರು. ತಮಗಿಲ್ಲದ ಮೀಸೆಯನ್ನು ಅವನು ಬೆಳೆಸಿಕೊಂಡನಲ್ಲ ಅಂತ ಹೊಟ್ಟೆಕಿಚ್ಚೂ ಇತ್ತು. ಪಟೇಲರು, 'ಅಲ್ಲೇನ್ ಮಕಾ ನೋಡ್ತೀಯ, ಹಿಡ್ಕಂಡು ಜಡಿಲಾ' ಎಂದು ಎರಡನೆಯ ಸಲ ಅಂದದ್ದೇ ಸರಿ, ಹಿಡಿದು ಬೆಟ್ಟನನ್ನು ಈಚಲುಕಟ್ಟೆಯಿಂದ ಕಂಬಕ್ಕೆ ಕಟ್ಟಿ ಬಾರುಕೋಲಿನಿಂದ

ಬಾರಿಸಿಬಿಟ್ಟರು. ತೋಳು ತೊಡೆಗಳ ಮೇಲೆಲ್ಲ ಬಾಸುಂಡೆ ಊದಿಕೊಂಡಿತು. 'ಇವತ್ ಸಂಜೇವಳಗೆ ತೆಗುಸ್ದೆ ಇದ್ರೆ ನಾಳೀಕೆ ಕ್ವಾಟೆಬಾಗ್ಲ ಮುಂದೆ ಕುಂಡ್ರಿಸಿ ನನ್ನ ಉಚ್ಚೇಲಿ ನಿನ್ನ ಮೀಸೆ ಬೋಳುಸುಸ್ತೀನಿ ನನ್ಮಗನೆ' – ಎಂದು ಹೇಳಿ ಕಟ್ಟು ಬಿಚ್ಚಿಸಿ ಕಳಿಸಿದರು. ಅವತ್ತು ರಾತ್ರಿಯೇ ಅವನು ಕೇರಿ ಬಿಟ್ಟು ಹೋದನಂತೆ. ಎಲ್ಲಿಗೆ ಹೋದನೋ ಯಾರಿಗೂ ಗೊತ್ತಿಲ್ಲ.

ಈಗ ದೇಶವನ್ನಾಳುತ್ತಿದ್ದ ಕೆಂಪು ಜನ ರಾಜ್ಯವನ್ನು ಬಿಟ್ಟು ಹೋಗುತ್ತಾರಂತೆ. ಇದೇ ಸಮಯಕ್ಕೆ ಸರಿಯಾಗಿ ಬೆಟ್ಟ ಊರಿಗೆ ಹಿಂತಿರುಗಿದ. ಸುಮಾರು ಆರು ವರ್ಷವಾಗಿರಬಹುದು ಅವನು ದೇಶಾಂತರ ಹೋಗಿ. ಹೋಗುವಾಗ ಇದ್ದ ಎಂಟು ವರ್ಷದ ಗಂಡು ಹುಡುಗ ನಾಲ್ಕು ವರ್ಷದ ಹೆಣ್ಣು ಹುಡುಗಿ, ಈಗ ಹದಿನಾಲ್ಕು ವರ್ಷದ ಹುಡುಗ ಹತ್ತು ವರ್ಷದ ಹುಡುಗಿಯಾಗಿದ್ದರು. ಆದರೆ ಅವನ ಹೆಂಡತಿ, ಹುಡುಗರನ್ನು ತನ್ನ ತೌರಾದ ನೆಲಮಂಗಲದ ಕಡೆಯ ಒಂದು ಕೊಪ್ಪಲಿನಲ್ಲಿ ಬಿಟ್ಟಿದ್ದಳು, ಊರ ಗೌಡರು ಹುಡುಗರನ್ನು ಎಲ್ಲಿ ಹಿಡಿಸಿ ಹೊಡೆಸುತ್ತಾರೋ ಎಂಬ ಹೆದರಿಕೆಯಿಂದ. ಆ ಊರಿನಲ್ಲಿ ಕಾಂಗ್ರೆಸ್ಸಿನವರು ರಾಟೆ ನೂಲುತ್ತಿದ್ದರಂತೆ. ಜಾತಿಭೇದ ಸುಳ್ಳು ಎನ್ನುತ್ತಿದ್ದರಂತೆ. ಬೆಟ್ಟನ ಹುಡುಗ ತಿಮ್ಮ ಮತ್ತು ಹುಡುಗಿ ಗುಡ್ಡಿ ಇಬ್ಬರನ್ನೂ ಸ್ಕೂಲಿಗೆ ಸೇರಿಸಿದರಂತೆ. ಅವರ ಜಾತಿಗೇ ಒಂದು ಸ್ಕೂಲ್ ತೆಗೆದಿದ್ದರಂತೆ ಅಲ್ಲಿ.

ಹಿಂತಿರುಗಿದ ಮೇಲೆ ಬೆಟ್ಟ ಹೊಸ ಮನುಷ್ಯನೇ ಆಗಿದ್ದಾನೆ. ಈಗಲೂ ಮೀಸೆ ಇದೆ. ಆದರೆ ಅದು ಕೆಳಗೆ ಹೋದಂತೆಯೂ ಕಾಣದೆ ಮೇಲೆ ತಿರುಗಿದಂತೆಯೂ ಇರದೆ, ಮೂಗಿನ ಕೆಳಗೆ ಕೂದಲು ಮೆತ್ತಿಕೊಂಡಂತೆ ಇದೆ. ಬ್ರಾಹ್ಮಣರೂ ನಾಚಬೇಕು, ಹಾಗೆ ದಿನಾ ಒಗೆದ ಬಟ್ಟೆ ಹಾಕುತ್ತಾನೆ. ಪೆಟ್ಟಿಗೆಯಂತಹ ಚರಕದಲ್ಲಿ ನೂತ ದಾರದಿಂದ ನೇಯ್ದ ಖಾದಿಯ ಪಂಚೆ, ಜುಬ್ಬ, ಅದರ ಮೇಲೆ ಮುಚ್ಚಿದ ಕಾಲರ್ ಕೋಟು ತೊಟ್ಟು, ತಲೆಗೆ ಗಾಂಧಿ ಟೋಪಿ ಹಾಕುತ್ತಾನೆ. ಇಂತಹ ಬಟ್ಟೆ ಅಪರೂಪದ್ದೇನಲ್ಲ. ತಿರುಮಲೇಗೌಡನ ಮಗ ಲಾಯರ್ ಮೇಲಗಿರಿಗೌಡನೂ ಇಂಥವೇ ಹಾಕಲು ಶುರುಮಾಡಿದ್ದ. ಊರಿಗೆ ಬಂದಾಗಲೂ ಜಗುಲಿಯ ಮೇಲೆ ಕೂತು ಎಳೆಬಿಸಿಲು ಕಾಯಿಸುತ್ತಾ ಪೆಟ್ಟಿಗೆ-ಚರಕದಲ್ಲಿ ನೂಲು ತೆಗೆಯುತ್ತಿದ್ದ. ಈಗ ಹಿಂತಿರುಗಿ ಬಂದ ಬೆಟ್ಟ ಇಷ್ಟು ದಿನ ಗಾಂಧಿಯ ಆಶ್ರಮದಲ್ಲಿದ್ದನಂತೆ, ಬೊಂಬಾಯಿ ಆಚೆ ಗುಜರಾತು ದೇಶದಲ್ಲಿ. ಅವನ ಮಾತನ್ನು ಯಾರೂ ನಂಬುತ್ತಿರಲಿಲ್ಲ. ಆದರೆ ಅಲ್ಲಿಗೆ ಒಂದು ವರ್ಷ ಕಾಲ ಹೋಗಿದ್ದ ಲಾಯರ್ ಮೇಲಗಿರಿಗೌಡನೇ ಅದು ನಿಜ ಎಂದ ಮೇಲೆ ಎಲ್ಲರೂ ನಂಬಿದರು. ಇಷ್ಟರಲ್ಲಿ ಬೆಟ್ಟ ಕನ್ನಡ ಓದಿ ಬರೆಯುವುದು ಕಲಿತಿದ್ದಾನೆ. ಹಿಂದಿಯೋ ಹಿಂದೂ

ಸ್ಟ್ಯಾನಿಯೋ, ಅಂತೂ ಸಾಬರು ಆಡುವ ಹಾಗಿದೆ, ಆದರೆ ಅದರಷ್ಟು ಬೇರೆಯದಲ್ಲ, ಅಂತಹ ಇನ್ನೊಂದು ಭಾಷೆ ಮಾತನಾಡುತ್ತಾನೆ. ಗಾಂಧಿಯ ಆಶ್ರಮದಲ್ಲೇ ಯಾರೋ ಕನ್ನಡ ವಿದ್ಯೆ ಕಲಿಸಿದರಂತೆ ಅವನಿಗೆ.

ಅವನು ಬಂದ ಸ್ವಲ್ಪ ದಿನಕ್ಕೆ, ದಿವಾನರು ಹೋಗಬೇಕು ಮಹಾರಾಜರು ನಮಗೇ ಅಧಿಕಾರ ಕೊಡಬೇಕು ಅಂತ ಗಲಾಟೆ ಶುರುವಾಯಿತು. ಈಗ ಅವನನ್ನು ಜನ, ಕೋಟೆಯ ಒಳಗಿನವರೂ, ಬೆಟ್ಟಯ್ಯ ಅನ್ನುತ್ತಾರೆ. ಅವನೂ ಲಾಯರ್ ಮೇಲಗಿರಿಯ ಜೊತೆ ಸೇರಿ ಮೆರವಣಿಗೆ ಮಾಡಿಸಿದ. ಒಟ್ಟನಲ್ಲಿ ದಿವಾನರು ಮದರಾಸಿಗೆ ಹೋದರು. ಮೆರವಣಿಗೆ ಮಾಡಿಸಿದ ಕಡೆಯವರಿಗೇ ಬಂತು ಸರ್ಕಾರ. ಅದಾದ ಮೇಲೆ ತಗೋ ಏನೇನಾಯಿತು! ವೆಂಕಟರಮಣಯ್ಯನವರು ಕಾಣದ ಕೇಳದ ಸಂಗತಿಗಳೆಲ್ಲ ನಡೆದುವು: ಮಾದಿಗರ ಕೇರಿ ಹೊಲೆಗೇರಿಗಳಿಗೆ ಹರಿಜನ ಕಾಲೋನಿ ಅಂತ ಹೆಸರಿಟ್ಟು ಬೋರ್ಡ್ ಹಾಕಿದರು. ಆ ಜಾತಿಯ ಹೆಸರನ್ನೇ ಹರಿಜನರು ಅಂತ ಬದಲಾಯಿಸಿದರು. ಇವರೆಲ್ಲ ಹೇಳುವ ಗಾಂಧಿ ಮಹಾತ್ಮ ಇಟ್ಟ ಹೆಸರಂತೆ ಅದು ಹರಿಜನ ಅಂದರೆ ದೇವರಿಗೆ ಸೇರಿದವರು. ಹಾಗಾದರೆ ನಾವೆಲ್ಲ ದೇವರಿಗೆ ಸೇರದವರೋ? – ಎಂದು ಊರಿಗೆ ಊರೇ ಇದನ್ನು ಪ್ರಶ್ನಿಸಿತು. ಗಾಂಧಿ ವೈಷ್ಣವ ಜಾತಿಯೋನು, ತಮ್ಮ ಜಾತಿಯ ಜನಸಂಖ್ಯೆ ಹೆಚ್ಚಿಸಿಕೊಬೇಕು ಅಂತ ಈ ತಂತ್ರ ಮಾಡಿದಾನೆ, ಹಿಂದೆ ರಾಮಾನುಜಾ ಚಾರ್ಯರು ತಂತ್ರ ಮಾಡಿ, ಹೊಲೇರು ಮಾದಿಗರಿಗೆಲ್ಲ ನಾಮ ಹಾಕಿಸಿ ತಮ್ಮ ಜಾತಿ ಬೆಳೆಸಿಕೊಂಡ ಹಾಗೆ – ಎಂದು ಲಿಂಗಾಯತ ಮುಖಂಡರು ಶಂಕಿಸಿದರು. ಬರೀ ಹೆಸರು ಬದಲಾಯಿಸಿದರೆ ಪರವಾಗಿರಲಿಲ್ಲ. ಮೆರವಣಿಗೆ ಮಾಡಿಸಿದವರೇ ಮಂತ್ರಿಗಳಾದ ಮೇಲೆ, ಹೊಲೆ ಮಾದಿಗರಿಗೆಲ್ಲ ಮನೆ ಕಟ್ಟಿಕೊಳ್ಳಲು ಖಜಾನೆ ಯಿಂದ ದುಡ್ಡು ಕೊಟ್ಟರು. ಅವರೆಲ್ಲ ಮೂರು ಮೂರಂಕಣದ ಮಂಗಳೂರು ಹೆಂಚಿನ ಮನೆ ಕಟ್ಟಿಸಿಕೊಂಡರು. ಈಗ ಕೆರೆ ಏರಿಯ ಆಚೆ ಕೋಡಿಯ ಹತ್ತಿರ ನಿಂತು ನೋಡಬೇಕು. ಅದನ್ನು ಹೊಲೆಗೇರಿ ಮಾದಿಗಕೇರಿ ಅನ್ನಬಹುದೇ? ತಿಪ್ಪಾಪುರದ ತಲೆಯ ಮೇಲೆ ಹೊಡೆಯುವ ಹಾಗಿದೆ. ಎಲ್ಲಾ ಕೆಂಪು ಮಂಗಳೂರು ಹಂಚಿನ ಮನೆಗಳು. ಸರ್ಕಾರ ಇನ್ನುಮೇಲೆ ದರ್ಖಾಸ್ತಿನಲ್ಲಿ ಅವರಿಗೆ ಭೂಮಿ ಕೊಡುತ್ತದಂತೆ. ಅವರೂ ಒಕ್ಕಲುವಂತರಾಗುತ್ತಾರಂತೆ.

ಇದೇ ಸಮಯದಲ್ಲಿ ಊರಿಗೆ ಹೈಸ್ಕೂಲು ಬಂತು. ಮೇಲಗಿರಿಗೌಡ ಅಸೆಂಬ್ಲಿ ಮೆಂಬರಾದ. ಬೆಟ್ಟಯ್ಯ ತನ್ನ ಮಗ ತಿಮ್ಮನ ಹೆಸರು ಮೋಹನದಾಸ ಎಂದು ಮಾಡಿದ. ಮಗಳು ಗುಡ್ಡಿಗೆ ಮೀರಾ ಎಂದು ಹೆಸರಿಟ್ಟ. ದಾಸ ಎನ್ನುವುದು ಜಾತಿಗೆ ತಕ್ಕ ಹೆಸರು. ಆದರೆ ಮೋಹನ ಅಂತ ಸೇರಿಸಿದರೆ ಆ ಕರೀ ಮಾದಿಗ

ಮುದ್ದು ಮುಖದ ಕೃಷ್ಣನಾಗುತ್ತಾನೆಯೆ? – ಎಂದು ಊರಿನವರೆಲ್ಲ ಅಂದು ಕೊಂಡರು. ಆಮೇಲೆ ತಿಳಿಯಿತು: ಇವರು ಹೇಳುವ ಗಾಂಧಿ ಮಹಾತ್ಮನ ಹುಟ್ಟು ಹೆಸರು ಮೋಹನದಾಸ ಅಂತಲಂತೆ. ಬೆಟ್ಟಯ್ಯ ಅವನ ಗುರುವಿನ ಹೆಸರನ್ನು ಮಗನಿಗೆ ಇಟ್ಟಿದಾನೆ. ಮೀರಾ ಎಂದರೆ ಕೃಷ್ಣಭಕ್ತೆಯಂತೆ. ಗಾಂಧಿಮಹಾತ್ಮನಿಗೇ ಗುರುವಾಗಿದ್ದಳಂತೆ.

ಊರಿನಲ್ಲಿ ಇಷ್ಟೆಲ್ಲ ಆಗಬಾರದ್ದು ಆಗಿಹೋದರೂ, ಆಗುತ್ತಿದ್ದರೂ, ದೊಡ್ಡ ಯಜಮಾನ ತಿರುಮಲೇಗೌಡರು ಸುಮ್ಮನಿದ್ದುದು ಎಲ್ಲರಿಗೂ ಆಶ್ಚರ್ಯ. ಸುಮ್ಮನಿರುವಂತಹ ಪಿಂಡವೇ ಅಲ್ಲ. ಪಾಳೆಯಗಾರರ ರಕ್ತ ಅದು. ಆದರೆ ಮೂರು ಮೂರು ದಿನಕ್ಕೆ ಊರಿಗೆ ಬರುತ್ತಿದ್ದ ಮಗ ಮೇಲಗಿರಿ ಲಾಯರು ಅಪ್ಪನಿಗೆ ಹೇಳಿ ಹೇಳಿ ಸುಮ್ಮನೆ ಮಾಡುತ್ತಿದ್ದನಂತೆ. ಕಾಲ ಬದಲಾಗ್ತಿದೆ, ಹಿಂಗೇ ಇರಬೇಕು, ಗಾಂಧಿಯೋರು ಹಿಂಗೇ ಅಂದಿದ್ದಾರು ಎಂದು ಅಪ್ಪನಿಗೆ ಮದ್ದು ಅರೆಯುತ್ತಿದ್ದನಂತೆ.

೪

ಇದೇ ಸಮಯಕ್ಕೆ, ಅಂದರೆ ಮಾದಿಗರಕೇರಿ ಮಂಗಳೂರು ಹೆಂಚಿನ ಮನೆಗಳ ಹರಿಜನ ಕಾಲೋನಿಯಾದಾಗ, ಮಾತಂಗಿ ಊರಿಗೆ ಹಿಂತಿರುಗಿದಳು. ಇಲ್ಲಿಂದ ಹೋದ ಅವಳು ಗಂಡನ ಮನೆಯಲ್ಲಿ ಗಂಡು ಮಗು ಹೆತ್ತಳು. ಮಗುವಿಗೆ ಎರಡನೆಯ ವರ್ಷ ನಡೆಯುತ್ತಿದ್ದಾಗ ಮಗುವನ್ನೂ ಕರೆದುಕೊಂಡು ತನ್ನ ಹಳೆಯ ಗುಡಿಸಲಿಗೆ ಬಂದಳು. ಅವಳ ಗಂಡ ಅತಿ ಕುಡುಕನಂತೆ. ಮಾತಂಗಿಯಂತಹ ಹೆಂಡತಿಯ ಜೊತೆ ಸಂಸಾರ ಮಾಡಿಕೊಂಡಿರುವ ನಯ ನಾಜೂಕು ತಿಳಿಯದ ಮಡ್ಡ ಅವನು. ಇಲ್ಲೂ ದುಡಿದು ತಿನ್ನುತ್ತಿದ್ದಳು. ಅಲ್ಲೂ ದುಡಿಯಬೇಕು. ಆ ಸಂಪತ್ತಿಗೆ ಆ ಕುಡುಕನ ಸಂಗಡ ಯಾಕೆ ನರಳಬೇಕು, ಎಂದು ಊರಿಗೆ ಬಂದು ಬಿಟ್ಟಳು. ಹಾಗೆ ನೋಡಿದರೆ ಅವಳ ಜಾತಿಯಲ್ಲಿ ಕುಡಿಯದೆ ಇರುವವರು ಯಾರು? ಎಷ್ಟು ಜನ? ಅವಳು ಯಾವ ಗಂಡನನ್ನು ಕಟ್ಟಿಕೊಂಡಿದ್ದರೂ ಅವನು ಕುಡಿಯುವವನೇ ಆಗಿರುತ್ತಿದ್ದ. ಬೆಟ್ಟಣ್ಣ ಒಬ್ಬ ಮೊದಲಿನಿಂದ ದಿನಾ ಕುಡಿಯುತ್ತಿಲ್ಲ. ಗಂಡನ ಊರಿಗೆ ಹೋಗಿ ಬಸುರಿಯಾಗಿ ಮಗು ಹೆತ್ತ ಮೇಲೆ ಅವಳು ಒಂದು ಸಲ ತಿಮ್ಲಾಪುರಕ್ಕೆ ಬಂದಿದ್ದಳು. 'ಗದ್ದೆ ತ್ಯಾವವಾಗಿತ್ತು, ಮದುವೆಯಾದ ಪಟೀಗೇ ಬಸುರಾದ್ಲು ಮಾತಂಗಿ' – ಎಂದು ಅವಳ ಕೇರಿಯ ಕೆಲವು ಹೆಂಗಸರು ತಮಾಷೆ ಮಾಡಿ, ಗೆಲುವಾಗಿದ್ದ ಮಗುವನ್ನು ಎತ್ತಿ ಹೊಗಳಿದ್ದರು. ಹುಟ್ಟಿದ

ಮತ್ತು ತಾನು ವಾಸವಾಗಿದ್ದ ಹಟ್ಟಿ ಗುಡಿಸಲನ್ನು ನೋಡುವ ಆಶೆಗೆ ಅವಳು ಆರಾರು ತಿಂಗಳಿಗೆ ಬರುತ್ತಲೇ ಇದ್ದಳಂತೆ. ಸರ್ಕಾರದವರು ಮನೆ ಕಟ್ಟಿಕೊಳ್ಳಲು ದುಡ್ಡು ಕೊಡುವ ಸುದ್ದಿ ತಿಳಿಯಿತು. ಗೇಯಲು ನಾಲ್ಕೆಕರೆ ಪಾಳು ಜಮೀನು ಕೊಡುತ್ತಾರಂತೆ. ಅವಳು ಇಲ್ಲಿಗೇ ಬಂದಳು. ಜಮೀನು ಅವಳ ಗಂಡನ ಊರಿನಲ್ಲೂ ಸಿಕ್ಕುತ್ತಿತ್ತು. ಮನೆ ಕಟ್ಟಲು ದುಡ್ಡನ್ನು ಮುಂದೆ ನಿಂತು ಕೊಡಿಸುವವರು ಅಲ್ಲಿ ಯಾರೂ ಇರಲಿಲ್ಲ. ಕೊಡಿಸಿದ್ದರೂ ಅವಳು ಅಲ್ಲಿ ಇರುತ್ತಿದ್ದಳೋ ಇಲ್ಲವೋ!

ಇಲ್ಲಿಗೆ ಬಂದನಂತರ ಜೀವನಕ್ಕೆಂದು ಕೂಲಿ ಮಾಡಲು ಪ್ರಾರಂಭಿಸಿದಳು. ಮನೆ ಕಟ್ಟುವುದಕ್ಕೆ ಮತ್ತು ದರಖಾಸ್ತಿನಲ್ಲಿ ಜಮೀನಿಗೆ ಬೆಟ್ಟಣ್ಣ ಅವಳ ಹೆಸರಿನಲ್ಲಿ ಅರ್ಜಿ ಬರೆಸಿ ಗಾಡಿಗುಂಬದ ಮಸಿ ಬಳಿಸಿ ಎಡಗೈ ಹೆಬ್ಬೆಟ್ಟು ಒತ್ತಿಸಿಕೊಂಡಿದ್ದ. ಹೊಲ ಮಂಜೂರಾಗಿ ಆಬಾದಿನ ದುಡ್ಡು ಸಿಕ್ಕಿ ಅದರಲ್ಲಿ ಬೆಳೆ ತೆಗೆಯುವ ತನಕ ಅವಳು ಕೂಲಿ ಮಾಡಿಯೇ ತನ್ನ ಮತ್ತು ಮಗುವಿನ ಹೊಟ್ಟೆ ಹೊರೆಯಬೇಕಾಗಿತ್ತು. ಕೂಲಿಗೆ ಹೋಗುವಾಗ ತನ್ನ ಜಾತಿಯ ಇತರ ಹೆಂಗಸರಂತೆ ಮಗುವನ್ನೂ ಕಟ್ಟಿಕೊಂಡು ಹೋಗಿ ಬದುವಿನ ಮೇಲೆ ಕೂರಿಸುತ್ತಿದ್ದಳು. ಒಂದೊಂದು ದಿನ ಬೆಟ್ಟಣ್ಣನ ಹೆಂಡತಿ ಸುಂಕವ್ವನ ಕೈಗೆ ಕೊಟ್ಟು ಬರುತ್ತಿದ್ದಳು. ಆಗಲೇ ಎರಡು ವರ್ಷವಾಗಿ ತಾನು ಆಡಿಕೊಳ್ಳುವ ಅಭ್ಯಾಸ ಮಗುವಿಗೆ ಆಗಿತ್ತು. ಅಲ್ಲದೆ ಅಪ್ಪನ ಊರಿನಲ್ಲಿ ಸಹ, ಅಪ್ಪ ಅವ್ವ ಕೆಲಸಕ್ಕೆ ಹೋದರೆ ತನ್ನ ಪಾಡಿಗೆ ತಾನು ಬದುವಿನ ಮೇಲೋ ನೇಗಿಲಗೆರೆಯ ಮೇಲೋ ಆಡಿಕೊಳ್ಳುವ ಅಭ್ಯಾಸ ಅದಕ್ಕೆ ಆಗಿತ್ತು. ಆದುದರಿಂದ ಸುಂಕವ್ವನ ವಶಕ್ಕೆ ಕೊಟ್ಟು ಬಂದರೂ ನೋಡಿಕೊಳ್ಳುವುದು ಅವಳಿಗೆ ಕಷ್ಟವಾಗುತ್ತಿರಲಿಲ್ಲ. ಸುಂಕವ್ವ ಈಗ ಕೂಲಿಗೆ ಹೋಗಬೇಕಾಗಿರಲಿಲ್ಲ. ಮೊದಲಿನಿಂದ ಸ್ವಂತ ಹೊಲ, ತೆಂಗಿನ ಮರವಿದ್ದ ಹೆಂಗಸು ಅವಳು. ಗಂಡ ಬೊಂಬಾಯಿ ಆಚೆ ಗಾಂಧಿ ಮಹಾತ್ಮನ ಗುಡಿಗೆ ಹೋಗಿದ್ದಾಗ ತಾನೊಬ್ಬಳೇ ಜಮೀನನ್ನು ನಿಭಾಯಿಸಿದ್ದಳು. ಮಕ್ಕಳು ಅವಳ ತೌರಿನಲ್ಲಿದ್ದು ಇಸ್ಕೂಲಿಗೆ ಹೋಗುತ್ತಿದ್ದುವು. ಗಂಡ ಬಂದ ಮೇಲೆ ಮಕ್ಕಳು ಅಲ್ಲೇ ಇಸ್ಕೂಲು ಕಲಿಯುತ್ತಿವೆ. ಬೆಟ್ಟಯ್ಯ ಸುತ್ತ ಹತ್ತು ಜನರಿಗೆ ಬೇಕಾದ ಯಜಮಾನ ಮನುಷ್ಯನಾಗಿದ್ದಾನೆ. ಕೇರಿಯಲ್ಲಿ ಕಟ್ಟಿದ ಮೊದಲ ಮಂಗಳೂರು ಹೆಂಚಿನ ಮನೆ ಅವನದೇ. ಹನ್ನೆರಡು ಎಕರೆ ಮರಳುಕಟ್ಟಿನ ಕೆಬ್ಬೆನೆಲ ಒಂದೇ ಕಡೆ ದರಖಾಸ್ತಿನಲ್ಲಿ ಸಿಕ್ಕಿ, ಅದಕ್ಕೆ ಐನೂರು ತೆಂಗಿನಸಸಿ ಕಟ್ಟಿಸುತ್ತಿದ್ದಾನೆ. ಅಪ್ಪ ಅವ್ವ ಕೂಲಿಗೆ ಹೋದಾಗ ಕೇರಿಯ ಮಕ್ಕಳನ್ನು ನೋಡಿಕೊಳ್ಳುವಂತೆ ತನ್ನ ಹೆಂಡತಿಗೆ ಹೇಳಿದ್ದಾನೆ. ಅವನು ಈಟು ದಿನ ಇದ್ದ ಗಾಂಧಿಯ ಗುಡಿಯಲ್ಲಿ ಹಿಂಗೇಯಂತೆ:

ನಮ್ಮದು ಇನ್ನೊಬ್ಬರದು ಅಂತ ಭೇದಮಾಡದೆ ಮಕ್ಕಳನ್ನು ನೋಡ್ಕತ್ತಾರಂತೆ.

ಗುಡಿಗೆ ಪೂಜೆಗೆ ಹೋಗುವಾಗ, ಬಲಭಾಗದ ಗದ್ದೆಯಲ್ಲಿ ಮಾತಂಗಿ ಕಳೆ ಕೀಳುತ್ತಿರುವುದನ್ನು ಮೊದಲ ಸಲ ಕಂಡಾಗ ವೆಂಕಟರಮಣಯ್ಯನವರಿಗೆ ಮುಂದೆ ಹೆಜ್ಜೆ ಇಡುವುದೇ ಕಷ್ಟವಾಯಿತು. ಒಳಮನಸ್ಸಿನಿಂದ ಒಂದು ತೆರನಾದ ಸಂಭ್ರಮ ಉಕ್ಕಿತು. ವಿಸ್ಮಯ ಕುತೂಹಲಗಳು ಎದ್ದುನಿಂತುವು. ಇವಳು ಎಲ್ಲಿಂದ ಬಂದಳು? ಯಾವಾಗ ಬಂದಳು? ಕೂಲಿ ಮಾಡಬೇಕಾದರೆ ಇಲ್ಲೇ ಇರಬೇಕು. ನನಗೆ ಸುಳಿವು ಕೊಡಲೇ ಬ್ಯಾಡವೆ? ಅವಳು ತನ್ನ ಕಡೆ ನೋಡಿಯಾಳೆಂದು ಐದು ನಿಮಿಷ ನಿಂತರು. ಪಕ್ಕದ ಕಾಲುವೆಯಲ್ಲಿ ಕಾಲು ತೊಳೆದುಕೊಳ್ಳುವವರಂತೆ ಮಾಡಿ ಮತ್ತೆ ಐದು ನಿಮಿಷ ನಿಂತರು. ಬೆನ್ನು ಬಗ್ಗಿಸಿ ಕಳೆ ಕೀಳುತ್ತಿದ್ದ ಅವಳು ಸೊಂಟವನ್ನು ನೆಟ್ಟಗೆ ಮಾಡಲಿಲ್ಲ. ಉಳಿದ ಕೂಲಿಯವರೂ ಹಾಗೆಯೇ ಕೆಲಸ ಮಾಡುತ್ತಿದ್ದರು. ಹಾಗೆಯೇ ಹೆಚ್ಚು ಹೊತ್ತು ನಿಲ್ಲಲು ಸಂಕೋಚವಾಗಿ ಅವರು ದೇವಸ್ಥಾನಕ್ಕೆ ಹೊರಟುಹೋದರು. ಪೂಜೆ ಮಾಡುವಾಗಲೆಲ್ಲ ಅವಳದೇ ಧ್ಯಾನ. ಪೂಜೆ ಮುಗಿಸಿ ಹಿಂತಿರುಗುವಾಗಲೂ ಅವಳು ಕಳೆ ಕೀಳುತ್ತಿದ್ದಳು. ಆಗಲೂ ಈ ಕಡೆಗೆ ನೋಡಲಿಲ್ಲ.

ಆ ದಿನದಿಂದ ಅವರು ಮನಸ್ಸಿನಲ್ಲೇ ಕೇಳಿಕೊಳ್ಳುತ್ತಿದ್ದರು: ಇಲ್ಲೇ ಇದ್ದರೆ ತಾನು ಬಂದಿರುವ ಸೂಚನೆಯನ್ನು ಯಾಕೆ ಕೊಡಲಿಲ್ಲ? ಅಥವಾ ಇವನ ಸುಡುಗಾಡು ಸಂಬಂಧ ಬ್ಯಾಡ ಅಂತ ಹೀಗೆ ಮಾಡ್ತಿದಾಳೊ? ಅವಳಿಗೇ ಬ್ಯಾಡವಾದರೆ ನಾನ್ಯಾಕೆ ಹೀಗೆ ಧ್ಯಾನಂತ ಪಡಬೇಕು ಎಂಬ ಉದಾಸೀನವನ್ನು ಸೃಷ್ಟಿಸಿಕೊಂಡು ಸಮಾಧಾನ ತಂದುಕೊಳ್ಳಲು ಯತ್ನಿಸಿದರಾದರೂ, ಅದು ಹೆಚ್ಚು ಹೊತ್ತು ನಿಲ್ಲುತ್ತಿರಲಿಲ್ಲ. ಅದೇ ದಿನ ಸಂಜೆ ತೋಟದ ಕಡೆಗೆ ಹೋದಾಗ ದಾರಿಯಲ್ಲಿ ಮಾದಿಗರ ಕೇರಿಯ ಜುಟ್ಟಗ ಸಿಕ್ಕಿದ. ಬೆಟ್ಟಯ್ಯ ಬಂದ ಮೇಲೆ ಈಗ ಕೇರಿಯಲ್ಲಿ ಏನೇನಾಗ್ತಿದೆ ಎಂದು ಮಾತು ತೆಗೆದು ಯಾರ್ಯಾರು ಹ್ಯಾಗ್ಹ್ಯಾಗಿದ್ದಾರೆ ಎಂದು ವಿಚಾರಿಸಿದಾಗ ಮಾತಂಗಿಯ ಸುದ್ದಿಯೂ ಬಂತು. ಅವಳು ಊರಿಗೆ ಬಂದು ಎರಡು ತಿಂಗಳಾಯಿತಂತೆ. ಎರಡು ವರ್ಷದ ಗಂಡು ಮಗುವಿನ ಜೊತೆ ಇನ್ನು ಮೇಲೆ ಇಲ್ಲೇ ಇರುತ್ತಾಳೆ. ಸ್ವಂತ ಮನೆ ಮತ್ತು ದರ್ಖಾಸ್ತಿನ ಜಮೀನಿಗೆ ಬೆಟ್ಟಯ್ಯ ಅರ್ಜಿ ಹಾಕಿಸಿದ್ದಾನೆ.

ತೋಟದಲ್ಲಿ ಒಬ್ಬರೇ ಇದ್ದಾಗ ಯೋಚಿಸಿಕೊಂಡರು: ಈಗ ಸರ್ಕಾರ್‌ದೋರು ಅವರಿಗೆ ಇಷ್ಟೆಲ್ಲ ಮಾಡ್ತಿದಾರೆ. ಹಿಟ್ಟುಬಟ್ಟೆಗೆ ಅನುಕೂಲವಾಯ್ತು. ಅವಳು ಇನ್ಯಾಕೆ ಬಂದಾಳು? ಆದರೆ ಬರೀ ಹಿಟ್ಟುಬಟ್ಟೆಗಾಗಿ ಅವಳು ತನ್ನ ಹತ್ತಿರಕ್ಕೆ ಬರುತ್ತಿದ್ದಳೆಂಬುದನ್ನು ಅವರ ಮನಸ್ಸೇ ಒಪ್ಪಲಿಲ್ಲ. ಅವಳಾಗಿಯೇ ಎಂದೂ

ಇವರನ್ನು ದುಡ್ಡು ಕೇಳಿರಲಿಲ್ಲ. ಇವರು ಕೊಟ್ಟದ್ದನ್ನು ಹಿಟ್ಟು ಬಟ್ಟೆಗೆಂದು ಖರ್ಚು ಮಾಡಿ ತಿನ್ನಲಿಲ್ಲ. ಆಗಲೂ ಕೂಲಿ ಮಾಡುತ್ತಿದ್ದಳು, ಈಗಲೂ ಮಾಡುತ್ತಿದ್ದಾಳೆ. ಈಗ ಯಾಕೆ ಹೀಗೆ ನನ್ನನ್ನು ತಪ್ಪಿಸುತ್ತಾಳೆ? ಮತ್ತೆ ಬಸುರಿ ಯಾದೇನೆಂಬ ಹೆದರಿಕೆಯೆ? ಹೆಂಗಸರಿಗೆ ಈ ಒಂದು ಹಾಳು ಇಲ್ಲದಿದ್ದರೆ– ಎಂದು ಪ್ರಕೃತಿಯನ್ನೇ ಬೈದುಕೊಂಡರು.

ಸುಮಾರು ಒಂದು ತಿಂಗಳು ಹೀಗೆಯೇ ಕಳೆಯಿತು. ಹದಿನಾರು ವರ್ಷದ ವೆಂಕಟೇಶ ಹೈಸ್ಕೂಲಿಗೆ ಹೋಗುತ್ತಿದ್ದ. ಹನ್ನೆರಡು ವರ್ಷದ ಸತ್ಯ ಮಿಡಲ್ ಸ್ಕೂಲಿನಲ್ಲಿ ತುಂಬ ಬುದ್ಧಿವಂತೆಯಾಗಿ ಓದುತ್ತಿದ್ದಳು. ಅಡಿಗೆ ತಿಂಡಿಯನ್ನು ಮಕ್ಕಳೇ ಹೇಗೋ ಮಾಡಿಕೊಂಡು ಹೋಗುತ್ತಿದ್ದುವು. ಮಾತಂಗಿಯಿಂದ ಮನಸ್ಸನ್ನು ಎಳೆದಿಡುವುದು ವೆಂಕಟರಮಣಯ್ಯನವರಿಗೆ ಸಾಧ್ಯವೇ ಆಗಲಿಲ್ಲ. ಇತ್ತೀಚೆಗೆ ಅವರು ದಿನಾ ಸಂಜೆಯ ಹೊತ್ತು ತೋಟಕ್ಕೆ ಹೋಗುತ್ತಾರೆ. 'ಸಂಜೆ ಎಲ್ಲೂ ಹೋಗಬೇಡ. ಕೂತುಕೊಂಡು ಓದಿಕೊ' – ಎಂದು ಮಗನಿಗೆ ಹೇಳುತ್ತಾರೆ. ಒಂದು ದಿನ ತೋಟಕ್ಕೆ ಹೋಗಿ ಬರುವಾಗ ಅದೃಷ್ಟವೆಂಬಂತೆ ಮಾತಂಗಿ ಎದುರಿಗೆ ಸಿಕ್ಕಿದಳು. ಮತ್ತೆ ಯಾರೂ ಇರಲಿಲ್ಲ. ಅವಳನ್ನು ಕಂಡ ಇವರಿಗೆ ಎದೆ ಡವ ಗುಟ್ಟಿತು. ಅವಳು ತಲೆ ತಗ್ಗಿಸಿಕೊಂಡು ಇವರಿಗೆ ದಾರಿಬಿಟ್ಟು ಬದುವಿನ ಕಡೆಗೆ ತಿರುಗಿದಳು. ಇವರೇ, 'ಮಾತಂಗಿ, ತುಸ ನಿಂತುಕೊ' ಎಂದರು. ಅವಳು ನಿಲ್ಲಲಿಲ್ಲ, ನಡಿಗೆ ನಿಧಾನ ಮಾಡಿದಳು. 'ನಿನ್ನ ಕೈಲಿ ಮಾತಾಡಬೇಕು, ವಸಿ ತ್ವಾಟಕ್ಕೆ ಬಾ' ಎಂದರು. 'ಬ್ಯಾಡಿ ಕಣ್ರಯ್ಯ' – ಎಂದು ಅವಳು ಹೆಜ್ಜೆಯನ್ನು ಜೋರು ಮಾಡಿದಳು. 'ನೀನು ಬರದೆ ಇದ್ದರೆ ದೇವರಾಣೆ. ನೋಡು, ದೇವರಾಣೆ ಇಟ್ಟು ಹೇಳ್ತಿದೀನಿ' – ಎಂದು ಹೇಳಿ ಅವರು ಮತ್ತೆ ತಮ್ಮ ತೋಟದೊಳಕ್ಕೆ ಹೋದರು. ಅದು ತನಗೆ ಕೇಳಲೇ ಇಲ್ಲವೆಂಬಂತೆ ಅವಳು ಹೊರಟುಹೋದಳು. ಇವರು ತೋಟದಿಂದ ಹೊರಡಲಿಲ್ಲ. ಅವಳು ಬರುತ್ತಾಳೆಂಬ ನಂಬಿಕೆಯನ್ನು ಕೈಬಿಡಲು ಮನಸ್ಸು ಒಲ್ಲೆನೆನ್ನುತ್ತಿತ್ತು.

ಆದರೆ ಅವಳು ಬಂದೇ ಬಿಟ್ಟಳು. ಇವರು ಸುಮಾರು ಒಂದು ಗಂಟೆಗೂ ಮೀರಿ ಕಾಯ್ದಿದ್ದರು. ಕತ್ತಲು ಕವಿದು ಹೊಲಗದ್ದೆ ತೋಟಗಳಲ್ಲಿ ಒಂದು ಮನುಷ್ಯ ಇಲ್ಲದಂತೆ ಆಗಿತ್ತು. ಹೊಳೆಬಾಗಿಲಿನ ಮೂಲಕ ಅವಳೊಬ್ಬಳೇ ಬಂದಳು. ಬಂದು ಅಷ್ಟು ದೂರದಲ್ಲಿ ನಿಂತಳು. ಇವರ ಎದೆ ದುಡಿದು ದೇಗುತ್ತಿತ್ತು. ಹತ್ತಿರ ಹೋಗಿ, 'ನೀನು ಬಂದಿದೀಯ ಅಂತ ಯಾಕೆ ಸುಳಿವೇ ಕೊಡಲಿಲ್ಲ?' ಎನ್ನುತ್ತಾ ಅವಳ ಕೈ ಹಿಡಿಯಹೋದರು. 'ಮುಟ್ಬ್ಯಾಡ ಕಣ್ರಯ್ಯ' ಎನ್ನುತ್ತಾ ಅವಳು ನಾಲ್ಕು ಹೆಜ್ಜೆ ಹಿಂದೆ ಸರಿದಳು. 'ಕ್ವಾಪವೇನೇ?' – ಎನ್ನುತ್ತಾ ಇವರು ಹಿಂಬಾಲಿ

ಸಿದರು. 'ನಿಮ್ಮ ನ್ಯಾಗೆಂತ ಕ್ಯಾಪಸವಯ್ಯ' – ಎನ್ನುತ್ತಾ ಅವಳು ನಿಂತು ಕೊಂಡಳು. ಇವರು ಹೋಗಿ ತೊಟ್ಟ ಬಟ್ಟೆಯಲ್ಲೇ ಅವಳ ಕೈಹಿಡಿದಾಗ ಗೊತ್ತಾಯಿತು: ಅವಳು ಸಣ್ಣಗೆ ಬಿಕ್ಕಿಬಿಕ್ಕಿ ಅಳುತ್ತಿದ್ದಳು.

'ಅಳಬ್ಯಾಡ' – ಎಂದು ಸಮಾಧಾನ ಮಾಡಿ ಅವರು ಕೇಳಿದರು: 'ಅದ್ಯಾಕ್ ಹಂಗ್ ಹೇಳದೆ ಕೇಳ್ದೆ ಹ್ವಂಟ್‌ಹೋಗ್‌ಬುಟ್ಟೆ?'

'ಏನ್ಮಾಡಾದು' – ಎಂದು ಅವಳೇ ಸೆರಗಿನಿಂದ ಕಣ್ಣು ಒರೆಸಿಕೊಂಡಳು.

'ನಾನ್ ನಿನ್ನ ಏಟೊಂದ್ ತರ ಗ್ಯಾಪಿಸ್ಕತ್ತಿದ್ದೆ ಗೊತ್ತಾ?'

ಅವಳು ಉತ್ತರ ಹೇಳಲಿಲ್ಲ. ಅವರೇ ಕೇಳಿದರು: 'ಇನ್ ನ್ಯಾಲೆ ಇಲ್ಲೇ ಇರ್ತೀಯ?'

'ಊಂ.'

'ಗಂಡನ್ನ ಯಾಕೆ ಬಿಟ್ ಬಂದೆ?'

'ನಾನಿನ್ ಯಾವನ ಕುಟ್ಳೂ ಇರಾಕಿಲ್ಲ.'

'ನನ್ ಕುಟ್ಟೆ?'

'ಆಕ್ಲಾಸ ಮಾಡಬ್ಯಾಡ ಕಣ್ರಯ್ಯ' – ಎನ್ನುವಾಗ ಅವಳಿಗೆ ಮತ್ತೆ ಅಳು ಬಂದದ್ದು ಅವರಿಗೆ ಕೇಳಿಸಿತು. ಅವಳನ್ನು ಮತ್ತೆ ಸಮಾಧಾನ ಮಾಡಿ ಕೈಹಿಡಿ ದೆಳೆದರು: 'ಬಾ.'

'ಎಲ್ಗೆ?'

'ಸ್ವಾಗೆ ಒಟ್ಟಲಿನ ಮರೆಗೆ.'

'ಬ್ಯಾಡ ಕಣ್ರಯ್ಯ.'

"ಯಾಕ್ ಇನ್ನೂ ಸಿಟ್ ಇಳದಿಲ್ವೇನೆ?'

'ಸಿಟ್ಟಲ್ಲ ಕಣ್ರಯ್ಯ.'

'ಮತ್ತೆ ಯಾಕೆ ಹೇಳು. ಆಮ್ಯಾಲೆ ಹೇಳೀವಂತೆ. ಈಗ ಬಾ' – ಎಂದು ಅವರು ತಬ್ಬಿ ಎಳೆದರು.

ಮೊದಲು ಎರಡು ಹೆಜ್ಜೆ ವಾಲಿದರೂ ಅನಂತರ ದೃಢವಾಗಿ ನಿಂತು ಹೇಳಿದಳು: 'ಅದ ಮಾಡ್‌ಬ್ಯಾಡ್‌ದು ಕಣ್ರಯ್ಯ.'

'ಯಾರೇ ನಿಂಗ್ ಹೇಳ್ದೋರು ಹಂಗಂತ?'

'ಸುಂಕಪ್ಪ ಅಂದ್ರು. ಬ್ಯಟ್ಟಣ್ಣ ಗಾಂದಿ ಗುಡಿಯಿಂದ ಬಂದಮ್ಯಾಗೆ ಅವ್ರನ್ನ ಮುಟ್ಟಲ್ವಂತೆ. ಮುಕ್ಳಾದ ಮ್ಯಾಲೆ ಗಂಡ ಎಂಡ್ತಿ ಜೋಡೀಲಿ ಮನಿಕಾಬ್ಯಾಡ್ದಂತೆ.'

'ಅವನು ಗಾಂಧೀ ಆಶ್ರಮದಲ್ಲಿದ್ದ. ಅವಳಿಗೆ ತೆವಲಾಗಾಕುಲ್ವ?'

'ಗಂಡ ವಲ್ಲದಿದ್ರೆ ನಾನೂ ವಲ್ಲೆ. ಅದರಾಗೇನೈಯ್ತೆ ಅಂತಾಳೆ. ಸುಂಕವ್ವ ಅಂದ್ರೆ ಸಲೀಸುಗಾರ ಎಣ್ಣು.'

'ಅವ್ರೇನೋ ಗಂಡ ಹೆಂಡ್ತಿ. ಹೆಂಗೆ ಬೇಕಾದ್ರೂ ಮಾಡ್ಕಳ್ಳಿ. ಈಗ ನೀನು ಬಾ' – ಎಂದು ಅವರು ಅವಳನ್ನು ತಬ್ಬಿಕೊಂಡು ಮುಂದೆ ತಳ್ಳಿ ಹೆಜ್ಜೆ ಹಾಕಿಸಿದರು.

ಮೊದಲನೆಯ ಹೆಜ್ಜೆಗೇ ಮತ್ತೆ ನಿಂತುಕೊಂಡು ಅವಳು ಕೇಳಿದಳು: 'ಹೆಂಗಾರೆ ನಾನ್ ನಿಮ್ಮ ಸೂಳೆ ಏನ್ರಯ್ಯ?'

ಅವರಿಗೆ ಬೆಬ್ಬೆಬ್ಬೆಬ್ಬೆ ಎನ್ನುವಂತಾಯಿತು. ಇವಳೆಂಥ ಸೆಡವಿನ ಮಾತನಾಡುತ್ತಿದ್ದಾಳೆ ಎನ್ನಿಸಿತು. ಆದರೆ ಧ್ವನಿಯಲ್ಲಿ ಸೆಡವಿನ ಛಾಯೆಯೂ ಇರಲಿಲ್ಲ. ಏನೂ ಮಾತನಾಡಲಾರದೆ, ಅದೃಶ್ಯ ಗೋಡೆ ಒಂದರಿಂದ ತಡೆಯಲ್ಪಟ್ಟು ನಿಂತವರಂತೆ ಅವರು ನಿಂತುಬಿಟ್ಟರು. ಕಣ್ಣಿನಲ್ಲಿ ನೀರು ತುಂಬಿಕೊಂಡು ಅವಳು ಸೆರಗನ್ನು ಎತ್ತಿ ಒರೆಸಿಕೊಂಡದ್ದು ಅವರಿಗೆ ಕಂಡಿತು. ಹತ್ತು ನಿಮಿಷಕ್ಕೂ ಮೀರಿ ಅವರು ಹಾಗೆಯೇ ನಿಂತಿದ್ದರು. ಏನು ಮಾತನಾಡುವುದಕ್ಕೂ ಅವರಿಗೆ ತಿಳಿಯಲಿಲ್ಲ. ಅವಳು ಮೈತುಂಬ ಮಾತನ್ನು ಸೂಸುವ ಕರಿಯ ಕಲ್ಲಿನ ವಿಗ್ರಹದಂತೆ ನಿಂತಿದ್ದಳು.

ಕೊನೆಗೆ ಅವಳೇ, 'ನಾನ್ ಓಯ್ತೀನಿ ಕಣ್ರಯ್ಯ' ಎಂದಳು. ಹೋಗಬೇಡ ಇರು ಎನ್ನಲು ಅವರಿಗೆ ನಾಲಗೆ ಬರಲಿಲ್ಲ. ಹೋಗು ಎನ್ನಲು ಮನಸ್ಸು ಬರಲಿಲ್ಲ. ಎರಡು ನಿಮಿಷ ಕಾಯ್ದು, 'ಮದ್ಯಾನ ರೊಟ್ಟಿ ಕೊಟ್ಟು ಬಿಟ್ ಬಂದದ್ದು. ಉಡಗ ನಮ್ಮವ್ವ ಎಲ್ಲಿ ಅಂತ ಬಡಕತ್ತೈತೆ. ಓಯ್ತೀನಿ' ಎಂದು ಹೇಳಿ ಹೊಳೆ-ಬಾಗಿಲಿನ ಕಡೆಗೆ ಹೊರಟುಹೋದಳು. ಇವರು ಸುಮ್ಮನೆ ಆ ಕಡೆ ನೋಡುತ್ತಾ ನಿಂತುಬಿಟ್ಟರು. ಆದರೆ ಹೋದ ಹತ್ತು ನಿಮಿಷದ ನಂತರ ಅವಳೇ ಹಿಂತಿರುಗಿ ಬಂದು, 'ಹಾದೀಲಿ ಅಡ್ಡಾದ್ರೂ ಇನ್ಯಾವತ್ತೂ ಮಾತಾಡುಸ್‌ಬ್ಯಾಡಿ ಕಣ್ರಯ್ಯ. ನಿಮ್ಮ ಮರ್ವಾದಿ ಹ್ವಾಗಬ್ಯಾಡ್‌ದು' ಎಂದು ಹೇಳಿ ತಿರುಗಿ ಹೊರಟುಹೋದಳು.

೫

ವೆಂಕಟರಮಣಯ್ಯನವರು ಮನೆ ಸೇರುವ ಹೊತ್ತಿಗೆ ರಾತ್ರಿ ಒಂಬತ್ತು ಗಂಟೆ ಕಳೆದಿತ್ತು. 'ಇಷ್ಟ್ ಹೊತ್ತು ಎಲ್ಲಿಗ್ ಹೋಗಿದ್ಯಪ್ಪ?' – ಎಂದು ಸತ್ಯ ಕೇಳಿದಳು. ಬಿಸಿಯಾಗಿ ಅನ್ನ ಮಾಡಿಟ್ಟು ಮಕ್ಕಳಿಬ್ಬರೂ ಅವರನ್ನು ಕಾಯ್ದು ಕೊಂಡಿದ್ದರು. ಕೈಕಾಲು ತೊಳೆದು ಎರಡು ಆಚಮನದ ಶಾಸ್ತ್ರ ಮಾಡಿ ಮಕ್ಕಳೊಡನೆ ಊಟ ಮಾಡಿ ಅವರು ಮಲಗಿಕೊಂಡರು. ಮಕ್ಕಳಿಬ್ಬರಿಗೂ ಬೇಗ

ನಿದ್ದೆ ಬಂತು. ಅವರಿಗೆ ಬರಲಿಲ್ಲ. ಆಗ ನೆನಪಾಯಿತು: ಮಾತಂಗಿಯನ್ನು ಮುಟ್ಟಿಸಿಕೊಂಡ ಅವರು ಸ್ನಾನವೂ ಮಾಡದೆ ಬಟ್ಟೆಯನ್ನೂ ಒದ್ದೆ ಮಾಡದೆ ಮನೆಗೆ ಬಂದಿದ್ದರು. ಹಾಗೆಯೇ ಆಚಮನ ಮಾಡಿ ದೇವರ ಮನೆಯ ಹೊಸಲನ್ನೂ ದಾಟಿದ್ದರು. ಈಗ ಹಾಸಿಗೆ ಬಟ್ಟೆಯನ್ನು ಮುಟ್ಟಿ ಮಲಗಿದ್ದಾರೆ. ಅವಳ ಸಂಗವಾಗದಿದ್ದರೂ ಕೈ ಭುಜ ಬೆನ್ನುಗಳನ್ನು ಮುಟ್ಟಿದ್ದುದು ಸುಳ್ಳಲ್ಲ. ಮನೆ ಮತ್ತು ದೇವರ ಕೋಣೆಗಳೆಲ್ಲ ಹೀಗೆ ಮೈಲಿಗೆಯಾದದ್ದಕ್ಕೆ ಏನು ಮಾಡಬೇಕು? ನಾಳೆ ಎದ್ದು ಸ್ನಾನ ಮಾಡಿದ ಮೇಲೆ ಮನೆಗೆಲ್ಲ ಪುಣ್ಯಾಃವಾಚನ ಮಾಡಿ ಮಾವಿನ ಎಲೆಯಿಂದ ಪ್ರೋಕ್ಷಿಸಿದರೆ ಸಾಕು ಎಂದುಕೊಂಡರು. ಆದರೆ ಅವರನ್ನು ಕೊರೆಯುತ್ತಿದ್ದ ಯೋಚನೆ ಅದಲ್ಲ. 'ಹಂಗಾರೆ ನಾನ್ ನಿಮ್ಮ ಸೂಳೆ ಏನ್ರಯ್ಯ?' – ಎಂಬ ಅವಳ ಪ್ರಶ್ನೆ ಅವರ ಅಂತರಂಗವನ್ನು ತಡಕುತ್ತಿತ್ತು. ಅವಳ ಮತ್ತು ತಮ್ಮ ಸಂಬಂಧ ಬರೀ ದುಡ್ಡಿಗೆ ನಡೆಯುತ್ತಿರಲಿಲ್ಲವೆಂಬುದು ಅವರಿಗೆ ಸ್ಪಷ್ಟವಾಗಿ ಗೊತ್ತಿತ್ತು. ಆದರೆ ಅದರ ಸ್ಪಷ್ಟ ವ್ಯಾಖ್ಯೆಯನ್ನು ಹೇಳುವುದು ಅವರ ಬುದ್ಧಿಗೆ ಸಾಧ್ಯವಾಗುತ್ತಿರಲಿಲ್ಲ. ಇದೊಂದು ತರಹ ಸ್ನೇಹಸಂಬಂಧ. ಆದರೆ ತಮ್ಮಿಂದ ಅವಳಿಗೆ ಒಂದು ಮಗುವಾಗಿದೆ. ಮಗುವೇ ಆದನಂತರ ಬರೀ ಸ್ನೇಹಸಂಬಂಧ ವಾಗಿರುವುದು ಹೇಗೆ? ಹಾಗಾದರೆ ಇದು ದಾಂಪತ್ಯವೆ? ದಾಂಪತ್ಯವಾಗುವುದು ಹೇಗೆ? ಸತ್ಕುಲಪ್ರಸೂತಳಾದ ಕನ್ಯೆಯನ್ನು ಅಗ್ನಿಸಾಕ್ಷಿಯಾಗಿ ಕೈಹಿಡಿದು ಅನಂತರ....ಇದೆಲ್ಲ ಆಗದುದು ದಾಂಪತ್ಯವೆನಿಸುವುದಿಲ್ಲ. ಶಾಸ್ತ್ರದಲ್ಲಿ ಎಷ್ಟೋ ರೀತಿಯ ವಿವಾಹಗಳನ್ನು ಹೇಳಿದೆ. ಅವುಗಳಲ್ಲಿ ಇದು ಯಾವುದೆಂಬುದನ್ನು ಗುರುತಿಸಿದರೂ ವಿವಾಹವಂತೂ ಆಗಲಾರದು. ವಿವಾಹವಾಗಿ, ಗರ್ಭಿಣಿಯಾಗಿ, ಶಿಶುವಿನ ಜನನವಾದರೂ, ಅಜ್ಞಾತದಾಗಿರುವುದು ಯಾವ ರೀತಿಯ ವಿವಾಹದ ಲಕ್ಷಣದಲ್ಲೂ ಹೇಳಿಲ್ಲ. ನನ್ನ – ಅವಳ ಸಂಬಂಧ ಎಂಥದು?

ಯೋಚಿಸಿ ಯೋಚಿಸಿ ಅವರು, ಸಂಬಂಧದ ವ್ಯಾಖ್ಯೆ ಹುಡುಕುವುದನ್ನು ಕೈಬಿಟ್ಟರು. ಆದರೆ ಇದರಲ್ಲಿ ಅವಳೇ ಪ್ರಧಾನಳಾಗಿ ತಾವು ಗೌಣರಾಗಿರುವಂತೆ ಅನುಭವವಾಗುತ್ತಿತ್ತು. ಅವಳೇನೂ ಅವರನ್ನು ಧಿಕ್ಕರಿಸಿಲ್ಲ. ಹೆಂಗಸಿನ ಅಂತ-ರಂಗದ ಸ್ವಭಾವಕ್ಕೆ ತಕ್ಕಂತೆ ಕಣ್ಣೀರು ಹಾಕಿದಳು. 'ನಾನಿನ್ ಯಾವನ ಕುಟ್ಟೊ ಇರಾಕಿಲ್ಲ' – ಎಂದಳು. ಇನ್ನು ದೈಹಿಕ ಸಂಬಂಧ ಬೇಡವೆಂದು ಕಟ್ಟು ನಿಟ್ಟಾಗಿ ಹೇಳಿದಳು. ಅಂದರೆ ಮದುವೆಯಾಗಿ ಮಕ್ಕಳಾದ ಮೇಲೆ ವಾನಪ್ರಸ್ಥಾ ಶ್ರಮದ ಸ್ವೀಕಾರ ಮಾಡಿದ್ದಾಳೆಯೇ ಅವಳು? ಇಷ್ಟೆಲ್ಲ ಆ ಮಾದಿಗಿತ್ತಿಗೆ ತಿಳಿಯ ಲಾರದು. ಗಾಂಧಿ ಬ್ರಹ್ಮಚರ್ಯ ಮಾಡುತ್ತಿದ್ದನಂತೆ. ಅವನ ಹತ್ತಿರದಿಂದ ಚೆಟ್ಟಯ್ಯ ಕಲಿತು ಬಂದ. ಅವನ ಹೆಂಡತಿಯಿಂದ ಇವಳು ಕೇಳಿಕೊಂಡಳು.

ಇಷ್ಟಕ್ಕೆ ಇವಳಿಗೆ ಅದರ ಮೇಲೆ ಯಾಕೆ ಬೇಸರ ಬರಬೇಕು? ಮಕ್ಕಳಾದೀತು, ಮತ್ತೆ ತೊಂದರೆ ಎಂಬ ಭಯವೇ? ಭಯವಿದ್ದರೆ ಹಾಗಂತ ಬಾಯಿಬಿಟ್ಟು ಹೇಳಬಹುದಾಗಿತ್ತು. ಅವಳ ಮನೋವ್ಯಾಪಾರ ಮತ್ತು ಆಲೋಚನಾರೀತಿಗಳು ಅವರಿಗೆ ಸರಿಯಾಗಿ ಅರ್ಥವಾಗಲಿಲ್ಲ. ಆದರೆ, 'ಹಾದೀಲಿ ಅಡ್ಡಾದ್ರೂ ಇನ್ಯಾವತ್ತೂ ಮಾತಾಡುಸ್‌ಬ್ಯಾಡಿ ಕಣ್ರಯ್ಯ. ನಿಮ್ಮ ಮರ್ವಾದಿ ಹ್ವಾಗ್ ಬ್ಯಾಡ್‌ದು' – ಎಂದು, ತಮ್ಮ ಒಳಿತು ಗೌರವಗಳನ್ನು ಕಾಪಾಡುವ ಉದ್ದೇಶದಿಂದಲೇ ಹೇಳಿಹೋಗಿದ್ದಳು. ತಮ್ಮ ಗೌರವ ಕಾಯುವುದಕ್ಕೋ ಅಥವಾ ತನ್ನನ್ನು ಸಂಧಿಸುವ ಇಷ್ಟವಿಲ್ಲದ್ದಕ್ಕೋ ಅವಳು ಈ ರೀತಿ ಹೇಳಿದುದು? ಆದರೆ ಅಷ್ಟೊಂದು ಕಣ್ಣೀರು ಯಾಕೆ ಸುರಿಸಿದಳು? ಅವಳು ಅತ್ತದ್ದು ಮಾತ್ರ ಸುಳ್ಳಲ್ಲ. ಹಿಂದೆ ಮೂರು ವರ್ಷ ಒಂದೇ ಸಮನೆ ಸಂಧಿಸುತ್ತಿದ್ದಾಗ, ತಾನು ಬಸುರಿಯಾಗಿದ್ದೇನೆಂದು ಹೇಳಿದಾಗ ಕೂಡ ಅತ್ತಿರಲಿಲ್ಲ. ಈಗ ಇಷ್ಟು ಅಳಬೇಕಾದರೆ ಅವಳ ಭಾವನೆ ಬರೀ ಬುದ್ಧಿವಂತಿಕೆಯಾಗಿರುವುದು ಸಾಧ್ಯವಿಲ್ಲ.

ನಡುರಾತ್ರಿ ಕಳೆದರೂ ನಿದ್ರೆಬರಲಿಲ್ಲ. ನಡುವೆ ಮೂರು ಸಲ ಎದ್ದು ಬಚ್ಚಲು ಮನೆಗೆ ಹೋಗಿ ಬಂದರು. ಬೆಳಗಿನ ಜಾವ ವೆಂಕಟೇಶ ಓದಿಕೊಳ್ಳಲು ಎದ್ದಾಗ ಈ ಯೋಚನೆ ಕಡಿಮೆಯಾಯಿತು.

ಬೆಳಗ್ಗೆ ಎಚ್ಚರವಾದಾಗ ಹೊತ್ತು ಎರಡಾಳುದ್ದ ಏರಿತ್ತು. ಅವತ್ತು ಶನಿವಾರ. ಪಟೇಲ ತಿರುಮಲೇಗೌಡರು ದೇವಸ್ಥಾನಕ್ಕೆ ಬಂದು ಸ್ವತಃ ಪೂಜೆ ಮಾಡಿಸುವ ದಿನ. ಇಷ್ಟು ಹೊತ್ತಿಗಾಗಲೇ ಅವರು ಮನೆಯಿಂದ ಹೊರಟಿರಬೇಕು. ಗಡಿಬಿಡಿಯಿಂದ ಸ್ನಾನ ಮಾಡಿ ಮಕುಟ ಉಟ್ಟು ರೇಶ್ಮೆಯ ಚೌಕ ಹೊದೆದು, ಸತ್ಯ ಹಿತ್ತಿಲಿನಲ್ಲಿ ಕುಯ್ದಿಟ್ಟದ್ದ ಮಲ್ಲಿಗೆಯ ಹೂವು, ವೆಂಕಟೇಶ ಮಾಡಿಟ್ಟದ್ದ ನೈವೇದ್ಯ ಮತ್ತು ಪೂಜಾ ಸಾಮಗ್ರಿಗಳನ್ನು ತೆಗೆದುಕೊಂಡು ದೇವಸ್ಥಾನಕ್ಕೆ ಹೋದರು. ಇವರು ಹೋಗುವ ಹೊತ್ತಿಗೆ ದೊಡ್ಡ ಗೌಡರು ಬಂದು ಜಗುಲಿಯ ಮೇಲೆ ಕಾಯುತ್ತಾ ಕುಳಿತಿದ್ದರು. ಶನಿವಾರವಾದುದರಿಂದ ಇನ್ನೂ ಕೆಲವು ರೈತರು ಬ್ರಾಹ್ಮಣರು ಬಂದಿದ್ದರು. 'ಯಾಕಪ್ಪಾ ಇಷ್ಟೊತ್ತು?' – ಗೌಡರು ಕೇಳಿದುದಕ್ಕೆ, 'ಮೈ ಸರಿ ಇರಲಿಲ್ಲ. ಎದ್ದಿದ್ದೇ ಈಗ' ಎಂದು ಹೇಳಿ ಬೀಗ ತೆಗೆದು ಒಳಗೆ ಹೋದರು.

ಇವರು ಮಂತ್ರ ಹೇಳಿಕೊಂಡು ಪೂಜೆ ಮಾಡುವಾಗ ಗೌಡರು ಗರ್ಭಗುಡಿಯ ಬಾಗಿಲಿನಲ್ಲಿ ಪ್ರಥಮ ಸ್ಥಾನದಲ್ಲಿ ನಿಂತಿದ್ದರು. ಅನಂತರ ಬ್ರಾಹ್ಮಣರು, ಅವರ ಹಿಂದೆ ಉಳಿದ ಗೌಡರು, ಇತರರು. ಹತ್ತಿರವೇ ನಿಂತಿದ್ದ ಕುಪ್ಪಣ್ಣಯ್ಯಂಗಾರರು ದೊಡ್ಡ ಗೌಡರನ್ನು ಕೇಳಿದರು: 'ಎಲ್ಲೆಲ್ಲೂ ಹೊಲೇರು ಮಾದಿಗರನ್ನ ದೇವಸ್ಥಾನ

ದೊಳಕ್ಕೆ ನುಗ್ಗುಸ್ತಾ ಇದಾರಂತಲ್ಲ.'

'ನಮ್ಮೂರಲ್ಲಿ ನುಗ್‌ಸಾಕ್ ಬಂದ್ರೆ ವನಕೆ ತಗಾತೀವಿ' – ಗೌಡರು ನಿಶ್ಚಯವನ್ನೇ ಹೇಳಿದರು.

'ಸರ್ಕಾರವೇ ಅವರ ಕಡೆ ಇರುವಾಗ ನಾವೇನು ಮಾಡುಕ್ಕಾಗುತ್ತೆ ಯಜಮಾನರೇ? ಪೋಲೀಸಿನೋರನ್ನ ಕರ್ಕಂಡ್ ಬತ್ತಾರಂತೆ' – ಹಿಂದಿನ ಬೀದಿಯ ಅಪ್ಪಣ್ಣಯ್ಯಂಗಾರರು ಬಾಯಿಹಾಕಿದರು.

'ಸರ್ಕಾರ್‌ದೋನೇನು ಕ್ಯಾತಾರದಿಂದ ಇಳಿದುಬಂದವ್ನಾ? ಪ್ರಜಾ ಸರ್ಕಾರ ಇದು. ಗುದಿಗೆ ಬಿಟ್ಟು ಕಳುಸ್ತೀವಿ ಪೋಲೀಸ್ನೋನಿಗೆ' – ಎಂದು ದೊಡ್ಡ ಗೌಡರು ಪ್ರತಿಜ್ಞೆ ಮಾಡುವ ಧ್ವನಿಯಲ್ಲಿ ಹೇಳಿಬಿಟ್ಟರು.

ಹೊರಗೆ ಈ ಚರ್ಚೆ ನಡೆಯುತ್ತಿರುವಾಗ, ಒಳಗೆ ಪೂಜೆ ಮಾಡುತ್ತಿದ್ದ ವೆಂಕಟರಮಣಯ್ಯನವರಿಗೆ ಒಂದು ಲೋಪದ ಜ್ಞಾಪಕ ಬಂತು: ನೆನ್ನೆ ರಾತ್ರಿ ಮನೆಗೆ ಬಂದ ನಂತರ ಮರೆತು ಅಡಿಗೆಮನೆಯ ಪಾತ್ರೆ ಹಾಸಿಗೆ ಹೊದಿಕೆಗಳನ್ನು ಮುಟ್ಟಿದ್ದೇ ಅಲ್ಲದೆ ದೇವರ ಮನೆಗೂ ಹೋಗಿದ್ದುದಕ್ಕೆ ಬೆಳಗ್ಗೆ ಎದ್ದು ಪುಣ್ಯಾಃವಾಚನ ಮಾಡಬೇಕೆಂದು ತಾವು ನಿಶ್ಚಯಿಸಿಕೊಂಡಿದ್ದುದು ಮರೆತೇ ಹೋಗಿತ್ತು. ಈಗ ಹಾಗೆಯೇ ಅವೇ ಮೈಲಿಗೆ ಮನೆಯ ಪೂಜಾ ಸಾಮಗ್ರಿ ಮತ್ತು ನೈವೇದ್ಯಗಳನ್ನು ತೆಗೆದುಕೊಂಡು ದೇವಸ್ಥಾನಕ್ಕೆ ಬಂದು ಗರ್ಭಗುಡಿಯಲ್ಲಿ ನಿಂತು ವಿಗ್ರಹವನ್ನು ಮುಟ್ಟಿ ಪೂಜೆ ಮಾಡುತ್ತಿದ್ದೇನೆ. ಇದನ್ನು ಹೋಗಲಾಡಿಸುವುದು ಹೇಗೆ? ಈಗಂತೂ ಮಧ್ಯದಲ್ಲಿ ಏನೂ ಮಾಡುವಂತಿಲ್ಲ. ನಾಳೆ ದೇವರಿಗೂ ಪುಣ್ಯಾಃ ಮಾಡಿ ತಾನು ಪಾಪ ಶಮನಾರ್ಥ ಏನಾದರೂ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು – ಎಂದುಕೊಂಡು ಪೂಜೆಯನ್ನು ಮುಂದುವರಿಸಿದರು.

೬

ಏನಾದರೂ ಸರಿ, ದೇವಸ್ಥಾನಕ್ಕೆ ಹೊಲೆಯ ಮಾದಿಗರನ್ನು ಬಿಡಕೂಡದೆಂದು ಊರಿನವರೆಲ್ಲ ನಿಶ್ಚಯಿಸಿದರು. ಎಂದೂ ಒಂದಾಗದ ಸ್ಮಾರ್ತ, ಶ್ರೀವೈಷ್ಣವ, ಮಾಧ್ವ ತ್ರಿಮತಸ್ಥ ಬ್ರಾಹ್ಮಣರೂ ಈ ಒಂದು ಅಂಶದಲ್ಲಿ ಒಟ್ಟುಗೂಡಿದರು. ವೈಷ್ಣವ ಶೈವ ಭೇದವನ್ನು ಮರೆತು ಶ್ರೀವೈಷ್ಣವ, ವೈಷ್ಣವ, ಸಾತಾನಿ, ದಾಸ ([illegible]ದಾಸನೆ) ಬಣಜಿಗ ಸೊಣಬ ಆದಿಯಾಗಿ ಲಿಂಗಾಯತರೂ ಒಂದಾದರು. ಟೀಪುಸುಲ್ತಾನನ ಕಾಲದಿಂದ ಈ ಕೋಟೆಯ ಒಳಗೆ ನೆಲೆಸಿದ್ದ ಹತ್ತು [illegible] ಕುಟುಂಬಗಳು ಈ ಧರ್ಮಸಂಕಷ್ಟದಲ್ಲಿ ಉಳಿದವರ ಜೊತೆ ಸೇರಿದರು.

ಕೋಟೆಯ ಹೊರಗೆ ಸಣ್ಣ ಚರ್ಚು ಕಟ್ಟಿಸಿಕೊಂಡಿದ್ದ ಹದಿನೈದು ಕ್ರೈಸ್ತ ಕುಟುಂಬಗಳು ಮಾತ್ರ ಯಾವ ಪಕ್ಷವನ್ನೂ ವಹಿಸದೆ, ಇದು ತಮಗೆ ಸಂಬಂಧಿಸಿದ ಪ್ರಶ್ನೆಯೇ ಅಲ್ಲವೆಂಬಂತೆ ಪ್ರತ್ಯೇಕವಾಗಿದ್ದುವು. ಇಂತಹ ಸಂದರ್ಭದಲ್ಲಿ ಹೇಗಿರಬೇಕೆಂಬ ಬಗೆಗೆ ಅವರ ಗುರುಗಳು ತಿಳಿವಳಿಕೆ ಕೊಡುತ್ತಿದ್ದರು.

ಇದು ಕಡಿಮೆಯ ದೇವಸ್ಥಾನವಲ್ಲ. ಜಕಣಾಚಾರಿ ಕಟ್ಟಿದ್ದು. ಬೆಟ್ಟದ ಮೇಲಿಲ್ಲ ಎಂಬುದನ್ನು ಬಿಟ್ಟರೆ ಮಹಾತ್ಮೆಯಲ್ಲಿ ದೊಡ್ಡ ತಿರುಪತಿಗಿಂತ ಯಾವ ವಿಧದಲ್ಲೂ ಕಮ್ಮಿಯದಲ್ಲವೆಂದು ಉಳಿದವರು ಹೇಳಿದರೆ, ಸ್ಮಾರ್ತ ಪೂಜಾರಿಯ ಕೈಗೆ ಸಿಕ್ಕದಿದ್ದರೆ ಇದು ತಿರುಪತಿಯ ದೇವರಿಗೇ ಸಮನೆಂದು ಒಪ್ಪಿಕೊಳ್ಳಲು ಶ್ರೀವೈಷ್ಣವರು ಸಿದ್ಧರಿದ್ದರು. ರಾಮಾನುಜಾಚಾರ್ಯರು ವರ್ಷಕ್ಕೊಂದು ದಿನ ಹೊಲೇರನ್ನು ಬಿಡುವ ಹಾಗೆ ಮಾಡಿದರಲ್ಲ; ನಮ್ಮ ಕೈಲಿರುವ ಹೊತ್ತಿಗೆ ಇವತ್ತಿನ ತನಕ ಇದರ ಶುದ್ಧಿಯನ್ನು ಉಳಿಸಿಕೊಂಡು ಬಂದಿದೀವಿ – ಎಂದು ಸ್ಮಾರ್ತರು ಪ್ರತಿಹೇಳುತ್ತಿದ್ದರು. ಹಿಂದೆ ಶಿವಾಲಯವಾಗಿದ್ದ ಇದನ್ನು ವಿಷ್ಣುದೇವಸ್ಥಾನವಾಗಿ ಮಾಡಿಕೊಂಡಿದ್ದರೂ ಗುಡಿಯ ಹೊರ ಗೋಡೆಯ ಮೇಲೆ ಈಶ್ವರ ಪಾರ್ವತಿಯ ವಿಗ್ರಹವಿದ್ದು ಅರ್ಚಕ ವೆಂಕಟರಮಣಯ್ಯನವರು ಅದಕ್ಕೂ ಮಂಗಳಾರತಿ ಮಾಡುತ್ತಿರುವುದರಿಂದ ಗುಡಿಯ ಪಾವಿತ್ರ್ಯವನ್ನು ಕಾಪಾಡುವುದು ತಮ್ಮ ಕರ್ತವ್ಯವೆಂದು ಲಿಂಗಾಯತರು ಕೂಡಿದರು.

ಹಾಗೆ ನೋಡಿದರೆ ಗುಡಿಗೆ ಪ್ರವೇಶ ಮಾಡಲು ಊರಿನ ಹೊಲೆಯ ಮಾದಿಗರು ಮುಂದೆ ಬಂದೇ ಇಲ್ಲ. ಬೆಳಗ್ಗೆ ಎದ್ದರೆ ಕೋಟೆಯೊಳಗಿನವರ ಜಮೀನಿನಲ್ಲಿ ದುಡಿದು ಮಧ್ಯಾಹ್ನದ ಮುದ್ದೆಯನ್ನು ಸಂಪಾದಿಸಬೇಕಾದ ಸ್ಥಿತಿ ಅವರಲ್ಲಿ ಬಹುಪಾಲು ಜನರಿಗೆ ತಪ್ಪಿರಲಿಲ್ಲ. ಸರ್ಕಾರದವರು ಜಮೀನು ಕೊಟ್ಟಿದ್ದರು: ಜಮೀನು ಆಬಾದ್ ಮಾಡಲು ಸಾಲ ಕೊಟ್ಟಿದ್ದರು. ಆದರೆ ಆ ದುಡ್ಡು ಹೆಂಡಕ್ಕೆ ಹೋಗಿತ್ತು. ಬೆಟ್ಟಯ್ಯನವರಂತೆ ಜಮೀನಿಗೆ ಸೊಸಿ ಕಟ್ಟಿಸಿ ಅಭಿವೃದ್ಧಿ ಮಾಡಿದವರು ಎರಡು ಮೂರು ಸಂಸಾರಗಳು ಮಾತ್ರ. ದೇವಸ್ಥಾನ ಪ್ರವೇಶಕ್ಕೆ ಹರಿಜನರಿಗೂ ಸಮಾನಾವಕಾಶ ಬೇಕೆಂಬ ತೀರ್ಮಾನ ಸರ್ಕಾರದಿಂದಲೇ ಆಗಿ, ಅವರ ಕಾರ್ಯಾನ್ವಯವೂ ಸರ್ಕಾರೀ ನಾಯಕರ ಮುಂದಾಳುತನದಲ್ಲೇ ಆಗುತ್ತಿತ್ತು. ದೇಶದ ಪ್ರಸಿದ್ಧ ದೇವಾಲಯಗಳಿಗೆ ಹರಿಜನರು ಪ್ರವೇಶಿಸಿದ ಸುದ್ದಿ ವರ್ತಮಾನ ಪತ್ರಿಕೆಗಳಲ್ಲಿ ಆಗಾಗ ಬರುತ್ತಿತ್ತು. ಉಳಿದ ಊರಿನಲ್ಲಿ ಏನಾದರೂ ಆಗಲಿ, ನಮ್ಮ ಊರಿನಲ್ಲಿ ಇವಕ್ಕೆ ಅವಕಾಶ ಕೊಡಕೂಡದೆಂದು ತಿರುಮಲಾಪುರದವರೆಲ್ಲ ಕಟ್ಟುನಿಟ್ಟಾಗಿ ನಿರ್ಣಯಿಸಿದ್ದರು.

ಆದರೆ ಈ ಪ್ರವೇಶಕ್ಕೆ ಒತ್ತಾಸೆ ಸರ್ಕಾರದ ಅಮಲ್ದಾರರಿಂದ ಬರಲಿಲ್ಲ;

ಪೋಲೀಸ್ ಇನ್‌ಸ್ಪೆಕ್ಟರಿಂದ ಬರಲಿಲ್ಲ; ಡೆಪ್ಯೂಟಿ ಕಮಿಶನರಿಂದ ಬರಲಿಲ್ಲ. ಹಾಲಿ ಅಸೆಂಬ್ಲಿ ಮೆಂಬರಾದ ಲಾಯರ್ ಮೇಲಗಿರಿಗೌಡರಿಂದ ಬಂತು; ಗ್ರಾಮದ ಯಜಮಾನ್ ತಿರುಮಲೇಗೌಡರ ಮಗನಿಂದಲೇ ಬಂತು. ಅವರು ಅಸೆಂಬ್ಲಿ ಮೆಂಬರಾಗಿದ್ದಾರೆ. 'ಎಲ್ಲ ಊರಿನಲ್ಲೂ ದೇವಸ್ಥಾನಕ್ಕೆ ಹರಿಜನರನ್ನು ಸೇರಿಸಿಯಾಗಿದೆ. ನಿಮ್ಮೂರ ಗುಡಿ ಇಷ್ಟು ಪ್ರಸಿದ್ಧವಾದದ್ದು. ಅಲ್ಲಿ ಪ್ರವೇಶವಾಗಬೇಡವೆ?' – ಎಂದು ಮುಖ್ಯಮಂತ್ರಿಗಳೇ ಖುದ್ದು ಇವರನ್ನು ಕರೆಸಿ ಕೇಳಿದರಂತೆ. 'ನಾನು ಪ್ರವೇಶ ಮಾಡ್ಸುಸ್ತೀನಿ' – ಎಂದು ಅವರಿಗೆ ಮಾತುಕೊಟ್ಟು ಇವರು ಊರಿಗೆ ಬಂದಿದ್ದಾರೆ. 'ನಮ್ಮ ಗೌಡಿಕೆ ಮರ್ವಾದಿ ಹಾಳು ಮಾಡ್ದೆ ನನ್ ಮಗನೆ' – ಎಂದು ದೊಡ್ಡ ಯಜಮಾನರು ಮಗನನ್ನು ದಾಕ್ಷಿಣ್ಯವಿಲ್ಲದೆ ಖಂಡಿಸಿದರು. ತಂದೆಗೆ ಉತ್ತರ ಹೇಳುವುದಕ್ಕೆ ಮಗನಿಗೆ ತಿಳಿಯಲಿಲ್ಲ. 'ಗಾಂಧೀ ಮಹಾತ್ಮರ ಆಶ್ರಮದಲ್ಲಿ....' – ಎಂದು ಬಾಯಿ ತೆಗೆದರು. 'ಯಾವನೋ ಜಾತಿ ಬುಟ್ಟ ಅಂತ ನೀನ್ ಬುದ್ಧೀ ಏನ್ಲಾ?' – ಎಂದು ಅವರು ಉರಿದೆದ್ದರು. ಈ ವಿಷಯದಲ್ಲಿ ತಂದೆ ಮಗನಿಗೆ ಖಂಡಿತ ಜಗಳವಾಗುತ್ತೆ; ಪಾಳೆಯಗಾರರ ಮನೆ ಒಡೆದುಹೋಗುತ್ತೆ; ಎಂ.ಎಲ್.ಎ. ಮೇಲಗಿರಿಗೌಡರು ತಮ್ಮ ಪಾಲು ತಗಂಡು ಬೆಂಗಳೂರಿಗೆ ಹೊರಟುಹೋಗ್ತಾರೆ – ಎಂದು ಊರ ಜನಗಳು ಏನೇನೋ ಕನಸು ಕಂಡರು. ಆದರೆ ಹಾಗಾಗಲಿಲ್ಲ.

ಮೇಲಗಿರಿಗೌಡರು ಊರಿನ ಹತ್ತು ಪ್ರಮುಖರನ್ನು ಕರೆಸಿಕೊಂಡರು. ಸುತ್ತ ಅನೇಕ ಗ್ರಾಮಗಳ ಹಲವು ಮುಖಂಡರನ್ನೂ ಕಂಡು ಮಾತನಾಡಿದರು. 'ಚೀಫ್ ಮಿನಿಸ್ಟರಿಗೆ ಮಾತು ಕೊಟ್ಟಿದೀನಿ. ನಾನು ಮಾತು ಕೊಡದಿದ್ರೆ ಅವರು ಪೋಲೀಸು ಕಳುಸ್ತಿದ್‌ರು. ಡೆಲ್ಲಿಯಿಂದ ಮಿಲಿಟರಿ ಬರ್ತಿತ್ತು. ಕೊನೆಗೆ ದೇವಸ್ಥಾನವನ್ನೂ ಮಿಲಿಟರಿಯೋರು ತಗಾತಿದ್ರು. ಒಂದು ದಿನ ಅವರು ಒಳಗೆ ಹೋಗಿ ಬಂದ್‌ರೆ ಏನಾಯ್ತದೆ? ಪುಣ್ಯಾ ಮಾಡ್ಕಾಬೌದು. ಆಮ್ಯಾಲೇನು ಅವ್ರುನ್ನ ಸೇರಿಸ್ಬೇಕು ಅಂತ ಇಲ್ಲ' – ಎಂದು ವಿನಂತಿಸಿಕೊಂಡರು. ಮುಖಂಡರಲ್ಲಿ ಕೆಲವರು, ಕಾಲ ಬದಲಾಯಿಸುತ್ತಿದೆ ಎಂಬುದನ್ನು ಒಪ್ಪಿಕೊಂಡರು. ಅಂತೂ ಸದ್ಯದಲ್ಲಿ ತಿರುಮಲಾಪುರದ ಹೊಲೆಯ ಮಾದಿಗರನ್ನು ದೇವಸ್ಥಾನಕ್ಕೆ ಸೇರಿಸಬಹುದೆಂದು ಒಪ್ಪಿಗೆಯಾಯಿತು.

ಹದಿನೈದು ದಿನದ ನಂತರ ಒಂದು ಶನಿವಾರ ಕಾರ್ಯಕ್ರಮ ನಿಶ್ಚಯವಾಯಿತು. ಎಂ.ಎಲ್.ಎ. ಮೇಲಗಿರಿಗೌಡರು ಕಾರ್ಯಕ್ರಮಕ್ಕೆ ಬೆಂಗಳೂರಿನಿಂದ ಪತ್ರಿಕಾ ಪ್ರತಿನಿಧಿಗಳನ್ನು ಕರೆದುಕೊಂಡು ಬಂದರು. ಹರಿಜನರ ಪ್ರತಿನಿಧಿ ಬೆಟ್ಟಯ್ಯನವರು ಎಲ್ಲರನ್ನೂ ಶುಚಿಯಾಗಿ ಕರೆತರುವ ಜವಾಬ್ದಾರಿ ವಹಿಸಿ

ಕೊಂಡರು. ಈ ಪಾಪಿ ಘಟನೆಯನ್ನು ಕಣ್ಣಿಂದ ನೋಡಲಾರದೆ ಗ್ರಾಮದ ಬಹು ಭಾಗ ಜನ ಮನೆಯಲ್ಲೇ ಉಳಿದರು. ಸ್ಕೂಲಿಗೆ ರಜ ಕೊಡಿಸಿ ಮೇಷ್ಟರು ಮತ್ತು ವಿದ್ಯಾರ್ಥಿಗಳು ಪ್ರೇಕ್ಷಕರಾಗಿ ಬರುವಂತೆ ಮಾಡಲಾಯಿತು. ಊರಿನ ಹರಿಜನ ಕಾಲೋನಿಯೇ ಅಲ್ಲದೆ ಹತ್ತಿರದ ಕೆಲವು ಹಳ್ಳಿಗಳ ಹರಿಜನರನ್ನೂ ಕರೆಸಿದ್ದರು. ಎಲ್ಲರೂ ಬೆಳಗ್ಗೆ ಸ್ವಾಮಿ ಹುಟ್ಟಿದ ಸ್ವಲ್ಪ ಹೊತ್ತಿಗೆ ಗುಡಿಯ ಪಕ್ಕದ ತೂಬಿನ ಕಾಲುವೆಗೆ ಬಂದು ಸಾಲಿಗೆ ಇಳಿದು ಬೆಣಚುಕಲ್ಲಿನಿಂದ ಮೈ ಕೆರ್ಕಂಡು, ಒಬ್ಬರ ಬೆನ್ನನ್ನು ಮತ್ತೊಬ್ಬರು ಕೆರೆಸಿಕೊಂಡು ಮಡಿ ಉಟ್ಟರು. ಹೆಂಗಸರು ಮಕ್ಕಳಿಗೂ ಮಡಿಯಾಯಿತು. ಗಂಡಸರು ಹೆಂಗಸರೆಲ್ಲ ಹಣೆಗೆ ಬಳಪದ ಕಲ್ಲು ತೇಯ್ದು ವಿಭೂತಿಪಟ್ಟೆ ಬಳಿದುಕೊಂಡರು. ಖಾದಿ ಕೋಟು ಹಾಕಿ ತಲೆಗೆ ಗಾಂಧಿಟೋಪಿ ಧರಿಸಿ ಪತ್ರಿಕಾ ಪ್ರತಿನಿಧಿಗಳನ್ನು ಕರೆದುಕೊಂಡು ಬಂದ ಮೇಲಗಿರಿಗೌಡರು ಹರಿಜನರನ್ನೆಲ್ಲ ಗುಡಿಯ ಮುಂಭಾಗದಲ್ಲಿ ನಿಲ್ಲಿಸಿ, ಮಧ್ಯೆ ಬೆಟ್ಟಯ್ಯನ ಜೊತೆ ತಾವೂ ನಿಂತು ಫೋಟೋ ತೆಗೆಸಿಕೊಂಡರು. ಪತ್ರಿಕೆಯವರು ಕೆರೆ, ಏರಿ, ದೇವ ಸ್ಥಾನದ ಹಿಂಭಾಗಗಳ ಫೋಟೋಗಳನ್ನು ತೆಗೆದುಕೊಂಡರು. ಮೊದಲು ಗುಡಿಯ ಮುಖ್ಯ ಯಜಮಾನರಾಗಿ ಮೇಲಗಿರಿಗೌಡರು ಹರಿಜನ ಮುಖ್ಯರಾದ ಬೆಟ್ಟಯ್ಯ ನವರೊಡನೆ ಪ್ರವೇಶ ಮಾಡಿ ಒಳಗೆ ಹೋಗಿ ಸ್ವಾಮಿಯ ದರ್ಶನಮಾಡಿ ತೀರ್ಥ ಪ್ರಸಾದ ತೆಗೆದುಕೊಳ್ಳುವುದು, ಅನಂತರ ಉಳಿದವರೆಲ್ಲ ಒಬ್ಬರ ಹಿಂದೆ ಒಬ್ಬರು ಸಾಲಿಗೆ ಹೋಗಿ ದರ್ಶನ ಮಾಡಿಕೊಂಡು ತೀರ್ಥ ತೆಗೆದುಕೊಳ್ಳುವುದೆಂದು ವ್ಯವಸ್ಥೆ ಯಾಯಿತು.

ಗುಡಿಗೆ ಹೊಲೆಯ ಮಾದಿಗರ ಪ್ರವೇಶದ ಬಗೆಗೆ ವೆಂಕಟರಮಣಯ್ಯನವರು ಸ್ವಲ್ಪವೂ ಸಮ್ಮತಿಸಿರಲಿಲ್ಲ. ದೊಡ್ಡ ಗೌಡರ ಮನೆಗೆ ಹೋಗಿ ತಮ್ಮ ಹಿಂದಿನ ಸಹಪಾಠಿ ಮೇಲಗಿರಿಗೌಡರನ್ನೇ ಪ್ರತ್ಯೇಕ ಕಂಡು ಇದನ್ನು ಹೇಗಾದರೂ ಮಾಡಿ ತಪ್ಪಿಸುವಂತೆ ಕೇಳಿದ್ದರು. 'ಮಾಡಬಾರದ್ದು ಮಾಡಿದರೆ ಊರಿಗೆ ಆಗಬಾರದ್ದು ಆಗುತ್ತೆ. ನೀನೇನೋ ತುಮಕೂರು ಬೆಂಗಳೂರಲ್ಲಿರ್ತಿ. ಇಲ್ಲಿರುವ ನಾವು, ನಿನ್ನ ತಂದೆ ತಾನೇ ನರಳಬೇಕಾದೋರು?' – ಎಂದು ವಾದ ಮಾಡಿದ್ದರು.

'ಮುಖ್ಯಮಂತ್ರಿಗಳಿಂದಲೇ ಬಂದದೆ. ತಾಲ್ಲೂಕಿನ ಎಂ.ಎಲ್.ಎ. ಅಂತ ನನ್ನನ್ನ ಮುಂದೆ ಬಿಟ್ಟಿದಾರೆ. ನಾನು ವಲ್ಲೆ ಅಂದ್‌ರೆ ಮಿಲಿಟರಿ ಕರುಸ್ತಾರೆ. ಗುಡಿ ಪೂಜಾರಿಯಾಗಿ ನೀವು ಬ್ಯಾಡ ಅಂದ್‌ರೆ ಪೂಜಾರಿಕೆ ಕಿತ್ತುಹಾಕ್ತಾರೆ. ಕಾಲ ಬದಲಾಯಿಸಿದೆ. ಏನು ಮಾಡೂದು?' – ಎಂಬ ಅವರ ಮಾತಿಗೆ ಇವರು ಪ್ರತಿಹೇಳುವಂತಿರಲಿಲ್ಲ. ಈ ಪೂಜೆಯನ್ನೇ ಬಿಟ್ಟುಬಿಡೋಣವೆಂಬ ಯೋಚನೆ ಏನೋ ಬಂತು. ಆದರೆ ಇಷ್ಟೊಂದು ಇನಾಮತಿ ಜಮೀನು ಹ್ಯಾಗೆ ಬಿಡೂದು

ಎಂಬ ಆಶೆಯೊಂದು ಕಡೆ. ಮೇಲಗಿರಿಯನ್ನು ಮನಸ್ಸಿನಲ್ಲೇ ಬೈದುಕೊಂಡು ಮನೆಗೆ ಬರುವಾಗ ಎದುರು ಮನೆಯ ಕುಪ್ಪಣ್ಣಯ್ಯಂಗಾರರು ಸಿಕ್ಕಿ ಹೇಳಿದರು: 'ಚೀಫ್ ಮಿನಿಷ್ಟರು ಅಂತ ಮೇಲಗಿರಿ ಆಂತಾನೆ. ಒಳವಿಷಯ ಬ್ಯಾರೆ ಇದೆ. ಈಗ ಹೊಲೇರು ಮಾದಿಗರೆಲ್ಲ ಓಟು ಕೊಡೂ ಅಧಿಕಾರ ಬಂದಿದೆಯಲ್ಲ. ಮುಂದಿನ ಎಲೆಕ್ಷನ್ನಿನಲ್ಲೂ ಅವರ ಓಟು ಸಿಕ್ಕಿ ತಾನು ಗೆಲ್ಲಬೇಕು ಅಂತ ಈಗಿನಿಂದಲೇ ಅವನು ಹಿಕ್‌ಮತ್ ಮಾಡ್ತಿದಾನೆ.'

ಅಂತೂ ವೆಂಕಟರಮಣಯ್ಯನವರು ಮತ್ತೆ ಏನೂ ಮಾಡಲಿಲ್ಲ. ಪಾಪಪುಣ್ಯ ಏನಿದ್ದರೂ ಮಾಡಿದವರಿಗೆ, ಮಾಡಿಸಿದವರಿಗೆ. ನಾನು ಎಷ್ಟಾದ್ದರೂ ಪೂಜಾರಿ ಎಂದುಕೊಂಡು ಆ ದಿನ ಪೂಜೆಗೆ ಬಂದರು. ಮೊದಲು ಮೇಲಗಿರಿ ಮತ್ತು ಬೆಟ್ಟಯ್ಯ ಜೊತೆಯಲ್ಲಿ ಒಳಗೆ ಬಂದರು. ಬೆಂಗಳೂರಿನಿಂದ ಬಂದಿದ್ದ ಪೇಪರಿನವರು ಝಿಲಕ್ ಝಿಲಕ್ ಅಂತ ಬೆಳಕು ಎರಚಿ ಅವರಿಬ್ಬರ ಫೋಟೋ ತೆಗೆದರು. ಮುಂದಿದ್ದ ತಮ್ಮನ್ನು ಸೇರಿಸಿ ದೇವರ ಫೋಟೋವನ್ನೂ ತೆಗೆದರು. ಅವರಿಬ್ಬರಿಗೂ ತೀರ್ಥ ಕೊಡುವ ಫೋಟೋ ಸಹ ಆಯಿತು. ಅನಂತರ ಒಬ್ಬೊಬ್ಬರಾಗಿ ಎಲ್ಲರದೂ ಪ್ರವೇಶ. ಇವರು ಎರಡು ಬಿಂದಿಗೆ ನೀರು ತಂದು ಕೊಳದಪ್ಪಲೆಗೆ ಸುರಿದು, ಮೇಲೆ ಎರಡು ಚೆಂಬು ಹಾಲು ಹಾಕಿ ಎಂಟು ಅಚ್ಚು ಬೆಲ್ಲ ಮುಳುಗಿಸಿ, ಒಂದು ಗೊನೆ ಬಾಳೆಹಣ್ಣು ಕಿವಿಚಿ, ಮೇಲೆ ಒಂದಿಷ್ಟು ತುಳಸೀಸೊಪ್ಪು ತರಚಿ ಹಾಕಿ ಪಂಚಾಮೃತ ಮಾಡಿದ್ದರು. ಅವತ್ತಿನ ಪೂಜೆಯ ಖರ್ಚೆಲ್ಲ ಮೇಲಗಿರಿಯದು. ಒಬ್ಬೊಬ್ಬರಾಗಿ ಒಳಗೆ ಬಂದವರಿಗೆಲ್ಲ ಒಂದೊಂದು ಉದ್ಧರಣೆ ತೀರ್ಥ ಕೊಡುತ್ತ ನಿಂತರು. ಒಳಗೆ ಬಂದ ಒಬ್ಬೊಬ್ಬ ಹರಿಜನರ ಮುಖದಲ್ಲಿ ಒಂದೊಂದು ಥರದ ಭಾವ. ಗರ್ಭಗುಡಿಯ ಬಾಗಿಲಿನ ತನಕ ಹೋದರೆ ದೇವರು ಏನಾದರೂ ಮಾಡೀತೆಂದು ಹೆದರಿ ಕೆಲವರು ಕಂಬದ ಹತ್ತಿರದಿಂದಲೇ ಹಿಂತಿರುಗಿದರು. ತೀರ್ಥವನ್ನು ಬಾಯಿಗೆ ಹಾಕಿಕೊಂಡು, 'ವೈನಾಗೈತೆ' ಎಂದು ನಾಲಿಗೆ ಚಪ್ಪರಿಸಿದವರು ಕೆಲವರು.

ಸಾಲಾಗಿ ಒಬ್ಬರ ಹಿಂದೆ ಒಬ್ಬರು ಬರುತ್ತಿರುವಾಗ ಮಾತಂಗಿ ವೆಂಕಟರಮಣಯ್ಯನವರ ಕಣ್ಣಿಗೆ ಬಿದ್ದಳು. ಕಂಕುಳಲ್ಲಿ ಎರಡೂವರೆ ಮೂರು ವರ್ಷದ ಗಂಡು ಮಗು. ಹಳದಿ ಅಂಚಿನ ಕರಿಯ ಸೀರೆಯನ್ನುಟ್ಟಿದ್ದಾಳೆ. ತನ್ನ ಜಾತಿಯ ಉಳಿದ ಎಷ್ಟೋ ಜನ ಹೆಂಗಸರಂತಲ್ಲದೆ ರವಿಕೆಯನ್ನೂ ತೊಟ್ಟಿದ್ದಾಳೆ. ಹುಡುಗನಿಗೆ ಷರಟು ಪರಟು ಹಾಕಿಲ್ಲ. ಅದರ ಮೈಗೂ ಬರುವಂತೆ ತನ್ನ ಸೀರೆಯ ಸೆರಗನ್ನು ಹೊದ್ದಿಸಿಕೊಂಡಿದ್ದಾಳೆ. ಸ್ವಲ್ಪ ಹೊತ್ತಿನಲ್ಲಿ ಮಡಿ ಉಟ್ಟಿದ್ದುದರಿಂದ ಅವಳ ಮತ್ತು ಹುಡುಗನ ತಲೆಯ ಕೂದಲು ಒದ್ದೆಯಾಗಿದೆ. ಆದರೆ ಮುಖ-

ಕಟ್ಟೆನಲ್ಲಿ ವೆಂಕಟೇಶ ಮೂರು ವರ್ಷದ ಮಗುವಾಗಿದ್ದಾಗ ಇದ್ದಂತೆಯೇ ಇದೆ. ವೆಂಕಟರಮಣಯ್ಯನವರ ಮೈ ಬೆವರಿತು. ಮಾತಂಗಿ ತನ್ನ ಪಾಡಿಗೆ ತಾನು ಕತ್ತು ಬಗ್ಗಿಸಿಕೊಂಡು ನಡೆದು ಬರುತ್ತಿದ್ದಾಳೆ. ಅವಳಿಗಿಂತ ಹಿಂದೆ, ಮುಂದೆ, ಬರುವವರೆಲ್ಲ ದೇವರನ್ನು ನೋಡುತ್ತಾ ಹೆಜ್ಜೆ ಇಡುತ್ತಿದ್ದರೆ ಇವಳ ದೃಷ್ಟಿ ನೆಲದ ಕಡೆಗಿದೆ. ಅವರು ಎಲ್ಲರ ಕೈಗೂ ಯಾಂತ್ರಿಕವಾಗಿ ಒಂದೊಂದು ಉದ್ಧರಣೆ ತೀರ್ಥ ಹಾಕುತ್ತಿದ್ದರು. ಆದರೆ ತಮ್ಮ ದೃಷ್ಟಿಯನ್ನು ಮಾತಂಗಿ ಮತ್ತು ಮಗುವಿನಿಂದ ಬೇರ್ಪಡಿಸುವುದು ಸಾಧ್ಯವಾಗಲಿಲ್ಲ. ಮುಂದಿನವರು ಹೆಜ್ಜೆ ಹಾಕುತ್ತಿದ್ದರು. ಹೊರಬಾಗಿಲಿನ ಹತ್ತಿರ ಇದ್ದ ಮೇಲಗಿರಿಗೌಡರು, 'ಯಲ್ಲಾ ಬ್ಯಾಗ ಬ್ಯಾಗ ನಡೀರಿ' ಎನ್ನುತ್ತಿದ್ದರು. ಎಂಟುಹತ್ತು ಜನರಾದ ಮೇಲೆ ಮಾತಂಗಿ ಇವರ ಹತ್ತಿರಕ್ಕೆ ಬಂದಳು. ಅವಳು ದೇವರನ್ನು ನೋಡಿದಳೋ ಇಲ್ಲವೊ. ಇವರನ್ನೂ ಸರಿಯಾಗಿ ನೋಡಲಿಲ್ಲ. ಸುಮ್ಮನೆ ತನ್ನ ಬಲಗೈ ನೀಡಿ ದೋಣಿಯಂತೆ ಮಡಿಸಿದಳು. ಉದ್ಧರಣೆ ಹಿಡಿದಿದ್ದ ಕೈ ನಡುಗುತ್ತಿತ್ತು. ತುಂಬಿ ಒಂದು ಉದ್ಧರಣೆ ತೀರ್ಥ ಹಾಕಿದರು. ಅವಳು ಮುಂದೆ ಹೆಜ್ಜೆ ಹಾಕುವುದರಲ್ಲಿದ್ದಳು. ಅವಳ ಹಿಂದಿದ್ದ ಹೆಂಗಸು, 'ಉಡುಗ್ಗೆ ವಸಿ ಬಿಡಿಸ್ಕಳಗ್ಯಾ' ಎಂದಳು. ಜ್ಞಾಪಕ ಬಂದವರಂತೆ ಅವರು ಅವಳ ಕೈಗೆ ಇನ್ನೊಂದು ಉದ್ಧರಣೆ ಹಾಕಿದರು. ಮುಂದೆ ನಡೆದ ಮಾತಂಗಿ ತನ್ನ ಕೈಯನ್ನು ಹುಡುಗನ ತುಟಿಗೆ ತಗುಲಿಸಿ ಅರ್ಧವನ್ನು ಕುಡಿಸಿ ಉಳಿದುದನ್ನು ತಾನು ಕುಡಿದಳು. ಅವರ ದೃಷ್ಟಿ ಆ ಕಡೆಗೇ ಇತ್ತು. ಒಂದು ನಿಮಿಷ ಅಲ್ಲಿ ಅವಳು ಗುಡಿಯಿಂದ ಹೊರಗೆ ಹೊರಟುಹೋದಳು.

ಮಾದಿಗರು ಗರ್ಭಗುಡಿಯ ಬಾಗಿಲಿಗೆ ಬಂದು ತೀರ್ಥ ತೆಗೆದುಕೊಳ್ಳುವ ಧರ್ಮಚ್ಯುತಿಯ ಬಗೆಗೆ ವ್ಯಸ್ತವಾಗಿದ್ದ ಅವರ ಮನಸ್ಸು ಈಗ ಮಾತಂಗಿಯ ನೆನಪಿನಿಂದ ತುಂಬಿಹೋಯಿತು. ಬರೀ ಅವಳ ನೆನಪಲ್ಲ. ಅವಳ ಸೊಂಟವನ್ನು ಏರಿ ಬಂದು ತಮಗೆ ದರ್ಶನ ಕೊಟ್ಟ ಹುಡುಗನ ಚಿತ್ರವು ಮನಸ್ಸನ್ನು ಕಲಕಿಬಿಟ್ಟಿತು. ಸಾಲಿಗೆ ನಿಂತು ದೇವರ ದರ್ಶನ ಪಡೆದು ತೀರ್ಥ ಸ್ವೀಕರಿಸುತ್ತಿದ್ದವರ ಕಡೆಗೆ ಗಮನ ಹೋಗಲಿಲ್ಲ.

ಹನ್ನೊಂದು ಗಂಟೆಯ ಹೊತ್ತಿಗೆ ಎಲ್ಲರ ಪ್ರವೇಶವೂ ಮುಗಿಯಿತು. ನಂತರ ಬೆಟ್ಟಯ್ಯನವರು ತಮ್ಮ ಕಾಲೋನಿಗೆ ನಡೆದರು. ಉಳಿದವರೆಲ್ಲ ಪ್ರವೇಶಮಾಡಿ ಗುಡಿಯಿಂದ ಹೊರಗೆ ಬಂದಬಂದಂತೆ ಕೂಲಿ ಕುಂಬಳಿಗಳಿಗೆ ಹೋಗುತ್ತಿದ್ದರು. ಪತ್ರಿಕೆಯವರೊಡನೆ ಮೇಲಗಿರಿಗೌಡರು ಊರೊಳಕ್ಕೆ ಹೋದರು. ಹತ್ತು ನಿಮಿಷದಲ್ಲಿ ಊರೊಳಕ್ಕೆ ಸುದ್ದಿ ಮುಟ್ಟಿತು. ಗ್ರಾಮಮುಖ್ಯರೆಲ್ಲ ಗುಡಿಯ ಕಡೆಗೆ ಹೊರಟರು. ಕೆಲವರ ಕೈಯಲ್ಲಿ ದಪ್ಪ ದಪ್ಪ ತಂಬಿಗೆ ಹಾಲು ಮೊಸರುಗಳು. ಮತ್ತೆ

ಕೆಲವರು ಬುಟ್ಟಿಗಟ್ಟಳೆ ಹೂವು, ಉಳಿದವರು ಯಥಾಶಕ್ತಿ ಬಾಳೆಹಣ್ಣು, ಸುಲಿದ ತೆಂಗಿನಕಾಯಿ, ಬೆಲ್ಲದ ಅಚ್ಚುಗಳನ್ನು ಹಿಡಿದು ಬಂದರು. ದೊಡ್ಡ ಪಟೇಲ್ ತಿರುಮಲೇಗೌಡರು ಇಬ್ಬರು ಆಳುಗಳ ಕೈಲಿ ಒಂದು ತಂಬಿಗೆ ಹಸುವಿನ ಗಂಜಳ, ಒಂದು ತೊಪ್ಪೆ ಹಸುವಿನ ಸಗಣಿ, ಒಂದು ಹಿತ್ತಾಳೆ ಬಿಂದಿಗೆ ಹಾಲು, ಒಂದು ದೊಡ್ಡ ತಟ್ಟೆಯ ತುಂಬ ಕಲ್ಲುಸಕ್ಕರೆಗಳನ್ನು ಹೊರೆಸಿಕೊಂಡು ಬಂದರು. ಮುಂದೆ ಯಾವ ಶಾಸ್ತ್ರ ಮಾಡಬೇಕೆಂಬುದು ವೆಂಕಟರಮಣಯ್ಯನವರಿಗೂ ಗೊತ್ತು. ಅವರೆಲ್ಲ ಕೂಡಿ ಮೊದಲೇ ನಿರ್ಧರಿಸಿದ್ದರು.

ಹತ್ತಿರದ ತೂಬಿನ ಕಾಲುವೆಗೆ ಹೋಗಿ ಅವರು ಸ್ನಾನಮಾಡಿ ಯಜ್ಞೋಪವೀತ ಬದಲಾಯಿಸಿ ಪಂಚಗವ್ಯ ತೆಗೆದುಕೊಂಡರು. ಸ್ಮಾರ್ತ, ವೈಷ್ಣವ, ಶ್ರೀವೈಷ್ಣವ, ಗಂಗಡಿಕಾರ, ದಾಸಗೌಡ, ಉಪ್ಪಾರ, ಮಗ್ಗ, ಸಾತಾನಿ, ಬಣಜಿಗ, ನೊಣಬ ಆದಿ ಸಕಲರೂ ಸೇರಿ ದೊಡ್ಡ ಪಟೇಲ್ ತಿರುಮಲೇಗೌಡರ ಮುಂದಾಳುತನದಲ್ಲಿ ಕಾಲುವೆಯಿಂದ ನೂರು ನೂರು ಬಿಂದಿಗೆ ನೀರು ತಂದು ದೇವಸ್ಥಾನವನ್ನು ಶಿಖರ ದಿಂದ ಪೌಳೀಗೋಡೆಯತನಕ, ಕಂಬದಿಂದ ನೆಲದತನಕ ತೊಳೆದರು. ಒಂದು ಗಂಟೆಯ ಹಿಂದೆ ಗುಡಿಯನ್ನು ಪ್ರವೇಶಿಸಿ ತೀರ್ಥ ಕುಡಿದು ಬಂದಿದ್ದ ಹರಿಜನರಲ್ಲಿ ಕೆಲವರು ಹತ್ತಿರದ ಗದ್ದೆಗಳಲ್ಲಿ ಕೆಲಸ ಮಾಡುತ್ತಿದ್ದರು. ನೂರಾರು ಜನ ಸೇರಿ ಗುಡಿಯ ಶಿಖರವನ್ನೆಲ್ಲ ತೊಳೆಯುವುದನ್ನು ನೋಡಿ ಅವರಿಗೆ ಆಶ್ಚರ್ಯ. ಆದರೆ ತಮ್ಮ ಪ್ರವೇಶದಿಂದ ಆದ ಮೈಲಿಗೆಯನ್ನು ತೊಳೆಯುತ್ತಿದ್ದಾರೆಂದು ಅನೇಕರಿಗೆ ತಿಳಿಯಲಿಲ್ಲ. ತಿಳಿದವರು ಕೂಡ ಅದನ್ನು ತಮಗೆ ಆದ ಅಪಮಾನವೆಂದು ಭಾವಿಸ ಲಿಲ್ಲ.

ವೆಂಕಟರಮಣಯ್ಯನವರು ಇಡೀ ಗುಡಿಗೆ ಪುಣ್ಯಾಃವಾಚನ ಮಾಡಿ ಮಾವಿನ ಸೊಪ್ಪಿನಿಂದ ಶುದ್ಧ ಜಲವನ್ನು ಪ್ರೋಕ್ಷಿಸಿದರು. ದೊಡ್ಡ ಗೌಡರು ಹೇಳಿದಂತೆ ಅಲ್ಲಿದ್ದವರೆಲ್ಲ ಪಂಚಗವ್ಯ ತೆಗೆದುಕೊಂಡಮೇಲೆ ದೇವರಿಗೆ ಪಂಚಾಮೃತ ಅಭಿಷೇಕ ಮಾಡಿದರು. ರಸಾಯನದ ನೈವೇದ್ಯ ಮಾಡಿ ಮಂಗಳಾರತಿ ಪ್ರಸಾದ ವಿನಿಯೋಗ ವಾದ ಮೇಲೆ ಎಲ್ಲರೂ ಊರಿಗೆ ಬಂದರು.

ಮರುದಿನ ಬೆಳಗ್ಗೆ ಹತ್ತು ಗಂಟೆಗೆ ಊರಿಗೆ ಬೆಂಗಳೂರಿನ ವರ್ತಮಾನ ಪತ್ರಿಕೆ ಬಂತು. ಅದರ ಐದನೆಯ ಪುಟದಲ್ಲಿ, ತಿರುಮಲಾಪುರದ ಪ್ರಾಚೀನ ದೇವಾಲಯಕ್ಕೆ ಗ್ರಾಮ ಮುಖಂಡರ ಸಮಕ್ಷಮ ಎಂ.ಎಲ್.ಎ. ಮೇಲಗಿರಿ ಗೌಡರ ನೇತೃತ್ವದಲ್ಲಿ ಹರಿಜನರ ಪ್ರವೇಶದ ಸುದ್ದಿಯನ್ನು ದಪ್ಪ ಅಕ್ಷರದಲ್ಲಿ ಮುದ್ರಿಸಿತ್ತು. ಗರ್ಭಗುಡಿಯ ಬಾಗಿಲಿನಲ್ಲಿ ಮೇಲಗಿರಿಗೌಡರು ಮತ್ತು ಹರಿಜನರ ಮುಖಂಡ ಬೆಟ್ಟಯ್ಯನವರು ಜೊತೆಯಲ್ಲಿ ನಿಂತು ತೀರ್ಥ ತೆಗೆದುಕೊಳ್ಳುವ

ಚಿತ್ರವೂ ಇತ್ತು. ಮೇಲಗಿರಿಗೌಡರ ಮಾರ್ಗದರ್ಶನದಲ್ಲಿ ಹೇಗೆ ಇಡೀ ತಾಲ್ಲೂಕು ಆಧುನಿಕವಾಗುತ್ತಿದೆ ಎಂಬ ಬಗೆಗೆ ಒಂದೂವರೆ ಕಾಲಂ ಬರಹವೂ ಇತ್ತು.

೭

ಇದು ನಡೆದು ಹತ್ತು ವರ್ಷಗಳಾಗಿವೆ. ಈ ಅವಧಿಯಲ್ಲಿ ಎಷ್ಟೋ ಬದಲಾವಣೆಗಳು ನಡೆದಿವೆ. ಬೆಟ್ಟಯ್ಯನ ಮಗ ಮೋಹನದಾಸ ಬಿ.ಎ. ಫೇಲಾಗಿ ತುಮಕೂರಿನಲ್ಲಿ ಬೂಟು ಅಂಗಡಿಯ ಮಾಲೀಕನಾಗಿ ಸಂಪಾದನೆ ಮಾಡುತ್ತಿದ್ದಾನೆ. ಅವನ ತಂಗಿ ಮೀರಾ ಹೈಸ್ಕೂಲು ಓದಿದ್ದಾಳೆ. ವೆಂಕಟೇಶ ಇಂಟರ್ ಓದಿ, ಬಿಟ್ಟು, ಅವನಿಗೆ ಮದುವೆಯಾಗಿ ಈಗ ಗಂಡು ಮಗುವಾಗಿದೆ. ಸತ್ಯ ಎಂ.ಎ. ಓದಿ ಹೀಗೆ ಮಾಡಿದಳು.

ತಾವು ಕಲಿತಿದ್ದ ಸಂಸ್ಕೃತ, ಮಂತ್ರ, ವೇದಾಂತಗಳನ್ನು ವೆಂಕಟರಮಣಯ್ಯನವರು ತಮ್ಮ ಇಬ್ಬರು ಮಕ್ಕಳಿಗೂ ಸಮಾನವಾಗಿ ಹೇಳಿಕೊಟ್ಟರು. ಹಾಗೆ ನೋಡಿದರೆ ಶುರುವಿನಲ್ಲಿ ಸತ್ಯಳಿಗೆ ಏನೂ ಕಲಿಸಲಿಲ್ಲ. ವೆಂಕಟೇಶನಿಗೆ ಹೇಳಿಕೊಡುವಾಗ ಕೇಳಿಕೊಂಡಿದ್ದರಿಂದಲೇ ಅವಳು ಕಲಿತುಬಿಡುತ್ತಿದ್ದಳು. ಅವನು ಬಾಯಿಪಾಠ ಮಾಡುವಾಗ ತಪ್ಪನ್ನು ತಿದ್ದುತ್ತಿದ್ದಳು. ಇಷ್ಟೊಂದು ಬುದ್ಧಿಶಕ್ತಿ ಇದೆ. ಹೆಣ್ಣು ಹುಡುಗಿಯಾದರೇನು, ಎಂದು ಅವಳಿಗೂ ಕ್ರಮವಾಗಿ ಹೇಳಿಕೊಡಲು ಪ್ರಾರಂಭಿಸಿದರು. ವೆಂಕಟೇಶನಿಗೂ ಅವಳಿಗೂ ವ್ಯತ್ಯಾಸವಿತ್ತು: ಅವನು, ಹೇಳಿಕೊಟ್ಟದ್ದನ್ನು ಬಾಯಿಪಾಠ ಮಾಡುತ್ತಿದ್ದ. ಅವಳು ಅದರ ಅರ್ಥ ಕೇಳಿ ಪ್ರಶ್ನಿಸುತ್ತಿದ್ದಳು. ಅವನು ಇಂಟರ್ ಓದಲು ತುಮಕೂರಿಗೆ ಹೋಗಿದ್ದ. ಇವಳು ಅದೇ ತಾನೇ ಹೈಸ್ಕೂಲು ಸೇರಿದ್ದಳು. ಅಷ್ಟು ಹೊತ್ತಿಗಾಗಲೇ ಪುರುಷಸೂಕ್ತ ಅವಳಿಗೆ ಬಾಯಿಪಾಠವಾಗಿತ್ತು. ರಾತ್ರಿ ಮಲಗಿದ್ದಾಗ ಅವಳು ಅದರ ಅರ್ಥ ಕೇಳಿದಳು. ಸಹಸ್ರಶೀರ್ಷಃ ಸಹಸ್ರಾಕ್ಷಃ ಸಹಸ್ರಪಾತ್ ಎಂಬ ವರ್ಣನೆಯ ಅರ್ಥವನ್ನು ವಿವರಿಸಿ, ಚತುರ್ವರ್ಣಗಳು ಹುಟ್ಟಿದ ಬಗೆಯನ್ನು ವೆಂಕಟರಮಣಯ್ಯನವರು ಹೇಳತೊಡಗಿದರು:

'ಬ್ರಾಹ್ಮಣೋಽಸ್ಯ ಮುಖಮಾಸೀತ್ ಬಾಹೂ ರಾಜನ್ಯಃ ಕೃತಃ
ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ'

ಅಂದರೆ ಬ್ರಾಹ್ಮಣರು ಈ ಬ್ರಹ್ಮನ ಬಾಯಿಯಿಂದಲೂ ಕ್ಷತ್ರಿಯರು ತೋಳುಗಳಿಂದಲೂ ವೈಶ್ಯರು ತೊಡೆಯಿಂದಲೂ ಶೂದ್ರರು ಕಾಲುಗಳಿಂದಲೂ ಹುಟ್ಟಿದರು – ಎಂಬ ಅರ್ಥ ಹೇಳಿದ ನಂತರ ಅವಳು ಕೇಳಿದಳು: 'ಹಾಗಾದರೆ ಸಾಬರು

ಕ್ರಿಶ್ಚಿಯನ್ನರು ಎಲ್ಲಿಂದ ಹುಟ್ಟಿದರು?'

ಈ ಪ್ರಶ್ನೆಗೆ ವೆಂಕಟರಮಣಯ್ಯನವರಿಗೆ ತಕ್ಷಣ ಉತ್ತರ ಹೊಳೆಯಲಿಲ್ಲ. ಮುಂದೆ ಒಂದು ದಿನ ಚಾತುರ್ವರ್ಣ್ಯಂ ಮಯಾ ಸೃಷ್ಟಂ ಹೇಳುವಾಗಲೂ ಇಂಥ ಪ್ರಶ್ನೆಯನ್ನೇ ಕೇಳಿದಳು: 'ದೇವರು ಈ ನಾಲ್ಕು ಜಾತಿಗಳನ್ನು ಸೃಷ್ಟಿಸಿದ್ದರೆ, ಸಾಬರು ಕ್ರಿಶ್ಚಿಯನ್ನರನ್ನು ಯಾರು ಸೃಷ್ಟಿಮಾಡಿದರು?'

ಪ್ರಶ್ನಿಸುವುದು ಅವಳಿಗೆ ಸಹಜವಾಗಿಯೇ ಬಂದಿತ್ತು. ದೇವರು ದಿಂಡರು, ಮಂತ್ರ ತಂತ್ರ, ಪೂಜೆ ಪುನಸ್ಕಾರಗಳ ಬಗೆಗೆ ಅವಳು ಎಂದೂ ಅಶ್ರದ್ಧೆಪಡುತ್ತಿರಲಿಲ್ಲ; ತಮಾಷೆ ಮಾಡುತ್ತಿರಲಿಲ್ಲ. ಆದರೆ ಹೀಗೆ ಏನಾದರೂ ಕೇಳಿಬಿಡುತ್ತಿದ್ದಳು. ಬರೀ ಶಾಸ್ತ್ರದ ವಿಷಯ ಒಂದರಲ್ಲೇ ಅಲ್ಲ. ಅವಳಿಗೆ ಅಡಿಗೆ ಕಲಿಸಿದವರೂ ತಾವೇ. ಹುಣಿಸೇಹಣ್ಣಿಗಿಂತ ನಿಂಬೇಹಣ್ಣು ಹಿಂಡಿ ತಿಳಿಸಾರು ಮಾಡಿದರೆ ಚೆನ್ನ ಎಂಬುದನ್ನು ಹೇಳಿದರು. ಅವತ್ತು ಚಪ್ಪರಿಸಿ ಕುಡಿಯುವಷ್ಟು ಚೆನ್ನಾಗಿತ್ತು ಸಾರು. ಆದರೆ ದಿನಾ ಅದನ್ನೇ ಹಿಂಡಲು ಎಲ್ಲಿಂದ ತರಬೇಕು? ಒಂದು ದಿನ ಸಂತೆಯಿಂದ ಇನ್ನೂರು ನಿಂಬೆಹಣ್ಣು ತಂದರು – ಉಪ್ಪಿನಕಾಯಿ ಹಾಕಿಬಿಟ್ಟರೆ ದಿನಾ ಚಟ್ನಿ ತಿರುವುವ ಕಷ್ಟ ತಪ್ಪುತ್ತೆ ಅಂತ. ಜೊತೆಗೆ ಮೂಲಂಗಿ ತಂದಿದ್ದರು. ಅವತ್ತಿನ ಬೆಳಗ್ಗೆ ಸ್ಕೂಲಿಗೆ ಹೋಗುವ ಮುನ್ನ ಅವಳೇ ಅಡಿಗೆ ಮಾಡುವಾಗ ಎಂದಳು: 'ಅಪ್ಪ, ಇವತ್ತು ಮೂಲಂಗಿ ಹುಳಿಗೆ ಹುಣಿಸೇಹಣ್ಣಿನ ಬದಲು ನಿಂಬೇಹುಳಿ ಹಿಂಡ್ತೀನಿ.'

'ಮಗೂ, ಹುಳಿಗೆ ಯಾರಾದರೂ ನಿಂಬೆಹಣ್ಣು ಹಿಂಡ್ತಾರೆಯೇ? ತಿಳಿಸಾರಿಗೆ ಹಿಂಡ್ತಾರೆ.'

'ಹಿಂಡಿದರೆ ಏನಾಗುತ್ತೆ?'

ಏನಾಗುತ್ತೆ? ಇಂತಹ ಪ್ರಶ್ನೆಗಳನ್ನು ಅವಳು ಯಾವ ಕಷ್ಟವೂ ಇಲ್ಲದೆ ಕೇಳಿದಾಗ ಅವರಿಗೆ ಕಸಿವಿಸಿಯಾಗುತ್ತಿತ್ತು. 'ಅದು ಯಾವ ಸೀಮೆ ಅಡಿಗೆ ಹೇಳು. ಯಾವುದಕ್ಕೆ ಯಾವುದು ಹಾಕಿದರೆ ಚನ್ನವೋ ಅದೇ ಹಾಕಬೇಕು' – ಎಂದುಬಿಟ್ಟರು. ಸ್ನಾನ ಮಾಡಿ ದೇವಸ್ಥಾನದ ಪೂಜೆಗೆ ಹೋದರು. ವಾಪಸು ಬರುವ ಹೊತ್ತಿಗೆ ಅವಳು ಮನೆಗೆ ಬೀಗ ಹಾಕಿಕೊಂಡು ಸ್ಕೂಲಿಗೆ ಹೋಗಿದ್ದಳು. ತಮ್ಮ ಹತ್ತಿರ ಇದ್ದ ಬೀಗದ ಕೈಯಿಂದ ಬೀಗ ತೆಗೆದು ಇವರು ಮನೆಯಲ್ಲೇ ಇದ್ದರು. ಒಂದು ಗಂಟೆಗೆ ಊಟಕ್ಕೆ ಗಂಟೆ ಹೊಡೆದು ಮಗಳು ಮನೆಗೆ ಬರುವ ಹೊತ್ತಿಗೆ ಎಲೆ ಹಾಕಿ ನೀರು ಇಟ್ಟು ಅಣಿ ಮಾಡಿದ್ದರು. ಮನೆಗೆ ಬಂದು ಕೈಕಾಲು ತೊಳೆದು ಎದುರಿಗೆ ಕುಳಿತ ಅವಳಿಗೆ ಮನೆಯಲ್ಲೇ ಇದ್ದ ಇವರು ಬಡಿಸಿ ತಾವೂ ಇಕ್ಕಿಕೊಂಡು ಕುಳಿತರು. ಹುಳಿಯಲ್ಲಿ ಅನ್ನ ಕಲಸಿ ಬಾಯಿಗಿಟ್ಟುಕೊಳ್ಳುತ್ತಾರೆ –

ಎಷ್ಟೊಂದು ಚನ್ನಾಗಿದೆ: 'ಹುಳಿ ಒಳ್ಳೇ ಫಸ್ಟ್‌ಕ್ಲಾಸಾಗಿದೆ ಕಣೆ ಮಗು, ಏನು ತಿರುವಿ ಹಾಕಿದ್ದೆ?'

'ಏನೂ ಇಲ್ಲ.'

'ಸುಳ್ಳು ಹೇಳ್ತೀಯ. ಮೂಲಂಗಿ ಹುಳಿ ಹೀಗಿರುಲ್ಲ.'

'ಹುಣಿಸೆಹಣ್ಣಿನ ಬದಲು ನಿಂಬೆಹಣ್ಣು ಹಿಂಡಿದ್ದೆ' – ಎಂದು ನಕ್ಕಳು.

ಅವರಿಗೆ ಈಗ ಇಂಥವೇ ಸಣ್ಣಪುಟ್ಟ ಘಟನೆಗಳು ನೆನಪಿಗೆ ಬರುತ್ತಿವೆ. ರೂಢಿ ನಿಜವನ್ನು ಮುಚ್ಚಿಹಾಕುತ್ತೆ ಅಂತ ಅವಳು ಬೆಂಗಳೂರಿನಲ್ಲಿ ಹೇಳಿದ ಮಾತಿನ ಅರ್ಥವೇನು? ಹತ್ತು ಜನ ಮಾಡುತ್ತಾರೆ. ನಮ್ಮ ಅಜ್ಜ ಮುತ್ತಜ್ಜ ಹೀಗೆ ಮಾಡಿದ್ದರು. ಆದುದರಿಂದ ಇದೇ ನಿಜ. ಇದಕ್ಕಿಂತ ಬೇರೆಯಾದುದೆಲ್ಲ ಪಾಪ ಅಂತ ನಮ್ಮ ನಂಬಿಕೆ ಬೆಳೆಯುತ್ತೆ. ಈ ಮಾತುಗಳನ್ನು ಅವರು ಹೊಸತಾಗಿ ಯೋಚಿಸಬೇಕಿರಲಿಲ್ಲ. ಮೈಸೂರಿನಲ್ಲಿ ಓದುವಾಗ ಅವಳು ಪ್ರತಿ ರಜಕ್ಕೂ ಊರಿಗೆ ಬರುತ್ತಿದ್ದಳು. ಬಂದಾಗ ಅಡಿಗೆಮನೆಯ ಕೆಲಸವನ್ನೆಲ್ಲ ತಾನೇ ಮಾಡುತ್ತಿದ್ದಳು. ತಮ್ಮನ್ನಾಗಲಿ ವೆಂಕಟೇಶನನ್ನಾಗಲಿ ಒಂದು ದಿನವೂ ಅಡಿಗೆ ಮನೆಗೆ ಬಿಡುತ್ತಿರಲಿಲ್ಲ. ಅವಳು ಏನೇನು ಓದುತ್ತಿದ್ದಾಳೆಂದು ಅವರೇ ಕೇಳುತ್ತಿದ್ದರು.

ಒಂದು ದಿನ ಹೇಳಿದಳು: 'ಭಗವದ್ಗೀತೇಲಿ ಜ್ಞಾನಯೋಗ ಕರ್ಮಯೋಗ ಭಕ್ತಿಯೋಗಗಳ ಸಮನ್ವಯ ಇದೆಯಲ್ಲ, ಅದರ ನಿಜವಾದ ಕಾರಣ ಬೇರೆ ಇದೆ.'

'ಅದೇನು ಪುಟ್ಟ?'

"ಆಗ ದೈಹಿಕ ಕೆಲಸ ಮಾಡ್ತಿದ್ದ, 'ಶೂದ್ರರು ನಮ್ಮದು ಕೀಳು ಕೆಲಸ, ನಿಮ್ಮದಾದರೆ ಮೇಲು ಕೆಲಸ. ನಾವು ಇದನ್ನ ಮಾಡುಲ್ಲ. ಹೊಲ ಗದ್ದೇಲಿ ಗೇಯಲ್ಲ' ಅಂತಿದ್ದರಂತೆ. 'ನಿಮ್ಮ ಕೆಲಸ ಮಾಡಿದೋರಿಗೂ ಸಮಾನ ಮುಕ್ತಿ ಸಿಕ್ಕುತ್ತೆ. ಇದು ಮೇಲು ಇದು ಕೀಳು ಅಂತ ಯಾವ ಕಸುಬನ್ನೂ ಬಿಡಬಾರದು. ಹಿಂದಿನಿಂದ ಬಂದ ಕುಲಕಸುಬನ್ನ ಬದಲಾಯಿಸಬಾರದು. ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ' – ಅಂತ ಬರೆದರಂತೆ."

'ಇದೆಲ್ಲ ಭಗವದ್ಗೀತೇಲಿ ಹೇಳಿಲ್ಲವಲ್ಲ.'

'ಅದರಲ್ಲಿ ಹೇಳಿಲ್ಲ. ಆದರೆ ಹೀಗೆ ಹೇಳಬೇಕಾದರೆ ಜನಜೀವನದಲ್ಲಿ ಏನು ಕಾರಣವಿರಬಹುದು ಅಂತ ವಿದ್ವಾಂಸರು ಯೋಚನೆ ಮಾಡ್ತಾರೆ. ಹಾಗೆ ಯೋಚನೆ ಮಾಡಿ ತಾನೆ ಹಿಂದಿನ ಕಾಲದ ಚರಿತ್ರೆ ಬರೆಯೋದು?'

ಒಂದು ದಿನ ಅಂದಿದ್ದಳು: 'ಪುರುಷಸೂಕ್ತದಲ್ಲಿ ಇದೆಯಲ್ಲ ಬಾಯಿಯಿಂದ ಬ್ರಾಹ್ಮಣ ಹುಟ್ಟಿದ, ತೋಳಿನಿಂದ ಕ್ಷತ್ರಿಯ ಹುಟ್ಟಿದ ಅಂತ. ಇದೆಲ್ಲ ಆಗಿನ ಸಮಾಜರಚನೆಯ ರೂಪಕವಷ್ಟೆ.'

ಅವಳ ಮಾತುಗಳೆಲ್ಲ ಈಗ ಅವರಿಗೆ ಸ್ಪಷ್ಟವಾಗಿ ನೆನಪಿಗೆ ಬರುತ್ತಿವೆ. ಅವಳು ಹೇಳುತ್ತಿದ್ದ ಅರ್ಥವನ್ನು ಒಪ್ಪಲು ಅವರ ಬುದ್ಧಿಯು ನಿರಾಕರಿಸುತ್ತಿತ್ತು. ಒಪ್ಪಲು ಹೋದರೆ ಅಂತರಂಗದಲ್ಲಿ ತಳಮಳವಾಗುತ್ತಿತ್ತು. ಅವಳಂತೂ ಕಾಲೇಜಿನಲ್ಲಿ ಓದು ವವಳು. ಇಂಗ್ಲಿಷಿನಲ್ಲಿ ಏನೇನಾದರೂ ಬರೆದುಕೊಳ್ಳಲಿ. ಅವಳು ಏನೇನಾದರೂ ಓದಿಕೊಳ್ಳಲಿ. ಏನೋ ಹೆಣ್ಣು ಹುಡುಗಿ, ತುಂಬ ನಂಬರ್ ತಗಂಡಿತ್ತು. ಮುಂದೆ ಓದ್‌ತೀನಿ ಅಂತ ಹಟ ಹಿಡೀತು. ಹೈಸ್ಕೂಲು ಹೆಡ್‌ಮಾಸ್ಟರೇ ಕಳಿಸಿ ಅಂದ್ರು, ಕಳಿಸಿದೆ. ರಜದಲ್ಲಿ ಬಂದಾಗ ಹೇಳುತ್ತೆ. ಕೇಳುಕ್ಕೆ ಚನ್ನಾಗಿರುತ್ತೆ. ಹಾಗಂತ ನಂಬಿದರೆ ಪ್ರಪಂಚ ಉಳಿಯುತ್ತೆಯೆ, ಎಂದು ಸುಮ್ಮನಾಗುತ್ತಿದ್ದರು.

ಕಳೆದ ಹತ್ತು ವರ್ಷಗಳಲ್ಲಿ ಅವರು ಮಾತಂಗಿಯನ್ನು ಹೆಚ್ಚು ಕಡಿಮೆ ಮರೆತೇ ಬಿಟ್ಟಿದ್ದಾರೆ. ಅವಳ ಹುಡುಗ ಹೊನ್ನೂರನನ್ನು ತುಮಕೂರಿನಲ್ಲಿ ಅವರ ಜಾತಿಯ ಹುಡುಗರಿಗೇ ಮಾಡಿರುವ ಹಾಸ್ಟೆಲಿನಲ್ಲಿ ಬಿಟ್ಟಿದ್ದಾರೆ. ಹುಡುಗ ಚನ್ನಾಗಿ ಓದು ತ್ತಂತೆ. ಅವಳಿಗೆ ನಾಲ್ಕೆಕರೆ ಭೂಮಿ ಇದೆ. ಅದರಲ್ಲಿ ಎರಡು ಎಕರೆಯನ್ನು ಹೊಲ ವಾಗಿ ಬಿಟ್ಟುಕೊಂಡು, ಉಳಿದದ್ದರಲ್ಲಿ ಎಂಬತ್ತು ತೆಂಗಿನಮರ ಎಬ್ಬಿಸಿದ್ದಾಳೆ. ಮರ ಫಲ ಕೊಡುತ್ತಿದೆ. ಮಂಗಳೂರು ಹೆಂಚು ಹೊದಿಸಿರುವ ಮೂರು ಅಂಕಣದ ಸ್ವಂತ ಮನೆ ಇದೆ. ಈಗ ಈ ಕಡೆಗೆ ಬೇರೆಯವರ ಭೂಮಿಯಲ್ಲಿ ಕೂಲಿ ಮಾಡಲು ಬರುವುದಿಲ್ಲ. ತನ್ನ ಭೂಮಿಯಲ್ಲೇ ಗೇಯುತ್ತಾಳಂತೆ. ಹೀಗಾಗಿ ಅವಳನ್ನು ನೋಡಿ ವರ್ಷಗಳೇ ಆಗಿಹೋಗಿವೆ. ಜೀವನದಲ್ಲಿ ಇಂಥವೆಲ್ಲ ನಡೆಯುವವೇ. ಕಾಮತೃಷೆಯಾದಾಗ ಜಾತಿ ಏನು ಕಸುಬೇನು? ಚಾಂಡಾಳಿಯೇ ಆಗಬಹುದು. ಋಷಿ ಮುನಿಗಳೇ ಹಾಗೆ ಮಾಡಿದಾರೆ. ನಂತರ ತಪಸ್ಸುಮಾಡಿ ಸಿದ್ಧಿ ಪಡೆದು ಜಗದ್ವಂದ್ಯರಾಗಿದಾರೆ – ಎಂದುಕೊಂಡು ಅವರು ಆ ಘಟನೆಯನ್ನು ಮರೆತಿದ್ದರು. ಘಟನೆಯ ಅಸ್ಪಷ್ಟ ರೂಪವು ಎಂದಾದರೊಮ್ಮೆ ನೆನಪಿನಲ್ಲಿ ತೇಲಿದರೂ ತನ್ನ ಮೊನಚನ್ನು ಕಳೆದುಕೊಂಡಿತ್ತು.

ಆದರೆ ಈಗ ಸತ್ಯ ಮಾಡಿರುವ ಕೆಲಸದಿಂದ ಅದು ಮತ್ತೆ ತಮ್ಮ ಅಂತರಂಗ ವನ್ನು ಕಲಕಲು ಮೊದಲುಮಾಡಿದೆ. ಪರ ಊರಿನವರು ಇವಳನ್ನೂ ಮಾತಂಗಿ ಯನ್ನೂ ಜೊತೆಯಲ್ಲಿ ನೋಡಿ ತಾಯಿ ಮಗಳು ಎಂದರಂತೆ. ಅಂತರಂಗ ನಿಜ ನುಡಿಯುತ್ತೆ. ರೂಢಿ ಅಂತರಂಗಾನ ಮುಚ್ಚಿಹಾಕುತ್ತೆ. ಅವರಿಗೆ ಇದ್ದಕ್ಕಿದ್ದ ಹಾಗೆಯೇ ಸಿಟ್ಟು ಬಂತು. ಎಕ್ಕಡ ತಗಂಡು ಹೊಡೆಯಬೇಕು ಎನಿಸಿತು. ಯಾರಿಗೆ, ಯಾಕೆ, ಎಂಬುದು ಮಾತ್ರ ತಿಳಿಯಲಿಲ್ಲ. 'ಇದ್ದಕ್ಕಿದ್ದ ಹಾಗೆಯೇ ನನಗ್ಯಾಕೆ ಹೀಗೆ ಸಿಟ್ಟು ಬಂತು? ಬೆಂಗಳೂರಿಗೆ ಹೋಗಿ ಅವಳಿಗೆ ಹೊಡೆದು ಬಂದೆ ನಲ್ಲ. ಹೊಡೆಸಿಕೊಂಡ ಮೇಲೆಯೇ ಅವಳು ಈ ಮಾತನ್ನು ಹೇಳಿದಳಲ್ಲ' – ಎಂದು

ಕೊಂಡರು. ಅವರು ಬೆಂಗಳೂರಿಗೆ ಹೋಗಿ ಬಂದು ಹದಿನೈದು ದಿನದ ಮೇಲಾಗಿತ್ತು. ಯಾವಾಗಲೂ ಸತ್ಯಳ ಮೇಲೆ ಸಿಟ್ಟು, ಮಾತಂಗಿಯ ನೆನಪು ಮನಸ್ಸನ್ನು ತುಂಬಿದೆ. ಇಷ್ಟು ವರ್ಷವಾದಮೇಲೆ ಈ ಹೊಲೆಮುಂಡೆಯ ಚಿಂತೆ ನನಗೇಕೆ ಎಂದುಕೊಂಡು ಮರೆಯಲು ಪ್ರಯತ್ನಿಸುತ್ತಾರೆ. ಮರೆಯಲು ಪ್ರಯತ್ನಿಸಿದಷ್ಟೂ ಮಗಳ ಮೇಲೆ ಸಿಟ್ಟು ಹೆಚ್ಚಾಗುತ್ತದೆ. ಮಾತಂಗಿಯ ಬಗೆಗೆ ಹಿಂದೆ ತಮ್ಮ ಅಂತರಂಗದಲ್ಲಿದ್ದ ಭಾವನೆಗಳು ಜ್ಞಾಪಕಕ್ಕೆ ಬರುತ್ತವೆ. ಆ ನೆನಪಿನಲ್ಲಿ ಮೈಮರೆತಾಗ ಮಾತ್ರ ಮಗಳ ಮೇಲಿನ ಸಿಟ್ಟು ಒಳಸರಿದಿರುತ್ತದೆ. ನೆನಪು ಕೆಳಕ್ಕೆ ಮುಳುಗಿದರೆ ಸಿಟ್ಟು ಮೇಲೆ ಉಕ್ಕುತ್ತದೆ. ಕುಲಕ್ಕೆ ಮೃತ್ಯುವಾಯಿತು ಕೊಡಲಿ ಕಾವು ಎಂದುಕೊಳ್ಳುತ್ತಾರೆ.

ಅವರ ಮಗಳು ಮತ್ತು ತಿರುಮಲೇಶನ ವಿಷಯ ಊರಿಗೆಲ್ಲ ಗೊತ್ತಾಗಿದೆ. ಜನದಲ್ಲೆಲ್ಲ ಗುಲ್ಲೋ ಗುಲ್ಲು. ಯಾರು ಯಾರು ಯಾವ ಯಾವ ರೀತಿ ಆಡಿಕೊಳ್ಳುತ್ತಾರೆಂಬ ಕಲ್ಪನೆ ಅವರಿಗೆ ಬರುತ್ತದೆ. ತಮ್ಮ ವಂಶ, ಮನೆ, ಜಾತಿಯ ಮರ್ಯಾದೆ ಹೋದದ್ದಕ್ಕೆ ಅವರು ಹಿಂಡಿಹೋಗಿದ್ದಾರೆ. ಯಾರ ಕೈಲೂ ಮಾತನಾಡುವುದಿಲ್ಲ. ತೋಟಕ್ಕೂ ಹೋಗುವುದಿಲ್ಲ. ತಮ್ಮಲ್ಲಿ ತಾವೇ ಹಲುಬುತ್ತಾ ಮನೆಯಲ್ಲಿರುತ್ತಾರೆ. ಈ ಮನೆಗೆ ಅಪರೂಪವಾಗಿದ್ದ ಚಿಕ್ಕ ಮೊಮ್ಮಗುವನ್ನು ಸಹ ಎತ್ತಿ ಮಾತನಾಡಿಸಲು ಹೋಗುತ್ತಿಲ್ಲ. ಬೆಳಗ್ಗೆ ಎದ್ದು ಸ್ನಾನಮಾಡಿ ದೇವಸ್ಥಾನದ ಪೂಜೆಗೆ ಹೋಗುತ್ತಾರೆ.

ಒಂದು ಬೆಳಗ್ಗೆ ಅವರು ಪೂಜೆಗೆ ಹೋಗಿದ್ದರು. ಗರ್ಭಗುಡಿಯಲ್ಲಿ ನಿಂತು ಮಂತ್ರ ಹೇಳಿಕೊಂಡು ದೇವರ ಪಾದಕ್ಕೆ ಒಂದಾದ ಮೇಲೆ ಒಂದರಂತೆ ಹೂವು ಹಾಕುತ್ತಿದ್ದರು. ಯಾರೋ ಇಬ್ಬರು ಬಂದಂತಾಯಿತು. ಅವರ ಕಡೆಗೆ ಗಮನ ಕೊಡದೆ ಪೂಜೆ ಮಾಡುತ್ತಿದ್ದರು. ತಾವು ತಂದಿದ್ದ ಬಾಳೆಹಣ್ಣುಗಳ ತೊಟ್ಟು ಮುರಿದು ಮಂಗಳಾರತಿಗೆ ಹಚ್ಚುವಾಗ, 'ನಮ್ಮ ಹಣ್ಣುಕಾಯಿನೂ ಮಾಡಿ' ಎಂಬ ಹೆಂಗಸಿನ ಧ್ವನಿಯಾಯಿತು. ತಿರುಗಿ ನೋಡಿದರೆ ಮೇಲಗಿರಿಯ ಹೆಂಡತಿ ರಂಗಮ್ಮ, ಅವಳ ಮಗ ತಿರುಮಲೇಶಗೌಡ. 'ನಿಮ್ಮನ್ನು ಈ ಗುಡಿಯ ಒಳಕ್ಕೆ ಸೇರಿಸಕೂಡದು' – ಅನ್ನಬೇಕೆನಿಸಿತು. ಆದರೆ ತಮಗೇ ತಿಳಿಯದಂತೆ ಅವರು ಹಣ್ಣುಕಾಯಿಗಳನ್ನು ಮಾಡಿಕೊಟ್ಟರು. ಅವರನ್ನು ಮಾತನಾಡಿಸಲಿಲ್ಲ. ಮಂಗಳಾರತಿ ಹಚ್ಚಿ ಎಡಗೈಲಿ ಗಂಟೆ ಬಾರಿಸತೊಡಗಿದರು. ಮಂಗಳಾರತಿ ಮಾಡುವಾಗ ಅವರು ದೇವರ ಮುಖವನ್ನು ನೋಡಿ ಹತ್ತು ಹನ್ನೆರಡು ವರ್ಷದ ಮೇಲೆ ಆಗಿದೆ. ಆದರೆ ಈ ದಿನ ಅನ್ಯಮನಸ್ಕರಾಗಿ ತಲೆ ಎತ್ತಿ ಆ ಕಡೆ ನೋಡಿದರು. ಎದ್ದು ಕಾಣುವ ಜರಿಯ ಪಂಚೆ, ಹೊಳೆಯುವ ಭುಜಕೀರ್ತಿ, ಎದೆಯ ಮೇಲೆ ಇಳಿ

ಬಿದ್ದಿರುವ ಮೂರು ಹಾರಗಳು. ಕಪ್ಪು ಮುಖದ ಕಣ್ಣುಗಳನ್ನು ಥಳಥಳನೆ ಮುಚ್ಚಿರುವ ಬೆಳ್ಳಿಯ ಕಟ್ಟುಗಳು. ಹಣೆಯ ಮೇಲೆ ಹೊಳೆಯುವ ನಾಮ. ಕೋರೈಸುವಂತಹ ಕೆಂಪು ಬಿಳುಪು ನೀಲಿ ಹಸುರು ಹಳದಿ ಮಣಿಗಳ ಕಿರೀಟ. ಮುಖದ ಹತ್ತಿರ ಬಂದ ಮಂಗಳಾರತಿ ಹಾಗೆಯೇ ನಿಂತಿತು. ಅವರ ಕಣ್ಣು ದೇವರ ಮುಖದಲ್ಲಿ ನೆಟ್ಟಿತು. ಗಂಟೆ ಮಾತ್ರ ಒಂದೇ ಲಯದಲ್ಲಿ ನಿಂತಂತೆ ನುಡಿಯುತ್ತಿತ್ತು. ನಿಂತ ಮಂಗಳಾರತಿ ನಿಂತಲ್ಲಿಯೇ ಇತ್ತು. ಅವರ ಧ್ಯಾನವು ದೇವರ ಮುಖದಲ್ಲಿ ನೆಟ್ಟು, ತಾನೂ ಧ್ಯಾನದಿಂದ ಬದ್ಧವಾದಂತೆ ಬಲಗೈಯು ಮಂಗಳಾರತಿಯ ಹಲಗೆಯನ್ನು ಚಲಿಸದೆ ಹಿಡಿದುಬಿಟ್ಟಿತ್ತು. ನೋಡುನೋಡುತ್ತಾ ಅವರು ಕಣ್ಣು ಮುಚ್ಚಿದರು. ಒಂದು ಕ್ಷಣ ತಲೆಯಲ್ಲಿ ಏನೋ ಪ್ರಜ್ವಲಿಸಿದಂತೆ ಆಗಿ ಅನಂತರ ಸರಿಯಾಯಿತು. ಇದ್ದಕ್ಕಿದ್ದ ಹಾಗೆಯೇ ಮನಸ್ಸಿಗೆ ಎನಿಸಿಬಿಟ್ಟಿತು: ಇದು ಕಲ್ಲು – ಬರೀ ಕರಿಯ ಕಲ್ಲು; ಇದಕ್ಕೆ ಪೂಜೆ ಮಾಡೂದು ವ್ಯರ್ಥ. ಮಂಗಳಾರತಿಯನ್ನು ಮುಗಿಸಿ ಹೊರ ಅಂಕಣಕ್ಕೆ ಬಂದು, ಉಳಿದ ದೇವ ದೇವಿಯರಿಗೆ ನಡುಸಾಲೆಯ ಕಂಬಗಳಿಗೆ ಮಾಡಿ ಬಂದು ರಂಗಮ್ಮ, ಒಬ್ಬಳ ಮುಂದೆ ಹಿಡಿದರು. ತೀರ್ಥ ತೆಗೆದುಕೊಂಡು ತಮ್ಮನ್ನು ಬಲವಂತಮಾಡಿ ಬಂದು ಮಗನಿಗೂ ಕೊಡಿಸಿದ ಮೇಲೆ ಅವಳು ತಮ್ಮ ಕೈಲಿ ಮಾತನಾಡಬಯಸುತ್ತಿರುವಂತೆ ತೋರಿತು. ಆದರೆ ಇವರು ಆ ಕಡೆ ತಿರುಗಲೇ ಇಲ್ಲ. ಎರಡೂ ಕಡೆಯೂ ಉರಿಯುತ್ತಿದ್ದ ಕಂಬದ ಬೆಳಕಿನಲ್ಲಿ ವಿಗ್ರಹದ ಮುಖವನ್ನೇ ದಿಟ್ಟಿಸುತ್ತ ನಿಂತರು. ಮಾತನಾಡಿಸಲು ಸಂಕೋಚವಾಗಿಯೋ, ಅಥವಾ ಅವರ ಗಮನವನ್ನು ಹೇಗೆ ಸೆಳೆಯುವುದೆಂಬುದು ತಿಳಿಯದೆಯೋ ಐದು ನಿಮಿಷ ನಿಂತಿದ್ದ ಮೇಲೆ ಅವಳು ಹೊರಗಡೆಗೆ ಹೆಜ್ಜೆ ಹಾಕಿದುದು ಕಾಲುಂಗುರದ ಶಬ್ದದಿಂದ ತಿಳಿಯಿತು. ಆಗಲೂ ಅವರು ವಿಗ್ರಹದ ಮುಖವನ್ನು ದಿಟ್ಟಿಸುತ್ತಿದ್ದರು.

# ಏಳು

## ೧

ಮೈಸೂರಿನಲ್ಲಿ ಶ್ರೀನಿವಾಸ ಕೋಣೆ ಬಿಟ್ಟು ಹೊರಡುತ್ತಿರಲಿಲ್ಲ. ತಾನು ಬಂದಿರುವ ವಿಷಯವನ್ನು ಯಾವ ಸ್ನೇಹಿತರಿಗೂ ತಿಳಿಸಲಿಲ್ಲ. ಹತ್ತಿರದ ಗಲ್ಲಿಯ ಒಂದು ಹೋಟೆಲಿನಲ್ಲಿ ಮನಸ್ಸು ಬಂದರೆ ಏನಾದರೂ ತಿನ್ನುತ್ತಾನೆ ಉಳಿದಂತೆ ಕಿಟಕಿ ಬಾಗಿಲುಗಳನ್ನು ಮುಚ್ಚಿ ಸುಮ್ಮನೆ ಮಲಗಿರುತ್ತಾನೆ. ಯೋಚಿಸಿ ಯೋಚಿಸಿ ಹೊತ್ತು ಹೋಗದ್ದಕ್ಕೆ ಪ್ಯಾಕುಗಟ್ಟಳೆ ಸಿಗರೇಟು ಸುಡುತ್ತಾನೆ. ತನ್ನ ಜೀವನ ಎಲ್ಲಿಗೆ ಬಂತು? ಮೇಲಿನ ಜಾತಿಯ ಸತ್ಯಳನ್ನು ತಾನು ಅಪೇಕ್ಷಿಸಿದುದೇ ತಪ್ಪು ಎಂದು ಒಮ್ಮೊಮ್ಮೆ ಅಂದುಕೊಂಡರೆ, ಈ ಮೇಲು ಕೀಳು ಭಾವನೆ ಎಲ್ಲ ಮೌಢ್ಯ ಎಂಬ ಸತ್ಯಳ ಮಾತಿನ ನೆನಪಾಗುವುದು. ಒಮ್ಮೊಮ್ಮೆ ತಾಯಿಯ ಮೇಲೆ ಸಿಡಿಮಿಡಿಗೊಳ್ಳುವನು. ತನ್ನ ತಾಯಿ ಸತ್ತುಹೋಗಿ, 'ನೀನು ಬ್ರಾಮ್ರ ಹುಡುಗಿ ಮಾಡ್ಕಂಡ್ರೆ ನಾನು ನೇಣುಹಾಕ್ಯತ್ತೀನಿ' ಎಂದು ಹೆದರಿಸುವ ಆ ವ್ಯಕ್ತಿಯೇ ಇಲ್ಲದಿದ್ದರೆ ತಾನು ಈಗಲೂ ಓಡಿಹೋಗಿ ಸತ್ಯಳ ಕೈಹಿಡಿಯಬಹುದೆಂಬ ಕಲ್ಪನೆ ಬೆಳೆಯುವುದು. ಆದರೆ ತಾಯಿಯ ಸಾವನ್ನು ಕಲ್ಪನೆಯಲ್ಲಿ ಇಚ್ಛಿಸುವುದೂ ಪಾಪವೆಂಬ ನೆನಪಾಗಿ ತನ್ನನ್ನು ತಾನೇ ಹಳಿದುಕೊಳ್ಳುವನು.

ಅವನು ಇಲ್ಲಿಗೆ ಬರುವಾಗ ತಂದೆ ಮುನ್ನೂರು ರೂಪಾಯಿ ಕೊಟ್ಟಿದ್ದರು. ಬಂದ ಇಪ್ಪತ್ತು ದಿನಕ್ಕೆ ಮತ್ತೆ ಇನ್ನೂರು ರೂಪಾಯಿ ಕಳಿಸಿದರು. ಚನ್ನಾಗಿ ಓದಿ ಬಿ.ಎಲ್. ಮುಗಿಸಿ ಮನೆತನದ ಗೌರವ ಉಳಿಸಬೇಕೆಂದು ಬರೆದಿದ್ದರು.

ಒಬ್ಬನೇ ಇದ್ದು ಇದ್ದು ಒಂದು ತಿಂಗಳಿನಲ್ಲಿ ಬೇಸರವಾಯಿತು. ಹೊತ್ತು ಕಳೆಯಲೆಂದು ಒಂದು ದಿನ ಒಂದು ಹಿಂದೀ ಸಿನಿಮಾಕ್ಕೆ ಹೋದ. ಗಾನ, ಕುಣಿತ, ಕಾಶ್ಮೀರದ ಪ್ರಕೃತಿದೃಶ್ಯ, ಮೊದಲಾಗಿ ಎಲ್ಲ ಅಂಶಗಳೂ ಇದ್ದ ಅದು ಎರಡೂವರೆ ಗಂಟೆಯನ್ನು ಕಳೆಸಿತು. ಮರುದಿನವೂ ಹೋಗಿ ಅದನ್ನೇ ನೋಡಿ ಬಂದ. ಸತ್ಯಳ ಜೊತೆ ಇಲ್ಲಿದ್ದಾಗ ಅವನು ಹೆಚ್ಚಾಗಿ ಸಿನಿಮಾಕ್ಕೆ ಹೋಗುತ್ತಿರಲಿಲ್ಲ. ಹೋಗಲು ಅವಳೇ ಇಷ್ಟಪಡುತ್ತಿರಲಿಲ್ಲ. ಆ ಕಥೆ ನಿಜವೇ? – ಜೀವನದಲ್ಲಿ ಹೀಗೆ ಆಗುತ್ತದೆಯೇ? – ಎಂದು ಮುಂತಾಗಿ, ನೋಡಿದ ಚಿತ್ರಗಳನ್ನೆಲ್ಲ ಟೀಕಿಸುತ್ತಿದ್ದಳು. ಅವಳ ಜೊತೆಯಿಲ್ಲದೆ ಒಬ್ಬನೇ ಹೋಗಲು ಬೇಸರವಾಗಿ ಅವನು ಚಿತ್ರ ನೋಡುವುದನ್ನೇ ಹೆಚ್ಚುಕಡಿಮೆ ಬಿಟ್ಟುಬಿಟ್ಟಿದ್ದ. ನೋಡಿದ್ದನ್ನೆಲ್ಲ ಟೀಕಿಸುವ ಗುಣ ಅವಳದು.

ಹೀಗಾಗಿ ಜೀವನದ ಸವಿಯನ್ನು ಅವಳಿಗವಳೇ ಕಳೆದುಕೊಳ್ಳುತ್ತಿಲ್ಲವೆ? ಇಂತಹ ಸೀನರಿ ಇಂತಹ ಹಾಡು ಡಾನ್ಸುಗಳನ್ನು ಟೀಕಿಸುತ್ತಾಳಲ್ಲ – ಎಂದುಕೊಂಡ. ಸಿನಿಮಾ ನೋಡಿಕೊಂಡು ಕೋಣೆಗೆ ಬಂದರೆ ಒಬ್ಬನೇ. ಮತ್ತೆ ಒಂಟಿತನ. ಆದುದ ರಿಂದ ಮತ್ತೆ ಮತ್ತೆ ಬೇರೆ ಬೇರೆ ಸಿನಿಮಾಗಳಿಗೆ ನುಗ್ಗಲು ಪ್ರಾರಂಭಿಸಿದ. ಹಿಂದಿ, ತಮಿಳು, ತೆಲುಗು, ಇಂಗ್ಲಿಷು, ಒಮ್ಮೊಮ್ಮೆ ಕನ್ನಡ.

ಆದರೆ ಎಷ್ಟು ಸಿನಿಮಾ ನೋಡಿದರೂ ಸತ್ಯಳ ನೆನಪು ಹೋಗುತ್ತಿರಲಿಲ್ಲ. ಪ್ರೀತಿ, ಪ್ರೇಮ, ಪ್ರಣಯಗಳು ತುಂಬಿದ್ದ ಸಿನಿಮಾಗಳನ್ನು ನೋಡುವಾಗಲೆಲ್ಲ ಅವಳ ನೆನಪೇ ಬರುತ್ತಿತ್ತು. ಆದರೆ ಅವಳು ನೀರಸಳೆಂಬ ಭಾವನೆಯೂ ಬರು ತ್ತಿತ್ತು. ನದೀದಡದಲ್ಲಿ, ಬೆಟ್ಟದ ತಪ್ಪಲಿನಲ್ಲಿ, ಸಾರ್ವಜನಿಕ ಉದ್ಯಾನದಲ್ಲಿ ನಾಯಕನು ಎಡಗೈ ಹಿಡಿದುಕೊಂಡರೆ ನಾಯಕಿಯು ಬಲಗೈ ಹಿಡಿದು ಎಳೆಯು ತ್ತಾಳೆ. ಕಣ್ಣುಗಳನ್ನು ತೇಲುವಂತೆ ಅರ್ಧ ಮುಚ್ಚಿಕೊಂಡು ಅವನ ಎದೆಯ ಮೇಲೆ ಒರಗುತ್ತಾಳೆ. ಆದರೆ ಸತ್ಯ ಒಂದು ದಿನವೂ ಹಾಗೆ ಮಾಡಲಿಲ್ಲ. ಇಬ್ಬರೂ ಕೂಡಿ ಬೃಂದಾವನಕ್ಕೆ ಹೋಗಿದ್ದಾಗ ಸಹ ಜೊತೆಯಲ್ಲಿ ನಡೆದು ಬಂದಳೇ ವಿನಾ ಕೈ ಹಿಡಿದುಕೊಳ್ಳಲಿಲ್ಲ. ತಾನೇ ಹಿಡಿದುಕೊಂಡರೆ, 'ನೋಡಿದೋರು ಏನಂದಾರು?' ಎಂದು ತನ್ನ ಕೈಯನ್ನು ತೆಗೆದುಕೊಳ್ಳುತ್ತಿದ್ದಳು.

ಅವನಿಗೆ ಅವಳ ಮೇಲೆ ಕೋಪ ಅಸಮಾಧಾನಗಳೂ ಉಂಟಾಗುವುವು. ಇದ್ದ ಕ್ಕಿದ್ದ ಹಾಗೆಯೇ ಅವೆಲ್ಲ ಮಾಯವಾಗಿ ಆರ್ದ್ರಭಾವ ಹುಟ್ಟುವುದು. ಮತ್ತೆ, ತನ್ನ ತಾಯಿ ಸತ್ತುಹೋಗಿ ಎಲ್ಲ ಅಡಚಣೆಯೂ ಕಳೆಯುವ ಕಲ್ಪನೆ ಬರುವುದು. ಅದನ್ನನುಸರಿಸಿ ಪಾಪ ಪುಣ್ಯಗಳ ವಿಚಾರ ಹುಟ್ಟುವುದು. ತಕ್ಷಣ, ಊರಿನ ದೇವಸ್ಥಾನದಲ್ಲಿ ಮಂಗಳಾರತಿ ನೋಡಿದಾಗ ತನ್ನ ಅಂತರಂಗಕ್ಕೆ ಹೊಳೆದ ವಿಚಾರದ ನೆನಪಾಗುವುದು: ಜಾತಿ ಮತಗಳು ಸುಳ್ಳೇ ಇರಬಹುದು. ಯಾರಿಗೆ ಯಾವ ವೃತ್ತಿ ಬೇಕೋ ಅದನ್ನು ಮಾಡುವ ಅಧಿಕಾರವಿರಬೇಕು. ಆದರೆ ಮದುವೆಯ ವಿಷಯದಲ್ಲಿ ವ್ಯತ್ಯಾಸವಿರಬಹುದು. ಇಲ್ಲದಿದ್ದರೆ ದೇವರ ಮುಖ ನೋಡಿದಾಗ ತನಗೆ ಯಾಕೆ ಹೀಗನಿಸಿತು? ವೇದದಲ್ಲಿ ಹೇಳಿದೆಯಂತೆ: ಬ್ರಾಹ್ಮಣರು ದೇವರ ಬಾಯಿಯಿಂದಲೂ, ಕ್ಷತ್ರಿಯರು ತೋಳುಗಳಿಂದಲೂ, ವೈಶ್ಯರು ತೊಡೆ ಗಳಿಂದಲೂ, ಶೂದ್ರರು ಪಾದದಿಂದಲೂ ಹುಟ್ಟಿದರು. ಅದರಿಂದಲೇ ಜಾತಿಗಳ ಸೃಷ್ಟಿಯಾಯಿತು. ಹಾಗೆಂದು ಜೂನಿಯರ್ ಬಿ.ಎ. ಓದುವಾಗ ಇತಿಹಾಸದ ತರಗತಿಯಲ್ಲಿ ಹೇಳಿದ್ದರು. ಆದರೆ ಇದು ಬರೀ ಒಂದು ರೂಪಕವೆಂದು ಸತ್ಯ ಟೀಕಿಸಿದ್ದಳು. ಸತ್ಯಳ ಟೀಕೆಯೇ ಸರಿ ಎಂದು ತಾನೂ ನಂಬಿದ್ದೆ. ಆದರೆ ಆ ದಿನ ದೇವರ ಮುಂದೆ ನಿಂತಾಗ, ಅದು ನಿಜವಿದ್ದರೂ ಇರಬಹುದು ಎಂದು ಯಾಕೆ

ಅನಿಸಿತು? ಅನಿಸಿದುದು ಮಾತ್ರವಲ್ಲ, ಮೈಬೆವರಿ ತಲೆ ತಿರುಗಿದ ಹಾಗೆ ಆಯಿತು.

ದೇವಸ್ಥಾನದಿಂದ ಬಂದ ಮರುದಿನ ಅವನು ಮನೆಯ ಹಿಂದಿನ ಹಿತ್ತಿಲಿನಲ್ಲಿ ಎಳೆಬಿಸಿಲಿನಲ್ಲಿ ಕೂತಿದ್ದ. ಮನೆಯ ಆಳು ಸತ್ತಿಗ ಹುಲ್ಲುಮೆದೆಯ ಹತ್ತಿರ ಬಂದ. ಮಾದಿಗನಾದರೂ ಸತ್ತಿಗ ತುಂಬ ಬುದ್ಧಿವಂತ. ಮಾರಮ್ಮನ ಜಾತ್ರೆಯಲ್ಲಿ ಅಮ್ಮನ ಕಥೆಯ ಪದ ಹೇಳುತ್ತಾನೆ. ಅವನೇ ಹತ್ತಿರ ಬಂದು ಕೇಳಿದ: 'ಅವ್ವಾರ ಮಾತು ಕ್ಯೇಳಿ, ಗೌಡ್ರೆ. ಹಾರುವ ಎಣ್ಣು ಯಾವತ್ತೂ ಮಾರಮ್ಮ.'

ಎಂದರೆ ತನ್ನ, ಸತ್ಯಳ, ಮದುವೆಯ ವಿಷಯ ಅವನಿಗೂ ಗೊತ್ತಿದೆ. ಗೊತ್ತಿಲ್ಲದೆ ಏನು? ಮೊನ್ನೆಯಿಂದ ಮನೆಯಲ್ಲಿ ಇದೇ ಮಾತು, ಚರ್ಚೆ ನಡೆಯುತ್ತಿದೆ. ಹಾರುವ ಹೆಣ್ಣೇ ಊರ ಮಾರಿಯಾದುದು ಎಂಬ ಕಥೆ ತನಗೂ ಗೊತ್ತಿದೆ. ಊರಿಗೊಂದು ಮಾರಿಗುಡಿ ಇದ್ದೇ ಇರುತ್ತದೆ. ಅದರ ಜಾತ್ರೆಯಲ್ಲಿ ಈ ಕಥೆ ಹೇಳುತ್ತಾರೆ:

ಹಿಂದೆ, ಬ್ರಾಹ್ಮಣರ ಹಾಗೆಯೇ ಕಾಣುವ ಬಿಳುಪು ಬಣ್ಣದ ಒಬ್ಬ ಮಾದಿಗ ಹುಡುಗನಿದ್ದನಂತೆ. ತುಂಬ ಬುದ್ಧಿವಂತ. ಜೀವನಕ್ಕೆ ಹುಡುಕಿಕೊಂಡು ದೇಶ ಸಂಚಾರ ಹೊರಟ. ಕೊನೆಗೆ ರಸೂರಿಪಟ್ಣ ಎಂಬ ಊರಿಗೆ ಬಂದು ಒಬ್ಬ ಬ್ರಾಹ್ಮಣರ ಮನೆಯಲ್ಲಿ ದನ ಕಾಯುವುದಕ್ಕೆ ಸೇರಿಕೊಂಡ. ಮನೆಯ ಒಳಗೆ ಅವರು ಮಕ್ಕಳಿಗೆ ಹೇಳಿಕೊಡುತ್ತಿದ್ದ ವೇದ ಮಂತ್ರಗಳನ್ನೆಲ್ಲ ದೂರದಲ್ಲಿ ಕೇಳಿಸಿಕೊಂಡೇ ಕಲಿತುಬಿಟ್ಟ. ಅವರ ಆಚಾರ ವಿಚಾರಗಳನ್ನೆಲ್ಲ ಸೂಕ್ಷ್ಮವಾಗಿ ನೋಡಿ, ಚಿಕ್ಕ ಹುಡುಗರನ್ನು ಕೇಳಿ ತಿಳಿದುಕೊಂಡಿದ್ದ. ಆ ಊರನ್ನು ಬಿಟ್ಟು ತುಂಬ ದೂರದ ಇನ್ನೊಂದು ಊರಿಗೆ ಹೋಗಿ, ತಾನೊಬ್ಬ ದೂರ ದೇಶದ ಬ್ರಾಹ್ಮಣ ಅಂತ ಹೇಳಿಕೊಂಡ. ಒಬ್ಬ ಬ್ರಾಹ್ಮಣ ಇವನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದ. ಇವನು ಹೆಂಡತಿಯೊಡನೆ ಬೇರೆ ಒಂದು ಮನೆ ಮಾಡಿಕೊಂಡು, ಇತರ ಜಾತಿಯವರಿಂದ ದಾನ ದಕ್ಷಿಣೆಗಳನ್ನು ತೆಗೆದುಕೊಳ್ಳುತ್ತಾ ಸುಖವಾಗಿ ಜೀವನ ಮಾಡುತ್ತಿದ್ದ. ಏಳೆಂಟು ಮಕ್ಕಳೂ ಆದುವು. ಇತ್ತ ಅವನ ತಾಯಿ ದೇಶಾಂತರ ಹೋದ ಮಗನನ್ನು ಹುಡುಕಿ ಊರೂರು ಅಲೆದಳು. ಕೊನೆಗೆ ಈ ಊರಿಗೆ ಬಂದು ಮಗನನ್ನು ಗುರುತಿಸಿದಳು. ಅವನು ಅವ್ವನನ್ನು ಹೊರಗೆ ಓಡಿಸಲೂ ಆರ. ಆದರೆ ಇಟ್ಟುಕೊಂಡರೆ ತನ್ನ ನಿಜವಾದ ಜಾತಿ ಗೊತ್ತಾಗುತ್ತೆ. ಆದುದರಿಂದ, 'ನೀನು ಮಾತೇ ಆಡಕೂಡದು. ಮೂಗಿ ಅಂತ ಇರಬೇಕು' ಎಂದು ಅವಳಿಗೆ ಕಟ್ಟಪ್ಪಣೆ ಮಾಡಿದ. ಅವಳು ಒಪ್ಪಿಕೊಂಡಳು. ತನ್ನ ತಾಯಿ, ಹುಟ್ಟು ಮೂಗಿ ಬಂದಿದಾಳೆ ಎಂದು ಹೆಂಡತಿಗೆ ಹೇಳಿ ತೋರಿಸಿದ. ಅತ್ತೆ ಬಂದ ಗೌರವಕ್ಕೆ ಸೊಸೆ ಹಾಲುಬಾಯಿ ಮಾಡಿದಳು. ಮೈ ತೊಳ್ಕೊಂಡು ಬಾ ಎಂದು ಮಗ ತಾಯಿಗೆ ಹೇಳಿದ. ಮನೆಯ

ಮುಂದಿನ ಕೆರೆಯಲ್ಲಿ ಮೈ ತೊಳೆದುಕೊಂಡು ಮುದುಕಿ ಬಂದು ಕೂತಳು. ಎತ್ತಿ ಹಿಡಿದರೆ ಮೃದುವಾಗಿ ನಡುಗುವಂತಹ ಹಾಲುಬಾಯಿಯನ್ನು ಬಾಳೆ ಎಲೆಯ ಮೇಲೆ ಇಟ್ಟು ಸೊಸೆ ತಂದು ಕೊಟ್ಟಳು. ಕಂಡ ತಕ್ಷಣ ಮುದುಕಿಯ ನಾಲಿಗೆಯಲ್ಲಿ ನೀರೂರಿತು. ಅದನ್ನು ತನಗಾಗಿ ಮಾಡಿದ ಎಮ್ಮೆಯ ನಾಲಿಗೆ ಎಂದು ತಿಳಿದು ಕೊಂಡಳು. ಸೊಸೆಯ ಒಳ್ಳೆಯತನಕ್ಕೆ ಅವಳಲ್ಲಿ ಪ್ರೀತಿ ಉಕ್ಕಿ ಬಂತು. ತಾನು ಮೂಕಿಯಾಗಿರಬೇಕೆಂಬುದು ಮರೆತೇ ಹೋಯಿತು. 'ಈಟೊಂದ್ ಒಳ್ಳೇ ಎಮ್ಮೆ ನಾಲಿಗೆ ಯಾವಾಗ ಕಡಿದ್ಯೇ ಅಮ್ಮಿ?' – ಅಂದುಬಿಟ್ಟಳು.

ಸೊಸೆಗೆ ಅನುಮಾನ ಬಂತು. ಗಂಡ ಯಾವ ಸಮರ್ಥನಾಯಿಸಿ ಹೇಳಿದರೂ ಕೇಳಲಿಲ್ಲ. ಇವನು ಬ್ರಾಹ್ಮಣವೇಷಿಯಾದ ಮಾದಿಗನೇ ಸರಿ ಎಂದು ಅರ್ಥ ಮಾಡಿಕೊಂಡಳು. ತಾನು ನೀಚ ಜಾತಿಯ ಗಂಡಸಿಗೆ ಕೊಡಲ್ಪಟ್ಟು ಎಂಜಲಾದೆ. ತನಗೇನು ಪ್ರಾಯಶ್ಚಿತ್ತ? ತನ್ನ ತಂದೆಯನ್ನೇ ಕೇಳಬೇಕು. ನೇರವಾಗಿ ತನ್ನ ತಂದೆಯ ಮನೆಗೆ ಹೋಗಿ ಕೇಳಿದಳು: 'ಅಪ್ಪ, ನಾಯಿ ಮುಟ್ಟಿದ ಮಡಕೆಗೆ ಏನು ಮಾಡಬೇಕು?'

'ಅಮ್ಮ, ಮಡಕೇನ ನಾಯಿಯ ಕೊರಳಿಗೇ ಕಟ್ಟಬೇಕು. ಇಲ್ಲದಿದ್ದರೆ ನೆಲ್ಲುಹುಲ್ಲು ಸುತ್ತಿ ಸುಡಬೇಕು. ಅಗ್ನಿ ಎಂಥ ಮೈಲಿಗೆಯನ್ನಾದರೂ ಶುದ್ಧಿ ಮಾಡುತ್ತೆ.'

ಅವಳು ತನ್ನ ಮನೆಗೆ ಬಂದಳು. ಆ ದಿನ ರಾತ್ರಿ ಎಲ್ಲರೂ ಮಲಗಿದ್ದಾಗ ಮನೆಯ ಸುತ್ತ ನೆಲ್ಲುಹುಲ್ಲು ಅಡುಕಿದಳು. ಮನೆಯ ಮೇಲಕ್ಕೂ ಹುಲ್ಲಿನ ಕಂತೆ ಗಳನ್ನು ಎಸೆದಳು. ಸುತ್ತ ಬೆಂಕಿ ತೋರಿಸಿ ತಾನು ಮನೆಯೊಳಕ್ಕೆ ಬಂದು ಬಿಗಿ ಯಾಗಿ ಅಗಣಿ ಹಾಕಿಕೊಂಡಳು. ಇಡೀ ಸಂಸಾರ ಸುಟ್ಟು ಭಸ್ಮವಾಯಿತು. ಅವಳೇ ಮಾರಮ್ಮ; ಮಾದಿಗರ ದೇವತೆ. ವಂಚಿಸಿದ ಪಾಪಕ್ಕಾಗಿ ಅವಳ ಗಂಡನನ್ನೇ ಕೋಣದ ರೂಪದಲ್ಲಿ ಪ್ರತಿವರ್ಷವೂ ಅವಳಿಗೆ ಬಲಿಕೊಡುತ್ತಾರೆ. ಪಾಪಿಬೀಜ ದಿಂದ ಅವಳ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೇ ಆಡು ಕುರಿಗಳು. ಅವನ್ನೂ ಅವಳಿಗೆ ಕಡಿಯುತ್ತಾರೆ.

ಈ ಕಥೆಯನ್ನು ಸತ್ತಿಗ ಈಗ ಮತ್ತೆ ಹೇಳಲಿಲ್ಲ. ಅದು ಗೊತ್ತಿಲ್ಲದವರು ಊರಿ ನಲ್ಲಿ ಯಾರೂ ಇಲ್ಲ. ಆದರೆ ಅವನು ಮತ್ತೆ ಬುದ್ಧಿವಾದ ಹೇಳಿದ: 'ಆರುವರ ಎಣ್ಣು ಮಾರಪ್ಪನೇ ಆಯ್ತುಳೆ. ಇದು ಬ್ಯಾಡಿ ಗೌಡ್ರೆ, ಮನೆ ಉಳಿಯಾಕಿಲ್ಲ.'

ಇಷ್ಟು ಹೇಳಿ ಅವನು ತನ್ನ ಕೆಲಸಕ್ಕೆ ಹೊರಟುಹೋದ. ಸ್ವಲ್ಪ ಹೊತ್ತಿಗೆ ವೆಂಕಟೇಶ ಬಂದ. ಇವನಿಗೆ ಪುನಃ ಬುದ್ಧಿ ಹೇಳಿ ಸತ್ಯಳನ್ನು ಬೈದ: 'ಅವ-ಳೊಬ್ಬಳು ಮಾರಿ ಲೌಡಿ. ಅವಳಿಂದ ನಮ್ಮನೆಯೂ ಉಳಿಯುಲ್ಲ, ನಿಮ್ಮನೆಯೂ

ಉಳಿಯುಲ್ಲ. ರಾಜ್ಯ ಆಳಿದ ಗೌಡರ ಮನೆ ಇದು. ನೀನು ತಿಳಿವಳಿಕೆ ಇಟ್ಟು ಕೊಂಡು ಕೆಲಸ ಮಾಡು.'

ಶ್ರೀನಿವಾಸ ಈ ಕಥೆಯ ಬಗೆಗೆ ಸತ್ಯಳ ಕೈಲಿ ಎಂದೂ ಮಾತನಾಡಿರಲಿಲ್ಲ; ಆಡುವ ಸಂದರ್ಭವೇ ಬಂದಿರಲಿಲ್ಲ. ಆಡಿದ್ದರೆ ಅವಳು ಏನು ಹೇಳುತ್ತಿದ್ದಳೆಂದು ಅವನಿಗೆ ಗೊತ್ತು. ಇದು ನಿಜವೇ ಅಥವಾ ಸುಳ್ಳೆ? ನಿಜವಲ್ಲದೆ ಇರಬಹುದು. ಅಕಸ್ಮಾತ್ ಒಂದು ಸಣ್ಣ ಅಂಶ ನಿಜವಿದ್ದರೆ? – ಎಂಬ ಅನುಮಾನವೂ ಹುಟ್ಟಿತು. ಎಲ್ಲ ದೇವರೂ ಒಂದೇ. ನಮ್ಮ ಮನೆದೇವರು ತಿರುಮಲ, ಶ್ರೀನಿವಾಸ, ಬೇರೆ ಯಲ್ಲ; ಮಾದಿಗರ ದೇವತೆಯಾದರೂ ಊರಿನ ಬ್ರಾಹ್ಮಣ, ಗೌಡ, ಮೊದಲಾಗಿ ಪ್ರತಿಯೊಬ್ಬರೂ ಹಣ್ಣು ಕಾಯಿ ಕಾಣಿಕೆ ಕೊಡುವ ಮಾರಮ್ಮ ಬೇರೆಯಲ್ಲ. ಮಾರಮ್ಮನ ಕಥೆಯೂ ಇದನ್ನೇ ಹೇಳುತ್ತೆ. ಶ್ರೀನಿವಾಸ ದೇವರ ಎದುರಿಗೆ ನಿಂತು ಮಂಗಳಾರತಿ ನೋಡುವಾಗ ಇದೇ ವಿಚಾರ ಮನಸ್ಸಿಗೆ ಹೊಳೆಯಿತು. ತನ್ನ ತಾಯಿ, ಅಜ್ಜ, ಚಿಕ್ಕಪ್ಪ, ಚಿಕ್ಕವ್ವ, ವೆಂಕಟೇಶ, ಸತ್ತಿಗ, ಎಲ್ಲರೂ ಇದೇ ಹೇಳುತ್ತಾರೆ. ಸತ್ಯಳ ತಂದೆ ಇದಕ್ಕಾಗಿಯೇ ಕೊರಗಿ ಕ್ಷೀಣವಾಗುತ್ತಿದ್ದಾರೆ. ಯಾವುದು ನಿಜ, ಯಾವುದು ಸುಳ್ಳು?

ಅದೇ ಸಮಯಕ್ಕೆ ಅವನ ತಾಯಿ ರಂಗಮ್ಮ ಅಲ್ಲಿಗೆ ಬಂದಳು. 'ಏನಪ್ಪಾ' ಎಂದು ಕಣ್ಣು ತುಂಬಿಕೊಂಡು ಮತ್ತೆ ಅವನ ಎದುರು ಕೂತರು.

ಈಗ ಅವನ ಮನಸ್ಸಿನಲ್ಲಿ ಒಂದು ಪ್ರಶ್ನೆ ಬರುತ್ತಿದೆ: ಮಾರಮ್ಮನ ಕಥೆಯಲ್ಲಿ ಅವನು ಸುಳ್ಳು ಹೇಳಿ ಬ್ರಾಹ್ಮಣ ಹುಡುಗಿಯನ್ನು ಮದುವೆಯಾದ. ಆದರೆ ಸತ್ಯಳಿಗೆ ತನ್ನ ಜಾತಿ ಗೊತ್ತು. ಅವಳ ಸಮ್ಮತಿಯಿಂದಲೇ ಮದುವೆ ನಡೆಯುತ್ತಿತ್ತು. ಅಲ್ಲದೆ ಮಾದಿಗನನ್ನು ಮದುವೆಯಾದುದಕ್ಕೆ ಪ್ರಾಯಶ್ಚಿತ್ತವಾಗಿ ಅವಳು ತನ್ನನ್ನೂ ಸೇರಿಸಿಕೊಂಡು ಮನೆಯನ್ನು ಸುಟ್ಟಳು. ನಾನು ಮಾದಿಗನೇನಲ್ಲ; ರಾಜ್ಯ ಆಳಿದ ಪಾಳೆಯಗಾರರ ವಂಶದವನು. ರಾಜ್ಯ ಆಳಲಿ ಬಿಡಲಿ, ನಾನು ಮಾದಿಗನಲ್ಲ. ಮಾದಿಗರಿಗೂ ತನಗೂ ಇರುವ ವ್ಯತ್ಯಾಸವೇನು, ಎಂಬ ಪ್ರಶ್ನೆ ಅವನ ಮನಸ್ಸಿ ನಲ್ಲಿ ಹುಟ್ಟಿತು. ನಮ್ಮನ್ನು ಶೂದ್ರರು ಅನ್ನುತ್ತಾರೆ. ಅವರು? ಅವರೂ ಶೂದ್ರರೇ? ಅದು ಹೇಗೆ ಸಾಧ್ಯ? ಈಗ ನೆನಪಿಗೆ ಬಂತು. ಅವರು ಪಂಚಮರು. ಆದುದರಿಂದ ಈ ಕಥೆ ತನಗೆ ಅನ್ವಯಿಸುವುದಿಲ್ಲ. ಇದೇ ಯೋಚನೆಯ ಜೊತೆಗೆ ಇನ್ನೊಂದು ಗಾದೆಯ ಮಾತು ನೆನಪಿಗೆ ಬರುತ್ತದೆ: ಬಿಳಿಯ ಮಾದಿಗ, ಕರಿಯ ಬ್ರಾಹ್ಮಣ ಜಾತಿಯನ್ನು ನಂಬಬಾರದು. ಆದರೆ ಸತ್ಯ ಕಪ್ಪಾಗಿದ್ದಾಳೆ. ಅವಳ ತಂದೆಯೂ ಕಪ್ಪು. ಕಾಲೇಜಿನಲ್ಲಿ, 'ನಮ್ಮ ದೇಶದಲ್ಲಿ ಜಾತೀಯತೆಯಿಂದ ಆಗಿರುವ ವಿನಾಶ' ಎಂಬುದನ್ನು ಕುರಿತು ಭಾಷಣ ಮಾಡಿದ ದಿನ ಅವಳೇ, 'ಯಾವ ಜಾತಿಯಲ್ಲೂ

ಶುದ್ಧ ಬುಡಕಟ್ಟಿನ ರಕ್ತ, ಚಹರೆಗಳಿಲ್ಲ. ಸಾವಿರಾರು ವರ್ಷಗಳ ಇತಿಹಾಸದಲ್ಲಿ ಎಲ್ಲ ಬುಡಕಟ್ಟಿನ ರಕ್ತವೂ ಮಿಶ್ರವಾಗಿದೆ' ಎಂದಿದ್ದಳು.

ಹಾಗಾದರೆ ಈ ಕಥೆಗಳ ಅರ್ಥವೇನು, ಎಂದು ಅವನು ಯೋಚಿಸುತ್ತಾನೆ. ತಲೆಯ ಬಿಸಿ ಆರುವುದಿಲ್ಲ. ಸುಮ್ಮನೆ ಕೋಣೆಯಲ್ಲಿ ಕೂತಿದ್ದರೆ ಇಂಥದೇ ಯೋಚನೆ ಬರುತ್ತದೆ ಎಂದು ಯೋಚಿಸಿ ಎದ್ದು ಪ್ಯಾಂಟು ಶರಟು ಹಾಕಿಕೊಂಡು ಜೇಬಿಗೆ ಪರ್ಸ್ ತುರುಕಿ ಯಾವುದಾದರೂ ಒಂದು ಸಿನಿಮಾಕ್ಕೆ ಹೋಗುತ್ತಾನೆ. ಹಿಂದೀ ಸಿನಿಮ ಸರಿ. ಕಾಶ್ಮೀರ ಅಥವಾ ಅಂಥದೇ ದೃಶ್ಯ. ಸಮುದ್ರದ ದಡ, ಗಾನ, ಡಾನ್ಸು, ಹಾಯಾಗಿ ಎರಡೂವರೆ ಗಂಟೆ ಕಳೆಯುತ್ತದೆ.

೨

ಮೂರು ತಿಂಗಳು ಕಳೆದಿತ್ತು. ಅವನ ತಂದೆ ತಿಂಗಳಿಗೆ ಇನ್ನೂರು ರೂಪಾಯಿ ಕಳಿಸುತ್ತಿದ್ದರು. ಸಪ್ಲಿಮೆಂಟರಿ ಪರೀಕ್ಷೆಗೆ ಹಣ ತುಂಬಿ ಆಗಿತ್ತು. ಆದರೆ ಏನೂ ಓದಿರಲಿಲ್ಲ. ಓದಿ ಪಾಸು ಮಾಡಿಯೇ ತೀರಬೇಕೆಂಬ ಲವಲವಿಕೆ ಇರಲೂ ಇಲ್ಲ. ಪರೀಕ್ಷೆಗೆ ಇನ್ನೇನು ಒಂದು ವಾರ ಉಳಿದಿತ್ತು. ಅಷ್ಟರಲ್ಲಿ ಊರಿನಿಂದ ಒಂದು ಕಾಗದ ಬಂತು. ಅಜ್ಜ ಬರೆದಿದ್ದರು: 'ಮಂಡ್ಯದ ಎಂ.ಎಲ್.ಎ.ಗಳಾದ ಕೆಂಪಣ್ಣ ನವರ ದ್ವಿತೀಯ ಕುಮಾರ್ತಿ ಕುಮುದಿನಿ ಎನ್ನುವ ಹುಡುಗಿಯನ್ನು ಕೇಳಿದ್ದಾರೆ. ಕುಲ, ಶೀಲ, ಅಂತಸ್ತುಗಳಲ್ಲೆಲ್ಲ ಸರಿಯಾಗುವ ಮನೆ. ಹೆಣ್ಣನ್ನು ನಿನ್ನ ಅಪ್ಪ ಅವ್ವ ನೋಡಿದ್ದಾರೆ. ತುಂಬ ಚಂದವಾಗಿದ್ದಾಳೆ. ನೀನು ಈ ಕಾಗದ ಕಂಡ ಕೂಡಲೇ ಕಾಗದ ಹಾಕುವುದು. ಹೆಣ್ಣು ನೋಡಿ ಒಪ್ಪಿಗೆ ಕೊಟ್ಟು ಮದುವೆ ಯಾಗುವುದು. ನನಗೆ ವಯಸ್ಸಾಯಿತು. ಮದುವೆಯಾಗಿ ನಮ್ಮ ಮನೆಯನ್ನು ಬೆಳೆಸುವುದು ನಿನ್ನ ಧರುಮ' – ಎಂದು ಆಶೀರ್ವಾದ ಮಾಡಿದ್ದರು.

ಓದಿದ ತಕ್ಷಣ ಅವನು ಕಾಗದವನ್ನು ಮುದುರಿ ಮೂಲೆಗೆ ಬಿಸಾಡಿದ. ನನ್ನ ಮದುವೆಯನ್ನು ತಪ್ಪಿಸಿದ ಇವರು ಹೇಳಿದರು ಅಂತ ಈಗ ಯಾಕೆ ಮದುವೆಯಾಗ ಬೇಕು, ಎಂದು ಅವರೆಲ್ಲರ ಬಗೆಗೆ ಸಿಟ್ಟು ಬಂತು. ನಾನು ಇನ್ನು ಮದುವೆ ಯಾಗುವುದೇ ಇಲ್ಲ. ಈ ಮಾತನ್ನು ಅವರು ಅರ್ಥಮಾಡಿಕೊಳ್ಳಬೇಕಾಗಿತ್ತು. ದಡ್ಡರು ಅವರು – ಎಂದುಕೊಂಡ. ಆ ದಿನ ಅವನಿಗೆ ವಿಪರೀತವಾಗಿ ಸತ್ಯಳ ನೆನಪು ಬಂತು. ಈಗ ಅವಳು ಏನು ಮಾಡುತ್ತಿರಬಹುದು, ಏನು ಯೋಚಿಸು ತ್ತಿರಬಹುದು, ಎಂಬ ಕಲ್ಪನೆ ಬಂತು. ಇಷ್ಟು ದಿನವಾದರೂ ಅವಳಿಗೆ ಒಂದು ಕಾಗದ ಬರೆಯಲಿಲ್ಲ. ಅವಳೂ ನನ್ನ ಕಾಗದಕ್ಕೆ ಉತ್ತರ ಬರೆಯಲಿಲ್ಲ. ನಾನಾದರೂ

ಬೆಂಗಳೂರಿಗೆ ಹೋಗಿ ಅವಳನ್ನು ನೋಡಿಕೊಂಡು ಬರಬೇಕು ಎನಿಸಿತು. ನಾಳೆ ಬೆಳಗಿನ ಬಸ್ಸಿಗೆ ಹೋಗಬೇಕು. ಈಗಲೇ ಹೋಗಿ ರಿಸರ್ವ್ ಮಾಡಿಸಿ ಬರಬೇಕು – ಎಂದು ಶರಟು ಹಾಕಿಕೊಂಡು ಹೊರಟ. ಆದರೆ ಬಸ್‌ಸ್ಟ್ಯಾಂಡಿಗೆ ಹೋಗುವ ಹೊತ್ತಿಗೆ ಒಂದು ಯೋಚನೆ ಬಂತು: ಅವಳನ್ನು ಕಂಡು ಏನು ಮಾಡುವದು? ಯಾಕೆ ಹೀಗೆ ಮಾಡಿದೆ, ನೀನು ಹೇಡಿ, ಅಂದರೆ ಏನು ಹೇಳುವುದು? ದೇವರ ಮುಂದೆ ನಿಂತಾಗ ನನ್ನ ಅಂತಸ್ಸಾಕ್ಷಿಗೆ ಹೀಗೆ ಹೊಳೆಯಿತು ಅಂದರೆ ಅವಳು ಕೇಳು ವುದಿಲ್ಲ. ನನ್ನ ಯಾವ ಉತ್ತರವೂ ಅವಳ ಬುದ್ಧಿಶಕ್ತಿಯ ಮುಂದೆ ನಿಲ್ಲುವುದಿಲ್ಲ. ನಾನು ಹೇಡಿ, ಕ್ಷಮಿಸು ಅನ್ನಬೇಕು. ಆದರೆ ಅಷ್ಟು ಹೇಳಿ ತಲೆ ತಗ್ಗಿಸಿಕೊಂಡು ಹಿಂತಿರುಗುವ ಸಂಪತ್ತಿಗೆ ಇಲ್ಲಿಂದ ಅಲ್ಲಿಗೆ ಯಾಕೆ ಹೋಗಬೇಕು? ಅಥವಾ, 'ನಾನು ತಪ್ಪು ಮಾಡಿದೆ. ಕ್ಷಮಿಸು. ಈಗ ಯಾರ ಮಾತೂ ಕೇಳುವುದಿಲ್ಲ. ಇವತ್ತೇ ನಾಲ್ಕು ಜನ ಸ್ನೇಹಿತರ ಎದುರಿಗೆ ಮದುವೆಯಾಗಿ ಪತ್ರಿಕೆಯಲ್ಲಿ ಹಾಕಿ ಸೋಣ ಬಾ' ಅನ್ನಬೇಕು. ಹಾಗೆ ಅನ್ನುವುದು ಸಾಧ್ಯವೆ?

ತಾನು ಊರಿಗೆ ಹೋಗಿ ಅಜ್ಜನ ಎದುರಿಗೆ ಆದ ಮಾತು, ತಾಯಿಯ ಆಗ್ರಹ, ವೆಂಕಟೇಶನ ಬುದ್ಧಿವಾದ, ದೇವರ ಮುಂದೆ ನಿಂತಾಗ ಅನಿಸಿದ ಒಳನುಡಿ, ಮಾದಿಗರ ಸತ್ತಿಗನ ವಿವೇಕ – ಇವೆಲ್ಲವೂ ಕಲ್ಪನೆಯಲ್ಲಿ ಪುನರ್ಘಟಿಸಿದುವು. ರಿಸರ್ವೇಶನ್ ಕಿಟಕಿಯ ಹತ್ತಿರ ಅರ್ಧಗಂಟೆ ನಿಂತಿದ್ದು, ಅಲ್ಲಿಂದಲೇ ನೇರವಾಗಿ ಒಂದು ಮ್ಯಾಟನಿ ಸಿನಿಮಾಕ್ಕೆ ಹೋದ. ಸಂಜೆ ಆರು ಗಂಟೆಗೆ ಸಿನಿಮಾ ಮುಗಿಸಿಕೊಂಡು ಕೋಣೆಗೆ ಬಂದು ಕುಳಿತು ಅಜ್ಜನಿಗೆ ಒಂದು ಕಾಗದ ಬರೆದು ಹಾಕಿದ: 'ನಾನು ಆಗಬೇಕೆಂದಿದ್ದ ಮದುವೆಗೆ ನೀವೆಲ್ಲ ಕೂಡಿ ಅಡ್ಡ ಬಂದಿರಿ. ನಿಮ್ಮ ಮಾತಿಗೆ ಬೆಲೆ ಕೊಟ್ಟು ನಾನು ವೆಂಕಟರಮಣಯ್ಯನವರ ಮಗಳನ್ನು ಮದುವೆಯಾಗುವು ದನ್ನು ಬಿಟ್ಟುಬಿಟ್ಟೆ. ಇನ್ನು ಈ ಜನ್ಮದಲ್ಲಿ ಮದುವೆಯಾಗುವುದಿಲ್ಲವೆಂದು ಆಗಲೇ ತೀರ್ಮಾನಿಸಿದೆ. ಆದುದರಿಂದ ನೀವ್ಯಾರೂ ನನ್ನ ಮದುವೆಯ ಬಗ್ಗೆ ಮಾತನಾಡ ಕೂಡದು. ಹಾಗಂತ ತೀ|| ರೂ|| ಅಪ್ಪಾಜಿಗೂ ಹೇಳಿಬಿಡಿ.'

ಕಾಗದವನ್ನು ಪೋಸ್ಟ್ ಡಬ್ಬಕ್ಕೆ ಹಾಕಿದನಂತರ ಮನಸ್ಸಿಗೆ ಸ್ವಲ್ಪ ಸಮಾಧಾನ ವಾಯಿತು. ಮರುದಿನ ಒಂದು ಯೋಚನೆ ಬಂತು: ಮದುವೆಯ ಪ್ರಸ್ತಾಪದ ಕಾಗದವನ್ನು ಅಪ್ಪಾಜಿ ಬರೆಯಬೇಕಾಗಿತ್ತು. ಆದರ ಬದಲು ಅಜ್ಜ ಏಕೆ ಬರೆ ದರು? ಎಂ.ಎಲ್.ಎ. ಕೆಂಪಣ್ಣನವರ ಹೆಸರು ಅವನಿಗೂ ಗೊತ್ತು. ಅವರ ಜನರ ಎಂ.ಎಲ್.ಎ.ಗಳು ಯಾರು ಯಾರೆಂಬುದು ಅವರ ಕಿವಿಯ ಮೇಲೆ ಚುನಾ- ವಣೆಯ ಕಾಲದಲ್ಲೇ ಬೀಳುತ್ತಿತ್ತು. ಕೆಂಪಣ್ಣನವರು ಅಪ್ಪಾಜಿಗೆ ಪರಿಚಯವವರೇ ವಿನಾ ಊರಿನಲ್ಲಿರುವ ಅಜ್ಜನಿಗೆ ಗೊತ್ತಿರುವುದು ಸಾಧ್ಯವಿಲ್ಲ; ಸಾಧ್ಯವಿಲ್ಲವೇನು,

ಗೊತ್ತೇ ಇಲ್ಲ. ಪ್ರಸ್ತಾಪವೇನಿದ್ದರೂ ಅಪ್ಪಾಜಿಯ ಕೈಲೇ ಆಗಿದೆ. ಅವರೇ ಬರೆಯದೆ ಅಜ್ಜನ ಕೈಲಿ ಯಾಕೆ ಬರೆಸಿದ್ದಾರೆ? ತಾವೇ ಬರೆದರೆ ನಾನು ರೇಗುತ್ತೇನೆ ಎಂದೇ? ಅಪ್ಪಾಜಿ ತನಗೆ ಹೆದರುತ್ತಾರೆಂಬ ಕಲ್ಪನೆಯಿಂದ ಅವನಿಗೆ ಒಂದು ತೆರನಾದ ಸಂತೋಷವಾಯಿತು. ಆದರೆ ಸ್ವಲ್ಪ ಹೊತ್ತಿನಲ್ಲಿ ಬೇರೊಂದು ಉತ್ತರ ಹೊಳೆಯಿತು: ಮದುವೆ ಮೊದಲಾದ ಕೆಲಸ ಕಾರ್ಯಗಳಿಗೆ ಮನೆಯಲ್ಲಿ ಹಿರೀಕರ ಹೆಸರು ಹಾಕುವುದು ಶಾಸ್ತ್ರ. ಅದಕ್ಕೇ ಅವರ ಹೆಸರು ಹಾಕಿಸಿ ಬರೆಸಿರಬಹುದು.

ಎಂಟು ದಿನ ಕಳೆಯಿತು. ಅವನ ಮನಸ್ಸು ಅಜ್ಜ, ಅಪ್ಪಾಜಿ, ಅವ್ವ, ವೆಂಕಟೇಶ, ತಿರುಮಲ, ಶ್ರೀನಿವಾಸ ದೇವರು, ಮೊದಲಾಗಿ ಎಲ್ಲರ ಬಗೆಗೂ ರೇಗುತ್ತಿತ್ತು. ಹಿರೀಕರು ಅಂತ ತಲೆಯ ಮೇಲೆ ಕೂರಿಸಿಕೊಂಡರೆ ಪ್ರಪಂಚ ಮುಂದುವರಿಯೂದೇ ಇಲ್ಲ. ದೇವರು ಅನ್ನುವ ಮೂಢನಂಬಿಕೆ ಬಿಡದಿದ್ದರೆ ಜನಗಳಲ್ಲಿ ಪರಸ್ಪರ ಇರುವ ಭೇದ ಕಡಿಮೆಯಾಗುವುದೇ ಇಲ್ಲ. ಒಂದೊಂದು ಧರ್ಮಕ್ಕೆ ಒಬ್ಬೊಬ್ಬ ದೇವರು, ಒಂದೊಂದು ಒಳಪಂಗಡಕ್ಕೆ ಒಂದೊಂದು ಒಳದೇವರು – ಎಂದುಕೊಂಡು ತನ್ನಲ್ಲಿಯೇ ರೇಗುತ್ತಿದ್ದ.

ಒಂದು ದಿನ ಮಧ್ಯಾಹ್ನ ಹನ್ನೆರಡೂವರೆ ಗಂಟೆಯಾಗಿತ್ತು. ಇನ್ನೂ ಊಟಕ್ಕೆ ಹೋಗದೆ ಮಂಚದಮೇಲೆ ಮಲಗಿ ಸಿಗರೇಟು ಸೇದುತ್ತಿದ್ದ. ಯಾರೋ ಬಾಗಿಲು ತಟ್ಟಿದರು. 'ಯಾರು?' – ಅಂದದ್ದಕ್ಕೆ 'ನಾನು' ಎಂದ ಉತ್ತರದ ಧ್ವನಿಯನ್ನು ಗುರುತಿಸಲಾಗಲಿಲ್ಲ. ಎದ್ದು ಬಾಗಿಲು ತೆಗೆದು ನೋಡಿದರೆ ಅವರ ಅಪ್ಪಾಜಿಯ ಸರ್ಕಾರೀ ಕಾರಿನ ಡ್ರೈವರ್. 'ಕೆಳಗೆ ಅವ್ವಾ ಅವರು ತಾತಾ ಅವರು ಕುಂತವ್ರೆ' – ಎಂದು ಹೇಳಿ ಅವನು ಕೆಳಗೆ ಹೋದ. ಈ ಅನಿರೀಕ್ಷಿತ ಸಂದರ್ಭದಲ್ಲಿ ಏನು ಮಾಡಬೇಕೆಂಬುದು ಅವನಿಗೆ ತಿಳಿಯುವ ಮೊದಲೇ ಅವನ ತಾಯಿ ಮತ್ತು ಅಜ್ಜ ಮೆಟ್ಟಲನ್ನು ಏರಿ ಬಂದರು. ಡ್ರೈವರ್ ಒಂದು ಬುಟ್ಟಿ, ಒಂದು ಚೀಲ, ಒಂದು ಟಿಫಿನ್ ಕ್ಯಾರಿಯರ್ ಹೊತ್ತು ತರುತ್ತಿದ್ದ.

ಕಿಟಿಕಿಯನ್ನು ಮುಚ್ಚಿದ್ದ ಕೋಣೆಯ ತುಂಬ ಸಿಗರೇಟಿನ ಹೊಗೆ ತುಂಬಿತ್ತು. ನೆಲದ ಮೇಲೆಲ್ಲ ಸಿಗರೇಟು ತುಂಡುಗಳು, ಹೊತ್ತಿ ಉರಿದ ಬೆಂಕಿಯ ಕಡ್ಡಿಗಳು. ಹಗ್ಗದ ಮೇಲೆ ಕೊಳೆಬಟ್ಟೆಗಳು. ಹಾಸಿಗೆ ಮತ್ತು ದಿಂಬಿನ ಹೊಲಸು ಅರಿವೆಗಳು. ಅದುವರೆಗೆ ಅವನ ಕೋಣೆಗೆ ಯಾರೂ ಬಂದಿರಲಿಲ್ಲ. ಈಗ ಅಜ್ಜ ಮತ್ತು ತಾಯಿಯ ಪ್ರತ್ಯಕ್ಷದಲ್ಲಿ ಅವನಿಗೇ ನಾಚಿಕೆಯಾದಂತೆ ಆಯಿತು. ಕಿಟಿಕಿಯ ಬಾಗಿಲು ತೆಗೆದು ಹೊಗೆಯನ್ನು ಹೋಗಬಿಟ್ಟ. 'ನೀನ್ ಇದೇ ಏನಪ್ಪಾ ಪರೀಕ್ಷೆಗೆ ಓದಾದು?' – ಎಂದು ಅಜ್ಜ ಕೇಳಿಯೇ ಬಿಟ್ಟರು. ಅವನೇ ಕಸುಡುಗೆ ತೆಗೆದುಕೊಂಡು ಗುಡಿಸಲು ಹೊರಟ. 'ಗಂಡು ಉಡುಗ ಪರಕೆ ಮುಟ್ತಾರೇನೋ ಮಲ್ಲೇಶ, ಇಲ್ಲಿ ತತಾ ಇಲ್ಲಿ' –

ಎಂದು ಅವನ ತಾಯಿ ಕಿತ್ತುಕೊಂಡಳು. ಯಜಮಾಂತಿ ಗುಡಿಸುವುದನ್ನು ಕಂಡ ಡ್ರೈವರ್ ತಾನೇ ಕಸುಡುಗೆ ಇಸಿದುಕೊಂಡು ಗುಡಿಸಿ ಎತ್ತಿಹಾಕಿದ. ಅಜ್ಜ ಕಾರಿನ ಸೀಟಿಗೆ ಕೃಷ್ಣಾಜಿನ ಹಾಕಿಕೊಂಡೇ ಬಂದಿದ್ದರು. ಅದನ್ನು ಸುತ್ತಿ ಕೈಲಿ ಹಿಡಿದು ಕೋಣೆಗೆ ತಂದಿದ್ದರು. ಮಂಚದ ಮೇಲೆ ಹಾಸಿಕೊಂಡು ಪದ್ಮಾಸನದಲ್ಲಿ ಕುಳಿತರು. ನಲ್ಲಿ ಎಲ್ಲಿದೆ ಎಂದು ಕೇಳಿ ಅವ್ವ ಹೋಗಿ ಕೈ ತೊಳೆದುಕೊಂಡು ಬಂದಳು. ಕೆಳಗೆ ನೆಲದ ಮೇಲೆ ಕುಳಿತು ಬುಟ್ಟಿ ಮತ್ತು ಚೀಲಗಳನ್ನು ಬಿಚ್ಚತೊಡಗಿದಳು. ತಿಂಗಳಹುರುಳಿಕಾಯಿ ಹಾಕಿದ ಮಸಾಲೆ ಅನ್ನ, ಗಟ್ಟಿ ಮೊಸರು, ಒಗ್ಗರಣೆ, ಕಾಯಿತುರಿ ಹಾಕಿ ಕಲಸಿದ ಅನ್ನ, ಚಕ್ಕುಲಿ, ಕಡಲೆಬೇಳೆ ಹೋಳಿಗೆ, ಒಂದು ದೊಡ್ಡ ಗಾಜಿನ ಶೀಶೆ ತುಪ್ಪ, ಮೊದಲಾದ ತಿಂಡಿಯ ಸರಕನ್ನೇ ತಂದಿದ್ದರು. ಬೇರೆ ಬುಟ್ಟಿಯಲ್ಲಿದ್ದ ಬಾಳೆ, ಕಿತ್ತಳೆ ಹಣ್ಣುಗಳನ್ನು ತೆಗೆದು, ಮಂಚದ ಮೇಲೆ ಕೃಷ್ಣಾಜಿನದ ಮೇಲೆ ಮಂಡಿಸಿದ್ದ ಮಾವನವರ ಮುಂದೆ ಇಟ್ಟಳು. ಅವರು ಹೋಗಿ ಕೈಕಾಲು ಮುಖ ತೊಳೆದು, ಗೋವಿಂದ ಗೋವಿಂದ ಎಂದು ದೇವರ ನಾಮ ನುಡಿಯುತ್ತಾ ಬಂದು ಕುಳಿತರು. ಒಂದು ಅಡಿಕೆಪಟ್ಟೆಗೆ ಹಾಕಿಕೊಟ್ಟ ಅನ್ನ ತಿಂಡಿಗಳನ್ನು ತೆಗೆದುಕೊಂಡು ತಿನ್ನಲು ಡ್ರೈವರ್ ಕಾರಿನ ತನ್ನ ಸೀಟಿಗೆ ಹೊರಟುಹೋದ. ಅವ್ವ ಕೋಣೆಯ ಬಾಗಿಲು ಮುಚ್ಚಿ, 'ಬಾರೋ ಮಲ್ಲೇಶ ತಿನ್ನು' ಎಂದಳು.

'ನಂಗೇನ್ ಬ್ಯಾಡ. ಯಾಕ್ ತಂದೆ ಇದ್ನೆಲ್ಲ?'– ಮಗ ಕೇಳಿದ.

'ನೋಡ್ರಯ್ಯ ಇವ್ನನ್ನಾದಾ!' – ಎಂದು ಆಕೆ ಕಣ್ಣಿನಲ್ಲಿ ನೀರು ತಂದು ಕೊಂಡಳು.

'ಲೇ, ಹೆತ್ತ ತಾಯಿ ಕಣ್ಣಲ್ಲಿ ನೀರು ಬೀಳಬ್ಯಾಡ್‌ದು. ಏಳು ಜನ್ಮ ಹೊತ್ತು ಬಂದ್‌ರೂ ತೀರುಲ್ಲ ಆ ಪಾಪ. ಕುಂತು ಉಣ್ಣು. ಅವ್ವ ಇಕ್ಕಿದ್ದು ಅಮೃತ' – ಅಜ್ಜ ಎಂದರು.

ಅವನು ಅಪ್ಪನ ಎದುರಿಗೆ ಕುಳಿತ. ಆಕೆ ಅಡಿಕೆಪಟ್ಟೆಯ ಮೇಲೆ ಇಕ್ಕಿದಳು. ಎಷ್ಟಾದರೂ ತಾಯಿ ಮಾಡಿದ್ದು. ಕಾಸಿದ ತುಪ್ಪ ಹಾಕಿ, ಮನೆಯಲ್ಲಿ ಅರೆದ ಮಸಾಲೆ ಬೆರೆಸಿ ಮಾಡಿದ ಹುರುಳಿಕಾಯಿಯ ಅನ್ನ ಗಮಗಮ ಅನ್ನುತ್ತಿತ್ತು. ಮೂರು ತಿಂಗಳಿಗೂ ಮಿಕ್ಕು ಹೋಟಲಿನಲ್ಲಿ ತಿಂದು ಕೆಟ್ಟಿದ್ದ ನಾಲಿಗೆಗೆ ರುಚಿರುಚಿ ಯಾಗಿ ಕಂಡಿತು. ಅವನು ಬೇಡವೆಂದರೂ. ಮೇಲೆ ತುಪ್ಪ ಹಾಕಿ ಹೋಳಿಗೆ ತಿನ್ನಿ ಸಿದ ಮೇಲೆ ಅವಳು ಒಂದಿಷ್ಟು ಅನ್ನ ತಿಂದು ಅಡಿಕೆಪಟ್ಟೆಯನ್ನು ಮುದುರಿ ಕಿಟಕಿ ಯಿಂದ ಎಸೆದು ಕೈ ತೊಳೆದುಕೊಂಡಳು. ಮಾವನವರು ಸುಲಿದು ನೆಲದ ಮೇಲೆ ಹಾಕಿದ್ದ ಬಾಳೆ ಮತ್ತು ಕಿತ್ತಳೆ ಹಣ್ಣುಗಳ ಸಿಪ್ಪೆಗಳನ್ನು ಭಕ್ತಿ ಗೌರವದಿಂದ ದೂರ

ದಲ್ಲಿ ನಿಂತು ಬಾಗಿ ಗುಡ್ಡೆ ಮಾಡಿ ಜೋಡಿಸಿಕೊಂಡು ಹೊರಗೆ ಹಾಕಿದಳು.

ವಿರಳವಾಗಿ ಹಲ್ಲುಗಳ ಸಂದಿಗೆ ಸಿಕ್ಕಿಕೊಂಡಿದ್ದ ಕಿತ್ತಳೆಯ ನಾರನ್ನು ನಾಲಿಗೆಯಿಂದ ಸವರಿ ತೆಗೆದುಕೊಳ್ಳುತ್ತಾ ಅಜ್ಜ ಎಂದರು: 'ಏನಪ್ಪಾ, ಲಗ್ನ ಮಾಡ್ಕ ಅಂತ ಕಾಗದ ಹಾಕಿದರೆ ಸೆಡತ್‌ಕಂಡು ಜವಾಬು ಬರ್ದೆ?'

ಅವನು ಉತ್ತರ ಹೇಳದೆ ಸುಮ್ಮನೆ ತಲೆ ತಗ್ಗಿಸಿ ಕೂತಿದ್ದ.

ತಾಯಿ, 'ದೊಡ್ಡ ಗೌಡ್ರು ಅಂದದ್ದಕ್ಕೆ ಮಾತಾಡೊ ತಮ್ಮಯ್ಯ' ಎಂದಳು.

'ಹೂಂ' – ಎಂದರು ದೊಡ್ಡ ಗೌಡರು.

'ನಂಗೆ ಮದುವೆ ಬ್ಯಾಡ' – ಅವನೆಂದ.

'ಲೇ ಮಂಗ, ಮದುವೆ ಅಂದ್ರೆ ನಿನ್ನ ಇಷ್ಟನೇನೋ? ಪಾಳೇಗಾರ್‍ರ ಮನೆ ಬೆಳೀ ಬ್ಯಾಡ್ವಾ? ನಿನ್ನ ಹೊತ್ತು ಹೆತ್ತು ಸಾಕಿ ಬೆಳೆಸಿದ್ದುಕ್ಕೆ ಬಳ್ಳಿ ಒಣಗಿಹ್ವಾಗ ಬೇಕೇನೋ? ಹೆತ್ತ ಬಳ್ಳೀಗೆ ಏಟು ತಾಪವಾಗ್ತದೆ ಬಲ್ಲ್ಯಾ?' – ಎಂದು ಅವರು ಅನ್ನುತ್ತಿರುವಾಗ ರಂಗಮ್ಮನಿಗೆ ಅಳು ಬಂತು. ಬಿಕ್ಕಿ ಕಣ್ಣು ಒರೆಸಿಕೊಂಡಳು.

'ಲೇ, ಹೆತ್ತವ್ವನ ಕಣ್ಣಲ್ಲಿ ನೀರು ಬರಿಸಿದ್ರೆ ಏಳು ಜನ್ಮ ಎತ್ತಿದರೂ ಪಾಪ ಕಳೆಯಾಕುಲ್ಲ. ಏನು ಓದಿದೀಯಾ ನೀನು!' – ಅವರು ಕೇಳಿದರು.

'ಅವನ ಕುಟ್ಟೆ ಏನ್ ಮಾತಾಡ್ತೀರಿ ಬುಡ್ರಯ್ಯ. ನಾ ಜೀವ ಕಣಕತ್ತೀನಿ' – ತಾಯಿ ಎಂದಳು.

'ಕಳ್ಕ ಅಂತ ಹೇಳಪ್ಪ. ನಾವು ಹೊಂಟೋಯ್ತೀವಿ' – ಯಜಮಾನರು ತೀರ್ಮಾನ ಹೇಳಿದರು.

ಶ್ರೀನಿವಾಸನಿಗೆ ಕೋಪ ಉರಿಯುತ್ತಿತ್ತು. ಆದರೆ ಆಡಲು ಮಾತು ತಿಳಿಯುತ್ತಿರಲಿಲ್ಲ. ಅವನ ಅಜ್ಜನೇ ಹಾಗೆ. ಎಲ್ಲಿಯೂ ದರ್ಪ. ಪಾಳೇಗಾರರ ದರ್ಪ. ಅವ್ವ ಜೀವ ಕಳೆದುಕೊಳ್ಳುತ್ತಾಳಂತೆ. ಇವಳಿಗೆ ಏನು ಮಾಡಬೇಕು? 'ಕಳಕೊ' – ಅಂದುಬೇಡೋಣವೆ? ಆದರೆ ಮಾತೃಹತ್ಯಾದೋಷ ಮಹಾ ಪಾಪ. ಅಜ್ಜ ಹೇಳಿದರು ಅಂತ ಮಾತ್ರವಲ್ಲ. ಅದು ನಿಜವಾಗಿಯೂ ಪಾಪ. ಆದರೆ ಅವ್ವ ಹಿಂಗೆ ಯಾಕೆ ಹಟಮಾಡಬೇಕು?

ಅವಳೆಂದಳು: 'ಕೆಂಪಣ್ಣಾರ ಮಗಳನ್ನೇ ಮಾಡ್ಕ ಅಂತ ನಾವು ಹೇಳಾಕಿಲ್ಲ. ನೀನು ಯಾವ ಎಣ್ಣು ನೋಡಿ ವೈನ ಅಂದ್‌ರೂ ಸೈ. ಕೆಂಪಣ್ಣಾರ ಮಗಳ ನಾವೆಲ್ಲ ನೋಡಿದೀವಿ. ಸಿನಿಮಾದ ಉಡುಗಿಯೂ ಹಂಗಿರಾಕಿಲ್ಲ. ಕರೆದ ಹಾಲಿನ ಹಂಗೆ ಬೆಳ್ಳಗವ್ಳೆ. ತೆಳ್ಳಗೆ ಬಳುಕ್ತಾಳೆ. ಯಾವ ಹಾರುವರ ಎಣ್ಣು ಬೇಕು ಅವಳ ಮುಂದೆ? ನೀನು ಬರೀ ನೋಡು ಒಂದ್ ಸಲೀಗೆ. ಆಮ್ಯಾಲೆ ಸಲ್ಲೆ ಅಂದ್‌ರೆ ಇನ್ನೊಂದ್ ಎಣ್ಣ ನೋಡಾನ. ಅವನು ಸಲ್ಲೇ ಅಂದ್ರೆ ಆಖೇರ್ ಮಾತು ಅಂತ ದೊಡ್ಡ

ಗೌಡ್ರೇ ಅಂದವ್ರೆ. ಅಲ್ವೇನ್ರಯ್ಯಾ?' – ಎಂದು ಮಾವನವರ ಮುಖ ನೋಡಿದಳು.

'ಇದು ರಾಜ್ಯ ಆಳಿದ ಮನೆ. ರಾಜಕುಮಾರಿ ಹಂಗಿಲ್ಲದ ಹೆಣ್ಣು ನಾವು ತರಾಕಿಲ್ಲ' – ಅವರೆಂದರು.

'ನೀನ್ಯಾವತ್ತು ಬತ್ತೀ ಏಳು. ಎಣ್ಣು ನೋಡಾಕ್ ಹ್ವಾಗಾನ. ಈಣೆ ಇಡ ಕಂಡು ಅವಳು ಹಾಡು ಏಳಿದ್ರೆ ಸಿನೀಮದಲ್ಲೂ ಇಲ್ಲ. ನೀನು ವಲ್ಲೆ ಅನ್ನಬ್ಯಾಡ ಕಣೋ ಮಲ್ಲೇಶ' – ಎಂದು ಆಕೆ ಮತ್ತೊಮ್ಮೆ ಕಣ್ಣೀರು ಹಾಕಿದಳು.

"ಹ್ಯಂಗಿದ್ರೂ ನಂಗೆ ಬ್ಯಾಡ' – ಅವನೆಂದ.

'ಮಂಗ ನನ್ಮಗನೆ' – ದೊಡ್ಡವರು ಗರ್ಜಿಸಿದರು: 'ಮಾಣಿಕ್ಯ ಎದುರಿಗಿಟ್ಟು ತಗಳೋ ಅಂದ್ರೆ ಬ್ಯಾಡ ಅಂತೀಯಾ? ಒಂದ್ ಸಲ ಕಣ್ ಬಿಟ್ ನೋಡಿ ವಲ್ಲೆ ಅನ್ನು. ಆಮ್ಯಾಲೆ ನಿನ್ ಹಣೇಬರಾವ್ರ. ಈಗ ಬೆಂಗಳೂರಿಗೆ ಹೋಗಾನ ನಡಿ ಹೊತ್ತಾಯ್ತದೆ.'

ಅವರು ವಿರೋಧಿಸಿದರೂ ಅವರು ಬಿಡಲಿಲ್ಲ. ಕೋಣೆಯ ಬಾಗಿಲಿಗೆ ಬೀಗ ಹಾಕಿಕೊಂಡು ದೊಡ್ಡ ಯಜಮಾನರೇ ಕೈಹಿಡಿದು ಕಾರಿನಲ್ಲಿ ಕೂರಿಸಿದರು. ಸಂಜೆಯ ಹೊತ್ತಿಗೆ ಅವರು ಬೆಂಗಳೂರು ಮುಟ್ಟಿದರು.

ಅದೇ ಸಂಜೆ ಅವನ ಅಪ್ಪಾಜಿ ಮಂಡ್ಯಕ್ಕೆ ಟ್ರಂಕ್ ಕಾಲ್ ಮಾಡಿದರೆಂದು ತೋರುತ್ತದೆ. ಮರುದಿನ ಬೆಳಗ್ಗೆ ಒಂಬತ್ತು ಗಂಟೆಯ ಹೊತ್ತಿಗೇ ಕೆಂಪಣ್ಣನವರು ಥಳಥಳ ಹೊಳೆಯುವ ತಮ್ಮ ದೊಡ್ಡ ಶವರ್ಲೆ ಕಾರಿನಲ್ಲಿ ಬಂದರು. ಇವನು ಇದ್ದ ರೂಮಿಗೆ ಬಂದು ಅಪ್ಪಾಜಿ, 'ಅವರೆದುರಿಗೆ ಮಂಕಾಗಿರಬ್ಯಾಡ. ಎದ್ದು ಶೇವ್ ಗೀವ್ ತಗಂಡು ಸರಿಯಾಗಿ ಡ್ರೆಸ್ ಮಾಡ್ಕ' ಎಂದರು.

ಇವರ ಕಾರೂ ಜೊತೆಯಲ್ಲಿ ಹೊರಟಿತು. ಎಲ್ಲರೂ ಮಧ್ಯಾಹ್ನ ಹನ್ನೆರಡೂವರೆಯ ಹೊತ್ತಿಗೆ ಮಂಡ್ಯ ತಲುಪಿದರು. ಕೆಂಪಣ್ಣನವರದು ಅರಮನೆಯಂತಹ ಬಂಗ್ಲೆ. ಮನೆಯಲ್ಲಿ ಬ್ರಾಹ್ಮಣ ಅಡಿಗೆಯವರು. ಸೋಫ, ರೆಫ್ರಿಜೆರೇಟರ್ ಮುಂತಾಗಿ ಆಧುನಿಕ ಸಲಕರಣೆಗಳಿಂದ ತುಂಬಿದ ಗೃಹವ್ಯವಸ್ಥೆ. ತಿರುಮಲಾಪುರದ ಇವರ ಮನೆಯಲ್ಲೇ ಅವೆಲ್ಲ ಇಲ್ಲ. ಮಂಡ್ಯ ಎಷ್ಟಾದರೂ ಜಿಲ್ಲಾ ಸ್ಥಳ. ಅವರು ಸಕ್ಕರೆ ಕಾರ್ಖಾನೆಯ ಆಡಳಿತ ಸಮಿತಿಯ ಸದಸ್ಯರು.

ಊಟವಾದ ಮೇಲೆ ಹೆಣ್ಣು ತೋರಿಸಿದರು. ಮಹಡಿಯ ಮೇಲಿನ ಹಜಾರದಲ್ಲಿ ಹಾಕಿದ್ದ ಸೋಫಾಗಳ ಮೇಲೆ ಶ್ರೀನಿವಾಸ, ಅವನ ತಾಯಿ, ತಂದೆ ಮತ್ತು ದೊಡ್ಡ ಗೌಡರನ್ನು ಕೂರಿಸಿದರು. ಎದುರಿನ ಒಂದು ಡೈವಾನ್ ಮೇಲೆ ರತ್ನಗಂಬಳಿ ಹಾಕಿ ಒಂದು ವೀಣೆ ಇಟ್ಟಿದ್ದರು. ಒಳಭಾಗದ ತೆರೆಯನ್ನು ಸರಿಸಿಕೊಂಡು ಇಬ್ಬರು ಹೆಣ್ಣುಮಕ್ಕಳು ಬಂದರು. ಹಿರಿಯಳು ಎರಡು ಮಕ್ಕಳ ತಾಯಿಯಂತಿದ್ದಳು.

ಚಿಕ್ಕವಳು ಬಂದು ಡೈವಾನ್ ಮೇಲೆ ಕೂತಳು. ಆಗಲೇ ಶ್ರುತಿ ಮಾಡಿದ್ದ ವೀಣೆಯ ತಂತಿಯನ್ನು ಮತ್ತೆ ಶ್ರುತಿ ಮಾಡಿಕೊಂಡು ಒಂದು ಮೀಟು ಕೊಟ್ಟಳು. ತಂತಿ ಝುಂಯ್ ಎಂದಿತು. ತಾಳಕ್ಕೆ ತಕ್ಕಂತೆ ಬಾರಿಸಿಕೊಂಡು, 'ನಿನ್ನ ವಿನಾ ಅನ್ಯರ ಕಾಣೆನು ವಾರಿಜಾನಯನಾ....' ಎಂದು ಹಾಡಲು ಪ್ರಾರಂಭಿಸಿದಳು. ತಾವು ಮೊದಲ ಸಲ ಬಂದ ದಿನವೂ ಈ ಹಾಡನ್ನೇ ಕೇಳಿದ್ದ ರಂಗಮ್ಮ ಮೆಚ್ಚುಗೆ ಯಿಂದ ಮಗನ ಕಡೆ ನೋಡಿದಳು. ತೆಳ್ಳನೆಯ ಮೈಕಟ್ಟು. ಹಾಲುಬಿಳುಪಿನ ಬಣ್ಣ. ತುಸು ಕೋಲುಮುಖ. ಎಡಗಡೆಗೆ ಬೈತಲೆ. ಸ್ವಲ್ಪ ಬೊಚ್ಚೆನಿಸುವಂತಹ ಬಾಯಿ. ಹಣೆಗೆ ಅಗಲವಾಗಿ ಇಟ್ಟ ಹುಡಿಕುಂಕುಮ. ಶ್ರೀನಿವಾಸನಿಗೆ ನರ್ಗೀಸಳ ಚಿತ್ರ ಕಣ್ಣು ಮುಂದೆ ಬಂತು.

೩

ಒಂದು ವಾರದ ನಂತರ ಕೆಂಪಣ್ಣನವರು ಬೆಂಗಳೂರಿಗೆ ಬಂದರು. ಕಾಂಗ್ರೆಸ್ಸಿಗ ರಾದರೂ ಅವರು ಬಿಳೀ ಟೋಪಿ ಹಾಕುವವರಲ್ಲ. ಘನವಾಗಿ ಸರ್ಜ್ ಕೋಟು ಧರಿಸಿ ಆಸ್ಥಾನಕ್ಕೆ ಶೋಭಿಸುವ ಜರಿಪೇಟ ಸುತ್ತುತ್ತಾರೆ. ಅವರ ವ್ಯಕ್ತಿತ್ವಕ್ಕೆ ಆ ವೇಷವೇ ಹೊಂದುತ್ತದೆ. ಮದುವೆ ಯಾವ ರೀತಿ ನಡೆಯಬೇಕು ಎನ್ನುವ ಬಗೆಗೆ ಮಂತ್ರಿಗಳಿಗೂ ಎಂ. ಎಲ್. ಎ. ಗಳಿಗೂ ಸ್ವಲ್ಪ ಚರ್ಚೆ ನಡೆಯಿತು. ಕೊಡುವ ಬಿಡುವ ಬಗೆಗೆ ಇವರೇನೂ ಕೇಳಲಿಲ್ಲ. ಸಕ್ಕರೆ ಕಾರ್ಖಾನೆಯ ದಣಿಯನ್ನು ಸಿಹಿಗಾಗಿ ಕೇಳುವುದೇಕೆ ಎಂದು ಮಂತ್ರಿಗಳು ಆ ವಿಷಯ ಎತ್ತಲೇ ಇಲ್ಲ. ಅವರ ಪ್ರಶ್ನೆ ತತ್ವಕ್ಕೆ ಸೇರಿದುದು. ಬ್ರಾಹ್ಮಣ ಪುರೋಹಿತರನ್ನು ಕರೆಸಿ ಅವರು ಸುಲಗ್ನಾ ಸಾವಧಾನ ಹೇಳಿ, ಮೇಲೆ ಬಳಗದವರು ಧಾರೆಗೆ ಹಾಲು ನೀರು ಬಿಟ್ಟು, ಆಮೇಲೆ ಗಂಡು ಹೆಣ್ಣುಗಳು ಬೂವ ಉಣ್ಣುವುದು ತಿರುಮಲಾಪುರದ ಕಡೆಯ ಪದ್ಧತಿ. ಆದರೆ ಬ್ರಾಹ್ಮಣರನ್ನು ಕರೆಸದೆಯೇ ಮದುವೆ ಮಾಡಬೇಕೆಂಬುದು ಮಂತ್ರಿಗಳ ಅಭಿಮತವಾಗಿತ್ತು. ಮದ್ರಾಸಿನಲ್ಲಿ ಬಿ. ಎಲ್. ಓದುವಾಗಲೇ ಅವರು ಈ ಅಭಿಪ್ರಾಯವನ್ನು ರೂಪಿಸಿಕೊಂಡಿದ್ದರು. ಅದೇ ಮಾತನ್ನು ತಮ್ಮ ಹಳ್ಳಿಯ ಕಡೆಯ ರೈತಾಪಿ ಮುಖಂಡರ ಕೈಲೂ ಹೇಳಿ ಬಳಗಧಾರೆಯನ್ನು ಪ್ರೋತ್ಸಾಹಿಸಿ ದ್ದರು. ಅಲ್ಲದೆ ಸೋಶಲಿಸ್ಟ್ ನಾರಾಯಣರಾಯನನ್ನು ಸೋಲಿಸಿ ಬೋರನಿಂಗಪ್ಪ ನವರನ್ನು ಗೆಲ್ಲಿಸುವಾಗ, ಎಂದರೆ ನಾಲ್ಕು ತಿಂಗಳ ಹಿಂದೆ ತಾನೆ, ಬ್ರಾಹ್ಮಣರ ಮಂತ್ರಧಾರೆಯನ್ನು ಬಿಟ್ಟು ರೈತರ ಬಳಗಧಾರೆಯನ್ನೇ ಪೂರ್ತಿಯಾಗಿ ಅನುಸರಿಸ ಬೇಕೆಂದು ರೈತಬಾಂಧವರಿಗೆ ಮನದಟ್ಟು ಮಾಡಿದ್ದರು. ಈಗ ತಮ್ಮ ಮಗನಿಗೆ

ಬ್ರಾಹ್ಮಣ ಪುರೋಹಿತರ, ಮಂತ್ರಧಾರೆ ಮಾಡಿಸಿದರೆ ಎಡವಟ್ಟಾಗುತ್ತದೆಂಬ ಲೆಕ್ಕಾಚಾರ ಅವರದು. ಆದರೆ ಈ ಅಂಶವನ್ನು ಕೆಂಪಣ್ಣನವರ ಕೈಲಿ ಬಾಯಿ ಬಿಟ್ಟು ಹೇಳುವಂತಿಲ್ಲ. 'ನಮ್ಮ ನಮ್ಮ ಪದ್ಧತಿ ಇದ್ದಂಗೆ ಮಾಡಾಣ. ಬಳಗಧಾರೆ ಯಾಗಲಿ' – ಎಂದರು.

'ನಿಮ್ಮ ಮಾತು ನ್ಯಾಯ. ಸಾವಿರ ಸಮಸ್ತರು ಹಾಲು ಬಿಟ್ಟರೇ ಧಾರೆ. ಹಾಲಿಲ್ಲದೆ ರೈತರ ಮದುವೆ ಹ್ಯಂಗೆ ಆಗುತ್ತೆ?' – ಕೆಂಪಣ್ಣನವರು ಅಂದರು: 'ಆದರೆ ಕಾಲ ಆಧುನಿಕವಾಗ್ತಿದೆ. ನಾವು ಹಿಂದೆಬಿದ್ದರೆ ಬ್ರಾಹ್ಮಣರು ನಮ್ಮನ್ನೇ ಆಡ್ಕಂತಾರೆ. ಅದುಕ್ಕೆ ನಾನು ತಂಜಾಊರಿನಿಂದ ವಾಲಗ ತರುಸ್ತೀನಿ. ಮೈಸೂರಿನಿಂದ ಪುರೋಹಿತರನ್ನು ಕರೆಸಿ ಲೌಡ್ ಸ್ಪೀಕರ್ ಇಟ್ಟು ಮಂತ್ರ ಊದುಸ್ತೀನಿ.'

'ಮಂತ್ರ ಬಿಟ್ರೆ ಏನಾಯ್ತದೆ?'

'ಅಯ್ಯೋ ನಮ್ಮೂರ ಸಮಾಚಾರ ನಿಮ್ಗೆ ಗೊತ್ತಿಲ್ಲ. ಕೆಲವು ಲಾಯ್ರುಗಳವ್ರೆ ನಮ್ಮೂರಲ್ಲಿ. ಈ ರೈತರು ಏನು ಮಾಡಿದ್ರೂ ನಮ್ಹಂಗೆ ಆಗಾದಿಲ್ಲ ಅಂತಾರಂತೆ. ನಮ್ಮನ್ಲಿ ಬ್ರಾಹ್ಮಣ ಅಡಿಗೆಯೋರಿದಾರಲ, ಅವರು ನಮಗೆ ಬಂದು ವರದಿ ಹೇಳ್ತಾರೆ. ಯಾಕಾಗುಲ್ಲ ಅಂತ ನಾನು ಕೇಳೂದು. ನಮ್ಮಲ್ಲಿ ನೋಡಿವ್ರಲ. ಬ್ರಾಹ್ಮಣ ಅಡಿಗೆಯೋರನ್ನೇ ಮಡಗಿದೀವಿ. ಟೇಬಲ್ ಮ್ಯಾಲ್ನೇ ಮಾಡ್ತೀವಿ. ನಮ್ಮ ದೇವರಮನೆ ನೋಡಿದ್ರಲ. ಬ್ರಾಹ್ಮಣ ದೇವರಮನೆ ಇದ್ದಾಂಗೇ ಮಾಡಿದೀವಿ ಅವರ ತಲೆಮ್ಯಾಲೆ ಹೊಡದಹಂಗೆ. ಮಂತ್ರವಿಲ್ದೆ ಮದುವೆ ಮಾಡಿದ್ರೆ ಅವರು ಆಡ್ಕಳಾಕಿಲ್ವಾ?'

'ಅದು ನ್ಯಾಯ. ಆದರೆ ಅವರ ಜಾತಿ ಪುರೋಹಿತರನ್ನ ಕರಸ್‌ಬೇಕಲ.'

'ಸದ್ಯಕ್ಕೆ ಏನ್ ಮಾಡಾಕಾಯ್ತದೆ? ನಮ್ಮ ಜಾತೀಲಿ ವಿದ್ಯಾವಂತರು ಆಗೂಗಂಟ ಅವರ ಕೈಲೇ ಇರಲಿಲ್ವಾ ಅಧಿಕಾರ? ಈಗ ನಮ್ಮದ ನಾವ್ರು ಮಾಡ್ತಿಲ್ವಾ? ನಮ್ಮೋರುನ್ನೇ ಪುರೋಹಿತರನ್ನ ತಯಾರು ಮಾಡಬೇಕು. ಮೈಸೂರು ಸಂಸ್ಕೃತ ಕಾಲೇಜಿಗೆ ಎಲ್ಲಾ ಜಾತಿಯೋರುನ್ನೂ ಸೇರಿಸ್ಬೇಕು ಅಂತ ಸರ್ಕಾರದ ಆರ್ಡರೇ ಆಗಿದೆಯಲ್ಲ.'

'ನಾನೇ ಹೋಡೆದಾಡಿ ಆರ್ಡರ್ ಮಾಡುಸ್ದೆ. ಆದ್ರೆ ಏನಾಗಿದೆ ಅಂತೀರಾ? ಸ್ಕಾಲರ್‌ಶಿಪ್ ಕೊಡ್ತೀವಿ, ಹೋಗಿ ವೇದ, ಶಾಸ್ತ್ರ, ಮಂತ್ರ ಕಲಿರಲೇ ಅಂದ್ರೂ ನಮ್ಮ ಹುಡುಗರು ಅದುಕ್ಕೆ ಸೇರಾಕುಲ್ಲ. ನಾವ್ರು ಬಿ.ಎ. ಮಾಡ್ತೀವಿ, ಗೆಜೆಟೆಡ್ ಆಫೀಸರ ಕೆಲ್ಸ ಕೊಡ್ಸಿ ಅಂತರ್ವೇ ಹೊರ್ತು ಆ ಕಸುಬು ಮಾತ್ರ ಕಲಿಯುಲ್ಲ.'

'ವಳ್ಳೇದೇ ಆಯ್ತುಲ' – ಕೆಂಪಣ್ಣನವರು ತಮ್ಮ ಮುಖದ ಮೀಸೆಯೂ ಕುಣಿಯುವಂತೆ ಗಹಗಹಿಸಿ ನಕ್ಕರು: 'ಕೊನೆಗೆ ಮಂತ್ರ ಹೇಳಿ ಜಾಗಟೆ ಬಡಿಯೂದು

ಅವರ ಕೈಲೇ ಉಳಿಯುತ್ತೆ. ರಾಜ್ಯ ಆಳೂದು ನಮ್ಮ ಕೈಗೆ ಬರುತ್ತೆ.'

'ಏ, ಏ, ಏನಂತೀರ. ಅವ್ರೂ ಚುರುಕಾಗಿದಾರೆ. ಅವರ ಜಾತಿ ಹುಡುಗರಿಗೂ ಈಗ ಮಂತ್ರ ಗಿಂತ್ರ ಬ್ಯಾಡ. ಹೋಟಲಿಡ್ತೀವಿ, ಅಗ್ರಿಕಲ್ಚರ್ ಮಾಡ್ತೀವಿ, ಪ್ರಿಂಟಿಂಗ್ ಪ್ರೆಸ್ ಮಡಗ್ತೀವಿ ಅಂತ ಹ್ವರಡ್ತಿದಾವೆ. ನನ್ನ ಅಂದಾಜಿನಲ್ಲಿ ಇನ್ನೊಂದ್ ಇಪ್ಪತ್ತು ವರ್ಷದಲ್ಲಿ ಮಂತ್ರ ಹೇಳೋರೇ ಇರುಲ್ಲ.'

'ನಮ್ಮ ಕಲ್ಚರ್, ನಮ್ಮ ಸಂಸ್ಕೃತಿ ಉಳೀಬೇಕು. ಸಂಸ್ಕೃತ, ವೇದ, ಮಂತ್ರ, ಶಾಸ್ತ್ರ, ಇವೆಲ್ಲ ಹಾಳಾಗುಕ್ಕೆ ಬಿಡಬಾರದು. ನನ್ನ ಕೇಳಿದ್ರೆ ಪಾಠಶಾಲೇಲಿ ಜೋಯಿಸಿಕೆ ಕಲಿಯೂ ಬ್ರಾಹ್ಮಣ ಹುಡುಗರಿಗೂ ತಿಂಗಳಿಗೆ ಒಂದು ಹದಿನೈದು ಇಪ್ಪತ್ತು ರೂಪಾಯಿ ಸ್ಕಾಲರ್‌ಶಿಪ್ ಕೊಡಿಸಬೇಕು.'

ಇನ್ನೊಂದು ವಿಷಯ ಚರ್ಚೆಗೆ ಬಂತು. ಮದುವೆಯು ಗಂಡಿನ ಮನೆಯಲ್ಲಿ ಆಗಬೇಕೋ ಹೆಣ್ಣಿನ ಮನೆಯಲ್ಲಿ ಆಗಬೇಕೋ? ಗಂಡಿನ ಮನೆಯಲ್ಲೇ ಧಾರೆಯಾಗುವುದು ರೈತರ ಪದ್ಧತಿ. ಹೆಣ್ಣಿನ ಮನೆಯಲ್ಲಿ ಆಗುವುದು ಬ್ರಾಹ್ಮಣರ ಪದ್ಧತಿ. ಮಂತ್ರಿಗಳು ತಮ್ಮ ಮನೆಯಲ್ಲೇ ಆಗಲಿ ಎಂದರು. ಆದರೆ ಕನ್ಯಾದಾನ ಮಾಡುವ ತನ್ನ ಗೃಹದಲ್ಲೇ ಆಗಬೇಕೆಂಬುದು ಎಂ.ಎಲ್.ಎ.ಗಳ ಅಪೇಕ್ಷೆ. 'ಬ್ರಾಹ್ಮಣರದ್ದು ಅಂದರೆ ಅವರಪ್ಪನ ಜಾಗೀರಿಯೆ? ವಿದ್ಯಾವಂತರಾದ ಮೇಲೆ ನಾವು ಅದರಂತೆಯೇ ಮಾಡಬೇಕು' – ಎಂದು ಎಂ.ಎಲ್.ಎ.ಗಳು ಸಿಗರೇಟು ಹೊತ್ತಿಸಿ ಮಂತ್ರಿಗಳ ಬಾಯಿಗೂ ಬೆಂಕಿಕಡ್ಡಿ ಹಿಡಿದರು.

ಒಂದು ಸಲ ಹೊಗೆಯನ್ನು ಬಿಟ್ಟು ಮಂತ್ರಿಗಳು ಎಂದರು: 'ವಿದ್ಯಾವಂತರಾದ ನ್ಯಾಲೆ ನಾವು ಎಲ್ಲಾ ಅವರ ಪದ್ಧತೀನೇ ಅನುಸರಿಸ್ತಿದೀವಿ. ಉದಾಹರಣೆಗೆ ವರದಕ್ಷಿಣೆ, ಈಗ ನಮ್ಮಲ್ಲೂ ಬೆಳೆದುಬಿಟ್ಟಿದೆ.'

ಇದು ತನಗೆ ಕೊಟ್ಟ ವೈಯಕ್ತಿಕ ಸೂಚನೆ ಎಂಬುದು ಕೆಂಪಣ್ಣನವರಿಗೆ ತಕ್ಷಣ ಅರ್ಥವಾಯಿತು.

'ಆ ವಿಷಯ ಹೇಳಲೇಬ್ಯಾಡಿ. ನಮ್ಮಪ್ಪ ನನಗೆ ಸರಿಯಾಗಿ ಕೊಡಲಿಲ್ಲ ಅಂತ ಮುಂದೆ ನನ್ನ ಮಗಳೇ ಅನ್ನಕೂಡದು. ನಿಮ್ಮ ಅಪೇಕ್ಷೆ ಏನು ಹೇಳಿಬಿಡಿ. ಕಾರು, ರೇಡಿಯೋ, ಸೂಟು, ಸ್ಟೀಲ್‌ಪಾತ್ರೆ....'

'ಛೇ ಛೇ ಛೇ ಛೇ ಛೇ, ನಾನು ಅದಕ್ಕೆ ಅನ್ಲಿಲ್ಲ' – ಮಂತ್ರಿಗಳು ಅರ್ಧಕ್ಕೇ ತಡೆದು ಮಾತನಾಡಿದರು: 'ಸತ್ಕುಲ ಪ್ರಸೂತೆಯಾದ ಕನ್ಯೆ ಒಂದು ಬಿಟ್ಟರೆ ನಮಗೆ ಏನೂ ಬ್ಯಾಡ. ನಾವು ನೀವು ಒಂದೇ ಮನೆಯೋರಾದ ನ್ಯಾಲೆ ಪರಸ್ಪರ ಸಪ್ಪೋರ್ಟ್ ಇದ್ದೇ ಇರ್ತದೆ. ಹೆಣ್ಣಿನ ಮನೆಯೋರಿಂದ ಇಸ್ಕಂಡು ಶೋಕಿ ಮಾಡುಕ್ಕೆ ನಾವೇನು ದರಿದ್ರ ಬ್ರಾಹ್ಮಣರು ಕೆಟ್ಟೋದೆವೆ? ನಾವೆಷ್ಟಾದ್ರೂ

ಮಣ್ಣಿನ ಮಕ್ಕಳು, ರೈತರು. ಕೈನೀಡಿ ಕೊಡ್ತೀವೇ ಹೊರ್ತು ತಗೋಳೋರಲ್ಲ. ತೆರಕೊಟ್ಟು ಹೆಣ್ಣು ತರೂದು ನಮ್ಮ ಪದ್ಧತಿ.'

'ಅದು ಹಿಂದಿನ ಕಾಲದ್ದಾಯ್ತು. ಈಗ ಸಾಲಂಕೃತ ಕನ್ಯಾದಾನ, ವರೋಪ ಚಾರದ ಕಾಲ.'

'ಅದು ಬ್ರಾಹ್ಮಣರದ್ದೇ ಆಯ್ತಲ್ಲ ಪದ್ಧತಿ' – ಎನ್ನಬೇಕೆಂದು ಮಂತ್ರಿಗಳ ನಾಲಿಗೆಯ ತುದಿಗೆ ಬಂದಿತ್ತು. ಆದರೆ ಅದರಿಂದ ತಮ್ಮ ವ್ಯವಹಾರಕ್ಕೆ ನುಕ್ಸಾನ್ ಆಗುತ್ತದೆಂದು ಸುಮ್ಮನಾದರು.

೪

ತನ್ನ ತಂಗಿ ಮತ್ತು ತಿರುಮಲೇಶಗೌಡನ ಮದುವೆಯ ಬಗೆಗೆ ಮಾತ್ರವಲ್ಲ, ಸದ್ಯದಲ್ಲೇ ಅವನಿಗೆ ಒಂದು ದಿಮ್ಮನೆಯ ಕುಳದ ಮಗಳ ಜೊತೆ ಮದುವೆಯಾಗುತ್ತದೆಂಬ ಬಗೆಗೂ ವೆಂಕಟೇಶನಿಗೆ ಅನುಮಾನವಿರಲಿಲ್ಲ. ಆ ಸುತ್ತಿನಲ್ಲಿ ಯಾರ ಸ್ವಭಾವ ಹೇಗೆ, ಯಾರ ಉಸಿರಿನ ವಾಸನೆ ಎಂಥದು ಎಂಬುದನ್ನು ಅಂತಃಸ್ಫುರಣೆ ಎಂಬಷ್ಟು ಸಲೀಸಾಗಿ ಅವನು ಹೇಳಬಲ್ಲವನಾಗಿದ್ದ. ಈ ಗೌಡ-ಹುಡುಗನ ಜೊತೆ ತನ್ನ ತಂಗಿಯ ಮದುವೆಯಾಗುವುದನ್ನು ತಪ್ಪಿಸಲು ಅವನೂ ಸಾಧ್ಯವಾದಷ್ಟು ಪ್ರಯತ್ನ ಮಾಡಿದ್ದ. ಈ ಬಗೆಗೆ ಊರಿನ ಬ್ರಾಹ್ಮಣರಲ್ಲಿ ಯಾವ ಯಾವ ಒಳ ಪಂಗಡದವರು ಏನೇನು ಟೀಕೆ ಮಾಡುತ್ತಾರೆಂಬುದು ಅವನ ಕಲ್ಪನೆಗೆ ಬರುತ್ತಿತ್ತು. 'ಕಂಡೋರ ಬಾನೀಲಿ ಕುಡಿಯುಕ್ಕೆ ಹೋದ ಮುಳಕ ಕೆಟ್ಟಿತೇ ಏನಃ ಹೋರಿಕರೀಗೇನು, ಹೊಸಾ ಹಳ್ಳೀಕಾರ ಮುಳಕವೇ ಸಿಕ್ತು' – ಎಂದು ಬೇಸಾಯ ಕಸುಬಿನ ಸುಬ್ಬರಾಯರು ಅಂದುಕೊಳ್ಳುತ್ತಾರೆ. 'ಸ್ಮಾರ್ತರು ತಲೆತಗ್ಗಿಸೂ ಹಾಗಾಯ್ತು' – ಎಂದು ಎದುರು ಮನೆಯ ಕುಪ್ಪಣ್ಣಯ್ಯಂಗಾರರು ತಮ್ಮ ಹೆಂಡತಿಯ ಕೈಲಿ ಹೇಳಿಕೊಂಡು ಹಿಗ್ಗುತ್ತಾರೆ. 'ಪ್ರಚ್ಛನ್ನ ಬೌದ್ಧರಿಗೆ ಇನ್ನೇನಾಗಬೇಕು?' – ಎಂದು ವೆಂಕಣ್ಣಾಚಾರ್ರು ಒಳಗೇ ತೃಪ್ತಿಪಟ್ಟುಕೊಳ್ಳುತ್ತಾರೆ.

ತಿರುಮಲೇಶನ ಜೊತೆ ಮದುವೆ ತಪ್ಪಿದುದರಿಂದ ವೆಂಕಟೇಶನಿಗೆ ದೊಡ್ಡ ಹೊರೆ ಇಳಿದಂತೆ ಆಗಿತ್ತು. ಆದರೆ ಇಷ್ಟು ಬೇಗ ತಿರುಮಲೇಶನಿಗೆ ಬೇರೆ ಮದುವೆ ನಿಶ್ಚಯವಾದದ್ದನ್ನು ತಿಳಿದು ಅವನಿಗೆ ಕೆಡುಕೆನಿಸಿತು. ಅದು ತನಗೂ ತನ್ನ ಮನೆಗೂ ಆಗುತ್ತಿರುವ ಅವಮಾನವೆನಿಸಿತು. ಅವರ ಜಾತಿಯ ಹೆಣ್ಣಿನ ಜೊತೆ ಅವನ ಮದುವೆಯಾಗುತ್ತಿರುವುದು, ಮುಂದೆ ಎಂದೆಂದಿಗೂ ಇವರು ದೂರ ಹೋದಂತೆ ಎಂಬ ವ್ಯಾವಹಾರಿಕ ಸಮಾಧಾನದ ಜೊತೆಗೆ ಇದೇ ಮದುವೆಯಿಂದ

ತಾವು ಧಿಕ್ಕರಿಸಲ್ಪಟ್ಟವರೆಂಬ ಭಾವನೆ ಬರುತ್ತಿತ್ತು. ಆದರೆ ತನ್ನ ಮನೆಯ ಮರ್ಯಾದೆ ಉಳಿಸಲು ತಾನು ಏನು ಮಾಡಬಹುದು? ತಿರುಮಲೇಶನ ಮದುವೆಯಾಗುವ ಒಂದು ತಿಂಗಳಿನ ಒಳಗೆ ಯಾರಾದರೂ ಎಂ.ಎ.ಗಂ.ಎ., ಬಿ,ಇ. ಎಂ.ಬಿ.ಬಿ.ಎಸ್., ಇಲ್ಲ ಫಾರಿನ್‌ಗೆ ಹೋಗಿಬಂದ ಹುಡುಗನ ಜೊತೆಗೆ ಇವಳ ಮದುವೆ ಮಾಡಿ, ಮದುವೆಯ ಸಮಯಕ್ಕೆ ತುಮಕೂರಿನಿಂದ ಬಾಡಿಗೆಗಾದರೂ ಸರಿ, ಎರಡು ಕಾರು ತರಿಸಿ ಬ್ಯಾಂಡ್ ಸೆಟ್ ಕರೆಸಿ ಜಬ‍ರ್ಜು ಮಾಡಿದರೆ ಸಾಕು – ಜನ ಬಾಯಿ ಮುಚ್‌ಕತ್ತಾರೆ. ಇವಳೇ ಎಂ.ಎ. ಮಾಡಿದಾಳೆ. ಇವಳಿಗೆ ಇಂಥದು ಓದಿರೋ ಗಂಡು ಸಿಕ್ಕೋದು ಕಷ್ಟವೇನಿಲ್ಲ. ಸಿಟೀಲೇ ಹುಟ್ಟಿ ಬೆಳೆದ ಗಂಡುಗಳು ಇಷ್ಟು ಓದಿರೋಳುನ್ನ ಸಲೀಸಾಗಿ ಮಾಡ್ಕತ್ತುವೆ. ಮುಂದೆ ನಿಂತು ವಿಚಾರಿಸಬೇಕು. ಹದಿನೈದು ಸಾವಿರ ಖರ್ಚಾಗಲಿ ನನ್ ಮಗಂದು, ಮಾಡಿಹಾಕಬೇಕು ಎಂದು ಅವನ ಮನಸ್ಸು ಯೋಚಿಸುತ್ತಿತ್ತು.

ಆದರೆ ಇದಕ್ಕೆ ಅವಳು ಒಪ್ಪುತ್ತಾಳೆಯೇ? 'ಕತ್ತೆಲೌಡಿ, ಅತ್ಲೂ ಕೆಟ್ಟೆ, ಇತ್ಲೂ ಕೆಟ್ಟೆ. ಸುಮ್ನೆ ಒಪ್ಕಳೇ' – ಅನ್ನಬೇಕು. ತುಮಕೂರಿಗೆ ಹೋಗಿ ಲಾಯರ್ ಲಿಂಗಣ್ಣಯ್ಯನವರನ್ನು ಕೇಳಿದರೆ ಎಲ್ಲಾದರೂ ಇಂಥ ಗಂಡು ಹುಡುಕಿ ಕೊಡ್ತಾರೆ. ಆದರೆ ಮೊದಲು ಇವಳನ್ನು ಒಪ್ಪಿಸಬೇಕಲ್ಲ. ಈ ವಿಚಾರವನ್ನು ಮೊದಲು ಮನೆಯಲ್ಲಿ ಅಪ್ಪನಿಗೆ ಹೇಳಬೇಕು.

ಅಪ್ಪ ಇತ್ತೀಚೆಗೆ ಒಂದು ಥರಾ ಆಗುತ್ತಿದ್ದಾರೆ. ಅವರಿಗೆ ಮೊದಲಿನ ಹಾಗೆ ಪೂಜೆಯಲ್ಲೂ ಉತ್ಸಾಹವಿಲ್ಲ. ಯಾವುದಕ್ಕೂ ಹೋಗುವುದಿಲ್ಲ. ಯಾರ ಕೈಲೂ ಮಾತನಾಡುವುದಿಲ್ಲ. ಕೇಳಿದ್ದಕ್ಕೆ ಹೂಂ, ಇಲ್ಲ, ನಿನಗೆ ತಿಳಿದ ಹಾಗೆ ಮಾಡು, ಎಂಬ ಚುಟುಕಿನ ಉತ್ತರ ಕೊಡುತ್ತಾರೆ. ತಮ್ಮೊಳಗೇ ಏನೋ ಮಾತನಾಡಿಕೊಳ್ಳುತ್ತಿರುವಂತೆ ಅವರ ಮುಖದಲ್ಲಿ ಕಾಣುತ್ತದೆ. ತುಟಿಗಳು ಒಂದೊಂದು ಸಲ ಆಡುತ್ತವೆ. ಆದರೂ ಅವರನ್ನು ಕೇಳುವುದು ತನ್ನ ಕರ್ತವ್ಯವೆಂದು, ತನ್ನ ವಿಚಾರವನ್ನು ಪ್ರಸ್ತಾಪ ಮಾಡಿದ. ಇವನು ಹೇಳಿದುದನ್ನು ಅವರು ಸುಮ್ಮನೆ ಕೇಳಿದರೇ ಹೊರತು ಯಾವ ಉತ್ತರವನ್ನೂ ಹೇಳಲಿಲ್ಲ. 'ನೀನು ಏನಾರೂ ಒಂದು ಹೇಳಪ್ಪ' – ಎಂದದ್ದಕ್ಕೆ, 'ನಾಳೆ ಹೇಳ್ತೀನಿ' ಅಂದರು. ಎಂದಿನಂತೆ ತಮ್ಮ ಪಾಡಿಗೆ ತಾವು ಇದ್ದರು. ನಾಳೆ ಇವನೇ ಮತ್ತೆ ಜ್ಞಾಪಿಸಿದುದಕ್ಕೆ, 'ನಂಗೇನೂ ತಿಳಿಯುಲ್ಲ' ಎಂದುಬಿಟ್ಟರು.

ತಾನೇ ಹೋಗಬೇಕು ಅವಳ ಕೈಲಿ ಮಾತಾಡಬೇಕು ಎಂದುಕೊಂಡು, ಮರುದಿನ ಬೆಳಗ್ಗೆ ಬಸ್ಸಿನಲ್ಲಿ ಅವನು ಬೆಂಗಳೂರಿಗೆ ಹೋದ. ಅವಳಿದ್ದ ಕಾಲೇಜಿಗೆ ಹೋಗಿ ಆಫೀಸಿನಲ್ಲಿ ವಿಚಾರಿಸಿದಾಗ, 'ಅವರು ಕಾಲೇಜು ಬಿಟ್ಟು ಮೂರು

ತಿಂಗಳಾಯ್ತು' ಎಂದರು. 'ಯಾಕೆ ಬಿಟ್ಟಳು?' – ಎಂದದ್ದಕ್ಕೆ, ಹಣೆಗೆ ಗಂಧಾಕ್ಷತೆ ಇಟ್ಟುಕೊಂಡಿದ್ದ ಗುಮಾಸ್ತರು, 'ಕಾಲೇಜಿನವರೇ ತೆಗೆದುಹಾಕಿದರು' ಎಂದು ಉತ್ತರ ಕೊಟ್ಟರು. 'ಯಾಕೆ?' – ಎಂಬ ಪ್ರಶ್ನೆಗೆ, 'ನೀವು ಅವರಿಗೇನಾಗಬೇಕು?' ಎಂದು ಪ್ರತಿಯಾಗಿ ಕೇಳಿದರು.

'ಅಣ್ಣ.'

'ಇಂಡಿಸಿಪ್ಲೀನ್‌ಗೆ ತೆಗೆದರು.'

'ಈಗ ಎಲ್ಲಿದ್ದಾಳೆ ಗೊತ್ತೆ?'

'ನಮಗೇನು ಗೊತ್ತು?'

'ಸ್ಟಾಫಿನಲ್ಲಿ ಯಾರಿಗಾದರೂ ಗೊತ್ತೆ?'

'ನಮ್ಮ ಸ್ಟಾಫಿನಲ್ಲೂ ಯಾರಿಗೂ ಗೊತ್ತಿಲ್ಲ. ಅವರು ಇಲ್ಲಿದ್ದ ಹದಿನೈದು ಇಪ್ಪತ್ತು ದಿನ ಯಾರ ಕೈಲೂ ಮಾತೇ ಆಡ್ತಿರಲಿಲ್ಲ' – ಎಂದರು.

ಸ್ಟಾಫಿನಲ್ಲಿ ಎಲ್ಲರನ್ನೂ ವಿಚಾರಿಸಿದರೆ ಒಬ್ಬರಲ್ಲ ಒಬ್ಬರಿಂದ ಅವಳ ವಿಷಯ ತಿಳಿಯಬಹುದು. ಆದರೆ ಅವರೆಲ್ಲ ತನ್ನನ್ನು ಏನಂತ ತಿಳ್ಕೊತ್ತಾರೋ! – ಎಂಬ ಸಂಕೋಚವಾಯಿತು. ಇಂಟರ್‌ಮೀಡಿಯೆಟ್ ಫೇಲಾದ ಅವನಿಗೆ ಕಾಲೇಜು ಮೇಷ್ಟರುಗಳೆಂದರೆ ಯಾಕೋ ಹಿಂದಲೇಟು ಹೊಡೆಯುವ ಹಾಗಾಗುತ್ತಿತ್ತು. ಆ ಹಟಮಾರಿ ಸಿಕ್ಕಿದರೂ ನನ್ನ ಮಾತು ಕೇಳುತ್ತಾಳೆಯೋ ಇಲ್ಲವೋ ಎಂದು ಕೊಂಡು ಸಾಯಂಕಾಲದ ಬಸ್ಸು ಹತ್ತಿ ಊರಿಗೆ ಹಿಂತಿರುಗಿದ.

ಮರುದಿನ ಬೆಳಗ್ಗೆ ಮಂತ್ರಿಗಳ ಕಾರು ಬಂದದ್ದನ್ನು ಹೋಟೆಲಿನಲ್ಲಿ ಕುಳಿತಿದ್ದ ಅವನೇ ನೋಡಿದ. ಹಿಂಭಾಗದ ಸೀಟಿನಲ್ಲಿ ಮಂತ್ರಿಗಳು, ಅವರ ಹೆಂಡತಿ, ಕುಳಿತಿದ್ದರು. ಅವರು ಮನೆ ತಲುಪಿದ ಒಂದು ಗಂಟೆಯಲ್ಲಿ ಅವರ ಮನೆಯ ಆಳು ಬಂದು ಇವನನ್ನು, 'ಮೇಲಣ್ಣಗೌಡರು ಕರೀತಾರೆ' ಎಂದ. ಅವರು ಯಾವ ವಿಷಯ ಕೇಳಬಹುದು, ಅದಕ್ಕೆ ತಾನು ಯಾವ ಉತ್ತರ ಕೊಡಬೇಕು, ಎಂದು ಯೋಚಿಸುತ್ತಾ ಇವನು ನಡೆದ. ಮಂತ್ರಿಗಳು ಮಹಡಿಯ ಮೇಲಿನ ಅಂಗಳದಲ್ಲಿದ್ದರು. ಅದು ದೊಡ್ಡ ಗೌಡರ ಪೂಜೆಯ ಸಮಯ. ಮಂತ್ರಿಗಳು ಇವನನ್ನು ಎಂದಿನ ಉಕ್ಕುನಗೆಯಿಂದ ಬರಮಾಡಿಕೊಂಡರು.

'ಬಾ, ಕೂತ್ಕ' – ಎಂದು ತಮ್ಮ ಮಂಚದ ತುದಿಗೇ ಕೂರಿಸಿಕೊಂಡು ಹೇಳಿದರು: 'ಮದುವೆ ಸೆಟ್ಲಾಗಿದೆ. ಮುಂದೆ ನಿಂತು ಮಾಡಿಸ್ಕೊಡಾದು ನಿನ್ನ ಕೆಲಸ.'

'ನಂದೇನಿದೆ ಅದರಾಗೆ? ದಿವಾನರ ಮನೆ ಮದುವೆ ಅಂದ್ರೆ ಡೆಪ್ಟಿಕಮೀಶನರೂ ಬತ್ತಾರೆ ಚಪ್ಪರದ ಕಂಭಕ್ಕೆ ಗುಂಡಿ ತೋಡುಕ್ಕೆ' – ಎಂದು ಇವನೂ ತುಂಬ ನಗುತ್ತಾ ಹೇಳಿದ.

ಇವನ ಈ ಮಾತಿನಿಂದ ಅವರಿಗೆ ಸಂತೋಷವಾಯಿತು. 'ಆ ಕಾಲದ ದಿವಾನಿಕೆ ಅಲ್ಲಪ್ಪ ಇದು. ಪ್ರಜಾಪ್ರಭುತ್ವ. ನಿಮ್ಮಂತೋರ ಸೇವಕರು ನಾವು' – ಎಂದು ವಿನಯವನ್ನು ನುಡಿದು ಮುಖ್ಯ ವಿಷಯಕ್ಕೆ ಬಂದರು: 'ಮದುವೆ ಶಾಸ್ತ್ರಕ್ಕೆ ತಕ್ಕ ಹಾಗೆ ನಡೀಬೇಕು. ಎಲ್ಲಾ ಹೆಣ್ಣಿನ ಕಡೆ ಬೀಗರು ಹೇಳಿಯವ್ರೆ. ವರಪೂಜೆ, ಧಾರೆ, ನಾಗೋಲಿ, ಆಮ್ಯಾಲೆ ಇನ್ನೊಂದೆಂತದಪ್ಪಾ....' ಎಂದು ನೆನಪು ಮಾಡಿಕೊಂಡರು. ಸಿಗರೇಟು ತೆಗೆದು ಅವನಿಗೂ ಒಂದು ಕೊಟ್ಟು ತಾವೂ ಹೊತ್ತಿಸಿಕೊಂಡು ಹೊಗೆ ಎಳೆದು ಬಿಟ್ಟರೂ ಅದು ಜ್ಞಾಪಕಕ್ಕೆ ಬರಲಿಲ್ಲ. 'ಅದೇನೇನು ಶಾಸ್ತ್ರ ನೀನೇ ಹೇಳು' – ಎಂದು ಅವನನ್ನೇ ಕೇಳಿದರು.

'ಸಪ್ತಪದಿ, ಉರುಟಣೆ, ಅರುಂಧತೀ ದರ್ಶನ. ಆದರೆ ನಿಮ್ಮ ಜನದಲ್ಲಿ ಅದೆಲ್ಲ ಎಲ್ಲಿ ಮಾಡ್ತಾರೆ ಗೌಡರೆ? ನೀವು ಅವ್ನೆಲ್ಲ ಮಾಡುಕ್ಕೆ ಹ್ವರ್‌ಟ್ರೆ ರೈತಾಪಿ ಜನ ಸುಮ್ನಿರ್ತಾರಾ? ಮುಂದಿನ ಚುನಾವಣೇಲಿ ಓಟು ಕೊಡಾಕಿಲ್ಲ. ಭರ್ಜರಿಯಾಗಿ ಬಳಗಧಾರೆ ಮಾಡ್ಸಿ.'

ಇವನ್ನು ಕೇಳಿದ ಮಂತ್ರಿಗಳಿಗೆ ಪೆಚ್ಚಾಯಿತು. ಚುನಾವಣೆಗಳಲ್ಲಿ ತಾವು ರೈತಬಾಂಧವರೊಡನೆ ಆಡುವ ಮಾತುಗಳು ಈ ಕದೀಮನಿಗೆ ಗೊತ್ತಾಗಿದೆ ಎಂದು ತಕ್ಷಣ ಅರ್ಥವಾಯಿತು. ಇವನು ಎದುರಿಗಿದ್ದಾಗ ಅಥವಾ ಇತರ ಯಾವ ಬ್ರಾಹ್ಮಣರೇ ಇದ್ದಾಗಲೂ ತಾವು ಅಂತಹ ಮಾತು ಆಡಿಲ್ಲ. ಆದರೆ ನಮ್ಮ ರೈತರಲ್ಲಿ ಒಗ್ಗಟ್ಟಿಲ್ಲ. ಮೇಲಗಿರಿಗೌಡರು ಹಿಂಗಿಂಗಂದ್ರು ಅಂತ ಹೋಗಿ ಅವರವರ ಊರಿನ ಹಾರುವರಿಗೇ ಹೇಳುತ್ತಾರೆ. ಒಗ್ಗಟ್ಟು ಬರುವತನಕ ರೈತರು ಮುಂದುವರಿಯುವುದಿಲ್ಲ – ಎಂದು ಮನಸ್ಸಿನಲ್ಲೇ ಎಂದುಕೊಂಡರು. ತಮಗೆ ಆದ ಪೆಚ್ಚನ್ನು ಸ್ವಲ್ಪವೂ ತೋರಗೊಡದೆ ನಕ್ಕು ಹೇಳಿದರು: 'ಅಸಲು ಮಾತು ಅಂದ್ರೆ ನಾನು ಎರಡೂ ಬೇಕು ಅನ್ನೋನು. ಸಾವಿರ ಸಮಸ್ತರು ಹಾಲು ಬಿಟ್ಟು ಇವರಿಬ್ಬರೂ ಇವತ್ತಿನಿಂದ ಗಂಡ ಹೆಂಡ್ತಿ ಅಂತ ಸಮ್ಮತಿ ಕೊಡದೆ ಇದ್ರೆ ಮದುವೆ ಹ್ಯಾಗೆ ಆಗುತ್ತೆ? ಬಳಗ ಧಾರೆ ಅಂದ್ರೆ ಪೀಪಲ್ಸ್ ಕಾನ್ಸೆಂಟ್, ಪಬ್ಲಿಕ್ ರೆಕಾಗ್ನಿಶನ್. ಪ್ರಜಾಪ್ರಭುತ್ವ ಅಂದ್ರೆ ಅದೇ. ಆದರೆ ಸ್ಪಿರುಚಿಯಲ್ ಸೈಡಿಗೆ ಮಂತ್ರ, ಶಾಸ್ತ್ರಸಂಬಂಧ, ಎಲ್ಲ ಬೇಕು. ಇವೆರಡೂ ಆಗಬೇಕು ಅಂತ ನಮ್ಮ ಬೀಗರು ಹೇಳ್ತಾರೆ. ಅವರೂ ನಮ್ಮ ಕಡೆಯೋರ ಹಾಗೆ: ಶಾಸ್ತ್ರಸಂಬಂಧ, ವ್ರತಕತೆ, ಬ್ರಾಹ್ಮಣರು ಅಂದ್ರೆ ತುಂಬ ಗೌರವ.'

'ಹಾಗೇ ಮಾಡಿ. ಯಥಾ ರಾಜಾ ತಥಾ ಪ್ರಜಾ.'

'ನಮ್ಮನೆ ಪುರೋಹಿತರು ನೀವು. ನಿಮ್ಮ ಅಪ್ಪಾ ಅವರು ಮಂಡ್ಯಕ್ಕೆ ಬರಬೇಕು.'

'ಈ ಹುಡುಗಾಟದ ಮಾತು ಆದಾಗಿನಿಂದ ಅವರ ಬುದ್ಧಿಯೇ ಒಂದು ಥರಾ ಆಗಿದೆ. ದೇವರ ಪೂಜೆ ಒಂದು ಬಿಟ್ರೆ ಏನೂ ಮಾಡುಲ್ಲ. ಯಾರ ಕೈಲೂ ಮಾತೂ ಆಡುಲ್ಲ. ಈಗ ಮದುವೆ ಮಾಡಿಸುಕ್ಕೆ ಬನ್ನಿ ಅಂದ್ರೆ ಅವರು ಕೇಳುಲ್ಲ. ರೇಗಭೌದು. ಅವರುನ್ನ ಕರೀದೇ ಇರೂದೇ ಚೆನ್ನ.'

ಮಂತ್ರಿಗಳು ಈ ಬಗೆಗೆ ಯೋಚಿಸಿಯೇ ಇರಲಿಲ್ಲ. ಈಗ ಹೊಸ ಸಂಗತಿ ತಿಳಿದಂತಾಯಿತು. ಆದರೂ ಕೇಳಿದರು: 'ಬ್ಯಾಡ ಅಂದದ್ದು ತಪ್ತು. ಈಗ ಆಗಬೇಕಾದ್ದುಕ್ಕೆ ಬಂದು ಮಾಡಿಸಿದ್ರೆ ಏನು?'

'ತಪ್ಪಿದ್ದು ಸರಿ. ಆದರೆ ಅವರನ್ನ ಇದಕ್ಕೆ ಕರಕೊಂಡು ಹೋದ್ರೆ ಚನ್ನಾಗುಲ್ಲ. ಅವರ ಸ್ವಭಾವ ನಂಗೆ ಗೊತ್ತು.'

'ಹೋಕ್ಯಳ್ಳಿ ನೀನೇ ಬಾರಪ್ಪ. ಮಂತ್ರಗಿಂತ್ರದಾಗೆ ನೀನೇನು ಅಪ್ಪನಿಗಿಂತ ಕಮ್ಮಿಯಿಲ್ಲ.'

'ಗೌಡ್ರೇ, ನಿಮಗೆ ಗೊತ್ತಿಲ್ಲ' – ವೆಂಕಟೇಶ ಆತ್ಮೀಯ ಧ್ವನಿಯಲ್ಲಿ ಹೇಳಿದ: 'ಮಂಡ್ಯದ ಕಡೆ ಜೋಯಿಸ್ರು ಅಂದ್ರೆ ಮೈಸೂರು ಸಂಸ್ಕೃತ ಪಾಠಶಾಲೇಲಿ ಹನ್ನೆರಡು ಹನ್ನೆರಡು ವರ್ಷ ಓದಿರ್ತಾರೆ. ಹೆಣ್ಣಿನ ಕಡೆ ಅಂಥ ಘನಪಾಠಿ ಪುರೋಹಿತರು ನಿಂತಿರುವಾಗ ನಿಮ್ಮ ಕಡೆ ನಾನು ಬಂದ್ರೆ ಚೆನ್ನವೇ? ಪೌರೋಹಿತ್ಯದಲ್ಲಿ ನನಗೆ ಯಾವ ಮಹಾಪಾಠ ಆಗಿದೆ? ಆದದ್ದನ್ನಾದರೂ ಮಾಡಿಸಿ ಅಭ್ಯಾಸವಾಗಿದೆಯೆ? ತುಂಬಿದ ವಿವಾಹಮಂಟಪದಲ್ಲಿ ನಿಮ್ಮ ಮರ್ಯಾದೆ ಉಳೀಬ್ಯಾಡ್ವೇ?'

'ಹಾಗಾದ್ರೆ ಈಗ ಏನು ಮಾಡಾಣ ಅಂತೀಯ?'

'ಬೆಂಗಳೂರಲ್ಲಿ ಜೋಯಿಸರಿಗೆ ಕಮ್ಮಿಯೇ? ಇಬ್ಬರು ಸರಿಯಾದೋರನ್ನ ಕರ್ಕಂಡ್ ಹೋಗಿ.'

'ಆದರೆ ಕುಲಪುರೋಹಿತರು ಬರಬೇಕು ಯಂಗ್ಟೇಶು.'

'ನಾನು ಬತ್ತೀನಿ. ಆದರೆ ಆ ಪೀಠದ ಮೇಲೆ ಕೂತ್ಕಳೂ ಶಕ್ತಿಯಿಲ್ಲ. ಕುಲ ಪುರೋಹಿತರ ತಾಂಬೂಲ ನಂದೇ.'

ವೆಂಕಟೇಶನ ಮರ್ಮ ಮಂತ್ರಿಗಳಿಗೆ ತಕ್ಷಣ ಅರ್ಥವಾಗಲಿಲ್ಲ. 'ಆಯ್ತು ಬಿಡು. ಧಾರೆಗೆ ಮೊದಲು ದೇವರ ಕೆಲಸದ ದಿನವೇ ಇಲ್ಲಿ ಸಮಸ್ತ ಮತದೋರಿಗೂ ಊಟ ಆಗಬೇಕು. ಬ್ರಾಂಬ್ರ ಜಾತಿ ಊಟದ ಜವಾಬ್ದಾರಿ ನಿಂದು. ನಿಮ್ಮನ್ಲೇ ಆಗ್ಬೇಕು.'

'ಅದು ನಂಗಿರ್ಲಿ. ನಮ್ಮನೇಲಿ ಯಾಕೆ? ದೇವಸ್ಥಾನವಲ್ಲಿ ಆಗಭೌದಲ. ದೇವರ ಪ್ರಸಾದ. ನೀವೂ ಬಂದು ತಗೋಭೌದು.'

'ಸರಿಯಪ್ಪ' – ಸೂಕ್ಷ್ಮ ತಿಳಿಯದೆ ಮಂತ್ರಿಗಳು ಒಪ್ಪಿಕೊಂಡರು.

'ಏನು, ಲಾಡು ಮಾಡುಸ್ತೀರಿ ತಾನೆ? ನಮ್ಮ ಹೋಟಲಿನ ಕೃಷ್ಣಭಟ್ಟ ರಿದಾರಲ್ಲ. ಚಾಯಲ್ಲಿ ನೀರು ಬರೂಹಾಗೆ ಮಾಡ್ತಾರೆ. ಅಡಿಗೇನೂ ಅಷ್ಟೆ. ಗಮಗಮ ಅಂತಿರುತ್ತೆ ಸಾರು. ಅವರಿಗೆ ಎಲ್ಲ ಒಪ್ಪಿಸಿಬಿಡಿ. ಮೇಲ್ವಿಚಾರಣೆ ನನಗಿರಲಿ.'

ಇದಕ್ಕೂ ಮಂತ್ರಿಗಳು ಒಪ್ಪಿಕೊಂಡರು. ಅಷ್ಟರಲ್ಲಿ ರಂಗಮ್ಮ ಮಹಡಿ ಹತ್ತಿ ಮೇಲೆ ಬಂದಳು.

'ದೇವರು ಈಟು ಮಾಡಿದನಪ್ಪ. ಮುಂದಿಂದೆಲ್ಲ ನಿಂದು' – ಎಂದು ಮುಖ್ಯ ವಿಷಯವನ್ನು ಗಂಡನಿಗೆ ಹೇಳಿದಳು: 'ಗಲಾಟೇಲಿ ಮರ್ತೇ ಹ್ವಾಗಿತ್ತು. ಅವ್ನು ಒಪ್ಕಂಡು ಸಲೀಸಾಗಿ ಮದುವೆಯಾದ್ರೆ ಗುಡಿಗೆ ಹಿಂದಿನ ಗ್ವಾಡೆ ಕಟ್ಟುಸ್ತೀನಿ ಅಂತ ಹರಕೆ ಕಟ್ಕಂಡಿರ್‌ಲಿಲ್ವಾ? ಇದರ್ ಕುಟ್ಟೆ ಅದೂ ಮಾಡಿಸಿಬುಡಿ.'

'ಹಿಂದಿನ ಕಾಲದ ಗುಡಿಗೆ ಗ್ವಾಡೆ ಕಟ್ಸೋದು ಅಂದರೆ ಹುಡುಗಾಟವಾ? ಹದಿನೈದು ಇಪ್ಪತ್ತು ಸಾವಿರ ಮಡಗಬೇಕು' – ಮಂತ್ರಿಗಳು ಎಂದರು. ಈ ಅನಾವಶ್ಯಕ ಮಾತಿನಿಂದ ಅವರ ಮುಖದಲ್ಲಿ ಅಪ್ರಸನ್ನತೆ ಮೂಡಿತು.

ಆದರೆ ರಂಗಮ್ಮ ಬಿಡಲಿಲ್ಲ. 'ಆದ್ರಾಯ್ತದೆ. ಅವನ ಹರಕೆಯಿಂದ ಅಲ್ವಾ ಈಟೆಲ್ಲ ಆದದ್ದು? ಇಪ್ಪತ್ತು ಸಾವಿರ ಯಾವ ದೊಡ್ಡ ಗಂಟು?'

'ನೀನ್ ದುಡ್ಕಂಡ್ ಬಾ ಗೊತ್ತಾಯ್ತದೆ' – ಎಂದು ರೇಗುವಾಗ ಅವರಿಗೆ ವೆಂಕಟೇಶ ಪುರೋಹಿತನಾಗಲು ಮತ್ತು ಊರ ಹಾರುವರಿಗೆ ಊಟವನ್ನು ತನ್ನ ಮನೆಯಲ್ಲಿ ಮಾಡಿಸಲು ಒಪ್ಪದಿದ್ದ ಮರ್ಮ ಹೊಳೆಯಿತು. ಬಳಗಧಾರೆ ಮಾಡ ದಿದ್ದರೆ ಮುಂದಿನ ಚುನಾವಣೆಯಲ್ಲಿ ರೈತಬಾಂಧವರು ಓಟು ಕೊಡುವುದಿಲ್ಲವೆಂಬ ಅವನ ಚುನಾವಣೆಯ ಚುರುಕು ಈಗ ಮನಸ್ಸಿಗೆ ಹೊತ್ತಿತು. ಆ ಸಿಟ್ಟನ್ನೆಲ್ಲ ಕಾರಿಕೊಂಡು ಹೆಂಡತಿಯನ್ನು ಬೈದರು: 'ಎಲ್ಲಿ ಕೇಳಿ ಅಲ್ವಾ ಹರಕೆ ಮಾಡ್ ಕಳಾದು? ಆಟೊಂತರಾ ಗಂಟ ನಿಮ್ಮಪ್ಪ ತಂದ್‌ಕೊಡ್ತಾನಾ?'

'ನೀನೇ ನೋಡ ಮಗ ಇವರನ್ನಾದಾ? ಹರಕೆ ಮಾಡ್ಕಳ್ದೆ ಇದ್ರೆ ಅವ್ನು ಹಾರುವರ ಉಡುಗಿ ಮಾಡ್ಕ್ಯಂಡು ನಮ್ಮ ಮನಿಯೂ ನಾಶನಾಗ್ತಿತ್ತು. ನಿಮ್ದೂ ಕ್ಯಟ್‌ಹೋಯ್ತಿತ್ತು. ವಂಶ ಬ್ಯಳೀದೇ ಸುಳಿ ಮುರೀತಿತ್ತು. ದೇವರು ಈಟು ಮಾಡ್ಸಿದ್ರೆ ಇವರು ದುಡ್ಡು ಲೆಕ್ಕ ಮಾಡ್ತಾರೆ' – ಎಂದು ಅವಳು ವೆಂಕಟೇಶನಿಗೇ ಒಪ್ಪಿಸಿದಳು.

'ಅವ್ನಿಗೇನ್ ಒಪ್ಪುಸ್ತಿಯಾ ಎದ್‌ಹೋಗಲೇ' – ಎಂದು ಅವರು ಅರಚಿದರು.

ಆಕೆಗೆ ಅಳು ಬಂತು. ಕಣ್ಣೀರು ಒರೆಸಿಕೊಳ್ಳುತ್ತಾ, 'ಕಾಸಿನ ಸುಕ

ನೋಡಿದ್ರೆ ಇವರಿಗೆ ಮುಮ್ಮಕ್ಳಾಯ್ತದಾ? ನನ್ನ ನಗಾನೆಲ್ಲ ಮಾರಿ ಕಟ್ಟುಸ್ತೀನಿ' ಎಂದು ಕೊರಳಿನ ಭಾರವಾದ ಚಿನ್ನದ ಸರಕ್ಕೆ ಕೈ ಹಾಕಿದಳು. ತಾವು ಮಂತ್ರಿಗಳಾದ ಮೇಲೆ ಹೆಂಡತಿಯು ಎಂದೂ ಇಂತಹ ಧಿಕ್ಕಾರದ ಮಾತನ್ನಾಡಿರಲಿಲ್ಲ. ಈಗ ಕೋಪ ಮಿತಿ ಮೀರಿ, 'ಗ್ಯಾನ ಗೀನ ಎತ್ಲಗೈತ್ಲೆ ನಿಂಗೆ? ಮಕ್ಳಾಗಾಕುಲ್ಪಂತೆ ಮಕ್ಳು. ಜೋರಾಗಿ ಲಗಾಯ್ಸಿದ್ರೆ....' ಎಂದು ಆ ವಾಕ್ಯವನ್ನು ಪೂರೈಸುವ ಮೊದಲೇ ತಮ್ಮ ಮಾತಿನ ಪೂರ್ಣ ಅರಿವೂ ಆಗಿ, ಅವಳು ಹಾಗೆ ಹರಕೆ ಮಾಡಿಕೊಳ್ಳಲು ತಾವೇ ಕಾರಣರೆಂಬ ನೆನಪೂ ಬಂದು, ಈಗ ಕೋಪಿಸಿಕೊಳ್ಳಬಾರದೆಂದು ಸಮಾಧಾನ ತಂದುಕೊಂಡರು.

'ಈಗ ನೀನೇ ಏಳಪ್ಪ ಇವರಿಗೆ' – ಎಂದು ರಂಗಮ್ಮ ಬಿಕ್ಕಳಿಸುತ್ತಾ ವೆಂಕಟೇಶನ ಒತ್ತಾಸೆ ಬಯಸಿದಳು.

ಗಂಡ ಹೆಂಡಿರ ಜಗಳದಲ್ಲಿ ತಾನು ಬಾಯಿಹಾಕುವುದು ತಪ್ಪು ಎಂಬುದು ವೆಂಕಟೇಶನಿಗೆ ಗೊತ್ತು. ಯಜಮಾನರು ಹೆಂಡತಿಯ ಮೇಲೆ ತೋರಿಸುತ್ತಿರುವ ಸಿಟ್ಟು ಪೂರ್ತಿಯಾಗಿ ಆಕೆಗೇ ಸಲ್ಲಬೇಕಾದುದಲ್ಲವೆಂಬುದೂ ಅವನಿಗೆ ಗೊತ್ತು. ಆದುದರಿಂದ ತಕ್ಷಣ ಉಭಯತಾಪಿ ಸಮಾಧಾನದ ಮಾತನಾಡಿದ: 'ದಿವಾನ್‌ರೇ, ನೀವು ಹೇಳೂದು ನ್ಯಾಯ. ಯಜಮಾಂತಿ ಹರಕೆ ಮಾಡಿಕಂಡದ್ದೂ ನ್ಯಾಯ. ನಿಮಗೆ ಭಾರವಾಗಬಾರದು; ಕುಲದೇವರಿಗೆ ಸಿಟ್ಟು ಬರಬಾರದು. ಹೀಗೆ ಉಭಯತಾಪಿ ಸಹಕಾರದಿಂದ ಕೆಲಸ ಮಾಡಬೇಕು. ಈ ಮದುವೆ ಆಗೂದೊಂದು ಮುಖ್ಯವಲ್ಲ. ಮುಂದೆ ಮಕ್ಕಳು ಮರಿ ಆಗಬೇಕಲ್ಲ.'

'ಅದೇನು ಬಾಯಿಬಿಟ್ಟು ಹೇಳಪ್ಪ' – ದಿವಾನರು ಕೇಳಿದರು.

'ದೇವರ ಕೆಲಸ ಆಗೂದು ಮುಖ್ಯ. ನಿಮಗೆ ಎಷ್ಟು ಶಕ್ತಿ ಇದೆಯೋ ಅಷ್ಟನ್ನ ಕೈಯಿಂದ ಕಾಣಿಕೆ ಕೊಡಿ. ಉಳಿದಿದ್ದಕ್ಕೆ ಮುಜರಾಯಿ ಇಲಾಖೆಯಿಂದ ಗ್ರಾಂಟ್ ಕೊಡಿಸಿ ಕೆಲಸ ಮಾಡಿಸಿ.'

ಮಂತ್ರಿಗಳಿಗೆ ತಕ್ಷಣ ಸಂತೋಷವಾಯಿತು – ಇಷ್ಟು ಬೇಗ ಸಮಸ್ಯೆ ಬಗೆಹರಿದಿದ್ದಕ್ಕೆ. ಅದರ ಮೆಚ್ಚಿಕೆ ಆಯಿತು, ವೆಂಕಟೇಶನ ಬುದ್ಧಿಶಕ್ತಿಯನ್ನು ಕಂಡು. ಹೆಂಡತಿಯ ಕಡೆ ತಿರುಗಿ ಹೇಳಿದರು: 'ಅವನು ಪುರೋಹಿತ. ಬ್ರಾಹ್ಮಣ. ದೇವಸ್ಥಾನದ ಪೂಜೆ ಮಾಡೂ ಪುಣ್ಯಾತ್ಮ. ಅವನ ಬಾಯಲ್ಲಿ ಬಂದದ್ದು ದೇವರೂ ಕೇಳಬೇಕು. ಒಪ್ಪಂತೀಯಾ?'

'ನಾವೇ ಗ್ವಾಡೆ ಕಟ್ಟುಸ್ತೀವಿ ಅಂತ ಹರಕೆ ಮಾಡ್ಕಂಡಿದೀನಲ್ಲ ಮಗಾ' ಆಕೆ ವೆಂಕಟೇಶನನ್ನು ಕೇಳಿದಳು.

'ಸರ್ಕಾರದಿಂದ ನೀವು ಗ್ರಾಂಟ್ ಕೊಡುಸ್ದೆ ಮುಜರಾಯಿ ಮಿನಿಸ್ಟ

ತಾವಾಗಿಯೇ ತಂದು ಕೊಡ್ತಾರಾ? ಪ್ರಜಾ ಸರ್ಕಾರದಲ್ಲಿ ಸರ್ಕಾರಿ ದುಡ್ಡು ಕೊಡಿಸಿದ್ರೂ ಕೈಯಿಂದ ಕೊಟ್ಟಷ್ಟೇ ಪುಣ್ಯ. ಅದರ ಮ್ಯಾಲೆ ನಿಮ್ಮ ಕಾಣಿಕೇನೂ ಹಾಕ್ತೀರಲ. ಒಂದು ನೂರ ಒಂದು ರೂಪಾಯಿ ಕೊಡಿ. ಗ್ವಾಡೆ ಮುಗಿದ ದಿನ ಪಂಚಾಮೃತದ ಅಭಿಷೇಕ ಮಾಡಿಸಿ. ಏನು ದಿವಾನ್ರೆ?'

"ನಿನ್ನ ಮಾತು ನ್ಯಾಯ. 'ಪುರಾತನ ಕಾಲದಿಂದ ಬಂದ ದೇವಸ್ಥಾನ ಬೀಳೂ ಸ್ಥಿತೀಲದೆ. ಮುಜರಾಯಿ ಇಲಾಖೆಯೋರು ತಕ್ಷಣ ರಿಪೇರಿ ಮಾಡಿಸ್ದೆ ಇದ್ರೆ ಹಾಳಾಗುತ್ತೆ. ತಕ್ಷಣ ಇದರ ಹಿಂದಿನ ಗೋಡೆ ರಿಪೇರಿ ಮಾಡುಸ್ ಬೇಕು' ಅಂತ ನೀನು ಒಂದು ಅರ್ಜಿ ಬರೆದು ಗ್ರಾಮದ ಹತ್ತು ಜನದ ರುಜು ಹಾಕಿಸಿ ಕೊಡು. ಮುಜರಾಯಿ ಮಂತ್ರಿಗಳಿಗೆ ಕೊಡಿಸಿ ನಾನು ಮುಂದಿನ ಕೆಲಸ ಮಾಡುಸ್ತೀನಿ."

ವೆಂಕಟೇಶ ಅನಂತರ ಅವರ ಆರೋಗ್ಯ ವಿಚಾರಿಸಿದ. 'ನೀವು ಬಹಳ ಕೆಲಸ ಮಾಡ್ತೀರಿ. ಇನ್ನು ಮೇಲೆ ಆರೋಗ್ಯ ಚನ್ನಾಗಿ ನೋಡಿಕೋಬೇಕು' – ಎಂದ. ಹೊರಡುವಾಗ ತಾನಾಗಿಯೇ ಒಂದು ಸೂಚನೆ ಕೊಟ್ಟ: 'ಎಂಥೆಂಥೋರೋ ಕ್ಯಾಬಿನೆಟ್ ಮಿನಿಸ್ಟರಾಗಿದಾರೆ. ನಿಮ್ಮನ್ನ ಉಪಮಂತ್ರಿಗಳಾಗಿಟ್ಟಿರೂದು ನಮ್ಮ ಡಿಸ್ಟ್ರಿಕ್ಟಿಗೇ ಅಪಮಾನ. ಮುಂದಿನ ಸಲ ಅಸೆಂಬ್ಲಿ ಸೇರುವುದರೊಳಗೆ ನಿಮಗೆ ಬಡ್ತಿ ಕೊಡಬೇಕು ಅಂತ ಒತ್ತಾಯ ಮಾಡಬೇಕು.'

ಈ ಮಾತನ್ನು ಕೇಳಿ ಅವರಿಗೆ ಸಂತೋಷವಾಯಿತು. 'ನಾನು ಹೋಗ್ತೀನಿ ನಮ್ಮ. ಇನ್ನೂ ಸ್ನಾನ ಮಾಡಿಲ್ಲ' – ಎಂದು ಹೇಳಿ ಅವನು ಹೋದ ಮೇಲೆ ಮಂತ್ರಿಗಳಿಗೆ ಅವನ ಮಾತಿನ ಒಳ-ಅರ್ಥವಾಯಿತು. ಹ್ಯಂಗ್ ಬುಡುಸಿ ಅರ್ತ ಮಾಡ್ತಾನೆ ಅಷ್ಟೆ ಸೂಳೆಮಗ. ಇವನ ಬುಡ್ಡೀಲಿ ಪಾದರಸದ ಮೆದುಳೈತೆ – ಎಂದುಕೊಂಡರು.

೫

ಮದುವೆ ಅದ್ದೂರಿಯಾಗಿ ನಡೆಯಿತು. ತಿರುಮಲಾಪುರದ ಮತ್ತು ಸುತ್ತ ಮುತ್ತಲಿನ ಇಪ್ಪತ್ತು ಮೋಟಾರು ಭರ್ತಿ ಜನ ಹೋಗಿತ್ತು. ಬೆಂಗಳೂರಿನ ಮಂತ್ರಿಗಳ ಕಾರುಗಳೆಲ್ಲ ಮಧ್ಯದ ರಸ್ತೆಯಲ್ಲಿ ಓಡಿ ಹಿಂತಿರುಗಿದುವು. ಅಸೆಂಬ್ಲಿ ಮೆಂಬರುಗಳಲ್ಲಿ ಬಹುಭಾಗ ಸ್ವತಃ ಬಂದು ವಧೂವರರನ್ನು ಆಶೀರ್ವದಿಸಿದರು. ಮುಖ್ಯ ಮಂತ್ರಿಗಳು ವಧೂವರರನ್ನು ಆಶೀರ್ವದಿಸುತ್ತಿರುವ ದೊಡ್ಡ ಚಿತ್ರವು ಮರುದಿನ ಪತ್ರಿಕೆಗಳಲ್ಲಿ ಪ್ರಕಟವಾಯಿತು. ತಿರುಮಲಾಪುರದಲ್ಲಿ ಸಮಸ್ತ

ಜಾತಿಗೂ ಸುಗ್ರಾಸ ಭೋಜನ ನಡೆಯಿತು. ಆದರೆ ಎರಡು ತಪ್ಪುಗಳಾದುವು: ಉಡುಪಿಯ ಕೃಷ್ಣಭಟ್ಟನು ದೇವಸ್ಥಾನದ ಹಿಂಭಾಗದ ಮಂಟಪದಲ್ಲಿ ಮಾಡಿಸಿದ ಅಡಿಗೆಯನ್ನು ಉಣ್ಣಲು ಊರಿನ ಮುಪ್ಪಿನ ಬ್ರಾಹ್ಮಣ ಬ್ರಾಹ್ಮಣತಿಯರು ಹೋಗಲಿಲ್ಲ. ಇದಕ್ಕೆ ಬ್ರಾಹ್ಮಣರು ತಮ್ಮಲ್ಲಿಯೇ ಬೈದುಕೊಂಡರೇ ವಿನಾ ಗಟ್ಟಿಯಾಗಿ ಜಗಳವಾಡಲಿಲ್ಲ. ರೈತ ಬಾಂಧವರಿಗೆ ಮಾಡಿದುದರಲ್ಲಿಯೇ ಒಂದು ಭಾಗವನ್ನು ಅನಂತರ ಹರಿಜನರಿಗೆ ಕೊಟ್ಟು ಕಳಿಸಬಹುದೆಂದು ವಹಿವಾಟುದಾರರು ಹೇಳಿದರು. ಅವರು ಉಂಡ ಮೇಲೆ ತಾವು ಉಣ್ಣುವುದಿಲ್ಲವೆಂದು ಕೆಲವು ಮುಂದುವರಿದ ಹರಿಜನರು ಹೆದರಿಸಿದರು. ಆದರೆ ಮಾಡಿದುದರಲ್ಲಿ ಮೊದಲೇ ಅವರಿಗೆ ತೆಗೆದು ಕೊಟ್ಟರೆ ಇಡೀ ರೈತವರ್ಗ ದೊಂಬಿ ಮಾಡುತ್ತದೆಂಬುದು ವಹಿವಾಟುದಾರರಿಗೆ ಗೊತ್ತು. ಆದುದರಿಂದ ಹರಿಜನರಿಗೇ ಪ್ರತ್ಯೇಕ ಮಾಡುವುದೆಂದು ನಿರ್ಣಯಿಸಿ ಅದರ ಜವಾಬ್ದಾರಿಯನ್ನು ಬೆಟ್ಟಯ್ಯನವರಿಗೆ ವಹಿಸಿದರು. ಬೆಟ್ಟಯ್ಯನವರ ಮನೆಯ ಮುಂದೆ ಸೋಗೆಯ ತಡಿಕೆ ಕಟ್ಟಿ, ಅನ್ನ, ಎಸರು, ಮುದ್ದೆ, ತಾಳದ, ಪರಮಾನ್ನಗಳನ್ನು ಕೊಳದಪ್ಪಲೆಗಳ ಭರ್ತಿ ಮಾಡಿಸಿದರು. ಮಧ್ಯಾಹ್ನ ಊಟದ ಹೊತ್ತಿಗೆ ಒಂದು ಗಲಾಟೆ ಎದ್ದಿತು. ಬೆಟ್ಟಯ್ಯನವರು ಮಾದಿಗರು. ಅವರು ತಮಗಿಂತ ಅಂತಸ್ತಿನಲ್ಲಿ ಜಾತಿಯಲ್ಲಿ ಕೀಳು; ಅವರಲ್ಲಿ ತಾವು ಉಣ್ಣುವುದಿಲ್ಲವೆಂದು, ಅವರ ಪಕ್ಕದ ಕೇರಿಯ ಹೊಲೆಯರು ಜಗಳ ತೆಗೆದರು. ತಮ್ಮನ್ನು ಕೀಳರಲ್ಲಿ ಕೀಳೆಂದು ಹೊಲೆಯರು ಭಾವಿಸುವುದು ಬೆಟ್ಟಯ್ಯನವರಿಗೆ ತಿಳಿಯದ ಸಂಗತಿಯಲ್ಲ. ಆದರೆ ಗಾಂಧಿಯ ಆಶ್ರಮದಲ್ಲಿದ್ದು ಬಂದ ಸುಧಾರಣಾಮನಸ್ಸು ಒಂದು; ಅಲ್ಲದೆ ಎಲ್ಲರಿಗೂ ಹರಿಜನರೆಂಬ ಗೌರವದ ಹೆಸರು ಕೊಡಿಸಿ ಮಂಗಳೂರು ಹೆಂಚು ಹೊದಿಸಿದ ಮನೆ, ದರಖಾಸ್ತಿನಲ್ಲಿ ಜಮೀನು, ಅದನ್ನು ಆಬಾದು ಮಾಡಲು ಸರ್ಕಾರದಿಂದ ಸಹಾಯಗಳನ್ನೆಲ್ಲ ಕೊಡಿಸಿ, ಇಡೀ ಹರಿಜನವರ್ಗಕ್ಕೆ ನಾಯಕರಾಗಿ ಅಸೆಂಬ್ಲಿಯ ಮೆಂಬರಾಗಿರುವ ತಾವು ಮಾಡಿಸಿದರೂ ಉಣ್ಣುವುದಿಲ್ಲವೆನ್ನುತ್ತಾರೆಂದು ಅವರು ನಿರೀಕ್ಷಿಸಿರಲಿಲ್ಲ. ಬೆಟ್ಟಯ್ಯನವರ ಜಾತಿಯನ್ನು ಎಡಗೈ ಎಂದೂ, ತಮ್ಮನ್ನು ಬಲಗೈ ಎಂದೂ ಹೊಲೆಯರು ಕರೆಮಕೊಳ್ಳುತ್ತಿದ್ದರು. ಅವರ ಪೈಕಿಯ ಮುಖಂಡ ಕೋಣಿಗಯ್ಯ ಬಂದು ಬೆಟ್ಟಯ್ಯನವರ ಮುಖದ ಮುಂದೆಯೇ, 'ಬಲಗೈ ಉಣ್ಣಾಕೆ, ಎಡಗೈ ತಿಕ ತೊಳ್ಕಣಾಕೆ ದೇವ್ರು ಮಾಡವ್ನೆ. ಎಡಗೈ ಮುಟ್ಟಿದ್ದ ಬಲಗೈ ತಿಂತೈತೇನ್ಲೆ?' – ಎಂದು ಹೊರಟು ಹೋದ. ಉಳಿದವರು ಅವನನ್ನು ಅನುಸರಿಸಿದರು. ಹೀಗೆ ಅಂದುಹೋಗುವುದಕ್ಕೆಂದೇ ಅವರು ಮಾತನಾಡಿಕೊಂಡು ಬಂದಿದ್ದರು. ಎಡಗೈಯವರೇನೂ ಸುಮ್ಮನಿರಲಿಲ್ಲ. ಅಡಿಗೆ ಮಾಡುತ್ತಿದ್ದ ಸಟ್ಟುಗ, ಉರಿಮ ಉಳಿದಿದ್ದ ಸೌದೆ ಕೊಳಕೆ

ಗಳನ್ನು ಕೈಗೆ ತೆಗೆದುಕೊಂಡು ನುಗ್ಗಿದರು. ಆ ದಿನ ಜಗಳವಾಗಿದ್ದರೆ ಮೊದಲು ಬಲಗೈಯವರ ಹೆಂಚಿನ ಮನೆಗಳೆಲ್ಲ ಸುಟ್ಟುಹೋಗುತ್ತಿದ್ದುವು. ಅನಂತರ ಎಡಗೈಯವರದಕ್ಕೂ ಬೆಂಕಿ ಬೀಳುತ್ತಿತ್ತು. ನಾಲ್ಕಾರು ಹೆಣಗಳೂ ಉರುಳುತ್ತಿದ್ದುವು. ಆದರೆ ಬೆಟ್ಟಯ್ಯನವರು ತಮ್ಮ ಕಡೆಯವರನ್ನು ತಡೆದರು. ಇನ್ನೊಬ್ಬರು ಬೈದರೂ ತಾವು ಸಿಟ್ಟು ಮಾಡಿಕೊಳ್ಳಕೂಡದೆಂಬುದನ್ನು ಅವರು ಯಾವ ಕ್ಷಣದಲ್ಲೂ ಮರೆಯುತ್ತಿರಲಿಲ್ಲ. ಊಟ ಮಾಡದೆ ಹೋದವರಿಗೆ ಬೇರೆ ಅಡಿಗೆ ಸಾಮಾನು ಕಳಿಸುವಂತೆ ಹೇಳಲು ಊರಕಡೆಗೆ ನಡೆದರು.

ಬ್ರಾಹ್ಮಣರ ಪೈಕಿ ಕೆಲವರು ಬಸ್ಸಿನಲ್ಲಿ ಕೂತು ಮಂಡ್ಯಕ್ಕೆ ಹೋಗಿ ಬಂದರು. ಮಂಡ್ಯದ ಬ್ರಾಹ್ಮಣರ ಅಡಿಗೆ ತಿಪ್ಪೂರಿನ ಹೊಟೇಲು ಕೃಷ್ಣ ಭಟ್ಟನ ಪಾಕಕ್ಕಿಂತ ಚನ್ನಾಗಿತ್ತಂತೆ. ಬೆಲ್ಲವನ್ನು ತಾಕಿಸದೆ ಅಷ್ಟು ಜನರಿಗೂ ಮಂಡ್ಯದ ಗೌಡರು ಸಕ್ಕರೆಯ ಪಾಯಸವನ್ನೇ ಮಾಡಿಸಿದ್ದರಂತೆ. 'ಅವರ ಮನೆ ಮದುವೇಲಿ ಹೇಳಿದಷ್ಟು ಚನ್ನಾಗಿ ಮಂತ್ರಾನ ಯಾವ ಬ್ರಾಹ್ಮಣರ ಮದುವೇಲೂ ಕೇಳ್ಲಿಲ್ಲ'--ಎಂದು ಒಬ್ಬರು ವರದಿ ಹೇಳಿದಾಗ ಕೆಳಗಿನಮನೆ ಸೂರಪ್ಪನವರು, 'ಪಟ್ಟಣವಾಸದ ಪುರೋಹಿತರು ಅಂದ್‌ರೆ ಏನಂತೀರಿ? ಹೇಲುಮೇಲೆ ಅರೆಕಾಸು ಹಾಕಿ, ನಾಲಿಗೇಲಿ ಎತ್ತಿಕೊಂಡ್‌ರೆ ನಿನಗೇ ಅಂದ್‌ರೆ ಎತ್ತಿಕಂಡೇ ಬಿಡ್ತಾರೆ. ಮಂತ್ರ ಹೇಳದೆ ಏನು ಮಾಡಿಯಾರು?' ಎಂದರು.

# ಎಂಟು

## ೧

ಸುಮಾರು ಆರು ತಿಂಗಳು ವೆಂಕಟರಮಣಯ್ಯನವರು ಯಾರ ಕೈಲೂ ಮಾತನಾಡುತ್ತಿರಲಿಲ್ಲ. ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿಕೊಂಡು ಬರುತ್ತಿದ್ದರು. ಶ್ರೀನಿವಾಸನ ಮದುವೆಯಾದ ಮೂರು ತಿಂಗಳಿನಲ್ಲಿ ದೇವಸ್ಥಾನದ ಹಿಂಭಾಗದ ಗೋಡೆಗೆ ಒತ್ತಾಸೆಯಾಗಿ ಸರ್ಕಾರದ ಇಂಜಿನಿಯರುಗಳು ಸಿಮೆಂಟಿನ ಕೆಲಸ ಮಾಡಿ ಮುಗಿಸಿದರು. ನಲವತ್ತು ಸಾವಿರ ರೂಪಾಯಿ ಖರ್ಚಿನಲ್ಲಿ ಕೆಲಸವಾಗಿತ್ತು. ಅದಕ್ಕೋಸ್ಕರ ದೇವರಿಗೆ ವಿಶೇಷ ಪೂಜೆ ಅಭಿಷೇಕಾದಿಗಳು ನಡೆಯಬೇಕಾಗಿತ್ತು. ಅದಕ್ಕೆ ಮಂತ್ರಿಗಳು, ರಂಗಪ್ಪ, ಅವರ ಹೊಸ ಬೀಗರು, ಶ್ರೀನಿವಾಸ, ಅವನ ಹೆಂಡತಿ, ಎಲ್ಲರೂ ಬರುತ್ತಾರೆ.

ಅಭಿಷೇಕ ನಾಳೆ ಎನ್ನುವಾಗ ವೆಂಕಟರಮಣಯ್ಯನವರು ಮಗನನ್ನು ಕರೆದರು: 'ಬಾ ಇಲ್ಲಿ, ಒಂದಿಷ್ಟು ಮಾತಾಡಬೇಕು.'

ಆರು ತಿಂಗಳಿನ ನಂತರ ಅಪ್ಪ ಮಾತನಾಡುವುದನ್ನು ಕಂಡ ಅವನಿಗೆ ಸಂಭ್ರಮವಾಯಿತು. ಅಡಿಗೆಯ ಮನೆಯಲ್ಲಿ ದೋಸೆ ಹಿಟ್ಟು ತಿರುವುತ್ತಿದ್ದ ಹೆಂಡತಿಯ ಹತ್ತಿರ ಕೂತು ಮಗುವನ್ನು ಆಡಿಸುತ್ತಿದ್ದ ಅವನು, ಅದನ್ನು ಎತ್ತಿಕೊಂಡೇ ನಡುಮನೆಗೆ ಬಂದು ಅಪ್ಪನ ಎದುರು ನಿಂತ. ಅವರು ಹೇಳಿದರು: 'ನೋಡು, ನಾನು ತುಂಬ ಯೋಚನೆ ಮಾಡಿದೀನಿ. ಈ ದೇವರು ಅನ್ನೋದೊಂದು ಕಲ್ಲು. ಅದನ್ನ ಪೂಜೆ ಮಾಡಬಾರ್ದು. ನಾಳೆಯಿಂದ ನಾನು ಆ ಚಾಕ್ರಿ ಮಾಡುಲ್ಲ.'

ತಂದೆ ಹೀಗನ್ನುತ್ತಾರೆಂಬ ಕಲ್ಪನೆಯೇ ಅವನಿಗೆ ಇರಲಿಲ್ಲ. ಅವನು ಅವಾಕ್ಕಾದ. ಒಂದು ನಿಮಿಷದ ನಂತರ ಹೇಳಿದ: 'ಅಪ್ಪ, ನಿಂಗೂ ವಯಸ್ಸಾಯ್ತು. ಮಡಿ ಹುಡಿ ಮಾಡೂದು ಕಷ್ಟ. ಉಪಾಸಾನೂ ಇರಬೇಕು. ನಿನ್ನ ಪಾಡಿಗೆ ನೀನು ಸುಖವಾಗಿ ಸುಮ್ನಿರು.'

'ನಾನು ಮಾಡೋದು ಬಿಡೂದು ಮಾತ್ರ ಅಲ್ಲ. ಈ ಪೂಜಾರಿ ಕೆಲಸಾನೇ ಬಿಟ್ಟುಬಿಡಬೇಕು. ದೇವರು ಅನ್ನೋದೇ ಸುಳ್ಳು. ಅದರ ಪೂಜೆ ಸುಳ್ಳುಕಸುಬು. ನಿಜವಾದ ಏನಾದರೂ ಕಸುಬು ಮಾಡ್ಕಂಡಿರಬೇಕು. ನಿಂಗೆ ಬೇರೆ ಕಸುಬು ಹಿಡಿಸುಲ್ಲ. ಇದನ್ನ ಬಿಸಾಕಿಬಿಡು, ತಗ' – ಎಂದು ತಮ್ಮ ಜನಿವಾರಕ್ಕೆ ಕಟ್ಟಿಕೊಂಡಿದ್ದ ಗುಡಿಯ ಬೀಗದ ಕೈಯನ್ನು ಬಿಚ್ಚಿ ಅವನ ಕಾಲಿನ ಹತ್ತಿರ ಎಸೆದು,

'ಇನ್ನು ಮೇಲೆ ನಿನ್ನ ಇಷ್ಟ' – ಎಂದು ಹೇಳಿ ಸುಮ್ಮನಾಗಿಬಿಟ್ಟರು. 'ಅಲ್ಲ ಕಣಪ್ಪಾ...' – ಎಂದು ಅವನು ಮತ್ತೆ ಮಾತನಾಡುತ್ತಿದ್ದುದಕ್ಕೆ ಕೈ ಆಡಿಸಿ, ಇನ್ನೇನೂ ಮಾತಾಡಬೇಡವೆಂದು ಸೂಚನೆ ಕೊಟ್ಟು, ಹೆಗಲ ಮೇಲೆ ಒಂದು ಚೌಕ ಹಾಕಿಕೊಂಡು ಹೊರಗೆ ಹೊರಟುಹೋದರು.

ಅಪ್ಪನ ಈ ವರ್ತನೆ ವೆಂಕಟೇಶನಿಗೆ ಅರ್ಥವಾಗಲಿಲ್ಲ. ನಾಳೆ ಅವರೆಲ್ಲ ಗುಡಿಗೆ ಬರುತ್ತಾರೆ. ಅವರಿಗೆ ಪುರೋಹಿತರಾಗಿ ನಿಂತು ಪೂಜೆ ಮಾಡುವುದು ಅಪಮಾನ ಅಂತ ಹೀಗೆ ಯೋಚಿಸಿವರೇ? ಅದಕ್ಕೆ ಅಪಮಾನವೇನು? ದೇವಸ್ಥಾನ ಅವರಪ್ಪನ ಜಾಗೀರಿ ಏನಲ್ಲ. ಮುಜರಾಯಿ ಇಲಾಖೆಗೆ ಸೇರಿದ್ದ ಹತ್ತುಜನರ ಗುಡಿ. ಇವರ ತಾತನ ತಾತನ ತಾತನ ಯಾವನೋ ಬೇಕೂಫ ಪಾಳೇಗಾರ ನಾಗಿದ್ದ, ಅವನೇ ಇನಾಮತಿ ಹಾಕಿದ್ದ ಅಂತ ಇವರು ಅಂತಾರೆ. ಹಾಕಿದ್ದ – ರೇನಾಯಿತು? ಸಾರ್ವಜನಿಕರ ಭೂಮಿ ಇತ್ತು, ತೋಟಿ ತಳವಾರರಿಗೆ ಇನಾಮತಿ ಹಾಕುವ ಹಾಗೆ ಗುಡಿಪೂಜಾರಿಗೂ ಹಾಕಿದ. ಈಗ ಪ್ರಜಾಪ್ರಭುತ್ವ ಬಂದಿದೆ. ನಾಳೆ ಅಭಿಷೇಕ ಮಾಡಿಸುಕ್ಕೆ ಅವರು ಬರೂ ಹಾಗೆ ಯಾರು ಬೇಕಾದರೂ ಬರಬಹುದು – ಎಂದು ತನಗೆ ತಾನೇ ಸಮರ್ಥಿಸಿ ಹೇಳಿಕೊಂಡ. ಆದರೆ ಅಪ್ಪ ಹೇಳಿದ್ದು ಬರೀ ಇಷ್ಟೇ ಅಲ್ಲ. ದೇವರು ಅನ್ನೋದೇ ಸುಳ್ಳು. ಅದರ ಪೂಜೆ ಸುಳ್ಳುಕಸುಬು. ನಿಜವಾದ ಏನಾದರೂ ಕಸುಬು ಮಾಡ್ಕಂಡಿರಬೇಕು ಅಂದನಲ್ಲ. ಅವನಿಗೆ ಬುದ್ಧಿಗಿದ್ಧಿ ವಿಕಲ್ಪವಾಗಿದೆಯೇ? ಈಗ ಆರು ತಿಂಗಳಿಂದ ಒಂದು ಥರಾ ಇದಾನೆ. ಸತ್ಯನ ವಿಷಯದಲ್ಲಿ ಏನಾದರೂ ಹರಕೆ ಮಾಡಿಕೊಂಡಿರಬೌದು. ರಂಗನು ಹರಕೆ ಮಾಡಿಕೊಂಡ ಹಾಗೆಯೇ ಆಯಿತು. ಅಪ್ಪ ಏನಾದರೂ ಮಾಡಿಕೊಂಡಿದ್ದು ಅದರಂತೆ ಆಗದೆ ಇರೂದ್ರಿಂದ ಅವನಿಗೆ ಈ ದೇವರ ಮೇಲೆ ಅನುಮಾನ ಬಂದಿದೆಯೇ? ಮಾಡಿಕೊಂಡ ಹರಕೇನೆಲ್ಲ ಯಾವ ದೇವರೂ ಪೂರೈಸುಲ್ಲ. ಹಾಕಿಕೊಂಡ ಅರ್ಜೀನೆಲ್ಲ ಯಾವ ಸರ್ಕಾರವೂ ಮಂಜೂರು ಮಾಡುಲ್ಲ. ಅಪ್ಪನಿಗೆಲ್ಲೋ ಭ್ರಾಂತು – ಎಂದುಕೊಂಡ.

ಅಪ್ಪನ ವಿಚಾರ ಸರಿಯೋ ತಪ್ಪೋ! ಒಟ್ಟಿನಲ್ಲಿ ದೇವಸ್ಥಾನದ ಪೂಜೆಗೆ ಒಂದು ಏರ್ಪಾಟು ಮಾಡಬೇಕು. ಎಂಟು ಎಕರೆ ಗದ್ದೆ, ಹತ್ತು ಎಕರೆ ಹೊಲ; ಈ ಕಾಲದಲ್ಲಿ ಕಡಮೆಯಲ್ಲ. ಜಪಾನ್ ಮಾದರಿ ಮಾಡಿಸುಕ್ಕೆ ಶುರುಮಾಡಿದ ಮೇಲೆ ಎಂಭತ್ತು ಖಂಡುಗ ಇಳುವರಿಯಾಗ್ತಿದೆ. ಪೂಜೆ ಬಿಡೋದು ಬೇಡ ತನ. ಆದರೆ ಇನ್ನುಮೇಲೆ ತಾನೇ ಪ್ರತಿದಿನವೂ ಗುಡಿಗೆ ಹೋಗಿ ಪೂಜೆ ಮಾಡಿ ಕೊಂಡು ಬರುವುದು ತನಗೆ ಒಪ್ಪುವ ಕೆಲಸವಲ್ಲ. ಇಂಟರ್‌ಮೀಡಿಯೆಟ್ ಓದಿ ದವನು. ಸ್ವಂತ ಹೋಟೆಲಿನಲ್ಲೇ ದಿನಕ್ಕೆ ಇಪ್ಪತ್ತೈದು ರೂಪಾಯಿ ಉತ್ಪನ್ನವಿದೆ.

ಪತ್ರಿಕಾ ಪ್ರತಿನಿಧಿ. ಜೊತೆಗೆ ಸುತ್ತ ಗ್ರಾಮಗಳಲ್ಲಿ ಸಹಕಾರಿ ಸಂಘ, ಗ್ರಾಮ ಪಂಚಾಯಿತಿ ಮೊದಲಾದ ಚುನಾವಣೆಗಳಲ್ಲೆಲ್ಲ ಸಲಹೆ ಸೂಚನೆ ಕೊಡುತ್ತಾನೆ. ಕೇಳಲು ವಿರೋಧ ಗುಂಪಿನ ಜನಗಳು ಒಬ್ಬರಿಗೆ ಕಾಣದಂತೆ ಒಬ್ಬರು ನನ್ನ ಹತ್ತಿರ ಬರ್‍ತಾರೆ. ಅಂಥಾದ್ರಲ್ಲಿ ಗಂಟೆ ಬಡಿದುಕೊಂಡು ಮಂಗಳಾರತಿ ಮಾಡು ವುದು ನನ್ನ ಅಂತಸ್ತಿಗೆ ಕಡಿಮೆಯೇ. ಈಗ ಏನು ಮಾಡಬೇಕು? ಎರಡೇ ನಿಮಿಷ ದಲ್ಲಿ ಉಪಾಯ ಹೊಳೆಯಿತು: ಯಾರಾದರೂ ಒಬ್ಬ ಅರ್ಚಕರನ್ನು ವರ್ಷಕ್ಕಿಷ್ಟು ಅಂತ ಸಂಬಳದ ಮೇಲೆ ತಂದು ಇಟ್ಟುಕೊಳ್ಳುವುದು. ಅವರ ಊಟ ತಿಂಡಿ ನಮ್ಮ ಮನೆಯಲ್ಲೇ ಆಗಲಿ. ಇವತ್ತು ತಂದಿಟ್ಟವ ಅಂತ ನಾಳೆ ಹೇಳಿಕೆಮಾತು ಕೇಳಿಕೊಂಡು, ಪೂಜೆಯ ಅನುಭವ ಬಂದಿದೆ, ಇನಾಮತಿ ಜಮೀನು ನಂಗೇ ಸೇರಬೇಕು ಅಂತ ತರಲೆಗೆ ಹೋಗುವಂಥವನಾಗಕೂಡದು. ಸ್ವಲ್ಪ ವಯಸ್ಸಾಗಿ ಮುದುಕನಾಗಿದ್ದರೆ ಅಂಥದಕ್ಕೆಲ್ಲ ಹೋಗುವ ತಿಳಿವಳಿಕೆಯೂ ಇರೂದಿಲ್ಲ, ಧೈರ್ಯವೂ ಇರೂದಿಲ್ಲ. ಹೆಚ್ಚು ತಿಳಿವಳಿಕಸ್ಥನೂ ಆಗಕೂಡದು. ಮಂತ್ರ ತಂತ್ರ ತಕ್ಕಮಟ್ಟಿಗೆ ಗೊತ್ತಿರಬೇಕು. ತೀರ ವಿಶೇಷ ದಿನ ಅಂದ್ರೆ ನಾನು ಎದುರು ನಿಂತು ಮಂತ್ರ ಗಿಂತ್ರ ಹೇಳಬಹುದು. ಆದರೆ ನಾನು ಯಾವತ್ತೂ ಎಡಗೈಲಿ ಗಂಟೆ ಬಲಗೈಲಿ ಮಂಗಳಾರತಿ ಹಲಗೆ ಮಾತ್ರ ಹಿಡಕೋ ಕೂಡದು. ತಾವರೆ ಕೆರೇಲೋ ತುಮಕೂರಿನಲ್ಲೋ ವಿಚಾರಿಸಿದರೆ ಅಂಥೋರು ಸಿಕ್ಕೂದು ಕಷ್ಟವೇನೂ ಇಲ್ಲ – ಎಂದುಕೊಂಡ.

ಆದರೆ ನಾಳೆಯ ದಿನಕ್ಕೆ ಏನು ಮಾಡುವುದು? ಅಪ್ಪ ಹೇಳಿ ಹೋದ ರೀತಿ ನೋಡಿದರೆ, ನಾಳೆ ಒಂದು ದಿನದ ನಿಗ ನೋಡಿಕೋ ಸಾಕು – ನಾಡದ್ದಿನಿಂದ ನಿನ್ನ ಜವಾಬ್ದಾರಿ ಇಲ್ಲ ಎಂದರೂ ಕೇಳುವ ಹಾಗೆ ಕಾಣುವದಿಲ್ಲ. ನಾಳೆಯ ಪೂಜೆ ತಪ್ಪಿಸಿಕೊಳ್ಳೂದಕ್ಕೆ ಅವನು ಹೀಗೆ ಹೇಳಿದಾನೆ. ಹೇಗೆ ನಿಭಾಯಿ ಸೂದು? ತನಗೆ ಮಂತ್ರ ತಂತ್ರಗಳು ಬರದೆ ಇಲ್ಲ. ಸ್ವಲ್ಪ ಮರೆತಿರಬಹುದು. ಇವತ್ತು ರಾತ್ರಿ ಪುಸ್ತಕ ನೋಡಿಕೊಂಡರೆ ಸಾಕು, ಎಲ್ಲ ಜ್ಞಾಪಕಕ್ಕೆ ಬರುತ್ತೆ. ಅಕಸ್ಮಾತ್ ಮಧ್ಯೆ ತಪ್ಪಿತು, ಮತ್ತೆ ಯಾವುದೋ ಒಂದು ಜೋಡಿಸಿ ಜಾಡಿಸಿ ದರೆ ಇವರಿಗೇನು ತಿಳಿಯುತ್ತೆ ಮಣ್ಣಂಗಟ್ಟಿ? ಮನೆಯಲ್ಲಿ ದೊಡ್ಡದಾಗಿ ದೇವರ ಕೋಣೆ ಮಾಡಿಕೊಂಡು ಕೃಷ್ಣಾಜಿನದ ಮೇಲೆ ಕೂತು ತನ್ನನ್ನು ರಾಜರ್ಷಿ ಅಂತ ತಿಳ್ಕಂಡಿರುವ ಆ ಮುದುಕನ ಎಮ್ಮೆಗೇ ಮಧ್ಯೆ ಗಣ ಗಣ ಗಣ ಗಣಾಯ ನಮಃ ಗಿಣ ಗಿಣ ಗಿಣ ಗಿಣಾಯ ನಮಃ ಅಂದ್ರೂ ತಿಳಿಯುಲ್ಲ – ಎಂದುಕೊಂಡ. ಆದರೆ ಅವನ ಮುಖ್ಯ ಪ್ರಶ್ನೆ ಅದಲ್ಲ.

ಈ ಮಂತ್ರಿ, ತನ್ನ ಸಮವಯಸ್ಕ ತಿರುಮಲೇಶ, ಮತ್ತು ಅವರ ಬೀಗರು

ದೇವಸ್ಥಾನಕ್ಕೆ ಬಂದು ಅಭಿಷೇಕ ಮಾಡಿಸುವಾಗ ತಾನು ಮಂತ್ರ ಹೇಳಿಕೊಂಡು ಪೂಜಾರಿಕೆ ಮಾಡುವುದೇ? ಅದು ತನ್ನ ಗೌರವಕ್ಕೆ ಸಲ್ಲುತ್ತೆಯೇ? ಹಳ್ಳಿಯ ಇತರ ರೈತರು, ಕೂಲಿ ಕುಂಬಳಿಯವರು, ಕೊರವ ಕೊರಚರು, ಕುರುಬ ಕುಂಬಾರ ಮಗ್ಗ ನಾಯಿಂದ ಗಾಣಿಗ ಬಡಗಿ ತೋಟಿ ತಳವಾರ, ಯಾರ ಎದುರಿಗಾದರೂ ಅವನು ಪಂಚೆಯುಟ್ಟು ಕಂಕುಳ ಕೆಳಗೆ ಬರುವಂತೆ ಉತ್ತರೀಯ ಹೊದೆದು ಹಣೆಗೆ ವಿಭೂತಿ ಇಟ್ಟುಕೊಂಡು ನಿಂತು ಮಂತ್ರ ಹೇಳಬಲ್ಲ. ಆದರೆ ಹಣ, ಅಧಿಕಾರ, ವರ್ಚಸ್ಸುಗಳಲ್ಲಿ ತನ್ನ ಸರಿಸಮರೂ ತನಗಿಂತ ಮೇಲಿನವರೂ ಆದವರ ಎದುರು ನಿಂತು ಆ ಕೆಲಸ ಮಾಡುವುದು ಹೀನಾಯವೆನಿಸುತ್ತಿತ್ತು. ಅದೂ ಈ ಕಸುಬಿಗೆ ಎಂತಹ ತಿರಸ್ಕಾರವಿದೆ! ಪುರೋಹಿತ ಪೂಜಾರಿಯಂಥ ತಿರಸ್ಕಾರದ ಕಸುಬು ಯಾವುದೂ ಇಲ್ಲ. ಯಾವ ಕಥೆಯಲ್ಲಿ ನೋಡಲಿ, ಯಾವ ಪುರಾಣದಲ್ಲಿ ನೋಡಲಿ, 'ಒಂದಾನೊಂದು ಊರಿನಲ್ಲಿ ಒಬ್ಬ ಬಡಬ್ರಾಹ್ಮಣನಿದ್ದನು' ಎಂದೇ ಶುರುವಾಗುತ್ತದೆ. ಮೊನ್ನೆ ಸುದಾಮನ ಸಿನಿಮಾ ಬಂದಿತ್ತಲ್ಲ. ಯುಗ ಯುಗಗಳಿಂದ ಬೆಳೆದು ಬಂದ ಬ್ರಾಹ್ಮಣನ ಚಿತ್ರ ಅದು. ಆ ಕಸುಬನ್ನು ತಾನು ಹೇಗೆ ಮಾಡಬೇಕು, ಅದರಲ್ಲೂ ಸರಿಸಮಾನರ ಎದುರು?

ನಾಳೆಯ ಅಭಿಷೇಕವನ್ನು ಹೇಗೆ ನಿಭಾಯಿಸಬೇಕೆಂದು ಅವನು ಮತ್ತೆ ಯೋಚಿಸಿದ. ಹತ್ತು ನಿಮಿಷದಲ್ಲಿ ಉಪಾಯ ಹೊಳೆಯಿತು. ಪ್ರೈಮರಿ ಸ್ಕೂಲು ಮೇಷ್ಟರು ಶ್ಯಾಮಣ್ಣನವರಿಗೆ ಪೂಜೆಪುನಸ್ಕಾರದ ಮಂತ್ರ ತಕ್ಕಮಟ್ಟಿಗೆ ಬರುತ್ತಿತ್ತು. ಅವರ ಮನೆಗೆ ಹೋಗಿ ಕೇಳಿದ: 'ಮೇಷ್ಟರೇ, ನಾಳೆ ಬೆಳಗ್ಗೆ ನೀವು ಸ್ವಲ್ಪ ರಜ ತಗಳಕ್ಕೆ ಆಗುತ್ತೆಯೇ? ರಜ ಅಂದ್ರೆ ಅಫಿಶಿಯಲ್ ಅಲ್ಲ. ನಿಮ್ಮ ಹೆಡ್ಮಾಸ್ಟರಿಗೆ ಹೇಳ್ತೀನಿ.'

'ನನ್ನಿಂದ ಏನಾಗಬೇಕು ದೇವರು?' – ಎಂದು ಶ್ಯಾಮಣ್ಣನವರು ಕೈಜೋಡಿಸಿಕೊಂಡು ಎದ್ದು ನಿಂತರು.

'ಸ್ವಲ್ಪ ದೇವಸ್ಥಾನಕ್ಕೆ ಬರಬೇಕು. ನಾನು ಮಂತ್ರ ಹೇಳ್ತೀನಿ. ನೀವು ದೇವರಿಗೆ ಒಂದಿಷ್ಟು ಪೂಜೆ ಮಾಡಬೇಕು. ನಮ್ಮ ತಂದೆಗೆ ಹುಷಾರಿಲ್ಲ. ನಂಗೆ ಪುಸ್ತಕ ನೋಡ್ಕಳ್ದೆ ಪೂರ್ತಿ ಬರಲ್ಲ. ನೋಡ್ಕಂಡು ಪೂಜೆ ಮಾಡೋದು ಚನ್ನಾಗಿಲ್ಲ.'

'ಆಗಲಿ ಅದಕ್ಕೇನಂತೆ. ಮಂತ್ರಿಗಳು, ಅವರ ಬೀಗರು, ಮಗ ಸೊಸೆ ಬರ್ತಾರಂತೆ' – ಮೇಷ್ಟರು ಭಯ ಭಕ್ತಿಯಿಂದ ಕೇಳಿದರು.

'ಹೂಂ.'

ಮರುದಿನ ಬೆಳಗ್ಗೆ ಕೋಸಂಬರಿ ಮೊದಲಾದುವಕ್ಕೆ ಬೇಳೆ ತೆಂಗಿನಕಾಯಿ

ಗಳನ್ನು ಮಂತ್ರಿಗಳ ಮನೆಯವರು ವೆಂಕಟೇಶನ ಮನೆಗೆ ತಂದರು. 'ಅಲ್ಲಿಂದ ನೇರವಾಗಿ ದೇವಸ್ಥಾನಕ್ಕೇ ತಗಂಡು ನಡೀರಿ' – ಎಂದು ವೆಂಕಟೇಶ ಹೇಳಿಕಳಿಸಿದ. ಶ್ಯಾಮಣ್ಣನವರು ಸ್ನಾನ ಮಾಡಿ, ಹಣೆ ಭುಜ ತೋಳು ಮೊಣಕೈ ಎದೆಗಳಿಗೆಲ್ಲ ವಿಭೂತಿಪಟ್ಟೆ ಬಳಿದುಕೊಂಡು ಕಚ್ಚೆ ಪಂಚೆ ಉಟ್ಟು ಟವೆಲು ಹೊದೆದು, ನೆನೆದ ತಲೆಕೂದಲನ್ನು ತುದಿಗಂಟು ಕಟ್ಟಿ ನೆತ್ತಿಯ ಮೇಲಕ್ಕೆ ಹಾವಿನ ಹೆಡೆಯಂತೆ ಅಗಲಿಸಿ ದಬ್ಬ ಹಾಕಿಕೊಂಡು, ಎಂಟು ಗಂಟೆಯ ಹೊತ್ತಿಗೆ ಬಂದರು. ವೆಂಕಟೇಶ ಸಿದ್ಧನಾಗಿದ್ದ: ತನ್ನ ಮದುವೆಯ ಕಲಾಪತ್ತಿನ ಪಂಚೆಯನ್ನು ಎರಡು ಜೋಡಿಯಲ್ಲಿ ಲುಂಗಿ ಸುತ್ತಿ ಸಿಲ್ಕಿನ ಜುಬ್ಬ ಹಾಕಿದ್ದ. ಹೆಗಲ ಮೇಲೆ ಸಿಲ್ಕಿನ ಉತ್ತರೀಯ. ಎಡಗೈಗೆ ಮೂರು ಬಲಗೈಗೆ ಎರಡು ಚಿನ್ನದ ಉಂಗುರಗಳನ್ನಿಟ್ಟು, ಮದುವೆಯಲ್ಲಿ ಕೊಟ್ಟಿದ್ದ ಬಂಗಾರದ ಚೈನಿನ ಕೈಗಡಿಯಾರ ಕಟ್ಟಿಕೊಂಡ. ಹಣೆಗೆ ವಿಭೂತಿ ಇಡದೆ ಹುಬ್ಬುಗಳ ಮಧ್ಯಕ್ಕೆ ಕುಂಕುಮ ಇಟ್ಟು ಕೈಲಿ ಒಂದು ಪುಸ್ತಕ ಹಿಡಿದು ಅವರ ಜೊತೆ ಹೊರಟ.

ಹೋಟೆಲಿನಲ್ಲಿ ಅಡಿಗೆ ಮಾಡುತ್ತಿದ್ದ ಸುಬ್ಬಣ್ಣ ದೇವಸ್ಥಾನಕ್ಕೇ ಬಂದು ಕೋಸಂಬರಿಗೆ ಹೆಸರುಬೇಳೆ ನೆನೆಯಹಾಕಿ ಸೌತೇಕಾಯಿ ಹೆಚ್ಚಲು ಕುಳಿತ. ಅದಾದಮೇಲೆ ರಸಾಯನ ಮಾಡಬೇಕಾಗಿತ್ತು. ಹನ್ನೊಂದು ಗಂಟೆಯ ಹೊತ್ತಿಗೆ ಅಭಿಷೇಕವಾಗಬೇಕಾಗಿತ್ತು. ವೆಂಕಟೇಶ ನಿರೀಕ್ಷಿಸಿದ್ದಂತೆ ಮಂತ್ರಿಗಳ ಮನೆಯವರೆಲ್ಲ ಒಂದು ಗಂಟೆ ತಡವಾಗಿ ಬಂದರು. ರಂಗಮ್ಮ ತನ್ನ ಮದುವೆಯಲ್ಲಿ ತಂದಿದ್ದ ಕಾಶೀ ಬೂಟಾಹೂವಿನ ಸೀರೆಯುಟ್ಟು ಕೊರಳ ತುಂಬ ನಗ ಏರಿಸಿದ್ದಳು. ತಿರುಮಲೇಶನ ಹೆಂಡತಿ ಕುಮುದಿನಿ ಬೆಲೆ ಬಾಳುವ ಆದರೆ ತಿಳಿಯಾದ ಹಸುರು ಬಣ್ಣದ ತೆಳುವಾದ ಕಡ್ಡಿ ಅಂಚಿನ ಸಣ್ಣ ನೆರಿಗಿನ ರೇಷ್ಮೆಸೀರೆಯನ್ನು ಆಧುನಿಕ ರೀತಿಯಲ್ಲಿ ಉಟ್ಟು, ಒಂದೇ ಎಳೆ ಸರ ಹಾಕಿ, ಕಿವಿಗೆ ವಜ್ರದ ಓಲೆ ಮೂಗಿಗೆ ವಜ್ರದ ಮೂಗುಬೊಟ್ಟುಗಳನ್ನಿಟ್ಟಿದ್ದಳು. ಅವಳ ತಾಯಿಯ ವೇಷ ಭೂಷಣ ಆಧುನಿಕವಾಗಿರಲಿಲ್ಲವಾದರೂ ರಂಗಮ್ಮನವರಷ್ಟು ಪ್ರಖ್ಯಾತಿಯಾಗಿಯೂ ಕಾಣುತ್ತಿರಲಿಲ್ಲ. ಕಲಾಪತ್ತಿನ ಪಂಚೆ, ರೇಷ್ಮೆ ಶರಟು, ಮೇಲೆ ಜರಿಯ ಶಲ್ಯ ಹೊದೆದ. ತುಂಬುಮೀಸೆ ಅಗಲವಾದ ಮುಖದ ಕೆಂಪಣ್ಣನವರು ನಾಟಕದ ಭೋಜರಾಜನಂತೆ ಕಾಣುತ್ತಿದ್ದರು. ಮೊಮ್ಮಗನ ಮದುವೆಯಲ್ಲಿ ಬೀಗರು ಹೊದೆಸಿದ ದೊಡ್ಡ ಕಾಶ್ಮೀರದ ಶಾಲು ಹೊದೆದು, ಕೈಲಿ ಹೊಸ ಬೆತ್ತದ ಕೋಲು ಹಿಡಿದು ದೊಡ್ಡ ಪಟೇಲ್ ತಿರುಮಲೇಗೌಡರು ರಾಜರ್ಷಿಯ ವೇಷದಲ್ಲೇ ಇದ್ದರು. ಅವರು ಕುಳಿತುಕೊಳ್ಳಲು ಆಳು ಒಂದು ಕೃಷ್ಣಾಜಿನವನ್ನು ಸುತ್ತಿ ಹಿಡಿದು ತಂದಿದ್ದ. ತಿರುಮಲೇಶ ಮಾತ್ರ ಮಂಕಾಗಿದ್ದ. ಜರಿ ಅಂಚಿನ

ಪಂಚೆಯುಟ್ಟು ಸಿಲ್ಕ್ ಶರಟು ಹಾಕಿಕೊಂಡಿದ್ದರೂ ಅವನೇಳಿದ: 'ಈಗ್ಯಾಕಪ್ಪ
ಗೆಲುವಿರಲಿಲ್ಲ; ಮೊದಲಿಗಿಂತ ಈಗ ಬಡವಾಗಿದ್ದ. ಅವ
ವೆಂಕಟೇಶ ಧಾರೆಯ ಮಂಟಪದಲ್ಲಿ ದೂರದಲ್ಲಿ ನೋಡಿದ
ಯಾಗಿ ನೋಡಿದ: ಮುಖ ಲಕ್ಷಣವಾಗಿ, ಸಾಕಷು
ಮೈಕಟ್ಟು ಪೀಚು ಎನಿಸಿತು. ತಯ ನೆನ್ನೆ ಹೇಳಿದೆನಲ್ಲ.

ದೊಡ್ಡ ಪಟೇಲರು ಗರ್ಭಾಂಕಣದ ಬಾಗಿಲಿನ ಹ್ಯೊಸ್ಕೆ ನನ್ನ ಕೇಳಬ್ಯಾಡ' –
ಕೊಂಡು ಪದ್ಮಾಸನದಲ್ಲಿ ಕುಂಡಿಸಿದರು. ಎದುರುನ್ನು ಮಾತನಾಡಲು ತಮಗೆ
ಸೊಸೆ ಮತ್ತು ಬೀಗಿತ್ತಿಯರೊಡನೆ, ರಂಗಮ್ಮ ದೇವ್ರು.
ಕುಳಿತಳು. ಅಜ್ಜನಿಗೆ ಒಂದು ನೂರು ಹಿಂದೆ ಅವರು ನೋಡಿಕೊಳ್ಳುತ್ತಿದ್ದುದು
ಅಭಿಷೇಕವನ್ನು ನೋಡುತ್ತಿದ್ದ. ಶ್ಯಾಮಣ್ಣನ ಕೊಬ್ಬರಿ ಹಾಕಿ ರೋಕು ಮಾಡಿಸು
ವೆಂಕಟೇಶ ಹೊರಗೆ ನಿಂತುಕೊಂಡೇ ರಾಗವಾ ಭೂಕಂದಾಯ ಕೊಟ್ಟು ಪಟ್ಟಗೆ
ನೀನು ಇಷ್ಟು ಚಂದಾಗಿ ಮಂತ್ರ ಹೇಳ್ತಿಯ ಯನ್ನೂ ಅವನೇ ಹೊತ್ತಿದ್ದ. ಈಗ
ನಿಮ್ಮಪ್ಪೆಲ್ಲಿ?' – ಎಂದು ದೊಡ್ಡ ಪಟೇಲರು ರುವ ತೀರ್ಮಾನ ಯಾಕೆ ಮಾಡ
'ಮೈಸರಿ ಇರಲಿಲ್ಲ, ಮಲಗಿದ್ದರು' – ಗುವುದಾಗಿ ಸತ್ಯ ಕಾಗದ ಬರೆದು
ತಮ್ಮ ಕುಲದೇವರ ಗುಡಿಯೊಳಗೆ ಎಕ್ಕಡದಲ್ಲಿ ಹೊಡೆದು ಬಂದಾಗಿನಿಂ
ಬೀಗರನ್ನು ಕರೆದುಕೊಂಡು ಗುಡ್ಡಂಡ್ಯದ ಅವರ ಜಾತಿಯ ಹೆಣ್ಣು ತಂದು ಅವನಿಗೆ
ದಾಗಿ ಕಟ್ಟಿಸಿದ ಹಿಂಭಾಗದ ಕಪರ ಮಂಕು, ಯೋಚನೆ, ಜಾಸ್ತಿಯಾಗಿ ನಂಗೆ
ಶಿಲ್ಪಿಗಳ ಕಟ್ಟಡದ ಗ್ಗೊತ್ತ! – ಎಂದು ಅವನು ಯೋಚಿಸಿದ.
ಹೇಗೆ ತಿಳಿಯಲಿಲ್ಲವೇಲ್ಲಿ ಗುಡಿಸಲು ಸಿದ್ಧವಾಯಿತು. ಮನೆಯಿಂದ ಎರಡು ಚರು
ಸ್ವಲ್ಪ ಸೋತ್ತಿ ಸೌಟು, ಒಂದು ಚೊಂಬು, ಒಂದೆರಡು ಪುಡಿಪಾತ್ರೆ, ಹಾಸಲು
ಮಜಂಡು ಣಿಚೀಲ, ಹೊದೆಯಲು ಒಂದು ದುಪ್ಪಟಿಯನ್ನು ತೆಗೆದುಕೊಂಡು
ೆ ಅವರು ಅಲ್ಲಿಗೆ ಹೊರಟುಹೋದರು. 'ಅಪ್ಪ, ನಿಂಗೆ ಬೇಕಾದ್ರೆ ತ್ವಾಟದಾಗಿರು.
ಊಟ ತಿಂಡಿ ಮನೆಯಿಂದ ಕಳುಸ್ತೀವಿ' – ಎಂದು ಮಗ ಹೇಳಿದರೆ ಕೇಳಲಿಲ್ಲ.
ವೆಂಕಟೇಶನೇ ಒಂದು ಕುಕ್ಕೆಯಲ್ಲಿ ಅಕ್ಕಿ, ಬೇಳೆ, ಮೆಣಸಿನಪುಡಿಗಳನ್ನು ಇಂಸಿ
ಆಳಿನ ತಲೆಯ ಮೇಲೆ ಕಳಿಸಿದ. ಅಪ್ಪ ಹೋದ ಮೊದಲನೆಯ ದಿನ ಅವನಿಗೆ
ಮನೆ ಬಿಕೋ ಎನಿಸುತ್ತಿತ್ತು. ವಾನಪ್ರಸ್ಥ ಅಥವಾ ಸನ್ಯಾಸ ಎಂಬುದು ಅವನು
ತಿಳಿಯದುದಲ್ಲ. ಅದೆಲ್ಲ ಹಿಂದಿನ ಕಾಲದಲ್ಲಿತ್ತು. ಆದರೆ ಅಪ್ಪ ಮಾಡುತ್ತಿರುವುದು
ವಾನಪ್ರಸ್ಥವಲ್ಲ. ವಾನಪ್ರಸ್ಥಕ್ಕೆ ಪತ್ನಿ ಸಮೇತ ಹೋಗಬೇಕು. ಸನ್ಯಾಸವೂ
ಅಲ್ಲ. ಸನ್ಯಾಸಿ ಸ್ವಂತ ತೋಟದಲ್ಲಿರುವುದಿಲ್ಲ. ಅವನಿಗೆ ಸ್ವಂತ ಅನ್ನುವುದೇ
ಇರಕೂಡದು. ಏನೋ ಆಯಿತು, ಹೋಯಿತು. ಅವಳೊಬ್ಬ ಕತ್ತೆಲೌಡಿ ಹೀಗೆ

ಮಾಡಿದಳು ಅಂತ ಇವನು ಇಷ್ಟೊಂದು ಯಾಕೆ ಹಚ್ಚಿಕೊಬೇಕು? ಅವರ ತಲೆಯ ಮೇಲೆ ಮೆಟ್ಟ ಹಾರಿದ ಹಾಗೆ ಇವಳಿಗೆ ಬುದ್ಧಿ ಹೇಳಿ ಒಂದು ಒಳ್ಳೇ ಗಂಡು ನೋಡಿ ಮದುವೆ ಮಾಡಿದರೆ ಮುಗೀತು, ಎಂದು ರಾತ್ರಿ ಎಲ್ಲ ಯೋಚಿಸಿದ. ಅವನ ಹೆಂಡತಿ ಜಯಲಕ್ಷ್ಮಿಯೂ ಮಾವನವರ ಬಗೆಗೆ ಕೊರಗಿದಳು.

ವೆಂಕಟೇಶ ಬೆಳಗ್ಗೆ ಎದ್ದವನೇ ತೋಟಕ್ಕೆ ಹೋದ. ಅಪ್ಪ ಕೊಳದಲ್ಲಿ ಮುಳುಗಿ ಸ್ನಾನ ಮಾಡುತ್ತಿದ್ದರು. ಅವರ ಜನಿವಾರ ಕೊರಳಿನಲ್ಲಿರದೆ ಕೋಳದ ಕಟ್ಟೆಯ ದಡದಲ್ಲಿತ್ತು. ಅವನೇ ಕೇಳಿದ: 'ಇದೇನಪ್ಪ, ಹೀಗೆ ಜನಿವಾರ ತೆಗೆದಿಟ್ಟಿದೀಯ? ಹೀಗೆ ಮಾಡಭೌದೆ?'

'ಅದರಲ್ಲೇನಿದೆ ಅಂತ, ಅರಳೆ ನೂಲಿನ ದಾರ.'

ಅವರಿಗೆ ಬುದ್ಧಿಭ್ರಮಣೆಯಾಗಿರಬಹುದೆ? – ಎಂದು ಅವನು ಶಂಕಿಸಿದ. ಶಾಸ್ತ್ರಸಂಬಂಧ, ದೇವರು, ಮಡಿ ಮೈಲಿಗೆ ಆಚಾರಗಳಲ್ಲಿ ಅವರು ಎಂದಿಗೂ ಕಟ್ಟುನಿಟ್ಟು. ತಾನು ಹೋಟೆಲಿನ ಕಟ್ಟಡ ಕಟ್ಟಿಸಿದಾಗ, ಬ್ರಾಹ್ಮಣ ಮಾಡಬಾರದ ಕೆಲಸ ಅಂದಿದ್ದರು. ಅಂಥವರು ಜನಿವಾರವನ್ನು ಬರೀ ನೂಲಿನ ದಾರ ಎನ್ನುತ್ತಿದ್ದಾರಲ್ಲ? ಶಾಸ್ತ್ರಕರ್ಮಗಳನ್ನೆಲ್ಲ ಹೀಗೆ ತಿರಸ್ಕರಿಸುವವರು ಎರಡೇ ರೀತಿಯ ಜನ: ಬುದ್ಧಿಭ್ರಮಣೆಯಾಗಿರುವವರು, ಅಥವಾ ಸನ್ಯಾಸಿಗಳು. ಪೂರ್ತಿ ಸನ್ಯಾಸಿಯೇ ಆಗಿದ್ದರೆ ನಮ್ಮ ತೋಟದಲ್ಲಿ ಯಾಕೆ ಗುಡಿಸಲು ಕಟ್ಟಿಸಿಕೊಂಡಿರುತ್ತಿದ್ದರು? ಅವನಿಗೆ ಯಾವುದೂ ಸರಿಯಾಗಿ ತಿಳಿಯಲಿಲ್ಲ. ಅವರು ಸ್ನಾನ ಮಾಡುವುದನ್ನೇ ನೋಡುತ್ತಾ ನಿಂತುಬಿಟ್ಟ. ಸ್ನಾನವೆಂದರೆ ಅವರು ಮೈ ಕೈ ತಿಕ್ಕಿಕೊಳ್ಳಲಿಲ್ಲ. ಸುಮ್ಮನೆ ಸೊಂಟ ಮುಟ್ಟದ ನೀರಿನಲ್ಲಿ ನಿಂತು, ತಲೆ ಪೂರ್ತಿ ಮುಳುಗಿ ಮುಳುಗಿ ಏಳುತ್ತಿದ್ದರು. ಎಷ್ಟು ಸಲ ಮುಳುಗಿದರೆಂಬುದನ್ನು ಅವನು ಎಣಿಸಿಕೊಳ್ಳಲಿಲ್ಲ. ಕೊನೆಗೆ ಎದ್ದು ದಡಕ್ಕೆ ಹತ್ತಿ ಬಂದರು. ಉಟ್ಟಿದ್ದ ಪಂಚೆ ದಡದಲ್ಲಿತ್ತು. ಸ್ವಲ್ಪ ಹೊತ್ತು ಬೆಳಗಿನ ಎಳೆಬಿಸಿಲಿನಲ್ಲಿ ನಿಂತಿದ್ದು ಮೈ ಒಣಗಿದ ಮೇಲೆ, ನೆನ್ನೆ ಉಟ್ಟಿದ್ದ ಆ ಪಂಚೆಯನ್ನೇ ಉಟ್ಟುಕೊಂಡರು. ಕಟ್ಟೆಯ ಮೇಲಿದ್ದ ಜನಿವಾರವನ್ನು ತೆಗೆದುಕೊಂಡು ಎರಡು ಕೈಲೂ ಬಿಡಿಸಿ ಹಿಡಿದುಕೊಂಡು, ಹೊಸತನ್ನು ಧರಿಸುವವರಂತೆ 'ಯಜ್ಞೋಪವೀತಂ ಪರಮಂ ಪವಿತ್ರಂ' ಹೇಳುತ್ತಾ ಕೊರಳಿಗೆ ಹಾಕಿಕೊಂಡು, ಮತ್ತೆ ಕೊಳಕ್ಕೆ ಇಳಿದು ಆಚಮನ ಮಾಡಲು ಪ್ರಾರಂಭಿಸಿದರು.

ಇದು ಬುದ್ಧಿಭ್ರಮಣೆಯೇ ಎಂಬ ಬಗೆಗೆ ವೆಂಕಟೇಶನಿಗೆ ಅನುಮಾನ ಉಳಿಯಲಿಲ್ಲ. ಆದರೆ ಅವರಿಗೆ ಹಾಗೆ ಹೇಳಬಾರದು. ಹೀಗಾದವರಿಗೆ ದಿನಾ ಬೆಳಗ್ಗೆ ಎದ್ದು ತಲೆಗೆ ನಿಂಬೆಹಣ್ಣು ತಿಕ್ಕಿ ನಲವತ್ತು ಐವತ್ತು ಬಿಂದಿಗೆ ತಣ್ಣೀರನ್ನು

ದಢವಢನೆ ಹುಯ್ಯುತ್ತಾರೆ. ಅಥವಾ ಬೆಂಗಳೂರಿನಲ್ಲಿರುವ ಹುಚ್ಚಾಸ್ಪತ್ರೆಗೆ ಸೇರಿಸುತ್ತಾರೆ. ತನ್ನ ಅಪ್ಪನನ್ನು ಹುಚ್ಚಾಸ್ಪತ್ರೆಗೆ ಸೇರಿಸುವ ಯೋಚನೆಯಿಂದಲೇ ಅವನಿಗೆ ದುಃಖವಾಯಿತು. ಎಷ್ಟೋ ಸಮಯ, ಅಲ್ಲಿಗೆ ಸೇರಿಸುವುದರಿಂದಲೇ ರೋಗ ಉಲ್ಬಣಿಸುವುದೂ ಉಂಟು ಎಂದು ಎಲ್ಲೋ ಕೇಳಿದ್ದ ನೆನಪಾಯಿತು. ಇಂಥವರನ್ನು ಒಂಟಿಯಾಗಿ ಬಿಟ್ಟುಷ್ಟು ತಮಗೆ ತಾವೇ ಯೋಚಿಸಿಕೊಂಡು ಭ್ರಮಣೆಯನ್ನು ಹೆಚ್ಚು ಮಾಡಿಕೊಳ್ಳುತ್ತಾರೆ. ಆದ್ದರಿಂದ ಮನೆಗೆ ಕರೆದು ಕೊಂಡು ಹೋಗುವುದೇ ಸರಿ ಎಂದುಕೊಂಡ. ಆದರೆ ಮನೆಯಲ್ಲಿ ತಾನೆ ಏನು? ಮಾತಾಡಿಸಿದರೂ ಆಡುವುದಿಲ್ಲ. ಆರು ತಿಂಗಳಿಂದ ಹೀಗೆಯೇ ಇದ್ದಾರೆ. ಅಂದರೆ ಇವರ ಬುದ್ಧಿಭ್ರಮಣೆ ಆರು ತಿಂಗಳಿಂದ ಇದೆಯೆ? ನನಗೆ ತಿಳಿಯಲೇ ಇಲ್ಲ. ಆದರೆ ದೇವರು ಅನ್ನುವುದು ಸುಳ್ಳು ಅಂತ ಇವರು ಅಂದದ್ದು ಬರೀ ಎಂಟು ದಿನದ ಕೆಳಗೆ....ಅವನು ಸುಮ್ಮನೆ ಯೋಚಿಸುತ್ತಾ ನಿಂತುಬಿಟ್ಟ. ಇಂಥ ಪರಿಸ್ಥಿತಿ ಯನ್ನು ಈ ಹಿಂದೆ ಎಂದೂ ಕೇಳಿರಲಿಲ್ಲ.

ಅಷ್ಟರಲ್ಲಿ ಸಂಧ್ಯಾವಂದನೆ ಮುಗಿಸಿ ಅವರು ಮೇಲೆ ಬಂದರು. ಅವನು ಕೇಳಿದ: 'ಅಪ್ಪ, ವಾರಕ್ಕೊಂದು ದಿನ ತಲೆಗೆ ಎಣ್ಣೆ ತಿಕ್ಕಿಕೊಂಡು ನೀರು ಹಾಕ್ಕೊ ಅಂಪ್ರೆ ಕೇಳ್ತೀಯು? ನಿಂಗೆ ಎಷ್ಟು ಉಷ್ಣವಾಗಿದೆ ಗೊತ್ತಾ?'

ಅವರು ಮಾತನಾಡಲಿಲ್ಲ. ಅವನ ಮಾತು ತಮಗೆ ಸಂಬಂಧಿಸಿದುದೇ ಅಲ್ಲ ವೆಂಬಂತೆ ಗುಡಿಸಲ ಕಡೆಗೆ ನಡೆದರು. ಅವರ ಹಿಂದೆಯೇ ಹೋಗಿ ಅವನು ಅಂದ: 'ತುಂಬ ಉಷ್ಣವಾದೋರು ತಲೆಗೆ ನಿಂಬೆಹಣ್ಣು ತಿಕ್ಕಿಕೊಂಡು ಸ್ನಾನ ಮಾಡ ಬೇಕು. ತಣ್ಣೀರಾದರೆ ಒಳ್ಳೇದು. ಹೀಗೆ ಮುಳುಗಬಾರದು. ಯಾರಾದರೂ ತುಂಬಿ ತುಂಬಿ ಹಾಕಬೇಕು.'

ಅವರು ಈಗಲೂ ಮಾತನಾಡಲಿಲ್ಲ. ಮತ್ತೆ ಏನು ಹೇಳುವುದಕ್ಕೂ ತಿಳಿಯದೆ ಅವನು ಸುಮ್ಮನೆ ನಿಂತಿದ್ದ. ಐದು ನಿಮಿಷದ ನಂತರ ಎಂದರು: 'ನಿಂಬೆಹಣ್ಣು ತಿಕ್ಕಿ ತಣ್ಣೀರು ಹುಯ್ಯೋದು ಹುಚ್ಚು ಹಿಡಿದೋರಿಗೆ. ನಂಗೆ ಏನೂ ಆಗಿಲ್ಲ. ಸುಮ್ಮನೆ ನಿನ್ನ ಕೆಲಸ ಮಾಡು ಹೋಗು. ಹೀಗೆ ಬಂದು ನನ್ನ ಕಾಡಿಸಬ್ಯಾಡ.'

ಅವನಿಗೆ ಪೆಚ್ಚಾಯಿತು. ಆದರೆ ಬೈದವರು ತನ್ನ ಅಪ್ಪ ಎಂದುಕೊಂಡು ಸುಮ್ಮನಾದ. ಅನಂತರ ಹೇಳಿದ: 'ತೋಟದಲ್ಲಿರಬೇಕು ಅನಿಸಿದರೆ ಇಲ್ಲೇ ಇರು. ಆದರೆ ನೀನು ಅಡಿಗೆ ಯಾಕೆ ಬೇಯಿಸ್ಬೇಕು ಮುಖ ಮೂರೆ ಮಸಿ ಮಾಡ್ಕಂಡು? ಮನೆಯಿಂದ ನಾನು ಒಂದಿಷ್ಟು ತಂದು ಕೊಡ್ತೀನಿ.'

'ನನ್ನ ಪಾಡಿಗೆ ನನ್ನ ಬಿಡು' – ಎಂದು ಹೇಳಿದ ಅವರು ಗುಡಿಸಲಿನ ಒಳಗೆ ಹೋಗಿ, ಬಾಗಿಲು ಹಾಕಿಕೊಂಡರು.

ಹೊರಗೇ ಹತ್ತು ನಿಮಿಷ ನಿಂತಿದ್ದ ಅವನು ತೋಟವನ್ನು ಒಂದು ಸುತ್ತು ತಿರುಗಿಕೊಂಡು, ಬಸ್‌ಸ್ಟ್ಯಾಂಡಿನ ತನ್ನ ಹೋಟಲಿನ ಕಡೆಗೆ ಹೋದ. ಹೆಗಲಿಗೆ ಗುದ್ದಲಿ ಹಾಕಿಕೊಂಡು ಬರುತ್ತಿದ್ದ ನಾಲ್ಕು ಜನ ರೈತರು ಊರ ಮುಂದೆ ಸಿಕ್ಕಿದರು. ಅವರಲ್ಲಿ ಒಬ್ಬ ಕೇಳಿದ: 'ಅಯ್ಯೋರು ಈಗ ತ್ವಾಟದಾಗಿರ್ತಾರಂತೆ. ಅದ್ಯಾಕ್ ಬುದ್ದಿ?'

ವೆಂಕಟೇಶ ತಕ್ಷಣ ಹೇಳಿದ: 'ಏನ್ಮಾಡ್ತೀಯ ಸಿದ್ದಪ್ಪ, ಕಾಯಿಕಳ್ಳರು ಜಾಸ್ತಿಯಾಗಿದಾರೆ. ನಾನು ಕಷ್ಟಬಿದ್ದು ರೂಢಿಸಿದ ತೆಂಗಿನಮರದ ಒಂದು ಬುರುಡೆಯೂ ಕಳ್ಳನ ಕೈಗೆ ಸಿಕ್ಕಕೂಡದು. ನಾನು ಹಗಲೂ ರಾತ್ರಿ ಅಲ್ಲೇ ಇದ್ದು ಕಾಯ್ತೀನಿ ಅಂತ ಅಲ್ಲೇ ಗುಡ್ಲು ಕಟ್ಟಿಸ್ಕಂಡ್ ಕುಂತವ್ರೆ. ನಿನ್ನ ತ್ವಾಟ ದಾಗೆ ಕಳ್ಳತನ ಆಗಾಕಿಲ್ವ?'

'ಆಗದೆ ಏನ್ರಯ್ಯ? ನಾವು ಅಡ್ಡರಾತ್ರೀನಾಗ ಹ್ವಾಗಿ ನೋಡ್ಕಂಡ್ ಬತ್ತೀವಿ.'

'ಹೋಗಾದೇನು ಬರಾದೇನು, ನಾನು ಅಲ್ಲೇ ಇರ್ತೀನಿ ಅಂತ ನಮ್ಮಯ್ಯೋರು ಹಟ ಮಾಡಿದ್ರು. ಮಧ್ಯಾಹ್ನದ ಊಟಕ್ಕೆ ಒಂದು ಗಳಿಗೆ ಮನಿಗೆ ಬತ್ತಾರೆ. ಉಳಿದುದ್ದೆಲ್ಲ ಅಲ್ಲೇ' – ಎಂದು ವೆಂಕಟೇಶ ಮುಂದೆ ಹೆಜ್ಜೆ ಹಾಕಿದ.

೩

ವೆಂಕಟರಮಣಯ್ಯನವರು ಊರೊಳಕ್ಕೆ ಬರುವುದೇ ಇಲ್ಲ. ಅಕ್ಕಿ ಬೇಳೆ ಮೆಣಸಿನಪುಡಿ ಮೊದಲಾದುವನ್ನು ವೆಂಕಟೇಶ ಆಗಾಗ್ಗೆ ತಂದು ಗುಡಿಸಿಲಿನಲ್ಲಿ ಇಡುತ್ತಾನೆ. ಆಳು ದಿನವೂ ಒಂದು ಲೋಟ ಹಾಲು ತಂದು ಇಟ್ಟು ಹೋಗು ತ್ತಾನೆ. ಅವರು ಪ್ರತಿದಿನ ಕ್ರಮವಾಗಿ ಅಡಿಗೆ ಮಾಡಿಕೊಳ್ಳುವುದಿಲ್ಲ. ಊಟ ದಲ್ಲೂ ಇಂತಿಷ್ಟು ಎಂಬ ಅಳತೆಯಿಲ್ಲ. ಒಂದೊಂದು ದಿನ ತುಂಬ ಅಕ್ಕಿ ಹಾಕಿ ಅನ್ನಮಾಡಿ ಪೂರ್ತಿ ಊಟ ಮಾಡುವುದುಂಟು. ಮತ್ತೆ ಒಂದೊಂದು ದಿನ ಒಂದು ಲೋಟ ಹಾಲಿನಲ್ಲೇ ದಿನ ಕಳೆಯುವುದುಂಟು. ಯಾರ ಕೈಲೂ ಮಾತನಾಡದ ಅವರು ಕೆಲವೊಮ್ಮೆ ತಮ್ಮಲ್ಲಿ ತಾವೇ ಆಡಿಕೊಳ್ಳುತ್ತಿರುವಂತೆ ತುಟಿಯಾಡಿಸು ತ್ತಾರೆ. ತೋಟಕ್ಕೆ ಆರು ಉಳುವವರು ಕಾಯಿ ಕೆಡವುವವರು ಬೇಲಿ ಕಟ್ಟುವವರು ಮೊದಲಾಗಿ ಆಳುಗಳು ಬಂದು ಕೆಲಸ ಮಾಡುತ್ತಾರೆ. ಮನೆಯ ಆಳು ಮಧ್ಯಾ ಹ್ನದ ಹೊತ್ತಿಗೆ ದನಕರುಗಳನ್ನು ತಂದು ಮೇಯಲು ಕೂಡಿಹೋಗುತ್ತಾನೆ. ಅವರು ಮಾತ್ರ ಯಾರ ಸಂಪರ್ಕವೂ ಇಲ್ಲದೆ ಇದ್ದುಬಿಟ್ಟಿದ್ದಾರೆ.

ಒಂದೊಂದು ದಿನ ಹೊಳೆಬಾಗಿಲು ತೆಗೆದುಕೊಂಡು ಹೊರಗೆ ಹೋಗುತ್ತಾರೆ. ಕಾಲುವೆಯ ಏರಿಯ ಮೇಲೆ ನಡೆದು ದೇವಸ್ಥಾನಕ್ಕೆ ಹೋಗುತ್ತಾರೆ. ಇಡೀ ದೇವಸ್ಥಾನವನ್ನು ಪ್ರದಕ್ಷಿಣೆ ಹಾಕಿದಂತೆ ಒಂದೆರಡು ಸುತ್ತು ಹಾಕುತ್ತಾರೆ. ಮಂತ್ರಿಗಳು ಮುಜರಾಯಿ ಇಲಾಖೆಯಿಂದ ಕಟ್ಟಿಸಿದ ಗೋಡೆಯನ್ನು ಪರೀಕ್ಷಿಸುವವರಂತೆ ನೋಡುತ್ತಾ ನಿಲ್ಲುತ್ತಾರೆ. ತಾವು ಸುಮಾರು ಮೂವತ್ತು ವರ್ಷಕ್ಕೂ ಮಿಕ್ಕಿ ಪೂಜಿಸಿದ್ದ ದೇವರ ಗುಡಿಯ ಬಾಗಿಲಿಗೆ ಸಹ ಕೈಮುಗಿಯುವುದಿಲ್ಲ. ವಿಧರ್ಮಿ, ವಿದೇಶೀಯ ಪ್ರಾಚ್ಯ ಸಂಶೋಧಕನೊಬ್ಬನು ಈ ದೇಶದ ದೇವಾಲಯವನ್ನು ಗಮನಿಸಿ ನೋಡುವಂತೆ ಅದರ ಹೊರಗೋಡೆಯ ಮೇಲಿನ ದೇವ ದೇವತೆಯರು. ಯಕ್ಷ ಯಕ್ಷಿಣಿಯರು, ನರ್ತಕ ನರ್ತಕಿಯರು, ಯುದ್ಧದ ಆನೆ ಕುದುರೆ ಕಾಲಾಳುಗಳ ಕೆತ್ತನೆಯನ್ನು ನೋಡುತ್ತಾ ನಿಲ್ಲುತ್ತಾರೆ. ಅನಂತರ ಬೇಗ ಬೇಗ ನಡೆದು, ಸೂತಕ ಕಳೆದುಕೊಳ್ಳುವವರಂತೆ ತೊಟ್ಟ ಬಟ್ಟೆಯಲ್ಲೇ, ಪಕ್ಕದಲ್ಲಿ ಹರಿಯುವ ಕಾಲುವೆಯಲ್ಲಿ ಮುಳುಗಿ ಸ್ನಾನ ಮಾಡಿ ತಮ್ಮ ತೋಟಕ್ಕೆ ಹೋಗುತ್ತಾರೆ.

ವೆಂಕಟೇಶ ಏನು ಹೇಳಿದರೂ ವೆಂಕಟರಮಣಯ್ಯನವರಿಗೆ ಹುಚ್ಚು ಹಿಡಿದಿದೆ ಎಂದು ಊರಿಗೆ ಊರೇ ನಂಬಿದೆ. ಆದರೆ ಅವರ ಬುದ್ಧಿ ಉಳಿದ ವಿಷಯದಲ್ಲಿ ಕೆಟ್ಟಿಲ್ಲ. ಸದಾ ತೋಟದಲ್ಲೇ ಇರುವ ಅವರು ಒಂದು ಸೋಗೆಯ ಗರಿ ಸರ್ ಎಂದರೂ ಗುಡಿಸಲಿನಿಂದ ಹೊರಗೆ ಬಂದು ಸುತ್ತ ನೋಡುತ್ತಾರೆ ಎಂದು ಎಲ್ಲರೂ ತಮ್ಮತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಾರೆ. ಹೀಗಾಗಿ ಊರಿನ ಇತರ ತೋಟಗಳಲ್ಲಿ ಅಲ್ಲೊಂದು ಇಲ್ಲೊಂದು ಕಳ್ಳತನವಾದರೂ ಅವರ ತೋಟದಲ್ಲಿ ಒಂದು ಕುರುಂಬಾಳೆಯನ್ನು ಸಹ ಯಾರೂ ಎತ್ತುವುದಿಲ್ಲ. ಬೀಗ ಹಾಕದಿದ್ದರೂ ಯಾರೂ ಹೊಳೆಬಾಗಿಲನ್ನು ದಾಟಿ ಒಳಗೆ ಹೆಜ್ಜೆ ಇಡುವುದಿಲ್ಲ.

ಒಂದು ರಾತ್ರಿ ಹತ್ತು ಗಂಟೆಯಾಗಿತ್ತು. ಅವರು ತಮ್ಮ ಗುಡಿಸಲಿನ ಬಾಗಿಲು ಹಾಕಿಕೊಂಡು ತೋಟದಿಂದ ಹೊರಗೆ ಬಂದರು. ಹೊಳೆಬಾಗಿಲನ್ನು ಮುಚ್ಚಿ ಕೆಳಭಾಗದ ಗದ್ದೆಯ ಕಡೆಗೆ ಇಳಿದರು. ಅಮಾವಾಸ್ಯೆಯ ಮುಂದಿನ ದಿನಗಳಾದುದರಿಂದ ಕತ್ತಲೆ ಮುಚ್ಚಿಕೊಂಡಿತ್ತು. ಅದರಲ್ಲೇ ನೆನಪಿನಿಂದ ದಾರಿ ಹಿಡಿಸಿಕೊಂಡು ಬತ್ತದ ಪೈರುಗಳ ಬದುವಿನ ಮೇಲೆ ತೋಲನ ಮಾಡಿಕೊಂಡು ನಡೆದರು. ನಾಲ್ಕು ಗದ್ದೆಗಳನ್ನು ದಾಟಿದ ಮೇಲೆ ಒಂದು ಪುಟ್ಟ ಕಾಲುವೆ ಬಂತು. ಅದರಲ್ಲಿ ಇಳಿದು ಮೊಣಕಾಲು ಮಟ್ಟದ ನೀರಿನಲ್ಲಿ ಹಾಯ್ದು ಮತ್ತೆ ನಡೆದರು. ಇನ್ನೆರಡು ಗದ್ದೆಗಳು. ಅದನ್ನು ದಾಟಿದ ಮೇಲೆ ಒಂದು ಪುಟ್ಟ ಕಾಲುವೆ ಬಂತು. ಅದರಲ್ಲಿ ಇಳಿದು ಮೊಣಕಾಲು ಮಟ್ಟದ ನೀರಿನಲ್ಲಿ ಹಾಯ್ದು ಮತ್ತೆ ನಡೆದರು.

ಇನ್ನೆರಡು ಗದ್ದೆಗಳು. ಅದನ್ನು ದಾಟಿದ ಮೇಲೆ ಮಧ್ಯದ ಹಳ್ಳ. ಎರಡೂ ಪಾರ್ಶ್ವಗಳ ಗದ್ದೆಗಳ ನೀರು ಹರಿದು ಇದಕ್ಕೇ ಸೇರಿಕೊಂಡು ಮುಂದೆ ಸಾಗುತ್ತದೆ. ಕೆರೆಯ ಮೂರು ತೂಬುಗಳನ್ನೂ ಪೂರ್ತಿ ಎತ್ತಿದಾಗ ಈ ಹಳ್ಳವನ್ನು ದಾಟು ವುದು ನೀರುಗಂಟಿ ವಡ್ಡಬೋಯಿಗೂ ಸಾಧ್ಯವಿಲ್ಲ. ಆದರೆ ಈಗ ಅಷ್ಟು ನೀರು ಹರಿಯುತ್ತಿಲ್ಲ. ಅವರು ಹಳ್ಳದ ದಂಡೆಯಲ್ಲಿ ಸ್ವಲ್ಪ ಕೆಳಗೆ ನಡೆದರು. ಅದಕ್ಕೆ ನಾಲ್ಕು ಈಚಲಮರಗಳನ್ನು ಹಾಕಿ ಸೇತುವೆ ಮಾಡಿದ ಜಾಗಕ್ಕೆ ಹೋಗಿ ಅದರ ಮೇಲೆ ದಾಟಿ ಗದ್ದೆಗಳ ಬದುವಿನ ಮೇಲೆ ಏರಿದರು. ಗದ್ದೆಗಳು ಕಳೆದ ಮೇಲೆ ತೆಂಗಿನ ತೋಟ. ಆ ಭಾಗದ ತೋಟಗಳಿಗೆ ಬಲು ಬಂದೂಬಸ್ತು ಬೇಲಿ ಹಾಕಿರು ತ್ತಾರೆ. ಹತ್ತಿರದಲ್ಲೇ ಇರುವ ಹೊಲೆಗೇರಿ ಮಾದಿಗ ಕೇರಿಗಳವರಿಂದ ಕಳ್ಳತನ ಆಗುವುದು ಅಲ್ಲಿ ಹೆಚ್ಚು. ತೋಟದ ಸಂದಿಯ ಓಣಿಯಲ್ಲಿ ನಡೆದು ಅವರು ಮುಂದೆ ಹೋದರು. ಅಲ್ಲೇ ಹೊಸದಾಗಿ ಮಂಗಳೂರು ಹೆಂಚು ಹಾಕಿ ಕಟ್ಟಿ ರುವ ಹರಿಜನ ಕಾಲೋನಿ.

ಇತ್ತೀಚೆಗೆ ಅವರು ಈ ಕಡೆ ಬಂದು ನೋಡಿಲ್ಲ. ಮೊದಲು ಏರಿಯ ಭಾಗಕ್ಕೆ ಸ್ವಲ್ಪ ಹತ್ತಿರದಲ್ಲಿ ಹೊಲೆಗೇರಿ, ಪೂರ್ವಕ್ಕೆ ಸ್ವಲ್ಪ ತಗ್ಗಿನಲ್ಲಿ ಮಾದಿಗರ ಕೇರಿ ಇತ್ತು. ಮಾದಿಗಕೇರಿಯ ಬೆಟ್ಟಯ್ಯನ ನಾಡುಹೆಂಚಿನ ತಗ್ಗುಮನೆಯನ್ನು ಬಿಟ್ಟರೆ ಉಳಿದುವೆಲ್ಲ ಗುಡಿಸಲುಗಳು. ಮುಕ್ಕಾಲುಭಾಗ ಸೆಲ್ಲುಹುಲ್ಲಿನ ಛಾವಣಿ ಯವು. ಆದರೆ ಈಗ ಎಲ್ಲವೂ ಮಂಗಳೂರು ಹೆಂಚಿನದಾಗಿವೆ. ಎಲ್ಲ ಒಂದೇ ತರಹ. ಕೇರಿಯೊಳಗೆ ಜನರೆಲ್ಲ ಎಚ್ಚರವಾಗಿದ್ದಂತೆ ಕಾಣುತ್ತಿತ್ತು. ಬೀದಿಯ ಮಧ್ಯೆ ಬೆಂಕಿ ಉರಿಸುತ್ತಿದ್ದರು. ಕೆಲವು ಮನೆಗಳ ಜಗುಲಿಯ ಮೇಲೆ ಲಾಟೀನು ಗಳು ಉರಿಯುತ್ತಿದ್ದುವು. ಇವರು ಹತ್ತಿರ ಹೋದರು. ಏಳೆಂಟು ನಾಯಿಗಳು ಭೌವ್ ಎಂದು ಬಗುಳಿದುವು. ಬಗುಳುವ ನಾಯಿಗಳಿಗೆ ಅವರು ಹೆದರಲಿಲ್ಲ. 'ಥೂ ಮುಂಡೇವ' – ಎಂದುಕೊಂಡು ಮುಂದೆ ನಡೆದು ಕೇರಿಯ ಮಧ್ಯಕ್ಕೆ ಬಂದಾಗ ತಿಳಿಯಿತು: ಬೆಂಕಿಯ ಹತ್ತಿರ ಗುಂಪುಕಟ್ಟಿ ಕುಳಿತು ಹೆಂಗಸರು ಗಂಡಸ ರೆಲ್ಲ ಕುಡಿಯುತ್ತಿದ್ದಾರೆ. ಸೀಮೆ-ಎಣ್ಣೆಯ ಶೀಶೆಗಳ ತುಂಬ ಮೂಗಿಯ ಬುರುಡೆ ಗಳ ತುಂಬ ತುಂಬಿ ಹತ್ತಿರ ಇಟ್ಟುಕೊಂಡಿದ್ದಾರೆ. ಅವರ ಕಣ್ಣುಗಳೆಲ್ಲ ಕೆಂಪಗೆ ತುಂಬಿ ತೇಲುತ್ತಿರುವುದು ಬೆಂಕಿಯ ಬೆಳಕಿನಲ್ಲಿ ಕಂಡಿತು.

'ಅದ್ಯಾವನಪ್ಪಯ್ಯಾ?' – ಎಂದು ಒಬ್ಬ ಕೂಗಿ ಕೇಳಿದ.

'ಇವರಲ್ಲಿ ಹೊಲೆಗೇರಿ ಯಾವದು, ಮಾದಿಗಕೇರಿ ಯಾವದು?' – ಇವರು ಕೇಳಿದರು.

'ಗುಡಿ ಹಾರುವಯ್ಯ ಕಣ್ರೋ' – ಎಂದು ಒಬ್ಬ ಗುರುತು ಹಿಡಿದ. ತಕ್ಷಣ

ಎಲ್ಲರೂ ಎದ್ದು ನಿಂತರು.

'ಹೊಲೆಗೇರಿ ಯಾವುದು, ಮಾದಿಗಕೇರಿ ಯಾವುದು?' – ಎಂದು ಇವರು ಮತ್ತೆ ಕೇಳಿದರು.

'ಉಚ್ಚುನಾಯಿ ಕೇರಿಗ್ ಬಂದದೆ ಲಕ್ಷ್ಮೀ ಕದಿಯಾಕೆ, ಮಡಗು ತೊಪ್ಪೆ ಯಾಗೆ' – ಎಂದು ಒಬ್ಬ ಕಿರುಚಿದ.

ಅವರೆಲ್ಲ ಎದ್ದು ಎತ್ತೆತ್ತಲೋ ಹೋದರು. ಒಂದು ನಿಮಿಷದಲ್ಲಿ ಮನೆಗಳ ಸಂದಿಗೊಂದಿಗಳಿಂದ ಬಂದವರು ಸಗಣಿತೊಪ್ಪೆಗಳನ್ನು ಬೀಸಿ ಬೀಸಿ ಇವರಿಗೆ ಹೊಡೆದರು. ತಕ್ಷಣ ನಾಯಿಗಳು ಬಗುಳತೊಡಗಿದುವು. ಒಬ್ಬ ಹೆಂಗಸು ತನ್ನ ಮನೆಯ ಹಿಂಭಾಗದಲ್ಲಿದ್ದ ತಿಪ್ಪೆಯಲ್ಲಿ ಒಂದು ಮಂಕರಿ ಹಳೇ ಸಗಣಿ ತುಂಬಿ ತಂದಳು. ನಾಲ್ಕು ಜನ ಗಂಡಸರು ಅದನ್ನು ಕೈಗೆ ತೆಗೆದುಕೊಂಡು ಗುರಿ ಇಟ್ಟು ಇವರ ಮುಖ ಮೈಗಳಿಗೆ ಬೀಸಿ ಹೊಡೆದರು. ಇವರ ತಲೆ ಮುಖ, ಬೆನ್ನು ಭುಜ, ಕಾಲು ಮೊಣಕಾಲುಗಳೆಲ್ಲ ಆದುದು ಮಾತ್ರವಲ್ಲ, ಹಸಿ ಸಗಣಿಯು ಬೀಸಿ ಬಂದು ಬಿದ್ದ ರಭಸಕ್ಕೆ ಮೈ ಕೈಗಳಿಗೆ ನೋವೂ ಆಯಿತು. ಅವರು ಹಿಂತಿರುಗಿ ಹೊರಟರು. ಆದರೆ ಬೆನ್ನಿನ ಮೇಲೆ ಸುಯ್ ಸುಯ್ ಎಂದು ಸಗಣಿ ಉಂಡೆ ಗಳು ಬಂದು ಬೀಳುತ್ತಲೇ ಇದ್ದುವು. ಬೇಗ ಬೇಗ ಹೆಜ್ಜೆ ಹಾಕುವಷ್ಟರಲ್ಲಿ ನಾಯಿಗಳು ಓಡಿಸಿಕೊಂಡು ಬಂದುವು. ಆದರೆ ಅವರು ಓಡಲಿಲ್ಲ. ಓಡಿದರೆ ನಾಯಿಗಳು ಓಡಿಸಿಕೊಂಡು ಮೇಲೆ ಬೀಳುತ್ತವೆಂಬುದು ನೆನಪಿಗೆ ಬಂತು. ಹಿಂತಿರುಗಿ ನಿಂತು ಮುಖ ಕೊಟ್ಟು ಗದ್ದರಿಸಿಕೊಂಡರೆ ನಾಯಿಗಳು ತಮ್ಮ ತಮ್ಮ ಜಾಗದಲ್ಲಿ ನಿಲ್ಲುತ್ತವೆ. ಆದರೆ ಹಿಂದಕ್ಕೆ ಮುಖ ಮಾಡಿದರೆ ಸಗಣಿಯ ಉಂಡೆ ಮುಖಕ್ಕೇ ಬಂದು ಬೀಳುತ್ತದೆಂಬ ಭಯ. ಆದುದರಿಂದ ನಿಧಾನವಾಗಿ ಹೆಜ್ಜೆ ಹಾಕಿದರು. ಯಾರೋ ಒಬ್ಬ, 'ಗ್ಯಾ, ಗ್ಯಗ್ಯ' ಎಂದು ಕೂಗಿ ಸಿಳ್ಳು ಹಾಕಿದ. ಹೆದರಿಕೆಯಿಂದ ದೂರದಲ್ಲೇ ನಿಂತು ಬಗುಳುತ್ತಿದ್ದ ನಾಯಿಗಳು ನುಗ್ಗಿ ಬಂದುವು. ಒಂದು ನಾಯಿ ಮೇಲೆ ಬಿದ್ದು ಇವರ ಮೊಣಕಾಲಿನ ಮೀನುಖಂಡಕ್ಕೆ ಹಲ್ಲು ಹಾಕಿಬಿಟ್ಟಿತು. 'ಅಯ್ಯಯಪ್ಪಾ' ಎಂದು ಇವರು ಬಡಿದುಕೊಂಡ ಸದ್ದಿಗೆ ನಾಯಿಗಳಿಗೂ ಭಯವಾಗಿರಬೇಕು. ಹುಡುಗರ ಪೈಕಿಯೇ ಒಬ್ಬ ಹತ್ತಿರ ಬಂದು ನಾಯಿಗಳಿಗೆ ಮುಖ್ಯಿರಿದು, 'ಬಾ ಬಾ' ಎಂದು ಕರೆದ. ಅವು ಹಿಂತಿರುಗಿದುವು.

ಅವರು ತೋಟದ ಓಣಿಯಲ್ಲಿ ಹಿಂತಿರುಗಿದರು. ನಾಯಿಯ ಹಲ್ಲು ಊರಿದ್ದ ಜಾಗದಲ್ಲಿ ರಕ್ತ ಬರುತ್ತಿತ್ತು. ಕತ್ತಲೆಯಲ್ಲಿ ಯಾವುದೂ ಸರಿಯಾಗಿ ಕಾಣುತ್ತಿರ ಲಿಲ್ಲ. ಬೇಗ ಬೇಗ ಹೆಜ್ಜೆ ಹಾಕಿ ಓಣಿಯನ್ನು ಕಳೆದು ಗದ್ದೆಗಳ ಇಳುವಿಗೆ ಬಂದರು. ಬದುಗಳ ಮೇಲೆ ನಡೆದು ದೊಡ್ಡ ಹಳ್ಳದ ಈಚಲಮರದ ಸೇತುವೆ

ಯನ್ನು ದಾಟಿದರು. ಮತ್ತೆ ಸಿಕ್ಕಿದ ಗದ್ದೆಗಳನ್ನು ದಾಟಿ ಸಣ್ಣ ಕಾಲುವೆಯಲ್ಲಿ ಇಳಿದು ದಾಟುವಾಗ ಮೀನುಖಂಡದ ಗಾಯ ಉರಿಹೊತ್ತಿತು. ಅದನ್ನು ಲೆಕ್ಕಿಸದೆ ಮುಂದೆ ನಡೆದು ಗದ್ದೆಗಳನ್ನು ಏರಿ ತಮ್ಮ ತೋಟದ ಹೊಳೆಬಾಗಿಲನ್ನು ತೆಗೆದುಕೊಂಡು ಒಳಗೆ ಹೋದರು. ಗುಡಿಸಲಿನ ಬಾಗಿಲು ತೆಗೆದು, ಉರಿಯುತ್ತಿದ್ದ ಲಾಟೀನಿನಲ್ಲಿ ಕಾಲನ್ನು ನೋಡಿಕೊಂಡರು. ನಾಯಿಯ ಎರಡು ಹಲ್ಲು ಮಾಂಸಖಂಡದೊಳಕ್ಕೆ ಊರಿ ರಕ್ತಹರಿದು ಈಗ ಹೆಪ್ಪುಗಟ್ಟಿದ್ದುದು ಕಾಣಿಸುತ್ತಿತ್ತು. ಕೈ ಕಾಲು, ಭುಜ, ಮೈಗಳಿಗೆಲ್ಲ ಸಗಣಿಯ ತೊಪ್ಪೆ ಮೆತ್ತಿಕೊಂಡಿತ್ತು. ಹೋಗಿ ಕೊಳದಲ್ಲಿ ಇಳಿದು ಮೈ ತಿಕ್ಕಿ ಸ್ನಾನ ಮಾಡಿ, ಉಟ್ಟಿದ್ದ ಬಟ್ಟೆಯನ್ನು ಕಸಗಿ ಒಗೆಯಬೇಕೆನಿಸಿತು. ಆದರೆ ಸ್ವಲ್ಪ ಸುಧಾರಿಸಿಕೊಂಡು ಹೋಗೋಣವೆಂದು ಹಾಗೆಯೇ ಕುಳಿತರು. ಕುಳಿತ ಮೇಲೆ ಮತ್ತೆ ಏಳುವ ಮನಸ್ಸು ಬರಲಿಲ್ಲ. ಬೆಳಕಿನಲ್ಲಿ ತಮ್ಮ ಮೈ ಕೈಗಳನ್ನೇ ನೋಡಿಕೊಳ್ಳುತ್ತಾ ಕೂತುಬಿಟ್ಟರು. ಸ್ವಲ್ಪ ಹೊತ್ತಾದ ಮೇಲೆ, ಉರಿಯುತ್ತಿದ್ದ ಲಾಟೀನು ಆರಿಸಿ ಕತ್ತಲಲ್ಲೇ ಕೂತರು.

ಅವರು ಒಂದು ಗಂಟೆಗೂ ಮೀರಿ ಹಾಗೇ ಕುಳಿತಿದ್ದರು. ಅನಂತರ ಎದ್ದು ಲಾಟೀನು ಹಚ್ಚಿದರು. ಕೊಳಕ್ಕೆ ಹೋಗಿ ಬಟ್ಟೆಗಳನ್ನು ಕಳಚಿ ಮೈ ಕೈ ತಲೆಗಳನ್ನು ತಿಕ್ಕಿ ಸ್ನಾನ ಮಾಡಿದರು. ಸಗಣಿಯಾದ ಬಟ್ಟೆಗಳನ್ನು ಕಸಕಿ ಕುಕ್ಕಿ ಹಿಂಡಿ ಒಣಗಹಾಕಿದರು. ಉಡಲು ಬೇರೆ ಬಟ್ಟೆ ಇಲ್ಲದ್ದರಿಂದ ಒಂದು ಚೌಕ ಸುತ್ತಿಕೊಂಡು ಮೈಗೆ ಒಂದು ದುಪಟಿ ಹೊದೆದರು. ಅಷ್ಟರಲ್ಲಿ ಯಾರೋ ತೋಟದೊಳಗೆ ನಡೆದು ಇವರ ಗುಡಿಸಿಲು ಕಡೆಗೆ ಬಂದಂತೆ ಶಬ್ದವಾಯಿತು. ಲಾಟೀನನ್ನು ಹೊರಗೆ ತಂದು ನೋಡುತ್ತಾರೆ: ಮಾತಂಗಿ ಬರುತ್ತಿದ್ದಾಳೆ. ಕರಿ ಸೀರೆಯುಟ್ಟು ಹಸಿರು ರವಿಕೆ ತೊಟ್ಟಿದ್ದಾಳೆ. ಕೈ ಎಣ್ಣೆ ತಿಕ್ಕಿ ಕೂದಲು ಬಾಚಿದ್ದಾಳೆ. ಹಣೆಯಲ್ಲಿ ಅಗಲವಾದ ಕುಂಕುಮವಿದೆ. ಆದರೆ ಹತ್ತಿರಕ್ಕೆ ಬಂದಾಗ ಬಟ್ಟೆ ಮದ್ಯದ ಗಬ್ಬುವಾಸನೆ ಹೊಡೆಯುತ್ತಿತ್ತು. ಅವರು ಅವಳನ್ನೇ ನೋಡುತ್ತಾ ನಿಂತುಬಿಟ್ಟರು. ಇವರಿಗೆ ಒಂದು ಮಾರು ದೂರದಲ್ಲಿ ಅವಳು ನಿಂತಳು.

ಇವರು ಕೇಳಿದರು: 'ಮಾತಂಗಿ, ಇಲ್ಲಿಗ್ಯಾಕೆ ಬಂದೆ, ಈಗ?'

'ನೀವ್ಯಾಕ್ ಬಂದಿದ್ರಯ್ಯಾ ನಮ್ ಅಟ್ಟಿಗೆ?'

ಅವರು ಉತ್ತರ ಹೇಳಲಿಲ್ಲ. ಅವಳ ಪ್ರಶ್ನೆ ಅರ್ಥವಾಗದವರಂತೆ ನೋಡಿದರು. ಅವಳೇ ಕೇಳಿದಳು: 'ಈಟು ವರ್ಸದ ಮ್ಯಾಗ ಮಾತಂಗಿ ಗ್ಯಾನ ಬಂತಾ? ಮರ್ತು ಹ್ವಲೇರ ಅಟ್ಟಿಗೆ ನುಗ್ಗಿಬಿಟ್ರಾ? ಆರುವರು ಹ್ವಲೇರ ಅಟ್ಟಿಗೆ ಬಂದ್ರೆ ಮಾಲಕ್ಷ್ಮಿ ಹ್ವಂಟ್‌ಹೋಯ್ತಾಳೆ ಅಂತ ಗೊತ್ತಿರ್ನಿಲ್ವಾ?'

ಅದು ಅವರಿಗೆ ಗೊತ್ತಿಲ್ಲದ ವಿಷಯವಲ್ಲ. ಮುಟ್ಟಾಗಿದ್ದ ಲಕ್ಷ್ಮಿ ಒಂದು

ಸಲ ಹಾರುವರ ಕೇರಿಗೆ ಬಂದು, ವಿಶ್ರಮಿಸಿಕೊಳ್ಳಲು ಮೂರು ದಿನ ಜಾಗ ಕೇಳಿದ ಳಂತೆ. ಮೈಲಿಗೆಯಾಗುತ್ತೆ ಅಂತ ಹೆದರಿ ಮಡಿಯ ಬ್ರಾಹ್ಮಣರು ನಿರಾಕರಿಸಿ, ಬೇಗ ತಮ್ಮ ಕೇರಿ ಬಿಟ್ಟು ಹೋಗು ಎಂದು ಗದ್ದರಿಸಿಕೊಂಡರಂತೆ. ಅನಂತರ ಅವಳು ಕೋಮಟಿಗರ ಕೇರಿಗೆ ಹೋದಳು. ಅಲ್ಲಿ ಅವರು ಅವಳಿಗೆ ಜಾಗ ಕೊಟ್ಟು ಉಪಚರಿಸಿದರು. ಅವರ ಮೇಲೆ ಲಕ್ಷ್ಮಿ ಸಂಪ್ರೀತಳಾದಳು. ಅದರಿಂದಲೇ ಅವರು ಎಲ್ಲೆಲ್ಲೂ ವ್ಯಾಪಾರ ಸಾಪಾರ ಮಾಡಿಕೊಂಡು ಧನಿಕರಾಗಿದ್ದಾರೆ. ಅಲ್ಲಿ ಒಂದು ದಿನವಿದ್ದು ಅವಳು ಹೊಲೆಯರ ಕೇರಿಗೆ ಹೋದಳು. ಅವರೂ ಭಯಭಕ್ತಿಗಳಿಂದ ತಮ್ಮ ಒಂದು ಗುಡಿಸಲನ್ನು ಬಿಟ್ಟುಕೊಟ್ಟು ಉಪಚರಿಸಿದರು. ಅವರ ಮೇಲೂ ಅವಳು ಪ್ರಸನ್ನಳಾದಳು. ಪಾಪಿ ಬ್ರಾಹ್ಮಣರೊಬ್ಬರಿಗೇ ಲಕ್ಷ್ಮಿ ಒಲಿಯಲಿಲ್ಲ. ಆದ್ದರಿಂದಲೇ ಹಾರುವರು ಎಲ್ಲಿ ಹೋದರೂ ಬಡವರಾಗಿದ್ದಾರೆ. ಅಂತಹ ಪಾಪಿಗಳು ತಮ್ಮ ಹಟ್ಟಿಗೆ ಬಂದರೆ ಲಕ್ಷ್ಮಿ ಮುನಿಸಿಕೊಂಡು ಹೋಗುತ್ತಾಳೆ; ಆದುದರಿಂದ ಅವರಿಗೆ ಸಗಣಿಯಲ್ಲಿ ಹೊಡೆದು ಓಡಿಸಬೇಕೆಂಬ ಶಾಸ್ತ್ರ ಹೊಲೆಯರಲ್ಲಿದೆ. ಇದು ವೆಂಕಟರಮಣಯ್ಯನವರಿಗೆ ಗೊತ್ತಿರದೆ ಇರಲಿಲ್ಲ. ಆದರೆ ತಮಗೆ ಇತ್ತೀಚೆಗೆ ಯಾವುದೂ ಸರಿಯಾಗಿ ಜ್ಞಾಪಕಕ್ಕೆ ಬರುತ್ತಿಲ್ಲ ಎಂಬ ನೆನಪಾಯಿತು.

ಮಾತಂಗಿ ಕೇಳಿದಳು: 'ಅಯ್ಯಾ, ಯಾಕ್ ಬಂದಿದ್ರಿ ಏಳಿ.'

'ಸುಮ್ಕೆ ಬಂದಿದ್ದೆ.'

'ಹಂಗಾದ್ರೆ ನಾನ್ ಹ್ವಂಟೋಯ್ತೀನಿ' – ಎಂದು ಅವಳು ಹಿಂತಿರುಗಿ ನಡೆದಳು.

ಅವಳು ಹತ್ತು ಹೆಜ್ಜೆ ಹಾಕಿದ್ದಳು. ಅವರು, 'ಲೇ ನಿಂತ್ಕ' ಎಂದು ಕೂಗಿ ಹೇಳಿದರು: 'ನಿನ್ನ ನೋಡಬೇಕು ಅನ್ನಿಸ್ತು. ಅದುಕ್ಕೆ ಬಂದೆ.'

ಅವಳು ಹಿಂತಿರುಗಿ ಬಂದಳು. ಯಾವ ಸಂಕೋಚವೂ ಇಲ್ಲದೆ ಇವರ ಕೈ ಹಿಡಿದುಕೊಂಡು, 'ಹಂಗ್ ನಿಜ ಏಳ್ರಯ್ಯಾ. ಮಾತಂಗಿಗ್ ನಿಮ್ಮ ನೆಪ್ಪು ಬತ್ತೈತೆ. ನಿಮ್ ಮರ್ವಾದಿಗ್ ಅಂಜಿ ನಾನು ನಿಮ್ತಕ್ಕೆ ಬರಾಕಿಲ್ಲ' ಎಂದು ಚಾಪೆಯ ಮೇಲೆ ಅವರನ್ನು ಕೂರಿಸಿ ಗುಡಿಸಲಿನ ಬಾಗಿಲು ಮುಚ್ಚಿ ತಾನೂ ಕುಳಿತಳು. ಅವಳ ಬಾಯಿಯಿಂದ ಬರುತ್ತಿದ್ದ ವಾಸನೆ ಒಳಗೆಲ್ಲ ತುಂಬಿ ಅವರಿಗೆ ಇರುಸುಮುರುಸಾಗುತ್ತಿತ್ತು. ಆದರೆ ಮಾತಂಗಿಯನ್ನೇ ನೋಡುತ್ತಾ ಕುಳಿತರು. ಅವಳ ಮುಖ ಅಮಲಿನಿಂದ ಉಬ್ಬಿಕೊಂಡು ಜ್ವರ ಬಂದವಳಂತೆ ಆಗಿತ್ತು. ಕಣ್ಣು ಕೆಂಪಗೆ ತುಂಬಿಕೊಂಡಿತ್ತು. ಅಂದಳು: 'ಹ್ವಲೇರ ಅಟ್ಟಿ ಆಚೆ ಕಡೀದೇ ನಮ್ದು. ಅಲ್ಲಿ ಹುಯ್ಲಾತು. ಇದೇನ್ರಲೇ ಅಂತ ಕೇಳಾಕ್ ಹ್ವಾದೆ. ಗುಡಿ ಮುದುಕ ಹಾರುವಯ್ಯ ಹಟ್ಟಿಗ್ ನುಗ್ಗಿತ್ತು. ಶೆಗಣೇಲಿ ಎಂತಾ ಪಟ್ ಬುಟ್ರು ಅಂತೀಯ?

ನಾಯೂ ಕಡೀತು ಅಂದ್ರು. ಅಯ್ಯಾರು ಯಾಕ ಬಂದಿದ್ರು ಅನ್ನುಸ್ತು. ಮಾತಂಗಿ ಉಡಿಕ್ಕಂಡ್ ಬಂದವ್ರೆ ಅನ್ನುಸ್ತು. ಹಂಗೇ ಹ್ವಂಟುಬಂದೆ ಕಣ್ರಯ್ಯ.'

ಅವರು ಅವಳ ಮುಖವನ್ನೇ ನೋಡುತ್ತಾ ಕುಳಿತರು. ರೆಪ್ಪೆಯಾಡಿಸಲಿಲ್ಲ. ಅವಳೇ ಕೇಳಿದಳು: 'ನಾಯಿ ಕಡೀತಾ?'

ಅವರು ತಮ್ಮ ಬಲಗಾಲು ನೀಡಿದರು. ಅದನ್ನು ತೆಗೆದು ತನ್ನ ತೊಡೆಯ ಮೇಲಿಟ್ಟುಕೊಂಡು ನೋಡಿ, 'ಕಳ್ ನನ್ ಹೆಡ್ತಿ ಮಗನ ನಾಯಿ ಹ್ಯಂಗ್ ಕಚ್ಚೈದೆ! ಅದರವ್ವನ್ನಾ. ನೋಯ್ತದೇನ್ರಯ್ಯಾ?' ಎಂದು ಕೇಳಿದಳು. ಅವರಿಗೆ ಈಗ ನೋವು ಕಾಣಿಸಿತು. 'ಹೂಂ' – ಎಂದರು. ಅವರ ಕಾಲನ್ನು ಕೆಳಗೆ ಇಟ್ಟು ಲಾಟೀನನ್ನು ಕೈಲಿ ಹಿಡಿದು ಅವಳು ಹೊರಗೆ ಹೋದಳು. ಬೇಲಿಯ ಹತ್ತಿರ ಹೋಗಿ ಹುಡುಕಿ ಎಳೆ ಚದುರಂಗದ ಸೊಪ್ಪು ತಂದು ಅದನ್ನು ತನ್ನ ಅಂಗೈಗೆ ಹಾಕಿಕೊಂಡು ಬಲಗೈಯಿಂದ ತಿಕ್ಕಿ ತಿಕ್ಕಿ ರಸ ಹೊರಡಿಸಿ ಕೈಯನ್ನು ಗಾಯದ ಮೇಲೆ ತಂದು ಒಂದು ಸಲ ಬಲವಾಗಿ ಹಿಂಡಿದಳು. ತೊಟತೊಟನೆ ಬಿದ್ದ ಹಸುರು ರಸದಿಂದ ಉರಿಹತ್ತಿ ಅವರು 'ಹಾ' ಎಂದರು. 'ಉರೀತೈತೆ. ಬ್ಯಾಗ ಮಾಯ್ತದೆ. ನಾಯಿ ಅಲ್ಲು ನನ್ ಮಗಂದು ಇಸ' – ಎಂದ ಅವಳು, ಕೈಲಿದ್ದ ಹೊಸಗಿದ ಸೊಪ್ಪನ್ನು ಗಾಯಕ್ಕೆ ಮೆತ್ತಿ ತನ್ನ ಸೀರೆಯ ಸೆರಗನ್ನು ಹಲ್ಲಿನಿಂದ ಕಚ್ಚಿ ಒಂದು ಪಟ್ಟಿ ಹರಿದು ಕಟ್ಟಿದಳು.

ಅವರು ಸುಮ್ಮನೆ ಅವಳನ್ನೇ ನೋಡುತ್ತಾ ಕುಳಿತಿದ್ದರು. ಏನು ಮಾತ ನಾಡಲೂ ಅವಳಿಗೆ ತಿಳಿಯಲಿಲ್ಲ. ನೆಲ ನೋಡುತ್ತಾ ಕುಳಿತಲ್ಲೇ ಸುಮ್ಮನಾದಳು. ಸ್ವಲ್ಪ ಹೊತ್ತಿನನಂತರ ಕೇಳಿದಳು: 'ನನ್ನ ಯಾಕ್ ಉಡಿಕ್ಕಂಡ್ ಬಂದಿದ್ರಯ್ಯ?'

'ಸುಮ್ಕೆ.'

'ಸುಮ್ ಸುಮ್ಕೆ ಯಾಕ್ ಬತ್ತೀರಯ್ಯ? ನಿಜ ಏಳಿ. ಈಟು ವರ್ಸ ಮಾತಂಗಿ ನೆಪ್ಪು ಅತ್ತಿಲ್ವಾ?'

'ನನ್ನ ಕಂಡ್ರೂ ನೀನೇ ಕಾಣದ ಹಂಗೆ ಹೋಗ್ತಿದ್ಯಲ್ಲೇ?'

'ನಮ್ಮ ಜಾತಿ ಕಟ್ಟು ಕಣ್ರಯ್ಯಾ. ಬ್ಯಟ್ಟಣ್ಣಾರು ಬಂದ ಮ್ಯಾಗೆ. ಯಾವ ಎಂಗ್ಸೂ ಇತರೇ ಜಾತಿಯೋರ ತಕ್ ಸ್ಯಾಗ್ ಬ್ಯಾಡ್‌ದು ಅಂತ ಅಂದವ್ರೆ.'

'ಯಲ್ಲಾ ಅವನು ಏೇಳಿದ್ದಾಗೇ ಕೇಳ್ತಿರಾ?'

'ಕೇಳಾರು ಕೇಳ್ತಾರೆ. ಇಲ್ಯೋರು ಇಲ್ಲ. ನಾನ್ ಕೇಳ್ತೀನಿ.'

'ಹಂಗಾದ್ರೆ ಈಗ ಯಾಕ್ ಬಂದೆ?'

'ನೀವು ಉಡಿಕ್ಕಂಡ್ ಬಂದಿದ್ರಲ್ಲಯ್ಯ. ತಿಟ್ ಮಾಡ್ಕಬ್ಯಾಡಿ. ಬರಬೇಕು ಅಂತಿದ್ದೆ. ಧೈರ್ಯನಾಗ್ತಿರ್ನಿಲ್ಲ. ನಿಮ್ ಉಡ್ಗ್ರು ದೊಡ್ಡರಾಗಿಯವ್ರೆ. ನನ

ಮಗನೂ....' ಎಂದು ನಾಲಿಗೆ ಕಚ್ಚಿದಳು.

'ನಿನ್ನ ಮಗ ಏನ್ಮಾಡ್ತನ್ವೆ?'

'ನಿನ್ನ ಮಗ ಅಂತ ಯಾಕಂತೀರಯ್ಯ?'–ಎಂದು ಅವಳು ಕೇಳಿದಾಗ ಅವರಿಗೆ ಕಸಿವಿಸಿಯಾಯಿತು. ಅವಳೇ ತಕ್ಷಣ ಹೇಳಿದಳು: 'ಹ್ಯದರ್ಕಾಬ್ಯಾಡಿ. ನಿಮ್ಮ ಮರ್ವಾದಿ ನಂದು ಅಂತ ಏಳ್ಲಿಲ್ವಾ ಅವತ್ತೇ? ನಾನು ಯಾರ ಕುಟ್ಟೂ ಏಳಾಕಿಲ್ಲ. ಮಣ್ಣೊಳಿಕ್ ಬೀಜ ಬಿದ್ ಮುಚ್ಚಿದ ಮ್ಯಾಗೆ ಯಾವ ಅಕ್ಕಿ ಕಚ್ ಕಂಡ್ ತಂದ್ ಇಕ್ತು ಅಂತ ಮಣ್ಣವ್ವ ಬಾಯಿಬುಟ್ಟ್ಯಾಳಾ? ನೀನು ಗುಬ್ಬಚ್ಚಿ ಕಣ್ರಯ್ಯ. ಗುಬ್ಬಚ್ಚಿ ಅಂದ್ರೆ ಆರುವ. ಕಾಗೆ ಅಂದ್ರೆ ಮಾದಿಗ. ಗುಬ್ಬಚ್ಚಿ ಬೀಜ ಗುಬ್ಬಚ್ಚಿಯಾಯ್ತದೆ. ಮಾಕಂಗಿ ಎಂತೋಳು? ಆರುವಳಾ, ಮಾದಿಗಿತ್ತಿಯಾ?'

ಅವರಿಗೆ ಈ ಪ್ರಶ್ನೆಗೆ ಉತ್ತರ ತಿಳಿಯಲಿಲ್ಲ. ತಾನು ಕೇಳಿದ ಪ್ರಶ್ನೆಯನ್ನು ಅವಳೂ ಬೆಳೆಸಲಿಲ್ಲ. ಅವಳ ಗಮನ ಬೇರೆ ಕಡೆ ಹೋಯಿತು. ಕುಳಿತಲ್ಲಿಂದ ಹಿಂತಿರುಗಿ ನೋಡಿದಳು. ಹಿಂಭಾಗದ ಗೋಡೆಯ ದಡದಲ್ಲಿ ಮೂರು ಕಲ್ಲುಗಳನ್ನಿಟ್ಟು ಒಲೆ ಹೂಡಿದ್ದರು. ಆದರೆ ಅದರಲ್ಲಿ ಬೂದಿ ಇರಲಿಲ್ಲ. ಹತ್ತಿರದ ಕಲ್ಲಿನ ಮೇಲೆ ದಬ್ಬ ಇಟ್ಟಿದ್ದ ಪಾತ್ರೆಗಳು ತೊಳೆದಂತಿದ್ದುವು. 'ಇವತ್ತು ನೀವು ಉಂಡಿದ್ರೇನ್ರಯ್ಯಾ?'–ಅವಳು ಕೇಳಿದಳು.

'ನಾನು ದಿನಾ ಅಡಿಗೆ ಮಾಡ್ಕಳುಲ್ಲ.'

'ಹಂಗಾರೆ ನಾನು ಈಗ ಮಾಡಿ ನೀಡ್ತೀನಿ, ಉಣ್ತೀರೇನ್ರಯ್ಯ?'

ಅವರು ಕುತೂಹಲದಿಂದ ಅವಳ ಮುಖವನ್ನು ದಿಟ್ಟಿಸಿ ನೋಡಿದರು. ಅವಳ ಬುದ್ಧಿ ಉತ್ತೇಜಿತವಾಗಿದ್ದುದು ಸ್ಪಷ್ಟವಾಗಿತ್ತು. ಅವರು ಕೇಳಿದರು: 'ಬೆಟ್ಟಯ್ಯ ಬಂದ ಮೇಲೆ ಬ್ಯಾರೆ ಜ್ಯಾತಿಯೋರ ಕರ್ಕಬಾರ್ದು ಅಂತ ಕಟ್ಟು ಮಾಡಿದ ಅಂದ್ಯಲ. ಕುಡೀಬಾರ್ದು ಅಂತ ಕಟ್ಟು ಮಾಡ್ಲಿಲ್ವಾ?'

'ಮಾಡವ್ನೆ. ಅಪ್ಪ ಬೆಂಗಳೂರಿಗೆ ಓದಾಗ ನಾವೆಲ್ಲ ಕುಡೀತೀವಿ. ಅಪ್ಪನ ಎಂಡ್ತಿಯೂವೆ.'

ಅವರು ಮತ್ತೆ ಸುಮ್ಮನೆ ಕುಳಿತರು. ಅವಳೇ ಕೇಳಿದಳು: 'ಈಗ ಬೋನ ಬೇಯಿಸ್ಲೇನ್ರಯ್ಯ?'

ಅವಳು ಇದೇ ಮಾತನ್ನು ಎರಡನೇ ಸಲ ಕೇಳುತ್ತಿದ್ದಾಳೆ. ಅವಳು ಮಾಡಿ ಇಕ್ಕಿದುದನ್ನು ತಾವು ತಿನ್ನಬಹುದೋ ಬಾರದೋ!–ಎಂಬ ಪ್ರಶ್ನೆ ತಲೆಯಲ್ಲಿ ಹುಟ್ಟಿತು. ಯೋಚಿಸುತ್ತಾ ಕೂತರು. ಅವಳೇ, 'ನಮ್ ತಾವ ಮುನೀಕತ್ತೀರ. ನಾವ ಮಾಡಿದ್ದು ಯಾಕ್ ಉಣ್ಣಾಕಿಲ್ರಯ್ಯ?' ಎಂದಳು. ಈ ಮಾತನ್ನು ಕೇಳಿ ಅವರು ಬೆಚ್ಚಿದರು. ಹಣೆ ಮತ್ತು ಕುತ್ತಿಗೆಗಳು ಬೆವೆತುವು. ಮಾಕಂಗಿ ಈಗ

ಕುಡಿದಿದ್ದಾಳೆ. ಅವಳು ಆಡುತ್ತಿರುವ ಮಾತು ಅವಳಿಗೆ ಗೊತ್ತೋ ಇಲ್ಲವೋ! ಅಥವಾ ಚೆಟ್ಟಯ್ಯ ಇವರ ಜಾತಿಯವರ ಕೈಲಿ ಆಡುವ ಮಾತುಗಳನ್ನು ಇಲ್ಲಿ ಅನ್ನುತ್ತಿದ್ದಾಳೆಯೋ!

ಅವಳೇ ಅಂದಳು: 'ನಾನು ಗಬ್ಬಾದ್ರೆ ಮೈ ತೊಕ್ಕಂಡು ಬಂದು ಬೋನ ಬೇಯಿಸ್ತೀನಿ ಕಣ್ರಯ್ಯಾ, ಅವತ್ತು ಗುಡೀಗೆ ಬರೂವಾಗ ತೊಕ್ಕಂಡಿದ್ವಲಾ ಹಂಗೆ. ಉಣ್ತೀರಾ?'

ಅವರು ಈಗಲೂ ಮಾತನಾಡಲಿಲ್ಲ. ಮಾತಂಗಿ ಹಟವನ್ನೇ ಮಾಡುತ್ತಿದ್ದಾಳೆ. ಉಣ್ಣುವುದಿಲ್ಲವೆಂದರೆ ಏನು ಮಾಡಬಹುದು? ಅಳಬಹುದು. ಅದು ಅವರಿಗೆ ಸಹಿಸಲಿಲ್ಲ. ಉಣ್ಣುತ್ತೇನೆಂದರೆ ಇವತ್ತು ಮಾಡಿಹಾಕುತ್ತಾಳೆ. ಅದರಂತೆ ದಿನಾ ಮಾಡಿ ಬಡಿಸುತ್ತೇನೆಂದರೆ ಏನು ಮಾಡುವುದು? ಊರಿನವರಿಗೆಲ್ಲ ಗೊತ್ತಾಗುತ್ತೆ. ಗೊತ್ತಾದರೆ ಏನು? ಅವರಿಗೆ ತಕ್ಷಣ ಸಿಟ್ಟು ಬಂತು. ಎದ್ದು ಹೊರಗೆ ಹೋಗಿ ಈ ಗುಡಿಸಿಲಿಗೆ ಬೆಂಕಿ ಹಾಕಿ ಸುಟ್ಟು ಊರೊಳಗಿನ ಮನೆಗೆ ಹೊರಟುಹೋಗಬೇಕೆನಿಸಿತು. ಊರೊಳಕ್ಕೆ ಹೋಗಬೇಕು, ಹೊಸ ಜನಿವಾರ ಹಾಕಿಕೊಳ್ಳಬೇಕು, ಮಡಿಯ ದೇವರನ್ನು ಪೂಜೆ ಮಾಡಬೇಕು ಎಂದು ಮನಸ್ಸು ಬಯಸಿತು.

ಮಾತಂಗಿ ಎದ್ದು ನಿಂತು, 'ಅಯ್ಯಾ, ಮಾದಿಗಿತ್ತಿಗೆ ಮೈ ತೊಕ್ಕಳುಕ್ಕೆ ಬರಾಕಿಲ್ಲ ಅನ್ನಬ್ಯಾಡಿ. ತಿಕ್ಕಿ ತಿಕ್ಕಿ ತೊಕ್ಕತ್ತೀನಿ. ಚೌಳು ಹಾಕಿ ತಲೆ ತೊಕ್ಕತ್ತೀನಿ. ಆಮ್ಯಾಲೆ ಬಂದು ನೋಡು ಹಾರುವರ ಹೆಂಗಸರ ಹಂಗೇ ಬೆಳ್ಳಗಿರ್ತೀನಿ. ಇಲ್ಲಿ ಕುಂತು ಬೋನ ಬೇಸಿ ನೀಡ್ತೀನಿ. ಮಾತಂಗಿ ಹ್ಯಂಗ್ ಮಾಡ್ತಾಳೆ ಎಸರು ಉಂಡು ನೋಡ್ರಯ್ಯ' ಎಂದು ಹೇಳಿ ಬಾಗಿಲು ತೆಗೆದುಕೊಂಡು ಹೊರಗೆ ಹೋದಳು. ಹತ್ತಿರದ ಕೊಳದ ನೀರಿನಲ್ಲಿ ಅವಳು ಇಳಿದು ಲಪಲಪ ಸದ್ದು ಕೇಳಿಸಿತು. ಅವರಿಗೆ ಮತ್ತೊಮ್ಮೆ ಅಗಾಧವಾದ ಸಿಟ್ಟು ಬಂತು. ಈ ಗುಡಿಸಿಲಿಗೆ ಬೆಂಕಿ ಹಚ್ಚಿ ಹೊರಟುಹೋಗಬೇಕು. ಈ ಮಾದಿಗಿತ್ತಿಯ ಕೈಯ ಅನ್ನವನ್ನು ಇವತ್ತು ತಿಂದರೆ ಮುಗಿಯಿತು. ನಾಲಿಗೆಯನ್ನು ಏಳು ಸಲ ದರ್ಭೆಯಲ್ಲಿ ಸುಡಿಸಿಕೊಂಡರೂ ಪಾಪ ಹರಿಯುವುದಿಲ್ಲ. ಕಾಮತೃಪ್ತಿಗೆ ಯಾರಾದರೂ ಯಾವ ಹೆಂಗಸನ್ನಾದರೂ ಭೋಗಿಸಬಹುದು. ಆದರೆ ಭೋಜನ, ಸಂಸ್ಕಾರ, ಮತ್ತು ಸಹಭಾಗಿತ್ವಕ್ಕೆ ಕುಲಪ್ರಸೂತೆಯೇ ಬೇಕು. ಇವತ್ತು ಅವಳು ಮತ್ತೆ ಒಳಗೆ ಬರದಹಾಗೆ ಮಾಡಬೇಕು ಎನಿಸಿ–ಬಾಗಿಲು ಮುಚ್ಚಿ, ಒಳಗೆ ಅಗಳಿ ಇಲ್ಲದ್ದರಿಂದ ಒಂದು ಹೆಡೆ-ದಿಬ್ಬಿಯನ್ನು ಒಡೆ ಕೊಟ್ಟರು.

ಇವತ್ತು ತಾವು ಅವಳನ್ನು ಹುಡುಕಿಕೊಂಡು ಹೋದದ್ದೇಕೆ, ಎಂಬ

ಯೋಚನೆ ಹೊತ್ತಿತು. ತನಗೇ ಗೊತ್ತಿಲ್ಲ. ತಾವು ಹೋಗುತ್ತಿರುವುದು ಸ್ಪಷ್ಟವಾಗಿ ಅರಿವಿಗೆ ಬಂದಿರಲಿಲ್ಲ. ಸುಮ್ಮನೆ ಹೋಗುತ್ತಿದ್ದೆ. ನಾನೂ ಇತ್ತೀಚೆಗೆ ಏನು ಮಾಡುತ್ತಿದ್ದೇನೆಂಬುದು ನನಗೇ ತಿಳಿಯುತ್ತಿಲ್ಲ. ಬುದ್ಧಿ ಮಂಕಾಗಿರುತ್ತೆ. 'ಆ ಕಡೆ ಹೋಗುಕ್ಕೆ ಬೇರೆ ಏನು ಕಾರಣವಿರುತ್ತೆ? ಮಾತಂಗಿ ಮುನಿಸಿಕೊಂಡು ಹೊರಟಾಗ, 'ನಿನ್ನ ನೋಡಬೇಕು ಅನ್ನಿಸ್ತು. ಅದಕ್ಕೇ ಬಂದೆ' – ಅಂದದ್ದು ಸುಳ್ಳು ಉತ್ತರವಲ್ಲ ಅಂತ ಈಗ ಗೊತ್ತಾಗ್ತಾ ಇದೆ. ಅವಳನ್ನು ಯಾಕೆ ಹುಡುಕಿಕೊಂಡು ಹೋದೆ? ಕಾಮತೃಪ್ತಿಗೆ? ಆದರೆ ಇತ್ತೀಚೆಗೆ, ಎಂಟು ಹತ್ತು ವರ್ಷದಿಂದ ಆ ಆಶೆಯೇ ಆಗುತ್ತಿಲ್ಲ. ಇಷ್ಟು ಹೊತ್ತೂ ಅವಳು ಎದುರಿಗೆ ಕೂತಿದ್ದರೂ ಆ ಆಶೆಯಾಗಲಿಲ್ಲ. ಈಗಲೂ ಆಗುತ್ತಿಲ್ಲ. ಎದುರಿಗೆ ಕೂತಿದ್ದವಳ ಭುಜ ಹಿಡಿದು ಹತ್ತಿರ ಎಳೆದುಕೊಂಡಿದ್ದರೆ ಅವಳು ಒಲ್ಲೆ ಎನ್ನುತ್ತಿರಲಿಲ್ಲ. ಅನ್ನುತ್ತಿದ್ದಳೋ ಇಲ್ಲವೋ, ಆದರೆ ನನಗೆ ಹಾಗೆ ಮಾಡುವ ಇಚ್ಛೆಯೇ ಹುಟ್ಟಲಿಲ್ಲ. ಹಾಗಿದ್ದೂ ನಾನು ಅವಳನ್ನು ಹುಡುಕಿಕೊಂಡು ಯಾಕೆ ಹೋದೆ?

ಅವರಿಗೆ ಉತ್ತರ ಹೊಳೆಯಲಿಲ್ಲ. ಹೊರಗೆ ಅವಳು ಸ್ನಾನ ಮಾಡುತ್ತಿರುವ ಸದ್ದು ಕೇಳುತ್ತಿತ್ತು. ಸ್ ಸ್ ಸ್ಸ್ ಎಂದು ನಾಲಿಗೆಯಲ್ಲಿ ನುಡಿದುಕೊಂಡು ಛಪ್ ಛಪ್ ಎಂದು ಶಬ್ದವಾಗುವಂತೆ ತೋಳು ಮೈಗಳನ್ನು ಜೋರಿನಿಂದ ತಿಕ್ಕಿಕೊಳ್ಳುತ್ತಿದ್ದಾಳೆ. ಮತ್ತೆ ಮತ್ತೆ ಮುಳುಗಿ ಏಳುತ್ತಿದ್ದಾಳೆ. ಆ ರಾತ್ರಿಯ ಚಳಿಯಲ್ಲಿ ಅದೆಷ್ಟು ಸ್ನಾನ ಮಾಡುತ್ತಿದ್ದಾಳೆ? ಹಾರುವರ ಹೆಂಗಸರ ಹಾಗೆ ಬೆಳ್ಳಗಾಗುವತನಕ ಮುಗಿಯುವುದಿಲ್ಲವೇನೋ ಅವಳ ಸ್ನಾನ! ಮಾದಿಗತ್ವ ಕಳೆದು ಬ್ರಾಹ್ಮಣತ್ವ ಬರಬೇಕಾದರೆ ಅದೆಷ್ಟು ಮುಳುಕುಹಾಕಬೇಕೋ! – ಎನಿಸಿತು. ಆದರೆ ಬ್ರಾಹ್ಮಣಿಯಾಗಲು ಬೆಳ್ಳಗೇಕೆ ಆಗಬೇಕು? ಬ್ರಾಹ್ಮಣಿಯರೆಲ್ಲ ಎಲ್ಲಿ ಬೆಳ್ಳಗಿದ್ದಾರೆ? ನನ್ನ ಹೆಂಡತಿ, ವೆಂಕಟೇಶನ ತಾಯಿ, ಕಪ್ಪಗೇ ಇದ್ದಳಲ್ಲ – ಎಂಬ ನೆನಪು ಬಂತು. ಈ ಮಾತಂಗಿಯನ್ನು ಬ್ರಾಹ್ಮಣಿಯಾಗಿ ಮಾಡಲು ಸಾಧ್ಯವಿಲ್ಲವೇ – ಎಂಬ ಒಂದು ಯೋಚನೆ ಇದ್ದಕ್ಕಿದ್ದಹಾಗೆಯೇ ಮನಸ್ಸಿನಲ್ಲಿ ಹುಟ್ಟಿತು. ಯಾಕೆ ಸಾಧ್ಯವಿಲ್ಲ? ಜಾತಬ್ರಹ್ಮರ್ಷಿ ವಸಿಷ್ಠರು ಮಾದಿಗಿತ್ತಿ ಅರುಂಧತಿಯನ್ನೇ ಮದುವೆಯಾಗಿ, ಪರಮ ಬ್ರಾಹ್ಮಣಿಯಾಗಿ ಮಾಡಿದರಲ್ಲ. ವಸಿಷ್ಠರ ತಪಶ್ಶಕ್ತಿ ಅಂಥದು. ನಾನು ಈ ಮಾತಂಗಿಯನ್ನು ಮದುವೆಯಾಗಬೇಕು. ಆಗಿದ್ದೇನೆ ಅಂತ ಪ್ರಪಂಚದ ಜನರೆದುರಿಗೆ ಘೋಷಿಸಬೇಕು. ದಿನಾ ಹೋಮ ಮಾಡಬೇಕು. ಅದರಲ್ಲಿ ಸಹಧರ್ಮಿಣಿಯಾಗಿ ಅವಳನ್ನು ಕೂರಿಸಬೇಕು. ಅವಳಿಗೂ ಯಜ್ಞೋಪವೀತ ಧಾರಣೆ ಮಾಡಿಸಿ ಗಾಯತ್ರಿಯನ್ನು ಉಪದೇಶಿಸಬೇಕು. ನಾನು ಊರಿನಲ್ಲಿಲ್ಲದ ದಿನ ಹವಿಸ್ಸನ್ನು ಅರ್ಪಿಸುವ ಅಧಿಕಾರ ಅವಳಿಗೆ ಪ್ರಾಪ್ತ

ವಾಗಬೇಕು. ಈ ಗುಡಿಸಲೇ ಪರ್ಣಶಾಲೆಯಾಗಬೇಕು. ಇದು ನನ್ನ ವಾನಪ್ರಸ್ಥ ಜೀವನ.

ಈ ಯೋಚನೆಯಿಂದ ಅವರಿಗೆ ಅಗಾಧ ಧೈರ್ಯ ಬಂತು. ಮಾತಂಗಿಯ ಸದ್ದು ಕೇಳಿಸುತ್ತಿಲ್ಲ. ಅವಳ ಸ್ನಾನ ಮುಗಿದಿರಬಹುದು. ಉಡಲು ಬೇರೆ ಸೀರೆ ಇಲ್ಲದೆ ಅವಳು ಸಂಕೋಚದಿಂದ ಹೊರಗೇ ನಿಂತಿರಬಹುದು. ಒದ್ದೇ ಬಟ್ಟೆಯೇ ಬ್ರಾಹ್ಮಣಿಗೆ ಶ್ರೇಷ್ಠ ಉಡುಗೆ. ಅದಕ್ಕೆಂತಹ ಸಂಕೋಚ ಎಂದು ಹೇಳಲು ಅವರು ಲಾಟೀನನ್ನು ಕೈಲಿ ಹಿಡಿದು, ಬಾಗಿಲಿಗೆ ಒದೆ ಕೊಟ್ಟಿದ್ದ ಹೆಡೆವಿಬ್ಬಿಯನ್ನು ತೆಗೆದು ಬಾಗಿಲು ತೆಗೆದುಕೊಂಡು ಹೊರಗೆ ಬಂದರೆ ಕೊಳದ ಹತ್ತಿರ ಮಾತಂಗಿ ಇಲ್ಲ. ಅವಳ ಹೆಜ್ಜೆಯ ಗುರುತು ಕಾಣಿಸುತ್ತಿದೆ. ಇವಳೆಲ್ಲಿ ಹೋದಳೆಂದು ಒಂದು ಗಳಿಗೆ ನಿಟ್ಟಿಸಿ ನೋಡಿದರು. ತೋಟದ ಪೊಳೆಬಾಗಿಲಿನ ಹತ್ತಿರ ಹೋಗುತ್ತಿರುವ ಅವಳ ಅಸ್ಪಷ್ಟ ಆಕೃತಿ ಕಾಣಿಸಿತು. ಲಾಟೀನನ್ನು ಕೈಲಿ ಹಿಡಿದು, 'ಮಾತಂಗೀ' ಎಂದು ಕೂಗುತ್ತಾ ಅವರು ಓಡಿದರು. ನಾಯಿ ಕಚ್ಚಿದ ಕಾಲು ನೋಯುತ್ತಿತ್ತು. ಆದರೂ ಬೇಗ ಬೇಗ ಹೆಜ್ಜೆ ಹಾಕಿದರು. ಅವಳು ನಿಲ್ಲಲೂ ಇಲ್ಲ, ಹಿಂತಿರುಗಿ ನೋಡಲೂ ಇಲ್ಲ. ಅವರ ಮಾತು ಕೇಳಲೇ ಇಲ್ಲವೆಂಬಂತೆ ನಡೆಯುತ್ತಿದ್ದವಳು ಹೆಜ್ಜೆಯನ್ನು ಜೋರು ಮಾಡಿದಳು. ನೋಯುವ ಕಾಲಿನಲ್ಲೇ ದಾಪುಗಾಲು ಹಾಕಿ ಹಿಂಬಾಲಿಸಿದ ಇವರು ಹಿಂದಿನಿಂದ ಹೋಗಿ ಅವಳ ಒದ್ದೆ ಸೆರಗನ್ನು ಹಿಡಿದು ನಿಲ್ಲಿಸಿದರು.

'ನನ್ನ ಬಿಡ್ರಯ್ಯಾ, ಹಿಂಗ್ ಮುಟ್ಟಬ್ಯಾಡ್ರಿ' – ಅವಳು ಕೊಸರಿಕೊಂಡಳು.

'ಯಾಕೆ ಇದ್ದಕ್ಕಿದ್ದ ಹಂಗೆ ಹ್ವಂಟೆ?' – ಅವರು ಕೇಳಿದರು.

'ಕುಡ್ದು ಮಸ್ಗಿದ್ದೋಳನ್ನ ಮಾಯ ಮಂತ್ರ ಮಾಡ್ಸಿ ಹಿಂಗ್ ತ್ವಾಟದ ಗುಡ್ಸಿಗೆ ಕರ್ಕಂಡ್ ಬರಬೌದೇನ್ರಯ್ಯಾ? ಜಾತಸ್ತುರು ಕಂಡ್ರೆ ಏನಂತಾರೆ? ನಿಮ್ಮ ಜಾತಿಯೋರು ಸುಮ್ಕಿರ್ತಾರಾ?'

'ಜಾತಿ ಹೆದರಿಕೆ ಬ್ಯಾಡ. ನಿನ್ನ ಬ್ರಾಹ್ಮಣಿ ಮಾಡ್ತೀನಿ ಬಾ.'

ಅವಳು ಗೊಳ್ಳೆಂದು ನಕ್ಕಳು. ಈಗ ಅವಳ ಬಾಯಿಂದ ವಾಸನೆ ಹೊಡೆಯುತ್ತಿರಲಿಲ್ಲ. ಕಣ್ಣಿನ ಕೆಂಪು ಇಳಿದಿತ್ತು. ಮುಖದಲ್ಲಿ ಊದು ಕಾಣುತ್ತಿರಲಿಲ್ಲ.

'ಮಾದಿಗಿತ್ತೀನ ಹಾರುವಗಿತ್ತಿ ಮಾಡಾಕ್ ಆಯ್ತದೇನ್ರಯ್ಯ? ನನ್ನ ಸೀರೆ ಬುಡಿ. ಓಯ್ತೀನಿ' – ಎಂದು ಜಾಡಿಸಿ ಕಿತ್ತುಕೊಂಡು ಮುಂದೆ ನಡೆದು ಬಿಟ್ಟಳು. ಹತ್ತು ಹೆಜ್ಜೆ ಹಾಕಿದ ನಂತರ ನಿಂತು ಹಿಂತಿರುಗಿ. 'ಇನ್ ಮ್ಯಾಗೆ ಹಿಂಗ್ ಮಾಯ ಮಂತ್ರ ಆಕಿ ಕರ್ಕಂಡ್ ಬರಬ್ಯಾಡಿ. ನಿಮ್ಮ ಮರ್ಯಾದಿಯೇ

ಓಯ್ತಾದೆ' ಎಂದು ಹೇಳಿ ಮತ್ತೆ ತಿರುಗಿ ಬೇಗ ಬೇಗ ಹೊರಟುಹೋದಳು.

ಇವರು ಗರ ಬಡಿದವರಂತೆ ನಿಂತು, ಅವಳು ಹೋದ ದಿಕ್ಕನ್ನೇ ನೋಡು ತ್ತಿದ್ದರು. ಲಾಟೀನಿನ ಬೆಳಕು ಹತ್ತು ಮಾರು ಆಚೆಗೆ ಕಾಣುತ್ತಿರಲಿಲ್ಲ. ಅವಳ ಆಕೃತಿಯು ದೂರದ ಹಳ್ಳದ ಹತ್ತಿರ ಮರೆಯಾಯಿತು. ಇವರು ಲಾಟೀನು ಹಿಡಿದು ಪೊಳೆಬಾಗಿಲು ಹಾಕಿಕೊಂಡು ತಮ್ಮ ಗುಡಿಸಲಿಗೆ ಬಂದರು. ತಲೆಯಲ್ಲಿ ಏನೋ ನೋವಾಗುತ್ತಿತ್ತು. ಒಲೆಯ ಮೇಲಿನ ನೀರು ಮರಳುವಾಗ ಕೆಳಗಿನದು ಮೇಲೆ ಮೇಲಿನದು ಕೆಳಗೆ ಸುತ್ತುವಂತೆ ಆಗುತ್ತಿತ್ತು. ಮಲಗಿ ನಿದ್ದೆ ಮಾಡ ಬೇಕೆನಿಸಿತು. ಗುಡಿಸಲಿನ ಬಾಗಿಲು ಹಾಕಿಕೊಂಡು ಗೋಣಿಚೀಲದ ಮೇಲೆ ಮಲಗಿ ದುಪ್ಪಟಿಯನ್ನು ಹೊದೆದುಕೊಂಡರು. ಸ್ವಲ್ಪ ಹೊತ್ತಿನಲ್ಲಿ ನಿದ್ರೆ ಬಂತು. ಏನೇನೋ ಕನಸುಗಳು. ಅವುಗಳ ಅರ್ಥ ತಿಳಿಯುತ್ತಿರಲಿಲ್ಲ.

ಬೆಳಗ್ಗೆ ಎಚ್ಚರವಾದಾಗ ಬಾಗಿಲ ಸಂದಿಯಿಂದ ಬಿರುಸು ಬಿಸಿಲು ಒಳಗೆ ಬಂದಿತ್ತು. ಎದ್ದ ತಕ್ಷಣ ಕಾಲಿನ ನೋವು ಕಾಣಿಸಿತು. ಕಾಲಿಗೆ ಕಟ್ಟಿದ್ದ ಸೀರೆಯ ತುಂಡು ಕಣ್ಣಿಗೆ ಬಿತ್ತು. ಅದನ್ನು ಬಿಚ್ಚಿ ಹರಿದು ತುಂಡು ತುಂಡು ಮಾಡಿ ಕೈಲಿ ಹೊಸಕಿ ಉಂಡೆ ಮಾಡಿ ಬಾಗಿಲು ತೆಗೆದು ಹೊರಗೆ ಬಂದು ತಮ್ಮ ತೋಟದ ಬೇಲಿಯಿಂದ ಆಚೆಗೆ ಎಸೆದರು.

೪

ಅವರು ಹೊಲೆಗೇರಿಗೆ ಸಗಣಿತೊಪ್ಪೆಯಲ್ಲಿ ಹೊಡೆಸಿಕೊಂಡ ಸಂಗತಿ ಊರೊಳಗೆಲ್ಲ ತಿಳಿಯಿತು. ಹುಚ್ಚು ಹಿಡಿದಿರುವವರು ಹೋಗಿದ್ದಾರೆ, ಅವರೇನು ಬೇಕಂತಲೇ ಹೋಗಿಲ್ಲ, ಅಂಥವರನ್ನು ಹೊಡೆದದ್ದು ಈ ಹೊಲೆಯರದ್ದೇ ತಪ್ಪು ಎಂದು ಬಹುಜನರು ಮಾತನಾಡಿಕೊಂಡರು. ವೆಂಕಟೇಶ ಬಂದು, 'ಅಪ್ಪ, ಅಲ್ಲಿಗ್ಯಾಕೆ ಹೋದೆ? ಅದು ಹೊಲಗೇರಿ, ಹೀಗೆ ಮಾಡಬಾರ್ದು ಅಂತ ತಿಳೀಲಿಲ್ವೆ?' ಎಂದದ್ದಕ್ಕೆ ಅವರು ಮಾತನಾಡಲಿಲ್ಲ. ತಮಗೆ ಕೇಳಲೇ ಇಲ್ಲವೆಂಬಂತೆ ಸುಮ್ಮನೆ ಇದ್ದುಬಿಟ್ಟರು. ಮಾತನ್ನು ಅವನೂ ಹೆಚ್ಚು ಬೆಳೆಸಲಿಲ್ಲ.

ಸುಮಾರು ಇಪ್ಪತ್ತು ದಿನ ಕಳೆದಿತ್ತು. ಮಧ್ಯಾಹ್ನದ ಹೊತ್ತು. ಅವರು ತೆಂಗಿನಮರದ ನೆರಳಿನಲ್ಲಿ ಕುಳಿತು ಕೊಳದ ನೀರನ್ನೇ ದಿಟ್ಟಿಸಿ ನೋಡುತ್ತಿದ್ದರು. ಹೆಜ್ಜೆಯ ಸದ್ದಾಯಿತು. ಹಿಂತಿರುಗಿ ನೋಡಿದರೆ ಬೆಟ್ಟಯ್ಯ ಬರುತ್ತಿದ್ದರು. ಅವರ ಎಂದಿನ ವೇಷ, ಖಾದಿಯ ಪಂಚೆ, ಖಾದಿಯ ಕೋಟು, ಬಿಳೀ ಟೋಪಿ, ಕಾಲಿಗೆ ಅವರ ಕೇರಿಯವರೇ ಮಾಡಿದ ಎಕ್ಕಡ. ಬೆಟ್ಟಯ್ಯನವರು ಇವರಿಗೆ ಕೈ

ಮುಗಿದು ಮೂರು ಮಾರು ದೂರದಲ್ಲಿ ಬದುವಿನ ಮೇಲೆ ಕುಳಿತರು. ಇವರೇ ಕೇಳಿದರು: 'ಚನ್ನಾಗಿದೀಯ ಬೆಟ್ಟಯ್ಯ?'

ಅವರಿಗೆ ಆಶ್ಚರ್ಯವಾಯಿತು. ಗುಡಿ ಹಾರುವಯ್ಯನಿಗೆ ತಿಕ್ಕಲು ಹಿಡಿದ್ವೆತೆ ಎಂದು ಊರೆಲ್ಲ ಮಾತನಾಡಿಕೊಳ್ಳುತ್ತಿದ್ದಾರೆ. ಆದರೆ ಇವರನ್ನು ಕಂಡು ಅವರಿಗೆ ಹಾಗೆನಿಸಲಿಲ್ಲ: 'ಇದ್ಯಾಕ್ ಸ್ವಾಮಿ ತ್ವಾಟದಾಗಿರ್ತೀರ?'

'ಇನ್ನೇನಯ್ಯ?' – ಎಂದು ಅವರು ಅಂದ ರೀತಿಯಲ್ಲಿ, 'ಇನ್ನೇನಿದೆ ಊರೊಳಗಿನ ಜೀವನದಲ್ಲಿ?' ಎಂಬ ಭಾವವಿತ್ತು. ಅವರೇ ವಿಚಾರಿಸಿದರು: 'ನಿನ್ನ ಮಗ ಮಗಳು ಹ್ಯಂಗವ್ರೆ?'

'ಮಗಳು ಈ ಊರಿನ ಮಿಡ್ಲ್ ಇಸ್ಕೂಲಿಗೆ ಮೇಡಂ ಆಗಿಯವ್ಳೆ. ಆರು ತಿಂಗಳಾಯ್ತು. ಗೊತ್ತಿಲ್ವರ?' ಅದು ಅವರಿಗೆ ತಿಳಿದೇ ಇಲ್ಲ. ತಾವು ಈ ತೋಟದಲ್ಲಿ ವಾಸಿಸಲು ಶುರುವಾಗಿ ಮೂರು ನಾಲ್ಕು ತಿಂಗಳಾಯಿತು. ಅದಕ್ಕೆ ಮೊದಲು ಮೂರು ನಾಲ್ಕು ತಿಂಗಳು ಊರೊಳಗೆ ಏನಾಗುತ್ತಿದೆ ಎಂಬುದು ಗೊತ್ತಾಗುತ್ತಿರಲಿಲ್ಲ. ಯಾರ ಕೈಲೂ ಮಾತೇ ಬೇಕಾಗುತ್ತಿರಲಿಲ್ಲ. 'ಮಗ ತುಮಕೂರಾಗೆ ಯಾಪಾರ ಮಾಡ್ಕ್ಯಂಡವ್ನಲ.'

'ಮಗಂಗೆ ಮದುವೆ ಮಾಡಿದ್ಯಾ?'

'ಮದುವೆಯೇ ಬ್ಯಾಡ ಅಂತಾನೆ ಸಿವನೇ.'

'ನಮ್ ವೆಂಕಟೇಶಂಗಿಂತ ಎರಡು ಮೂರು ವರ್ಷಕ್ಕೆ ದೊಡ್ಡೋನಲ್ವೆ ಅವನು?'

'ಇಪ್ಪತ್ತೊಂಬತ್ತು. ಇದೊಂದು ಗ್ರಾಚಾರ. ನೀವು ನಮ್ಮ ಹಟ್ಟಿಗೆ ಬಂದಿದ್ರಂತೆ?'

ಈ ಪ್ರಶ್ನೆಯನ್ನು ಕೇಳಿದ ವೆಂಕಟರಮಣಯ್ಯನವರ ಮುಖ ಪೆಚ್ಚಾಯಿತು. ಆದರೆ ಅದನ್ನು ಬೆಟ್ಟಯ್ಯ ಗಮನಿಸಲಿಲ್ಲ. ಅವರೇ ಹೇಳಿದರು: 'ಈ ನಮ್ಮ ಜಾತಿಯೋವ್ರು ಯಾವತ್ತು ಮುಂದೆ ಬರಾದು? ಕುಡೀಬ್ಯಾಡ್ರಲೇ ಅಂತೀನಿ. ನಾನು ಊರಾಗಿದ್ದಾಗ ಕಂಡ್ಯಾಗ್ ಕುಡಿಯಾಕಿಲ್ಲ. ಇಲ್ದೆ ಇದ್ರೆ ಬೀದೀಲಿ ಕುಂತು ಹಸ್ರು ಮೆಣಸಿನಕಾಯಿ ಕಡಕಂಡ್ ಕುಡೀತಾವೆ. ನಮ್ಮ ಜಾತಿಯೋವ್ರು ವಾಶಿ. ಬಲಗೈಯೋರು ನನ್ನ ಮಾತು ಕೇಳಾಕಿಲ್ಲ. ಹಾರುವರು ಹಟ್ಟಿಗೆ ಬಂದ್ರೆ ಲಕ್ಸ್ಮಿ ಕುಂಡೊಯ್ತಾರೆ ಅಂತಾವೆ. ಹಾರುವಗೇರಿಗೆ ನಮ್ಮುನ್ನ ಸೇರುಸ್ತಿರ್ಲಿಲ್ವಲ, ಅದುಕ್ಕೆ ನಮ್ಮ ಕೇರಿಗೆ ಅವರುನ್ನೂ ಸೇರಿಸಾಕಾದು ಅಂತ ಈ ಕತೆ ಕಟ್ಟಿದ್ರು ಅನ್ನುಸ್ತದೆ. ಅಲ್ವರಾ?'

ವೆಂಕಟರಮಣಯ್ಯನವರು ಅವರ ವಿವರಣೆಯನ್ನು ಕೇಳುತ್ತಿದ್ದರು; ಪ್ರತಿ

ಮಾತನ್ನಾಡುತ್ತಿರಲಿಲ್ಲ. ಬೆಟ್ಟಯ್ಯನವರೇ ಎಂದರು: 'ಅಷ್ಟೊತ್ನಾಗೆ ಯಾಕೆ ಬಂದ್ರಿ ಬುದ್ದಿ?'

'ಯಲ್ಲಾ ನಿಂಗೆ ಗೊತ್ತಿರಭೌದು ಬೆಟ್ಟಯ್ಯ.'

ಏನೂ ಅರ್ಥವಾಗದಂತೆ ಅವರು ಇವರ ಮುಖ ನೋಡಿದರು. ತನಗೆ ಗೊತ್ತಿರುವ ಎಲ್ಲ ಸಂಗತಿಗಳೂ ಯಾವುವು? ಅವರೇ ಯೋಚಿಸಿಕೊಂಡು ಹೇಳಿದರು: 'ನಿಮ್ಮ ಮಗಳ ಇಶಯ ನನ್ನ ಕೇಳಾಕ್ ಬಂದ್ರಾ? ಏಟು ದಿನ ಅಂತ ಜೀವ ತಡೀತದೆ?'

ಬೆಟ್ಟಯ್ಯನ ಕೈಲಿ ನಿಜ ಹೇಳಿಬಿಡಬೇಕೆಂದು ಅವರು ಧೈರ್ಯ ಮಾಡಿದ್ದರು. ಆದರೆ ಈಗ ಬೆಟ್ಟಯ್ಯನೇ ಬೇರೆ ಸಂದು ತೋರಿಸಿಬಿಟ್ಟರು. ಅದೂ ಅವರ ಮನಸ್ಸಿನಲ್ಲಿ ಕೊರೆದು ಸಿದ್ಧವಾಗಿದ್ದ ಸಂದೇ. ಆದರಲ್ಲೇ ನುಸಿದು ದೊಡ್ಡದು ಮಾಡಿದರು: 'ಅವಳು ಹ್ಯಾಗಿದಾಳಪ್ಪ ಈಗ?'

'ಅವ್ರೆ ಹಿಂಗೇ' – ಎಂದು ಅವರು ತಮ್ಮ ಉತ್ತರವನ್ನು ತಕ್ಷಣ ನಿಲ್ಲಿಸಿದರು.

'ಯಾಕೆ, ಹೇಳಪ್ಪಾ, ನನ್ನ ಕೈಲಿ ಮುಚ್ಚಬ್ಯಾಡ.'

ಹೇಳುವುದೋ ಬಿಡುವುದೋ ಎಂಬುದನ್ನು ನಿರ್ಧರಿಸಲಾರದೆ ಒಂದು ನಿಮಿಷ ತೂಗಾಡಿದನಂತರ ಅವರು ಮಾತನಾಡಿದರು: 'ಈಗ ಆ ಮಗ ಕಾಲೇಜಿನಾಗಿಲ್ಲ.'

'ಯಾಕೆ?'

'ಸೂದ್ರರೋನ್ನ ಮದುವೆಯಾಯ್ತೀನಿ ಅಂತ ತಿಳಿದ ವ್ಯಾಲೆ ಅವರು ಈಯಮ್ಮನನ್ನ ಕಾಲೇಜಿನಿಂದ ತಿಗ್ದು ಹಾಕಿದರಂತೆ.'

'ಮದುವೆಯಾಗ್ಲಿಲ್ವಲ?'

'ಒಳ ಇಶಯ ಹಂಗಲ್ಲ. ಅವತ್ತು ನೀವು ಹೋಗಿ ಯಕ್ಕಡದಾಗೆ ಹ್ವಡ್ದು ಗಲಾಟೆ ಮಾಡಿದ್ರಲ. ಅದು ಬಾಡಿಗೇಲಿದ್ದ ಮನೆಯೋರಿಗೆ ತಿಳೀತು. ಅವರು ಕೋಣೆ ಬಿಟ್ಟುಬಿಡು ಅಂದ್ರಂತೆ. ನಾ ಬಿಡಾದಿಲ್ಲ ಅಂತು ಇದು. ಅವರು ಕಾಲೇಜಿಗೆ ಏಳಿದ್ರಂತೆ. ಕೆಲಸವೇ ಹೋಯ್ತು.'

'ಈಗ ಏನು ಮಾಡ್ತಿದಾಳೆ?'

ಬೆಟ್ಟಯ್ಯನವರು ಹೇಳಲು ಅನುಮಾನಿಸಿದರು. 'ಹೇಳು ಬೆಟ್ಟಯ್ಯ' – ಎಂದು ಇವರು ಕಾತರದಿಂದ ಕೇಳಿದರು.

'ಒಂದು ಶೀರೆ ಅಂಗ್ಡೀಲಿ ಸೇಲ್ಸ್‌ಗರ್ಲ್ ಆಗಿದೆ.'

'ಹಂಗಂದ್ರೆ?'

'ದೊಡ್ಡ ಜವಳಿ ಅಂಗಡಿ. ಶೀರೆ ಕುಪ್ಪುಸ ಮಾರೂವೇ ದೊಡ್ಡ ಸೆಕ್ಸನ್ ಐತೆ. ಎಲ್ಲಾ ರೇಶ್ಮೆ ಸೀರೆಗಳು. ನೈಲಾನ್ ಅಂತ ಇರುತ್ತಲ್ಲ ಅಂತವೇ. ಹೆಂಗಸರ

ಬಟ್ಟೆ ಕೊಳ್ಳಾಕ್ ಬರೋರ್ಗೆ ಎಣ್ಣು ಹುಡುಗೀರೇ ಬಟ್ಟೆ ತೋರಿಸಿ ಯಾಪಾರ ಮಾಡಾದು.'

'ಇವಳು ಇಷ್ಟು ಓದಿ ಅದಕ್ಯಾಕ್ ಸೇರಿದ್ಲು?'

'ಬ್ಯಾರೆ ಕೆಲ್ಸ ಎಲ್ಲಿ ಸಿಕ್ಕುತ್ತೆ? ಹೊಟ್ಟೆಗೆ ಏನು ಮಾಡುತ್ತೆ ಎಣ್ಣುಮಗ?'

'ಕೆಲ್ಸ ಇಲ್ದೆ ಇದ್ರೆ ಊರಿಗ್ಯಾಕ್ ಬರಬಾರ್ದಾಗಿತ್ತು? ನಮ್ಮನ್ಲಿ ಅನ್ನ ಇರ್ಲಿಲ್ವೆ?'

'ನೀವು ಹಿಂಗೆ ಸಿಟ್ಟು ತೋರಿಸಿದ ನ್ಯಾಲೆ ಯಾಪ ಧೈರ್ಯಮಾಡಿ ಬತ್ತೈತೆ?'

ಅವರು ಗಂಭೀರರಾದರು. ಐದು ನಿಮಿಷ ಅಂತರ್ಮುಖಿಯಾಗಿ ಕುಳಿತು ಬಿಟ್ಟರು. ಅನಂತರ ಇದ್ದಕ್ಕಿದ್ದ ಹಾಗೆಯೇ ಎದ್ದು ಗುಡಿಸಲಿನ ಬಾಗಿಲಿಗೆ ಹೋಗಿ ತಮ್ಮ ಹಳೆಯ ಎಕ್ಕಡಗಳನ್ನು ಎರಡು ಕೈಗೂ ತೆಗೆದುಕೊಂಡು, ತಮ್ಮ ತಲೆ ಭುಜ ತೋಳುಗಳಿಗೆ ಪಟಪಟನೆ ಹೊಡೆದುಕೊಳ್ಳಲು ಪ್ರಾರಂಭಿಸಿದರು. 'ಸ್ವಾಮಿ ಯೋರೇ, ಸ್ವಾಮಿಯೋರೇ, ಎಂತಾ ಕೆಲ್ಸ ಮಾಡ್ತೀರ? ಬ್ಯಾಡಿ ಬ್ಯಾಡಿ. ಶಾಂತಿ ಶಾಂತಿ. ತೆಪ್ಪು ಮಾಡಿದೆ ಅಂತ ಗೊತ್ತಾದಾಗ್ಲೂ ಶಾಂತಿ. ಮಹಾತ್ಮರು ಅಂತಿದ್ರು....' – ಎಂದು ಬೆಟ್ಟಯ್ಯನವರು ಎದ್ದು ಹತ್ತಿರ ಬಂದರು. ಆದರೆ ಈ ಬ್ರಾಹ್ಮಣನ ಕೈ ಮುಟ್ಟಿ ತಾನು ತಡೆಯುವುದು ಅನುಚಿತ. ಕೂಗಲು ಹತ್ತಿರ ಯಾರೂ ಇಲ್ಲ. ಇದನ್ನು ನೋಡಲಾರದೆ ಅವರು ತಮ್ಮ ಎರಡು ಅಂಗೈಗಳಿಂದಲೂ ಕಣ್ಣು ಮುಚ್ಚಿಕೊಂಡು ನಿಂತುಬಿಟ್ಟರು. ತಪ್ಪು, ತಪ್ಪು, ತಪ್ಪು ಎಂದು ನಲವತ್ತು ಐವತ್ತು ಸಲ ತಮಗೆ ತಾವೇ ಬಾರಿಸಿಕೊಂಡ ಮೇಲೆ ಇವರು ಎಕ್ಕಡಗಳನ್ನು ತೆಗೆದು ದೂರ ಬಿಸಾಡಿದರು. ಅಷ್ಟರಲ್ಲಿ ಕಣ್ಣಿನಿಂದ ನೀರು ಹನಿಯುತ್ತಿತ್ತು. ಅದನ್ನು ಒರೆಸಿಕೊಂಡು ಎಂದರು: 'ನೋಡು, ಇದೇ ಎಕ್ಕಡದಿಂದ ಅವಳನ್ನು ಹೊಡೆದಿದ್ದೆ. ಈಗ ನಾನು ಹೊಡಕೊಂಡೆ. ಮನಸ್ಸಿಗೆ ಸ್ವಲ್ಪ ಸಮಾಧಾನ ವಾಯ್ತು. ಈಗ ಹೇಳು. ನಿಂಗೆ ಸಿಕ್ಕಿದ್ಲೆ? ಮಾತಾಡಿದ್ಲೆ? ಎಲ್ಲ ಹೇಳು.'

ಬೆಟ್ಟಯ್ಯನವರು ಕಣ್ಣುಬಿಟ್ಟು ನೋಡುತ್ತಾರೆ: ಇವರ ಕಿವಿಯ ಮೇಲು ಭಾಗ, ಭುಜ ಮತ್ತು ಎದೆಗಳ ಮೇಲೆ ಸಣ್ಣ ಗಾಯಗಳಾಗಿ ರಕ್ತ ಹೊಮ್ಮಿದೆ. ಆದರೆ ಆ ದಿನ ಇವರ ಮಗಳ ನ್ಯೆಯಲ್ಲಿ ಬಂದಷ್ಟು ಆಗಿಲ್ಲ.

'ಸ್ವಾಮಿಗಳೇ, ಎಂಥ ಕೆಲಸ ಮಾಡ್ಕಂಡ್ರಿ? ನಮಗೆ ನಾವೇ ಹಿಂಸೆ ಮಾಡ್ಕಂಡ್ರೆ ಹಿಂಸೆಯಾಗಾಕಿಲ್ವ? ಮಹಾತ್ಮರು ಅಂತಿದ್ರು. ಒಂದಿಷ್ಟು ರೋಜಾ ಸೊಪ್ಪು....'

'ನಿನ್ನ ಮಹಾತ್ಮನ ಮಾತು ಬ್ಯಾಡ. ಪಿತ್ತ ನೆತ್ತಿಗೆ ಏರಿದ್ದ ಮುದುಕ ಅವನು. ಈ ಗಾಯದಿಂದ ಏನೂ ಆಗುಲ್ಲ ಮಣ್ಣಾಂಗಟ್ಟಿ. ನನ್ನ ಮಗಳ ವಿಷಯ

ಹೇಳು' – ಎಂದು ಅವರ ಹತ್ತಿರ ಬಂದು ಎರಡು ಮಾರು ದೂರದಲ್ಲಿ ಕುಳಿತರು. ಬೆಟ್ಟಯ್ಯನವರು ತಾವೇ ಒಂದು ಮಾರು ಹಿಂದೆ ಸರಿದು ಮತ್ತೆ ಕುಳಿತರು.

'ಅವಳು ಜವಳಿ ಅಂಗ್ಡೀಲಿರೂದು ನಿಂಗೆ ಹ್ಯಾಗೆ ಗೊತ್ತು?'

ಒಂದು ಕ್ಷಣ ಅನುಮಾನಿಸಿದ ಮೇಲೆ ಅವರು ಎಂದರು: "ಮಂತ್ರಿ ಮೇಲ ಗಿರಿ ಗೌಡರ ಮಗನ ಮದುವೇಲಿ ಸ್ವಸೆಗೆ ಸೀರೆ ಕೊಂಡ್ಕಳಾಕೆ ಅಂತ ಹ್ವಂಟಿದ್ರು. ಅಪ್ಪ, ಅವ್ವ, ಮಗ. ನಾನು ದಾರೀಲಿ ಸಿಕ್ದೆ. ನನ್ನ ಕೈಲಿ ಅರ್ಜೆಂಟ್ ಮಾತಾಡ ಬೇಕಾಗಿತ್ತು ಅವರು. ಹಂಗೇ ಬಲ್ಲಿ, ಕಾರಲ್ಲಿ ಮಾತಾಡ್ಕಂಡ್ ಹೋಗಿ ಬರಾನ ಅಂದ್ರು. ನಾನು ಡ್ರೈವರ್ ಜೋಡಿ ಕುಂತ್ಕಂಡೆ. ನನ್ನ ಹಿಂದೇ ಇವರು ಕುಂತ್ರು. ಅವ್ವ ಮಗ ಅವರ ಬಲಗೈ ಕಡೀಕ್ ಕುಂತಿದ್ರು. ಮಾತಾಡ್ಕಂತಾ ಚಿಕ್ಕಪ್ಯಾಟಿಗೆ ಹೋದ್ವು. ಸತ್ಯನಾರಾಯಣ ಹಾಲ್ ಅಂತ, ಭಾರೀ ಅಂಗ್ಡಿ, ಕ್ವಾನುಟಿಗ ಸೆಟ್ರಿದ್ವು. ಮಂತ್ರಿಗಳು ಬಂದದ್ದ ಕಂಡು ಸೆಟ್ರೇ ಎದ್ದು ಬಂದ್ರು. ಇವರು 'ಮದುವೆ ಸೀರೆ ತೋರಿಸಿ' ಅಂದ್ರು. ಎಡಗಡೀಗ್ ಕರ್ಕಂಡ್‌ಹೋಗಿ, 'ಸತ್ಯ-ಭಾಮ್ಮ, ಮಂತ್ರಿಗಳು ಬಂದಿದಾರೆ. ಟಿಶ್ಯು ಸೀರೆ ತೆಗೆದು ತೋರಿಸಿ' ಅಂದ್ರು. ಅಲ್ಲಿ ನೋಡಿದರೆ ನಿಮ್ಮ ಮಗಳು."

ವೆಂಕಟರಮಣಯ್ಯನವರ ಮುಖ ಸಿಡಿಮಿಡಿಗುಟ್ಟುತ್ತಿತ್ತು. ಅದನ್ನು ಗಮನಿಸಿದ ಬೆಟ್ಟಯ್ಯನವರು, 'ನೀವು ಸುಮ್ಕುರ್ ಇರ್ತೀನಿ ಅಂದ್ರೆ ನಾನು ಏಳ್ತೀನಿ. ಇಲ್ಲದಿದ್ರೆ ಇಲ್ಲ' ಎಂದರು.

'ನಾನು ಕಿವುಡನ ಹಾಂಗೆ ಕೂತಿರ್ತೀನಿ ಹೇಳು' – ಎಂದು ಅವರು ಮುಖದಲ್ಲಿ ಸಮಾಧಾನ ತೋರಿಸಲು ಯತ್ನಿಸಿದರು.

'ಆ ಎಣ್ಣುಮಗಳನ್ನ ಕಂಡು ಇವರಿಗೂ ಪೆಚ್ಚಾಯ್ತು. ಮಗ ಶ್ರೀನಿವಾಸ ಗೌಡ್ರು ಅಲ್ಲಿ ನಿಂತ್ಕಳ್ಲೇ ಇಲ್ಲ. ಹ್ವರಿಕ್ ಹ್ವಂಟು ಬಂದ್ರು. ನಾವಿನ್ನೊಂದು ವಸೀ ಹೊತ್ತು ಬುಟ್ಕಂಡ್ ಬತ್ತೀವಿ ಅಂತ ಸೆಟ್ರಿಗೆ ಹೇಳಿ ಮೇಲಗಿರಿಗೌಡ್ರು ಹೆಂಡ್ತಿ ಕರ್ಕಡ್ ಹ್ವರಿಕ್ ಬಂದುಬಿಟ್ರು. ನಾನೂ ಅವರ ಜೋಡಿಗ್ ಬಂದೆ. ಯುಲ್ಲಾ ಬ್ಯಾರೆ ಅಂಗ್ಡೀಗೆ ಬಂದ್ವು. ಅವರು ಮತ್ತೆ ಅಲ್ಲಿಗ್ ಹ್ವಾಗ್ಲೇ ಇಲ್ಲ. ನಂಗೇ ಮನ್ಸು ತಡೀಲಿಲ್ಲ. ಅವತ್ತಿನ ಮಾರನೇ ದಿನ ಒಬ್ಬನೇ ಅಂಗ್ಡೀಗ್ ಹ್ವಾಗಿ ಕೇಳ್ದೆ. ಅವತ್ತಿನ ಸಂಜೆಗೆ ಆ ಮಗೀನ ರೂಮಿಗೇ ಹ್ವಾಗಿ ಯಲ್ಲಾ ಮಾತಾಡ್ದೆ.'

'ಏನಂದ್ಲು?'

'ಯಾವ ಇಶಯ?'

'ಊರಿನ ವಿಷಯ. ನನ್ನ ವಿಷಯ.'

'ಏನೂ ಅನ್ಲಿಲ್ಲ.'

'ನನ್ನ ವಿಷಯ ಏನೂ ಅನ್ಲಿಲ್ವೆ ಲೌಡಿ? ಅಷ್ಟು ಸಿಟ್ಟು ಬಂದಿದ್ಯೆ?'

'ಸ್ವಾಮಿಯೋರೇ, ನಿಮಗೆ ಸಿಟ್ಟು. ಆಯಮ್ಮಂಗೆ ಏನೂ ಇಲ್ಲ. ಶಾಂತಿಯಾಗ್ಯದೆ.'

'ಸಂಬಳ ಎಷ್ಟು?'

'ನೂರು. ಅದ್ರಾಗೆ ನಲವತ್ತು ರೂಮಿನ ಬಾಡಿಗೆ. ದಿನಕ್ಕೆ ನಾಕಾಣೆ ಶಿಟಿ ಬಸ್ಸಿಗೆ. ಉಳಿದುದ್ರಲ್ಲಿ ಲ್ಯಕ್ಕ ಹಾಕ್ಯಳಿ. ಸ್ವಂತ ಅನ್ನ ಬೇಯಿಸ್ಕಂಡು ಓಟ್ಳಲ್ಲಿ ಹತ್ತು ಪೈಸಾ ಸಾಂಬಾರ್ ತಂದ್ ತಿಂತದೆ.'

'ಇಷ್ಟು ದಿನ ನಂಗೆ ಯಾಕೆ ಹೇಳ್ಲಿಲ್ವಯ್ಯ ನೀನು?'

'ನನ್ನ ಇಶಯ ಊರಲ್ಲಿ ಯಾರ ಕೈಲೂ ಏನೂ ಹೇಳಬ್ಯಾಡಿ ಅಂದಿತ್ತು. ಈಗ ಮನ್ಸು ತಡೀದೇ ನಿಮ್‌ಕುಟ್ಟೆ ಅಂದೆ.'

ಅವರ ಮಗಳ ಬಗೆಗೆ ತಮಗೆ ತಿಳಿದದ್ದನ್ನು ಹೇಳಿದ ಮೇಲೆ ಬೆಟ್ಟಯ್ಯನವರು ಇವರಿಗೆ ಬಾಗಿ ನಮಸ್ಕಾರ ಹೇಳಿ ಹೊರಟುಹೋದರು. ಅವರು ಹೋದದ್ದು ಗಮನಕ್ಕೆ ಬೀಳದೆ ಇವರು ಅಂತರ್ಮುಖಿಗಳಾಗಿ ಯೋಚಿಸುತ್ತಾ ಕುಳಿತರು. ಸ್ವಲ್ಪ ಹೊತ್ತಿನ ನಂತರ ಎದ್ದು ತೋಟದ ಬೇಲಿಯ ದಡದಲ್ಲಿ ಸರಸರನೆ ಶತಪಥ ಹಾಕಿದರು. ಹೊಳೆಬಾಗಿಲಿನ ತನಕ ಹೋಗಿ ವಾಪಸು ಬಂದರು. ತಮ್ಮನ್ನು ತಾವು ಹೊಡೆದುಕೊಂಡ ಎಕ್ಕಡವನ್ನು ತೆಗೆದು ಬೀಸಿ ಬೇಲಿಯಿಂದ ಆಚೆಗೆ ಎಸೆದು ಕೊಳದಲ್ಲಿ ಕೈ ತೊಳೆದುಕೊಂಡರು. ಅನಂತರ ಬರೀ ಕಾಲಿನಲ್ಲಿ ನಡೆದು ದೇವಸ್ಥಾನದ ಹತ್ತಿರ ಹೋದರು. ಅದಕ್ಕೆ ಅಪ್ರದಕ್ಷಿಣವಾಗಿ ಒಂದು ಸುತ್ತು ಹಾಕಿ ಅದರ ದಿಬ್ಬದಿಂದ ಕೆಳಗೆ ಇಳಿದರು. ಹತ್ತಿರದ ಕಾಲುವೆಗೆ ಹೋಗಿ ಮೈಲಿಗೆ ಕಳೆದು ಕೊಳ್ಳುವವರಂತೆ ಕೈ ಕಾಲು ತೊಳೆದುಕೊಂಡು ಮೇಲ್ಭಾಗಕ್ಕೆ ನಡೆದು, ಮಧ್ಯದ ತೂಬಿನ ಪಕ್ಕದಿಂದ ಏರಿಯನ್ನು ಹತ್ತಿದರು. ಅವರು ಏರಿಯ ಮೇಲೆ ಬಂದು ಆರೇಳು ತಿಂಗಳಾಗಿತ್ತು. ಮುಕ್ಕಾಲು ಕೆರೆ ಇದ್ದರೂ ನೀರು ಸಮುದ್ರದಂತೆ ಕಾಣುತ್ತಿತ್ತು. ಸ್ವಲ್ಪ ಹೊತ್ತು ಅದನ್ನು ನೋಡುತ್ತಿದ್ದು ಆಚೆ ಕೋಡಿ ಕಡೆಗೆ ನಡೆದರು. ಮುಕ್ಕಾಲು ಮೈಲಿ ನಡೆದು, ಕೋಡಿ ಬಂದನಂತರ ಕೆಳಗೆ ಇಳಿದು ಮಾದಿಗರ ಕೇರಿಯ ಹತ್ತಿರಕ್ಕೆ ಹೋಗಿ ಮರದ ಕೆಳಗೆ ನಿಂತು ಕೂಗಿದರು: 'ಬೆಟ್ಟಯ್ಯನ ಮನೆ ಯಾವುದ್ರೋ?'

ಹತ್ತಿರದ ಹೊಲದಲ್ಲಿ ಗರಿಕೆ ಕೀಳುತ್ತಿದ್ದ ಒಬ್ಬ ಮುದುಕಿ ಇತ್ತ ಬಂದು, ಸಂಜೆಯ ತನ್ನ ಉದ್ದವಾದ ನೆರಳು ಈ ಬ್ರಾಹ್ಮಣರಿಗೆ ಮುಟ್ಟದಷ್ಟು ದೂರದಲ್ಲಿ ನಿಂತು, 'ಬ್ಯಟ್ಟಯ್ಯನ್ನ ಕರೀಬೇಕೇನ್ರಯ್ಯ?' ಎಂದು ಕೇಳಿದಳು. 'ಹೂಂ' ಎಂದು

ಇವರು ಹೇಳಿದ ಮೇಲೆ ಅವಳು ಕಾಲೋನಿಯ ಒಳಗೆ ಹೋದಳು. ಎರಡು ನಿಮಿಷ ದಲ್ಲಿ ಬೆಟ್ಟಯ್ಯ ಬಂದರು.

ಅವರು ಹತ್ತಿರ ಬಂದದ್ದೇ ತಡ, ಇವರು, 'ಬೆಟ್ಟಯ್ಯ, ನಾಳೆ ಬೆಳಗ್ಗೆ ಮೋಟಾರಿಗೆ ನೀನು ನನ್ನ ಜೊತೆ ಬರಬೇಕು. ಬೆಂಗಳೂರಲ್ಲಿ ನನ್ನ ಮಗಳು ಯಾವ ಅಂಗ್ಡೀಲಿದಾಳೆ ಕರ್ಕಂಡು ಹೋಗಬೇಕು.'

'ಪ್ಯಾಟೆ ಬೀದಿ, ಅಂಗಡಿ ಹೆಸರು ಏಳ್ತೀನಿ. ಯಾರನ್ನ ಕೇಳಿದ್ರೂ ತೋರು ಸ್ತಾರೆ. ಆಯಮ್ನ ಇದ್ದ ರೂಮಿನಾಗೇ ವಾಸ ಐತೆ.'

'ನಂಗದು ಗೊತ್ತಾಗುಲ್ಲ. ನೀನೇ ಬರಬೇಕು ಕಣಯ್ಯ. ನಿನ್ನ ಮೋಟಾರು ಖರ್ಚೇನಿದ್ರೂ ನಂದು' – ಎಂದು ಇವರು ಹಟ ಮಾಡಿ ಹೇಳಿದುದಕ್ಕೆ ಅವರು ಒಪ್ಪಿಕೊಂಡರು. 'ಹೊತ್ತಿಗೆ ಮುಂಚೆ ನನ್ನ ತ್ವಾಟಕ್ಕೆ ಬಾ' – ಎಂದು ಹೇಳಿ ಅವರು ಹಿಂತಿರುಗಿ ಕೆರೆಯ ಏರಿಯ ಮೇಲೆ ನಡೆದು ಊರೊಳಗೆ ಹೋದರು. ತೋಟಕ್ಕೆ ವಾಸ ಬಂದ ಮೇಲೆ ಅವರು ಮತ್ತೆ ಕೋಟೆ ಗೋಡೆಯ ಒಳಕ್ಕೆ ಪ್ರವೇಶಿಸಿರ ಲಿಲ್ಲ. ಈಗ ಬೀದಿಯಲ್ಲಿ ನಡೆಯುತ್ತಿದ್ದರೆ ಜನಗಳು ಆಶ್ಚರ್ಯ ಕುತೂಹಲಗಳಿಂದ ಅವರನ್ನೇ ನೋಡುತ್ತಿದ್ದರು. ಮನೆಯ ಬಾಗಿಲಿಗೆ ಹೋಗಿ ಹೊಸಲಿನ ಹೊರಗೇ ನಿಂತು, 'ವೆಂಕ್ಟೇಶಾ' ಎಂದು ಕೂಗಿದರು. ವೆಂಕಟೇಶ ಒಳಗಿನಿಂದ ಬಂದ. ಅಪ್ಪನನ್ನು ಕಂಡು ಅವನಿಗೂ ಆಶ್ಚರ್ಯ. 'ನಂಗೆ ಇನ್ನೂರು ರೂಪಾಯಿ ಬೇಕು. ಈಗಲೇ ತಂದುಕೊಡು' –ಎಂದರು.

'ಈಗ್ಯಾಕಪ್ಪ ದುಡ್ಡು? ಏನು ತಗಬೇಕು ನೀನು?'

'ಕೇಳಿವಷ್ಟು ತಂದು ಕೊಡೊ ಬ್ಲೋಳಿಮಗನೆ ಅಂದ್ರೆ ನನ್ನ ತನಿಖೆ ಮಾಡ್ತಾನೆ' – ಎಂದು ಒಂದೇ ಉಸುರಿಗೆ ರೇಗಿಬಿಟ್ಟರು.

ಅವನು ಮಾತನಾಡದೆ ಒಳಗೆ ಹೋಗಿ ಹತ್ತು ರೂಪಾಯಿಗಳ ಇಪ್ಪತ್ತು ನೋಟುಗಳನ್ನು ಎಣಿಸಿ ತಂದು ಕೈಗೆ ಇಟ್ಟ. ಅದನ್ನು ಸುತ್ತಿ ಮುಷ್ಟಿಯಲ್ಲಿ ಹಿಡಿದುಕೊಂಡು ಅವರು ಸರಸರನೆ ತೋಟಕ್ಕೆ ಹೊರಟುಹೋದರು.

೫

ಇಬ್ಬರೂ ಮೋಟಾರು ಇಳಿದು ಚಿಕ್ಕಪೇಟೆಯ ಸತ್ಯನಾರಾಯಣ ಹಾಲಿಗೆ ಬಂದಾಗ ಹನ್ನೆರಡು ಗಂಟೆಯಾಗಿತ್ತು. ಎಡಭಾಗದ ಒಂದು ಮೂಲೆಯಲ್ಲಿ ನಿಂತು ಸತ್ಯ ಯಾರೋ ಗಂಡಸರಿಗೆ ರವಿಕೆಬಟ್ಟೆ ಅಳೆದು ಕೊಡುತ್ತಿದ್ದಳು. ವೆಂಕಟ ರಮಣಯ್ಯನವರು ಸೀದಾ ಹೋಗಿ ಮಗಳ ಮುಂದೆ ನಿಂತರು. ಈ ಅನಿರೀಕ್ಷಿತ

ವನ್ನು ಕಂಡು ಅವಳಿಗೆ ಆಶ್ಚರ್ಯ ಮತ್ತು ವಿಭ್ರಮೆಯಾದರೂ ತಂದೆಯ ಸ್ಥಿತಿಯನ್ನು ಕಂಡು ಗಾಬರಿಯಾಯಿತು. ಮುಖವು ಒಣಗಿ ಮುಪ್ಪು ಅಡರಿದೆ. ಕುರುಚಲು ಗಡ್ಡ, ಕ್ಷೌರವಿಲ್ಲದ ತಲೆಗೂದಲು. ಉಟ್ಟ ಪಂಚೆ, ಮೈಮೇಲೆ ಅರೆ ಹರಿದ ಅಂಗಿ, ಕಾಲಿಗೆ ಎಕ್ಕಡವಿಲ್ಲ. ಮಗಳನ್ನು ನೋಡಿ ಅವರಿಗೂ ಕರುಳು ಚುರಕ್ ಎಂದಿತು: ಚನ್ನಾಗಿ ಕಾಣುವ ವಾಯಲ್ ಸೀರೆಯುಟ್ಟು ತಲೆ ಬಾಚಿ ಹೆರಳು ಹಾಕಿಕೊಂಡಿದ್ದಾಳೆ. ಆದರೆ ಮೈ ಮುಖಗಳೆಲ್ಲ ಒಣಗಿ ಸಣ್ಣಗಾಗಿವೆ. ಸನ್ನಿಪಾತ ಜ್ವರ ಬಂದು ಎದ್ದವಳಂತೆ ಆಗಿದ್ದಾಳೆ.

'ಮಗೂ, ನಡಿ ನಿನ್ನ ಕೋಣೆಗೆ ಹೋಗಾಣ' – ಎಂದರು.

'ಯಾವಾಗ ಬಂದೆ ಅಪ್ಪ?' – ಮಗಳು ಕೇಳಿದಳು.

'ತಾವರೇಕೆರೆ ಫಸ್ಟ್ ಗೌರ್ನಮೆಂಟ್ ಮೋಟಾರಲ್ಲಿ ಬಂದ್ವು' – ಬೆಟ್ಟಯ್ಯ ನವರು ಹೇಳಿದರು.

'ನಡಿ, ಈಗಲೇ ನಿನ್ನ ಕೋಣೆಗೆ ಹೋಗಾಣ' – ತಂದೆ ಒತ್ತಾಯಮಾಡಿದರು.

'ಈಗ ಅರ್ಧ ಗಂಟೇಲಿ ಬಂದೆ. ರಾತ್ರಿ ಎಂಟೂವರೆ ತನಕ ಬಿಡುವಿಲ್ಲ. ಬೇಗದ ಕೈ ತಗಂಡು ನೀನು ಹೋಗಿರು. ನಾನು ಬತ್ತೀನಿ' – ಎಂಬ ಮಗಳ ಉತ್ತರದಿಂದ ಅವರಿಗೆ ರೇಗಿತು: 'ಬಿಡುವಿಲ್ವಂತೆ. ಈ ನನ್ ಮಗನ ಕೂಲಿ ಕೆಲಸ ಯಕ್ಕಡದಲ್ಲಿ ಹ್ವಡ್ದು ಬಿಸಾಕ್‌ಬಾರೇ' – ಎಂದು ಕೂಗಿದರು. ಅಂಗಡಿಯಲ್ಲಿದ್ದ ಇತರ ಕೆಲಸಗಾರರು, ಮತ್ತು ಗಿರಾಕಿಗಳೇ ಅಲ್ಲದೆ ಹಣದ ಪೆಟ್ಟಿಗೆಯ ಹತ್ತಿರ ಕುಳಿತಿದ್ದ ಶೆಟ್ಟರೂ ಅತ್ತ ತಿರುಗಿ ನೋಡಿದರು.

ಬೆಟ್ಟಯ್ಯನವರು, 'ಅವ್ವಾ, ಅವರ ಜತೆ ನೀವು ರೂಮಿಗೆ ಹೋಗಿ. ಇವತ್ತು ರಜ ಕೇಳಿ. ಅವರಿಗೆ ಸಿಟ್ಟು ಮಾಡಿಸ್‌ಬ್ಯಾಡಿ' ಎಂದರು.

ಅವಳು ಶೆಟ್ಟರ ಹತ್ತಿರ ಹೋಗಿ ರಜ ಕೇಳಿದರೆ ಅವರು, 'ಅದು ಹ್ಯಾಗಾಗುತ್ತಮ್ಮ, ಇವತ್ತು ಶನಿವಾರ. ನೆನ್ನೆ ಎಲ್ಲರಿಗೂ ಸಂಬಳವಾಗಿರುತ್ತೆ. ಸಾಯಂಕಾಲ ವ್ಯಾಪಾರ ಜಾಸ್ತಿ' ಎಂದರು.

'ಸಂಜೆ ಐದರ ಒಳಗೆ ಖಂಡಿತ ಬರ್ತೀನಿ' – ಎಂದು ಹೇಳಿ ಅವರ ಒಪ್ಪಿಗೆ ಪಡೆದು ಅವಳು, ತಂದೆ ಮತ್ತು ಬೆಟ್ಟಯ್ಯನವರನ್ನು ಕರೆದುಕೊಂಡು ಹೊರಗೆ ಬಂದಳು. ಬೆಟ್ಟಯ್ಯನವರು ಎಂ.ಎಲ್.ಎ. ಹಾಸ್ಟೆಲಿಗೆ ಹೋಗಬೇಕಾಗಿತ್ತು. 'ನೀನು ಎಲ್ಲೂ ಹೋಗಬ್ಯಾಡ. ನನ್ನ ಜೊತೆಯೇ ಇರು ಬಾ' – ಎಂದು ವೆಂಕಟ ರಮಣಯ್ಯನವರು ಹೇಳಿದುದಕ್ಕೆ ಸಂಜೆಯ ಹೊತ್ತಿಗೆ ರೂಮಿಗೆ ಬರುವದಾಗಿ ಮಾತುಕೊಟ್ಟು ಅವರು ಹೊರಟುಹೋದರು. ಅಪ್ಪನ ಕಾಲಿನಲ್ಲಿ ಎಕ್ಕಡವೂ ಇಲ್ಲದ್ದನ್ನು ಕಂಡ ಸತ್ಯ ಒಂದು ಆಟೋರಿಕ್ಷಾ ಮಾಡಿಕೊಂಡು ಅವರೊಡನೆ

ಕೋಣೆಗೆ ಬಂದಳು. ಕೋಣೆ ತಾವು ಮೊದಲು ನೋಡಿದ್ದಂತೆಯೇ ಇದೆ. ಹೊಸ ದಾಗಿ ಹಾಸಿಗೆ ಬಟ್ಟೆಬರೆಗಳೇನೂ ಇಲ್ಲ. ಒಂದು ಸೀಮೆ ಎಣ್ಣೆ ಬತ್ತಿಯ ಸ್ಟೋವ್, ಮೂರು ಅಲ್ಯೂಮಿನಿಯಂ ಪಾತ್ರೆಗಳಷ್ಟೇ ಹೊಸದಾಗಿ ಕಾಣುತ್ತಿವೆ.

'ಅಪ್ಪ, ಮಾಡಿದ ಅನ್ನ ಇದೆ. ಊಟ ಮಾಡು' – ಎಂದಳು.

'ನೀನು?'

'ನಾನು ಊಟ ಮಾಡಿಯೇ ಅಂಗಡಿಗೆ ಹೋಗ್ತೀನಿ. ರಾತ್ರಿಗೂ ಮಾಡಿ ಟ್ಟಿರ್ತೀನಿ – ಏಳು ಕೈಕಾಲು ತೊಳ್ಕ.'

ಕೈಕಾಲು ತೊಳೆದು, ಅವಳು ಹಾಕಿದ ಅಲ್ಯೂಮಿನಿಯಂ ತಟ್ಟೆಯ ಮುಂದೆ ಕೂತು, ಬಡಿಸಿದ ಅನ್ನ ಮತ್ತು ಹೋಟೆಲಿನ ಸಾಂಬಾರಿನ ತುತ್ತನ್ನು ಬಾಯಿಗೆ ಹಾಕಿದ ತಕ್ಷಣ ಅವರ ಕಣ್ಣಿನಲ್ಲಿ ನೀರು ತುಂಬಿಕೊಂಡಿತು.

'ಆ ಸೂಳೆಮಗನ ಕಾಲೇಜಿನ ಕೆಲಸ ಹೋದ ಮ್ಯಾಲೆ ನೀನು ಸೀದಾ ಊರಿಗ್ಯಾಕೆ ಬರ್ಲಿಲ್ಲ?'

ಅವಳು ಉತ್ತರ ಹೇಳಲಿಲ್ಲ. 'ನೀನು ಸರಿಯಾಗಿ ಊಟ ಮಾಡು' – ಎಂದು ಹೇಳಿ, ಎರಡು ನಿಮಿಷ ಹೊರಗೆ ಬಚ್ಚಲುಮನೆಗೆ ಹೋಗಿ ನಿಂತು ಅತ್ತು ಕಣ್ಣೀರು ಒರೆಸಿಕೊಂಡು ಬಂದಳು.

ಊಟವಾದ ಮೇಲೆ ಅವರು ಮಂಚದ ಮೇಲೆ ಕುಳಿತರು. ತಟ್ಟೆ ತೊಳೆದು, ಉಂಡ ನೆಲ ಸಾರಿಸಿ ಬಂದು ಅವರ ಎದುರಿನ ಕುರ್ಚಿಯ ಮೇಲೆ ಕುಳಿತ ಅವಳು ಕೇಳಿದಳು: 'ಇದೇನು ನಿನ್ನ ಭುಜ, ಎದೆ ಎಲ್ಲ ತರೆದು ಗಾಯವಾದ ಹಾಗಿದೆ ಯಲ್ಲ?'

'ತರಚಿ ತರಿಯುತ್ತೆ ಬಿಡು. ಬುದ್ಧಿ ಬರುತ್ತೆ.'

'ಕಾಲಿಗೆ ಎಕ್ಕಡಾನಾದ್ರೂ ಹಾಕ್ಕೋಬಾರ್ದೆ? ಹಾಗೆಯೇ ಬಂದಿದೀಯಲ. ನಡಿ, ಒಂದು ಜೊತೆ ಚಪ್ಲಿ ತಗಳೂವಂತೆ.'

'ಆ ಸೂಳೆಮಗನ ಎಕ್ಡ ಹಾಕ್ಕಳ್ಳೀ ಬಾರದು ಬಿಡು. ಅದಿತ್ತು ಅಂತ ಅವತ್ತು ನಿನ್ನ ಹೊಡೆದೆ. ನೆನ್ನೆ ನನ್ನೇ ಹೊಡಕಂಡೆ. ಆಮ್ಯಾಲೆ ತ್ವಾಟದ ಬೇಲಿಯಿಂದ ಆಚೆ ಬಿಸಾಕಿಬಿಟ್ಟೆ.'

'ಇದೇನು ಹುಚ್ಚು? ನಿಂಗೆ ನೀನೇ ಯಾಕೆ ಹ್ವಡ್ಕಂಡೆ?'

'ಇನ್ನೇನು ಮಾಡ್ಲಿ? ನೆನ್ನೆ ಬೆಟ್ಟಯ್ಯ ಹೇಳ್ದ, ನೀನು ಜವಳಿ ಅಂಗ್ಡೀಲಿ ಕೂಲಿ ಮಾಡ್ತಿದೀಯ ಅಂತ. ನಾನು ನಿನ್ನ ಅವತ್ತು ಹ್ವಡೀದೇ ಇದ್ರೆ ನೀನು ಇಲ್ಲಿ ಕೆಲಸ ಹೋದ ದಿನ ಸೀದಾ ಊರಿಗೆ ಬತ್ತಿದ್ದೆ. ನೀನು ನನ್ನ ಮೇಲೆ ಇಷ್ಟು ಹಟಮಾಡಭೌದೆ?'

ಸತ್ಯಳಿಗೆ ಅಳು ಬಂತು. ಎದ್ದು ಹೊರಗೆ ಬಚ್ಚಲಿಗೆ ಹೋಗಿ ನಿಂತು ಅತ್ತು ಕಣ್ಣೊರೆಸಿಕೊಂಡು ಬರಬೇಕೆನಿಸಿತು. ಆದರೆ ಅಪ್ಪ ಮುಂದೆ ಬಗ್ಗಿ ಅವಳ ಬೆನ್ನನ್ನು ನೀವಲು ಶುರು ಮಾಡಿದರು. ಸ್ವಾಭಿಮಾನ ಒಡೆಯುವ ನಾಚಿಕೆ ಕಳೆದು ಅವಳು ಬಿಕ್ಕಿ ಬಿಕ್ಕಿ ಅತ್ತುಬಿಟ್ಟಳು. ತಮ್ಮ ಬಲಗೈಯಿಂದ ಅವಳ ಭುಜವನ್ನು ಸವರುತ್ತಾ ಹೇಳಿದರು: 'ನಿನ್ನ ಸಾಕಿದೆ, ಸಲಹಿದೆ. ಏನು ಕೊಟ್ಟೆ. ನಂಗೇನು ದುಃಖವಿಲ್ಲ. ಸಿಟ್ಟು ಬಂದ್ರೆ ಮತ್ತೆ ಹಿಡ್‌ಕೊಂಡು ಎರಡು ಕೊಡ್ತೀನಿ. ಆದರೆ ಆ ಸೂಳೆಮಗ ನಿನ್ನ ನಂಬಿಸಿ, ಸುಖವಾಗಿ ಬ್ಯಾರೆ ಮದುವೆ ಮಾಡ್ಕಂಡನಲ್ಲ. ಅವನಿಗೆ ಹೊಲೆಮಾದಿಗರು ಮೆಟ್ಟಿದ ಚಕ್ಕಳ ತಗಂಡು ಹ್ವಡೀಲಿಲ್ವಲ ಅನ್ನುಸ್ತಿದೆ.'

'ಅವರು ಒಪ್ಕಂಡಿದ್ರೂ ನೀನು ಒಪ್ಕತ್ತಿದ್ಯಾ?'

'ನಾನು ಒಪ್ಕಳೂದು ಬಿಡೂದು ಅಲಾಯದ ಮಾತು. ಅವ್ನನ್ನ ನೀನು ನೆಚ್ಕಂಡುದ್ದು ತಪ್ಪು.'

ಈ ವಿಷಯವಾಗಿ ಮಾತನಾಡುವುದು ಆವಳಿಗೆ ಇಷ್ಟವಿರಲಿಲ್ಲ: 'ಅಪ್ಪ, ಆದದ್ದಾಯ್ತು. ಇನ್ನು ಆ ವಿಷಯ ಬ್ಯಾಡ. ನೀನ್ಯಾಕೆ ಹೀಗಿದೀಯ ಹೇಳು'

ಅಷ್ಟರಲ್ಲಿ ಅವರ ಗಮನ ಬೇರೆ ಕಡೆ ಹೋಗಿತ್ತು. ಅವಳ ಮಾತು ಕಿವಿಗೆ ಬೀಳಲೇ ಇಲ್ಲ. ಎರಡು ನಿಮಿಷ ಸುಮ್ಮನೆ ಕುಳಿತಿದ್ದು ನಂತರ ತಕ್ಷಣ, 'ಒಂದು ಆಭಾಸವಾಯ್ತು ನೋಡು' ಎಂದರು.

'ಏನು?' – ಗಾಬರಿಯಿಂದ ಅವಳು ಕೇಳಿದಳು.

'ಮೋಟಾರಿನಲ್ಲಿ ಬರುವಾಗ ಬೆಟ್ಟಯ್ಯನ್ನ ಮುಟ್ಟಿಸಿಕೊಂಡಿದ್ದೆ. ಈಗ ಸ್ನಾನ ಮಾಡದೆ ಊಟ ಮಾಡಿದೆನಲ.'

'ಅಪ್ಪ, ಇದೇನು ಹೀಗಾಡ್ತಿಯ? ಬಸ್ಸಿನಲ್ಲಿ ಬೆಟ್ಟಯ್ಯನೋರು ಬರದೆ ಇದ್ರೂ ಉಳಿದೋರ ಜಾತಿ ಯಾವ್‌ಯಾವುದು ಅಂತ ನಿಂಗೆ ಗೊತ್ತಿರುತ್ತೇ? ಅದ್ಯಾಕೆ ಅಷ್ಟು ಗಾಬರಿಯಾಗ್ತಿ?'

'ಕುಲಗೆಟ್ಟ ಮುಂಡೇದೆ, ಮಡಿಹುಡಿ ಇಲ್ಲ ನಿಂಗೆ' – ಎಂದು ರೇಗಿಬಿಟ್ಟರು. ಅವರ ವರ್ತನೆ ಅವಳಿಗೆ ಅರ್ಥವಾಗಲಿಲ್ಲ.

'ಬಾ, ಮಡಿ ಉಟ್ಕ. ಬದಲಾಯಿಸುಕ್ಕೆ ಬಟ್ಟೆಯೂ ತಂದಿಲ್ಲವಲ್ಲ ನೀನು' – ಎಂದು ಅವಳು ಮೇಲೆ ಎದ್ದಳು.

ಅವರು ಬಚ್ಚಲಿಗೆ ಹೋಗಿ ಬಕೇಟನ್ನು ಕೈಲಿ ಮುಟ್ಟದೆ ನಲ್ಲಿಯ ಕೆಳಗೆ ಕೂತು, ತೊಟ್ಟ ಬಟ್ಟೆ ಹೆಗಲ ಚೌಕವನ್ನೆಲ್ಲ ನೆನಸಿ, ಸ್ನಾನ ಮಾಡಿದರು. ಪಂಚೆಯನ್ನೇ ಹಿಂಡಿ ಮೈ ಒರೆಸಿಕೊಂಡು, ಹಿಂಡಿದ ಚೌಕವನ್ನು ಉಟ್ಟು ಕೋಣೆಗೆ

ಬಂದು ಕೇಳಿದರು: 'ಈ ಮಂಚ, ನಿನ್ನ ಹಾಸಿಗೆ, ಎಲ್ಲ ನಾನು ಮುಟ್ಟಿದ್ದೆ. ಇದನ್ನೇನು ಮಾಡ್ತಿ?'

ಹಾಸಿಗೆಯನ್ನು ಒಗೆದು ಇಡೀ ಕೋಣೆಯನ್ನು ತೊಳೆಯುವುದು ಅವಳಿಗೆ ಸಾಧ್ಯವಿರಲಿಲ್ಲ. ಆದರೆ ರೇಗಿರುವವರು ಮತ್ತೆ ರೇಗಿಯಾರೆಂಬ ಆತಂಕ. ಉತ್ತರ ಹೇಳಲು ತಿಳಿಯದೆ ಅವಳು ಸುಮ್ಮನೆ ನಿಂತಳು. ಅವರೇ, 'ಈ ಚೌಕ ಒದ್ದೆಯಾಗಿದೆ. ಒಂದು ಒಣಗಿದ ಟವಲು ಕೊಡು' ಎಂದರು. ಅವಳು ಕೊಟ್ಟ ಟವೆಲು ಸುತ್ತಿಕೊಂಡು ಅದೇ ಮಂಚದ ಮೇಲೆ ಕುಳಿತರು.

ಸತ್ಯ ಕೇಳಿದಳು: 'ವೆಂಕಟೇಶ ಜಯಮ್ಮ ಹ್ಯಾಗಿದಾರೆ? ಗಂಡು ಮಗು ಹ್ಯಾಗಿದೆ?'

'ಅವನು ಚನ್ನಾಗಿದಾನೆ. ಅವಳನ್ನೂ ಮಗೂನು ನಾನು ನೋಡಿ ಮೂರು ತಿಂಗಳಾಯ್ತು.'

'ಯಾಕೆ?'

'ನಾನೀಗ ತ್ವಾಟದಲ್ಲಿದೀನಿ.'

'ಅದ್ಯಾಕೆ?' – ಎಂದು ಅವಳು ಆತಂಕದಿಂದ ಕೇಳಿದಳು.

'ಹೋಕ್ಕಲ್ಲಿ ಬಿಡು.'

'ವೆಂಕಟೇಶನಾಗಲಿ ಜಯಮ್ಮನಾಗಲಿ ಏನಾದರೂ ಅಂದ್ರೇ?'

'ಹೋಕ್ಕಲ್ಲಿ ಬಿಡು ಅಂದೆನಲ ಮತ್ತೆ ಕೇಳ್ತಿಯಲ್ಲ, ಗ್ಯಾನ ನೆಟ್ಟಗಿಲ್ವೆ ನಿಂಗೆ?' – ಎಂದು ರೇಗಿಬಿಟ್ಟರು.

ಅವಳು ಸುಮ್ಮನಾದಳು. ಮತ್ತೆ ಏನು ಮಾತನಾಡಬೇಕು, ಹೇಗೆ ಆಡಬೇಕು ಎಂಬುದು ತಿಳಿಯಲಿಲ್ಲ. ಅವರ ಸ್ವಭಾವ ಈಗ ಮೊದಲಿದ್ದಂತೆ ಇಲ್ಲ. ಸುಮ್ಮಸುಮ್ಮನೆ ರೇಗುತ್ತಿದ್ದಾರೆ. ಇದನ್ನು ವಾಸರಿಸುವ ತಾಳ್ಮೆ ಇಲ್ಲದೆ ವೆಂಕಟೇಶ ಅಥವಾ ಜಯಮ್ಮ ಏನಾದರೂ ಎದುರು ಮಾತನಾಡಿ, ಇವರು ಸಿಟ್ಟು ಮಾಡಿಕೊಂಡು ತೋಟಕ್ಕೆ ಹೋಗಿದ್ದಾರೆಯೇ? – ಎಂದು ಮನಸ್ಸಿನಲ್ಲೇ ತರ್ಕಿಸಿದಳು.

'ಅಪ್ಪ, ಸ್ವಲ್ಪ ಹೊತ್ತು ಮಲಿಕ್ಕಂಡ್ ನಿದ್ದೆ ಮಾಡು. ಬಸ್ಸಿನಲ್ಲಿ ಬಂದು ಆಯಾಸವಾಗಿದೆ' – ಎಂದಳು.

'ಆಯಾಸವಾಗುಕ್ಕೆ ನಂಗೇನಾಗಿದೆ? ಕಲ್ಲುಗುಂಡಿನ ಹಾಗಿದೀನಿ' – ಎನ್ನುತ್ತಾ ಅವರು ಮತ್ತೆ ರೇಗಿದರು.

ಅಷ್ಟರಲ್ಲಿ ನಾಲ್ಕು ಗಂಟೆಯಾಗುತ್ತಿತ್ತು. ತಕ್ಷಣ ಹೊರಡದಿದ್ದರೆ ಬಸ್ಸು ಹಿಡಿದು ಐದು ಗಂಟೆಯ ಒಳಗೆ ಅಂಗಡಿ ಮುಟ್ಟುವುದು ಸಾಧ್ಯವಾಗುತ್ತಿರಲಿಲ್ಲ. 'ನಾನು ಅಂಗ್ಡಿಗೆ ಹೋಗಿ ಬತ್ತೀನಿ. ನೀನು ಇಲ್ಲೇ ಇರು' – ಎಂದು ಹೇಳಿ

ಅವಳು ಹೊರಟಳು. 'ನೀನು ಆ ಕೂಲಿ ಕೆಲ್ಸಕ್ಕೆ ಹೋಗದೆ ಇದ್ರೆ ಏನಾಗುತ್ತೆ?' – ಅವರು ಕೇಳಿದರು.

'ಅದ ಆಮೇಲೆ ಯೋಚನೆ ಮಾಡ್‌ಭೌದು. ಅವರ ಹತ್ತಿರ ಸೇರಿಕೊಂಡ ಮೇಲೆ ತುಂಬ ವ್ಯಾಪಾರದ ದಿನ ಹೇಳದೆ ಕೇಳದೆ ತಪ್ಪಿಸ್ಕಂಡು ಅವರಿಗೆ ತೊಂದರೆ ಮಾಡಬಾರದು. ನಾನು ಒಂಬತ್ತು ಗಂಟೆ ಹೊತ್ತಿಗೆ ಬರ್ತೀನಿ' – ಎಂದು ಹೇಳಿ ಅವಳು ಹೊರಟೇ ಹೋದಳು.

ಕೋಣೆಯ ಬಾಗಿಲು ಹಾಕಿಕೊಂಡು ಅವರು ಮಂಚದ ಮೇಲೆ ಕಾಲು ನೀಡಿ ಮಲಗಿದರು. ಸ್ವಲ್ಪ ಹೊತ್ತಿಗೆ ನಿದ್ರೆ ಬಂತು. ಎಚ್ಚರವಾದಾಗ ಬೆಟ್ಟಯ್ಯ ನವರು ಬಾಗಿಲು ಬಡಿಯುತ್ತಿದ್ದರು. ಎದ್ದು ಬಾಗಿಲು ತೆರೆದ ಅವರನ್ನು ನೋಡಿ ಬೆಟ್ಟಯ್ಯ ಕೇಳಿದರು: 'ಇದೇನು ಸ್ವಾಮಿಯೋರೆ, ಹಿಂಗಿದೀರಿ? ಪಂಚೆ, ಅಂಗಿ ಯಲ್ಲಾ ಯಾಕೆ ತಿಗ್‌ದುಹಾಕಿದ್ರಿ?'

'ಮೋಟರ್ನಾಗೆ ನಿನ್ನ ಮುಟ್ಟಿಸ್ಕಂಡಿದ್ನಲ್ಲಯ್ಯ ಸ್ನಾನ ಮಾಡಿ ಒಗೆದು ಹಾಕ್ದೆ.'

ಬೆಟ್ಟಯ್ಯನವರಿಗೆ ತಕ್ಷಣ ಪೆಚ್ಚಾಯಿತು. ತಾವು ಈಗ ಬರಲೇ ಬಾರ ದಾಗಿತ್ತು ಎನಿಸಿತು. ಮೋಟಾರಿನಲ್ಲಿ ಇವರನ್ನು ಮುಂದೆ ಕೂರಿಸಿ ಅವರು ಹಿಂಭಾಗದ ಬೇರೆ ಸೀಟಿನಲ್ಲಿ ಕೂತಿದ್ದರು. ಇವರೇ, ಹತ್ತಿರ ಬಂದು ತಮ್ಮ ಪಕ್ಕದಲ್ಲಿ ಕೂರುವಂತೆ ಕರೆದರು: 'ಪರವಾಗಿಲ್ಲ ಬಿಡ್ರಿ' – ಎಂದದಕ್ಕೆ, 'ಮಡಿ ಗಿಡಿ ಯೆಲ್ಲ ಸುಳ್ಳು ಬಾರಯ್ಯಾ' ಎಂದು ಕೈ ಹಿಡಿದು ಎಬ್ಬಿಸಿಕೊಂಡು ಹೋಗಿದ್ದರು. ದಾರಿಯ ಉದ್ದಕ್ಕೂ ಆತ್ಮೀಯವಾಗಿ ಮಾತನಾಡುತ್ತಿದ್ದರು. ಈಗ ಹೀಗನ್ನು ತ್ತಿದ್ದಾರೆ. ಜನ ಹೇಳುವಂತೆ ಇವರಿಗೆ ಬುದ್ಧಿ ತಿರುಗಿರುವುದೇ ನಿಜ ಎಂದು ಕೊಂಡು ಅವರು, 'ವಳ್ಳೇದಾಯ್ತು, ನೀವು ಕುಂತ್ಕಳಿ. ನಾನು ಇಲ್ಲೇ ಹೊಸಲ ತಾವ ಕುಂತ್ಕತ್ತೀನಿ' ಎಂದರು. 'ಕುರ್ಚಿಮ್ಯಾಲೆ ಕೂತ್ಕ ಬಾ. ಜಾತಿ ಗೀತಿ ಯಲ್ಲಾ ಸುಳ್ಳು. ವಸಿಷ್ಠ ಮಹರ್ಷಿಗಳ ಬ್ರಹ್ಮತೇಜಸ್ಸಿನ ಮುಂದೆ ಕ್ಷತ್ರಿಯತ್ವ, ಶೂದ್ರತ್ವ, ದಾಸತ್ವ, ಎಲ್ಲಾ ಬ್ರಹ್ಮವೇ ಆಗುತ್ತೆ' – ಎಂಬ ಇವರ ಮಾತು ಅವರಿಗೆ ಅರ್ಥವಾಗಲಿಲ್ಲ. ಸುಮ್ಮನೆ ಒಂದು ಕುರ್ಚಿಯನ್ನು ಸ್ವಲ್ಪ ದೂರವೇ ಎಳೆದುಕೊಂಡು ಕುಳಿತರು.

'ನೋಡು, ನಾನು ಅಪ್ಪ ಅಪರೂಪಕ್ಕೆ ಬಂದಿರೂವಾಗ, ಅವಳು ಈಗ ಅಂಗಡಿ ಚಾಕರಿಗೆ ಹೋದಳು. ಹೋಗ್‌ಭೌದೇನಯ್ಯ?'

'ಒಂದು ಕಡೆ ಚಾಕರಿ ಮಾಡ್ತಿರೂವಾಗ ಅವರ ಟೈಮ್ ಕಾಯ್ಬೇಕಲ್ಲ ಸ್ವಾಮಿಯೋರೆ.'

'ಆ ನನ್ನ ಮಗನ ಕೆಲ್ಸ ಬಿಟ್ರೆ ಏನಾಗುತ್ತೆ?'

'ಬಿಡಭೌದು. ನಿಮಗೇನು ಊರಲ್ಲಿ ಜಮೀನಿಲ್ವ? ಕರ್ಕಂಡ್ ಹ್ವಾಗಿ ಮಡಕ್ಕಳಿ.'

'ನಾನೂ ಅದೇ ಹೇಳ್ತೀನಿ.'

ಚೆಟ್ಟಿಯ್ಯನವರಿಗೆ ತಕ್ಷಣ ನೆನಪಾಯಿತು. ಅವರು ಈ ವಿಷಯವಾಗಿ ನೆನ್ನೆಯಿಂದ ಯೋಚಿಸುತ್ತಿದ್ದರು. ಇವರಿಗೆ ಹೇಳಲು ಇದೇ ಸಮಯವೆಂದು ಭಾವಿಸಿದರು: 'ನೋಡಿ, ಈಗ ಹೆಣ್ಣು ಮಕ್ಕಳಿಗೆ ಅಪ್ಪನ ಆಸ್ತೀಲಿ ಸಮಪಾಲು ಬರಬೇಕು ಅಂತ ಸರ್ಕಾರ ಕಾನೂನೇ ಮಾಡ್ಯದೆ. ನಿಮ್ಮದು ಅರ್ಧ ದೇವರ ಇನಾಮತಿ. ಇನ್ನರ್ಧ ಸ್ವಂತದ್ದು. ಸ್ವಂತ ಜಮೀನಿನಲ್ಲಿ ಮಗಳಿಗೆ ಅರ್ಧ ಹ್ಯಂಗೂ ಕೊಡಬೇಕು. ಈಗಲೇ ಕೊಟ್ಟುಬಿಡಿ. ಈ ಚಾಕರಿ ಮಾಡ್ಕಂಡಿರಾಬದ್ಲು ಊರಲ್ಲಿ ಸುಕವಾಗಿರ್ಲಿ.'

ಈ ಮಾತು ತಕ್ಷಣ ಅವರ ತಲೆಯನ್ನು ಹೊಕ್ಕಿತು. 'ಶಾಭಾಸ್ ಕೆಲ್ಸ ಕಣಯ್ಯ ಇದು. ವೆಂಕಟೇಶ ಬುದ್ಧಿವಂತ. ಸರ್ಕಾರ ಕಾನೂನು ಮಾಡಿದ್ರೂ ಅವನು ಅವಳಿಗೆ ದಕ್ಕಾಕ್ಕೆ ಬಿಡುಲ್ಲ. ಆದರೆ ಮದುವೆಯಾಗಿ ಹೋಗೋ ಹೆಣ್ಣು ಮಗಳಿಗೆ ಭೂಮಿ ಬಿಟ್ರೆ ಹರಿದುಹೋಗುಲ್ವೇನಯ್ಯ?'

'ಅಂಥ ಕಾಲ ಬಂದ್ರೆ ಒಂದೀಟು ದುಡ್ಡು ಕೊಟ್ಟು ವಾಪಸು ಬರಿಸ್ಕಳಾದು.'

ಅವರ ತಲೆ ಅದನ್ನೇ ಕುರಿತು ಯೋಚಿಸುತ್ತಿತ್ತು. ಮತ್ತೆ ಮಾತನಾಡದೆ ಸುಮ್ಮನೆ ಕುಳಿತುಬಿಟ್ಟರು. ಮಾತನಾಡಲು ತೋಚದೆ ಚೆಟ್ಟಿಯ್ಯನವರೂ ಸುಮ್ಮನಾದರು. ಕೊನೆಗೆ ಇವರೇ ಕೇಳಿದರು: 'ಇವಳಿಗೆ ಒಂದು ಗಂಡು ಹುಡುಕಿ ಮದುವೆ ಮಾಡಿದ್ರೆ ಆಗುಲ್ವೇನಯ್ಯ?'

'ಮಾಡ್ಕಂತೀರ ಅಂತ ಕೇಳ್ರಿ. ಹೂಂ ಅಂದ್ರೆ ಮಾಡಭೌದು. ಬ್ಯಾಡ ಅಂದ್ರೆ ಏನು ಮಾಡಕ್ಕಾಯ್ತದೆ?'

'ಹೆಣ್ಣು ಹುಡುಗಿ ಮದುವೆ ಇಲ್ದೆ ಇದ್ರೆ ಹ್ಯಾಗಯ್ಯ?'

'ಬ್ಯಾಡದೆ ಇದ್ದೋರಿಗೆ ಬ್ಯಾಡ. ನಾನು ಆಶ್ರಮದಲ್ಲಿದ್ದಾಗ....' – ಎಂಬ ಮಾತನ್ನು ಮಧ್ಯಕ್ಕೆ ತಡೆದು ವೆಂಕಟರಮಣಯ್ಯನವರು, 'ಆ ಆಶ್ರಮದ ಮಾತು ಆಡಬ್ಯಾಡ' ಎಂದುಬಿಟ್ಟರು.

ಚೆಟ್ಟಿಯ್ಯನವರು ಸಂಜೆ ಏಳು ಗಂಟೆಯವರೆಗೂ ಇಲ್ಲೇ ಇದ್ದರು. ತಮಗೆ ಕೆಲಸವಿರುವುದಾಗಿ ಹೇಳಿ ಅನಂತರ ಹೊರಟರು. ತಾವು ನಾಳೆ ಬೆಳಗಿನ ಮೋಟಾರಿಗೆ ಊರಿಗೆ ಹೋಗುವುದನ್ನು ಆಗಲೇ ತಿಳಿಸಿದರು. ತಾವು ಇಲ್ಲಿ ಎಷ್ಟು ದಿನ ಇರುವುದೋ ವೆಂಕಟರಮಣಯ್ಯನವರಿಗೆ ಗೊತ್ತಿಲ್ಲ. ಅವರು ಆ ಬಗೆಗೆ ಯೋಚಿಸಿಯೂ ಇಲ್ಲ. 'ಸರಿ ಕಣಪ್ಪ' – ಎಂದು ಹೇಳಿ ಅವರನ್ನು ಕಳಿಸಿದರು.

ಸತ್ಯ ಒಂಬತ್ತು ಗಂಟೆಯ ಹೊತ್ತಿಗೆ ಬಂದಳು. ಬಂದ ತಕ್ಷಣ ಅಕ್ಕಿ ತೊಳೆದು ಸ್ಟೋವಿನ ಮೇಲೆ ಅನ್ನಕ್ಕೆ ಇಟ್ಟು, ಹುಳಿ ತರಲು ಹೋಟೆಲಿಗೆ ಹೋದಳು. ಬರುವ ಹೊತ್ತಿಗೆ ಅನ್ನ ಕುದಿಯುತ್ತಿತ್ತು. ಅದನ್ನು ತೊಳಸಿ ಪೂರ್ತಿ ಬೆಂದ ನಂತರ ಕೆಳಕ್ಕಿಟ್ಟು, ಹಸಿವಾಗಿಲ್ಲವೆಂದರೂ ಅಪ್ಪನಿಗೆ ಬಲವಂತ ಮಾಡಿ ಬಡಿಸಿ ತಾನೂ ಊಟ ಮಾಡಿದಳು. ಅವರನ್ನು ಮಂಚದ ಮೇಲೆ ಮಲಗಿಸಿ, ತಾನು ನೆಲದ ಮೇಲೆ ಒಂದು ಮಂದಲಿಗೆ ಹಾಕಿಕೊಂಡು ಅದರ ಮೇಲೆ ದುಪ್ಪಟಿ ಹಾಸಿ ಮಲಗಿದಳು.

ತಂದೆ ಕೇಳಿದರು: 'ಮಗು, ಹತ್ತಲ್ಲ ಹದಿನೈದು ಸಾವಿರ ಖರ್ಚಾಗ್ಲಿ. ಒಂದು ಗಂಡು ಹುಡುಕಿ ಮದುವೆ ಮಾಡ್ತೀನಿ ನಿಂಗೆ. ಸುಖವಾಗಿರು.'

ಅವಳು ಮಾತನಾಡಲಿಲ್ಲ. ಅವರೇ, 'ಏನಂತೀಯ?' ಎಂದರು.

'ಮದುವೆ ಬ್ಯಾಡಪ್ಪ. ನಾನು ಹೀಗೆ ಸುಖವಾಗಿದೀನಿ. ನನ್ನ ಬಲವಂತ ಮಾಡಬ್ಯಾಡಿ.'

ಅವರು ಆ ಬಗೆಗೆ ಹೆಚ್ಚು ಮಾತನಾಡಲಿಲ್ಲ. ಸುಮ್ಮನೆ ಮಲಗಿದರು. ಸ್ವಲ್ಪ ಹೊತ್ತಿಗೆ ಗಟ್ಟಿಯಾಗಿ ನಿದ್ದೆಯೂ ಮಾಡಿದರು. ಸತ್ಯಳೇ ನಿದ್ರೆ ಬರದೆ ಹೊರಳಾಡುತ್ತಿದ್ದಳು.

ಬೆಳಗ್ಗೆ ಎದ್ದ ತಕ್ಷಣ ಅವರು ಕೇಳಿದರು: 'ನೀನು ಎಷ್ಟು ಹೊತ್ತಿಗೆ ಅಂಗ್ಡಿಗೆ ಹೋಗಬೇಕು?'

'ಹನ್ನೊಂದೂವರೆಗೆ ಹೊರಟರೆ ಸಾಕು.'

'ನಾನು ಊರಿಗೆ ಹೋಗ್ತೀನಿ. ಜೊತೇಲಿ ಬಂದು ಮೋಟಾರಿಗೆ ಕೂರಿಸಿ ಬಿಡು.'

'ಇವತ್ತೇ ಯಾಕೆ ಹೋಗ್ತೀಯ? ಒಂದು ನಾಕು ದಿನ ಇರು.'

'ಇಲ್ಲ. ನಂಗೆ ಅರ್ಜೆಂಟ್ ಕೆಲ್ಸವಿದೆ. ಬಲವಂತ ಮಾಡಬ್ಯಾಡ.'

'ಏನು ಕೆಲ್ಸ?'

'ನಿಂಗ್ಯಾಕೆ ಅಧಿಕಪ್ರಸಂಗಿತನ ಹೆಣ್ಣು ಹುಡುಗಿಗೆ?' – ಎಂದು ರೇಗಿಬಿಟ್ಟರು.

ಅವಳು ಮಾತನಾಡದೆ ಸುಮ್ಮನೆ ಸ್ನಾನಕ್ಕೆ ಹೋದಳು. ಸ್ನಾನ ಮಾಡಿ ಬಂದ ಮೇಲೆ ಅವರು ತಮ್ಮ ಹತ್ತಿರವಿದ್ದ ದುಡ್ಡಿನಲ್ಲಿ ನೂರಾ ಎಂಭತ್ತು ರೂಪಾಯಿಯನ್ನು ತೆಗೆದು ಮಂಚದ ತುದಿಯ ಮೇಲಿಟ್ಟು, 'ಮಗೂ, ಇದ ತಗ. ಒಂದಿಷ್ಟು ಒಳ್ಳೇ ಬಟ್ಟೆಬರೇನಾದ್ರೂ ಮಾಡ್ಕ' ಎಂದರು.

'ಅಪ್ಪ, ನಂಗೆ ಬ್ಯಾಡ. ಆರು ಕಾಸೋ ಮೂರು ಕಾಸೋ ಸಂಬಳ ಬರ್‍ತಿದೆ ಯಲ' – ಎಂಬ ಅವಳ ಮಾತಿಗೆ ಸಿಟ್ಟು ಬಂದು, 'ಬರ್ತಿದೆಯಂತೆ ಈ ಕತ್ತೆ

ಲೌಡಿಗೆ. ನಾನು ಹುಟ್ಟಿಸಿ ಸಾಕಿ ಸಲಹಿ ಮಾಡಿದ್ದಕ್ಕೆ ಬ್ಯಾಡ ಅಂತಾಳೆ' ಎಂದರು.

ಮತ್ತೆ ಮಾತನಾಡದೆ ಅವಳು ನೋಟುಗಳನ್ನು ತೆಗೆದು ಇಟ್ಟುಕೊಂಡಳು. ಅವರು ಸ್ನಾನಕ್ಕೆ ಹೋದರು. ಅಷ್ಟರಲ್ಲಿ ಅವಳು ಅನ್ನಕ್ಕೆ ಇಟ್ಟು, ಹೋಗಿ ಹುಳಿ ತಂದಳು. ಅವರು ಸ್ನಾನ ಮಾಡಿ ಬಂದ ಮೇಲೆ ಕೇಳಿದಳು: 'ಅಪ್ಪ, ನೀನು ಸಿಟ್ಟು ಮಾಡ್ಕಬೇಡ. ನಿನ್ನ ಜನಿವಾರ ಎಲ್ಲಿ ಕಾಣ್ತಿಲ್ಲ?'

'ಸನ್ಯಾಸಿಗೆಂಥ ಜನಿವಾರ?'

ಈ ಉತ್ತರದಿಂದ ಅವಳ ಸಂಭ್ರಾಂತಿ ಇನ್ನೂ ಹೆಚ್ಚಾಯಿತು. 'ಯಾವಾಗಿ ನಿಂದ ಸನ್ಯಾಸಿಯಾದೆ?' – ಎಂದು ಕೇಳಿದಳು.

'ಜನ್ಮಾಂತರದಿಂದ' – ಎಂಬ ಉತ್ತರದಿಂದ ಅವಳ ಕುತೂಹಲ ಇನ್ನೂ ಹೆಚ್ಚಾಯಿತು. ಸ್ಪಷ್ಟವಾಗಿ ಮಾತನಾಡಲು ಅವರಿಗೆ ಇಷ್ಟವಿಲ್ಲವೆಂದು ಸುಮ್ಮ ನಾದಳು.

ಹತ್ತು ಗಂಟೆಯ ಹೊತ್ತಿಗೆ ಇಬ್ಬರದೂ ಊಟವಾಯಿತು. ನೀರುಮಜ್ಜಿಗೆ ಯಲ್ಲಿ ಅನ್ನ ಉಂಡು ಮುಗಿಸುವಾಗ ಅವರು, 'ಮಗೂ, ಹೀಗೆ ಹೊಟ್ಟೆತುಂಬ ಉಂಡು ಎಷ್ಟು ಯುಗವಾಗಿತ್ತೋ!' ಎಂದರು.

ಈ ಮಾತಿನಿಂದ ಅವಳ ಅಂತಃಕರಣ ಕಲಕಿತು. ಅಪ್ಪ ಯಾವುದನ್ನೂ ಬಾಯಿಬಿಟ್ಟು ಹೇಳುವುದಿಲ್ಲ. ಊರಿನಲ್ಲಿ ಏನು ನಡೆಯಿತು, ಇವರು ಯಾಕೆ ಹೀಗೆ ಆಗಿದ್ದಾರೆ, ಎಂಬುದನ್ನು ತನಗೆ ತಿಳಿಸುವವರು ಯಾರೂ ಇಲ್ಲ. ಇವರನ್ನು ಬಿಡಿಸಿ ಕೇಳಿದರೆ ಯಾವಾಗ ರೇಗುತ್ತಾರೋ ಗೊತ್ತಾಗುವುದಿಲ್ಲ. ಬೆಟ್ಟಯ್ಯನವರ ನ್ನಾದರೂ ಕಂಡು ತಿಳಿಯಬೇಕು ಎಂದುಕೊಂಡಳು.

ಆಟೋರಿಕ್ಷಾದಲ್ಲಿ ಕುಳಿತು ಕಲಾಸಿಪಾಳ್ಯದ ಬಸ್‌ಸ್ಟ್ಯಾಂಡಿಗೆ ಬಂದಾಗ, 'ನನಗೆ ತಾವರೆಕೆರೇಲಿ ಕೆಲಸವಿದೆ. ಸೀದಾ ಅಲ್ಲಿಗೆ ಹೋಗೂ ಮೋಟಾರಿನಲ್ಲಿ ಕೂರಿಸು' ಎಂದರು. ಏನು ಕೆಲಸ ಎಂದು ಕೇಳಿದರೆ ರೇಗಿಯಾರೆಂದು ಯೋಚಿಸಿ ಅವಳು ಸುಮ್ಮನೆ ಆ ಬಸ್ಸನ್ನು ವಿಚಾರಿಸಿ ಅದರಲ್ಲಿ ಕೂರಿಸಿದಳು. ಅವಳ ಅಂಗಡಿ ಮತ್ತು ಕೋಣೆಯ ವಿಳಾಸಗಳನ್ನು ಅವರು ಬರೆಸಿಕೊಂಡರು. ತನ್ನ ಅಂಗಡಿಯ ವೇಳೆಯಾಗುವ ತನಕ ಅಲ್ಲಿದ್ದು ಅವಳು ಹೊರಟುಹೋದಳು.

ತಾವರೆಕೆರೆಯ ಲಾಯರ್ ಕೃಷ್ಣಪ್ಪನವರು ಇವರಿಗೆ ಮೊದಲಿನಿಂದ ಗೊತ್ತಿದ್ದ ವರು. ಸಂಜೆ ಐದು ಗಂಟೆಗೆ ಬಸ್ಸಿನಿಂದ ಇಳಿದು ಇವರು ಸೀದಾ ಅವರ ಮನೆಗೆ ಹೋದರು. 'ನನ್ನ ಸ್ವಂತ ಆಸ್ತೀಲಿ ಮಗಳಿಗೆ ಅರ್ಧ ಪಾಲು ಬರೆದು ರಿಜಿಸ್ಟ್ರು ಮಾಡಬೇಕು ಅಂತಿದೀನಿ. ನೀವು ಕಾಗದ ಬರೆದು ನಾಳೆ ಬೆಳಗ್ಗೆ ರಿಜಿಸ್ಟ್ರು ಮಾಡಿಸಿ ಕೊಡಬೇಕು' – ಎಂಬ ಇವರ ಮಾತಿಗೆ ಅವರು, 'ಹೆಣ್ಣುಮಕ್ಕಳಿಗೂ

ಸಮಪಾಲು ಬರಬೇಕು ಅಂತ ಸರ್ಕಾರೀ ಕಾನೂನೇ ಆಗಿದೆ. ನೀವು ಬರೆದು ರಿಜಿಸ್ಟ್ರೇಶನ್ನಿಗೆ ದುಡ್ಡು ಖರ್ಚು ಮಾಡುವ ಕಾರಣವೇ ಇಲ್ಲ' ಎಂದರು.

'ನನ್ನ ಮಗ ತುಂಬ ಬುದ್ಧಿವಂತ. ಖರ್ಚಾದರೂ ಸರಿ. ರಿಜಿಸ್ಟ್ರೀ ಮಾಡು ಸ್ಬೇಕು ಅಂತಿದೀನಿ.'

'ಅದಕ್ಕೇನಂತೆ? ಸರ್ವೇ ನಂಬರು, ದುಡ್ಡು ತಂದಿದೀರಾ?'

'ಸರ್ವೇ ನಂಬರು ಬಾಯಲ್ಲೇ ಇದೆ. ನಾಳೆ ಬೆಳಗ್ಗೆ ಬ್ಯಾಂಕ್ ತೆಗೆದ ಮೇಲೆ ದುಡ್ಡು ತರ್ತೀನಿ.'

ಬೆಳಗ್ಗೆ ಲಾಯರು ಹೇಳಿದಂತೆ ಛಾಪಾಕಾಗದ ತಂದರು. 'ತೋಟದಲ್ಲಿ ಪೂರ್ವದಿಕ್ಕಿನ ಅರ್ಧ, ಎಂದರೆ ಈಗ ತಾವು ವಾಸಿಸುತ್ತಿರುವ ಗುಡಿಸಲು ಮತ್ತು ಕೊಳದ ಭಾಗದ ಒಟ್ಟು ನೂರೈವತ್ತು ಮರ, ಆರು ಎಕರೆಯಲ್ಲಿ ಅರ್ಧ, ಎಂದರೆ ಮೂರು ಎಕರೆ ಹೊಲ ಒಂದು ಎಕರೆ ಗದ್ದೆ ಮಗಳಿಗೆ ಬರಬೇಕು. ಹಾಲಿ ಇರುವ ಮನೆ ಪೂರ್ತಿ ವೆಂಕಟೇಶನಿಗೆ ಸೇರಬೇಕು. ಅದರ ಬದಲು ಮನೆ ಕಟ್ಟಿಸಿ ಕೊಳ್ಳಲು, ತನ್ನ ಬ್ಯಾಂಕಿನ ಹಣದಲ್ಲಿ ಅವಳಿಗೆ ಹತ್ತು ಸಾವಿರ ಹೋಗಬೇಕು. ಉಳಿದ ದುಡ್ಡಿನಲ್ಲಿ ಅವಳು ಮತ್ತು ವೆಂಕಟೇಶನಿಗೆ ತಲಾ ಅರ್ಧ ಅರ್ಧದಂತೆ ಸೇರಬೇಕು. ಇನಾಮತಿ ಜಮೀನು ಮಾತ್ರ ವೆಂಕಟೇಶ ಪೂಜೆ ಮಾಡಿದರೆ ಪೂರ್ತಿ ಅವನದು' – ಎಂದು ಬರೆದು ಅದೇ ದಿನ ರಿಜಿಸ್ಟರ್ ಮಾಡಿಸಿ ಊರಿಗೆ ಹೊರಟರು. ಊರಿನ ಬಸ್ಸು ಹತ್ತುವ ಮೊದಲು, ಜ್ಞಾಪಿಸಿಕೊಂಡವರಂತೆ, ಬಸ್‌ಸ್ಟ್ಯಾಂಡಿನ ಎದುರಿಗೇ ಇರುವ ಸುಬ್ರಹ್ಮಣ್ಯಶಾಸ್ತ್ರಿಗಳ ಅಂಗಡಿಯಲ್ಲಿ ಇಪ್ಪತ್ತು ಜೊತೆ ಜನಿವಾರಗಳನ್ನು ಕೊಂಡು ಅಡಿಕೆ ಪಟ್ಟೆಯಲ್ಲಿ ಕಟ್ಟಿಸಿ ಭಯ ಭಕ್ತಿಗಳಿಂದ ಕೈಲಿ ಹಿಡಿದುಕೊಂಡು ಬಸ್ಸು ಹತ್ತಿದರು.

# ಒಂಬತ್ತು

## ೧

ಸತ್ಯನಾರಾಯಣ ಹಾಲಿನವರು ಕೆಲಸದವರಿಗಾಗಿ ಪತ್ರಿಕೆಗಳಲ್ಲಿ ಪ್ರಕಟಿಸಿದ್ದರು. ತನಗೆ ತಕ್ಷಣ ಬೇರೆ ಕೆಲಸ ಸಿಕ್ಕುವ ಸಾಧ್ಯತೆ ಕಡಿಮೆ ಇದ್ದುದರಿಂದ ಸತ್ಯ ಅದಕ್ಕೆ ಪ್ರಯತ್ನಿಸಿದಳು. ಇಂಗ್ಲಿಷ್‌ನಲ್ಲಿ ಚನ್ನಾಗಿ ಮಾತನಾಡಲು ಬರುತ್ತದೆಂಬ ಕಾರಣದಿಂದ ಶೆಟ್ಟರು ಇವಳಿಗೆ ನೂರು ರೂಪಾಯಿ ಸಂಬಳ ಕೊಡಲು ಒಪ್ಪಿದರು. ಇಲ್ಲದಿದ್ದರೆ ತೊಂಬತ್ತು. ಅದಕ್ಕೆ ಸೇರಿ ಇಷ್ಟು ದಿನವಾದರೂ ಅವಳು ಬೇರೆ ಕೆಲಸಕ್ಕೆ ಪ್ರಯತ್ನಿಸಿಲ್ಲ. ಏನೋ ಒಂದು ವಿಧವಾದ ನಿರುತ್ಸಾಹ, ಯಾವ ಕೆಲಸವಾದರೆ ಏನು ಎಂಬ ನಿರಾಸಕ್ತಿ.

ಮುಂದಿನ ಒಂದನೆಯ ತಾರೀಕು ಬಾಡಿಗೆ ಕೊಡಲು ಹೋದಾಗ ಮಾಲೀಕ ಕೇಶವಯ್ಯಂಗಾರರು ಏನೂ ತಿಳಿಯದವರಂತೆ ಕೇಳಿದರು: 'ನಿಮ್ಮ ಕೆಲಸ ಹೋಯ್ತಂತೆ. ಪಾಪ. ಈಗ ಎಲ್ಲಿ ಮಾಡ್ತಿದೀರಿ? ಬಾಡಿಗೆ ಕೊಡುಕ್ಕೆ ತೊಂದರೆ ಏನೂ ಇಲ್ವೆ?'

'ಎಲ್ಲಿ ಮಾಡ್ತಿದೀನಿ ಅನ್ನೋದು ನಿಮಗೆ ಸಂಬಂಧಪಟ್ಟದ್ದಲ್ಲ. ನಿಮ್ಮ ರೂಮಂತೂ ಬಿಡುಲ್ಲ. ದುಡ್ಡಿಗೆ ರಶೀತಿ ಕೊಡಿ' – ಎಂದು ಮುಖಕ್ಕೆ ಹೊಡೆದಂತೆ ಹೇಳಿ ಬಂದಳು.

ಅಂಗಡಿಗೆ ಹೋಗಿ ಕೆಲಸ ಮಾಡಲು ಮೊದಮೊದಲು ಮಾನಸಿಕವಾಗಿಯಲ್ಲದೆ ಶಾರೀರಿಕವಾಗಿಯೂ ಕಷ್ಟವಾಗುತ್ತಿತ್ತು. ಒಂದೇ ಸಮ ಎಂಟೂವರೆ ಒಂಬತ್ತು ಗಂಟೆಗಳ ಕಾಲ, ನಿಂತು ಅಥವಾ ಓಡಾಡುತ್ತ ಕೆಲಸ ಮಾಡಬೇಕು. ಅದೆಷ್ಟು ಸೀರೆ, ಬಟ್ಟೆಗಳು. ಖಾನೆಯಿಂದ ತೆಗೆಯುವುದು, ಬಿಚ್ಚಿ ಹರಡುವುದು, ಗಿರಾಕಿಗಳು ಕೇಳುವ ನೂರೆಂಟು ಪ್ರಶ್ನೆಗಳಿಗೆ ಉತ್ತರ ಹೇಳುವುದು, ಮತ್ತೆ ಸರಿಯಾಗಿ ಮಡಿಸಿ ಅದರದರ ಜಾಗಕ್ಕೆ ಇಡುವುದು – ಎಂಟು ದಿನದಲ್ಲಿ ಸುಸ್ತಾಗಿ ಹೋಯಿತು. ತಾನು ಇದುವರೆಗೂ ಕಲಿತ ಓದಿಗೂ ಈ ದುಡಿಮೆಗೂ ಏನು ಸಂಬಂಧ? – ಯಾವ ಸಾರ್ಥಕ? – ಎಂಬ ಪ್ರಶ್ನೆ ಮನಸ್ಸಿನಲ್ಲಿ ಏಳುವವು.

ಕೆಲಸ ಸಿಕ್ಕುವ ತನಕ ಆತಂಕವಾಗಿತ್ತು. ಇದಕ್ಕೆ ಸೇರಿದ ಮೇಲೆ ಮನಸ್ಸಿನಲ್ಲಿ ಆಳವಾದ ಪ್ರಶ್ನೆ ಎದ್ದು ನಿಲ್ಲುತ್ತಿತ್ತು: ಹ್ಯಾಗೋ ಊಟ, ವಾಸದ ಸಮಸ್ಯೆ ಮುಗಿಯಿತು. ಇನ್ನೇನು? ನಾನು ಇಲ್ಲಿ ಯಾಕಿರಬೇಕು? ಮುಂದಿನ ದಿಕ್ಕು

ಯಾವುದು? ಮರೆಯಲು ಎಷ್ಟೇ ಯತ್ನಿಸಿದರೂ ಶ್ರೀನಿವಾಸನ ನೆನಪು, ಯೋಚನೆಗಳು, ಹೋಗುತ್ತಿರಲಿಲ್ಲ. ಹೀಗೇಕೆ ಮಾಡಿದ? ಈಗಲೂ ಒಂದು ದಿನ ಮೈಸೂರಿಗೆ ಹೋಗಿಬರಲೆ? – ಎಂಬ ಯೋಚನೆ ಬರುತ್ತಿತ್ತು. ಅವನ ಕಾಗದ ಬಂದ ದಿನ ತಾನು ಮೈಸೂರಿಗೆ ಹೋಗಿ ಹಿಂತಿರುಗಿ ಬಂದ ವಿಚಾರದ ನೆನಪಾಗಿ, ಆ ಯೋಚನೆಯನ್ನು ಅಲ್ಲಿಗೆ ಬಿಡುತ್ತಿದ್ದಳು.

ಕಾಲೇಜಿನ ಕೆಲಸ ಬಿಟ್ಟ ಮೇಲೂ ಮುದ್ದೇಗೌಡರು ಒಂದೊಂದು ದಿನ ಇವಳ ಕೋಣೆಗೆ ಬರುತ್ತಿದ್ದರು. ಜಾತಿ, ಮತ, ಸಮಾಜಸುಧಾರಣೆ ಮೊದಲಾಗಿ ಏನಾದರೂ ಮಾತನಾಡುತ್ತಿದ್ದರು. ಈಗ ಅವಳಿಗೆ ಆ ವಿಷಯವಾಗಿ ಚರ್ಚಿಸು ವುದಕ್ಕೇ ಬೇಸರ. ಅವಳು ಮೊದಲು ಯೋಚಿಸದ, ಚರ್ಚಿಸದ ಹೊಸ ಅಂಶ ಗಳನ್ನು ಅವರು ಹೇಳುತ್ತಿರಲಿಲ್ಲ. ಆದರೆ ಅವರು ಹೇಳಿದುದಕ್ಕೆ ಪೂರಕವಾಗಿ ತನಗೆ ತಿಳಿದದ್ದನ್ನು ಹೇಳಲೂ ಅವಳಲ್ಲಿ ಉತ್ಸಾಹ ಉಳಿದಿಲ್ಲ. ಜಾತಿಯು ವೃತ್ತಿ ಯಿಂದಾದದ್ದು, ಅದು ಆರ್ಥಿಕ ರಚನೆಗೆ ಅಂಟಿಕೊಂಡಿರುವ ಪಾಚಿ ಮಾತ್ರ ಎನ್ನುತ್ತಾರೆ ಅವರು. ಈ ಮಾತಿನಲ್ಲಿ ಅವಳಿಗೆ ಪೂರ್ತಿ ವಿಶ್ವಾಸವಿಲ್ಲ. ಹಾಗೆಂದು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿ ಚರ್ಚೆಯನ್ನು ಬೆಳೆಸುವ ಉತ್ಸಾಹವೂ ಇಲ್ಲ. ಅವರು ಹೇಳಿದುದಕ್ಕೆ ಸುಮ್ಮನೆ ಹೂಂಗುಡುತ್ತಾಳೆ. ಸ್ವಲ್ಪ ಹೊತ್ತು ಕೂತಿದ್ದು ಅವರು ಹೊರಟುಹೋಗುತ್ತಾರೆ.

ಶ್ರೀನಿವಾಸನ ಬಗೆಗಾಗಲಿ ಊರಿನ ಬಗೆಗಾಗಲಿ ತಿಳಿಸುವವರು ಯಾರೂ ಇಲ್ಲ. ಹೇಗಾದರೂ ಮಾಡಿ ಅವರ ಬಗೆಗೆ ತಿಳಿಯಬೇಕು ಎಂಬ ಆಸೆಯಾಗು ತ್ತದೆ. ಎಂ.ಎಲ್.ಎ. ಹಾಸ್ಟೆಲಿಗೆ ಹೋಗಿ ಬೆಟ್ಟಯ್ಯನವರನ್ನಾದರೂ ಕಾಣ ಬೇಕೆನಿಸುತ್ತದೆ. ಆದರೆ ಅದೇನೋ ಒಂದು ರೀತಿಯ ಸ್ವಾಭಿಮಾನ ಎದ್ದು ನಿಂತು, ಯಾರನ್ನು ನೋಡುವುದೂ ಬೇಡವೆಂದು ಸುಮ್ಮನಾಗಿಬಿಡುತ್ತಾಳೆ.

ಅಂಗಡಿಗೆ ಸೇರಿ ಸುಮಾರು ಮೂರು ತಿಂಗಳಾಗಿತ್ತು. ಇವಳು ಭಾರೀ ಸೀರೆಗಳ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದಳು. ಒಂದು ದಿನ ಶ್ರೀನಿವಾಸ, ಅವನ ತಂದೆ ತಾಯಿಯರು ಇವಳ ಕಡೆಗೇ ಬಂದರು. ಜೊತೆಯಲ್ಲಿ ಬೆಟ್ಟಯ್ಯನವರು. ಶ್ರೀನಿವಾಸ ಸಿಲ್ಕಿನ ಶರಟು ಟೆರಿಲಿನ್ ಪ್ಯಾಂಟು ಹಾಕಿದ್ದ. ಅವರೆ ಬಡವಾಗಿದ್ದ. ಇವಳನ್ನು ಕಂಡ ತಕ್ಷಣ ವಿಸ್ಮಿತನಾದ. ಒಂದು ನಿಮಿಷವೂ ಇಲ್ಲ, ಅಂಗಡಿಯಿಂದ ಹೊರಗೆ ಹೋಗಿಬಿಟ್ಟ. ಅವನ ತಂದೆಯೂ, ಹೆಂಡತಿ ಮತ್ತು ಬೆಟ್ಟಯ್ಯನವರನ್ನು ಕರೆದುಕೊಂಡು ಹೊರಟುಹೋದರು. ಅವರು ಯಾಕೆ ಬಂದಿದ್ದರು ಎಂಬುದು ಅವಳಿಗೆ ತಿಳಿಯಲೇ ಇಲ್ಲ. ಜವಳಿ ಅಂಗಡಿಗೆ ಬರುವವರು ಮತ್ತೆ ಯಾಕೆ ಬರುತ್ತಾರೆ? ಆದರೆ ಯಾವ ಸಮಾರಂಭಕ್ಕಾಗಿ ಜವಳಿ ಕೊಳ್ಳಲು ಬಂದಿದ್ದರು

ಎಂಬುದನ್ನು ಅವಳು ಊಹಿಸಲೂ ಇಲ್ಲ.

ಮರುದಿನ ಸುಮಾರು ಅದೇ ಹೊತ್ತಿಗೆ ಬೆಟ್ಟಯ್ಯನವರು ಅಂಗಡಿಗೆ ಬಂದರು. 'ಅವ್ವಾ, ನೀವು ಇಲ್ಲಿರೂದು ನಂಗೆ ಗೊತ್ತೇ ಇಲ್ಲ. ವಾಸ ಎಲ್ಲಿದೀರ?' – ಎಂದು ಕೇಳಿದರು.

'ಹಿಂದೆ ಇದ್ದ ಕೋಣೆಯೇ.'

'ಆಗ ಬಂದದ್ದು ಗ್ಯಾಪಕವಿಲ್ಲ. ನಂಬರು ಕೊಡಿ. ಮತ್ತೆ ಗುರ್ತು ಹೇಳಿ. ಎಷ್ಟು ಹೊತ್ತಿಗೆ ರೂಮಾಗಿರ್ತೀರ?' – ಎಂದು ಕೇಳಿದರು.

ಅದರ ಮರುದಿನವೇ ಬೆಳಗ್ಗೆ ಎಂಟು ಗಂಟೆಯ ಹೊತ್ತಿಗೆ ಕೋಣೆಗೆ ಬಂದರು. ಕಷ್ಟ ಸುಖ ವಿಚಾರಿಸಿ, 'ಜವಳಿ ಅಂಗ್‌ಡಿಗೆ ಯಾಕ್ ಸೇರ್ಕಂಡ್ರಿ?' – ಎಂದು ಕೇಳಿದರು.

ಅವಳು ಕಾಲೇಜಿನಲ್ಲಿ ಕೆಲಸ ಹೋದದ್ದನ್ನು ವಿವರವಾಗಿ ತಿಳಿಸಿದಳು.

'ಹಿಂಗಾಗ್ಯದೆ ಅಂತ ಊರಲ್ಲಿ ಹ್ಯೇಳ್ಲಾ?'

'ಖಂಡಿತ ಬ್ಯಾಡ.'

ಒಂದು ನಿಮಿಷ ಯೋಚಿಸಿ ಅವರು ಕೇಳಿದರು: 'ನಿಮಗೆ ಇನ್ನೇನಾದರೂ ಒಂದು ಕೆಲಸ ನಾನು ಗೊತ್ತುಮಾಡ್ಲಾ, ಕಾಲೇಜ್ ಗೀಲೇಜ್‌ನಾಗೆ?'

'ಬೆಟ್ಟಯ್ಯನೋರೇ, ಈಗ ಶಿಫಾರಸಿಲ್ಲದೆ ಕೆಲಸ ಸಿಕ್ಕಲ್ಲ ಅಂತ ನನಗೆ ಗೊತ್ತಿದೆ. ನೀವು ಶಿಫಾರಸು ಮಾಡಿ ಕೊಡುಸ್ತೀನಿ ಅಂದ್‌ರೆ ನಾನು ಬ್ಯಾಡ ಅನ್ನಲ್ಲ. ಆದರೆ ನಿಜ ಹೇಳಿ. ಕೆಲಸ ಕೊಡಿಸೂ ಶಕ್ತಿ ನಿಮಗಿದೆಯೇ?'

'ಹಂಗಂದ್ರೇನವ್ವ!'

'ನೀವು ಕೊಡಿಸಬೇಕಾದ್‌ರೂ ಮೇಲಗಿರಿಗೌಡರಿಗೆ ಹೇಳಿ ಅವರ ಮೂಲಕವೇ ಕೆಲಸ ಆಗಬೇಕು. ಅದು ನಂಗೆ ಇಷ್ಟವಿಲ್ಲ.'

'ನಾನೊಂದು ಎಡವಟ್ಟ. ಅಷ್ಟೂ ತಿಳೀನಿಲ್ಲ' – ಎಂದು ಅವರು ಸುಮ್ಮನಾದರು. ಮತ್ತೆ ಏನೋ ಹೇಳಬೇಕೆಂದು ಅವರ ಮನಸ್ಸಿನಲ್ಲಿತ್ತು. ಹೇಳುವುದೋ ಬೇಡವೋ ಎಂದು ತೂಗಿ ತೂಗಿ ಕೊನೆಗೆ ಬಾಯಿಬಿಟ್ಟರು: 'ನೆನ್ನೆ ಅಪ್ಪೈಲ್ಲ ಅಂಗ್‌ಡಿಗೆ ಬಂದಿದ್ರಲ ಯಾಕೆ ಗೊತ್ತಾ?'

'ಜವಳಿ ಗಿವಳಿ ತಗಳೂಕ್ಕೆ.'

'ಶ್ರೀನಿವಾಸಗೌಡರ ಮದುವೆ. ಮಂಡ್ಯದ ಎಂ.ಎಲ್.ಎ. ಕೆಂಪಣ್ಣನೋರು ಅಂತ ಅವ್‌ರೆ. ಭಾರಿ ಕುಳ. ಅವರ ಮಗಳು.'

ಇದನ್ನು ಕೇಳಿದ ಅವಳಿಗೆ ತಲೆ ಸುತ್ತಿಬಂದಂತೆ ಆಯಿತು. ಕುರ್ಚಿಯ ಹಿಂಭಾಗದ ಗೋಡೆಗೆ ತಲೆಯನ್ನು ಆನಿಸಿ ಒಂದು ನಿಮಿಷ ನಿಶ್ಚೇತನಳಾಗಿ

ಕುಳಿತಳು. ಅವಳಿಗೆ ತಲೆಸುತ್ತು ಬಂದಿದ್ದುದು ಬೆಟ್ಟಯ್ಯನವರಿಗೆ ತಿಳಿಯಲಿಲ್ಲ. ಅವರು ಹೇಳುತ್ತಿದ್ದರು: "ಮದುವೆ ಸೆಟ್ಲ್ ಆಗಿರೂದೇ ನಂಗೆ ಗೊತ್ತಿರ್ನಿಲ್ಲ. ನಿಮ್ಮ ಮದುವೆಯೇ ಆಯ್ತದೆ ಅಂತಿದ್ದೆ. ನಿಮ್ಮ ಅಪ್ಪಾಜಿ ಒಪ್ಕಳದೇ ಇದ್ರೂ ನೀವು ಮಾಡ್ಕ್ಯಭೌದು ಅಂತಿದ್ದೆ. ಮೇಲಗಿರಿಗೌಡ್ರಾದ್ರೂ ಮುಂದೆ ನಿಂತು ಮಾಡಭೌದು ಅಂತ ಅಂದಾಜ್ ಮಾಡ್ಕ್ಯಂಡಿದ್ದೆ. ಆಮ್ಯಾಲೆ ಗೌಡ್ರನ್ನೇ ಕೇಳ್ದೆ. 'ಬೆಟ್ಟಯ್ಯನೋರೇ, ಆ ಹುಡುಗಿ ತಂದ್ಕಳಾಕೆ ನಾನು ಇವತ್ತೂ ರಾಜಿ. ಅವಳ ಅಪ್ಪ ಅಣ್ಣ ಎಗೇನೆಷ್ಟ್ ಆಗಿದಾರೆ. ಅವಳ ಅಪ್ಪ, ನಾನ್ ಪ್ರಾಣಾನೇ ಕಣ ಕಂತೀನಿ ಅಂತ ಕುಂತದೆ. ಏನ್ ಮಾಡ್ತೀರಾ ಇದುಕ್ಕೆ? ಯಾವುದೂ ಅಹಿಂಸೆಯಿಂದ ಒಮ್ಮತದಿಂದ ಆಗಬೇಕು ನೋಡ್ರಿ. ಹಿಂಸೆಯಿಂದ ಆಗಬ್ಯಾಡ್ದು. ಮಹಾತ್ಮಾಜಿ ಏನಂತಿದ್ರು?' – ಅಂದ್ರು."

ಅವಳಿಗೆ ಈ ಯಾವ ಹಿನ್ನೆಲೆಯೂ ತಿಳಿಯಲಿಲ್ಲ. ಕೆದಕಿ ತಿಳಿಯುವ ಕುತೂಹಲವೂ ಹುಟ್ಟಲಿಲ್ಲ. ಆದರೆ ಆ ಬಗೆಗೆ ಯೋಚಿಸಕೂಡದೆಂದು ಹತ್ತಿಕ್ಕಿದರೂ, ಬಿಡದೆ, ಒಂದು ಪ್ರಶ್ನೆ ಮನಸ್ಸಿನಲ್ಲಿ ಎದ್ದು ನಿಲ್ಲುತ್ತಿತ್ತು: ಕಾಗದದಲ್ಲಿ ಬರೆದಿದ್ದಂತೆ ಶ್ರೀನಿವಾಸನ ಅಂತರಂಗವು ಈ ಜಾತಿಯ ಉಚ್ಚ ನೀಚ ವ್ಯತ್ಯಾಸವನ್ನು ಒಪ್ಪಿರಬಹುದು. ಆದರೆ ಈ ಮೂರು ನಾಲ್ಕು ತಿಂಗಳಿನಲ್ಲಿ ಅವನು ಬೇರೆ ಮದುವೆಗೆ ಹೇಗೆ ಒಪ್ಪಿದ? ಮೊನ್ನೆ ಅಂಗಡಿಗೆ ಅಪ್ಪ ಅಮ್ಮನ ಜೊತೆ ಅವನೂ ಬಂದಿದ್ದ. ಹುಡುಗಿಗೆ ತೆಗೆಯುವ ಸೀರೆಗೇ ಇರಬಹುದು. ಎಂದರೆ ಅವನಿಗೆ ನನ್ನ ನೆನಪು ಇಷ್ಟು ಬೇಗ ಹಾರಿಹೋಯಿತೆ?

ತಿರಸ್ಕಾರದಿಂದ ಅವಳ ಮೈ ಉರಿಯಿತು. ಮುಂದೆ ಬೆಟ್ಟಯ್ಯನವರು ಏನು ಹೇಳಿದರೆಂಬುದು ಅವಳಿಗೆ ಕೇಳಲೇ ಇಲ್ಲ. ಹತ್ತು ಗಂಟೆಗೆ ಅಸೆಂಬ್ಲಿಗೆ ಹೋಗಬೇಕಾಗಿದ್ದುದರಿಂದ ಅವರು ಸ್ವಲ್ಪ ಹೊತ್ತಿನಲ್ಲಿ ಹೊರಟುಹೋದರು.

ಮನಸ್ಸು ಕೋಪದಿಂದ ಕುದಿಯುತ್ತಿತ್ತು. ಆ ದಿನ ಅಂಗಡಿಯಲ್ಲಿರುವುದು ಸಾಧ್ಯವಾಗಲಿಲ್ಲ. ಮೈಸರಿ ಇಲ್ಲ. ಜ್ವರ ಬಂದಿದೆ ಎಂದು ಹೇಳಿ, ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಹೊರಗೆ ಬಂದಳು. ಅವನು ಇಲ್ಲಿ ತಂದೆಯ ಮನೆಯಲ್ಲಿ ಇರುತ್ತಾನೆ. ನೇರವಾಗಿ ಹೋಗಿ ಅವನ ಮುಂದೆ ನಿಲ್ಲಬೇಕು. 'ಇಷ್ಟು ಹಗುರವಾಗಿದ್ದೆನೆ ನಾನು?' – ಎಂದು ಕೇಳಬೇಕು. ಉತ್ತರ ಹೇಳದಿದ್ದರೆ ಷರಟಿನ ಕಾಲರ್ ಹಿಡಿದು ಜಗ್ಗಿ, 'ಮಾತಾಡು' ಎನ್ನಬೇಕು. ಅವನ ತಾಯಿ, ತಂದೆ, ಮಗನ ಪಕ್ಷ ವಹಿಸಬಹುದು, ವಹಿಸುತ್ತಾರೆ. ಗಾಂಧಿಯ ಆಶ್ರಮದಲ್ಲಿದ್ದ ನೀವು ಇದರ ನ್ಯಾಯ ಅನ್ಯಾಯಗಳನ್ನು ಹೇಳಿ ಅಂತ ಅವನ ಅಪ್ಪನನ್ನೇ ಕೇಳಬೇಕು – ಎಂದುಕೊಂಡು ಹೈಗ್ರೌಂಡ್ಸ್ ಕಡೆಗೆ ನಡೆದಳು. ನಾಲ್ಕು ಫರ್ಲಾಂಗ್

ನಡೆಯುವ ಹೊತ್ತಿಗೆ ಸ್ವಲ್ಪ ಆಯಾಸವೆನಿಸಿತು. ಹತ್ತಿರ ಇದ್ದ ಒಂದು ಮೆಟ್ಟಿಲು ಗಲ್ಲಿನ ಮೇಲೆ ಕುಳಿತಳು. ಅಳು ಬರುವಂತಾಯಿತು. ಆದರೆ ಅಳಕೂಡದೆಂದು ಹಟಮಾಡಿ ಅದನ್ನು ತಡೆದುಕೊಂಡಳು. ಎದ್ದು ಹೋಗಿ ಅವನ ಮುಂದೆ ನಿಲ್ಲಬೇಕು. ಬೇಗ ಹೋಗಬೇಕು. ಒಂದು ರೂಪಾಯಿಯಷ್ಟು ಖರ್ಚಾದರೂ ಸರಿ, ಆಟೋರಿಕ್ಷಾ ಮಾಡಿಕೊಂಡು ಹೋಗಬೇಕು, ಎಂದುಕೊಂಡಳು. ಆದರೆ ಮೇಲೆ ಏಳಲು ಸಾಧ್ಯವೇ ಆಗಲಿಲ್ಲ. ಅವಳ ಮನಸ್ಸೇ ಅವಳಿಗೆ ಮೋಸ ಮಾಡುವಂತೆ ಒಂದು ತೆರನಾದ ನಿರುತ್ಸಾಹ ಮೂಡಿತು. ಸುಮ್ಮನೆ ಒಂದು ಗಂಟೆಗೂ ಮೀರಿ ಅಲ್ಲಿಯೇ ಕುಳಿತಳು. ಸ್ವಲ್ಪ ಹೊತ್ತಿಗೆ ಬೇರೊಂದು ವಿಚಾರ ಬಂತು. ನನ್ನನ್ನು ಮದುವೆಯಾಗುವುದಿಲ್ಲ ಅಂತ ಕೈಬಿಟ್ಟವನು ಬೇರೆ ಮದುವೆಯಾದರೇನು, ಬಿಟ್ಟರೇನು? ನಾನ್ಯಾಕೆ ಅವನ ಮುಂದೆ ನಿಂತು ಕೋಪ ತೋರಿಸಬೇಕು? ಕೋಪವೂ ಒಂದು ವಿಧವಾದ ದೈನ್ಯವೇ. ಈ ದೈನ್ಯ, ಈ ಭಿಕ್ಷೆ, ಈ ಅಂಗಲಾಚಿಕೆ ನನಗೆ ಬ್ಯಾಡ – ಎಂದುಕೊಂಡಳು. ತಕ್ಷಣ ಎದ್ದು, ತನ್ನ ಕೋಣೆಯ ಕಡೆಗೆ ಹೋಗುವ ಬಸ್ಸು ನಿಲ್ಲುವ ಜಾಗಕ್ಕೆ ನಡೆದಳು. ಕಾಲು ಗಂಟೆ ನಿಂತರೂ ಆ ಮಾರ್ಗದ ಬಸ್ಸು ಬರಲಿಲ್ಲ. ಈಗ ಕೋಣೆಗೆ ಹೋಗಿ ಏನು ಮಾಡಲಿ ಎಂಬ ಯೋಚನೆ ಬಂತು. ಅಲ್ಲಿಂದ ಸೀದಾ ಚಿಕ್ಕಪೇಟೆಗೆ ನಡೆದು ಅಂಗಡಿಗೆ ಬಂದಳು.

'ಹುಷಾರಿಲ್ಲ ಅಂದ್ರಲ್ಲಮ್ಮ?' – ಶೆಟ್ಟರು ಕೇಳಿದರು.

'ಕೋಡೋಪಿರಿನ್ ತಗಂಡೆ. ಸ್ವಲ್ಪ ವಾಸಿ ಅನ್ನಿಸ್ತು. ಸಾಯಂಕಾಲ ಬೇಗ ಹೋಗ್ತೀನಿ' – ಎಂದು ಹೇಳಿ ತನ್ನ ಕೆಲಸದ ಜಾಗಕ್ಕೆ ಹೋದಳು.

ಎಂಟು ದಿನದಲ್ಲಿ ಮದುವೆಯ ಚಿತ್ರ ಮತ್ತು ವೈಭವಗಳು ಪತ್ರಿಕೆಗಳಲ್ಲಿ ಬಂದಾಗ ಅವಳ ಮನಸ್ಸು ಮತ್ತೊಮ್ಮೆ ರೋಷಕ್ಕೆ ಸಿಕ್ಕಿತು. ಧಾರೆಯ ಮಂಟಪಕ್ಕೆ ಬೆಂಕಿ ಬಿದ್ದು ಈ ಗಂಡು ಹೆಣ್ಣುಗಳಿಬ್ಬರೂ ಸುಟ್ಟುಹೋಗಿ, ಪತ್ರಿಕೆಯಲ್ಲಿ ಈ ವರ್ತಮಾನ ಬರಬೇಕಾಗಿತ್ತು. ಅಥವಾ ಇವರಿಬ್ಬರೂ ಹನಿಮೂನಿಗೆಂದು ಊಟಿಗೋ ಮದರಾಸಿಗೋ ಹ್ಯಾಗೂ ಹೋಗುತ್ತಾರೆ. ಅಲ್ಲಿ ಒಂದು ಅಪಘಾತಕ್ಕೆ ಸಿಕ್ಕಿ ಸತ್ತರೆಂದು ಇದೇ ಪೇಪರಿನಲ್ಲಿ ಸುದ್ದಿ ಬರಬೇಕು – ಎಂದು ಆ ದಿನ ಸಂಜೆ ಎಲ್ಲ, ಮನಸ್ಸು ಬಯಸುತ್ತಿತ್ತು. ಮತ್ತೆ ಎಚ್ಚರವಾಯಿತು. ಎಂಥಹ ದೈನ್ಯ ನನ್ನದು! ನನಗೆ ಅಲ್ಲದವನ, ಸಲ್ಲದವನ ಯೋಚನೆ ಮಾಡುವ ನೀಚ ಬುದ್ಧಿ ಯಾಕೆ ಬೇಕು?– ಎನಿಸಿತು.

ಮರುದಿನ ಅಂಗಡಿಯಿಂದ ಪೇಟೆಯ ಕಾಲೇಜಿನ ಮುದ್ದೇಗೌಡರಿಗೆ ಫೋನ್ ಮಾಡಿ ಕೇಳಿದಳು: 'ನಾಳೆ ಬೆಳಗ್ಗೆ ಹನ್ನೊಂದು ಗಂಟೆ ಹೊತ್ತಿಗೆ ನಿಮ್ಮ ಲೈಬ್ರರಿಗೆ ಬರ್ತೀನಿ. ಒಂದಿಷ್ಟು ಪುಸ್ತಕ ಕೊಡುಸ್ತೀರ?'

'ಬನ್ನಿ' – ಅವರು ಹೇಳಿದರು.

'ನಿಮ್ಮ ಹೆಸರಲ್ಲಿ ನನಗೆ ಕೊಡಿಸಿದರೆ ನಿಮ್ಮ ಮೇಲೇನೂ ಆಕ್ಷೇಪ ಬರುಲ್ಲ ತಾನೆ?'

'ಯೋಚನೆ ಮಾಡಬೇಡಿ. ಹೆಚ್ಚೆಂದರೆ ನಮಗೂ ನಿಮಗೂ ಹೆಸರು ಕಟ್ಟ-ಯಾರು' – ಎಂದ ಅವರು ತಕ್ಷಣ ಮಾತನ್ನು ನಿಲ್ಲಿಸಿ ಅನುಚಿತ ನುಡಿದವರಂತೆ, 'ಸಾರಿ. ದಯವಿಟ್ಟು ಕ್ಷಮಿಸಿ. ಬನ್ನಿ ಕೊಡುಸ್ತೀನಿ' ಅಂದರು.

## ೨

ಅಪ್ಪ ತೋಟದಲ್ಲಿ ಯಾಕೆ ವಾಸಿಸುತ್ತಿದ್ದಾರೆ ಎಂಬ ಯೋಚನೆಗೆ ಉತ್ತರ ಸಿಕ್ಕಲಿಲ್ಲ. ಇಲ್ಲಿ ಇದ್ದ ಒಂದು ಒಪ್ಪತ್ತು ಒಂದು ಬೆಳಗ್ಗೆಯ ಅವರ ವರ್ತನೆಯನ್ನು ನೋಡಿದರೆ ಬಹುಬೇಗ ತಾಳ್ಮೆಗೆಡುತ್ತಿದ್ದಾರೆ. ಮನೆಯಲ್ಲೂ ಹೀಗೆ ಮಾಡಿ ಜಗಳವಾಡಿರಬಹುದು. ವೆಂಕಟೇಶನೂ ಸಿಟ್ಟು ಮಾಡಿಕೊಂಡು ಎದುರು ಜವಾಬು ಕೊಟ್ಟಿರಬಹುದು. ಅವನ ಹೆಂಡತಿಗೆ ಇವರ ಸಿಟ್ಟು ತಡೆಯದೆ ಇರಬಹುದು. ಜಯಮ್ಮ ಯಾವುದಕ್ಕೂ ಹೋಗದೆ ಸುಮ್ಮನೆ ಇದ್ದುಬಿಡುವ ಸ್ವಭಾವದವಳು. ಆದರೂ ಮನೆಯ ಸೊಸೆ ಎಂದ ಮೇಲೆ ಬುದ್ಧಿ ಯಾವಾಗ ಯಾವ ರೀತಿ ಬದಲಾಯಿಸುತ್ತೆಯೋ ಗೊತ್ತಿಲ್ಲ. ಅವರ ಆರೋಗ್ಯವೂ ಹೀಗೆ ಇದೆ–ಎಂದು ಅವಳು ಎರಡು ಮೂರು ದಿನ ಕೊರಗಿದಳು. ತಾನಾದರೂ ಒಂದು ದಿನ ಹೋಗಿ ನಿಜವಿಷಯವನ್ನು ತಿಳಿಯಬೇಕೆಂಬ ಆಲೋಚನೆ ಬಂತು. ಆದರೆ ಊರಿಗೆ ಹೋಗಲು ಮನಸ್ಸು ಬರುತ್ತಿಲ್ಲ. ವೆಂಕಟೇಶನಾದರೂ ಒಂದು ಸಲ ಬಂದು ನೋಡಿಕೊಂಡು ಹೋಗಬಹುದಾಗಿತ್ತು. ಕಾಗದವನ್ನಾದರೂ ಬರೆಯಬಹುದಾಗಿತ್ತು. ಬೆಟ್ಟಯ್ಯನವರ ಕೈಲಿ ವಿಚಾರಿಸಬಹುದಾಗಿತ್ತು. ಜಾತಿ ಪಂಥಗಳ ವಿಷಯದಲ್ಲಿ ಅವನ ಮನೋಭಾವ ತನಗೆ ತಿಳಿಯದುದಲ್ಲ. ಆದರೆ ಅಣ್ಣ ತಂಗಿ ಎಂಬ ಅಂತಃಕರಣವೇ ಇಲ್ಲದೆ ಅವನು ಹೀಗೆ ಉಪೇಕ್ಷೆ ಮಾಡಿದ್ದಾನೆ. ನಾನಾಗಿಯೇ ಹೇಗೆ ಊರಿಗೆ ಹೋಗುವುದು? ಈಗ ಮನೆಗೆ ಹೆಚ್ಚು ಕಡಿಮೆ ಅವನೇ ಯಜಮಾನ. ಹೋಗಿ ಅಲ್ಲಿ ಹೇಗೆ ಇರುವುದು, ಎಂದುಕೊಂಡು ಸುಮ್ಮನಾದಳು.

ಅವಳ ಹತ್ತಿರ ಇದ್ದ ಎರಡು ಹರಿಯದ ಸೀರೆಗಳನ್ನು ಬಿಟ್ಟರೆ ಚನ್ನಾದ ಬೇರೆ ಸೀರೆ ಇರಲಿಲ್ಲ. ಈ ಊರಿಗೆ ಬಂದಾಗ ಇದ್ದ ಹೋಲ್ಡಾಲ್ ಮತ್ತು ದುಪ್ಪಟಿಗಳಲ್ಲದೆ ಬೇರೆ ಹಾಸಿಗೆ ಇರಲಿಲ್ಲ. ಅಪ್ಪ ಕೊಟ್ಟ ನೂರ ಎಂಬತ್ತು

ರೂಪಾಯಿಯಲ್ಲಿ ಇಪ್ಪತ್ತು ಇಪ್ಪತ್ತು ರೂಪಾಯಿಯ ಎರಡು ಸೀರೆ, ಇಪ್ಪತ್ತೈದು ರೂಪಾಯಿಯ ಒಂದು ರಗ್ಗು, ಹತ್ತು ರೂಪಾಯಿಗೆ ಒಂದು ಕ್ವಿಲ್ಟ್, ಎರಡು ಲಂಗ ನಾಲ್ಕು ರವಿಕೆಗಳನ್ನು ಹೊಲಿಸಿಕೊಂಡಳು. ಏನಾದರೂ ಕಷ್ಟಕಾಲಕ್ಕಿರಲಿ ಎಂದು. ಉಳಿದ ದುಡ್ಡನ್ನು ಹತ್ತಿರವೇ ಇಟ್ಟುಕೊಂಡಳು.

ಅಪ್ಪ ಬಂದು ಹೋಗಿ ತಿಂಗಳಾಗಿತ್ತು.

ಅಸೆಂಬ್ಲಿ ನಡೆಯುತ್ತಿತ್ತು. ಒಂದು ದಿನ ಬೆಳಗಿನ ಎಂಟು ಗಂಟೆಗೇ ಎಂ.ಎಲ್.ಎ. ಹಾಸ್ಟೆಲಿಗೆ ಹೋಗಿ ಬೆಟ್ಟಯ್ಯನವರನ್ನು ಕಂಡು ಊರಿನ ವಿಷಯ ವಿಚಾರಿಸಿ, 'ಅಪ್ಪ ಯಾಕೆ ತೋಟದಲ್ಲಿದ್ದಾರೆ, ಅವರಿಗೆ ಪದೇ ಪದೇ ಯಾಕೆ ಸಿಟ್ಟು ಬರುತ್ತೆ?' ಎಂದು ಕೇಳಿದಳು.

'ಬುದ್ಧಿ ಕೈಟ್ಟವೆ ಅಂತಾರೆ. ಗುಡೀಲೇನದೆ ಪೂಜೆ ಮಾಡಾಕೆ, ಅದೊಂದು ಕಲ್ಲು ಅಂತಾರಂತೆ. ಸ್ವಲ್ಪ ರೇಗೂದು ಉಂಟು. ಒಂದೊಂದು ಸಲ ಈಗ ಒಂದು ತರಾ ಆಡ್ತಿರ್ತಾರೆ, ಆಮ್ಯಾಲೆ ಅದ ಮರ್ತು ಇನ್ನೊಂದ್ ತರ ಅಂತಾರೆ.'

'ಅವರಿಗೆ ನಿಜವಾಗಿಯೂ ಬುದ್ಧಿ ಕೆಟ್ಟಿದೆ ಅಂತೀರಾ?'

'ಕೈಟ್ಟಿಲ್ಲ. ಶಿರಚಲು ಅನ್ಸುತ್ತೈತೆ.'

'ನೀವು ಊರಿಗೆ ಹೋದಾಗ ನಮ್ಮಣ್ಣನ್ನ ಕಂಡು ಎಲ್ಲಾ ವಿಚಾರಿಸ್ಕಂಡು ಬರಬೇಕು. ಯಾವತ್ತು ಹೋಗ್ತೀರ?'

'ಶನಿವಾರ ಸಂಜೆಗೆ. ಭಾನುವಾರ ಅಸೆಂಬ್ಲಿಗೆ ರಜ ಇರ್ತೈತೆ.'

ಬೆಟ್ಟಯ್ಯನವರು ಬರಲಿ. ಅಲ್ಲಿನ ಸಮಾಚಾರ ತಿಳಿದುಕೊಂಡು ಊರಿಗೆ ಹೋಗಿ ಬರಬೇಕೆಂದು ಮನಸ್ಸಿನಲ್ಲಿ ಮಾಡಿಕೊಂಡಳು. ಹೋಗಿಬರಬೇಕು ಎಂದೇನೋ ಎನಿಸುತ್ತಿತ್ತು. ಆದರೆ ಇನ್ನೊಂದು ಸಂಕೋಚ ಕಾಡಲು ಶುರು ವಾಯಿತು. ಊರಿನಲ್ಲಿ ತಮ್ಮ ಮನೆ ಇರುವುದು ಬ್ರಾಹ್ಮಣರ ಕೇರಿಯ ಮಧ್ಯ ದಲ್ಲಿ. ಎದುರಿಗೆ ಐಯ್ಯಂಗಾರರ ಮನೆಗಳು. ಅಕ್ಕಪಕ್ಕದಲ್ಲಿ ತಮ್ಮವೇ ಸ್ಮಾರ್ತರು. ಕೇರಿಯನ್ನು ಪ್ರವೇಶಿಸುವಾಗಲೇ ಮಡಿ ಮಾಧ್ವರ ಸಂಸಾರಗಳು. ತಾನು ಬಸ್ಸು ಇಳಿದು ಮನೆಗೆ ಹೋಗುವಾಗಲೇ ಬ್ರಾಹ್ಮಣರ ಹೆಂಗಸರು ಗಂಡಸರು ಮಕ್ಕಳ ಕಣ್ಣುಗಳೆಲ್ಲ ತನ್ನ ಕಡೆಗೆ ತಿರುಗುತ್ತವೆ. ಸಂಕೋಚದಿಂದ ಮೈ ಕುಗ್ಗುವಂತೆ ಆಗುತ್ತದೆ. ಮನೆಗೆ ಹೇಗೆ ಹೋಗುವುದು? ಇಷ್ಟು ಹೊತ್ತಿಗೆ ಅವರೆಲ್ಲ ನನ್ನ ವಿಚಾರವಾಗಿ ಏನೇನು ಮಾತನಾಡಿಕೊಂಡಿರುತ್ತಾರೆಯೋ! ಎಷ್ಟೆಷ್ಟು ನಕ್ಕು ಲಗ್ಗೆ ಹೊಡೆದಿರುತ್ತಾರೆಯೋ!

ಇದುವರೆಗೂ ಇರದಿದ್ದ ಈ ಸಂಕೋಚ ಈಗೇಕೆ ನನಗೆ ಬಂತು? ಶ್ರೀನಿವಾಸ ನನ್ನ ಮದುವೆಯಾಗುವ ತೀರ್ಮಾನ ಮಾಡುವ ಮೊದಲೇ ಇಂತಹ ಯೋಚನೆ

ಬಂದಿತ್ತು. ಆದರೆ ಅದನ್ನು ಆಗ ಧೈರ್ಯವಾಗಿ ನಿವಾರಿಸಿಕೊಂಡಿದ್ದೆ. ಈಗೇಕೆ ಅದು ಮನಸ್ಸನ್ನು ಸುತ್ತಿದೆ? ಮನಸ್ಸಿಗೆ ಹೊಳೆಯಿತು. ಶ್ರೀನಿವಾಸನೊಡನೆ ಮದುವೆಯಾಗಿಯೇ ಆಗುತ್ತದೆಂಬ ಉತ್ಸಾಹದಲ್ಲಿ ಯಾವುದನ್ನೂ ಲೆಕ್ಕಿಸದೆ ಮುಂದೆ ನುಗ್ಗುವ ಧೈರ್ಯ ಬಂದಿತ್ತು. ಈಗ ಮುಂದೆ ನುಗ್ಗಿ ಸೋತಿದ್ದೇನೆ. ಆದುದರಿಂದ ಸಂಕೋಚ, ನಾಚಿಕೆಗಳು. ಆದರೆ ಸೋತವಳು ನಾನಲ್ಲವಲ್ಲ. ಅವನು ಸೋತ. ನಾನು ಒಂಟಿಯಾಗಿ ಉಳಿದೆ – ಎಂಬ ಸಮಾಧಾನ ಹುಟ್ಟಿದರೂ, ಈ ವ್ಯತ್ಯಾಸ ಮತ್ತು ಸೂಕ್ಷ್ಮಗಳನ್ನು ಜನ ಗುರುತಿಸುವುದಿಲ್ಲ. ಅವರಿಗೆ ತಿಳಿಯುವುದೂ ಇಲ್ಲ. ತಿಳಿದರೂ ಅವರ ಬುದ್ಧಿ ಒಪ್ಪಿಕೊಳ್ಳುವುದಿಲ್ಲ. ಅವರ ದೃಷ್ಟಿಯಲ್ಲಿ ಸೋತವಳು ತಾನು, ಎಂದುಕೊಂಡಳು.

ಸೋತವಳು ತಾನು – ಎಂಬ ಭಾವನೆ ಅವಳ ಮನಸ್ಸನ್ನು ಹಿಸುಕಿ ಹಿಂಡಿತು. ಅದಕ್ಕೆ ಸಿಕ್ಕಿ ತಣ್ಣಗಾದ ಮನಸ್ಸು ದಿನದಿನಕ್ಕೂ ಹೆಚ್ಚುಹೆಚ್ಚಾಗಿ ದುರ್ಬಲವಾಗುತ್ತಿತ್ತು. ಪರಿಣಾಮವಾಗಿ, ಊರಿಗೆ ಹೋಗಿ ಅಪ್ಪನನ್ನು ನೋಡುವ ಆಸೆಯಾದರೂ ಹೋಗುವ ಧೈರ್ಯ ಮಾತ್ರ ಬರುತ್ತಿರಲಿಲ್ಲ. ನಾನು ಎಡವಟ್ಟು ಕೆಲಸಮಾಡಿದೆ ಎಂದುಕೊಂಡಳು. ಶ್ರೀನಿವಾಸನ ಮೇಲೆ ಪ್ರಚಂಡ ಸಿಟ್ಟು ಬಂತು. ಶಾಪವೆಂಬುದು ನಿಜವಿದ್ದು, ತನಗೆ ಶಾಪ ಹಾಕುವ ಶಕ್ತಿ ಇದ್ದರೆ ಅವನಿಗೆ ಏನಾಗಬೇಕು? ಕೈಕಾಲು ಹೆಳವಾಗಿ....ತನಗೆ ತಾನೇ ಹೇಸಿ ಆ ಯೋಚನೆಯನ್ನು ಬದಿಗೆ ಸರಿಸಿದಳು. ಅವನನ್ನು ಶಪಿಸುವ ದೈನ್ಯ ನನಗೇಕೆ ಬಂತು? ತಪ್ಪು ಅವನದು. ತಲೆ ಎತ್ತಿ ನಡೆಯಬೇಕಾದವಳು ನಾನು. ಯಾರಿಗೂ ಹೆದರಕೂಡದು. ಬೆಂಗಳೂರಿನ ಮನೆಯ ಮಾಲೀಕ ಕೇಶವಯ್ಯಂಗಾರರು, ನೆರೆಮನೆಯ ಪದ್ಮನಾಭಾಚಾರ್ಯ ಫಲ್ಗು ಬಾಯಿಯವರ ಎದುರಿಗೆ ಹೇಗೆ ಹಟಮಾಡಿ ಅದೇ ಕೋಣೆಯಲ್ಲಿದ್ದೆನೋ ಆ ಹಟದಿಂದಲೇ ಊರಿಗೆ ಹೋಗಿ ಬರಬೇಕು. ನನ್ನ ಎದುರು ನಿಂತು ಮಾತನಾಡುವ ಧೈರ್ಯ ಯಾರಿಗಿದೆ ನೋಡಬೇಕು – ಎಂದುಕೊಂಡಳು.

ಮುಂದಿನ ಸೋಮವಾರ ಬೆಟ್ಟಯ್ಯನವರು ಮೊದಲ ಬಸ್ಸಿಗೆ ಬರುತ್ತಾರೆ. ಬಂದ ತಕ್ಷಣ ಅಸೆಂಬ್ಲಿಗೆ ಹೋಗಿರುತ್ತಾರೆ. ಸಂಜೆ ಎಂಟೂವರೆಯತನಕ ಅಂಗಡಿಯಲ್ಲಿರುವ ತಾನು ಶಾಸಕರ ಭವನಕ್ಕೆ ಹೋಗುವುದು ಬೇಡ. ಮಂಗಳವಾರ ಬೆಳಗ್ಗೆ ಎಂಟು ಗಂಟೆಯ ಹೊತ್ತಿಗೆ ಹೋಗಬೇಕು ಎಂದು ಮನಸ್ಸಿನಲ್ಲಿ ಮಾಡಿಕೊಂಡಳು.

ಮುಂದಿನ ಸೋಮವಾರ ಮಧ್ಯಾಹ್ನ ಹನ್ನೆರಡೂವರೆಯ ಹೊತ್ತಿಗೆ ಬೆಟ್ಟಯ್ಯನವರು ಅಂಗಡಿಗೆ ಫೋನು ಮಾಡಿ ಮಾತನಾಡಿದರು: 'ನಾನು ಊರೊಳಕ್ಕೇ

ಹ್ವಾಗಿದ್ದೆ. ನಿಮ್ಮ ಅಪ್ಪಾಜಿಗೆ ಹುಚ್ಚು ಹಿಡಿದ್ದೈತೆ. ನಾಕು ದಿನದಿಂದ ರೇಗಿದೆ. ತ್ವಾಟದ ಗುಡ್ಸಿಗೂ ಹೋಗಿದ್ದೆ. ಋಷಿಮುನಿಗಳ ಹಂಗೆ ಆಡ್ತಾರೆ. ನಿಮ್ಮಣ್ಣಯ್ಯ ಬಂದಿತ್ತು. ನಿಮ್ಮ ಇಶಯ ಅಂದೆ. ಖಂಡಿತ ನನ್ನ ತಂಗೀನ ಊರಿಗೆ ಕಳಿಸಿ. ಸೋಮವಾರ ಸಾಯಂಕಾಲದ ಮೋಟಾರಲ್ಲೇ ಬರುಕ್ಕೆ ಹೇಳಿ ಅಂದ್ರು. ನೀವು ಇವತ್ತೇ ಹ್ವಾಗಿ.'

ಅವರಿಗೆ ಫೋನಿನಲ್ಲಿ ಕೂಡ ಹೆಚ್ಚು ಮಾತನಾಡಲು ಬಿಡುವಿರಲಿಲ್ಲ. ಆ ದಿನ ಒಂದು ಮುಖ್ಯವಾದ ವಿಷಯ ಅಸೆಂಬ್ಲಿಯಲ್ಲಿ ಚರ್ಚೆಯಾಗುತ್ತಿದೆ. ವಿರೋಧ ಪಕ್ಷದವರು ಗಲಾಟೆ ಮಾಡ್ತಿದಾರೆ. ತಾವು ಒಳಗೇ ಇದ್ದು ಕೈ ಎತ್ತಬೇಕು. ಇನ್ನು ಎರಡು ದಿನಕ್ಕೆ ಅಸೆಂಬ್ಲಿ ಮುಗಿಯುತ್ತೆ. 'ನೀವು ಊರಿಗೆ ಹ್ವಾಗಿ. ಡೀಲೆ ಮಾಡಬ್ಯಾಡಿ' – ಎಂದು ಮತ್ತೆ ಹೇಳಿದರು.

ಮನಸ್ಸಿಗೆ ಗಾಬರಿಯಾಯಿತು. ತನ್ನ ತಂದೆಗೆ ಸಖ್ತ್ ಕಾಹಿಲೆಯಾಗಿದೆ – ಊರಿಗೆ ಹೋಗಬೇಕು ಎಂದು ಶೆಟ್ಟರಿಗೆ ಹೇಳಿ ಒಂದು ಆಟೋ ಮಾಡಿಕೊಂಡು ಕೋಣೆಗೆ ಹೋದಳು. ಎರಡು ಸೀರೆ ರೌಕೆ ಲಂಗಗಳನ್ನು ಮಡಿಸಿ ಒಂದು ಬ್ಯಾಗಿಗೆ ಹಾಕಿಕೊಂಡಳು. ರಾತ್ರಿಗೆಂದು ಇಟ್ಟಿದ್ದ ಅನ್ನ ಹುಳಿಗಳನ್ನು ಕಲಸಿ, ಕೆಳಗೆ ಮಲಗಿದ್ದ ಒಂದು ನಾಯಿಗೆ ಹಾಕಿ ಪಾತ್ರೆಯನ್ನು ತೊಳೆದಿಟ್ಟಳು. ಕೋಣೆಗೆ ಬೀಗ ಹಾಕಿಕೊಂಡು ಆಟೋ ಮಾಡಿಕೊಂಡು ಕಲಾಸಿಪಾಳ್ಯದ ಸ್ಟ್ಯಾಂಡಿಗೆ ಬಂದಳು. ಇನ್ನೂ ಒಂದೂವರೆ ಗಂಟೆ. ತಿರುಮಲಾಪುರದ ಮಾರ್ಗವಾಗಿ ತಿಪಟೂರಿಗೆ ಹೋಗುವ ಬಸ್ಸು ಹೊರಡುವುದು ಮೂರಕ್ಕೆ.

ಸಂಜೆ ಏಳರ ಸುಮಾರಿಗೆ ಊರಿನಲ್ಲಿ ಬಸ್ಸು ಇಳಿದು ನೇರವಾಗಿ ತನ್ನ ಮನೆಗೆ ಹೊರಟಳು. ಅವಳು ನಿರೀಕ್ಷಿಸಿದ್ದಂತೆ ಬ್ರಾಹ್ಮಣರ ಕೇರಿಯಲ್ಲಿ ಜಗುಲಿಗಳ ಮೇಲೆ ಕುಳಿತಿದ್ದವರೆಲ್ಲ ಅವಳ ಕಡೆಗೇ ತಿರುಗಿ ನೋಡಿದರು. ಕೆಲವರು ಸೂರುಕಟ್ಟಿನ ತನಕ ಓಡಿಬಂದು ನಿಂತರು. ಯಾವುದನ್ನೂ ಲಕ್ಷಿಸದೆ ಅವಳು ತನ್ನ ಪಾಡಿಗೆ ತಾನು ಮನೆಗೆ ಹೋದಳು. ಒಂದು ವರ್ಷದ ವೆಂಕಟೇಶನ ಮಗು ಒಳಗಿನ ತೊಟ್ಟಿಯಲ್ಲಿ ಅಳುತ್ತಿತ್ತು. ಗುರುತಿಲ್ಲದ ಇವಳು ಹತ್ತಿರ ಬಂದದ್ದನ್ನು ಕಂಡು ಥಟ್ಟನೆ ಕಿರುಚಿಕೊಂಡಿತು. ಒಳಗಿನಿಂದ ವೆಂಕಟೇಶ ಬಂದ. 'ಈಗ ಬಂದೆಯು?' – ಎಂದು ಕೇಳಿದ.

'ಚಿಕ್ಕಯ್ಯನೋರು ಫೋನು ಮಾಡಿದರು. ಅಪ್ಪ ಎಲ್ಲಿ?'

'ಅಪ್ಪ ಊರೊಳಕ್ಕೆ ಎಲ್ಲಿ ಬರ್ತಾನೆ? ಇರಭೌದು ತೋಟದ ಗುಡಿಸಲಲ್ಲಿ.'

'ಇದೇನು ಹೀಗಂತೀಯಲ?'

'ಏನು ಮಾಡಬೇಕು ಹೇಳು. ನನ್ನ ಮುಖ ಕಂಡ್ರೆ ನಾಗರಹಾವಿನ ಹಾಗೆ

ರೇಗ್ತಾನೆ. ಊರೊಳಿಕ್ಕೆ ಬರುಲ್ಲ. ನಾನು ಗುಡ್ಡ ಒಳಿಕ್ಕೆ ಬ್ಯಾಡ, ತ್ವಾಟದ ಹೊಳೆಬಾಗಿಲ ಒಳಗೆ ಕಾಲಿಟ್ರೆ ಕಡಿದು ಹಾಕಿಬಿಡ್ತೀನಿ ಅಂತಾನೆ. ನೆನ್ನೆ ಎದುರು ಮನೆ ಕುಪ್ಪಣ್ಣಯ್ಯಂಗಾರ್‍ರು, 'ಮಗೂನ ಎತ್ತಿಕಂಡು ಹೋಗಿ. ಅವನ ಮುಖ ನೋಡಿದ್ರೆ ಸುಮ್ಮನಾಗಭೌದು' ಅಂದ್‍ರು. ಹಾಗೇ ಕರ್‍ಕಂಡು ಹೋದೆ. 'ಇದು ನನ್ನ ಮಸ್ಮಗುವೇ ಅಲ್ಲ. ಇನ್ನು ಹತ್ತು ಹನ್ನೆರಡು ವರ್ಷಕ್ಕೆ ನನಗೆ ಮಸ್ಮಗು ಹುಟ್ಟುತ್ತೆ' ಅಂದ. 'ಇದ ಎತ್ಕ ಕ್ವಾ' ಅಂದ್ರೆ, 'ಕೆರಿಗೆ ತೆಗೆದು ಎಸೀತೀನಿ' – ಅಂದ."

'ಮನೋರೋಗದ ಆಸ್ಪತ್ರೆಗಾದ್ರೂ ಸೇರಿಸಿದ್ರೆ? ಬೆಂಗಳೂರಿಗೆ ಕರ್‍ಕಂಡ್ ಬಂದಿದ್ರೆ?'

'ಯಾರನ್ನೂ ಹತ್ರಕ್ಕೇ ಸೇರಿಸುಲ್ಲ.'

'ಯಾಕೆ ಹೀಗಾಯ್ತು ಇದು?'

ಅಷ್ಟರಲ್ಲಿ ಜಯಮ್ಮ ಅಡಿಗೆ ಕೋಣೆಯಿಂದ ಬಂದು ಒಳಬಾಗಿಲಿನಲ್ಲಿ ನಿಂತಿದ್ದಳು. ಅವಳು ಬಾಯಿ ಹಾಕಿದಳು: 'ಸತ್ಯಂಗೆ ಎಲ್ಲಾ ಸರಿಯಾಗಿ ಹೇಳಿ. ಯಾವುದನ್ನೂ ಮುಚ್ಚಿಟ್ಕಬ್ಯಾಡಿ. ಅವಳು ಏನಾದರೂ ಮಾಡಭೌದು. ಇದೇನು ನಿಂತ್ಕಂಡೇ ಇದೀಯ. ಒಳಗೆ ಬಂದು ಕೂತ್ಕ. ಕೈಕಾಲು ತೊಳ್ಕತ್ತೀಯಾ?'

ಅಷ್ಟರಲ್ಲಿ ಹೊರಗಿನ ಬಾಗಿಲಿನ ಹತ್ತಿರ ಮೂರು ನಾಲ್ಕು ಜನರು ಬಂದರು. ಎದುರು ಮನೆಯ ಕುಪ್ಪಣ್ಣಯ್ಯಂಗಾರರು, ಆಚೆ ಬೀದಿಯ ವೆಂಕಣ್ಣಾಚಾರ್‍ರು, ಜಿರಾಯಿತು ಸುಬ್ಬರಾಯರು ಮೊದಲಾಗಿ, ವೆಂಕಟರಮಣಯ್ಯನವರ ಮಗಳು ಬೆಂಗಳೂರಿನಿಂದ ಬಂದಿರುವುದನ್ನು ನೋಡುವ ಕುತೂಹಲದಿಂದ ಬಂದಿದ್ದರು. ಅದು ವೆಂಕಟೇಶನಿಗೆ ತಕ್ಷಣ ತಿಳಿಯಿತು. 'ಕುಪ್ಪಣ್ಣಯ್ಯಂಗಾರ್‍ರೇ, ಒಳಗೆ ಕರಡಿ ಕುಣೀತಿದೆ ಬನ್ನಿ. ಟಿಕೀಟ್ ಗಿಕೀಟ್ ಏನೂ ಇಲ್ಲ' ಎಂದ. ಅವರೆಲ್ಲರಿಗೂ ಪೆಚ್ಚಾಯಿತು. ಆದರೆ ಕುಪ್ಪಣ್ಣಯ್ಯಂಗಾರರು ದೇಶಾವರಿ ನಗುತ್ತಾ, 'ಸತ್ಯಮ್ಮ ಬಂತು ಅಂತ ಹೇಳಿದ್ರು. ನೋಡ್ಕಂಡ್ ಹೋಗಾಣ ಅಂತ ಬಂದೆ' ಎಂದರು.

'ಹಿಂದ್‍ಗಡೆ ಒಂದು ಕರಡಿ ಹಿಡ್‍ಕಂಡು ಬಂದಿದಾಳೆ ಅಂತ ಹೇಳ್ಲಿಲ್ವಾ ಯಾರೂ?' – ವೆಂಕಟೇಶ ಎಂದ: 'ಸತ್ಯ, ನೀನು ಒಳಕ್ಕೆ ನಡಿ.'

ಈಗ ಕುಪ್ಪಣ್ಣಯ್ಯಂಗಾರರಿಗೂ ಪೆಚ್ಚಾಯಿತು. 'ಅದಕ್ಯಾಕೆ ಸಿಟ್ಟು ಮಾಡ್ಕತ್ತೀರ? ನಿಮಗೂ ಪಾಪ. ತಂದೆಗೆ ಹೀಗಾಗಿದೆ ಅಂತ ಮನಸ್ಸಿಗೆ ಪಿರಚು. ನಮ್ಮ ಕೈಲಾದ್ದು ನಾವು ಮಾಡಾಣ ಅಂತ ಬಂದ್ವು. ಆಗಲಿ, ನಾಳೆ ಮಾತಾಡಾಣ. ಸತ್ಯಮ್ಮ ಸುಧಾರಿಸ್ಕಳ್ಲಿ' – ಎಂದು ಹೇಳಿ ಹಿಂತಿರುಗಿದರು. ಉಳಿದವರು ಅದಕ್ಕೆ ಮೊದಲೇ ಜಾರಿದ್ದರು.

ವೆಂಕಟೇಶ ಅಂದ: 'ಇಂಥ ಕೆಟ್ಟ ಬ್ರಾಹ್ಮಣರ ಮಧ್ಯೆ ನಾವು ಇರಬೇಕು. ಅಪ್ಪ ಬ್ಯಾರೆ ಹೀಗಾಗಿದಾನೆ. ಹ್ಯಾಗೆ ನಿಭಾಯಿಸ್ತೀಯ ಹೇಳು.'

'ಸತ್ಯ, ಒಳಗೆ ಬಂದು ಕೂತ್ಕ. ಮಾತಾಡಾಣ' – ಎಂದು ಜಯಮ್ಮ ಮತ್ತೆ ಹೇಳಿದಳು. ವೆಂಕಟೇಶ ಬೀದಿಯ ಬಾಗಿಲು ಮುಚ್ಚಿ ಅಗಳಿ ಹಾಕಿಕೊಂಡು ಬಂದ. ಸತ್ಯ ಬಚ್ಚಲುಮನೆಗೆ ಹೋಗಿ ಕೈ ಕಾಲು ತೊಳೆದು ಬಂದಳು. ಜಯಮ್ಮನೇ ಹೇಳಿದಳು: "ಮಗನ ಮದುವೆಯಾದರೆ ಗುಡಿಯ ಹಿಂದಿನ ಗೋಡೆ ಕಟ್ಟುಸ್ತೀನಿ ಅಂತ ಮೇಲಗಿರಿ ಹೆಂಡ್ತಿ ರಂಗಮ್ಮ ಹರಕೆ ಮಾಡಿಕಂಡಿದ್ಲಂತೆ. ಸರ್ಕಾರಿ ಇಂಜಿನಿಯರು ಬಂದು ಎಲ್ಲ ಕಟ್ಸಿದ್ರು. ಆಮೇಲೆ ಗೌಡರ ಮನೆ ಜೋರು ಪಂಚಾಮೃತ ಅಭಿಷೇಕ ಮಾಡ್ಸಿದ್ರು. ಅಭಿಷೇಕದ ಹಿಂದಿನ ದಿನ ಅವರು ಇವರ ಕೈಲಿ, 'ನಾನು ನಾಳೆಯಿಂದ ದೇವರ ಪೂಜೆ ಮಾಡಲ್ಲ. ಅದೊಂದು ಬರೀ ಕಲ್ಲು. ಜವಾಬ್ದಾರಿ ಇನ್ನು ನಿನ್ನ ಮ್ಯಾಲೆ' – ಅಂತ ಹೇಳಿ ಗುಡಿ ಬೀಗದ ಕೈಯನ್ನ ಮುಂದೆ ಎಸೆದರು. ನಾನು ಇನ್ನು ಮ್ಯಾಲೆ ತ್ವಾಟ ದಲ್ಲಿರ್ತೀನಿ. ನಂಗೆ ವಾನಪ್ರಸ್ಥ. ಅಲ್ಲೇ ಗುಡ್ಲು ಕಟ್ಕಸ್ಕತ್ತೀನಿ ಅಂತ ಅಲ್ಲೇ ಇರುಕ್ಕೆ ಶುರು ಮಾಡಿದ್ರು. ಜನಿವಾರಾನೇ ತೆಗೆದು ಹಾಕ್ತಿದ್ರಂತೆ. ದೇವಸ್ಥಾನಕ್ಕೆ ಹೋಗಿ ಎಡಗಡೆಯಿಂದ ಪ್ರದಕ್ಷಿಣೆ ಹಾಕಿ ಕಾಲುವೇಲಿ ಸ್ನಾನ ಮಾಡಿ ತ್ವಾಟಕ್ಕೆ ಹೋಗ್ತಿದ್ದರಂತೆ. ಒಂದು ದಿನ ಬೆಟ್ಟಯ್ಯನ್ನ ನೋಡುಕ್ಕೆ ಅಂತ ರಾತ್ರಿ ಹೊತ್ತು ಹೊಲೆಗೇರಿಗೆ ಹೋದರಂತೆ. ಅಲ್ಲಿಗೆ ಹೋಗಭೌದು, ಬಾರದು, ಅನ್ನೋ ತಿಳಿವಳಿಕೆಯೇ ಅವರಿಗೆ ತಪ್ಪಿಹೋಗಿತ್ತು ಅಂತ ಕಾಣುತ್ತೆ. ನಮಗೆ ಗೊತ್ತೇ ಇಲ್ಲ. ಹೊಲೆಮುಂಡೇಗಂಡರು ಇವರಿಗೆ ಸಗಣಿತೊಪ್ಪೇಲಿ ಹೊಡೆದು ನಾಯಿ ಛೂ ಬಿಟ್ಟು ಕಡಿಸಿದರಂತೆ. ನಾಯಿ ಕಡಿದಿರೂದೇ ರೇಗಿದೆ ಅಂತ ಕಾಣುತ್ತೆ. ಅದೇನು ಹುಚ್ಚುನಾಯೋ ಎಂಥದೋ ಗೊತ್ತಿಲ್ಲ. ನಿನ್ನ ನೋಡುಕ್ಕೆ ಬೆಟ್ಟಯ್ಯನ ಜೊತೆ ಬೆಂಗಳೂರಿಗೆ ಹೋದರಲ್ಲ, ಅಲ್ಲಿಂದ ಬಂದು ಒಂದು ತಿಂಗಳ ಮ್ಯಾಲೆ ಎಂಟು ಹತ್ತು ದಿನ ಆಯ್ತಲ್ವ, ಆಗಿನಿಂದ ಹುಚ್ಚು ರೇಗ್ತಾನೇ ಇತ್ತು. ಈಗ ಏಳೆಂಟು ದಿನದಿಂದ ವಿಪರೀತವಾಗಿದೆ."

ಸತ್ಯ ಕೇಳಿದಳು: 'ಈಗ ತೋಟದಲ್ಲೇ ಇರ್ತಾರೆಯೆ?'

'ಇರ್ತಾರೆ. ಇಲ್ಲಿದ್ರೆ ಅಲ್ಲೇ ಎಲ್ಲಾದ್ರೂ ತಿರುಗಾಡ್ತಾ ಇರ್ತಾರೆ' – ವೆಂಕಟೇಶ ಅಂದ.

'ನಡಿ, ನೋಡ್ಕಂಡು ಬರಾಣ.'

'ನಿಂಗೆಲ್ಲೋ ಬುದ್ಧಿ ಇಲ್ಲ. ಮೊದಲೇ ರಾತ್ರಿ ಹೊತ್ತು. ಈಗ ಹೋಗಿ ಏನು ಮಾಡೂದು? ಬೆಳಗ್ಗೆ ಹೋಗಾಣ.'

'ಇಲ್ಲ. ನಾನು ಈಗಲೇ ನೋಡಬೇಕು' – ಎಂದು ಅವಳು ಹಟ ಹಿಡಿದಳು.

ವಿಧಿ ಇಲ್ಲದೆ ಅವನು ಒಪ್ಪಿಕೊಂಡ. 'ಊಟ ಮಾಡ್ಕಂಡೇ ಹೋಗಿ ಬಾ. ಬಸ್ನಲ್ಲಿ ಬಂದು ಹಸಿವಾಗಿರುತ್ತೆ. ವಾಪಸ್ ಬರೂದು ಎಷ್ಟು ಹೊತ್ತಾಗುತ್ತೋ ಏನೋ' – ಎಂದು ಜಯಮ್ಮ ಬಲವಂತ ಮಾಡಿದಳು.

'ಅಪ್ಪ ಹೊಟ್ಟೆಗೆ ಏನು ಮಾಡ್ತಾನೆ?'

'ತ್ಯಾಟಕ್ಕೆ ಹೋದಾಗಿನಿಂದ ನಾವು ಬೇಸಿದ್ದು ಏನಾದ್ರೂ ಕೊಟ್ರೂ ತಿನ್ನಲ್ಲ. ಮನಸ್ಸು ಬಂದಾಗ ಅಲ್ಲೇ ಅಡಿಗೆ ಮಾಡ್ಕತ್ತಾರೆ. ಇಲ್ದೆ ಇದ್ರೆ ಫಲಾರ ಅಂತ ಅಲ್ಲೇ ಎಳೆಗಾಯಿ ಕೆಡವ್ ತಿಂತಾರೆ.'

ಅತ್ತಿಗೆಯ ಬಲವಂತಕ್ಕೆ ಅವಳು ಊಟಕ್ಕೆ ಎದ್ದಳು. ಅಡಿಗೆಮನೆಯಲ್ಲೇ ಜಯಮ್ಮ ಸತ್ಯಳಿಗೆ ಒಂದು ಮುತ್ತುಗದ ಎಲೆ ಹಾಕಿ ಎದುರಿನ ಗೋಡೆಯ ಹತ್ತಿರ ಎರಡು ಎಲೆ ಹಾಕಿದಳು. 'ಮೂರು ಎಲೆ ಯಾರ್ಯಾರಿಗೆ? ಇದನ್ನ ಇಷ್ಟು ದೂರ ಹಾಕಿದೀಯಲ. ಯಾಕೆ?' – ಸತ್ಯ ಕೇಳಿದಳು.

'ಇಲ್ಲಿ ನೀನು ಕೂತ್ಕ. ಅಲ್ಲಿ ಇವರು ನರಸಿಂಹ ಜೋಯಿಸರು ಕೂತ್ಕತಾರೆ.'

'ನರಸಿಂಹ ಜೋಯಿಸರು ಅಂದ್ರೆ ಯಾರು?'

'ದೇವರ ಪೂಜೆಗೆ ಅಂತ ಇವರು ಕರ್ಕಂಡ್‌ಬಂದ್ ಇಟ್ಕಂಡಿದಾರೆ. ತುಮಕೂರಿನೋರು. ದಿನಾ ಬೆಳಿಗ್ಗೆ ಗುಡಿಗೆ ಹೋಗಿ ಪೂಜೆ ಮಾಡಾದು ಅವರ ಕೆಲಸ. ಮನೇಲಿ ಊಟ ತಿಂಡಿ ಕೊಟ್ಟು ವರ್ಷಕ್ಕೆ ಒಂದು ಜೊತೆ ಪಂಚೆ, ಎರಡು ಚೌಕ ಒಂದು ನೂರು ರೂಪಾಯಿ ಕೊಡೋದು. ಮಗು ಗಿಗು ಆಡುಸ್ತಾರೆ. ಒಳ್ಳೆಯೋರು.'

ಸತ್ಯ ಬಂದಾಗ ಅವರು ಆಗ ತಾನೆ ಹಸುವಿನ ಕೊಟ್ಟಿಗೆಯಲ್ಲಿ ಸಂಧ್ಯಾವಂದನೆಗೆ ಕುಳಿತಿದ್ದರು. ವೆಂಕಟೇಶ ಹೋಗಿ ಅವರನ್ನು ಊಟಕ್ಕೆ ಕೂಗಿ ಬಂದ. ಊಟಕ್ಕೆ ಕರೆಯುವತನಕ ಗಾಯತ್ರಿ ಮಾಡುವುದು ಅವರ ಪದ್ಧತಿ. ಕೊನೆಯ ಆಚಮನ ಮುಗಿಸಿ ಸಂಧ್ಯಾವಂದನೆಯ ತಟ್ಟೆಯನ್ನು ಹಿತ್ತಿಲ ಬಾಳೆಗಿಡಕ್ಕೆ ಚೆಲ್ಲಿ ಅವರು ಅಡಿಗೆ ಮನೆಗೆ ಬಂದರು. ಅರವತ್ತು ಅರವತ್ತೈದರ ವಯಸ್ಸು. ಹಣೆಯ ಗಂಧಾಕ್ಷತೆಯ ಮೇಲೆ ಸಾಯಂಸಂಧ್ಯೆಯ ವಿಭೂತಿಪಟ್ಟೆ ಇಟ್ಟು ಭ್ರೂಮಧ್ಯೆ ಎದ್ದು ಕಾಣುವಂತೆ ಕುಂಕುಮ ಹಚ್ಚಿದ್ದಾರೆ. ಕೆಂಪಂಚಿನ ಕಚ್ಚೆ ಪಂಚೆ ಉಟ್ಟು, ಮೇಲೆ ಇನ್ನೊಂದು ಪಂಚೆ ಹೊದೆದಿದ್ದಾರೆ. ಅವರು ಯಾವ ತಂಟೆಗೂ ಹೋಗದ ಮನುಷ್ಯರೆಂದು ಸತ್ಯಳಿಗೆ ಎನಿಸಿತು. ಅವಳನ್ನು ಕಂಡರೂ ಯಾರು ಎಂತು ಎಂದೂ ಏನೂ ಕೇಳಲಿಲ್ಲ. ಜಯಮ್ಮನೇ, 'ಇವಳೇ ನನ್ನ ನಾದಿನಿ. ಬೆಂಗಳೂರಲ್ಲಿದಾಳೆ ಅಂದಿದ್ನೆನಲ್ಲ, ಸತ್ಯಭಾಮೆ ಅಂತ' ಎಂದದ್ದಕ್ಕೆ, 'ಸಂತೋಷ ಅಮ್ಮ'

ಎಂದು ಪರಿಷೇಚನೆ ಮಾಡಿದರು. ವೆಂಕಟೇಶ ಶರಟು ಹಾಕಿಕೊಂಡೇ ಅವರ ಪಕ್ಕದ ಎಲೆಯಲ್ಲಿ ಕುಳಿತ. ಮಗುವಿನ ಕೈಗೆ ಒಂದು ರೈಲುಬಂಡಿ ಕೊಟ್ಟ ಜಯಮ್ಮ ಬಡಿಸಿದಳು. ಸತ್ಯ ಇದುವರೆಗೂ ಅತ್ತಿಗೆಯನ್ನು ಸರಿಯಾಗಿ ನೋಡಿರಲಿಲ್ಲ. ಈಗ ಊಟಕ್ಕೆ ಬಡಿಸುತ್ತಿರುವಾಗ ಕಣ್ಣಿಗೆ ಬಿತ್ತು: ಅವಳು ಐದು ಆರು ತಿಂಗಳ ಬಸುರಿಯಾಗಿದ್ದಾಳೆ. ಕಿವಿಯಲ್ಲಿ ಥಳಥಳನೆ ಹೊಳೆಯುವ ವಜ್ರದ ಓಲೆ, ಮೂಗಿಗೆ ವಜ್ರದ ಬೇಸರಿ ಇಟ್ಟುಕೊಂಡಿದ್ದಾಳೆ. ಅವನ್ನು ವೆಂಕಟೇಶ ಹೊಸದಾಗಿ ಮಾಡಿಸಿರಬಹುದು ಎಂದುಕೊಂಡಳು.

ಊಟವಾದ ತಕ್ಷಣ ಸತ್ಯ ತೋಟಕ್ಕೆ ಹೊರಟುನಿಂತಳು. ಕೈಲಿ ಟಾರ್ಚು ಹಿಡಿದು ವೆಂಕಟೇಶ ಜೊತೆಗೆ ಬಂದ. ಬ್ರಾಹ್ಮಣರ ಕೇರಿಯಲ್ಲಿ ಆಗಲೇ ಎಲ್ಲರೂ ಮಲಗಿದ್ದರು. ಕೋಟೆಯ ಎರಡನೆಯ ಸಂದಿಯಿಂದ ಹಾಯ್ದು ದೇವಸ್ಥಾನದ ಹಾದಿಯನ್ನು ಎಡಕ್ಕೆ ಬಿಟ್ಟು ಅವರು ತಮ್ಮ ತೋಟದ ದಾರಿ ಹಿಡಿದರು. ಸತ್ಯಳಿಗೆ ಸಹ ಕತ್ತಲೆಯಲ್ಲಿಯೂ ಹೆಜ್ಜೆ ಎಳೆದುಕೊಂಡು ಹೋಗುವಷ್ಟು ಪರಿಚಿತವಾದ ದಾರಿ ಅದು. ಒಂದು ಗದ್ದೆಯನ್ನು ದಾಟಿ ಗಾಣಿಗರ ತೋಟದ ಓಣಿಯನ್ನು ಹಾಯ್ದು ಅವರು ತಮ್ಮ ತೋಟದ ಹೊಳೆಬಾಗಿಲು ತಲುಪಿದಾಗ ಗುಡಿಸಿಲಿನ ಒಳಗೆ ಬೆಂಕಿ ಉರಿಯುತ್ತಿರುವ ಗುರುತು ಕಾಣಿಸಿತು. 'ಅಪ್ಪ ಈಗ ಅಡಿಗೆ ಮಾಡಿಕೊತ್ತಿರಭೌದು' – ಎಂದು ಹೇಳಿ ವೆಂಕಟೇಶ ಮೆಲ್ಲಗೆ ದೊಡ್ಡ ತಡ್ಡಲು ತೆಗೆದ. ಅವಳು ಒಳಗೆ ಬಂದನಂತರ ಅದನ್ನು ಮುಚ್ಚಿ ನಡೆದ. ಇದುವರೆಗೂ ಮುಂದೆ ನಡೆಯುತ್ತಿದ್ದ ಅವನು ಈಗ ಅವಳನ್ನು ಮುಂದೆ ಬಿಟ್ಟು ತಾನು ಹಿಂದೆ ಹಿಂದೆ ಬರತೊಡಗಿದ. ಹತ್ತಿರ ಹೋದಂತೆ ಕೇಳಿಸಿತು: ಗುಡಿಸಿಲಿನ ಒಳಗಿನಿಂದ ಗಟ್ಟಿಯಾಗಿ ಹವನದ ಮಂತ್ರ ಹೇಳುತ್ತಿದ್ದಾರೆ:

ಓಂ ಸುಸಮಿದ್ಧಾಯ ಶೋಚಿಷೇ ಘೃತಂ ತೀವ್ರಂ ಜುಹೋತನ।
ಅಗ್ನಯೇ ಜಾತವೇದಸೇ ಸ್ವಾಹಾ।

ಗುಡಿಸಲು ಹತ್ತಿರವಾದಂತೆ ವೆಂಕಟೇಶ, 'ನೀನೇ ಮೊದಲು ಬಾಗಿಲು ತೆಗೆದು ಮಾತಾಡಿಸು' ಎಂದು ಮೆಲ್ಲನೆ ಹೇಳಿದ. ಸತ್ಯಳಿಗೆ ಭಯವಿರಲಿಲ್ಲ. ಅಣ್ಣ ಹೀಗೆ ಯಾಕೆ ಹೆದರುತ್ತಾನೆಂಬುದು ಅವಳಿಗೆ ಇದುವರೆಗೂ ತಿಳಿಯಲಿಲ್ಲ. ಧೈರ್ಯವಾಗಿ ಹೋಗಿ ಬಾಗಿಲಿನ ಎದುರು ನಿಂತಳು. ಮಂತ್ರ ಸ್ಪಷ್ಟವಾಗಿ ಕೇಳುತ್ತಿತ್ತು:

ಓಂ ತಂ ತ್ವಾ ಸಮಿದ್ಭಿರಂಗಿರೋ ಘೃತೇನ ವರ್ಧಯಾಮಸಿ।
ಬೃಹಚ್ಛೋಚಾ ಯವಿಷ್ಠ್ಯ ಸ್ವಾಹಾ।

ಅದು ಸತ್ಯಳು ಚಿಕ್ಕ ವಯಸ್ಸಿನಲ್ಲಿ ಕೇಳಿದ್ದ ಮಂತ್ರವೇ. ರಾಗವಾಗಿ ಸ್ಪಷ್ಟ ಉಚ್ಚಾರದಿಂದ ಹೇಳುತ್ತಿದ್ದಾರೆ. ಸ್ವರ, ಉದಾತ್ತ, ಅನುದಾತ್ತ, ಸ್ವರಿತಗಳಲ್ಲಿ

ವರ್ಣ, ಸ್ವರ, ಮಾತ್ರೆ, ಬಲಗಳಲ್ಲಿ ಸಾನು, ಸಂತಾನಗಳಲ್ಲಿ ಸ್ವಲ್ಪವೂ ದೋಷ ವಿಲ್ಲ. ಅಲ್ಲೇ ನಿಂತು ಅವರ ಗಮನವನ್ನು ವಿಚಲಿತಗೊಳಿಸದೆ ಕೇಳಬೇಕೆನಿಸು ವಂತಿತ್ತು. ಸತ್ಯ ಹಾಗೆಯೇ ನಿಂತಳು. ತುಸು ದೂರದಲ್ಲಿ ವೆಂಕಟೇಶ ನಿಂತ. ಸ್ವಲ್ಪ ಹೊತ್ತಿನಲ್ಲಿ ಒಳಗಿನಿಂದ ಮಂತ್ರ ನಿಂತಿತು. ಮತ್ತೆ ಯಾವ ಶಬ್ದವೂ ಕೇಳಿಸಲಿಲ್ಲ. ಸತ್ಯ ಮೆಲ್ಲನೆ ಅರೆಮುಚ್ಚಿದ್ದ ಬಾಗಿಲನ್ನು ತಟ್ಟಿದಳು.

ಒಳಗಿನಿಂದ ಅವರು ಗುಡುಗಿದರು: 'ಯಾರದು? ಬ್ರಹ್ಮದಂಡ ಮಂತ್ರಿಸಿ ಬಿಟ್ಟೇನು.'

'ನಾನು ಅಪ್ಪ, ಸತ್ಯ.'

'ಸತ್ಯ? ಸತ್ಯಯುಗದಲ್ಲಿ ಹದಿನಾರು ಕಳೆ. ಧರ್ಮ ಪರಿಪೂರ್ಣವಾಗಿರುವ ಯುಗ. ಈ ವಸಿಷ್ಠ ಬ್ರಹ್ಮರ್ಷಿ ಸತ್ಯಯುಗದವನು. ಒಳಗೆ ಬಾ.'

ಅವಳು ಬಾಗಿಲು ನೂಕಿದಳು. ಒಳಗೆ ಅವರು ನೆಲದ ಮಧ್ಯದಲ್ಲಿ ಮರಳು ಹರವಿ ಒಂದು ಪುಟ್ಟ ಹವನಕುಂಡ ಮಾಡಿದ್ದಾರೆ. ಪಕ್ಕದಲ್ಲಿ ಸಮಿತ್ತಿನ ಕಂತೆ. ಅಗ್ನಿಯು ಜ್ವಲಿಸುತ್ತಿದೆ. ಅದರ ಎದುರಿಗೆ ಇವರು ಕೌಪೀನಧಾರಿಗಳಾಗಿ ಕುಳಿತಿ ದ್ದಾರೆ. ಎಡಹೆಗಲಿನಿಂದ ಬಲಕಂಕುಳಿನ ಕೆಳಗೆ ಸೊಂಟದತನಕ ಹತ್ತು ಹದಿ ನೈದು ಜೊತೆಗಳಷ್ಟು ಜನಿವಾರವು, ಸುತ್ತಿದ ಹಸಿನೂಲಿನ ಲಡಿಯಂತೆ ಇಳಿಬಿದ್ದಿದೆ. ಮುಖದಲ್ಲಿ ಅಸ್ತವ್ಯಸ್ತವಾದ ಗಡ್ಡ ಮೀಸೆಗಳು. ಕ್ಷೌರ ಕಾಣದ ತಲೆಯ ಕೂದಲೂ ಅಸ್ತವ್ಯಸ್ತವಾಗಿದೆ.

'ಯಾವ ಲೋಕದಿಂದ ಬಂದೆ?' – ಅವರು ಕೇಳಿದರು.

'ಅಪ್ಪ, ನಾನು ಸತ್ಯ ಅಲ್ಲವೇ? ಬೆಂಗಳೂರಿಂದ ಬಂದೆ.'

'ಅತಲ ವಿತಲ ಸುತಲ ತಲಾತಲ ಮಹಾತಲ ರಸಾತಲ ಪಾತಾಲ ಅಂತ ಕೆಳಗೆ ಏಳು ಲೋಕಗಳು, ಮೇಲೆ ಏಳು ಲೋಕಗಳು. ನೀನು ಬಂದಿದ್ದೆಲ್ಲಿಂದ? ಸತ್ಯಲೋಕದಿಂದ ಅಂದೆ ಅಲ್ಲವೆ?'

'ಹೌದು.'

'ಒಳಗೆ ಬಂದು ಕೂತುಕೊ.'

ಸತ್ಯ ಒಳಗೆ ಹೆಜ್ಜೆ ಇಟ್ಟಳು. ಹಿಂತಿರುಗಿ ನೋಡಿ, 'ವೆಂಕಟೇಶ, ಬಾ' – ಎಂದಳು. ಆ ಹೆಸರು ಕೇಳಿದುದೇ ತಡ, ಅವರು ರಾಂಗ್ ಆಗಿಬಿಟ್ಟರು. 'ಆ ಚಾಂಡಾಲ ನನ್ನ ಆಶ್ರಮಕ್ಕೆ ಬಂದರೆ ಅಪವಿತ್ರವಾಗುತ್ತೆ. ಅವನು ಹೋಗದಿದ್ದರೆ ಆಗ್ನೇಯಾಸ್ತ್ರ ಬಿಡ್ತೀನಿ' – ಎಂದು, ಹವನದಲ್ಲಿ ಉರಿಯುತ್ತಿದ್ದ ಒಂದು ಕೊಳ್ಳಿಕೆಯ ತುದಿಯನ್ನು ಹಿಡಿದು ಗುಡಿಸಲಿನ ಹೊರಗೆ ನುಗ್ಗಿದರು. ವೆಂಕಟೇಶ ಕಂಗಾಲಾಗಿ ಓಡಿದ. ಸತ್ಯ ಹಿಂದೆಯೇ ಬಂದು, 'ಅಪ್ಪ, ನಿನಗೆ ಇಷ್ಟವಿಲ್ಲವೆ

ಇದ್ದರೆ ಅವನು ಮನೆಗೆ ಹೋಗಲಿ. ಹಾಗೆ ಯಾಕೆ ಸಿಟ್ಟು ಮಾಡ್ಕತೀಯ? ವೆಂಕಟೇಶ, ನೀನು ಮನೆಗೆ ಹೋಗು. ನನ್ನ ವಿಷಯ ಯೋಚನೆ ಮಾಡಬ್ಯಾಡ. ನಮ್ಮಪ್ಪ ನನ್ನ ಸುಖವಾಗಿ ನೋಡ್ಕತ್ತಾನೆ' ಎಂದಳು. ವೆಂಕಟೇಶ ದೂರ ನಿಂತ. 'ನೀನು ಹೋಗು. ನಾನಿಲ್ಲಿರ್ತೀನಿ' – ಎಂದು ಅವಳು ಮತ್ತೆ ಹೇಳಿದಳು. ಅವನು ಟಾರ್ಚು ಹಾಕಿಕೊಂಡು ಹೊರಟುಹೋದ.

'ಅಪ್ಪ, ಒಳಗೆ ಕೂತುಕೊ ಬಾ. ನಿನ್ನ ನೋಡುಕ್ಕೆ ಅಂತ ನಾನು ಬಂದಿದೀನಿ.'

'ಬಂದದ್ದು ಒಳ್ಳೇದಾಯ್ತು. ಅರುಂಧತಿ ಆಶ್ರಮದಲ್ಲಿಲ್ಲ. ಭೂಲೋಕದಲ್ಲಿ ಒಂದು ಯಾಗವಾಗ್ತಿದೆ. ಹವಿಸ್ಸು ಸ್ವೀಕರಿಸುಕ್ಕೆ ಇಂದ್ರ ಹೋಗಿದಾನೆ. ಆದರೆ ವಸಿಷ್ಠ ಇಲ್ಲದೆ ಇಂದ್ರ ಹವಿಸ್ಸು ಸ್ವೀಕರಿಸೂ ಹಾಗಿಲ್ಲವಲ್ಲ. ನಾನು ಹೇಳ್ತೀನಿ ಕೇಳು. ಈ ದೇವತೆಗಳೆಲ್ಲ ಕೀಳು ಮಟ್ಟದೋರು. ಅಂತ್ಯಜರು ಅಂದ್ರೆ ಅವರೇ. ಅವರನ್ನ ಉಪಾಸನೆ ಮಾಡೋರೂ ಕೀಳರೇ. ಬ್ರಹ್ಮರ್ಷಿಗಳೇ ಮೇಲಿನೋರು. ಒಳಗೆ ನಡಿ. ನಿನಗೆ ಹೇಳಿಕೊಡ್ತೀನಿ' – ಎಂದು ಕೈಹಿಡಿದು ಒಳಗೆ ಕರೆದುಕೊಂಡು ಹೋದರು. ಅವಳನ್ನು ಅಗ್ನಿಯ ಒಂದು ಭಾಗಕ್ಕೆ ಕುಳ್ಳಿರಿಸಿ ತಾವು ಎದುರು ಭಾಗದಲ್ಲಿ ಕುಳಿತರು. ಅನಂತರ ಏನೋ ನೆನಪಿಕೊಂಡು, 'ನಿನಗೆ ಬ್ರಹ್ಮೋಪದೇಶ ವಾಗಿದೆಯೆ? ಬ್ರಾಹ್ಮಣನಲ್ಲದೋನು ಅಗ್ನಿ ಔಪಾಸನೆ ಹೇಗೆ ಮಾಡ್ತಾನೆ?' ಎಂದರು. 'ತಡಿ, ಉಪದೇಶ ಮಾಡ್ತೀನಿ' – ಎಂದು ಮೇಲೆ ಎದ್ದು, ಗೂಟಕ್ಕೆ ತಗುಲಿಹಾಕಿದ್ದ ಕೈಚೀಲ ತೆಗೆದು, ಅದರಿಂದ ಒಂದು ಒಂಟಿ ಜನಿವಾರವನ್ನು ಹೊರಕ್ಕೆ ತೆಗೆದರು. 'ಇಲ್ಲಿ ಬಾ' ಎಂದು ಅವಳ ತೋಳು ಹಿಡಿದು ಹತ್ತಿರ ಎಳೆದು ಕೊಂಡು, 'ಯಜ್ಞೋಪವೀತಂ ಪರಮಂ ಪವಿತ್ರಂ' ಎಂದು ರಾಗವಾಗಿ ಹೇಳಿ ಕೊಂಡು ಅವಳ ಎಡಹೆಗಲಿನಿಂದ ಬಲ ಕಂಕುಳ ಕೆಳಭಾಗಕ್ಕೆ ಧಾರಣೆ ಮಾಡಿಸಿ, 'ಮಗೂ, ಇಲ್ಲಿ ನನ್ನ ತೊಡೆ ಮೇಲೆ ಕೂತುಕೊ ಬಾ. ಗಾಯತ್ರೀ ಉಪದೇಶ ಮಾಡ್ತೀನಿ' ಎಂದು, ಎಂಟು ವರ್ಷದ ವಟುವನ್ನು ಎತ್ತುವಂತೆ ಅವಳ ತೋಳು ಗಳನ್ನು ಹಿಡಿದು ತಮ್ಮ ಕಡೆಗೆ ಎಳೆದುಕೊಂಡರು. ಮಂತ್ರಮುಗ್ಧಳಾದವಳಂತೆ ಸತ್ಯಳು ತಾನೇ ಅವರ ತೊಡೆಗಳ ಮೇಲೆ ಕುಳಿತಳು. ಎದುರಿನ ಅಗ್ನಿ, ತನ್ನ ಕೊರಳಿಗೆ ಬಿದ್ದ ಯಜ್ಞೋಪವೀತ, ಎಲ್ಲವೂ ಅವಳಿಗೆ ಪ್ರತ್ಯಕ್ಷ ಸತ್ಯಗಳಂತೆ ಕಂಡುವು. ಅವಳ ಬಲಗಿವಿಗೆ ತಮ್ಮ ತುಟಿಗಳನ್ನಿಟ್ಟು, 'ಓಂ ಭೂರ್ಭುವಸ್ವಃ ತತ್ಸವಿತೃವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದ-ಯಾತ್' ಎಂದು ಸ್ಪಷ್ಟವಾಗಿ ನಿಧಾನವಾಗಿ ಉಚ್ಚರಿಸಿ, 'ಉಪದೇಶವಾಯಿತು. ಇನ್ನು ಅಗ್ನಿಕಾರ್ಯ' ಎಂದು ಹೇಳಿ, 'ಓಂ ಭೂಃ ಅಗ್ನಯೇ ಸ್ವಾಹಾ' ಎಂಬ

ಮಂತ್ರಗಳನ್ನು ಹೇಳಿಸಿ ಒಂದೊಂದಾಗಿ ಸಮಿತ್ತುಗಳನ್ನು ಹಾಕಿಸಿದರು. ಅವಳನ್ನು ಮೇಲೆ ಎಬ್ಬಿಸಿ, 'ಅಗ್ನೇ ನಯ ಸುಪಥಾರಾಯೇ ಅಸ್ಮಾನ್। ವಿಶ್ವಾನಿ ದೇವ ವಯುನಾನಿ ವಿದ್ವಾನ್....' ಎಂದು ಹೇಳಿಸಿ ಅಗ್ನಿಗೆ ಪ್ರದಕ್ಷಿಣೆ ಮಾಡಿಸಿದರು. ಅನಂತರ ಅಪ್ಪಣೆ ಕೊಡುವಂತಹ ದೃಢವಾದ ಧ್ವನಿಯಲ್ಲಿ, 'ಇನ್ನು ನಾನು ಆಶ್ರಮದಲ್ಲಿಲ್ಲದಾಗ, ನಿಮ್ಮಮ್ಮ ಹೊರಗೆ ಹೋಗಿದ್ದಾಗ, ಅಗ್ನಿಯನ್ನು ನೋಡಿ ಕೊಳ್ಳುವುದು ನಿನ್ನ ಕರ್ತವ್ಯ' – ಎಂದು ಹೇಳಿ ಹೊರಗೆ ಎಲ್ಲೋ ಹೊರಟು ಹೋದರು.

ಸತ್ಯ ಆ ಮಂತ್ರಮುಗ್ಧ ಪರವಶತೆಯಲ್ಲಿ ಸುಮ್ಮನೆ ನಿಂತಿದ್ದಳು. ಎದುರಿನ ಅಗ್ನಿಯ ಜ್ವಾಲೆ ಕಡಿಮೆಯಾಗುತ್ತಿತ್ತು. ಅವಳು ಅದನ್ನೇ ನಿರುಕಿಸುತ್ತಿದ್ದಳು. ಓಂ ಭೂರ್ಭುವಸ್ಸ್ವಃ ತತ್ಸವಿತ್ರುವರೇಣ್ಯಂ ಎಂಬ ಮಂತ್ರವು ಅವಳಿಗೆ ಗೊತ್ತಿದ್ದುದೇ. ಈಗ ಅದು ಕಿವಿಯಲ್ಲಿ ಮೊಳಗುತ್ತಿತ್ತು. ಅಗ್ನಿಯ ಜ್ವಾಲೆ ಕಡಿಮೆಯಾಗುತ್ತಿತ್ತು. ನಿಂತಿದ್ದ ಅವಳು ಅಲ್ಲಿಯೇ ಕೂತು, ಪಕ್ಕದಲ್ಲಿದ್ದ ಸಮಿತ್ತುಗಳನ್ನು ಒಂದೊಂದಾಗಿ ತೆಗೆದು ಅಗ್ನಿಯನ್ನು ರಕ್ಷಿಸಲು ಆರಂಭಿಸಿದಳು.

೩

ಒಂದು ಗಂಟೆಗೂ ಮೀರಿ ಅವಳು ಅಗ್ನಿಯನ್ನು ಕಾಪಾಡುತ್ತಾ ಕುಳಿತಿದ್ದಳು. ಅಷ್ಟರಲ್ಲಿ ಸಮಿತ್ತು ಮುಗಿದುಹೋಯಿತು. ಜ್ವಾಲೆ ಕಡಿಮೆಯಾಗಿ ಅದು ಕ್ರಮೇಣ ನಂದುವಂತಾದಾಗ ಅವಳಿಗೆ ಹೊರಗೆಲ್ಲ ಕತ್ತಲು ಕವಿದಿರುವ ಅರಿವಾಯಿತು. ಗುಡಿಸಲಿನ ಒಳಗೆಲ್ಲ ಕಣ್ಣು ಹೊರಳಿಸಿ ನೋಡಿದಳು. ಒಂದು ಲಾಟೀನು ಕಾಣಿಸಿತು. ಎದ್ದು ಅದನ್ನು ತೆಗೆದು ಹೊತ್ತಿಸಿ ಇಟ್ಟಳು. ಹೊರಗೆ ಹೋದ ಅಪ್ಪನ ಸುಳಿವೇ ಇಲ್ಲ. ಗಾಳಿಗೆ ಬೀಸುವ ತೆಂಗಿನ ಗರಿಗಳ ಸುಂಯ್‌ಕಾರ ಕೇಳುತ್ತಿತ್ತು. ಲಾಟೀನನ್ನು ಕೈಲಿ ಹಿಡಿದು ಹೊರಗೆ ಬಂದು ಕತ್ತಲೆಯಲ್ಲಿ ಅಪ್ಪನ ಮಬ್ಬು ಆಕೃತಿ ಕಾಣುತ್ತದೆಯೋ ಎಂದು ಸುತ್ತಲೂ ದಿಟ್ಟಿಸಿ ನೋಡಿದಳು. ಏನೂ ಕಾಣಲಿಲ್ಲ. ಗುಡಿಸಲಿನ ಬಾಗಿಲು ಮುಚ್ಚಿಕೊಂಡು ಲಾಟೀನಿನ ಬೆಳಕಿನಲ್ಲಿ ಇಡೀ ತೋಟವನ್ನು ಒಂದು ಸುತ್ತು ಬಂದಳು. ಅವರ ಸುಳಿವು ದಕ್ಕಲಿಲ್ಲ. ಹೊಳೆಬಾಗಿಲ ಹತ್ತಿರ ನಿಂತು ಒಂದು ಸಲ ಗಟ್ಟಿಯಾಗಿ 'ಅಪ್ಪಾ' ಎಂದು ಕೂಗಿದಳು. ಉತ್ತರರೂಪವಾಗಿ ಯಾವ ಧ್ವನಿಯೂ ಸುಳಿವೂ ಬರಲಿಲ್ಲ. ಮತ್ತೆ ಎರಡು ಸಲ ಇನ್ನೂ ಎತ್ತರದ ಧ್ವನಿಯಲ್ಲಿ ಕೂಗಿದಳು. ಅದು ರಾತ್ರಿಯ ನಿಶ್ಶಬ್ದದಲ್ಲಿ ಕರಗಿಹೋಯಿತು. ಅವಳಿಗೆ ಇದುವರೆಗೂ ಹೆದರಿಕೆಯಾಗಿರಲಿಲ್ಲ. ಆದರೆ

ತನ್ನ ಕೂಗಿನಿಂದಲೇ ಈ ಪ್ರದೇಶದ ನೀರವತೆ ಮತ್ತು ಕತ್ತಲ ನಡುರಾತ್ರಿಯ ಅರಿವಾಗಿ ಮನಸ್ಸನ್ನು ಭಯವು ಪ್ರವೇಶಿಸಿತು. ತೋಟದ ಒಳಗೆ ತೆಂಗಿನಮರಗಳ ಅಸ್ಪಷ್ಟ ಕಪ್ಪು ಆಕೃತಿಗಳು ಗುಂವ್‌ಗುಡುತ್ತಿದ್ದುವು. ಲಾಟೀನು ಹಿಡಿದು ಸುಮ್ಮನೆ ಮನೆಗೆ ಹೊರಟುಹೋಗಿಬಿಡುವ ಮನಸ್ಸಾಯಿತು. ಆದರೆ ಅದೇನೋ, ಹೋಗುವುದು ಬೇಡವೆಂದು ಮನಸ್ಸಿನೊಳಗೆ ಹೇಳಿತು. ಈ ಅನಿರ್ಧಾರಿತ ಸ್ಥಿತಿಯಲ್ಲಿ ಸ್ವಲ್ಪ ಹೊತ್ತು ನಿಂತಿದ್ದಳು. ಇಷ್ಟರಲ್ಲಿ ಗುಡಿಸಲೊಳಗಿನ ಬೆಂಕಿ ಪೂರ್ತಿಯಾಗಿ ಆರಿಹೋಗುತ್ತದೆಂಬ ನೆನಪಾಗಿ ಅವಳು ಸರಸರನೆ ಗುಡಿಸಲಿನ ಕಡೆಗೆ ಹೆಜ್ಜೆ ಹಾಕಿದಳು. ತೆಂಗಿನ ಮರಗಳ ಕಪ್ಪು ಆಕಾರವಾಗಲಿ, ಲಾಟೀನಿನ ಬೆಳಕಿನಲ್ಲಿ ತನ್ನ ಎಡಪಕ್ಕದಲ್ಲಿ ದೊಡ್ಡದಾಗಿ ಎದ್ದು ನೆಲದ ಮೇಲೆ ಉರುಳುತ್ತಾ ಪ್ರತಿಯೊಂದು ಮರವನ್ನೂ ತಳ್ಳಿಕೊಂಡು ಚಲಿಸುವ ತನ್ನ ನೆರಳೇ ಆಗಲಿ ಮನಸ್ಸಿನಲ್ಲಿ ಭಯವನ್ನು ಹುಟ್ಟಿಸಲಿಲ್ಲ. ಒಂದು ಸಲ ಗುಡಿಸಲಿನ ಸುತ್ತ ಪರೀಕ್ಷಿಸಿದಳು. ಹಿಂಭಾಗದಲ್ಲಿ ಒಂದು ಒತ್ತೇಳು ಉದ್ದ ಮತ್ತು ತೊಡೆದಪ್ಪದ ಎಂಟು ಹತ್ತು ಕೊರಡುಗಳಿದ್ದುವು. ಒಂದೊಂದಾಗಿ ಅವುಗಳಲ್ಲಿ ಎರಡನ್ನು ಎತ್ತಿ ಗುಡಿಸಲಿನ ಒಳಕ್ಕೆ ತಂದು ಅವುಗಳ ಮೂತಿಯನ್ನು ಬೆಂಕಿಗೆ ಇಟ್ಟಳು. ಬೂದಿಯಲ್ಲಿ ಇನ್ನೂ ಕೆಂಡವಿತ್ತು. ಪಕ್ಕದಲ್ಲಿ ಉಳಿದಿದ್ದ ಸಮಿತ್ತುಗಳನ್ನು ಆರಿಸಿ ಅದಕ್ಕೆ ಹಾಕಿ ಬಾಯಿಂದ ಊದಿ ಹೊತ್ತಿಸಿದಳು. ಅದರ ಉರಿಗೆ ಈ ಎರಡು ಕೊರಡುಗಳ ಮೂತಿಗಳೂ ನಿಧಾನವಾಗಿ ಕವರಿಕೊಂಡುವು. ಅವನ್ನೇ ನೋಡುತ್ತಾ ಸುಮ್ಮನೆ ಕುಳಿತಳು. ಎಷ್ಟು ಹೊತ್ತಾದರೂ ಅಪ್ಪ ಬರಲಿಲ್ಲ. ಬರುವ ಸುಳಿವೂ ಕಾಣಲಿಲ್ಲ. ಸ್ವಲ್ಪ ಹೊತ್ತಿನಲ್ಲಿ ತೂಕಡಿಕೆ ಬಂತು. ಸುತ್ತ ತಿರುಗಿ ನೋಡಿದಳು. ತೆಂಗಿನ ಗರಿಯಲ್ಲಿ ಹೆಣೆದ ಒಂದು ತಡಿಕೆಯನ್ನು ಗೋಡೆಗೆ ಒರಗಿಸಿಟ್ಟಿತ್ತು. ಅದನ್ನು ಹಾಸಿ ಉರುಳಿಕೊಂಡಳು. ಒಂದು ನಿಮಿಷದಲ್ಲೇ ನಿದ್ರೆ ಹೊತ್ತಿತು.

ಎಚ್ಚರವಾಗುವ ಹೊತ್ತಿಗೆ ಬೆಳಕು ಹರಿಯುತ್ತಿತ್ತು. ಎಣ್ಣೆ ಮುಗಿದು ಲಾಟೀನು ಆರಿಹೋಗಿತ್ತು. ಎಚ್ಚರವಾದ ತಕ್ಷಣ ಗಾಬರಿಯಿಂದ ಎದ್ದು ಸುತ್ತ ತಿರುಗಿ ನೋಡಿದಳು. ತಾನು ಇಲ್ಲಿ ಇರುವ ಪರಿಸರ ಮತ್ತು ಕಾರಣಗಳು ಅರಿವಿಗೆ ಬರಲು ಒಂದು ನಿಮಿಷವೇ ಹಿಡಿಯಿತು. ಕೊರಡುಗಳು ಉರಿಯುತ್ತಾ ಉರಿದು ಕೊನೆಯ ಬೆಂಕಿ ಕೊನೆಯ ತುದಿಗಳಿಗೆ ಹತ್ತಿಕೊಂಡಿತ್ತು. ಈಗ ಏನು ಮಾಡಬೇಕೆಂಬುದು ತಿಳಿಯಲಿಲ್ಲ. ಎದ್ದು ಕೊಳದ ಹತ್ತಿರ ಹೋಗಿ ಒಂದು ಹಿಟ್ಟಿನ ಕಲ್ಲನ್ನು ಪಡದ ಕಲ್ಲಿನ ಮೇಲೆ ಕುಟ್ಟಿ ಪುಡಿ ಮಾಡಿ, ಅದರಿಂದ ಬೆರಳಿನಲ್ಲಿ ಹಲ್ಲು ಉಜ್ಜಿ ಮುಖ ಕೈ ಕಾಲು ತೊಳೆದಳು. ಗುಡಿಸಲಿನ ಹಿಂದೆ ಇದ್ದ ಕೊರಡುಗಳಲ್ಲಿ ಮತ್ತೆರಡನ್ನು ತಂದು ಅದರ ಮೂತಿಗಳನ್ನು, ಕಂತುಕೊಳ್ಳುತ್ತಿದ್ದ ತುಂಡುಗಳ

ಮೇಲಿಟ್ಟು ಹೊತ್ತಿಸಿದಳು. ತಾನು ಹೊರಗೆ ಹೋದರೂ ಅವು ಸರಿಯಾಗಿ ಉರಿದು ಅಗ್ನಿಯು ನಂದದಂತೆ ಇಟ್ಟಳು. ಗುಡಿಸಲಿನ ಬಾಗಿಲು ಹಾಕಿಕೊಂಡು ತೋಟದಿಂದ ಹೊರಗೆ ಬಂದಳು. ಅಪ್ಪ ಎಲ್ಲಿರಬಹುದು? ಯಾವುದಾದರೂ ಗದ್ದೆಯ ಬದುವಿನ ಮೇಲೋ ಕೆರೆಯ ಏರಿಯ ಮೇಲೋ ನಿದ್ರೆ ಇಲ್ಲದೆ ಕೂತಿರ ಬಹುದು. ಅಥವಾ ಮಲಗಿ ನಿದ್ರೆ ಮಾಡುತ್ತಿರಬಹುದು ಎನಿಸಿತು. ಸುತ್ತ ದೃಷ್ಟಿ ಆಡಿಸುತ್ತಾ ಕೆಳಭಾಗದ ಗದ್ದೆ, ಕಾಲುವೆಯ ಏರಿಗಳನ್ನೆಲ್ಲ ನೋಡಿಕೊಂಡು ಕೆರೆಯ ಏರಿಯ ಕಡೆಗೆ ನಡೆದಳು. ಸ್ವಲ್ಪ ದೂರದ ದಿಬ್ಬದ ಮೇಲೆ ದೇವಸ್ಥಾನ ನಿಂತಿತ್ತು. ಅದರ ಹತ್ತಿರ ಇರಬಹುದೆಂಬ ಕುತೂಹಲ ಹುಟ್ಟಿತು. ದೇವಸ್ಥಾನ ವನ್ನು ನೋಡಬೇಕೆಂಬ ಇಚ್ಛೆಯೂ ಅದರಲ್ಲಿ ಬೆರೆತಿತ್ತು. ದಿಬ್ಬವನ್ನು ಹತ್ತಿ ನೋಡಿದರೆ ಗುಡಿಯ ಬಲಭಾಗದ ಒಂದು ಕಲ್ಲುಚಪ್ಪಡಿಯ ಮೇಲೆ ಅವರು, ಕಟ್ಟಿದ ಲಂಗೋಟಿಯಲ್ಲಿ ಮಲಗಿ ನಿದ್ರಿಸುತ್ತಿದ್ದಾರೆ. ಈಗ ಸ್ಪಷ್ಟವಾಗಿ ಅವರ ಮೈಯನ್ನು ನೋಡಿದಳು. ಮೈಯ ಚರ್ಮವೆಲ್ಲ ಒಡೆದಿದೆ. ಎದೆ ತೋಳುಗಳೆಲ್ಲ ಕೃಶವಾಗಿ ಹೊಟ್ಟೆ ಒಳಕ್ಕೆ ಹೋಗಿದೆ. ಅಂಗಾಲು ಮತ್ತು ಬೆರಳ ಸಂದಿಗಳಿಗೆ ಮೆತ್ತಿದ್ದ ಕೊಚ್ಚೆಯು ಒಣಗಿಕೊಂಡಿವೆ.

ಇವರನ್ನು ಎಬ್ಬಿಸಬೇಕೋ ಹಾಗೆಯೇ ಬಿಡಬೇಕೋ ಎಂಬ ಅನುಮಾನ ಬಂದು ಎರಡು ನಿಮಿಷ ಅವಳು ಹಾಗೆಯೇ ನಿಂತಿದ್ದಳು. ಕೊನೆಗೆ ಅವರ ಭುಜ ಹಿಡಿದು ಅಲುಗಿಸಿ, 'ಅಪ್ಪ, ಏಳು, ಗುಡಿಸಲಿಗೆ ಬಂದು ಮಲಕ್ಕೊ' ಎಂದಳು. ಎಚ್ಚರವಾದ ಅವರು ಅಜ್ಞಾತಭಾವದಿಂದ ಇವಳ ಮುಖವನ್ನು ದಿಟ್ಟಿಸಿ ನೋಡಿ ದರು. 'ನಾನು ಸತ್ಯ ಅಪ್ಪ? ನೆನ್ನೆ ರಾತ್ರಿ ಬಂದಿದ್ನಲ' – ಎಂದರೆ, 'ಪಕ್ಕದ ವನದಲ್ಲಿ ಪುಷ್ಪಸಂಚಯಕ್ಕೆ ಹೋದ ಇವಳು ಬರಲೇ ಇಲ್ವಲ' ಎಂದರು.

'ಯಾರು?'

'ಅರುಂಧತಿ.'

'ಈಗ ಆಶ್ರಮಕ್ಕೆ ಬಾ. ಅಗ್ನಿ ಉರೀತಿದೆ.'

ಅವರು ಲಗುಬಗೆಯಿಂದ ಮೇಲೆ ಎದ್ದು ತೋಟದ ಕಡೆಗೆ ಹೆಜ್ಜೆ ಹಾಕಿದರು. ಅವರ ವೇಗಕ್ಕೆ ತಕ್ಕಂತೆ ಅನುಸರಿಸುವುದು ಅವಳಿಗೆ ಕಷ್ಟವಾಯಿತು. ಎದ್ದು ಗದ್ದೆ ತೋಟಗಳ ಕಡೆಗೆ, ಕಾಲುವೆಯ ನೀರಿನ ಕಡೆಗೆ ಹೋಗುತ್ತಿದ್ದ ಊರಿ ನವರು ಈ ತಂದೆ ಮಗಳನ್ನು ನೋಡುತ್ತಾ ನಿಂತರು. ಹುಚ್ಚು ಹಿಡಿದು ಬುಂಡಗೆ ನಡೆಯುತ್ತಿರುವ ಗುಡಿಯ ಅಯ್ಯನವರಷ್ಟೇ, ಬ್ರಾಹ್ಮಣ ಹುಡುಗಿಯಾಗಿ ಗೌಡರ ಮಗನನ್ನು ಮದುವೆಯಾಗಲು ಹೊರಟು ವಲ್ಲೆ ಎನಿಸಿಕೊಂಡ ಅವಳನ್ನು ನೋಡಲು ಅವರಿಗೆ ಕುತೂಹಲವಿತ್ತು. ಅವಳು ಅದ್ಯಾವುದನ್ನೂ ಗಮನಿಸಲಿಲ್ಲ.

ಅಪ್ಪನ ಹಿಂದೆ ತೋಟಕ್ಕೆ ಹೋದಳು. ಗುಡಿಸಲಿನ ಬಾಗಿಲು ತೆಗೆದು, ಒಳಗೆ ಉರಿಯುತ್ತಿದ್ದ ಕೊರಡನ್ನು ಕಂಡು ಸಂತೋಷದಿಂದ ಹಿಂದೆ ತಿರುಗಿ ಅವಳ ತಲೆಯ ಮೇಲೆ ಕೈ ಇಟ್ಟು, 'ಮಗೂ, ನಿನಗೆ ಆಶೀರ್ವಾದ ಮಾಡ್ತೀನಿ. ಇಷ್ಟೊಂದು ಶ್ರದ್ಧೆಭಕ್ತಿಗಳಿಂದ ಪಂಚಾಗ್ನಿಯನ್ನು ಕಾಪಾಡಿದೀಯ. ನಿನ್ನ ಅಮ್ಮ ಕರ್ತವ್ಯ ಮರೆತು ಎಲ್ಲಿಗೆ ಹೋದಳೋ ಏನೋ!' ಎಂದರು.

'ಈಗ ಮೊದಲು ಸ್ನಾನ ಮಾಡಿ ನಿತ್ಯಕರ್ಮ ಮುಗಿಸಿ. ಆಮೇಲೆ ಮಾತಾಡಾಣ.'

ಅವರು ಕೊಳಕ್ಕೆ ಇಳಿದು ಮೈ ತಿಕ್ಕಿ, ತಲೆ ಮುಳುಗಿಸಿ ಸ್ನಾನ ಮಾಡಿದರು. ಗುಡಿಸಲಿನೊಳಗಿದ್ದ ಒಂದು ಮಚ್ಚುಗತ್ತಿಯನ್ನು ತೆಗೆದುಕೊಂಡು ಹಿಂಭಾಗದ ಕೊರಡನ್ನು ಕಡಿದು ಸಮಿತ್ತು ಮಾಡಿಕೊಂಡು ಬಂದು, ಕರಿಯುವ ಕೊರಡಿಗೆ ಹಾಕಿದರು. ಸಣ್ಣ ಗೋಣೀಚೀಲದಲ್ಲಿದ್ದ ಅಕ್ಕಿಯನ್ನು ಒಂದು ಸಣ್ಣ ಚರುಕಲಿಗೆ ಹಾಕಿ ಅನ್ನಮಾಡಲು ಇಟ್ಟು, ಅವಳಿಗೆ ಹೇಳಿದರು: 'ನಿನ್ನ ಸ್ನಾನ ಆಯಿತೆ?'

'ಇಲ್ಲ.'

'ಹವನಕ್ಕೆ ಮುಂಚೆ ಎಲ್ಲರದ್ದೂ ಸ್ನಾನವಾಗಬೇಕು.'

ಅವಳಿಗೆ ಬದಲಾಯಿಸಲು ಬಟ್ಟೆ ಇರಲಿಲ್ಲ. ಹಾಗೆಯೇ ಕೊಳದ ನೀರಿನಲ್ಲಿ ಇಳಿದು ಮುಳುಗಿ ಎದ್ದಳು. ಆಗ ಕಾಣಿಸಿತು: ನೆನ್ನೆ ರಾತ್ರಿ ಅಪ್ಪ ತನಗೆ ಹಾಕಿದ್ದ ಯಜ್ಞೋಪವೀತ ಹೆಗಲಿನಿಂದ ಮೈಗೆ ರವಿಕೆಯ ಮೇಲೆ ಅಂಟಿಕೊಂಡಿದೆ. ಅದನ್ನು ಹಾಗೆಯೇ ಇಟ್ಟುಕೊಳ್ಳುವುದೋ, ತೆಗೆದು ಹಾಕುವುದೋ? ಅವರು ಜ್ಞಾಪಿಸಿಕೊಂಡು ಕೇಳಬಹುದು – ಎಂದು ಯೋಚಿಸಿ ಅದನ್ನು ತೆಗೆದು ಹಾಕಲಿಲ್ಲ. ಒದ್ದೆಯಾದ ಲಂಗ ಬಾಡಿಗಳನ್ನು ಹಿಂಡಿ ಒಣಗಹಾಕಿ, ಹಿಂಡಿದ ಒದ್ದೆ ಸೀರೆ ಮತ್ತು ರವಿಕೆಗಳನ್ನು ತೊಟ್ಟು ಗುಡಿಸಲಿನೊಳಕ್ಕೆ ಬಂದಳು. ಅನ್ನ ಕುದಿಯುತ್ತಿತ್ತು. ತಾನು ಏನು ಮಾಡಬೇಕೆಂಬುದು ತಿಳಿಯಲಿಲ್ಲ. ಸುಮ್ಮನೆ ಅವರ ಎದುರು ಭಾಗದಲ್ಲಿ ಬೆಂಕಿಯ ಮುಂದೆ ಕುಳಿತಳು. ತಣ್ಣೀರಿನಲ್ಲಿ ಮಾಡಿದ ಸ್ನಾನ ಮತ್ತು ಮೈಮೇಲಿದ್ದ ಒದ್ದೆ ಸೀರೆಗಳ ಚಳಿ ಕಡಿಮೆಯಾಯಿತು. ಅವರು ಇವಳನ್ನು ಮಾತನಾಡಿಸಲಿಲ್ಲ. ಅನ್ನ ಬೆಂದ ಮೇಲೆ ಮಂತ್ರ ಹೇಳಿಕೊಂಡು ಹವನ ಪ್ರಾರಂಭಿಸಿದರು.

ಐದು ನಿಮಿಷದಲ್ಲಿ ಹೊರಗೆ ಹೆಜ್ಜೆಯ ಸಪ್ಪಳವಾಯಿತು. ಅವಳು ಎದ್ದು ಹೊರಗೆ ಬಂದಳು. ತದೇಕಚಿತ್ತರಾಗಿ ಮಂತ್ರ ಹೇಳಿಕೊಂಡು ಅಗ್ನಿಗೆ ಹವಿಸ್ಸನ್ನು ಅರ್ಪಿಸುತ್ತಿದ್ದ ಅವರಿಗೆ ಹೊರಗಿನ ಹೆಜ್ಜೆಯ ಸದ್ದಾಗಲಿ, ಇವಳು ಹೋದದ್ದಾಗಲಿ ತಿಳಿಯಲಿಲ್ಲ. ನೆನ್ನೆ ರಾತ್ರಿ ಅವಳು ಮನೆಯಲ್ಲಿ ನೋಡಿದ್ದ ನರಸಿಂಹ

ಜೋಯಿಸರು ಕೈಲಿ ಒಂದು ರೈಲುಚೊಂಬು ಹಿಡಿದುಕೊಂಡು ಗುಡಿಸಲಿನ ಪಕ್ಕದಲ್ಲಿ ನಿಂತಿದ್ದರು. ಅವಳನ್ನು ಹತ್ತು ಮಾರು ದೂರ ಕರೆದುಕೊಂಡು ಹೋಗಿ ಹೇಳಿದರು: 'ನೀವೊಬ್ಬರೇ ಹ್ಯಾಗಿರ್ತೀರೋ ಅಂತ ವೆಂಕಟೇಶಮೂರ್ತಿಗಳೂ ಜಯಮ್ಮನೋರೂ ಥಾವತಿ ಪಟ್ಟರು. ಕಾಫಿ ತಂದಿದೀನಿ, ತಗಳಿ.'

'ಅಪ್ಪನಿಗೆ ಊಟ ತಿಂಡಿ ಹ್ಯಾಗೆ?'

'ಅವರು ಮನೇಲಿ ಬೇಯಿಸಿದ್ದು ಏನೂ ಮುಟ್ಟೊಲ್ಲ. ಇಲ್ಲೇ ಅಕ್ಕಿ ಬೇಳೆಯಲ್ಲಾ ಇದೆ. ಕರು ಬಿಟ್ಟ ಮ್ಯಾಲೆ ಆಳು ಹಾಲು ತಂದು ಕೊಡ್ತಾನೆ. ನೀವು ಸ್ವಲ್ಪ ಹೊತ್ತಿಗೆ ಮನೆಗೆ ಬನ್ನಿ. ತಿಂಡಿ ತಿನ್ನೂರಂತೆ. ಮುಂದೆ ಏನು ಮಾಡೂದು, ಬೆಂಗಳೂರು ಹುಚ್ಚಾಸ್ಪತ್ರೆಗೆ ಕರ್ಕಂಡು ಹೋಗುಕ್ಕೆ ಇವರನ್ನ ಒಪ್ಪಿಸುಕ್ಕಾಗುತ್ಯೇ ಅಂತ ನಿಮ್ಮ ಕೈಲಿ ವೆಂಕಟೇಶಮೂರ್ತಿಗಳು ಮಾತಾಡಬೇಕಂತೆ.'

ಈಗ ಅವಳಿಗೆ ನೆನಪಾಯಿತು: ರಾತ್ರಿ ಇಲ್ಲಿಗೆ ಬಂದಾಗಿನಿಂದ ತಾನು ಅಪ್ಪನ ಪ್ರಭಾವದಲ್ಲಿ ಬಿದ್ದಿದ್ದೇನೆ. ಅವನನ್ನು ಪರೀಕ್ಷೆ ಮಾಡಲಿಲ್ಲ. ಅವನ ಬುದ್ಧಿಭ್ರಮಣೆಯ ಕಾರಣವನ್ನು ತಿಳಿಯುವ ಪ್ರಯತ್ನವನ್ನೇ ಮಾಡಲಿಲ್ಲ – ಎಂದುಕೊಂಡಳು. ಅವರ ಕೈಲಿದ್ದ ರೈಲುಚೊಂಬನ್ನು ಇಸಿದುಕೊಂಡು, ಉಗುರುಬೆಚ್ಚಗಾಗಿದ್ದ ಕಾಫಿಯನ್ನು ಕುಡಿದು ಚೊಂಬನ್ನು ಕೊಳದಲ್ಲಿ ತೊಳೆದು ಅವರ ಕೈಗೆ ಕೊಟ್ಟು ಹೇಳಿದಳು: 'ನಾನೀಗ ಮನೆಗೆ ಬರುಲ್ಲ. ಅವರ ಕೈಲಿ ಉಪಾಯವಾಗಿ ಮಾತಾಡಿ ಮೊದಲು ಅರ್ಥಮಾಡ್ಕತ್ತೀನಿ. ಅವರನ್ನ ಆಸ್ಪತ್ರೆಗೆ ಕರಕಂಡು ಹೋಗೋ ಮೊದಲು ಉಪಾಯವಾಗಿ ಒಪ್ಪಿಸಬೇಕು. ಆಳು ಹಾಲು ತರುವಾಗ ನನ್ನ ಕೈಚೀಲ ಕೊಟ್ಟು ಕಳಿಸಿ. ಬದಲಾಯಿಸುಕ್ಕೆ ಸೀರೆ ಇಲ್ಲ. ನಾನೇ ಸಮಯ ನೋಡ್ಕಂಡು ನಾಳೆ ಮನೆಗೆ ಬರ್ತೀನಿ.'

ರೈಲುಚೊಂಬು ತೆಗೆದುಕೊಂಡು ಅವರು ಹೋದರು. ಸತ್ಯ ಗುಡಿಸಲಿನ ಒಳಗೆ ಬಂದು ಅಗ್ನಿಯ ಮುಂದೆ ಕುಳಿತಳು. ಹತ್ತು ನಿಮಿಷದಲ್ಲಿ ಹವನವನ್ನು ಪೂರ್ತಿಮಾಡಿ ಅವರು ಸುಮ್ಮನೆ ಕುಳಿತರು. ಸ್ವಲ್ಪ ಹೊತ್ತಿನ ಮೇಲೆ ಅವಳು ಕೇಳಿದಳು: 'ಅಪ್ಪ, ಅರುಂಧತಿ ಅಂತೀಯಲ್ಲ, ಅವಳು ಯಾರು?'

ಅವರ ಮುಖದಲ್ಲಿ ಸಿಟ್ಟು ಕಾಣಿಸಿತು. ಹುಬ್ಬುಗಳು ಗಂಟಿಕ್ಕಿಕೊಂಡುವು. 'ಮೂರ್ಖೆ, ನಿನ್ನ ತಾಯಿಯ ಗುರುತು ನಿನಗಿಲ್ಲವೆ? ಅವಳ್ಯಾರು ಅಂತೀಯಾ?'

'ಅವಳು ನನ್ನ ಅಮ್ಮ ಅಂತ ಗೊತ್ತಿದೆ. ಅವಳ ತೌರೂರು ಯಾವುದು ಅದನ್ನಾದರೂ ಹೇಳು. ಹೋಗಿ ಕರ್ಕಂಡು ಬರಬಹುದು.'

'ಅವಳ ತೌರೂರಿಗೆ ಹೋಗಬ್ಯಾಡ. ಇಲ್ಲಿ ನೋಡು. ಹುಟ್ಟಿನಿಂದ ಚಾಂಡಾಲಕನ್ಯೆ ಅವಳು. ಆದರೆ ನನ್ನ ಕೈ ಹಿಡಿದ ಮೇಲೆ ಮಹಾಬ್ರಾಹ್ಮಣಿಯಾದಳು.'

'ಅದು ನಂಗೆ ಗೊತ್ತಿದೆ. ಅವಳು ಎಲ್ಲಿಗೆ ಹೋಗಿರಬಹುದು ಹೇಳು. ನಾನು ಹೋಗಿ ಹುಡಿಕ್ಕಂಡು ಬರ್ತೀನಿ.'

ಅವರು ನಿಟ್ಟುಸಿರು ಬಿಟ್ಟರು. 'ಸಕಲ ಲೋಕದಲ್ಲೂ ಹುಡುಕಿದೆ. ಇಂದ್ರನಿಗೆ ಹೇಳಿದೆ. ಅಗ್ನಿಗೆ ಹೇಳಿದೆ. ವಾಯುವಿಗೆ ಹೇಳಿದೆ. ಅವರ್‍ಯಾರಿಗೂ ಇವಳನ್ನ ಹುಡುಕುಕ್ಕೆ ಆಗ್ಲಿಲ್ಲ.'

ಇಷ್ಟು ಹೇಳಿ ಅವರು ಸುಮ್ಮನಾದರು. ಮತ್ತೆ ಯಾವುದಾದರೂ ಎಳೆ ಹಿಡಿದು ಅವರ ಮನಸ್ಸಿನ ಹಂದರವನ್ನು ಶೋಧಿಸಬೇಕೆಂದು ಅವಳು ಪ್ರಯತ್ನಿಸಿದಳು. ಆದರೆ ಯಾವುದೂ ಸಿಕ್ಕಲಿಲ್ಲ. ಜಯಮ್ಮ ಹೇಳಿದ ಇನ್ನೊಂದು ಮಾತು ನೆನಪಾಯಿತು. ಅವರ ಕಾಲಿನ ಮೀನುಖಂಡವನ್ನು ದಿಟ್ಟಿಸಿ ನೋಡಿದಳು. ಬಲಗಾಲಿನಲ್ಲಿ ಗಾಯವಾಗಿದ್ದು ಈಗ ಮಾಯ್ದಿರುವ ಒಂದು ಗುರುತು ಕಾಣಿಸಿತು. ಕೇಳಿದಳು: 'ಅದೇನು ಗಾಯ?'

ಅವರು ಉತ್ತರ ಹೇಳಲಿಲ್ಲ. ಅವಳೇ, 'ನಾಯಿ ಕಡಿದಿತ್ತೇ?' ಎಂದಳು.

ಅವರಿಗೆ ತಕ್ಷಣ ಪ್ರಚಂಡ ಸಿಟ್ಟು ಬಂತು. 'ಹೊರಟುಹೋಗು ಈ ಆಶ್ರಮದಿಂದ. ಶ್ವಾನಮುಂಡೇದೇ. ನಾಯಿಯು ಮಾತಾಡ್ತೀಯ? ಈ ಬ್ರಹ್ಮರ್ಷಿಯನ್ನ ನಾಯಿ ಮುಟ್ಟಿ ಕಡಿಯುತ್ತೆಯೆ? ಈ ಮಾತಾಡಿದರೆ ನಿನ್ನ ತಲೆ ಮೈ ಕೈ ಮೇಲೆ ಸಗಣಿಯಿಂದ ಹೊಡೀತೀನಿ' – ಎಂದು ಗುಡುಗಿದರು.

'ಅಪ್ಪ, ಸುಮ್ಮನೆ ಕೇಳಿದೆ, ನಿಂಗೆ ಅಕಸ್ಮಾತ್ ನೋವು ಗೀವು ಆಗಿದ್ದರೆ ಆಸ್ಪತ್ರೇಲಿ ಔಷಧಿ ಹಾಕಿಸೋಣ ಅಂತ. ನಿನ್ನ ಹತ್ತಿರ ಬರುಕ್ಕೆ ನಾಯಿಗೆ ಧೈರ್ಯವೆಲ್ಲಿ ಬರುತ್ತೆ?'

'ಹಾಗನ್ನು. ನಾಯಿ ಅಂದ್ರೆ ಚಾಂಡಾಲಜಾತಿ. ನನ್ನ ಹತ್ತಿರ ಬರುಕ್ಕೆ ಚಾಂಡಾಲರಿಗೂ ಧೈರ್ಯವಿಲ್ಲ.'

'ಹಾಗಾದ್ರೆ ಅರುಂಧತಿ?'

'ಅವಳನ್ನು ನಾನು ಶುದ್ಧಿ ಮಾಡಿದೆ.'

'ಶುದ್ಧಿ ಮಾಡಿದರೂ ಯಾಕೆ ಎಲ್ಲೋ ಹೋಗಿದ್ದಾಳೆ?'

'ಮೈಲಿಗೆಯ ಭಾವ ಅವಳ ಒಳಗೇ ಇರಬೇಕು. ಈ ಅಗ್ನಿಗೆ ಹೆದರಿ ಹೋಗಿರಬಹುದು.'

ಸತ್ಯ ಸುಮ್ಮನಾದಳು. ಅವಳಿಗೆ ಒಂದು ಸುಳಿವು ಸಿಕ್ಕಿತು. ಆದರೆ ಇದು ಸಾಧ್ಯವೆನಿಸಲಿಲ್ಲ. ಆದರೆ ಅಸಾಧ್ಯವೆಂದು ತಳ್ಳಿಹಾಕಲೂ ಇಲ್ಲ. ಕೇಳಿದಳು: 'ಕಾಲಿನ ಗಾಯಕ್ಕೆ ಔಷಧಿ ಹಾಕಿಸೋಣ. ಬೆಂಗಳೂರಿನ ಆಸ್ಪತ್ರೆಗೆ ಹೋಗಾಣ.'

'ಇಲ್ಲಿಂದ ಹೊರಟುಹೋಗು, ಪಾಪಿ. ಬೆಂಗಳೂರಿನ ಆಸ್ಪತ್ರೆ ಅಂತ ನಿನ್ನ

ಅಣ್ಣನೂ ಅಂದಿದ್ದ. ಈಗ ನೀನು ಬಂದಿದೀಯ ಅದೇ ಮಾತು ಹೇಳುಕ್ಕೆ? ಮತ್ತೆ ಆ ಮಾತಾಡಿದರೆ ಇಲ್ಲಿ ನೋಡು' – ಉರಿಯುತ್ತಿದ್ದ ಕೊರಡನ್ನು ತೋರಿಸಿ ಹೇಳಿದರು: 'ನಿನ್ನನ್ನ ಹಿಡಿದು ಅಗ್ನಿಗೆ ಆಹುತಿ ಮಾಡ್ತೀನಿ.'

'ಸುಮ್ಮನೆ ಹಾಗಂದೆ ಅಪ್ಪ, ಸಿಟ್ಟು ಮಾಡ್ಕಬ್ಯಾಡ' – ಎಂದು ಅವಳು ಸುಮ್ಮನಾದಳು.

ಅವರೇ ಎದ್ದು ಗುಡಿಸಲಿನ ಹೊರಗೆ ಬಂದು, 'ಇಲ್ಲಿ ಬಾ' ಎಂದು ಕರೆದರು. ಅವಳು ಎದ್ದು ನಿಂತಳು. 'ಅಲ್ಲಿ ನೋಡು' – ಬೇಲಿಯಿಂದ ಆಚೆಯ ಕಾಲುವೆಯನ್ನು ತೋರಿಸಿ ಹೇಳಿದರು: 'ಆ ಮಹಾ ಸಮುದ್ರದ ಆಚೆಗೆ ರಾಕ್ಷಸಲೋಕ. ನೀನು ಅದನ್ನ ದಾಟಿ ಹೋಗಕೂಡದು. ತಿಳೀತಾ?'

'ಹೂ.'

'ಒಳಗೆ ಬಂದು ಅಗ್ನಿಯ ಮೇಲೆ ಪ್ರಮಾಣ ಮಾಡು.'

ಅವಳು ಒಳಗೆ ಬಂದು ಅವರು ಹೇಳಿದಂತೆ ಪ್ರಮಾಣ ಮಾಡಿದಳು.

ಸ್ವಲ್ಪ ಹೊತ್ತಿಗೆ, ಮನೆಯ ಆಳು ಒಂದು ತಂಬಿಗೆ ಹಾಲು ಮತ್ತು ಅವಳ ಬಟ್ಟೆಗಳ ಕೈಚೀಲಗಳನ್ನು ತಂದು ಕೊಟ್ಟ. ಅವರು ಅವನ ಮೇಲೆ ರೇಗಲಿಲ್ಲ. ಅವನು ಬಂದದ್ದೇ ತಮಗೆ ಸಂಬಂಧಿಸಿಲ್ಲವೆಂಬಂತೆ ಸುಮ್ಮನಿದ್ದರು. ಸತ್ಯ ಗುಡಿಸಲಿನಲ್ಲಿದ್ದ ಅಡಿಗೆಯ ಸಾಮಾನುಗಳನ್ನು ತೆಗೆದು ನೋಡಿದಳು. ಅಕ್ಕಿ, ಬೇಳೆ, ಮೆಣಸಿನಪುಡಿ, ಉಪ್ಪು, ಎಲ್ಲ ಇದ್ದುವು. ನೀನು ಹೋಗು ಎಂದು ಆಳಿಗೆ ಹೇಳಿ ಕಳಿಸಿದಳು. ಒಂದು ಪಾತ್ರೆಗೆ ಅಕ್ಕಿಯನ್ನು ನೆನೆಯಹಾಕಿ ಮತ್ತೊಂದರಲ್ಲಿ ಬೇಳೆಗೆ ನೀರಿಟ್ಟು ಕಲ್ಲು-ಒಲೆ ಹೊತ್ತಿಸಿದಳು. ಅಷ್ಟರಲ್ಲಿ ದೇವಸ್ಥಾನದ ಗಂಟೆ ಬಾರಿಸಿದ ಶಬ್ದ ಕೇಳಿಸಿತು.

'ಇಂದ್ರಲೋಕಕ್ಕೆ ಹೋಗಿ ನೋಡಿ ಬರ್ತೀನಿ' – ಎಂದು ಹೇಳಿ ಅವರು ಅಲ್ಲಿಂದ ಹೊರಟರು. ಇಂದ್ರಲೋಕವೆಂದರೆ ದೇವಸ್ಥಾನವೆಂದು ಅವಳಿಗೆ ಅರ್ಥವಾಯಿತು. ಯಾರನ್ನೋ ಹುಡುಕುವವರಂತೆ ಅಕ್ಕಪಕ್ಕದಲ್ಲಿ ನೋಡುತ್ತಾ ಅವರು ಬೇಗ ಬೇಗ ನಡೆದರು. ಅವರು ಹೊಳೆಬಾಗಿಲು ದಾಟುವ ತನಕ ನೋಡುತ್ತಿದ್ದು ಅವಳು ಒಳಗೆ ಬಂದು ಕಲ್ಲೊಲೆಯನ್ನು ಸರಿ ಮಾಡಿದಳು. ತಾನು ದೇವಸ್ಥಾನಕ್ಕೆ ಹೋಗಬೇಕೆಂಬ ಇಚ್ಛೆಯಾಯಿತು. ಇವರು ರಾತ್ರಿ ಗುಡಿಯ ಪಕ್ಕದ ಕಲ್ಲುಚಪ್ಪಡಿಯ ಮೇಲೆ ಮಲಗಿದ್ದರು. ಅಲ್ಲಿ ಏನಾದರೂ ಸುಳಿವು ಸಿಕ್ಕಬಹುದು ಎನಿಸಿತು. ಅಲ್ಲದೆ ತಾನು ದೇವಸ್ಥಾನವನ್ನು ನೋಡಿ ಒಂದು ವರ್ಷವೇ ಆಗಿದೆ. ಹೋಗಿ ನೋಡಿಕೊಂಡು ಬರಬೇಕು ಎಂದುಕೊಂಡಳು. ಬಿಸಿಯಾಗಿದ್ದ ನೀರಿಗೆ ಬೇಳೆ ಹಾಕಿ ಪಾತ್ರೆಯ ಮೇಲೆ ಮುಚ್ಚಿ ಒಲೆಯ ಉರಿ ಹೊರಗೆ ಬರ

ವಂತೆ ಮಾಡಿ, ಆಳು ತಂದು ಕೊಟ್ಟಿದ್ದ ಚೀಲದಿಂದ ಒಗೆದ ಲಂಗ, ಬಾಡಿ, ರವಿಕೆ ಹಾಕಿಕೊಂಡು ಬೇರೆ ಸೀರೆಯುಟ್ಟು ಮತ್ತೊಮ್ಮೆ ಒಲೆಯನ್ನು ಸರಿಮಾಡಿ, ಗುಡಿಸಲಿನ ಬಾಗಿಲು ಹಾಕಿಕೊಂಡು ಹೊರಟಳು.

ಅಪ್ಪ ಅಷ್ಟು ಹೊತ್ತಿಗಾಗಲೇ ಗುಡಿಯ ದಿಬ್ಬದ ಮೇಲೆ ನಿಂತಿದ್ದುದು ಕಾಣಿಸುತ್ತಿತ್ತು. ಸುತ್ತ ತೆನೆಯೊಡೆದ ಬತ್ತದ ನಡುವಿನ ಬದುಗಳ ಮೇಲೆ ನಡೆದು ಗುಡಿಯ ದಿಬ್ಬ ಹತ್ತಬೇಕು. ಅಷ್ಟರಲ್ಲಿ ಎಡಭಾಗದಿಂದ ಭಾರೀ ಸೀರೆಗಳನ್ನುಟ್ಟ ಇಬ್ಬರು ಹೆಂಗಸರು, ಒಬ್ಬ ವೃದ್ಧ ಯಜಮಾನರು, ಮತ್ತೊಬ್ಬ ತರುಣ ಬರುತ್ತಿರುವುದು ಕಾಣಿಸಿತು. ಅವಳು ತಿರುಗಿ ನೋಡುತ್ತಾಳೆ: ಚಿತ್ತವು ವಿಚಲಿತವಾಯಿತು. ಶ್ರೀನಿವಾಸನ ಅಜ್ಜ ಕೈಲಿ ಬೆತ್ತದ ಕೋಲು ಹಿಡಿದು ನಡೆದು ಬರುತ್ತಿದ್ದಾರೆ. ಅವರ ಹಿಂದೆ ಅವನ ತಾಯಿ, ಆಕೆಯ ಸಂಗಡ ಒಬ್ಬ ಬಸುರಿ ಹುಡುಗಿ. ಸುಮಾರು ಆರು ತಿಂಗಳಿನ ಬಸುರನ್ನು ಹೊತ್ತ ಅವಳ ತುಂಬು ಹೊಟ್ಟೆಯ ಮೇಲೆ ನಯವಾದ ಹಳದಿ ರೇಶಿಮೆ ಸೀರೆಯ ನೆರಿಗಳು ಇಳಿದಿವೆ. ಹಿಂಭಾಗದಲ್ಲಿದ್ದವನು ಶ್ರೀನಿವಾಸ. ಕೈಲಿ ಒಂದು ಕೃಷ್ಣಾಜಿನವನ್ನು ಮಡಿಸಿ ಹಿಡಿದಿದ್ದಾನೆ. ಅವಳು ಶ್ರೀನಿವಾಸನ ಹೆಂಡತಿ ಎಂಬುದು ಸತ್ಯಳಿಗೆ ತಕ್ಷಣ ಗೊತ್ತಾಯಿತು. ಅವನೂ ಇವಳನ್ನು ನೋಡಿದ. ತಕ್ಷಣ ಮುಖವನ್ನು ಕೆಳಗೆ ಮಾಡಿಕೊಂಡ. ರಂಗಮ್ಮನೂ ಸತ್ಯಳನ್ನು ನೋಡಿದಳು. ಅಷ್ಟರಲ್ಲಿ ಸತ್ಯಳ ಅಪ್ಪ ಗಟ್ಟಿಯಾಗಿ ಕಿರಿಚಿಕೊಂಡರು. ಸತ್ಯ ಅವರ ಕಡೆ ತಿರುಗಿದಳು. ಕೈಲಿ ಪೂಜಾ ದ್ರವ್ಯದ ತಟ್ಟೆ ಹಿಡಿದು ಬರುತ್ತಿದ್ದ ಶ್ರೀನಿವಾಸನ ಹೆಂಡತಿಯ ಕಡೆಗೆ ಕೈಮಾಡಿ ಅವರು ಕಿರಿಚುತ್ತಿದ್ದರು: 'ಈ ಗರ್ಭ ಉಳಿಯುಲ್ಲ. ಈ ಬೀಜ ಮೊಳೆಯುಲ್ಲ. ಈ ತಳಿ ಬೆಳೆಯುಲ್ಲ.' ಇದೇ ಮಾತನ್ನೇ ಮತ್ತೆ ಮತ್ತೆ ಮಂತ್ರ ಹೇಳಿದಂತೆ ಗಟ್ಟಿಯಾಗಿ ಕಿರಿಚಿದರು: 'ಈ ಗರ್ಭ ಉಳಿಯುಲ್ಲ. ಈ ಬೀಜ ಮೊಳೆಯುಲ್ಲ. ಈ ತಳಿ ಬೆಳೆಯುಲ್ಲ. ಈ ಗರ್ಭ ಉಳಿಯುಲ್ಲ. ಈ ಬೀಜ....'

ರಂಗಮ್ಮ ಮತ್ತು ಅವಳ ಸೊಸೆ, ಇಬ್ಬರೂ ಸ್ತಂಭೀಭೂತರಾದರು. ಶ್ರೀನಿವಾಸ ಈ ಕಡೆ ತಿರುಗಲೇ ಇಲ್ಲ. ದೊಡ್ಡ ಗೌಡರು ಹೊಡೆಯುವವರಂತೆ ಬೆತ್ತವನ್ನು ಎತ್ತಿ ಹಿಡಿದು, 'ಕೆಟ್ಟ ಮಾತಾಡ್ತೀಯ ಹುಚ್ಚುನಾಯಿ! ಗುಡಿತಾವಿಂದ ಹೋಯ್ತೀಯೋ ನಿಂಗೆ ಕಾಲು ಮುರೀಗಂಟ ಮಡಗಬೇಕೊ' ಎಂದು ಗದ್ದರಿಸಿದರು. ಅಷ್ಟರಲ್ಲಿ ಗುಡಿಯೊಳಗಿನಿಂದ ವೆಂಕಟೇಶ ಬಂದ. ಕಲಾಪತ್ತಿನ ಪಂಚೆ ಯುಟ್ಟು, ಸಿಲ್ಕಿನ ಶರಟು ಹಾಕಿದ್ದ ಅವನು ಬೆರಳುಗಳಿಗೆ ಉಂಗುರ ಇಟ್ಟಿದ್ದ. ವೆಂಕಟರಮಣಯ್ಯನವರು ತಮ್ಮ ಮಾತನ್ನು ಬಿಡಲೇ ಇಲ್ಲ: ಈ 'ಗರ್ಭ ಉಳಿಯುಲ್ಲ. ಈ ಬೀಜ ಮೊಳೆಯುಲ್ಲ....'

ಸತ್ಯ ಹತ್ತಿರ ಹೋಗಿ ಅವರ ಕೈಹಿಡಿದು, 'ಅಪ್ಪ, ಇಂಥ ಮಾತು ನಿನ್ನ ಬಾಯಲ್ಲಿ ಬರಬಾರದು. ಆಶ್ರಮಕ್ಕೆ ಹೋಗಾಣ ಬಾ' – ಎನ್ನುತ್ತಾ ಅವರನ್ನು ಮುಂದೆ ಎಳೆದಳು. ಅವರು ವಿರೋಧಿಸದೆ ಅವಳ ಹಿಂದೆ ನಡೆದರು. ಆದರೆ, 'ಈ ಗರ್ಭ ಉಳಿಯುಲ್ಲ....' ಎಂಬ ಮಂತ್ರವನ್ನು ನಿಲ್ಲಿಸಲಿಲ್ಲ.

ಅವರು ತೋಟಕ್ಕೆ ಬಂದು ಕೊಳದ ಹತ್ತಿರ ಕುಳಿತ ಮೇಲೆ, 'ಈ ಗರ್ಭ ಉಳಿಯುಲ್ಲ' ಎನ್ನುವ ಮಾತನ್ನು ನಿಲ್ಲಿಸಿದರು. ಸತ್ಯ ಗುಡಿಸಲಿನ ಒಳಗೆ ಹೋಗಿ ಬೇಳೆಯ ಪಾತ್ರೆಯ ಮುಚ್ಚಳ ತೆಗೆದು ನೋಡಿದಳು. ಅವಳ ಮನಸ್ಸು ಅಲ್ಲೋಲ ಕಲ್ಲೋಲವಾಗಿತ್ತು. ಇದೆಲ್ಲ ಅಚಾನಕವಾಗಿ ನಡೆದಿದೆ. ಅವರು ಊರಿಗೆ ಬಂದಿರುವ ಈ ದಿನ ದೇವಸ್ಥಾನಕ್ಕೆ ಬರುವ ಸುಳಿವು ಸಹ ತನಗೆ ತಿಳಿಯಲಿಲ್ಲ. ತಿಳಿಯುವ ಬಗೆಯೂ ಇರಲಿಲ್ಲ. ಈ ಸಂದರ್ಭದಲ್ಲಿ ತಾನು ಅಲ್ಲಿರಬಾರದಾಗಿತ್ತು. ಅಪ್ಪ ಕೂಡ ಅಲ್ಲಿದ್ದು ಹೀಗೆ ಕೆಟ್ಟ ಮಾತಾಡಬಾರದಾಗಿತ್ತು ಎಂದುಕೊಂಡಳು. ಇಷ್ಟು ದಿನವೂ ಅವಳು ನಿಗ್ರಹಿಸಿಕೊಂಡಿದ್ದ ಭಾವನೆಗಳೆಲ್ಲ ಮನಸ್ಸಿನಲ್ಲಿ ಹೊಡೆದೆದ್ದುವು. ಶ್ರೀನಿವಾಸನ ಹೆಂಡತಿಯ ಬಸುರುಹೊಟ್ಟೆಯೇ ಕಣ್ಣಿಗೆ ಕಟ್ಟಿದಂತೆ ಆಗುತ್ತಿತ್ತು. ಎದುರಿಗೆ ಕುದಿಯುತ್ತಿದ್ದ ಬೇಳೆಯ ನೀರು, ಉರಿಯುತ್ತಿದ್ದ ಒಲೆ, ಯಾವುದೂ ಸರಿಯಾಗಿ ಕಾಣುತ್ತಿರಲಿಲ್ಲ. ಅದೇ ನೋಟ. ತುಂಬಿದ ಹೊಟ್ಟೆ. ಅವಳ ಕಣ್ಣು ಹನಿಯೊಡೆಯಿತು. ಒಂದು ನಿಮಿಷದಲ್ಲಿ ಬಿಕ್ಕಿಬಿಕ್ಕಿ ಅಳು ಬಂತು. ತಾನು ಎಲ್ಲಿದ್ದೇನೆಂಬ ಪರಿವೆ ಇಲ್ಲದೆ ಅತ್ತುಬಿಟ್ಟಳು. ಎರಡು ನಿಮಿಷದಲ್ಲಿ ಸಮಾಧಾನವಾಗಿ ಸೆರಗಿನಿಂದ ಕಣ್ಣನ್ನು ಒರೆಸಿಕೊಂಡಳು. 'ನನಗ್ಯಾಕೆ ಈ ದೌರ್ಬಲ್ಯ?' – ಎಂದು ತನ್ನನ್ನು ತಾನು ಸಮಾಧಾನ ಮಾಡಿಕೊಂಡಳು. 'ಅಪ್ಪನ ಕೆಟ್ಟ ಮಾತು ಸುಳ್ಳಾಗಲಿ, ಯಾರಿಗೂ ಕೇಡಾಗೂದು ಬೇಡ' – ಎಂದೂ ತನ್ನಲ್ಲಿ ತಾನೇ ಹೇಳಿಕೊಂಡಳು.

೪

ಆ ದಿನವೂ ಅವಳು ಊರೊಳಕ್ಕೆ ಹೋಗಲಿಲ್ಲ. ಮರುದಿನವೂ ಹೋಗಲಿಲ್ಲ. ಅದರ ಮುಂದಿನ ದಿನ ಬೆಳಗ್ಗೆ ಹಾಲು ತಂದ ಆಳಿನ ಕೈಲಿ, 'ನಾಳೆ ನಾಡಿದ್ದರಲ್ಲಿ ನಾನೇ ಮನೆಗೆ ಬರ್ತೀನಿ. ಯಲ್ಲಾ ಮಾತಾಡ್ತೀನಿ' ಎಂದು ಹೇಳಿ ಕಳಿಸಿದಳು. ಅಪ್ಪನ ಕಾಹಿಲೆಯ ಬಗೆಗೆ ಯೋಚಿಸಲು ಅವಳ ಬುದ್ಧಿ ಸರಿಯಾಗಿ ಕೆಲಸ ಮಾಡುತ್ತಿರಲಿಲ್ಲ. ದೇವಸ್ಥಾನದ ಹತ್ತಿರ ನೋಡಿದ ಶ್ರೀನಿವಾಸ, ಅವನ ಹೆಂಡತಿ, ಎಲ್ಲಕ್ಕಿಂತ ಹೆಚ್ಚಾಗಿ ಅವಳ ತುಂಬಿದ ಹೊಟ್ಟೆಯೇ ಇವಳ ಮನಸ್ಸನ್ನು

ಆಕ್ರಮಿಸಿಕೊಂಡಿದ್ದುವು. ಆ ದಿನ ಮತ್ತು ಅದರ ಮರುದಿನವೆಲ್ಲ ಚಿತ್ತದ ಪರವಶತೆಯು ಗಟ್ಟಿಯಾಗಿತ್ತು. ಸಂಜೆಯ ಹೊತ್ತಿಗೆ ಮನಸ್ಸು ಸಮಸ್ಥಿತಿಗೆ ಬಂತು. ಅಪ್ಪ ಬೆಳಗೆ ಸಂಜೆ ಹವನ ಮಾಡುತ್ತಿದ್ದರು. ಅವಳು ಮಾಡಿ ಹಾಕಿದ ಅಡಿಗೆಯನ್ನು ಮಧ್ಯಾಹ್ನ ಮಾತ್ರ ಊಟ ಮಾಡುತ್ತಿದ್ದರು. 'ಅರುಂಧತೀನ ಹುಡುಕ್ತೀನಿ' – ಎಂದು ಆಗಾಗ್ಗೆ ತೋಟವನ್ನು ಸುತ್ತುಹಾಕಿಯೋ, ಅಥವಾ ದೇವಸ್ಥಾನದ ಹತ್ತಿರಕ್ಕೆ ಹೋಗಿಯೋ ಬರುತ್ತಿದ್ದರು. ಈ ಅರುಂಧತಿ ಎಂಬುವವಳು ಯಾರು, ಎಂಬ ಪ್ರಶ್ನೆ ಅವಳ ಮನಸ್ಸನ್ನು ಕಾಡುತ್ತಿತ್ತು. ವೆಂಕಟೇಶನೊಡನೆ ಸಮಾಲೋಚಿಸಿದರೆ ತಿಳಿದೀತೇ ಎಂದು ಯೋಚಿಸಿ, ತಾನು ಮನೆಗೆ ಹೋಗಿ ಬರುವುದಾಗಿ ಅಪ್ಪನಿಗೆ ಹೇಳಿ ಮರುದಿನ ಹೋದಳು. ಅಪ್ಪನ ಮಾತುಕತೆಗಳನ್ನೆಲ್ಲ ವಿವರವಾಗಿ ತಿಳಿಸಿ ಕೇಳಿದಾಗ ಅವನಿಗೂ ತಕ್ಷಣ ಏನೂ ಹೊಳೆಯಲಿಲ್ಲ. ಸ್ವಲ್ಪ ಹೊತ್ತು ಯೋಚಿಸಿ ನಂತರ ಹೇಳಿದ: 'ಅರುಂಧತಿ ಅಂದ್ರೆ ಚಾಂಡಾಲಕನ್ಯೆ, ಮಾದಿಗರೋಳು. ಆದರೆ ಅಪ್ಪ ಅಂಥ ಯಾವುಳುನ್ನೂ ಜ್ಞಾಪಿಸಿಕೊಳ್ಳೂದೂ ಸಾಧ್ಯವಿಲ್ಲ. ಈಗ ತಾನು ವಸಿಷ್ಠ ಬ್ರಹ್ಮರ್ಷಿ ಅಂತ ಭ್ರಮಿಸಿದಾನಲ, ಅದಕ್ಕೆ ತಕ್ಕಹಾಗೆ ಹಾಗಂತಿದಾನೋ ಏನೋ!'

ಸತ್ಯಳೂ ಯೋಚಿಸಿದಳು. ಸ್ವಲ್ಪ ಹೊತ್ತಿನ ನಂತರ ಎಂದಳು: 'ಆದರೆ, ಗದ್ದೆ ಹಳ್ಳದಿಂದ ಆಚೆಗೆ ಹೋಗೀಯ. ಅದು ರಾಕ್ಷಸ ಲೋಕ ಅಂದ. ನಾಯಿ ಕಡಿದ ವಿಷಯ ತೆಗೆದ ತಕ್ಷಣ ರೇಗಿಬಿಟ್ಟ.'

'ಅದೇನೋ ತಿಳಿಯಲ್ಲಮ್ಮ.'

ಸ್ವಲ್ಪ ಹೊತ್ತು ಮನೆಯಲ್ಲಿದ್ದು ಸತ್ಯ ತೋಟಕ್ಕೆ ಹೊರಟಳು. ಮನಸ್ಸಿನಲ್ಲಿ ಅರುಂಧತಿಯ ವಿಷಯವೇ ಕೊರೆಯುತ್ತಿತ್ತು.

ತೋಟಕ್ಕೆ ಬಂದು ಅಡಿಗೆ ಮಾಡಿ ಅಪ್ಪನಿಗೂ ಬಡಿಸಿ ತಾನೂ ಉಂಡಳು. ಚೆಟ್ಟಿಯ್ಯನವರ ನೆನಪಾಯಿತು. ನೆನ್ನೆಗೇ ಅಸೆಂಬ್ಲಿ ಮುಗಿದಿರುತ್ತದೆ. ಸಂಜೆಯ ಕೊನೆಯ ಬಸ್ಸಿಗೆ ಅವರು ಬಂದಿರಬಹುದು. ಅವರಾಗಿಯೇ ತೋಟಕ್ಕೆ ಬರುತ್ತಾರೆಯೋ ಇಲ್ಲವೋ! ಅವರು ಬಂದರೂ ಅಪ್ಪನ ಎದುರಿಗೆ ಮಾತನಾಡುವಂತಿಲ್ಲ. ನಾನೇ ಹೋಗಿ ಕಂಡು ಅವರ ಕೈಲಿ ಈ ವಿಷಯ ಮಾತಾಡಬೇಕು ಎಂದುಕೊಂಡಳು. ಅಪ್ಪ ಕೊಳದ ದಡದಲ್ಲಿ ಕುಳಿತು 'ಬ್ರಹ್ಮರ್ಷಿ, ಬ್ರಹ್ಮರ್ಷಿ' ಎಂದುಕೊಳ್ಳುತ್ತಿದ್ದರು. ಹತ್ತಿರ ಹೋಗಿ, 'ಅಪ್ಪ, ಬಟ್ಟೆ ಒಗೆಯುವ ಸೋಪು ಬೇಕು. ಬೆಳಗ್ಗೆ ಹೋದಾಗ ಮರೆತುಹೋಯಿತು. ಊರೊಳಕ್ಕೆ ಹೋಗಿ ಬರ್ತೀನಿ' ಎಂದು ಹೇಳಿ ಹೊರಟಳು. ಹೊಳೆಬಾಗಿಲು ಹಾಕಿಕೊಂಡು ದೇವಸ್ಥಾನದ ಕಡೆಗೆ ಸ್ವಲ್ಪ ನಡೆದು ಗದ್ದೆಯ ಇಳುವಿನಲ್ಲಿ ಹೋಗಿ ತೂಬಿನ ಹತ್ತಿರ ಕೆರೆಯ

ಏರಿಯನ್ನು ಹತ್ತಿದಳು. ಎಡಭಾಗದಲ್ಲಿ ನೀರು ಹರಡಿನಿಂತಿತ್ತು. ಕೊನೆಯ ಕೋಡಿಯ ತನಕ ನಡೆದು ಆಚೆಗೆ ಸ್ವಲ್ಪ ದೂರದಲ್ಲಿ ಹಾಕಿದ್ದ 'ಹರಿಜನ ಕಾಲೋನಿ' ಎಂಬ ಬೋರ್ಡುಕಲ್ಲು ಹಾಕಿದ್ದ ಬಂಡಿ ರಸ್ತೆಯಲ್ಲಿ ತಿರುಗಿ, ಅರ್ಧ ಫರ್ಲಾಂಗಿನಲ್ಲಿ ಕಾಣುತ್ತಿದ್ದ ಮಂಗಳೂರು ಹೆಂಚಿನ ಮನೆಗಳಿಗೆ ಸ್ವಲ್ಪ ದೂರದಲ್ಲಿ ನಿಂತು, ಹತ್ತಿರವೇ ಜಗಳಕಾಯುತ್ತಿದ್ದ ಇಬ್ಬರು ಹುಡುಗರ ಪೈಕಿ ಒಬ್ಬನನ್ನು ಕೂಗಿ, 'ಬೆಟ್ಟಯ್ಯಾರಿದ್ರೆ ಕರಿ' ಎಂದಳು.

ಹುಡುಗ ಓಡಿ ಹೋದ. ಐದು ನಿಮಿಷದಲ್ಲಿ ಸುಮಾರು ಇಪ್ಪತ್ತೆಂಟು ಮೂವತ್ತರ ಪ್ರಾಯದ ಒಬ್ಬ ತರುಣ ಎದುರಿಗೆ ಬಂದ. ಸಾದಾ ಕಪ್ಪು ಬಣ್ಣದ ಅವನು ಅರ್ಧ ತೋಳಿನ ಬಿಳಿಯ ಶರಟಿನ ಮೇಲೆ ಬಿಳಿಯ ಪ್ಯಾಂಟು ಹಾಕಿದ್ದ. ಎಡಗಡೆಗೆ ಬೈತಲೆ ತೆಗೆದು ನೀಟಾಗಿ ಬಾಚಿದ್ದ ಕ್ರಾಪು. ಆದರೆ ತನ್ನ ವಯಸ್ಸಿಗೆ ಸ್ವಲ್ಪವೂ ಹೊಂದದಂತೆ ಅತಿ ದಪ್ಪವಾಗಿ ಬಿಟ್ಟದ್ದ ಮೀಸೆಯು ಮೂಗಿನ ತುದಿ ಮತ್ತು ತುಟಿಗಳನ್ನೆಲ್ಲ ಮುಚ್ಚಿಕೊಂಡಿತ್ತು. ಹತ್ತಿರ ಬಂದಂತೆ ಅವಳಿಗೆ ಅವನ ಗುರುತು ಹತ್ತಿತು. ಬೆಟ್ಟಯ್ಯನವರ ಮಗ ಮೋಹನದಾಸ. ಕಾಲೇಜಿನಲ್ಲಿ ಬಿ.ಎ. ಫೇಲಾಗಿ, ಈಗ ತುಮಕೂರಿನಲ್ಲಿ ಚಪ್ಪಲಿ ಬೂಟುಗಳ ದೊಡ್ಡ ಅಂಗಡಿ ಇಟ್ಟುಕೊಂಡಿದ್ದಾನೆ. ಅವಳು ಅವನನ್ನು ನೋಡಿ ಐದಾರು ವರ್ಷವೇ ಆಗಿತ್ತು. ಅವನಿಗೆ ಇವಳ ಗುರುತೂ ಸಿಕ್ಕಿತು. ಒಬ್ಬರನ್ನೊಬ್ಬರು ಬಲ್ಲರೇ ಹೊರತು ಇದು ವರೆಗೂ ಪರಸ್ಪರ ಮಾತನಾಡಿಸಿರಲಿಲ್ಲ. ಅವನು ಈ ಊರಿನಲ್ಲಿ ಓದಿದವನೂ ಅಲ್ಲ. ಆಗ ಇಲ್ಲಿ ಹೊಲೆಯರಿಗೆ ಶಾಲೆ ಇರಲಿಲ್ಲ. ಹತ್ತಿರ ಬಂದವನು, 'ಏನು ಬೇಕಿತ್ತು?' ಎಂದು ಕೇಳಿದ.

'ನಿಮ್ಮ ತಂದೆಯವರನ್ನು ನೋಡಬೇಕಿತ್ತು.'

'ತೋಟದ ಕಡೆ ಹೋಗಿದಾರಲ.'

'ಅರ್ಜೆಂಟ್ ಕೆಲಸವಿತ್ತು. ಸ್ವಲ್ಪ ಕರೆಸಿದರೆ ಉಪಕಾರವಾಗುತ್ತೆ. ನಾನಿಲ್ಲೇ ಕಾಯ್ತಿರ್ತೀನಿ.'

'ಆಗಲಿ' – ಎಂದು ಹೇಳಿ ಅವನು ಹೋದ. ಆದರೆ ಹತ್ತು ಹೆಜ್ಜೆ ಹೋದ ವನು ಹಿಂತಿರುಗಿ ಬಂದು, 'ನಮ್ಮ ಮನೆ ಒಳಗೆ ನೀವು ಬಂದು ಕೂತುಕೋ ಕೂಡದು ಅಂತಲೊ? ಮಡಿಯೋ?' ಎಂದ.

ಅವನ ಧ್ವನಿ ಮತ್ತು ಆಡಿದ ರೀತಿಗಳಲ್ಲಿ ಜಗಳಗಂಟತನ ಕಾಣುತ್ತಿತ್ತು. ಆದರೆ ಅವಳು ಸಮಾಧಾನವಾಗಿಯೇ ಹೇಳಿದಳು: 'ಬರಬಾರದು ಅಂತ ನನ್ನ ಅಭಿಪ್ರಾಯವೇನಿಲ್ಲ. ಬಂದರೆ ನಿಮ್ಮ ಜನವೇ ಸೇರಿಸುಲ್ಲ. ಯಾಕೆ ಸುಮ್ಮನೆ ಇಲ್ಲದ್ದು ಮಾಡಬೇಕು?'

'ಬರಕೂಡದು ಅಂತ ನೀವು ತಪ್ಪನ್ನ ನಮ್ಮ ಮೇಲೆ ಹಾಕುಕ್ಕೆ ಕತೆ ಕಟ್ಟಿ ನಮ್ಮ ಜನವೇ ಸಂಬೂ ಹಾಗೆ ಮಾಡಿದೀರಿ.'

ಅವನ ಕೈಲಿ ಜಗಳ ಕಾಯುಕೂಡದೆಂದು ಅವಳು ನಿರ್ಧರಿಸಿದಳು. 'ಯಾರು ಹ್ಯಾಗೆ ಕಥೆ ಕಟ್ಟಿವರೋ ಬ್ಯಾಡ. ಈಗ ನಾನು ಬರ್ತೀನಿ. ನಡೀರಿ' – ಎಂದು ಮುಂದೆ ಹೆಜ್ಜೆ ಹಾಕಿದಳು. ಈ ಅನಿರೀಕ್ಷಿತತೆಯಿಂದ ಅವನು ಕಕ್ಕಾಬಕ್ಕಿಯಾದ. ಮುಂದೆ ಏನು ಮಾತನಾಡಬೇಕೆಂಬುದೇ ತಿಳಿಯದೆ ಸೋತವನಂತೆ ನಿಂತುಬಿಟ್ಟ. ಅವಳೇ ಎಂದಳು: 'ನಿಮ್ಮ ಮಾತಿನ ಮೇಲೆ ಬರ್ತಿದೀನಿ. ನಿಮ್ಮ ಜನ ಜಗಳ ಕಾಯೂದಾಗ್ಲಿ ಸಗಣಿ ತೊಪ್ಪೇಲಿ ಹೊಡೆಯೂದಾಗ್ಲಿ ಮಾಡದ ಹಾಗೆ ನೋಡಿ ಕೊಳ್ಳೋ ಪೂರ್ತಿ ಜವಾಬ್ದಾರಿ ನಿಮ್ಮದು. ಆಗಲಿ ನೀವು ಮುಂದೆ ನಡೀರಿ.'

ಈಗ ಅವನು ಪೂರ್ತಿಯಾಗಿಯೂ ಸೋತುಹೋದ. ಮತ್ತೆ ಮಾತನಾಡದೆ ಹೆಜ್ಜೆ ಹಾಕಿದ. ಅವಳು ಅವನ ಹಿಂದೆ ನಡೆದಳು. ಕೇರಿಯ ಮಧ್ಯಭಾಗದ ದೊಡ್ಡ ಮನೆಯೇ ಬೆಟ್ಟಯ್ಯನವರದು. ಅವಳು ಈ ಕಾಲೋನಿಯನ್ನು ರಸ್ತೆಯ ದಡದ ದೂರದಿಂದ ನೋಡಿದ್ದಳೇ ವಿನಾ ಹತ್ತಿರದಿಂದ ಕಂಡಿರಲಿಲ್ಲ. ಪ್ರತಿ ಯೊಂದು ಮನೆಯ ಮುಂಭಾಗದಲ್ಲೂ ಕೂತು ಜನಗಳು ಎಕ್ಕಡ ಹೊಲೆಯು ತ್ತಿದ್ದರು. ಬೆಟ್ಟಯ್ಯನವರ ಮನೆಗೆ ಒಂದು ದೊಡ್ಡ ಜಗುಲಿ ಇದೆ. ಜಗುಲಿಯ ಮೇಲೆ ಒಂದು ಕೋಣೆ. ಬಾಗಿಲು ತೆಗೆದಿದ್ದ ಅದರಲ್ಲಿ ಹೊಸ ಎಕ್ಕಡಗಳ ರಾಶಿ ಇತ್ತು. ಬಾಗಿಲಿನ ಎಡಭಾಗದಲ್ಲಿ ಸ್ನಾನದ ಮನೆ. ಎದುರಿನ ಒಳಗೋಡೆಯ ಮೇಲೆ ದೊಡ್ಡ ಗಾಂಧೀ ಪಟ ಕಾಣುತ್ತಿತ್ತು. ಅದರ ಕೆಳಗೆ ಒಂದು ಮೇಜ. ಮರದ ನಾಲ್ಕೈದು ಕುರ್ಚಿಗಳು. 'ಒಳಗೆ ಬನ್ನಿ' – ಎಂದ ಮೋಹನದಾಸ ತಕ್ಷಣ ಮನಸ್ಸು ಬದಲಿಸಿ, 'ಇಲ್ಲೇ ಒಂದು ಕುರ್ಚಿ ತರ್ತೀನಿ, ತಾಳಿ' – ಎಂದು ಒಳಗೆ ಹೋಗಿ ಒಂದು ಮರದ ಕುರ್ಚಿ ತಂದು ಜಗುಲಿಯ ಮೇಲೆ ಇಟ್ಟ. ಅವಳು ಹತ್ತಿರ ಕುಳಿತಳು.

'ಸ್ವಲ್ಪ ಹೇಳಿಕಳಿಸ್ತೀರಾ ನಿಮ್ಮ ತಂದೆಗೆ?' – ಅವಳು ಕೇಳಿದಳು. ಅವನು ಪಕ್ಕದ ಮನೆಯ ಮುಂದೆ ಬೀದಿಯಲ್ಲಿ ಆಡುತ್ತಿದ್ದ ಒಬ್ಬ ಹುಡುಗನನ್ನು ಕೂಗಿ, 'ತ್ವಾಟದ್ ತಾವ ನಮ್ಮಪ್ಪಾರವ್ರೆ. ಯಾರೋ ಬಂದವ್ರೆ ಅಂತ ಕರ್ಕಂಡ್ ಬಾ ಹ್ವಾಗಲೇ' – ಎಂದು ಕಳುಹಿಸಿದ. ಆಮೇಲೆ ಅವಳನ್ನು ಕೇಳಿದ: 'ಕಾಫೀ ಕುಡೀತೀರಾ?'

'ಇಷ್ಟು ಮಧ್ಯಾಹ್ನದ ಹೊತ್ತು ನಾನು ಕುಡಿಯುಲ್ಲ.'

'ಮಡಿ ಕೆಡ್ತದೇನು?' – ಅವನ ಮಾತಿನಲ್ಲಿ ಅನಾವಶ್ಯಕ ಜಗಳಗಂಟತನ ಕಾಣುತ್ತಿತ್ತು.

ಸತ್ಯ ತಾಳ್ಮೆ ಕಳೆದುಕೊಳ್ಳದೆ ಹೇಳಿದಳು: 'ನೀವು ಹಾಗೆ ತಿಳ್ಕಳೂ ಹಾಗಿದ್ದರೆ ಕೊಡಿ. ಕುಡೀತೀನಿ.'

ಅವನು ಒಳಗೆ ಹೋಗಿ, ಕಾಫಿ ಮಾಡುವಂತೆ ತನ್ನ ತಾಯಿಗೆ ಹೇಳಿ ಬಂದ. ಮಾತನಾಡಲು ಅಥವಾ ರೇಗಿಸಲು ಅವನಿಗೆ ಮತ್ತೆ ಏನೂ ತಿಳಿಯ ಲಿಲ್ಲ. ಪ್ಯಾಂಟಿನ ಜೇಬಿನಿಂದ ತೆಗೆದು ಒಂದು ಸಿಗರೇಟು ಹೊತ್ತಿಸಿಕೊಂಡು ಎಳೆಯಲು ಪ್ರಾರಂಭಿಸಿದ. ಸ್ವಲ್ಪ ಎಚ್ಚರ ತಪ್ಪಿದರೆ ಸಿಗರೇಟಿನ ಬೆಂಕಿ ಅವನ ಮೀಸೆಯನ್ನು ಸುಡುವಂತಿತ್ತು.

ಅವಳು ಕೋಣೆಯ ಕಡೆಗೆ ನೋಡಿ ಕೇಳಿದಳು: 'ನೀವು ತುಮಕೂರಿನಲ್ಲಿ ವ್ಯಾಪಾರ ಮಾಡ್ತೀರಂತೆ. ಈ ಚಪ್ಪಲಿಗಳನ್ನು ಇಲ್ಲಿಂದಲೇ ಮಾಡಿಸಿಕೊಂಡು ಹೋಗ್ತೀರಾ?'

'ಇದು ಟ್ರೇಡ್ ಬಿಸಿನೆಸ್. ಮುಖ್ಯವಾಗಿ ಬಾಟಾ ಶೂಸ್, ಕಾನ್ಪುರ ಚಪ್ಪಲಿಗಳ ಏಜೆನ್ಸಿ ಇದೆ. ಒಬ್ಬ ಸೇಲ್ಸ್ ಕ್ಲರ್ಕ್, ಇಬ್ಬರು ಸೇಲ್ಸ್ ಬಾಯ್ಸ್ ಇದ್ದಾರೆ. ಸೇಲ್ಸ್ ಕ್ಲರ್ಕ್ ನಿಮ್ಮ ಬ್ರಾಹ್ಮಣರವನು. ಒಬ್ಬ ಸೇಲ್ಸ್ ಬಾಯ್ ಗೌಡ. ಇನ್ನೊಬ್ಬ ಬ್ರಾಹ್ಮಣ.'

ಅವನ ಈ ಮಾತು ಅನಾವಶ್ಯಕ ಮಾತ್ರವಲ್ಲ, ಬೇಕೆಂದೇ ಅವಳನ್ನು ಅವಮಾನಿಸುವಂತಿತ್ತು. ಅವಳು ಕೇಳಿದಳು: 'ಇದ್ದರೆ ಏನಾಯ್ತು?'

'ಯಾಸ್. ಎ ಮ್ಯಾಟರ್ ಆಫ್ ಫ್ಯಾಕ್ಟ್ ಅಂದೆ ಅಷ್ಟೆ' – ಎಂದು ಅವನು ಸಿಗರೇಟನ್ನು ಜೋರಾಗಿ ಎಳೆದ.

ಅವನ ಮಾತಿನಲ್ಲಿ ಒಂದು ಅಂಶ ಸ್ಪಷ್ಟವಾಗಿ ಕಾಣುತ್ತಿತ್ತು. ಉಚ್ಚಾರ ಸ್ವಲ್ಪವೂ ಗ್ರಾಮ್ಯವಾಗಿರದೆ ಶುದ್ಧ ಗ್ರಾಂಥಿಕವಾಗಿತ್ತು. ಉಚ್ಚಾರ ಸಹ ಸಹಜ ವಾಗಿರದೆ ಸ್ಕೂಲು ವ್ಯಾಕರಣದ ಮೇಷ್ಟರು ನಿರೀಕ್ಷಿಸುವಂತಿತ್ತು. ಅವನ ತಂದೆಯ ಭಾಷೆ ಪೂರ್ತಿಯಾಗಿ ಇತರ ಹರಿಜನರವಂತಿರಲಿಲ್ಲವಾದರೂ ಬ್ರಾಹ್ಮಣರಂತೆ ಆಡಲು ಪ್ರಯತ್ನಪಡದೆ ಅವರು ಸಹಜವಾಗಿ ಆಡುತ್ತಿದ್ದರು.

ಹತ್ತು ನಿಮಿಷದಲ್ಲಿ ಬೆಟ್ಟಯ್ಯನವರು ಬಂದರು. ಇವಳನ್ನು ಕಂಡು, ಅದೂ ತಮ್ಮ ಕೇರಿಯ ಒಳಗೆ ಕಂಡು ಅವರಿಗೆ ಆಶ್ಚರ್ಯ. ಅವರೇ ಮೊದಲು ಕೈಮುಗಿದು ನಮಸ್ತೆ ಹೇಳಿದರು. ತಾವೂ ಒಂದು ಕುರ್ಚಿ ತಂದು ಹಾಕಿಕೊಂಡು ಕುಳಿತರು. ಮೋಹನದಾಸ ಒಳಗೆ ಹೋಗಿ ಎರಡು ಗಾಜಿನ ಗ್ಲಾಸುಗಳಲ್ಲಿ ಕಾಫಿ ತಂದ. ಅವನ್ನು ಕಂಡ ತಂದೆ ಅಂದರು: 'ಕಾಫಿ ಅವಾಗೆ ಕೊಡಬ್ಯಾಡ.'

'ಕೊಟ್ಟರೆ ಏನಾಗುತ್ತೆ?' – ಅವನು ಕೇಳಿದ.

'ಅದು ಅಲಾಯದ ಮಾತು. ನಾವು ಕೊಡಬ್ಯಾಡ್‌ದು.'

'ಇಲ್ಲ. ನಾನೇ ಕುಡೀತೀನಿ ಅಂದೆ' – ಸತ್ಯ ಹೇಳಿದಳು.

'ಕುಡುದ್ರೇನಾಗ್ತದೆ ಅಂತ ಅವನು ಕೇಳ್ಯಾನೆ. ನೀವು ಹೆಂಗಂದಿದೀರ. ನನ್ನ ಮನ್ಲಿ ನೀವು ಕುಡೀಬ್ಯಾಡ್‌ದು. ಒಂದು ಮುರುಕು ಕೊಬ್ಬರಿ ಬೆಲ್ಲ ತಂದು ಕೊಡೊ' – ಎಂದು ಖಡಾಖಂಡಿತವಾಗಿ ಹೇಳಿ, ಅವರು ತಮ್ಮ ಗ್ಲಾಸನ್ನು ಕೈಗೆ ತೆಗೆದುಕೊಂಡರು. ಮೋಹನದಾಸನಿಗೆ ಅಪಮಾನವಾದಂತೆ ಆಗಿ ಒಳಗೆ ಹೊರಟುಹೋದ. ಕೊಬ್ಬರಿ ಬೆಲ್ಲ ತೆಗೆದುಕೊಂಡು ಬರಲಿಲ್ಲ. ಬೆಟ್ಟಯ್ಯನವರೇ ಗ್ಲಾಸನ್ನು ಕೆಳಗಿಟ್ಟು ಒಳಗೆ ಹೋಗಿ, ಒಂದು ಕಾಗದದ ಮೇಲೆ ಒಂದು ಹೋಳು ಕೊಬ್ಬರಿ ಒಂದು ಮುರುಕು ಬೆಲ್ಲ ತಂದು ಅವಳಿಗೆ ಕೊಟ್ಟು ತಾವು ಕಾಫಿ ಕುಡಿಯಲು ಪ್ರಾರಂಭಿಸಿದರು. ಅವಳೇ ಇಲ್ಲಿಗೆ ಹುಡುಕಿಕೊಂಡು ಬರಬೇಕಾದರೆ ಅತಿ ಮುಖ್ಯ ಕೆಲಸವಿರಬೇಕು. ಅದು ಅವಳ ಅಪ್ಪಾಜಿಗೆ ಸಂಬಂಧಿಸಿದುದೇ ಇರಬೇಕು – ಎಂದು ಅವರು ಅಂದಾಜು ಮಾಡಿ ಕೇಳಿದರು: 'ಅಪ್ಪಾಜಿ ಹ್ಯಂಗವ್ರೆ?'

'ಅದುನ್ನೇ ಹೇಳಾಣ ಅಂತ ಬಂದೆ. ನಿಮ್ಮಿಂದ ಸಹಾಯವಾಗಬೇಕು. ಎಲ್ಲಾದರೂ ಹೊರಗಡೆ ಹೋಗಿ ಮಾತಾಡಾಣ.'

ಅವರು ಕಾಫಿ ಮುಗಿಸಿದರು. ಅವಳು ಒಂದು ಚೂರು ಮಾತ್ರ ಕೊಬ್ಬರಿ ಬೆಲ್ಲವನ್ನು ತಿಂದಳು. ಅವಳನ್ನೂ ಕರೆದುಕೊಂಡು ಕೆರೆಯ ಕೋಡಿಯ ಕಡೆಗೆ ಹೊರಟರು. ಮೋಹನದಾಸ ಒಳಗಿನಿಂದ ಹೊರಗೆ ಬರಲಿಲ್ಲ. ಇಬ್ಬರೂ ನಡೆದು ಕೋಡಿಯ ನೀರು ಹರಿಯುವ ಹಳ್ಳದ ಬದಿಯ ಒಂದು ಬಂಡೆಯ ಮೇಲೆ ಕುಳಿತರು. ಅವಳು ತನ್ನ ತಂದೆಯ ಮಾತುಕಥೆ ಮತ್ತು ವರ್ತನೆಗಳನ್ನು ವಿವರಿಸಿ ಹೇಳಿದಳು: 'ಯಾರೋ ಹೆಂಗಸಿಗೂ ಅವರಿಗೂ ಸಂಬಂಧವಿತ್ತು ಅಂತ ನನ್ನ ಅನುಮಾನ. ಈಗ ಅವಳಿಗೂ ಇವರಿಗೂ ಸಂಪರ್ಕ ತಪ್ಪಿರಬಹುದು. ಅವಳು ಯಾರು ಅಂತ ನಾನು ಪತ್ತೆಮಾಡಿ ಇಟ್ಟಿರಬೇಕು. ಉಪಾಯ ಮಾಡಿ ಇವರನ್ನ ಆಸ್ಪತ್ರೆಗೆ ಕರಕೊಂಡು ಹೋಗಿ ಸೇರಿಸೂದು. ನಮ್ಮ ಅನುಮಾನವನ್ನ ಡಾಕ್ಟರಿಗೆ ಹೇಳೂದು. ಡಾಕ್ಟರು ಅವಳನ್ನು ಕರೆಸಿ ಅಂದರೆ, ಅವಳು ಬಂದು ಅವರು ಹೇಳಿದ ಹಾಗೆ ಮಾಡುಕ್ಕೆ ಸಿದ್ಧಳಾಗಿರಬೇಕು. ನಿಮ್ಮ ಕೇರೀಲಿ ಯಾರಾದರೂ ಇರಭೌದು ಅಂತ ನನಗೆ ಅನುಮಾನ ಬರ್ತಾ ಇದೆ.'

ಬೆಟ್ಟಯ್ಯನವರು ಯೋಚಿಸಿ ನೋಡಿದರು. ಅವರಿಗೆ ತಿಳಿದಂತೆ, ಯಾರೂ ಇರಲಿಲ್ಲ. ಆದರೆ ಇದು ಅಸಂಭವವೂ ಅಲ್ಲ. ತಮ್ಮ ಮತ್ತು ಬಲಗೈ ಕೇರಿಗಳ ಕೆಲವು ಹೆಂಗಸರು ಊರೊಳಗಿನ ಮೇಲು-ಜಾತಿಯವರ ಸಂಪರ್ಕವಿಟ್ಟುಕೊಂಡಿರುತ್ತಿದ್ದುದು ಮೊದಲಿನಿಂದ ನಡೆದು ಬಂದ ವಿಷಯ. ತಾವು ಮಹಾತ್ಮರ ಆಶ್ರಮ

ದಿಂದ ಬಂದು ಕೇರಿಯ ಮುಖಂಡರಾದ ಮೇಲೆ, 'ಹಾಗೆ ಮಾಡಬಾರದು, ಅದು ಪಾಪ' ಎಂದು ಹೇಳಿ ತಪ್ಪಿಸಲು ಪ್ರಯತ್ನಪಟ್ಟಿದ್ದರು. ಇವರಿಗೆ ಸರ್ಕಾರ ದಿಂದ ಮನೆ ಕಟ್ಟಿಸಿ ಕೊಟ್ಟು, ದರಖಾಸ್ತಿನಲ್ಲಿ ಜಮೀನು ಕೊಡಿಸಿ, ತಾವು ಅಸೆಂಬ್ಲಿ ಮೆಂಬರಾದಮೇಲೆ ತಮ್ಮ ಮಾತಿಗೆ ಬೆಲೆ ಕೊಟ್ಟು ಬಹುತೇಕ ಜನರು ಅಂಥದನ್ನೆಲ್ಲ ನಿಲ್ಲಿಸುತ್ತಿದ್ದಾರೆ. ಆದರೆ ಬಲಗೈ ಕೇರಿಯವರು ಯಾವುದಕ್ಕೂ ತಮ್ಮ ಮಾತು ಕೇಳುವುದಿಲ್ಲ. ಆ ಕೇರಿಯಲ್ಲಿ ಏನಾದರೂ ಇವರ ಸಂಬಂಧದ ಹೆಂಗಸಿದ್ದಾಳೆಯೆ? ಆದರೆ ಗುಡಿಯ ಪೂಜಾರಯ್ಯನವರಾದ ಅವರು ಹೀಗೆ ಮಾಡುತ್ತಾರೆಯೆ, ಎಂಬ ಅನುಮಾನ ಮನಸ್ಸಿನಲ್ಲಿ ಬಂತು. ಅದನ್ನು ಹೇಳಿದಾಗ ಸತ್ಯ ಎಂದಳು: 'ಹೀಗೆ ಏನಾದರೂ ಇರಭೌದು ಅಂತ ಅನುಮಾನ. ನಿಜವೇ ಅಂತ ಹೇಳುಕ್ಕಾಗುಲ್ಲ. ನಿಜವಾಗಿದ್ದರೆ ಆಶ್ಚರ್ಯವಿಲ್ಲ.'

ಬೆಟ್ಟಯ್ಯನವರಿಗೆ ಈ ಮಾತು ಸರಿ ಎನಿಸಿತು. 'ಉಪಾಯವಾಗಿ ವಿಚಾರಿಸ್ತೀನಿ. ಗೊತ್ತಾದ ಪಟೀಗೆ ಬಂದು ಹ್ಯೇಳ್ತೀನಿ' – ಎಂದರು.

"ನೀವು ತೋಟಕ್ಕೆ ಬರಬ್ಯಾಡಿ. ಅವರೆದುರಿಗೆ ಮಾತಾಡುವ ಹಾಗಿಲ್ಲ. ಯಾರಾದರೂ ಆಳು ಕಳಿಸಿ. ಅವನು ಬಂದು, 'ಅಯ್ನೋರು ಬಂದವ್ರೆ. ನೀವು ಬೆಂಗಳೂರಿಗೆ ರಜಾ ಚೀಟಿ ಬರೆದಿಲ್ವಂತೆ. ಬ್ಯಾಗ ಬರ್ದು ಕಳುಸ್ಬೇಕಂತೆ' ಅಂದ್ರೆ ಸಾಕು. ನಾನೇ ಇಲ್ಲಿಗೆ ಬರ್ತೀನಿ" – ಎಂದು ಹೇಳಿ ಅವಳು ಹೊರಟಳು. ಅವಳನ್ನು ಕಳಿಸಲು ಅವರೂ ಜೊತೆಯಲ್ಲಿ ಬಂದರು. ಇಬ್ಬರೂ ಏರಿಯನ್ನು ಹತ್ತಿ ಅರ್ಧ ಫರ್ಲಾಂಗ್ ಬರುವ ಹೊತ್ತಿಗೆ ಎದುರಿಗೆ ಒಬ್ಬ ಹುಡುಗಿ ಸಿಕ್ಕಿದಳು. ಸುಮಾರು ಸತ್ಯಳಷ್ಟೇ ವಯಸ್ಸು. ಕಪ್ಪು ಬಣ್ಣ, ಸುಟಿಯಾದ ಮುಖ. ಎದ್ದು ಕಾಣುವ ದೊಡ್ಡ ಸೆರಗಿನ, ಹಳದಿ ಬಣ್ಣದ ರೇಷ್ಮೆ ಸೀರೆಯುಟ್ಟಿದ್ದಳು. ರವಿಕೆಗೆ ಪಿನ್ನು ಸಿಕ್ಕಿಸಿಕೊಂಡಿರುವುದು ಎದೆಯ ಮೇಲಿನ ಸೆರಗಿನ ಒಳಗಿನಿಂದ ಕಾಣು ತ್ತಿತ್ತು. ಕಾಲಿಗೆ ಕಾನ್ಪುರ ಮಾದರಿಯ ಚಪ್ಪಲಿ. ಎಡಕ್ಕೆ ಬೈತಲೆ ತೆಗೆದು ತಲೆ ಬಾಚಿ ಜಡೆ ಹೆಣೆದುಕೊಂಡಿದ್ದಾಳೆ. ಹಣೆಯ ಮೇಲೆ ದುಂಡು ಕುಂಕುಮ. ಎಡಗೈಲಿ ಎರಡು ಅಚ್ಚಾದ ಪುಸ್ತಕಗಳು, ಒಂದು ನೋಟುಪುಸ್ತಕ. ಇವರನ್ನು ಕಂಡು ಅವಳೇ ನಿಂತುಕೊಂಡಳು. ಬೆಟ್ಟಯ್ಯನವರು ಹೇಳಿದರು: 'ನನ್ನ ಮಗಳು. ನೀವು ನೋಡಿರ್ನಿಲ್ಲ ಅಂತ ಕಾಣುತ್ತೆ. ನಾನು ಹೇಳಿದ್ನಲ. ಈ ಊರು ಮಿಡ್ಲ್ ಸ್ಕೂಲಿನಾಗೆ ಮೇಷ್ಟರಾಗಿಯವ್ಳೆ.'

'ಹ್ಯಾಗಿದೀರಾ ಮೀರಾ?' – ಎಂದು ಸತ್ಯ ಮಾತನಾಡಿಸಿದಳು.

ಅದಕ್ಕೆ ಪ್ರತಿಯಾಗಿ ಮಾತನಾಡಿಸಲು ಮೀರಳಿಗೆ ತಿಳಿಯಲಿಲ್ಲ. ಅವಳ ಮುಖ ಸಂಕೋಚದಿಂದ ಕೆಂಪಗಾಯಿತು. ಎರಡು ಕೈಗಳನ್ನೂ ಜೋಡಿಸಿ ನಿಂತು

ಕೊಂಡಳು. 'ನೀವು ಅಂದ್‌ರೆ ಅವಳಿಗೆ ಭಾಳಾ ಮರ್ಯಾದಿ' – ಬೆಟ್ಟಯ್ಯನವರು ಎಂದರು.

'ನಾನು ಇಲ್ಲೇ ಇರಬೇಕು ಅಂತ ಕಾಣುತ್ತೆ ಕೆಲವು ದಿನ. ಮತ್ತೆ ಸಿಕ್ತೀನಿ. ಮಾತಾಡ್ತಾಣ' – ಎಂದು ಹೇಳಿ ಸತ್ಯ ಮುಂದೆ ಹೊರಟಳು. ಮೀರಾ ತನ್ನ ಮನೆಯ ಕಡೆ ಹೆಜ್ಜೆ ಹಾಕಿದಳು. ಬೆಟ್ಟಯ್ಯನವರು ನಡುತೂಬಿನ ತನಕ ಬಂದು ಸತ್ಯಳನ್ನು ಕಳಿಸಿ ಹಿಂತಿರುಗಿದರು.

ಸತ್ಯ ತೋಟಕ್ಕೆ ಹೋದಾಗ ಹೊತ್ತು ಇಳಿಯುತ್ತಿತ್ತು. ಅಪ್ಪ ಕೊಳದ ದಡ ದಲ್ಲಿ ಕುಳಿತು ಮಂತ್ರ ಹೇಳಿಕೊಳ್ಳುತ್ತಿದ್ದರು. 'ನೀನು ಇಷ್ಟು ಹೊತ್ತು ಯಾಕೆ ಬರಲಿಲ್ಲ?' – ಎಂದು ಮುಂತಾಗಿ ಅವರು ಏನೂ ಕೇಳಲಿಲ್ಲ. 'ಸೋಪು ತರುಕ್ಕೆ ಅಂತ ಹೋಗಿದ್ದೆಯಲ್ಲ ಎಲ್ಲಿ ಅದು?' – ಎಂದು ಕೇಳಿಬಿಟ್ಟರೆ ಏನು ಗತಿ, ಎಂದು ಸತ್ಯ ಸ್ವಲ್ಪ ಗಾಬರಿಗೊಂಡಳು. ಆದರೆ ಅವರು ಏನೂ ಕೇಳಲಿಲ್ಲ. ಅವಳು ಸುಮ್ಮನೆ ಗುಡಿಸಲಿನ ಒಳಗೆ ಹವನಕುಂಡದ ಹತ್ತಿರ ಕುಳಿತಳು. ಸ್ವಲ್ಪ ಹೊತ್ತಿನ ನಂತರ ನೆನಪಾಯಿತು: ಮಧ್ಯಾಹ್ನ ಹಾಲನ್ನು ಕಾಯಿಸಿ ಇಟ್ಟಿರಲಿಲ್ಲ. ಹಾಗೆಯೇ ಇಟ್ಟರೆ ಅದು ಒಡೆಯಬಹುದು. ಒಲೆಯಲ್ಲಿ ಕೆಂಡ ಆರಿಹೋಗಿತ್ತು. ಹವನ ಕುಂಡದಲ್ಲೂ ಬೆಂಕಿ ಇರಲಿಲ್ಲ. ಒಲೆ ಹೊತ್ತಿಸಲು ಬೆಂಕಿಯ ಪೊಟ್ಟಣ ನೋಡಿ ದಳು. ಸಿಕ್ಕಲಿಲ್ಲ. ಒಳಗೆಲ್ಲ ಹುಡುಕಿದಳು. ಹೊರಗೆ ಕೂತಿದ್ದ ಅಪ್ಪನನ್ನು ನೋಡಿದರೆ ಅವರು ಎಲ್ಲೋ ಹೋಗಿದ್ದರು. ಮತ್ತೊಮ್ಮೆ ಗುಡಿಸಲಿನ ಒಳಗೆಲ್ಲ ಹುಡುಕುತ್ತಾ, ಅವರು ಜನಿವಾರ ಇಟ್ಟಿದ್ದ ಕೈಚೀಲವನ್ನು ತೆಗೆದು ನೋಡಿದಳು. ಮತ್ತೆ ನಾಲ್ಕು ಜೊತೆ ಜನಿವಾರ, ಊದುಗಡ್ಡಿಯ ಪೊಟ್ಟಣ, ಒಂದು ರೇಶ್ಮೆಯ ಚೌಕ, ಮೊದಲಾಗಿ ಕೆಲವು ಸಾಮಾನುಗಳಿದ್ದುವು. ಕೆಳಭಾಗದಲ್ಲಿ ಒಂದು ಅರಿವೆ ಬಳಲಿನ ಸಣ್ಣ ಗಂಟು. ಅದನ್ನು ತೆಗೆದು ನೋಡಿದರೆ ಒಳಗೆ ಒಂದು ನೋಟಿನ ಮಡಿಕೆ. ಎಣಿಸಿದಳು. ನೂರು ರೂಪಾಯಿಗಳ ಇಪ್ಪತ್ತು ನೋಟುಗಳು. ಎಲ್ಲವೂ ಹೊಸವು. ಒಂದಕ್ಕೊಂದು ಅಂಟಿದಂತಿದ್ದ ಅವುಗಳನ್ನು ನೋಡಿದರೆ ಹೊಸದಾಗಿ ಬ್ಯಾಂಕಿನಿಂದ ತಂದು ಇಟ್ಟಿದ್ದಂತೆ ಕಾಣುತ್ತಿತ್ತು. ಕೈಲಿ ಹಿಡಿದು ಆ ಬಗೆಗೆ ಯೋಚಿಸುತ್ತಾ ಹಾಗೆಯೇ ಕುಳಿತಳು. ಅಷ್ಟರಲ್ಲಿ ಹೊರಗಿನಿಂದ ಅಪ್ಪ ಬಂದುಬಿಟ್ಟರು. ಅವಳಿಗೆ ಗಾಬರಿಯಾಯಿತು. ಅದನ್ಯಾಕೆ ಮುಟ್ಟಿದೆ ಎಂದು ಅವರು ರೇಗಬಹುದು. ಆದರೆ ರೇಗಲಿಲ್ಲ. ಅವಳೇ ಧೈರ್ಯಮಾಡಿ ಕೇಳಿದಳು: 'ಇಷ್ಟು ದುಡ್ಡು ಇಲ್ಯಾಕೆ ಇಟ್ಟಿದೀಯ?'

'ಯಜ್ಞಕ್ಕೆ ಅಂತ ಇಂದ್ರನ ಜೊತೆ ಭೂಲೋಕಕ್ಕೆ ಹೋಗಿದ್ದೆ. ಋಷಿಪತ್ನಿ ಯಾಕೆ ಬರಲಿಲ್ಲ ಅಂತ ಚಕ್ರಾಧಿಪತಿ ಕೇಳಿದ. ತೌರಿಗೆ ಹೋಗಿದಾಳೆ ಅಂದೆ.

ವಸಿಷ್ಠ ಪತ್ನಿಯ ಕಾಣಿಕೆ ಅಂತ ಇದನ್ನ ಅರ್ಪಿಸಿದ.'

'ಇಲ್ಲಿ ಇಟ್ಟಿಯಲ, ಯಾರಾದರೂ ಕದ್ದರೆ?'

'ವಸಿಷ್ಠಾಶ್ರಮದಿಂದ ಕದಿಯುವ ಧೈರ್ಯ ಯಾವ ರಾಕ್ಷಸನಿಗಿದೆ? ಅರುಂಧತಿಗೆ ಸೇರಬೇಕಾದ ದ್ರವ್ಯ ಇಲ್ಲೇ ಇರಬೇಕು.'

ಸತ್ಯ ಮತ್ತೆ ಏನೂ ಕೇಳಲಿಲ್ಲ. ನೋಟನ್ನು ಮಡಿಸಿ ಅದೇ ಬಟ್ಟೆಯಲ್ಲಿ ಸುತ್ತಿ ಕಟ್ಟಿ ಚೀಲಕ್ಕೆ ಹಾಕಿ, ಚೀಲವನ್ನು ಸೋಲ್ಟಾವಣಿಯ ಬದಿಗೆ ಅಡ್ಡ ಕೊಟ್ಟಿದ್ದ ಕೋಲಿಗೆ ನೇತುಹಾಕಿದಳು.

೫

ಸತ್ಯ ಮತ್ತೆ ಎರಡು ದಿನ ಕಾದಳು. ವೆಂಕಟೇಶ ಪುನಃ ಹೇಳಿಕಳಿಸಿದ್ದ. ಮಧ್ಯಾಹ್ನ ಊಟವಾದ ಮೇಲೆ ಊರೊಳಕ್ಕೆ ಹೋಗಿ ಅವನಿಗೆ ಎಲ್ಲವನ್ನೂ ಹೇಳಿದಳು. ಹೊಸ ನೋಟುಗಳ ವಿಷಯ ಹೇಳಿದಾಗ, ಅದನ್ನು ಬ್ಯಾಂಕಿನಿಂದ ತಂದಿರಬಹುದೆಂದು ಶಂಕಿಸಿದ. ಸತ್ಯಳನ್ನು ನೋಡಲು ಬೆಂಗಳೂರಿಗೆ ಹೋಗಿದ್ದು ದನ್ನು ಬಿಟ್ಟರೆ ಅಪ್ಪ ಊರು ಬಿಟ್ಟು ಹೊರಗೆ ಹೋಗಿರಲಿಲ್ಲ. ಬೆಂಗಳೂರಿನಿಂದ ಬರುವಾಗಲೇ ತಾವರೆಕೆರೆಯ ಮೇಲೆ ಬಂದಿದ್ದಾರೆಂದು ಅರ್ಥಮಾಡಿಕೊಂಡ. 'ಅಂಥೋಳು ಯಾರಾದರೂ ಇದ್ದರೂ ಅವಳಿಗೆ ಇವನು ಎರಡು ಸಾವಿರ ಕೊಡೂದು ಅಂದ್ರೆ ಹುಡುಗಾಟವೆ?' – ಅವನು ಕೇಳಿದ.

'ಈಗ ಆ ಯೋಚನೆ ಮಾಡಬಾರದು. ಮೊದಲು ವಿಷಯ ತಿಳಕೊಬೇಕು. ಅವನಿಗೆ ಹುಷಾರಾಗೂದು ಮುಖ್ಯ. ನಮಗಿರೂ ಅನುಕೂಲದಲ್ಲಿ ಎರಡು ಸಾವಿರ ಯಾವ ದೊಡ್ಡ ಗಂಟು?' – ಅವಳು ಸಮಾಧಾನ ಹೇಳಿದಳು. 'ಬೆಟ್ಟಯ್ಯನವರು ಉಪಾಯದಲ್ಲಿ ಪತ್ತೆ ಮಾಡಬಹುದು. ನೀನೂ ಸೂಕ್ಷ್ಮವಾಗಿ ವಿಚಾರಿಸು. ವಿಷಯ ತಿಳಿದರೆ, ನಾನು ಬೇಕಾದರೆ ಅವಳ ಕೈಲಿ ಮಾತಾಡ್ತೀನಿ' – ಎಂದು ಹೇಳಿ ಅವಳು ತೋಟಕ್ಕೆ ಹೊರಟಳು.

ಅವಳ ವಿಧಾನ ಅವನಿಗೆ ಸುತರಾಂ ಇಷ್ಟವಾಗಲಿಲ್ಲ. ಪ್ರಾಯದಲ್ಲೋ ಅಥವಾ ಇದುವರೆಗೋ ನಮ್ಮಪ್ಪ ಯಾವುದೋ ಹೊಲತಿಯ ಜೊತೆ ಮಲಗಿರಬಹುದು. ಅದೇನು ಯಾರೂ ಮಾಡದ ಕೆಲಸವಲ್ಲ. ಆದರೆ ಇದನ್ನು ಹೀಗೆ ಹಚ್ಚಿಕೊಂಡು ಅವಳನ್ನು ಅರುಂಧತಿ ಅಂದುಕೊಬೇಕಾದರೆ ಅವನಿಗೆ ನಿಜವಾಗಿಯೂ ಬುದ್ಧಿ ಕೆಟ್ಟಿದೆ. ಅವಳಿಗೆ ಇವನು ಎರಡು ಸಾವಿರ ಕೊಡೂದು, ಅವನನ್ನೇ ಹುಡುಕಿ ಇವಳು ಉಪಾಯವಾಗಿ ಮಾತಾಡೂದು; ಅವಳಿಗೇ ತಾಳಿ ಕಟ್ತೀನಿ ಅಂತ

ಇವನು ಹುಚ್ಚಿನಲ್ಲಿ ಅಂದ್ರೆ, ಜಾತಿ ಬ್ಯಾಡ ಅನ್ನುವ ಈ ಲೌಡಿ, 'ಆಗಲಿ, ನಾನು ಅವಳನ್ನೇ ಚಿಕ್ಕನ್ನು ಅಂತೀನಿ' ಅನ್ನೋದು; ಇವಳನ್ನ ಕಾಲೇಜಿಗೆ ಕಳಿಸಿ ನಮ್ಮಪ್ಪ ಹಾಳು ಮಾಡಿದ – ಎಂದುಕೊಂಡ. ಆದರೆ ಸತ್ಯಳ ಎದುರಿಗೆ ರೇಗಲು ಅವನಿಗೆ ಧೈರ್ಯವಾಗುತ್ತಿರಲಿಲ್ಲ.

ಕೋಟೆಯ ಪಕ್ಕದ ಬಾಗಿಲಿನಿಂದ ಹೊರಗೆ ಬಂದ ಸತ್ಯ ತೋಟದ ಕಡೆಗೆ ತಿರುಗಿದಳು. ಆದರೆ ಅವಳ ದೃಷ್ಟಿ ಸ್ವಾಭಾವಿಕವಾಗಿ ಎಡಭಾಗದ ದೇವಸ್ಥಾನದ ಕಡೆಗೆ ಹೋಯಿತು. ಎರಡು ಫರ್ಲಾಂಗ್ ದೂರದ ತಗ್ಗಿನಲ್ಲಿ ಒಂದು ಪುಟ್ಟ ದಿಬ್ಬದ ಮೇಲೆ ನಿಂತಿದ್ದ ದೇವಸ್ಥಾನದ ಮುಂದೆ ಹತ್ತು ಹನ್ನೆರಡು ಜನಗಳು ನಿಂತಿದ್ದರು. ಅವರ ಪೈಕಿ ಒಬ್ಬರು ತನ್ನ ಅಪ್ಪನೆಂದು ಸ್ಪಷ್ಟವಾಗಿ ಕಾಣುತ್ತಿತ್ತು. ಲಂಗೋಟಿಯನ್ನು ಬಿಟ್ಟರೆ ಬರಿ ಮೈ. ಹೆಗಲ ಮೇಲೆ ಶಣಬಿನ ಹೊರಜಿಯಂತೆ ಇಳಿಬಿದ್ದಿರುವ ಜನಿವಾರ. ತಲೆಯ ಅಸ್ತವ್ಯಸ್ತ ಕೂದಲು. ಅವರ ಹತ್ತಿರವೇ ನಿಂತು ಕೈಲಿ ಒಂದು ಬ್ಯಾಗು ಹಿಡಿದು ಗಟ್ಟಿಯಾಗಿ ಮಾತಾಡುತ್ತಿದ್ದ ಇನ್ನೊಬ್ಬನು ಚಿಟ್ಟಯ್ಯನವರ ಮಗ ಮೋಹನದಾಸನಿರಬಹುದು ಎನಿಸಿತು. ಗಾಳಿಯು ಅವಳ ಕಡೆಯಿಂದ ಬೀಸುತ್ತಿದ್ದುದರಿಂದ ಅವರ ಮಾತು ಕೇಳುತ್ತಿರಲಿಲ್ಲ. ಆದರೆ ಅವರು ಏನೇನೋ ಗಟ್ಟಿಯಾಗಿ ಜಗಳ ಕಾಯುತ್ತಿರುವಂತೆ ಕಾಣುತ್ತಿತ್ತು. ಅವಳು ದೇವಸ್ಥಾನದ ಕಡೆಗೇ ಸರಸರನೆ ಹೆಜ್ಜೆಹಾಕಿದಳು. ಹತ್ತಿರ ಹೋದಂತೆ ಕೇಳಿಸಿತು:

ಮೋಹನದಾಸ ಅನ್ನುತ್ತಿದ್ದ: ಮೇಲು-ಜಾತಿಯೋರೆಲ್ಲ ಸದರ ಮಾಡ್ಕಂಡ್ ಬಿಟ್ಟಿದಾರೆ. ಲೇ, ಹಾರುವಯ್ಯ, ಅದ್ಯಾರು ಅಂತ ಪತ್ತೆಯಾಗಲಿ. ನಿನ್ನ ಮೇಲೆ ಕೇಸು ಹಾಕಿಸಿ ಜೀವನಾಂಶ ವಸೂಲು ಮಾಡುಸ್ತೀನಿ. ನಮ್ಮ ಜನ ಅಂದ್ರೆ ಏನಂತ ತಿಳ್ಕಂಡೆ? ಆದಿದ್ರಾವಿಡರು ನಾವೇ. ಈ ಭೂಮಿಯ ಮೂಲ ಅಧಿಕಾರ ನಮ್ಮದು.'

ಅವನ ಮಾತಿನ ರೀತಿಗೆ ಬೆರಗಾಗಿ ಉಳಿದವರು, 'ಹೋಗಲಿ ಬಿಡಪ್ಪ, ಆ ಹುಚ್ಚರ ಕೈಲಿ ಏನು ಮಾತು!' – ಎಂದು ಸಮಾಧಾನ ಹೇಳುತ್ತಿದ್ದರು.

ಅವರು ಸಮಾಧಾನ ಹೇಳಿದಷ್ಟೂ ಮೋಹನದಾಸ ರೇಗುತ್ತಿದ್ದ: 'ಸುಮ್ಮನಿರ ಬೇಕೆ? ಈ ಊರಲ್ಲಿ ಅದ್ಯಾರು ಮೀಸೆ ಹೊತ್ತ ಗಂಡಸರಿದಾರೆ ಮೇಲುಜಾತಿ ಯೋರು, ಅವ್ರುನ್ನೆಲ್ಲ ಪಂಚಾಯ್ತಿಗೆ ಕೂರುಸ್ತೀನಿ. ಈವಯ್ಯನ್ನ ಎದುರಿಗೆ ನಿಲ್ಲಿಸಿ ನ್ಯಾಯ ಕೇಳುಸ್ತೀನಿ. ತುಂಬಿದ ಸಭೇಲಿ ತಾಳಿ ಕಟ್ಟೋತನಕ ಬಿಡಲ್ಲ.'

ಇವರು ಗಟ್ಟಿಯಾಗಿ ಉತ್ತರ ಕೊಟ್ಟರು: 'ವಸಿಷ್ಠ ಶಾಪ ಅಂದ್ರೆ ಏನು ಅಂತ ಈ ಮೂರ್ಖನಿಗೆ ಗೊತ್ತಿಲ್ಲ. ಬ್ರಹ್ಮದಂಡ ಪ್ರಯೋಗುಸ್ತೀನಿ.'

ಅಷ್ಟರಲ್ಲಿ ಸತ್ಯ ಅಲ್ಲಿಗೆ ಮುಟ್ಟಿದಳು. ಅವಳನ್ನು ಕಂಡು ಅವರಿಗೆ ಪೆಚ್ಚೆನಿಸಿತು. ಅವಳು ಮೋಹನದಾಸನನ್ನು ಕೇಳಿದಳು: 'ನಿಮ್ಮ ವರ್ತನೆ ಜವಾಬ್ದಾರರಿಗೆ ತಕ್ಕದ್ದಲ್ಲ.'

ಮೋಹನದಾಸ ತಕ್ಷಣ ಅವಾಕ್ಕಾದ. ಅವಳು ಎಂದಳು: 'ಅವರೊಬ್ಬ ರೋಗಿ. ಅವರಿಗೆ ಏನು ಮಾಡಬೇಕೋ ಗೊತ್ತಾಗದೆ ನಾವು ಕಷ್ಟಪಡ್ತಿದೀವಿ. ನೀವೂ ಹುಚ್ಚರ ಹಾಗೆ ಆಡ್‌ಬಾರ್‌ದು.'

'ನಮ್ಮ ಜಾತಿ ಅಂದ್‌ರೆ ಅವರು....' – ಎಂಬ ಅವನ ಮಾತನ್ನು ಅರ್ಧಕ್ಕೇ ತಡೆದು ಅವಳು ಎಂದಳು: 'ನಿಮ್ಮ ಜಾತಿಗೆ ನೀವಲ್ಲ ಯಜಮಾನರು, ನಿಮ್ಮ ತಂದೆ. ಈ ಊರಿಗೂ ನೀವು ಮುಖಂಡರಲ್ಲ. ಮರ್ಯಾದೆಯಾಗಿ ಈ ಜಾಗದಿಂದ ಹೊರಟುಹೋಗಿ, ದೇವಸ್ಥಾನ ಜಗಳ ಕಾಯುಕ್ಕಲ್ಲ ಇರೂದು. ಈ ದಿಬ್ಬ ಇಳಿದು ಹೋಗಿ.'

ಸೇರಿದ್ದವರು, 'ನ್ಯಾಯ, ನ್ಯಾಯ' ಎಂದರು. ಮಾದಿಗರ ಈ ಹುಡುಗ ಗುಡಿಯ ಪೌಳಿಯೊಳಕ್ಕೆ ಬಂದದ್ದು ಅವರಿಗೆ ಸಹಿಸಿರಲಿಲ್ಲ. ಆದರೆ ಅವನಿಗೆ ಹಾಗೆ ಹೇಳಿ ಕಳಿಸಲು ಧೈರ್ಯವಿರಲಿಲ್ಲ. ಸತ್ಯಳ ಧೈರ್ಯವನ್ನು ಅವರು ಮೆಚ್ಚಿದರು. ಅವರಲ್ಲಿ ಒಬ್ಬರು, 'ಈ ಜಾಗ ಬಿಟ್ಟು ಮೊದ್‌ಲು ಕೆಳೀಕ್ ಇಳಿಯಯ್ಯಾ ಅಪ್ಪನಿಗೆ ಹುಟ್ಟಿದ ವಂಶೀಕ' ಎಂದರು. ಅವನಿಗೆ ನಾಚಿಕೆಯಾಯಿತು. ಬ್ಯಾಗ್ ಹಿಡಿದಿದ್ದ ಅವನ ಕೈ ಸಿಟ್ಟಿನಿಂದ ಕಂಪಿಸಲು ಆರಂಭವಾಯಿತು. ಸರಕ್ಕನೆ ಹಿಂತಿರುಗಿ ದಿಬ್ಬವನ್ನಿಳಿದು ತೂಬಿನ ಕಡೆಗೆ ಹೊರಟುಹೋದ.

ಅಲ್ಲಿದ್ದವರು ನಡೆದ ವಿಷಯವನ್ನು ಹೇಳಿದರು: ಅವರಲ್ಲಿ ನಾಲ್ವರು ಗುಡಿಯ ಪೌಳಿಯಲ್ಲಿ ಚೌಕಬಾರ ಆಡುತ್ತಿದ್ದರಂತೆ. ಉಳಿದವರು ಗದ್ದೆಗಳಲ್ಲಿದ್ದವರು. ವೆಂಕಟರಮಣಯ್ಯನವರು ಕಾಲುವೆಯ ಏರಿಯಿಂದ ಹಾಯ್ದು ಗುಡಿಯ ಕಡೆಗೆ ಬರುತ್ತಿದ್ದರು. ಏರಿಯ ಮೇಲಿನಿಂದ ತನ್ನ ಕೇರಿಯ ಕಡೆಗೆ ಹೋಗುತ್ತಿದ್ದ ಮೋಹನದಾಸ ಇವರನ್ನು ನೋಡಿದ. ಜಗಳ ಕಾಯುವುದಕ್ಕೆಂದೇ ಏರಿಯಿಂದ ಇಳಿದು ಇಲ್ಲಿಗೆ ಬಂದು, ಇವರನ್ನು ಬೈಯಲು ಶುರುಮಾಡಿದ. ಅವನ ಮಾತು, ಠೀವಿ, ಗತ್ತುಗಳ ಮುಂದೆ ಈ ಹತ್ತು ಹನ್ನೆರಡು ಜನಗಳೂ ಲೆಕ್ಕಕ್ಕಿಲ್ಲ. ವಸಿಷ್ಠ, ಅತ್ರಿಮುನಿ, ಶಾಪ, ಅಗ್ನಿಗಳನ್ನು ಬಿಟ್ಟರೆ ಯಜಮಾನರಿಗೆ ಬೇರೆ ಮಾತೇ ತಿಳಿಯುವ ಹಾಗಾಗಿದೆ.

ಅಪ್ಪನನ್ನು ಜೊತೆಯಲ್ಲಿ ಕರೆದುಕೊಂಡು ಅವಳು ತೋಟಕ್ಕೆ ಬಂದಳು. ಬ್ರಹ್ಮದಂಡ, ಬ್ರಹ್ಮಶಾಪ ಎಂಬ ಶಬ್ದಗಳನ್ನೇ ಅವರು ಪದೇ ಪದೇ ಅಂದುಕೊಳ್ಳುತ್ತಿದ್ದರು. ಗುಡಿಸಲಿಗೆ ಬಂದ ಮೇಲೆ ಕುಂಡದ ಅಗ್ನಿಯನ್ನು ಹೊತ್ತಿಸಿ

ಕೊಂಡು ಹವನಕ್ಕೆ ಪ್ರಾರಂಭಿಸಿದರು. ಸೂರ್ಯ ಮುಳುಗಲು ಇನ್ನು ಎರಡು ಗಂಟೆಯಾದರೂ ಬೇಕಾಗಿತ್ತು. ಇಷ್ಟು ಹೊತ್ತಿನಲ್ಲಿ ಅವರು ಹವನ ಮಾಡುತ್ತಿರಲಿಲ್ಲ. ಅವರ ಪಾಡಿಗೆ ಅವರನ್ನು ಬಿಟ್ಟು ಅವಳು ಕೊಳದ ದಡದಲ್ಲಿ ಕುಳಿತಳು. ಮನಸ್ಸು ಮೋಹನದಾಸನ ಒರಟುತನ ಮತ್ತು ಜಗಳಗಂಟತನವನ್ನೇ ಕುರಿತು ಯೋಚಿಸುತ್ತಿತ್ತು. ಅವನಿಗೆ ಬಡತನವೇನಿಲ್ಲ. ಅಪ್ಪ ಐನೂರು ಮರಗಳ ತೋಟ ಎಬ್ಬಿಸಿದ್ದಾರೆ. ಚನ್ನಾದ ಮನೆ. ಅಪ್ಪನಿಗೆ ಅಸೆಂಬ್ಲಿಯ ಸಂಬಳ ಮತ್ತು ಭತ್ಯೆ ಬರುತ್ತಿದೆ. ತುಮಕೂರಿನಲ್ಲಿ ಬೂಟು ಚಪ್ಪಲಿಗಳ ಅವನ ವ್ಯಾಪಾರ ಚನ್ನಾಗಿದೆಯಂತೆ. ತನ್ನ ತಂದೆಗಿರುವ ತಾಳ್ಮೆ ಮತ್ತು ಸಮಾಧಾನಗಳ ಲವಲೇಶವೂ ಅವನಿಗಿಲ್ಲ. ಯಾಕೆ ಈ ಅಸಹಿಷ್ಣುತೆ? ತನ್ನ ಇಡೀ ಜಾತಿಗೆ ಆಗಿರುವ ಅನ್ಯಾಯವನ್ನೆಲ್ಲ ತಾನೊಬ್ಬನೇ ಅನುಭವಿಸಿರುವವನಂತೆ, ಜಾತಿಯ ಕ್ಷೇಮದ ಹೊಣೆಯೆಲ್ಲ ತನ್ನ ತಲೆಯ ಮೇಲಿರುವಂತೆ ಆಡುತ್ತಾನೆ. ಅವನ ವರ್ತನೆಯಲ್ಲಿ ಅವಳಿಗೆ ಒಂದು ತೆರನಾದ ನಾಟಕೀಯತೆ ಕಂಡಿತು. ಕಾಲೇಜಿನಲ್ಲಿ ಬಿ.ಎ.ವರೆಗೆ ಓದಿದ ಅವನಿಗೆ, ಬುದ್ಧಿ ಕೆಟ್ಟಿರುವವರ ಕೈಲಿ ಜಗಳ ಕಾಯಬಾರದು ಅನ್ನುವಷ್ಟು ತಿಳಿಯಲಿಲ್ಲ. ಫೂಲ್ – ಎಂದುಕೊಂಡಳು.

ಇದು ಮೂರನೆಯ ದಿನ. ಆದರೂ ಬೆಟ್ಟಯ್ಯನವರು ಹೇಳಿಕಳಿಸಲಿಲ್ಲ. ಅವರಿಗೆ ಯಾವ ಸುಳಿವೂ ಗೊತ್ತಾಗಲಿಲ್ಲವೆ? ನಾನೇ ಇನ್ನೊಂದು ಸಲ ಹೋಗಿ ಬರಲೆ? – ಎಂದು ಯೋಚಿಸಿದಳು. ಆದರೆ ಅವರ ಮಗ ಈಗ ಮನೆಗೆ ಹೋಗಿದ್ದಾನೆಂಬ ನೆನಪಾಗಿ, ಈಗ ಅಲ್ಲಿಗೆ ಹೋಗುವುದು ಬೇಡವೆನಿಸಿತು. ಅಷ್ಟರಲ್ಲಿ ಯಾರೋ ಒಬ್ಬ ಮೆಲ್ಲಗೆ ಹೆಜ್ಜೆ ಹಾಕುತ್ತಾ ಬಂದ. ಸುಮಾರು ನಲವತ್ತರ ವಯಸ್ಸಿನ ಅವನ ವೇಷ, ಕೊರಳಿನ ಬೆಳ್ಳಿಯ ತಾಳಿ, ಕೈಯ ಬೆಳ್ಳಿಯ ಕಪ್ಪಗಳನ್ನು ನೋಡಿದರೆ ಬೆಟ್ಟಯ್ಯನವರ ಕೇರಿಯವನೆನಿಸುತ್ತಿತ್ತು. ಇಪ್ಪತ್ತು ಹೆಜ್ಜೆ ದೂರದಲ್ಲಿ ನಿಂತ ಅವನು ಅತ್ತಿತ್ತ ನೋಡಿ ಅವಳಿಗೆ ಕೈಸನ್ನೆ ಮಾಡಿದ. ಅವಳು ಎದ್ದು ಆ ಕಡೆ ಹೋದಳು. ಗುಡಿಸಲಿನಿಂದ ಮಂತ್ರ ಕೇಳಿಸುತ್ತಿತ್ತು. ಅವನು ಹೊಳೆಬಾಗಿಲತನಕ ನಡೆದ. ಇವಳು ಅನುಸರಿಸಿದಳು. ಅಲ್ಲಿ ನಿಂತು ಮೆಲ್ಲಗೆ ಹೇಳಿದ: 'ನಿಮ್ಮನ್ನ ಕರ್ಕ ಬಾ ಅಂತ ಬ್ಯಟ್ಟಣ್ಣಾರು ಸ್ವಾಮಿ ನೆತ್ತಿ ಕೆಳಕ್ ವಾಲಿದಾಗಲೇ ಅಂದ್ರು. ನಾ ಬಂದಿದ್ದೆ. ನೀವಿರ್ನೇ ಇಲ್ಲ. ಅಯ್ಯ್ನೋರು ರಾಕ್ಷಸ ಅಂತ ಪ್ವಡಿಯಾಕೇ ಬಂದ್ರು.'

'ಏನಂದ್ರು ಬೆಟ್ಟಣ್ಣಾರು?'

'ನಿಮ್ಮನ್ನ ಕರ್ಕ ಬಾ ಅಂದ್ರು.'

ಒಂದು ಕ್ಷಣ ಯೋಚಿಸಿ ಅವಳು ಹೇಳಿದಳು: 'ನಾನೀಗ ನಿಮ್ಮ ಕೇರಿಗೆ

ಬರಾಕಿಲ್ಲ. ಕೋಡಿ ತಾವುಕ್ ಬತ್ತೀನಿ. ಅಲ್ಲಿಗ್ ಬಂದಿರುಕ್ ಹೇಳು ಅವರಿಗೆ.'

ಅವನು ಹೊರಟುಹೋದ. ಅವಳಿಗೆ ಸಂಭ್ರಮವಾಯಿತು. ಇಷ್ಟರಲ್ಲಿ ಪತ್ತೆಯಾಗಿದೆ. ಯಾರಿರಬಹುದು ಅವಳು? ಯಾರಾದರೂ ಸರಿ. ಅವಳ ಮನಸ್ಸನ್ನು ಒಲಿಸಿ, ಅಗತ್ಯಬಿದ್ದರೆ ಆಸ್ಪತ್ರೆಗೂ ಬರುವಂತೆ ಡಾಕ್ಟರು ಹೇಳಿದರೆ, ಅದರಂತೆ ಕೇಳುವಂತೆ ಒಪ್ಪಿಸಬೇಕು. ನಾಳೆಯೇ ಇವರನ್ನು ಬೆಂಗಳೂರು ಮಾನಸಿಕ ಆಸ್ಪತ್ರೆಗೆ ಕರಕೊಂಡು ಹೋಗಬೇಕು. ತುಮಕೂರಿನಿಂದ ಒಂದು ಕಾರು ತರಿಸಬೇಕು. ಏನಂತ ಹೇಳಿ ಇವರನ್ನು ಕಾರಿಗೆ ಕೂರಿಸೋದು? ಯಾವುದೋ ಯಜ್ಞಯಾಗದ ಹೆಸರು ಹೇಳಬಹುದು. ದೇವೇಂದ್ರ ಬರಹೇಳಿದಾನೆ ಅನ್ನಬಹುದು. ಇತರ ಯಾವುದೂ ನಡೆಯದಿದ್ದರೆ ಬಲವಂತವಾಗಿ ಹಿಡಿದು ಕೂರಿಸಿಕೊಂಡು ಹೋಗಬೇಕು. ಅದೃಷ್ಟಕ್ಕೆ ಅವರು ಇದುವರೆಗೂ ಯಾರನ್ನೂ ಹೊಡೆದು ಬಡಿದು ಮಾಡುವ ಕೆಲಸಕ್ಕೆ ಹೋಗಿಲ್ಲ. ಆದುದರಿಂದ ಬಲವಂತವಾಗಿ ಕೂರಿಸಿಕೊಂಡರೂ, ಓಡುವ ಕಾರಿನಲ್ಲಿ ಯಾವ ಅನಾಹುತಕ್ಕೂ ಅವಕಾಶವಾಗದಂತೆ ಸುಮ್ಮನಿರಬಹುದು – ಎಂದೆಲ್ಲ ಯೋಚಿಸಿದಳು.

ಆಳು ಅವರ ಕೇರಿಗೆ ಹೋಗಿ ಹೇಳಿದ ಮೇಲೆ ಬೆಟ್ಟಯ್ಯನವರು ಬರುತ್ತಾರೆ ಎಂದು ಯೋಚಿಸಿದ ಅವಳು ಕಾಲು ಗಂಟೆ ಕಳೆದುಕೊಂಡು ಹೊರಟಳು. ಅಪ್ಪ ಇನ್ನೂ ಗಟ್ಟಿಯಾಗಿ ಮಂತ್ರ ಹೇಳುತ್ತಲೇ ಇದ್ದರು. ಹೊಳೆಯ ಬಾಗಿಲನ್ನು ಹಾಕಿಕೊಂಡು ಸಣ್ಣ ಕಾಲುವೆಯ ಏರಿಯ ಮೇಲೆ ನಡೆದು ತೂಬಿನ ಹತ್ತಿರ ಕೆರೆಯ ಏರಿಯನ್ನು ಹತ್ತಿ ಹೆಜ್ಜೆ ಹಾಕಿದಳು. ಸೂರ್ಯನು ಎಡಭಾಗದ ವಿಶಾಲವಾದ ನೀರಿನ ಆಚೆಯ ತೆಂಗಿನ ಮರಗಳ ಹಸುರನ್ನು ಸಮೀಪಿಸುತ್ತಿದ್ದ. ಅವಳು ಆಚೆಯ ಕೋಡಿ ತಲುಪುವ ಹೊತ್ತಿಗೆ ಬೆಟ್ಟಯ್ಯನವರು ಹರಿಜನ ಕಾಲೋನಿ ಎಂಬ ಬೋರ್ಡಿನ ಪಕ್ಕದ ಕಲ್ಲುಬೆಂಚಿನ ಮೇಲೆ ಕುಳಿತಿದ್ದರು. ಇವಳನ್ನು ಕಂಡು ಎದ್ದು ನಿಂತು ಹೇಳಿದರು: 'ನಮ್ಮನೆಗೇ ಹ್ವಾಗಾನಾ.'

'ಬ್ಯಾಡಿ. ಇಲ್ಲೇ ಎಲ್ಲಾದರೂ ಕೂತು ಮಾತಾಡಾಣ.'

'ಇಲ್ಯಾಕೆ ರಸ್ತೆ ದಡದಾಗೆ?'

'ಮನೇಲಿ ನಿಮ್ಮ ಮಗ ಇರ್ತಾರೆ. ಅವರಿಗೆ ಈ ವಿಷಯದಲ್ಲಿ ಸ್ಥೈರಣೆ ಇಲ್ಲ ಅಂತ ಕಾಣುತ್ತೆ.'

ಮಗನಿಗೆ ಸ್ಥೈರಣೆ ಇಲ್ಲವೆನ್ನುವುದು ಅವರಿಗೂ ಗೊತ್ತು. ಅವಳೇ ಕೇಳಿದಳು: 'ಈಗ ನಾಲ್ಕು ಗಂಟೆ ಹೊತ್ತಿನಲ್ಲಿ ಆದ ವಿಷಯ ಗೊತ್ತಾ ನಿಮಗೆ?'

'ಗೊತ್ತಿಲ್ರ. ಏನು?'

ನಡೆದದ್ದನ್ನೆಲ್ಲ ಅವಳು ವಿವರಿಸಿದಳು. ಕೇಳಿ ಬೆಟ್ಟಯ್ಯನವರು ಖಿನ್ನರಾದರು.

'ಓದುವಾಗ ಎಳ್ದಂಗೆ ಕೇಳ್ತಿದ್ದ. ಈಗ ಅವನ ಲೈನೇ ಬ್ಯಾರೆಯಾಗೈತೆ. ಗಾಂಧೀ ಮಹಾತ್ಮರು ಅನ್ನಾಕಾದು. ಅಹಿಂಸೆ ಅನ್ನಾಕಾದು. ಉರೀತಾನೆ. ಕ್ರಾಂತಿ ಅಂತಾನೆ. ಅಂಬೇಡ್ಕರ್ ಅಂತಾನೆ. ಅವಂದೊಂದೇ ಚಿಂತೆ ನಂಗೆ.'

ಅವಳು ಮುಖ್ಯ ವಿಷಯಕ್ಕೆ ಬಂದಳು: 'ಯಾರಾದರೂ ಗೊತ್ತಾಯ್ತೆ?'

'ಹೂಂ. ಮಾತಂಗಿ ಅಂತ ಅವ್ಳೆ ನೋಡಿ, ನಮ್ಮ ಕೇರಿಯೋಳೆ. ಅವಳ ಮಗ ಟುಮಕೂರಿನಾಗೆ ಎ. ಕೆ. ಬೋರ್ಡಿಂಗ್ ಹೌಸಿನಾಗೆ ಓದ್ತಾ ಇದಾನೆ. ಅವ್ಳು ನಿಮ್ಮ ಅಪ್ಪಾಜಿಗೆ ಹುಚ್ಚು ರೇಗಿದಾಗ್ನಿಂದ ಮುಂಕಾಗಿದ್ಲು. ಕೇರೀಲಿ ಯಾರಿಗೂ ಗೊತ್ತಿಲ್ಲ. ನನ್ನ ಎಂಡ್ತಿಗೆ ಅವಳೇ ಬಾಯ್ಬಿಟ್ಟಿದ್ಲಂತೆ. ನಾನು ಇಚಾರಿಸಿದ್ ಮ್ಯಾಲೆ ಹೇಳಿದ್ಲು.'

'ಹಾಗಾದ್ರೆ ನಿಮ್ಮ ಮಗನಿಗೆ ಹ್ಯಾಗೆ ಗೊತ್ತು?'

'ಇಂಥೋಳು ಅಂತ ಅವನಿಗೆ ಗೊತ್ತೋ ಇಲ್ವೋ ಕಾಣೆ. ಹಿಂಗೆ ಏನೋ ಐಯ್ತೆ, ಪತ್ತೆ ಮಾಡಬೇಕು ಅಂತ ಅವತ್ತು ನನ್ನ ಎಂಡ್ತಿಗೆ ಹೇಳ್ದೆ. ಅವತ್ತು ಅವನೂ ನುನ್ಲಿದ್ದ. ಕೇಳಿಸ್ಕಂಡಿದ್ದ. ಅದೇನ್ ಹುಟ್ಟಿಸ್ಕಂಡ್ ಹಂಗಂದ್ನೋ, ಅಥವಾ ಇವ್ಳೇ ಬಾಯಿಬಿಟ್ಲೋ ಗೊತ್ತಿಲ್ರ. ಅವತ್ತಿನ ಬ್ಯಳಿಗ್ಗೆ ಟುಮಕೂರಿಗೆ ಹೋಸೋನು ಇವತ್ತು ಮತ್ತೆ ಬಂದವ್ನೆ. ಇವತ್ತು ಯಾಕೆ ಬಂದ್ನೋ ಅದೂ ಗೊತ್ತಿಲ್ಲ. ನನ್ನ ಎಂಡ್ತಿ ನೆನ್ನೆ ರಾತ್ರೀನಾಗ ನನ್ನಕುಟ್ಟೆ ಬಾಯಿಬಿಟ್ಳು. ಇವತ್ತು ಬ್ಯಳಿಗ್ಗೆ ಮಾತಂಗೀನ ಕರಿಸ್ಕಂಡ್ ಕೇಳ್ದೆ. ನಿಜ ಅಂತ ಒಪ್ಕಂಡ್ಳು. ಹನ್ನೆಲ್ಡು ಹದಿಮೂರು ವರ್ಸದ ಆಚೆ ಮಾತಂತೆ. ಈಗ ಏನೂ ಇಲ್ವಂತೆ.'

'ಅವಳುನ್ನ ಕರಸುಕ್ಕೆ ಸಾಧ್ಯವೆ?'

'ನಾ ಹೋಗಿ ಕರ್ಕಂಡ್ ಬತ್ತೀನಿ ತಡೀರಿ' – ಎಂದು ಹೇಳಿ ಅವರು ತಮ್ಮ ಕಾಲೋನಿಯ ಕಡೆಗೆ ಹೋದರು. ಸತ್ಯಳಿಗೆ ಮಾತಂಗಿಯನ್ನು ನೋಡಿದ ನೆನಪು. ಹಿಂದೆ ಒಂದು ದಿನ, ತೋಟದಲ್ಲಿ ಯಾವುದೋ ಊರಿನವರು ತನ್ನನ್ನೂ ಅವಳನ್ನೂ ನೋಡಿ ತಾಯಿ ಮಗಳೆಂದು ತಿಳಿದುಕೊಂಡಿದ್ದರು. ಅವಳ ಮುಖ ಚಹರೆಯೂ ತನಗೆ ಸ್ಪಷ್ಟವಾಗಿ ನೆನಪಿದೆ.

ಅಷ್ಟರಲ್ಲಿ ಸೂರ್ಯ ಚೆನ್ನಾಗಿಯೂ ಮುಳುಗಿ ಕತ್ತಲಾಯಿತು. ನಾಲ್ಕು ಜನ ಗಂಡಸರು ಕುಡಿದು ಜೋರಾಗಿ ಮಾತನ್ನಾಡಿಕೊಂಡು ಮುಖ್ಯರಸ್ತೆಯಲ್ಲಿ ಹೋದರು. ಕಳ್ಳಭಟ್ಟಿಯವಿರಬೇಕು. ಮದ್ಯದ ವಾಸನೆ ಮೂಗಿಗೆ ಹೊಡೆಯುತ್ತಿತ್ತು. ಅರ್ಧ ಗಂಟೆಯಲ್ಲಿ ಚಿಟ್ಟಯ್ಯನವರು ಮಾತಂಗಿಯೊಡನೆ ಬಂದರು. ಅವರ ಕೈಲಿ ಒಂದು ಟಾರ್ಚ್ ಇತ್ತು. ಹತ್ತಿರ ಬಂದು ಅವರು ಹೇಳಿದರು: ರಸ್ತೆ ದಡದಾಗೆ ಕೂರೂದು ಬ್ಯಾಡ. ನಮ್ಮ ಕೇರೀ ಜನ ಇಲ್ಲೇ ತಿರುಗ್ತಾರೆ. ಆ ಕಡೀಕ್ ಬನ್ನಿ.'

ಮೂವರೂ ರಸ್ತೆಯಲ್ಲಿ ಒಂದೂವರೆ ಫರ್ಲಾಂಗಿನಷ್ಟು ನಡೆದರು. ಅನಂತರ ಬೆಟ್ಟಯ್ಯನವರು ಎಡಕ್ಕೆ ತಿರುಗಿ ಒಂದು ಕಾಲುದಾರಿಯಲ್ಲಿ ಅರ್ಧ ಫರ್ಲಾಂಗ್ ಕರೆದುಕೊಂಡು ಹೋದರು. ಮೂವರೂ ಒಂದು ಕಲ್ಲುಬಂಡೆಯ ಮೇಲೆ ಕುಳಿತ ಮೇಲೆ ಅವರು ಹೇಳಿದರು: 'ನೋಡವ್ವ, ಏನೂ ಮುಚ್ಚಬ್ಯಾಡ. ಅವರು ಕೇಳಿದ್ದುಕ್ಕೆ ವೈನಾಗಿ ಹೇಳು.'

ಬ್ರಾಹ್ಮಣ ಹುಡುಗಿಯ ಹತ್ತಿರ ಇದ್ದೇನೆಂಬ ಅರಿವಿನಿಂದ ಮಾತಂಗಿ ದೂರ ಕುಳಿತಿದ್ದಳು. ದಿಟ್ಟಿಸಿ ನೋಡುತ್ತಿದ್ದ ಸತ್ಯಳಿಗೆ ಅವಳು ಮಂಕಾಗಿರುವುದು ಕತ್ತಲೆಯಲ್ಲೂ ಕಾಣುತ್ತಿತ್ತು. ಮುಖ್ಯ ವಿಷಯವನ್ನು ಬೆಟ್ಟಯ್ಯನವರೇ ಹೇಳಿದ್ದದರಿಂದ ಸತ್ಯ ಕೆಲವು ವಿವರಗಳನ್ನು ಕೇಳಿದಳು: 'ಅವರಿಗೂ ನಿಂಗೂ ಯಾಕೆ ಸಂಬಂಧ ಬಿಟ್ಟುಹೋಯ್ತು?'

ಅವಳು ಉತ್ತರ ಹೇಳಲು ನಾಚಿದಳು. ಬೆಟ್ಟಯ್ಯನವರು ತಾವಾಗಿಯೇ ಎದ್ದು ದೂರ ಹೋಗಿ ಕುಳಿತರು. ಆದರೂ ಅವಳ ನಾಚಿಕೆ ಹೋಗಲಿಲ್ಲ. ಸತ್ಯ ಹತ್ತಿರ ಸರಿದು ಅವಳ ಕೈ ಹಿಡಿದುಕೊಂಡರೆ ಹೆದರಿ, ಬಂಡೆಯಿಂದ ಕೆಳಗೆ ಇಳಿದುಬಿಟ್ಟಳು. 'ನೀನು ಹೆದರಬ್ಯಾಡ. ನಾನು ಯಾರ ಕೈಲೂ ಹೇಳುಲ್ಲ ಅಂತ ಆಣೆ ಮಾಡುಕ್ಕೆ ನಿನ್ನ ಕೈ ಮುಟ್ಟಿದೆ. ನೀನು ಹೇಳದೆ ಇದ್ರೆ ಅವರ ಕಾಹಿಲೆ ವಾಸಿಯಾಗುಲ್ಲ. ಖಂಡಿತ ಹೇಳು. ದೇವರಾಣೆ' – ಎಂದು ರಮಿಸಿದ ಮೇಲೆ ಬಾಯಿಬಿಟ್ಟಳು.

'ಶಿವಗೆರೆ ಕೊಪ್ಪಲಿಂದ ಬಂದ್‌ಮ್ಯಾಗೆ ಮತ್ತೆ ಸಿಕ್ತೀನಿ ಅಂತ ಭೀತಿಯಾಯ್ತು. ಗಂಡ ಎಂಡ್ತಿರೂ ಅದು ಮಾಡಬ್ಯಾಡ್‌ದು ಅಂತ ಬ್ಯಟ್ಟಣ್ಣಾರ ಮನೆ ಸುಂಕವ್ವ ಅಂದ್ಲು. ಬುಟ್‌ಬುಟ್ಟೆ.'

ಒಂದೆರಡು ಪ್ರಶ್ನೆಗೆ ಉತ್ತರ ಹೇಳಿದನಂತರ ಮಾತಂಗಿ ಉಳಿದ ಎಲ್ಲ ಪ್ರಶ್ನೆಗಳಿಗೂ ವಿವರವಾಗಿ ಸತ್ಯವಾದ ಉತ್ತರ ಹೇಳಿದಳು. ತಾನು ಮತ್ತು ಅಯ್ಯನವರು ಎಲ್ಲಿ, ಯಾವ ಹೊತ್ತಿನಲ್ಲಿ ಸೇರುತ್ತಿದ್ದೆವು ಎಂಬುದನ್ನೆಲ್ಲ ಹೇಳಿದಳು. ಕೊನೆಗೆ ಸತ್ಯ ಕೇಳಿದಳು: 'ಬೆಂಗ್ಳೂರಿಗೆ ಕರ್ಕಂಡ್ ಹೋಗ್ತೀನಿ. ಅಲ್ಲೀ ಡಾಕ್ಟರು ನೀನೂ ಬರಬೇಕು ಅಂದ್ರೆ ಬತ್ತೀಯ?'

'ನಂಗೆ ಭೀತಿಯಾಯ್ತದೆ ಕಣ್ರವ್ವ.'

'ಭೀತಿಯಾಗುಕ್ಕೆ ನಿಂಗೇನೂ ಮಾಡುಲ್ಲ. ಇಷ್ಟಕ್ಕೂ ನಿನ್ನ ಕರೀತಾರೆ ಅಂತ ಗ್ಯಾರಂಟಿ ಇಲ್ಲ. ಇನ್ನ್ಯಾತರ ಭಯ?'

'ನನ್ನ ಮಗ ಸುಮ್ನೆ ಬಿಡ್ತಾನಾ?'

'ಅವುಂದೇನು ಹೆದರಿಕೆ?'

'ಯವ್ವೇ ನಾ ಕ್ಯಟ್ಟೆ. ಹಾರುವರು ಅಂದ್ರೆ ಅವ್ನ ಕ್ಯಂಡ ಕಾರ್ತಾನೆ.'

'ಅವನಿಗೆ ತಿಳೀದ ಹಂಗೆ ಮಾಡಭೌದು. ನಿಂಗೇ ಯಾವುದೋ ಖಾಯಿಲೆ ಯಾಗಿತ್ತು, ಬೆಟ್ಟಣ್ಣಾರ ಜೊತೆ ಔಸ್ತಿ ತಗಂಬರಾಕ್ ಬಂದೆ ಅನ್ನೋ ಹಂಗೆ ಬಾ. ನೀ ಬರದೆ ಇದ್ರೆ ಅಯ್ನೋರು ಸಾಯಭೌದು.'

ಕೊನೆಯ ಮಾತನ್ನು ಕೇಳಿದ ಅವಳಿಗೆ ಅಳು ಬಂದುಬಿಟ್ಟಿತು. 'ಹಂಗನ್ನ ಬ್ಯಾಡಿ ಕಣ್ಣವ್ವ' – ಎಂದು ಕಣ್ಣಿಗೆ ಸೆರಗು ಕೊಟ್ಟುಕೊಂಡಳು.

ಸತ್ಯ ಬೆಟ್ಟಯ್ಯನವರನ್ನು ಹತ್ತಿರಕ್ಕೆ ಕೂಗಿದಳು. ಮೂವರೂ ನಡೆದು ದೊಡ್ಡ ರಸ್ತೆಗೆ ಬಂದು ಕೆರೆಯ ಏರಿಯ ದಿಕ್ಕಿಗೆ ಹೆಜ್ಜೆ ಹಾಕಿದರು. ಕಾಲೋನಿ ಹತ್ತಿರ ಮಾತಂಗಿಯನ್ನು ಕಳಿಸಿ ಬೆಟ್ಟಯ್ಯನವರು ಸತ್ಯಳ ಸಂಗಡ ಬಂದರು. ತೋಟದ ಬಾಗಿಲಿನ ತನಕ ಬಂದು ಅವಳನ್ನು ಬಿಟ್ಟು ತಾವು ಹಿಂತಿರುಗಿದರು.

## ೬

ಅವರು ಕೊಳದ ಹತ್ತಿರ ಕುಳಿತಿದ್ದರು. ಹವನಕುಂಡದ ಬೆಂಕಿ ಬೂದಿಗರೆಯು ತ್ತಿತ್ತು. ಅದರ ಮಂದ ಬೆಳಕಿನಲ್ಲಿ ಅವಳು ಬೆಂಕಿಯ-ಪೊಟ್ಟಣ ಹುಡುಕಿ ಲಾಟೀನು ಹೊತ್ತಿಸಿದಳು. ಲಾಟೀನು ತೆಗೆದುಕೊಂಡು ಹೋಗಿ ಕೇಳಿದಳು: 'ಅಪ್ಪ, ಒಳಗೆ ಬಾ. ಇಲ್ಲೇನು ಮಾಡ್ತಿದೀಯ?'

'ಪ್ರಪಂಚ ಆರಂಭವಾಗುವ ಮೊದಲು ಬರೀ ನೀರಿತ್ತು. ನೀರು ಅಂದ್ರೆ ಏನು, ಮಹಾನ್ ಜಲರಾಶಿ. ಎಲ್ಲೆಲ್ಲೂ ನೀರೇ. ಭೂಭಾಗ ಇಲ್ಲವೇ ಇಲ್ಲ. ಅಸ್ತಿತ್ವಕ್ಕೆ ಬರದ ಭೂಮಿಯ ಭಾಗ ಇರೂದು ಹ್ಯಾಗೆ? ಆ ಜಲದ ಮಧ್ಯೆ ಒಂದು ಆಲದ ಮರ. ಆಮೇಲೆ....' – ಎಂದು, ತಾವು ಹೇಳಬೇಕೆಂದಿದ್ದುದು ಮರೆತು ಹೋದಂತೆ ಜ್ಞಾಪಿಸಿಕೊಳ್ಳತೊಡಗಿದರು.

'ನಿಂಗೆ ಸಮುದ್ರ ನೋಡಬೇಕು ಅಂತ ಆಶೆಯಾಗಿದೆಯೆ?'

'ಹೂಂ. ನನ್ನ ಮನಸ್ಸಿನಲ್ಲಿರೂದು ನಿಂಗೆ ಹ್ಯಾಗೆ ತಿಳೀತು? ನಾನಿರೂ ಕಡೆಗೇ ಸಮುದ್ರ, ಅಲ್ಲ, ಮಹಾಸಾಗರ, ಅದೂ ಅಲ್ಲ, ಮೂಲ ಜಲರಾಶಿ, ಪ್ರಲಯಜಲ ಉಕ್ಕಬೇಕು ಅಂತ ಬಯಕೆಯಾಗ್ತಿದೆ.'

'ಹಾಗಾದರೆ ನಾಳೆ ನಾಡಿದ್ದರಲ್ಲಿ ಕಾರು ಮಾಡ್ಕಂಡು ಮದರಾಸಿಗೆ ಹೋಗಾಣ. ದಡದಲ್ಲಿ ಕೂತುಕೊಂಡು ಉಕ್ಕುತ್ತಿರುವ ಸಾಗರ ನೋಡಾಣ.'

'ಉಕ್ಕೋದು ಅಂದ್ರೆ ಏನು ಗೊತ್ತಾ? ಸುತ್ತಲಿನ ಮರ ಗಿಡ, ಮನೆ ಮಠ, ಗುಡಿ ಗುಂಡಾರ, ಹೊಲ ಗದ್ದೆ ತೋಟಗಳೆಲ್ಲ ಮುಚ್ಚಿಹೋಗಬೇಕು.

ಧರ್ಮಸೃಷ್ಟಿಯಾಗುವ ಮೊದಲು ಆಲದ ಮರ, ಅಲ್ಲ, ಒಂದು ಆಲದ ಎಲೆ ತೇಲಿ ಬಂತು. ಹೊಸ ಸಂಸ್ಕಾರ' – ಎಂದು ಮತ್ತೆ ಮಧ್ಯದಲ್ಲಿ ಮರೆತಂತೆ ನೆನಸಿಕೊಳ್ಳಲು ಹೆಣಗಿದರು.

'ಹೂಂ. ಬಿರುಗಾಳಿ ಬಂದಾಗ ಹಾಗೆಯೇ ಆಗುತ್ತಂತೆ. ನಾನೂ ಜೊತೆಗಿರ್ತೀನಿ.'

'ಆಗ ನೀನೆಲ್ಲಿರ್ತೀಯ, ನಾನೆಲ್ಲಿರ್ತೀನಿ? ಮಂಕು ಹುಡುಗಿ' – ಎಂದು, ಲಾಟೀನಿನ ಬೆಳಕಿನಲ್ಲಿ ಕಾಣಿಸಿದ ಒಂದು ಕಲ್ಲನ್ನು ತೆಗೆದು ಕೊಳದ ಮಧ್ಯಕ್ಕೆ ಎಸೆದರು. ಧೊಸ್ ಎಂದು ಬಿದ್ದ ಅದು ಅಲೆಗಳನ್ನು ಎಬ್ಬಿಸಿ, ಕನ್ನಡಿಯಂತಿದ್ದ ನೀರನ್ನು ಕಲಕಿತು. 'ನೀರು ಶಾಂತವಾಗಿದ್ದರೆ ಬಿಂಬಗಳು. ಪ್ರಳಯಜಲದಲ್ಲಿ ಬಿಂಬವೂ ಇಲ್ಲ, ಬಿಂಬಿಯೂ ಇಲ್ಲ' – ಎಂದರು.

ಅವಳು ಮಾತು ಹೆಚ್ಚು ಬೆಳೆಸಲಿಲ್ಲ. ಮದರಾಸಿಗೆ ಹೋಗುವ ಸೂಚನೆಗೆ ಅವರು ಒಪ್ಪಿಕೊಂಡಾಗಿದೆ. ನಾಳೆ ಬೆಳಗ್ಗೆಯೇ ಊರೊಳಕ್ಕೆ ಹೋಗಿ, ಕಾರು ತರಿಸುವಂತೆ ವೆಂಕಟೇಶನಿಗೆ ಹೇಳಬೇಕು. ಕಾರು ಮಧ್ಯಾಹ್ನದ ಹೊತ್ತಿಗೆ ಬಂದರೂ ತಕ್ಷಣ ಹೊರಟರೆ ಸಂಜೆ ನಾಲ್ಕು ಐದರ ಹೊತ್ತಿಗೆ ಬೆಂಗಳೂರು ತಲುಪುತ್ತೀವೆ. ಕೇಳಿದರೆ ಬೆಂಗಳೂರು ಮಾರ್ಗವಾಗಿಯೇ ಮದರಾಸಿಗೆ ಹೋಗಬೇಕು ಅನ್ನೂದು. ನಾಳೆ ಸಂಜೆಗೇ ಆಸ್ಪತ್ರೆಗೆ ಸೇರಿಸಬೇಕು ಎಂದು ನಿರ್ಧರಿಸಿಕೊಂಡಳು.

ಅವರು ರಾತ್ರಿಯ ಹೊತ್ತು ಊಟ ಮಾಡುತ್ತಿರಲಿಲ್ಲ. ಬ್ರಹ್ಮರ್ಷಿಗೆ ಒಪ್ಪೊತ್ತು ಊಟವೆನ್ನುತ್ತಿದ್ದರು. ಅವಳು ಬಂದ ಮೇಲೆ, ಬಲವಂತ ಮಾಡಿ ಹಾಲು ಕೊಡುತ್ತಿದ್ದಳು. ಚೊಂಬಿನಲ್ಲಿದ್ದ ಹಾಲನ್ನು ಬಿಸಿಮಾಡಿ ತಂದು ಅವರ ಮುಂದಿಟ್ಟು ಕುಡಿಸಿದಳು. ತಾನು ಒಳಗೆ ಹೋಗಿ ಕುಳಿತು, ಮಧ್ಯಾಹ್ನದ ಅಡಿಗೆಯಲ್ಲಿ ಮಿಕ್ಕಿದ್ದ ಅನ್ನ ಸಾರುಗಳನ್ನು ಉಂಡು, ತಟ್ಟೆ ಪಾತ್ರೆಗಳನ್ನು ತೊಳೆದಿಟ್ಟಳು. ರಾತ್ರಿ ಮಲಗುವುದರಲ್ಲಿ ಅವರದ್ದು ನಿಶ್ಚಯವಿಲ್ಲ. ಅವಳೇನೋ ಬಾಗಿಲಿನ ಹತ್ತಿರ ತೆಂಗಿನಗರಿಯ ತಟ್ಟೆಯ ಮೇಲೆ ಗೋಣಿಯ ಚೀಲ, ಮೇಲೆ ಒಂದು ಪಂಚೆ ಹಾಸಿರುತ್ತಿದ್ದಳು. ಆದರೆ ಅವರು ಅಲ್ಲಿ ಮಲಗುತ್ತಿರಲಿಲ್ಲ. ಈ ದಿನವೂ ಹಾಗೆ ಹಾಕಿ, ಹವನಕುಂಡದ ಹಿಂಭಾಗದಲ್ಲಿ ತನಗೆ ಇನ್ನೊಂದು ಗೋಣಿಯ ಚೀಲ ಹಾಸಿಕೊಂಡು ಒಂದು ದುಪ್ಪಟಿ ಹೊದೆದು ಮಲಗಿದಳು. ವಿಪರೀತ ನಿದ್ದೆ ಬರುತ್ತಿತ್ತು.

ಬೆಳಗ್ಗೆ ಎದ್ದಾಗ ಅಪ್ಪನ ಮುಖ ಕಾಣಲಿಲ್ಲ. ಕೊಳದಲ್ಲಿ ಹಲ್ಲುಜ್ಜಿ ಮುಖ ತೊಳೆದು, ಅಗ್ನಿಕುಂಡದ ಬೂದಿ ತೆಗೆದು ಮತ್ತೆ ಹವನಕ್ಕೆ ಅಣಿಮಾಡಿಟ್ಟರೂ ಅವರು ಕಾಣಲಿಲ್ಲ. ಇಷ್ಟು ಹೊತ್ತಿಗೆ ಅವರು ಅಗ್ನಿಕಾರ್ಯವನ್ನು ಆರಂಭಿಸ

ಬೇಕಾಗಿತ್ತು. ದೇವಸ್ಥಾನದ ಕಡೆಗೇನಾದರೂ ಹೋಗಿರಬಹುದು. ಆದರೆ ಅವ ರನ್ನು ಹುಡುಕುವುದು ಬೇಡವೆಂದು ನಿರ್ಧರಿಸಿ ಗುಡಿಸಲಿನ ಬಾಗಿಲು ಹಾಕಿ ಕೊಂಡು ತೋಟದ ಹೊಳೆಬಾಗಿಲನ್ನು ಮುಚ್ಚಿ ಊರೊಳಕ್ಕೆ ನಡೆದಳು. ಮನೆಗೆ ಹೋಗುವ ಹೊತ್ತಿಗೆ ವೆಂಕಟೇಶ ಹೋಟೆಲ್ ಕಡೆಗೆ ಹೋಗಿದ್ದ. ಅವನನ್ನು ಕರೆಯಲು ಹಿಂಭಾಗದ ಕೊಟ್ಟಿಗೆಯಲ್ಲಿ ಕಸಗುಡಿಸುತ್ತಿದ್ದ ಆಳನ್ನು ಕಳಿಸಿ, ಜಯಮ್ಮ ಕೊಟ್ಟ ಕಾಫಿ ಕುಡಿದು ಅವಳಿಗೆ ಮುಂದಿನ ಪ್ಲಾನನ್ನು ಹೇಳುತ್ತಿ ದ್ದಳು. ಅಷ್ಟರಲ್ಲಿ ವೆಂಕಟೇಶ ಬಂದ. ನೆನ್ನೆ ರಾತ್ರಿ ತಾನು ಮಾತಂಗಿಯನ್ನು ಕಂಡದ್ದನ್ನೂ ತಿಳಿಸಿ, ಈ ದಿನವೇ ಕಾರಿನಲ್ಲಿ ಅವನೊಡನೆ ಬೆಂಗಳೂರಿಗೆ ಹೋಗು ವುದೆಂದು ತಿಳಿಸಿದಳು. ಜೊತೆಗೆ ವೆಂಕಟೇಶ ಒಬ್ಬ ಬಂದರೆ ಸಾಕು. ಅವನನ್ನು ಕಂಡು ಅವರು ರೇಗಿದರೆ ಅವನು ಬಸ್ಸಿನಲ್ಲಿ ಬರಲಿ. ದಾರಿಯಲ್ಲಿ ಮರೆತು ಸಹ ಬೆಂಗಳೂರು ಅನ್ನಕೂಡದು. ಸೀದಾ ಮದರಾಸಿಗೇ ಪ್ರಯಾಣ ಅನ್ನಬೇಕು. ಡ್ರೈವರ್‌ಗೆ ಸಹ ವಿಷಯ ಹೇಳಿರಬೇಕು – ಎಂಬ ಅವಳ ಸಲಹೆಯನ್ನು ಅವನು ಒಪ್ಪಿಕೊಂಡ. ತಾವರೆಕೆರೆಗೋ ತಿಪಟೂರಿಗೋ ಹೋಗಿ ಮಧ್ಯಾಹ್ನದ ಒಳಗೇ ಒಂದು ಕಾರು ತರುವುದಾಗಿ ಹೇಳಿ ಜೇಬಿಗೆ ದುಡ್ಡು ಹಾಕಿಕೊಂಡು ಹೊರಟೂ ಬಿಟ್ಟ.

ಅವಳು ತೋಟಕ್ಕೆ ಬಂದು ಸ್ನಾನ ಮಾಡಿ ಅಡಿಗೆಗೆ ಇಟ್ಟಳು. ಕಾರು ಬರುವ ಮೊದಲು ಅವರಿಗೆ ಊಟ ಮಾಡಿಸಿರಬೇಕು. ಆದರೆ ಅವರ ಮುಖವೇ ಇಲ್ಲ. ಬೇಳೆ ಬೇಯಹಾಕಿ ದೇವಸ್ಥಾನದ ತನಕ ಹೋಗಿ ನೋಡಿದಳು. ಒಳಗೆ ನರಸಿಂಹ ಜೋಯಿಸರು ಪೂಜೆ ಮಾಡುತ್ತಿದ್ದರು. ಸುತ್ತಮುತ್ತ ಎಲ್ಲಿಯೂ ಅವರ ಸುಳಿವಿಲ್ಲ. ಕಾಲುವೆಯ ದಡದಮೇಲೆ ನಡೆದು ತೂಬಿನ ಹತ್ತಿರ ಏರಿಯನ್ನು ಹತ್ತಿ ಸ್ವಲ್ಪ ದೂರ ನಡೆದು ನೋಡಿದಳು. ಏನೂ ಕಾಣಲಿಲ್ಲ. ವಾಪಸು ಬಂದು ಬೇಳೆಗೆ ಮೆಣಸಿನಪುಡಿ ಹಾಕಿ ಮತ್ತೆ ತೋಟದ ಹೊರಗೆ ಬಂದು ನೋಡಿ ಹಿಂತಿರುಗಿದಳು.

ಹನ್ನೆರಡು ಗಂಟೆಯ ಹೊತ್ತಿಗೆ ಮನೆಯ ಆಳು ಬಂದ. ಸ್ವಲ್ಪ ದೂರ ಬರು ವಂತೆ ಅವಳಿಗೆ ಕೈಸನ್ನೆ ಮಾಡಿದ. 'ಅವರೆಲ್ಲೋ ಹೋಗಿದಾರೆ. ಏನು ಹೇಳು' – ಎಂದದ್ದಕ್ಕೆ, 'ಕಾರು ಬಂದೈತೆ. ಓಟೆಲ್ ತಾವ ನಿಲ್ಲಿಸಿಯವ್ರೆ. ಅವ್‌ರುನ್ನ ಕರ್ಕೊಂಡ್ ಬರಾಣಂತೆ' ಎಂದ. ಬೆಳಗ್ಗೆ ಎದ್ದಾಗಿನಿಂದ ತಾನು ಅವರನ್ನು ಕಂಡಿಲ್ಲವೆಂದೂ ಸುತ್ತ ಎಲ್ಲಾದರೂ ಹುಡುಕಲು ಜನ ಕಳಿಸಬೇಕೆಂದೂ ಅವಳು ಹೇಳಿಕಳಿಸಿದಳು.

ಜನರು ಎಲ್ಲೆಲ್ಲೂ ಹುಡುಕಿದರು. ಗದ್ದೆ, ತೋಟ, ಹೊಲಮಾಳಗಳಲ್ಲಿ

ಅಲ್ಲದೆ ಕೋಟೆಯ ಹೊರ ಕಂದುಕಗಳಲ್ಲೆಲ್ಲ ತಡಕಿದರು. ಊರೊಳಗೆ ಪ್ರತಿಯೊಬ್ಬರ ಮನೆಯ ಹಿತ್ತಿಲನ್ನೂ ಶೋಧಿಸಿದರು. ಸಂಜೆ ಐದು ಗಂಟೆಯಾದರೂ ಯಾವ ಸುಳಿವೂ ಸಿಕ್ಕಲಿಲ್ಲ. ಡ್ರೈವರ್‌ನನ್ನು ವೆಂಕಟೇಶ ಹೊತ್ತು ಮುಳುಗುವ ತನಕ ಕಾಯಿಸಿ ಇಟ್ಟಿದ್ದು, ಅನಂತರ ಚೌಕಾಶಿ ಮಾಡಿ ದುಡ್ಡು ಕೊಟ್ಟು ಕಳಿಸಿದ. ಸತ್ಯ ತೋಟದ ಸುತ್ತಿನಲ್ಲೇ ಕಾಯುತ್ತಿದ್ದಳು. ಸಂಜೆ ಏಳು ಗಂಟೆಯಲ್ಲಿ ಅವಳು ಮನೆಗೆ ಬಂದಾಗ ವೆಂಕಟೇಶ ಹತಾಶನಾಗಿದ್ದ. 'ಇವತ್ತು ನಾಳೆ ನೋಡಾಣ. ಬುದ್ಧಿಭ್ರಮೆಯಾದೋರನ್ನು ನಿಭಾಯಿಸುವಾಗ ಇಂಥದೆಲ್ಲ ಆಗೂದೇ' – ಎಂದು ಅವಳು ತಾಳ್ಮೆಯಿಂದ ಹೇಳಿ ಮತ್ತೆ ತೋಟಕ್ಕೆ ಹೊರಟಳು.

'ಅವನು ಎಲ್ಲಿಗೆ ಹೋಗಿದಾನೋ ಏನು ಕತೆಯೋ ನೀನೊಬ್ಬಳು ಯಾಕೆ ಅಲ್ಲಿಗೆ ಹೋಗ್ತೀಯ?'

'ಎಲ್ಲಿಗೆ ಹೋಗಿದ್ದರೂ ರಾತ್ರಿ ಗುಡಿಸಲಿಗೆ ಬರ್ತಾನೆ ಅಂತ ನಂಗೆ ಅನ್ಸುತ್ತೆ. ನಂಗೇನೂ ಹೆದರಿಕೆ ಇಲ್ಲ.'

'ಜೊತೆಗೆ ನರಸಿಂಹ ಜೋಯ್ಸರನ್ನೋ ಆಳನ್ನೋ ಕರ್ಕಂಡು ಹೋಗು.'

'ಯಾರೂ ಬ್ಯಾಡ. ಇನ್ನೊಬ್ಬರ ಮುಖ ಕಂಡು ಅವನು ರೇಗಭೌದು' – ಎಂದು ಹೇಳಿ, ಜಯಮ್ಮ ಬಲವಂತಪಡಿಸಿದ್ದಕ್ಕೆ ಅಲ್ಲಿಯೇ ಒಂದು ತುತ್ತು ಊಟ ಮಾಡಿ ಹೊರಟಳು. ವೆಂಕಟೇಶ ಟಾರ್ಚ್ ಹಿಡಿದು ತೋಟದ ಬಾಗಿಲು ತನಕ ಕಳಿಸಿ ಬಂದ.

ಆ ರಾತ್ರಿ ಅವಳಿಗೆ ನಿದ್ರೆ ಬರಲಿಲ್ಲ. ಗಾಳಿಗೆ ತೆಂಗಿನ ಗರಿ ಬೀಸಿದ ಶಬ್ದಕ್ಕೆ ಸಹ ಹೆದರಿಕೆಯಾಗುತ್ತಿತ್ತು. ಇಡೀ ತೋಟದಲ್ಲಿ ಮಾತ್ರವಲ್ಲ, ಊರಿನಿಂದ ಹರಿಜನ ಕಾಲೋನಿಯ ಮಧ್ಯದ ಒಂದು ಮೈಲಿಗೂ ಮಿಕ್ಕ ವಿಸ್ತಾರದಲ್ಲಿ ತಾನೊಬ್ಬಳೇ ಇರುವ ನೆನಪಾಯಿತು. ಅಪ್ಪ ಎಲ್ಲಿ ಹೋಗಿದ್ದಾನೋ ಗೊತ್ತಿಲ್ಲ. ಇಲ್ಲಿ ನಾನೊಬ್ಬಳು ಯಾಕೆ ಬಂದೆ? ಮನೆಯಲ್ಲೇ ಇದ್ದು ಬೆಳಗ್ಗೆ ಬರಬಹುದಾಗಿತ್ತಲ್ಲ. ಅಥವಾ ಆಳನ್ನು ಕರಕೊಂಡು ಬರಬಹುದಾಗಿತ್ತಲ್ಲ. ಅಪ್ಪ ನಿಜವಾಗಿಯೂ ರೇಗುತ್ತಿದ್ದನೇ? ರೇಗಿದ್ದರೆ ಸಮಾಧಾನ ಮಾಡಬಹುದಾಗಿತ್ತು – ಎನಿಸಿತು. ಭಯವನ್ನು ಕಳೆದುಕೊಳ್ಳಲು ಲಾಟೀನು ಹಿಡಿದು ಗುಡಿಸಲಿನ ಹಿಂಭಾಗಕ್ಕೆ ಹೋಗಿ ಎರಡು ಮರದ ತುಂಡು ತಂದಳು. ಸೋಗೆಗರಿಯಿಂದ ಸಣ್ಣ ಚೂರುಗಳನ್ನು ಹೊತ್ತಿಸಿ ದೊಡ್ಡ ತುಂಡುಗಳನ್ನು ಹೊತ್ತಿಸಿದಳು. ಹವನಕುಂಡದಲ್ಲಿ ಬೆಂಕಿಯಾಯಿತು. ಮನಸ್ಸಿಗೆ ಏನೋ ಒಂದು ತರದ ಧೈರ್ಯವೆನಿಸಿತು. ಅಪ್ಪ ಹೇಳಿಕೊಳ್ಳುತ್ತಿದ್ದ ಮಂತ್ರದ ನೆನಪಾಯಿತು. ಅದನ್ನು ಗಟ್ಟಿಯಾಗಿ ಹೇಳಬೇಕೆನಿಸಿತು. ತನಗೆ ನೆನಪಿದ್ದ ಭಾಗಗಳನ್ನು ಹೇಳಿಕೊಂಡಳು:

ಓಂ ಸುಸಮಿದ್ಧಾಯ ಶೋಚಿಷೇ ಘೃತಂ ತೀವ್ರಂ ಜುಹೋತನ।
ಅಗ್ನಯೇ ಜಾತವೇದಸೇ ಸ್ವಾಹಾ।....

ನಡುರಾತ್ರಿ ಕಳೆದ ಮೇಲೆ ಸ್ವಲ್ಪ ತೂಕಡಿಕೆ ಬಂತು. ಅಪ್ಪನಿಗೆ ತಡಿಕೆ ಹಾಸಿ ತಾನು ಅಡಿಗೆಯ ಒಲೆಯ ಕಡೆಗೆ ಗೋಣಿಯ ಚೀಲ ಹಾಕಿಕೊಂಡು ಮಲಗಿದಳು.

ಬೆಳಗ್ಗೆ ಎಚ್ಚರವಾದಾಗ ಯಾರೋ ಗುಡಿಸಲಿನ ಬಾಗಿಲು ಬಡಿದು, 'ಸತ್ಯಮ್ಮರೇ, ಸತ್ಯಮ್ಮರೇ' ಎಂದು ಕೂಗುತ್ತಿದ್ದರು. ಬಾಗಿಲಿಗೆ ಒಳಗಿನಿಂದ ಚಿಲಕವಿರಲಿಲ್ಲ. ಅವಳು ಯಾವ ಒದೆಯನ್ನೂ ಕೊಟ್ಟಿರಲಿಲ್ಲ. ಎದ್ದು ಬಾಗಿಲು ತೆಗೆದಳು. ಆಗಲೇ ಸೂರ್ಯ ಒಂದಾಳುದ್ದ ಮೇಲೆ ಬಂದಿದ್ದ. ಬಾಗಿಲು ಬಡಿದು ಕೂಗುತ್ತಿದ್ದಾತ ತಮ್ಮ ಊರಿನವರೇ. ಅವಳಿಗೆ ಸರಿಯಾಗಿ ಗುರುತಿಲ್ಲ. ಅವನು ಹೇಳಿದ: 'ನಿಮ್ಮಣ್ಣಾರು ಏರಿ ತಾವ ಅವ್ರೆ. ಕರೀತಾರೆ.'

'ಏನು ಸಮಾಚಾರ?'–ಅವನ ಗಾಬರಿಯಿಂದ ಅವಳೂ ಗಾಬರಿಗೊಂಡಳು.

'ಅಯ್ನೋರು ಸತ್ತುಹೋಗ್ಯವ್ರೆ. ಜನಿವಾರದ ಹೊರಜಿ ಇತ್ತಲಾ ಕೊರಳಾಗೆ, ಅದಕ್ಕೆ ಕಲ್ಲು ಕಟ್ಕಂಡಿ ಕೆರೆಗೆ ಬಿದ್ದವ್ರೆ. ಇವತ್ತಿನ ಬ್ಯಳಿಗ್ಗೆ ನೀರ್‌ನಾಗೆ ಅಲೆ ಇರ್ನಿಲ್ಲ. ತಿಳಿಯಾಗಿತ್ತು. ಮಗ್ಗದಕೇರಿ ಚೆನ್ನಣ್ಣ ಎಲ್ಡು ಮಾಡಿ ನೀರು ತಗಾಣಾಕೆ ಅಂತ ಹೋದ್ನಂತೆ. ಕಂಡ್ತು. ಊರಿಗೆ ಬಂದು ಏಳ್ದ.'

ಅಷ್ಟರಲ್ಲಿ ಅವಳಿಗೆ ತಲೆ ಸುತ್ತಿಬಂದಂತೆ ಆಯಿತು. ಬಾಗಿಲುವಾಡವನ್ನು ಒರಗಿ ಕುಳಿತಳು. ಹಾಗೆಯೇ ನೆಲದ ಮೇಲೆ ಕುಸಿದುಬಿಟ್ಟಳು. ಇದು ಪ್ರಜ್ಞೆ ತಪ್ಪಿರುವುದೆಂದು ಅವನಿಗೆ ಗೊತ್ತಾಯಿತು. ತಕ್ಷಣ ಒಳಗೆ ಬಂದು, ಚೊಂಬಿನಲ್ಲಿದ್ದ ನೀರು ತೆಗೆದುಕೊಂಡು ಅವಳ ತಲೆಗೆ ತಟ್ಟಿದ. ಹವನಕುಂಡದ ಹತ್ತಿರ ಇಟ್ಟಿದ್ದ ಒಂದು ಅಡಿಕೆಪಟ್ಟೆಯಲ್ಲಿ ಗಾಳಿ ಹಾಕಿದ. ಎರಡು ನಿಮಿಷದಲ್ಲಿ ಪ್ರಜ್ಞೆ ಬಂತು. ಅವಳು ಕಣ್ಣು ಬಿಟ್ಟಳು. 'ಇನ್ನೊಂದ್ ವಸಿ ಮನೀಕಳಿ'–ಎಂದು ಅವನು ಹೇಳಿದರೂ ಕೇಳದೆ ಎದ್ದು ಕುಳಿತಳು. ಒಂದು ನಿಮಿಷದ ನಂತರ ಎದ್ದು ಹೊರಟಳು. ಅವನು ಅವಳ ಸಂಗಡವೇ ನಡೆದ.

ಧಾಪುಗಾಲು ಹಾಕಿ, ಅನಂತರ ಓಡಿ, ಕೆರೆಯ ಏರಿಯನ್ನು ಸರಸರನೆ ಹತ್ತಿ ಸತ್ಯ ನೀರಿನ ಹತ್ತಿರಕ್ಕೆ ಬಂದಳು. ಅಷ್ಟರಲ್ಲಿ ನಲವತ್ತು ಐವತ್ತು ಜನರ ಗುಂಪು ಸೇರಿತ್ತು. ಕಡಿದಾದ ತಾವು ಅದು. ಕಲ್ಲು ಹದಿದಿದ್ದ ಜಾಗದಿಂದ ಸುಮಾರು ಆರು ಅಡಿ ದೂರದಲ್ಲಿ ಒಂದೂವರೆ ಆಳುದ್ದ ನೀರಿನೊಳಗೆ ಹೆಣವು ಸೆಟೆದು ಕೊಂಡಿತ್ತು. ರುಬ್ಬುಗುಂಡಿನ ಆಕಾರದ ಒಂದು ಕಲ್ಲು ಹೊರಜಿಯಂತಹ ಜನಿವಾರದಿಂದ ಹೊಟ್ಟೆಗೆ ಬಿಗಿಯಲ್ಪಟ್ಟಿತ್ತು. ಗಡ್ಡ ಮತ್ತು ತಲೆಯ ಬಿಗಿಕೂದಲು ಪಾಚಿ ಮೆತ್ತಿಕೊಂಡಂತೆ ಕಾಣುತ್ತಿದ್ದುವು. ಮೀನುಖಂಡ, ಅಂಗಾಲು, ಬೆನ್ನು

ಮುಖಗಳನ್ನು ಕಿತ್ತು ಕಿತ್ತು ತಿಂದುಹಾಕುತ್ತಿದ್ದ ಒಂದೊಂದು ಬೆರಳುದ್ದದ ಮೀನುಗಳು ಸುಗ್ಗಿ ಹೊಡೆಯುತ್ತಿದ್ದುವು.

'ಎಲ್ಡು ಬಿದಿರಗಣೆ ತಗಂಡು ಹ್ಯಣ ಎತ್ತಿ' – ಒಬ್ಬರು ಎಂದರು.

'ಪೋಲೀಸ್ನೋರಿಗೆ ಏಳಿಕಳಿಸ್ಯದೆ, ತಡೀರಿ' – ಇನ್ನೊಬ್ಬರು ಉತ್ತರ ಕೊಟ್ಟರು.

# ಹತ್ತು

## ೧

ಪೋಲೀಸರು ಬಂದು ಹೆಣವನ್ನು ಮೇಲೆ ಎತ್ತಿದರು. ಮಹಜರು ನಡೆಸಿ ವೈದ್ಯಪರೀಕ್ಷೆಗೆ ಕಳಿಸಿದರು. ತಿರುಮಲಾಪುರದ ಸರ್ಕಾರಿ ಆಸ್ಪತ್ರೆಯ ಡಾಕ್ಟರೇ ಹೆಣ ಕುಯ್ದು ಪರೀಕ್ಷೆ ಮಾಡಿ ರಿಪೋರ್ಟ್ ಬರೆಯಬೇಕು. ಹೆಣ ಆ ಕಡೆ ಹೋಯಿತು. ಏರಿಯ ಹತ್ತಿರ ಸೇರಿದ್ದ ಗುಂಪಿನಲ್ಲಿ ಒಬ್ಬರು, 'ಬೆಟ್ಟಯ್ಯನ ಮಗನಿಂದಲೇ ವೆಂಕಟರಮಣಯ್ನೋರು ಪ್ರಾಣ ಕಳ್ಕೊಂಡ್ರು' ಎಂದರು. ರಹಸ್ಯದ ಬಾಯಿ ಸಿಕ್ಕಿದಂತಾಯಿತು. ಇನ್ನೊಬ್ಬರು, 'ಅವನೇ ಹಿಡಿದು ಹೊಟ್ಟೆಗೆ ಕಲ್ಲು ಕಟ್ಟಿ ಕೆರೆಗೆ ಮುಳುಗಿಸಿರಭೌದು' ಎಂದರು. ಎಲ್ಲರ ಮನಸ್ಸಿನಲ್ಲೂ ರಹಸ್ಯವು ತೆರೆದು ಸ್ಪಷ್ಟವಾಯಿತು. ಇಪ್ಪತ್ತು ಮಾರು ದೂರದಲ್ಲಿ ಹೆಣ ಹೇರಿದ ಗಾಡಿ ಹೋಗುತ್ತಿತ್ತು. ಅದರ ಹಿಂದೆ ವೆಂಕಟೇಶ ಸತ್ಯರು ನಡೆಯುತ್ತಿದ್ದರು. ಹಿಂಬದಿಯ ಗುಂಪಿನಲ್ಲಿ ಒಬ್ಬರು ಓಡಿಹೋಗಿ ವೆಂಕಟೇಶನ ಭುಜ ಹಿಡಿದು ಹಿಂದಕ್ಕೆ ಕರೆತಂದರು. ಅವನ ಕಣ್ಣಿನಲ್ಲಿ ನೀರು ತುಂಬಿತ್ತು. ಬೆಟ್ಟಯ್ಯನ ಮಗ ಮೊನ್ನೆಯ ದಿನ ದೇವಸ್ಥಾನದ ಹತ್ತಿರ ತನ್ನ ಅಪ್ಪನನ್ನು ಹೀಯಾಳಿಸಿ ಮರ್ಯಾದೆ ಕಳೆದಿದ್ದ ವರದಿ ಅವನಿಗೆ ಆ ದಿನ ಸಂಜೆಯೇ ಮುಟ್ಟಿತ್ತು. ಅವನೇ ಅಪ್ಪನ ಹೊಟ್ಟೆಗೆ ಕಲ್ಲು ಕಟ್ಟಿ ನೀರಿಗೆ ಮುಳುಗಿಸಿದ್ದಾನೆಂಬ ವಿವರಣೆಯು ಅತ್ಯಂತ ಸಹಜವಾಗಿ ಒಪ್ಪಿಗೆಯಾಯಿತು.

'ಸೂಳೆಮುಗುಂಗೆ ನೇಣೆತ್ತಿಸಬೇಕು ಕಣ್ರೀ' – ಒಬ್ಬರೆಂದರು.

'ಮೊನ್ನೆ ಅವನು ಅಂದ ಮಾತಿಗೆ ನಾವು ಸಾಕ್ಷಿ ಇದೀವಿ' – ಇನ್ನಿಬ್ಬರು ಮುಂದೆ ಬಂದರು.

'ಮೇಲುಜಾತಿಯೋರ ಮೀಸೇನ ನನ್ನ ಉಚ್ಚೇಲಿ ಬೋಳುಸ್ತೀನಿ ಅಂತಿದ್ದ ಮಾದಿಗ ನನ್ಮಗ. ಅವನ ಮೀಸೆ ಹಿಡಿದು ಕೀಳಬೇಕು ಜಿರಲೇದ ಮಾಡಿದಹಾಗೆ' – ಇನ್ನೊಬ್ಬರು ಸೇರಿಸಿದರು.

ಇಷ್ಟು ಜನ ಒಟ್ಟು ಸೇರಿರುವಾಗ, ಅವನಿಗೆ ತಕ್ಕ ಶಿಕ್ಷೆ ಮಾಡಿಸಬೇಕೆಂದು ವೆಂಕಟೇಶ ನಿಶ್ಚಯಿಸಿದ.

ಗಾಡಿಯ ಹಿಂದೆ ಹೋಗುತ್ತಿದ್ದ ಸತ್ಯ ಕೋಟೆಯ ಎಡಬಾಗಿಲಿನ ಹತ್ತಿರ ಸರಿದು ಊರೊಳಕ್ಕೆ ತಿರುಗಿಬಿಟ್ಟಳು. ಹೆಣದ ಜೊತೆ ವೆಂಕಟೇಶ ಮತ್ತು

ಜನರ ಗುಂಪು ಹೋಯಿತು. ಆಸ್ಪತ್ರೆ ಮುಟ್ಟುವ ಹೊತ್ತಿಗೆ ಗುಂಪು ಸುಮಾರು ಇನ್ನೂರಕ್ಕಿಂತ ಹೆಚ್ಚಿನದಾಯಿತು. ಹತ್ತು ನಿಮಿಷದಲ್ಲಿ ಊರಿನ ದೊಡ್ಡ ಪಟೇಲ್ ತಿರುಮಲೇಗೌಡರು ಕೈಲಿ ಬೆತ್ತದ ಕೋಲು ಹಿಡಿದು ಬಂದರು. ಸೇರಿದ್ದ ಗುಂಪು ಎರಡು ಭಾಗವಾಗಿ ಅವರಿಗೆ ದಾರಿ ಬಿಟ್ಟಿತು. 'ಯಾಕ್ ಹಿಂಗಾಯ್ತು?' – ಪಟೇಲರು ಕೇಳಿದರು.

'ಬೆಟ್ಟಯ್ಯನ ಮಗ ಅವರ ಹೊಟ್ಟೆಗೆ ಕಲ್ಲು ಕಟ್ಟಿ ಮುಣುಗಿಸಿದ' – ಒಬ್ಬರು ಉತ್ತರ ಹೇಳಿದರು.

'ಚಂಡಾಲ ನನ್ಮಗುನ್ನ ತಂದು. ಕುತ್ತಿಗೆ ಚೆಂಡವ್ಮ್ಯಾಲೆ ಮಿದ್ದು ಎಳ್ಕಂಡ್ ಬಾ ಹೋಗುಲ್ರಾ. ಅವನ ಬುಲ್ಡೆ ಚಚ್ಚಿಹಾಕುಸ್ತೀನಿ' – ಊರಿನ ದಣಿಗಳು ಗರ್ಜಿಸಿದರು.

ಇಪ್ಪತ್ತು ಮೂವತ್ತು ಜನ ಗದ್ದೆದಾರಿಯ ಕಡೆಗೆ ಓಡಿ ಹೊರಟರು. ಆದರೆ ಅಲ್ಲಿಯೇ ನಿಂತಿದ್ದು ಅದುವರೆಗೂ ಸುಮ್ಮನಿದ್ದ ಪೋಲೀಸ್ ಸಬ್-ಇನ್‌ಸ್ಪೆಕ್ಟರು ಅವರನ್ನು ಕೂಗಿ ತಡೆದರು: 'ಅವನ ಮೇಲೆ ಗುಮಾನಿ ಇದ್‌ರೆ ನಮಗೆ ಹೇಳಿಕೆ ಕೊಡಿ. ನಾವು ಅರೆಸ್ಟ್ ಮಾಡಿ ಕೇಸ್ ಹಾಕ್ತೀವಿ. ನೀವು ಕೋರ್ಟಿಗೆ ಬಂದು ಸಾಕ್ಷಿ ಹೇಳಿ. ಕೋರ್ಟಿನೋರು ಬೇಕಾದ್‌ರೆ ನೇಣುಗಟ್ಟಿಸಲಿ.'

'ನಮ್ಮೂರ ನ್ಯಾಯ ತೀರ್ಮಾನ ಮಾಡುಕ್ಕೆ ಇವನ್ಯಾವೂರ್ನೋನಪ್ಪಯ್ಯ ದೊಣೆನಾಯ್ಕ?' – ದೊಡ್ಡ ಪಟೇಲರು ಕೇಳಿದರು.

ತಮ್ಮ ಅಧಿಕಾರವನ್ನು ಧಿಕ್ಕರಿಸಿ ಮಾತನಾಡಿದುದಕ್ಕೆ ಸಬ್-ಇನ್‌ಸ್ಪೆಕ್ಟರಿಗೆ ಸಿಟ್ಟೇನೋ ಬಂತು. ಆದರೆ ಹಾಗೆ ಧಿಕ್ಕರಿಸಿದವರು ಊರಿನ ಯಜಮಾನರು ಮಾತ್ರವಲ್ಲ, ಮಂತ್ರಿಗಳ ತಂದೆ ಎಂಬ ಎಚ್ಚರವಾಯಿತು. ಹಾಗೆಂದು ಈ ಜನಗಳು ನುಗ್ಗಿ ಏನಾದರೂ ಅನಾಹುತವಾಗಿ, ಮೇಲಧಿಕಾರಿಗಳು ತನ್ನ ಮೇಲೆ ಕರ್ತವ್ಯಲೋಪದ ಆರೋಪ ತಂದರೆ ಮಂತ್ರಿಗಳ ತಂದೆ ರಕ್ಷಿಸುವುದಿಲ್ಲವೆಂಬ ಪ್ರಜ್ಞೆಯೂ ಬಂತು. ಆದುದರಿಂದ ಉಪಾಯವಾಗಿ, 'ಯಜಮಾನರೇ, ನಿಮ್ಮ ಅಪ್ಪಣೆಯಂತೆಯೇ ಆಗ್‌ಲಿ, ಊರ ಜನ ಬ್ಯಾಡ. ನಾನು ಶೀಪಾಯಿ ಕಳುಸ್ತೀನಿ' ಎಂದು, ಹತ್ತಿರ ಇದ್ದ ಕಾನಿಸ್ಟೇಬಲ್‌ಗಳಲ್ಲಿ ನಾಲ್ವರನ್ನು ಕರೆದು, 'ಹೋಗಿ, ಬೆಟ್ಟಯ್ಯನವರ ಮಗ ಮೋಹನದಾಸನನ್ನ ಹಿಡಿದು ಅರೆಸ್ಟ್ ಮಾಡ್ಕಂಡು ತನ್ನಿ. ರನ್ ಅಪ್' ಎಂದರು. ಈಗ ತಾವು ಕಾನಿಸ್ಟೇಬಲ್‌ಗಳನ್ನು ಕಳಿಸುತ್ತಿರುವುದೂ ಒಬ್ಬ ಎಂ.ಎಲ್.ಎ.ಯ ಮನೆಗೆ ಎಂಬ ನೆನಪಾಗಿ, ಮತ್ತೆ ಪೇಚಿನಲ್ಲಿ ಬಿದ್ದರು. ಆದರೆ ಅವರು ಅಂಥ ಗಟ್ಟಿಯಾದ ಎಂ.ಎಲ್.ಎ. ಅಲ್ಲ; ಅಕಸ್ಮಾತ್ ತಮ್ಮ ಮೇಲೆ ತಕರಾರ್ ಮಾಡಿದರೂ ದೊಡ್ಡ ಪಟೇಲರ ಮರೆ

ಹೊಕ್ಕು ಮಂತ್ರಿಗಳ ಮೂಲಕ ಸರಿಮಾಡಿಸಿಕೊಂಡರೆ ಆಗುತ್ತದೆ; ಇದರ ಮೇಲೆ ಆದರೆ ಒಂದು ವರ್ಗ – ಎಂದು ಸಮಾಧಾನ ತಂದುಕೊಂಡರು.

ಸ್ವಲ್ಪ ಹೊತ್ತಿನಲ್ಲಿ ಹೆಣ ಕುಯ್ದು ಮುಗಿಯಿತು. ಸತ್ತು ಸುಮಾರು ಮೂವತ್ತು ಗಂಟೆಯ ಮೇಲಾಗಿದೆ. ವಿಷ ಮೊದಲಾಗಿ ಯಾವುದೂ ಕಾಣುವು ದಿಲ್ಲ. ಮೀನುಗಳು ಕಿತ್ತು ತಿಂದಿರುವುದನ್ನು ಬಿಟ್ಟರೆ ಶರೀರಕ್ಕೆ ಏಟು ಮೊದಲಾಗಿ ಯಾವುದೇ ರೀತಿಯ ಜಕಂ ಆಗಿಲ್ಲ. ಹೊಟ್ಟೆಗೆ ಕಟ್ಟಿರುವ ಕಲ್ಲಿನ ಸಮೇತು ನೀರಿನಲ್ಲಿ ಮುಳುಗಿರುವುದೇ ಸಾವಿನ ಕಾರಣ – ಎಂಬ ತೀರ್ಮಾನಕ್ಕೆ ಡಾಕ್ಟರು ಬಂದರು. ಎಂದರೆ ಅದು ಅತ್ತಲೂ ಇಲ್ಲ ಇತ್ತಲೂ ಇಲ್ಲ. ಮೋಹನದಾಸನೇ ಹೊಟ್ಟೆಗೆ ಕಲ್ಲು ಕಟ್ಟಿ ಮುಳುಗಿಸಿದ್ದಾನೆಯೇ ಇಲ್ಲವೇ ಎಂಬುದನ್ನು ಕೋರ್ಟು ನಿಶ್ಚಯಿಸಬೇಕು. ಅದಕ್ಕೆ ಸಾಕ್ಷಿ ಮೊದಲಾಗಿ ಬೇರೆ ಬೇರೆ ಅಂಶಗಳು ಬೇಕು ಎಂಬ ಅದರ ಅರ್ಥವನ್ನು ಕುಪ್ಪಣ್ಣಯ್ಯಂಗಾರರು ದೊಡ್ಡ ಗೌಡರಿಗೆ ವಿವರಿಸಿದರು.

'ರಿಪೋರ್ಲ್ಟ್‌ನ ಸ್ವಲ್ಪ ಸರಿಯಾಗಿ ಬರಿಯುಕ್ ಏಳಯ್ಯ ಆ ಡಾಕ್ಟರಿಗೆ' – ದೊಡ್ಡ ಯಜಮಾನರು ಹುಕುಂ ಮಾಡಿದರು.

ವೆಂಕಟೇಶನ ಮನೆಯಲ್ಲೇ ಇದ್ದ ನರಸಿಂಹ ಜೋಯಿಸರೇ ಆದಿಯಾಗಿ ನಾಲ್ಕು ಜನ ಸ್ಮಾರ್ತ ಸಂಗಡದ ಬ್ರಾಹ್ಮಣರು ಸೇರಿ ಶವಸಂಸ್ಕಾರದ ಕೆಲಸಕ್ಕೆ ನಿಂತರು. ವೆಂಕಟೇಶನ ಮನಸ್ಸು ದುಃಖದಿಂದ ಮಂಕಾಗಿತ್ತು. ಅವನು ಎರಡು ಸಲ ಬಿಕ್ಕಿ ಬಿಕ್ಕಿ ಅತ್ತಾಗ, ಹತ್ತಿರ ಇದ್ದ ಕುಪ್ಪಣ್ಣಯ್ಯಂಗಾರರು ಮತ್ತು ದೊಡ್ಡ ಗೌಡರು ಸಮಾಧಾನ ಹೇಳಿದರು. ಸ್ವಲ್ಪ ಹೊತ್ತಿಗೆ ಹೆಣವನ್ನು ತೆಗೆದುಕೊಂಡು ಹೋದರು. ಅವರ ಹಿಂದೆ ವೆಂಕಟೇಶ ಶ್ಮಶಾನಕ್ಕೆ ಹೋದ. ಅವನ ತೋಟದ ಹತ್ತಿರದ ಅರಳೀಮರದ ಕೆಳಗೇ ಬ್ರಾಹ್ಮಣರ ಹೆಣ ಸುಡುವುದು.

ಗುಂಪು ಮಾತ್ರ ಆಸ್ಪತ್ರೆಯ ಮುಂದಿನಿಂದ ಚದುರಲಿಲ್ಲ. ಬ್ರಹ್ಮಹತ್ಯೆ ಮಾಡಿದ ಸೂಳೇಮಗನಿಗೆ ಎಂಥ ಶಿಕ್ಷೆಯಾಗುತ್ತದೆಂಬುವನ್ನು ದೊಡ್ಡ ಗೌಡರೇ ವರ್ಣಿಸಿದರು. ಈಗ ಹೊಲೆ ಮಾದಿಗರ ರಾಜ್ಯವಾಗುತ್ತಿದೆ. ಇವರನ್ನು ಹೀಗೆಯೇ ಬಿಟ್ಟರೆ ಧರ್ಮ ಉಳಿಯುವುದಿಲ್ಲವೆಂಬ ಎಚ್ಚರಿಕೆಯನ್ನೂ ಕೊಟ್ಟರು. ಕುಪ್ಪ ಣ್ಣಯ್ಯಂಗಾರರಿಂದ ಹಿಡಿದು ಮುಮ್ತಾಜ್ ಸಾಬಿಯ ತನಕ ಎಲ್ಲರೂ, ಈಗ ನಡೆದಿರುವ ಪಾಖಂಡಿ ಕೃತ್ಯವನ್ನು ಖಂಡಿಸಿ ಮಾತನಾಡಿದರು.

ಕಾಲು ಗಂಟೆಯಲ್ಲಿ ಪೋಲೀಸರು ಹಿಂತಿರುಗಿದರು. ಅವರ ಸಂಗಡ ಬೆಟ್ಟಯ್ಯ ನವರು ಬಂದರು. ಮೋಹನದಾಸ ನೆನ್ನೆ ಬೆಳಗ್ಗೆಯೇ ತುಮಕೂರಿಗೆ ಹೋದ ನಂತೆ. ಅವನ ಮೇಲೆ ಬಂದಿರುವ ಈ ಆಪಾದನೆ ನಿರಾಧಾರವಾದುದೆಂದು ಅವರು ಭಗವಾನ್ ಶ್ರೀರಾಮಚಂದ್ರನ ಮೇಲೆ, ಭಾರತ ಮಾತೆಯ ಮೇಲೆ ಆಣೆ ಇಟ್ಟು

ಹೇಳಿದರು. ಅವರ ಎದುರಿಗೆ ವಾದ ಮಾಡಲು ಉಳಿದವರಿಗೆ ಭಯ. ಆದರೆ ದೊಡ್ಡ ಯಜಮಾನರಿಗೇನೂ ಹೆದರಿಕೆಯಿಲ್ಲ.

'ಮೊನ್ನೆ ರಾತ್ರಿನಾಗ ಅವನು ಊರಲ್ಲಿದ್ನೋ ಇಲ್ವೋ?'

'ಇದ್ದ. ನಾನು ಸುಳ್ಳು ಹೇಳುಲ್ಲ.'

'ಮೊನ್ನೆ ಸಂಜೆನಾಗ ಅವನು ಅಯ್ಯನೋರ್‌ನ್ನ ಗುಡೀತಾವ ಹಿಡಿದು ಮರ್ಯಾದಿ ಕಳದ್ದು ನಿಜವೋ ಸುಳ್ಳೋ?'

'ಹಂಗಂತ ಯಾರೋ ಅಂದ್ರು. ನಾನು ಕಾಣೆ.'

'ಆಟು ಸಾಕು. ಇನ್‌ಸ್ಪೆಟ್ರೇ, ಬರ್‌ಕಳಿ ಕೇಸ' – ಎಂದು ಅವರು ಹುಕುಂ ಮಾಡಿದರು. ಸಬ್ ಇನ್‌ಸ್ಪೆಕ್ಟರು ಎಲ್ಲರನ್ನೂ ಸ್ಟೇಷನ್ನಿಗೆ ಕರೆದುಕೊಂಡು ಹೋದರು. ಇವರೆಲ್ಲರ ಹೇಳಿಕೆ ತೆಗೆದುಕೊಂಡರು. ಮೊನ್ನೆಯ ರಾತ್ರಿ ಇಡೀ, ತಮ್ಮ ಮಗ ಮನೆಯಲ್ಲಿ ತಮ್ಮ ಜೊತೆಯೇ ಮಲಗಿದ್ದ ಎಂದು ಬೆಟ್ಟಯ್ಯನವರ ಹೇಳಿಕೆಯನ್ನು ತೆಗೆದುಕೊಂಡು ಕಳಿಸಿದರು. ಕೇಸ್ ರಿಜಿಸ್ಟರ್ ಆಯಿತು.

೨

ಮನೆಗೆ ಅಕ್ಕಪಕ್ಕದ ಹೆಂಗಸರು ಬಂದು ಅಯ್ಯೋ ಎನ್ನುತ್ತಿದ್ದರು. ಜಯಮ್ಮನೂ ಕಣ್ಣಿನಲ್ಲಿ ನೀರು ಹಾಕಿಕೊಂಡಳು. ಕುತೂಹಲದಿಂದ ಸತ್ಯಳನ್ನು ನೋಡಬಯಸಿ ಬಂದಿದ್ದವರು ಸಹ ಈಗ ಅದನ್ನು ಮರೆತು ಸಮಾಧಾನ ಹೇಳಲು ಬಂದರು. ಅಪ್ಪ ಹೀಗೆ ಆತ್ಮಹತ್ಯೆ ಮಾಡಿಕೊಂಡ ಮನಸ್ಸಿನ ಹಿನ್ನೆಲೆಯನ್ನರಿಯಲು ಸತ್ಯಳ ಬುದ್ಧಿಯು ಪ್ರಯತ್ನಿಸುತ್ತಿದ್ದರೂ ಯಾವ ಆಲೋಚನೆ ಮಾಡುವ ಶಕ್ತಿಯೂ ಇಲ್ಲದ ಭಾವದಲ್ಲಿ ಅವಳು ಮೂಕಳಾಗಿ ಕುಳಿತಿದ್ದಳು. ತೋಟದಲ್ಲಿ ಏನೇನು ಮಾಡಿದರು, ಅದರ ಅರ್ಥವೇನು ಎಂದು ಹೆಂಗಸರು ಮಧ್ಯೆ ಮಧ್ಯೆ ಕೇಳುತ್ತಿದ್ದರು. ಆದರೆ ಅವಳಿಗೆ ಮಾತು ಬೇಕಾಗಿರಲಿಲ್ಲ. ಹಾಗೆಂದು ಕೈಸನ್ನೆಯಿಂದ ತಿಳಿಸಿ ಎದ್ದು ದನದ ಕೊಟ್ಟಿಗೆಗೆ ಹೋಗಿ ಕುಳಿತಳು.

ಹೆಣ ತೆಗೆದುಕೊಂಡುಹೋದರೆಂಬ ಸುದ್ದಿ ಬಂತು. ಅದಾದ ಒಂದು ಗಂಟೆಯ ನಂತರ, 'ಬೆಟ್ಟಯ್ಯನವರು ಬಂದಿದ್ದಾರೆ, ಕರೆಯುತ್ತಾರೆ' ಎಂದು ಕುಪ್ಪಣ್ಣಯ್ಯಂಗಾರರ ಹೆಂಡತಿ ಕೊಟ್ಟಿಗೆಗೆ ಬಂದು ಹೇಳಿದರು. ಸತ್ಯ ಎದ್ದು ನಡುಮನೆಗೆ ಬಂದಳು. ಸೂರಿನ ಕೆಳಗೆ ನಿಂತಿದ್ದ ಬೆಟ್ಟಯ್ಯನವರು ಕೈಮುಗಿದು ಕೇಳಿಕೊಂಡರು: 'ಅವ್ವಾ, ನೀವು ನಿಜ ಅನ್ನಬೇಕು. ಸತ್ಯ ಆಡಬೇಕು.' ಅವರ

ಸಲು ಅಪ್ಪನ ಕೈಲಿ ವಾದ ಮಾಡುತ್ತಿದ್ದಳು. ಹೀಗಾಗಿ ಪ್ರತಿಯೊಬ್ಬ ವ್ಯಕ್ತಿಯ ಹಿನ್ನೆಲೆಯ ವಿವರವೂ ಅವಳಿಗೆ ಗೊತ್ತಿರಲಿಲ್ಲ.

ಮಧ್ಯಾಹ್ನ ಒಂದು ಗಂಟೆಯ ಹೊತ್ತಿಗೆ ಕುಪ್ಪಣ್ಣಯ್ಯಂಗಾರರ ಹೆಂಡತಿ ಮಾಡಿದ ಅಡಿಗೆಯನ್ನು ತಂದಿಟ್ಟರು. ಅರ್ಧ ಗಂಟೆಯಲ್ಲಿ ವೆಂಕಟೇಶ ಮನೆಗೆ ಬಂದ. ಬಂದವನೇ ಸತ್ಯ ಎಲ್ಲಿ ಎಂದು ಹೆಂಡತಿಯನ್ನು ಕೇಳಿಕೊಂಡು ದನದ ಕೊಟ್ಟಿಗೆಗೆ ಬಂದು ಕೇಳಿದ: 'ನೀನ್ಯಾಕೆ ಪೋಲೀಸ್ ಸ್ಟೇಶನ್ನಿಗೆ ಹೋಗಿದ್ದೆ?'

'ಬೆಟ್ಟಯ್ಯನೋರು ಕರೆದರು.'

'ಆ ಬೋಳೀಮಗುಂಗೆ ದರ್ದು ಬಿತ್ತು, ಕರೆದ. ನೀನ್ಯಾಕೆ ಹೋದೆ?'

ಅವನ ಧ್ವನಿಯಲ್ಲೇ ರೇಗು ಕೇಳುತ್ತಿತ್ತು. ಅವಳು ತಲೆಯನ್ನು ಮೇಲೆತ್ತಿ ಅವನ ಮುಖವನ್ನೂ ನೋಡಲಿಲ್ಲ. ತನ್ನ ಪಾಡಿಗೆ ತಾನು ಸುಮ್ಮನೆ ಕುಳಿತಳು. ಅವಳ ಮೌನದಿಂದ ಅವನಿಗೆ ಹತಾಶೆಯೂ ಆಯಿತು, ಸಿಟ್ಟೂ ಬಂತು. ಮುಂದೆ ಏನು ಆಡಬೇಕೆಂಬುದು ತೋಚದಂತೆಯೂ ಆಯಿತು. ಒಂದು ನಿಮಿಷ ಸುಮ್ಮ ನಿದ್ದು ಹೇಳಿದ: 'ಆ ಸೂಳೇಮಗನ ಅಹಂಕಾರ ಎಷ್ಟು ಗೊತ್ತಿಲ್ವಾ? ಈ ಊರ್‍ನೋರೆಲ್ಲ ಕುಂಕುಮ ಇಟ್ಕಳೂ ಹೆಂಗಸರು, ತಾನೊಬ್ಬನೇ ಗಂಡಸು ಅಂತ ಹೊರಜಿಮೀಸೆ ಬೆಳಸಿದಾನೆ. ಇವರ ಹೋಟ್ಲಿಗೆ ನಾನ್ಯಾಕ್ ಬರಬಾರದು ಅಂತ, ಬಸ್‌ಸ್ಟಾಂಡಲ್ಲಿ ನಿಂತ್ಕಂಡು ಕೆಮ್ಮಿ ಕೇಳ್ತಾನಂತೆ. ಆಗ ಒಂದು ಸಲ ಜಗಳ ಕಾಯ್ಕಂಡು ಹೋಟಲೊಳಕ್ಕೆ ಬಂದು ಇಸ್‌ಕಂಡಿದ್ದ ಖರ್ಚಿಗೆ.'

ಸತ್ಯ ಈಗಲೂ ಸುಮ್ಮನಾದಳು. 'ಈಗ ಸಬ್‌ಇನ್‌ಸ್ಪೆಕ್ಟರ ಆಫೀಸಿಗೆ ನಡಿ. ಅವರು ನಿನ್ನ ಹೇಳಿಕೇನ ರಿಜಿಸ್ಟರಿಗೆ ಎಂಟರ್ ಮಾಡಿಲ್ಲ. ವಾಪಸ್ ತಗ. ನಾನು ಹೇಳಿದ ಹಾಗೆ ಬ್ಯಾರೆ ಬರಕೊಡು.'

ಅವಳು ಸುಮ್ಮನೆ ಕುಳಿತಿದ್ದಳು.

'ನಿಂಗೇನು ಕಿವ್ಡು ಹಿಡಿದಿದೆ ಏನು!'

'ನಾನು ಸುಳ್ಳೇನೂ ಬರಕೊಟ್ಟಿಲ್ಲ.'

'ಆ ನನ್ನ ಮಗ ನಮ್ಮಪ್ಪನ ಜೀವ ಕಳದುದ್ದೇ ಸುಳ್ಳಾ?'

'ಒಂದು ಥರಕ್ಕೆ ನೋಡ್ಕಂಡ್ರೆ ಅವನಿಂದಲೇ ಅಪ್ಪ ಜೀವ ಕಳ್ಕಳೂ ಯೋಚನೆ ಮಾಡ್ದ' – ಸತ್ಯ ನಿಧಾನವಾಗಿ ಹೇಳಿದಳು: 'ಆದರೆ ಅವನೇ ಕಳದ ಅನ್ನೂದು ಸುಳ್ಳು. ಎರಡಕ್ಕೂ ವ್ಯತ್ಯಾಸವಿದೆ.'

'ಅವನು ಮಾಡಿದಷ್ಟು ತಪ್ಪಿಗಾದರೂ ಶಿಕ್ಷೆ ಆಗಬ್ಯಾಡ್‌ವಾ?'

'ಮಾಡಿಸಿ. ಹತ್ತು ಜನ ಸೇರಿ ಪಂಚಾಯ್ತಿ ಮಾಡಿ. ಹುಚ್ಚು ಹಿಡಿದ ಡ್ರೈವರ್‌ನ ಹೀಗನ್ನಭೌದೇನೋ ಅಯೋಗ್ಯ ಅಂತ ಕೇಳಿ. ದಂಡ ಹಾಕಿ. ಆದ್ರೆ

ಅವನೇ ಕೊಲೆ ಮಾಡಿದಾನೆ ಅಂತ ಸುಳ್ಳುಕೇಸು ಹಾಕೂದು ಯಾವ ನ್ಯಾಯ?'

'ನಿನ್ನ ದಾರಿ ಹಿಡಿದರೆ ಈ ವಕ್ರ ನನ್ಮಕ್ಳಿಗೆ ಬುದ್ಧಿ ಬರೂದೇ ಇಲ್ಲ.'

'ವೆಂಕಟೇಶ, ವಕ್ರ ದಾರೀಲಿ ಶಿಕ್ಷೆ ಮಾಡಿದರೆ ಅವರು ತಿದ್ದಿಕಳೂದೂ ಇಲ್ಲ. ಇನ್ನೂ ವಕ್ರತನ ಜಾಸ್ತಿ ಮಾಡ್ತಾರೆ.'

ಮುಂದೆ ಏನು ಹೇಳಬೇಕೆಂಬುದು ಅವನಿಗೆ ತಿಳಿಯಲಿಲ್ಲ. ಕೊಟ್ಟಿಗೆಯ ಹಿಂಭಾಗದ ಬಾಗಿಲಿನಿಂದ ಹಿತ್ತಿಲ ಕಡೆಗೆ ಹೋಗಿ ಗರಿಕೆ ಹುಲ್ಲಿನ ಮೇಲೆ ಒಂದು ಸಲ ಉಗುಳಿ ಬಂದ.

ಈ ಅಣ್ಣ ತಂಗಿಯ ಜಗಳದಲ್ಲಿ ಜಯಮ್ಮ ಬಾಯಿ ಹಾಕಿಕೊಂಡು ಬರಲಿಲ್ಲ. ಅವಳು ಯಾವುದಕ್ಕೂ ಬಾಯಿ ಹಾಕಿಕೊಂಡು ಬರುವ ಸ್ವಭಾವದವಳಲ್ಲ. ಎಷ್ಟೇ ಸಿಟ್ಟಿದ್ದರೂ ಅದನ್ನು ಹದ್ದುಬಸ್ತಿಗೆ ತಂದುಕೊಂಡು ವ್ಯವಹಾರ ಮಾಡುವುದು ವೆಂಕಟೇಶನ ಗುಣ. ಅವನು ತಂಗಿಯನ್ನು ಮಾತನಾಡಿಸುವುದನ್ನು ಬಿಡಲಿಲ್ಲ. ಅವನೇ ಬಲವಂತ ಮಾಡಿ ಅವಳು ಒಂದು ತುತ್ತು ಅನ್ನ ತಿನ್ನುವಂತೆ ಮಾಡಿದ. ಸಂಜೆಯ ಹೊತ್ತಿಗೆ ಎಷ್ಟೋ ಜನಗಳು ಮನೆಯ ಮುಂದೆ ತುಂಬಿಕೊಂಡರು. ಸಮಾಧಾನ ಹೇಳುವುದರಿಂದ ಹಿಡಿದು ಬೆಟ್ಟಯ್ಯನ ಮಗನಿಗೆ ಶಿಕ್ಷೆಯಾಗುವ ತನಕ ಎಷ್ಟೋ ಮಾತುಗಳನ್ನು ವೆಂಕಟೇಶನಿಗೆ ಹೇಳುತ್ತಿದ್ದರು. ಸತ್ಯ ಒಳಗಿನ ಪೆಟ್ಟಿಯ ಹತ್ತಿರ ಒಂದು ಚಾಪೆ ಹಾಕಿ ಉರುಟಿಕೊಂಡಿದ್ದಳು.

ಆ ದಿನ ರಾತ್ರಿ ಅವಳಿಗೆ ನಿದ್ರೆ ಹೊತ್ತಲಿಲ್ಲ. ತಾನು ಎಲ್ಲಿಯೋ ತನಗೆ ಗುರುತು ಪರಿಚಯವಿಲ್ಲದ, ಸಂಬಂಧವಿಲ್ಲದ ಮನೆಯಲ್ಲಿ ಮಲಗಿರುವ ಅನುಭವವಾಗುತ್ತಿತ್ತು. ಈ ಊರು, ಈ ಕೇರಿ, ಈ ಮನೆಗಳು ತನ್ನ ಜೀವನಕ್ಕೆ ಸಂಬಂಧಿಸಿಲ್ಲವೆಂಬ ಭಾವ ತುಂಬಿಕೊಂಡಿತ್ತು. ಹಾಗಾದರೆ ಮುಂದೆ ತಾನು ಈ ಊರಿಗೆ ಬರುವುದೇ ಬೇಡವೇ? – ಎಂಬ ಪ್ರಶ್ನೆ ಹುಟ್ಟಿತು. ಯಾವ ಹೆಣ್ಣುಮಕ್ಕಳು ತಾನೆ ಹುಟ್ಟಿದ ಊರಿನಲ್ಲಿರುತ್ತಾರೆ? ನಾಲ್ಕು ದಿನ ಬಂದು ಹೋಗುವುದಷ್ಟೇ ಸಂಬಂಧ. ಆದರೆ ಅದು ಮದುವೆಯಾದ ಮೇಲಿನ ಮಾತು. ತನಗೆ ಮದುವೆಯಾಗುವ ಮೊದಲೇ ಹೀಗೆನಿಸುತ್ತಿದೆ. ಅಪ್ಪ ಸತ್ತ ದಿನವೇ ಹೀಗೆನಿಸಬೇಕೆ? ವೆಂಕಟೇಶನಲ್ಲಿ ಅಂತಹ ತಪ್ಪೇನಿದೆ? ಜಯಮ್ಮ ಒಳ್ಳೆಯ ಅತ್ತಿಗೆಯೇ. ಆದರೂ ತನಗೆ ಇಲ್ಲಿಂದ ಹೊರಟುಹೋಗುವ ಬಯಕೆಯಾಗುತ್ತಿದೆ. ಎಲ್ಲಿಗೆ ಹೋಗಲಿ? ಬೆಂಗಳೂರಿಗೆ? ಬೆಂಗಳೂರಿನಲ್ಲಿ ಯಾವ ಆಕರ್ಷಣೆಯೂ ಇಲ್ಲ. ಇದ್ದಕ್ಕಿದ್ದ ಹಾಗೆಯೇ ಎನ್ನಿಸಿತು: ತೋಟದ ಗುಡಿಸಲಿನಲ್ಲಿ ತಾನು ವಾಸ ಮಾಡಬೇಕು. ಅಪ್ಪ ಹುಚ್ಚಿನಲ್ಲಿ ಆಶ್ರಮವೆಂದು ಭಾವಿಸಿದ್ದ ಜಾಗವು ತನ್ನನ್ನು ಆಕರ್ಷಿಸುತ್ತಿದೆ. ಒಳಗೆ ಉರಿಯುವ ಹವನಕುಂಡ, ಮೂರು ಕಲ್ಲು ಹೂಡಿದ ಒಲೆ, ಪಕ್ಕದ

ಕೊಳ, ಅದರ ದಡ, ಅವೇ ತನಗೆ ಹೊಂದುವ ಜಾಗವೆಂಬ ಭಾವನೆ ಅದಮ್ಯವಾಗಿದೆ. ಇದೆಂತಹ ವಿಚಿತ್ರ! – ಎಂದುಕೊಂಡರೂ ಆ ಭಾವನೆ ಕಡಿಮೆಯಾಗುತ್ತಿಲ್ಲ. ಹೆಣ್ಣು ಹೆಂಗಸು ತಾನೊಬ್ಬಳು ಆ ನಿರ್ಜನ ಜಾಗದಲ್ಲಿ ಇರುವುದೆಂದರೇನು? ರಾತ್ರಿಯನ್ನು ಕಳೆಯುವುದು ಹೇಗೆ? ಭಯವಾಗುವುದಿಲ್ಲವೆ? – ಎಂಬ ಎಷ್ಟೋ ಅಡ್ಡಿ ಆತಂಕಗಳು ಮನಸ್ಸಿನಲ್ಲಿ ಹುಟ್ಟಿದುವು. ಆದರೆ ಅದಾವುದೂ ಗಟ್ಟಿಯಾಗಿ ನಿಲ್ಲುತ್ತಿರಲಿಲ್ಲ. ಅಲ್ಲಿಗೆ ಹೋಗಿ ಇರಬೇಕೆಂಬ ಬಯಕೆಯೊಂದೇ ಗಟ್ಟಿಗಟ್ಟುತ್ತಿದೆ.

ಇಡೀ ರಾತ್ರಿ ನಿದ್ರೆ ಹೊತ್ತಲಿಲ್ಲ. ಅದೇ ತೊಟ್ಟಿಯಲ್ಲಿ ಮಲಗಿದ್ದ ವೆಂಕಟೇಶನಿಗೆ ಬೆಳಗ್ಗೆ ಎದ್ದ ತಕ್ಷಣ ಹೇಳಿದಳು: 'ನಂಗೆ ಯಾಕೋ ತ್ವಾಟದಲ್ಲೇ ಇರಬೇಕು ಅನಿಸಿದೆ. ನಾನು ಅಲ್ಲಿಗೆ ಹೋಗ್ತೀನಿ.'

ಅವನು ಈ ಮಾತಿನಿಂದ ಖಿನ್ನನಾದ. 'ಬೆಟ್ಟಯ್ಯನ ಮಗನ ವಿಷಯ ನಾನು ಕೇಳಿದ್ದಕ್ಕೆ ಸಿಟ್ಟು ಬಂತೇನೇ?'

'ಸಿಟ್ಟಿಗಲ್ಲ. ಅದು ನನಗೆ ಮರೆತೇ ಹೋಗಿದೆ. ಅಲ್ಲಿಯೇ ವಾಸಮಾಡಬೇಕು ಅಂತ ಮನಸ್ಸು ಎಳೀತಿದೆ. ಅಲ್ಲಿ ಇರದೆ ಬೇರೆ ಇನ್ನೆಲ್ಲಿ ಇದ್ದರೂ ನಂಗೆ ಹುಚ್ಚೇ ಹಿಡಿಯಬಹುದು.'

'ವೀರಾಚಾರಿ ಕರಸಿ ತಾಯ್ತ ಕಟ್ಟುಸ್ತೀನಿ ತಡಿ. ಇಲ್ದೆ ಇದ್ರೆ ಬಾಬಯ್ಯನ ಹಬ್ಬದಲ್ಲಿ ಸಕ್ಕರೆ ತಿದ್ದುಸ್ತೀನಿ ಅಂತ ಮುಮ್ತಾಜ್ ಸಾಬಿಗೆ ಹೇಳಿ ಹರಕೆ ಮಾಡ್ಕೋತಾಣ.'

'ಇದೇನು ಹುಚ್ಚಲ್ಲ. ಭೂತಚೇಷ್ಟೆಯೂ ಅಲ್ಲ. ನನ್ನ ಸುಮ್ಮನೆ ಬಿಡು. ಏನೂ ಯೋಚನೆ ಮಾಡಬ್ಯಾಡ. ಒಂದಿಷ್ಟು ಅಕ್ಕಿ ಬೇಳೆ ಅಲ್ಲಿಗೆ ಕೊಟ್ಟು ಕಳಿಸು' – ಎಂದು ಹೇಳಿ, ಅವನು ಮತ್ತೆ ಏನಾದರೂ ಹೇಳುತ್ತಾನೆಯೇ ಎಂದು ಸಹ ಕಾಯದೆ ಮನೆಯಿಂದ ಹೊರಟುನಡೆದಳು.

ತೋಟದಲ್ಲಿ ಗುಡಿಸಲಿನ ಬಾಗಿಲು ಮುಚ್ಚಿತ್ತು. ಒಳಗೆ ಹೋಗಿ ತನ್ನ ಸೀರೆ, ಲಂಗ, ರವಿಕೆಗಳನ್ನು ತೆಗೆದುಕೊಂಡು ಕೊಳದಲ್ಲಿ ಸ್ನಾನ ಮಾಡಿದಳು. ಸ್ನಾನ ಮಾಡುವ ಮುನ್ನ ರವಿಕೆಯನ್ನು ತೆಗೆದಾಗ, ಕೊರಳಲ್ಲಿದ್ದ ಯಜ್ಞೋಪವೀತದ ಮೇಲೆ ಗಮನ ಹೋಯಿತು. ತಾನು ಇಲ್ಲಿಗೆ ಬಂದ ಮೊದಲ ರಾತ್ರಿ ಅಪ್ಪ ಹಾಕಿದ ಅದನ್ನು ಅವಳು ರವಿಕೆಯ ಒಳಗೆ ನೂಕಿದ್ದಳು. ಈಗ ಸ್ನಾನ ಮಾಡುವಾಗ ಕೊರಳಿನಿಂದ ಹೊರಕ್ಕೆ ತೆಗೆಯದೆ, ಗಂಡಸರು ಅಂಗೈಲಿ ಜೋಡಿಸಿಕೊಂಡು ಉಜ್ಜುವಂತೆ ತಿಕ್ಕಿ ಶುಚಿಮಾಡಿ ಕ್ರಮವಾಗಿ ಹಾಕಿಕೊಂಡಳು. ಒಗೆದ ಸೀರೆಯುಟ್ಟು ಹಳೆಯದನ್ನೂ ನೆನೆಸಿ ಕಸಕಿ ಒಗೆದು ಒಣಗಹಾಕಿದಳು. ಗುಡಿಸಲಿನ ಹವನಕುಂಡದಲ್ಲಿ, ಅಪ್ಪ ಸಾಯುವ ಮುನ್ನ ಮಾಡಿದ್ದ ಅಗ್ನಿಯ ಬೂದಿ ಗುಡ್ಡೆ

ಬಿದ್ದಿತ್ತು. ಅದನ್ನು ತೆಗೆದು ಶುಚಿಮಾಡಿದಳು. ಅನಂತರ ಅಪ್ಪ ಮಲಗುತ್ತಿದ್ದ ತೆಂಗಿನಗರಿಯ ತಡಿಕೆಯನ್ನು ಹಾಕಿಕೊಂಡು ಮಲಗಿದಳು. ಗಾಢ ನಿದ್ರೆ ಬಂತು.

ಮಧ್ಯಾಹ್ನದ ಹೊತ್ತಿಗೆ ಜಯಮ್ಮ ಬಂದು ಅವಳ ಭುಜ ಹಿಡಿದು ಅಲುಗಿಸಿ ಎಬ್ಬಿಸಿದಳು. ಗುಡಿಸಲಿನ ಬಾಗಿಲಿನ ಹತ್ತಿರ ಒಂದು ಪಾತ್ರೆಯಲ್ಲಿ ಮಾಡಿದ ಅಡಿಗೆಯನ್ನು ಹಿಡಿದುಕೊಂಡು ನರಸಿಂಹಜೋಯಿಸರು ನಿಂತಿದ್ದರು. 'ಎದ್ದು ಊಟ ಮಾಡು. ಸುಮ್ಮನೆ ಮನೆಗೆ ಬಾ. ಇಲ್ಲಿ ಒಬ್ಬಳೇ ಇರೂದು ಅಂದರೇನು ಹುಡುಗಾಟ!' – ಜಯಮ್ಮ ರಮಿಸಿದಳು.

'ತುಂಬಿದ ಬಸುರಿ. ನೀನಿಲ್ಲಿ ಬರಬಾರದಾಗಿತ್ತು. ಯಾಕೆ ಬಂದೆ?' – ಸತ್ಯ ಕೇಳಿದಳು.

'ನೀನು ಒಬ್ಬಳು ಇಲ್ಲಿ ಮಲಗಿರಬಹುದಂತೆ. ನಾನು ನರಸಿಂಹಜೋಯಿಸರ ಜೊತೆ ಬಂದರೆ ಏನಾಗುತ್ತೆ?'

'ನನ್ನ ಮನಸ್ಸು ನಿಂಗೆ ಗೊತ್ತಿಲ್ಲ. ನಂಗೇ ಗೊತ್ತಾಗ್ತಿಲ್ಲ. ನಿನ್ನ ಮನಸ್ಸು, ಸ್ವಭಾವ ಬೇರೆ. ಮುಂದೆ ಹೆರಿಗೆ ಸರಿಯಾಗಿ ಆಗಿ ಮಗು ಚನ್ನಾಗಿರಬೇಕು. ಹೆರಿಗೆಯಾಗೂ ತನಕ ನೀನು ಇಲ್ಲಿಗೆ ಬರಬೇಡ.'

'ನೀನಾದರೂ ಯಾಕೆ ಇಲ್ಲಿರಬೇಕು?'

'ಅದೇ ನಂಗೆ ಗೊತ್ತಿಲ್ಲ ಅಂದೆನಲ. ಇವತ್ತಿಗೆ ಹೋಗಲಿ. ನಾಳೆಯಿಂದ, ಮಾಡಿದ ಅಡಿಗೆ ತರಬ್ಯಾಡಿ. ಇಲ್ಲೇ ಮಾಡ್ಕಂಡು ತಿನ್ನಬೇಕು ಅನ್ನುತ್ತೆ.'

ಆ ದಿನ ರಾತ್ರಿ ಎಂಟು ಗಂಟೆಯ ಹೊತ್ತಿಗೆ ಒಂದು ಕಂಬಳಿ, ಗೋಣಿ ಚೀಲ, ಮಂದಲಿಗೆ ಮತ್ತು ದಿಂಬುಗಳನ್ನು ಸುತ್ತಿ ಹೆಗಲ ಮೇಲೆ ಇಟ್ಟುಕೊಂಡು ನರಸಿಂಹಜೋಯಿಸರು ತೋಟಕ್ಕೆ ಬಂದರು. 'ಅಲ್ಲೇ ಮಲಕ್ಕಳಿ ಅಂತ ವೆಂಕಟೇಶ ಮೂರ್ತಿಗಳು ಕಳಿಸಿದರು' – ಎಂದರು.

'ನೀವಿಲ್ಲಿ ಬರಬ್ಯಾಡಿ ಅಂತ ನಾನು ವಾಪಸು ಕಳಿಸಿದೆ ಅಂತ ಹೇಳಿ' – ಎಂದು ಅವಳು ಅವರನ್ನು ವಾಪಸು ಕಳಿಸಿಬಿಟ್ಟಳು.

ಅವರು ಹೋದನಂತರ ಸ್ವಲ್ಪ ಹೆದರಿಕೆ ಕಾಣಿಸಿತು. ನಾನಿಲ್ಲಿ ಯಾಕೆ ಬಂದೆ, ಎಂಬ ಪ್ರಶ್ನೆ ಹುಟ್ಟಿಕೊಂಡಿತು. ಈಗಲೂ ವಾಪಸು ಮನೆಗೆ ಹೋಗಿ ಮಲಗಲೆ? – ಎಂಬ ಯೋಚನೆ ಬಂತು. ಆದರೆ ಈ ಜಾಗದ ಆಕರ್ಷಣೆ ಮಾತ್ರ ಪ್ರಚಂಡ ವಾಗಿತ್ತು. ಹೆದರಿಕೆಯನ್ನು ಕಳೆಯಲು ಒಂದೇ ದಾರಿ ಎಂದು ಲಾಟೀನನ್ನು ಆರಿಸಿಬಿಟ್ಟಳು. ಗುಡಿಸಲಿನ ಬಾಗಿಲು ಹಾಕಿಕೊಂಡು ತೋಟದಲ್ಲೆಲ್ಲ ಎರಡು ಸುತ್ತು ತಿರುಗಿದಳು. ಕತ್ತಲೆಯಲ್ಲಿ ಮಬ್ಬಾಗಿ ಕಾಣುವ ಆಕೃತಿಗಳನ್ನು ಗುರುತಿಸಿ ಇಡೀ ತೋಟದಲ್ಲಿ ಎಷ್ಟು ಮರಗಳಿವೆ ಎಂದು ಎಣಿಸಿದಳು. ಭಯ ಕಡಿಮೆ

ಯಾಯಿತು. ಗುಡಿಸಲಿಗೆ ಬಂದು ಬಾಗಿಲು ಮುಚ್ಚಿಕೊಂಡು ಮಲಗಿದಳು. ಸ್ವಲ್ಪ ಹೊತ್ತಿಗೆ ನಿದ್ದೆ ಬಂತು.

೩

ಅವಳು ತೋಟಕ್ಕೆ ಬಂದ ಮೂರನೆಯ ದಿನ ಬೆಳಗ್ಗೆ ಬೆಟ್ಟಯ್ಯನವರು ಬಂದರು. ಗುಡಿಸಲಿನ ಎದುರಿನ ಬದುವಿನ ಮೇಲೆ ಒಂದು ಸೋಗೆಯ ಮೇಲೆ ಕುಳಿತು ಹೇಳಿದರು: 'ಬೆಂಗಳೂರಿಗೆ ಹ್ವಾಗಿದ್ದೆ. ಕೇಸು ಹಾಕಿಸ್ದ್ಹಂಗೆ ಮಾಡು ಸ್ತೀನಿ ಅಂದ್ರು ಮೇಲಗಿರಿಗೌಡ್ರು.'

ಬೆಂಗಳೂರಿನ ಮಾತು ಬಂದ ತಕ್ಷಣ ಅವಳಿಗೆ, ತಾನು ಕೆಲಸ ಮಾಡುವ ಅಂಗಡಿಯ ನೆನಪಾಯಿತು. ತಾನು ಬಂದು ಆಗಲೇ ಏಳೆಂಟು ದಿನದ ಮೇಲೆ ಆಗಿದೆ. ಅವರಿಗೆ ಒಂದು ಕಾಗದವೂ ಬರೆದಿಲ್ಲ. ಸುಮಾರು ಯಾವತ್ತು ಬರುತ್ತೇನೆ ಎಂದು ತಿಳಿಸಿಲ್ಲ. ಅವಳು ಅನ್ಯಮನಸ್ಕಳಾಗಿದ್ದಾಗ ಬೆಟ್ಟಯ್ಯನವರು ಇನ್ನೊಂದು ಮಾತು ಹೇಳಿದರು: 'ಅಕಸ್ಮಾತ್ ಕೇಸು ಆಕಿದ್ರೂ ಏನಾರಾ ಕೆಂದ್ತೈತಾ ಅಂತ ಕೇಳಾಕೆ ಲಾಯರ್ ತವ ಹ್ವಾಗಿದ್ದೆ, ತಾವರೆಕೆರೆ ಕೃಷ್ಣಪ್ಪನೋರ ತಾವಕ್ಕೆ. ನಿಮ್ಮ ಅಪ್ಪಾಜಿ ಸತ್ಹೋದ ಸಂಗತಿ ಕೇಳಿ ಅಯ್ಯೋ ಅಂದ್ರು. ಅವರೇ ಹ್ಯೇಳಿದ್ರು. ಇವರು ಅವರ ತಾವ ಹ್ವಾಗಿ ವಿಲ್ ಬರೆದು ರಿಜಿಸ್ಟ್ರಿ ಮಾಡ್ಯವ್ರಂತೆ. ದೇವರ ಜಮೀನೆಲ್ಲವೂ ಮಗುಂಗೆ, ಅವ್ರು ಪೂಜೆ ಮಾಡ್ಕಿನ್ರೆ. ಸ್ವಂತದ್ರಲ್ಲಿ ಮಗಳಿಗೆ ಅರ್ಧ ಮಗನಿಗೆ ಅರ್ಧ. ಮನೆ ಮಗುಂಗೆ. ಅವರ ಹೆಸರಿನ ಬ್ಯಾಂಕಿನ ಹಣದಲ್ಲಿ ಮನೆ ಕಟ್ಕಳಾಕೆ ನಿಮಗೆ ಹತ್ತು ಸಾವಿರ. ಉಳಿದದ್ರಲ್ಲಿ ಇಬ್ಬರಿಗೂ ಅರ್ಧರ್ಧ. ರಿಜಿಸ್ಟರು ಕಾಗದ ಲಾಯರ ತಾವ ಐತೆ.'

ಬೆಂಗಳೂರಿಗೆ ಬಂದಿದ್ದಾಗ, 'ನಂಗೆ ತಾವರೆಕೆರೇಲಿ ಸ್ವಲ್ಪ ಕೆಲಸ ಇದೆ, ಅಲ್ಲಿಗೆ ಹೋಗೂ ಬಸ್ಸಿನಲ್ಲಿ ಕೂರಿಸು' – ಎಂದು ಹೇಳಿ ಅಪ್ಪ ಅದರಲ್ಲಿ ಹೋದದ್ದು ಸತ್ಯಳಿಗೆ ನೆನಪಾಯಿತು. ಇದೇ ಕೆಲಸಕ್ಕೆ ಅವರು ಅಲ್ಲಿಗೆ ಹೋದರೇ? ತನಗೆ ಅದರ ಸುಳಿವೂ ಕೊಡಲಿಲ್ಲ. ಆಸ್ತಿಯಲ್ಲಿ ಹೆಣ್ಣುಮಕ್ಕಳಿಗೂ ಸಮಪಾಲು ಬರ ಬೇಕೆಂಬ ಹೊಸ ಕಾನೂನು ಅವಳಿಗೂ ಗೊತ್ತಿತ್ತು. ಆದರೆ ಯಾವ ಹೆಣ್ಣು ಮಗಳೂ ಅದರಂತೆ ಬಲವಂತಮಾಡಿ ಕೇಳುತ್ತಿರಲಿಲ್ಲ. ಮದುವೆಯ ಖರ್ಚು, ಬಾಣಂತನ, ಕರೆದು ಕಳಿಸುವುದು, ಇವುಗಳಲ್ಲಿಯೇ ತೌರಿಗೆ ಸಾಕಷ್ಟು ಖರ್ಚಾಗು ವಾಗ, ಅದರ ಮೇಲೆ ಆಸ್ತಿ ಕೇಳಿದರೆ ಯಾರು ಕೊಟ್ಟಾರು? ಕಾನೂನು ಇದ್ದರೂ ಹಕ್ಕನ್ನು ಒತ್ತಿ ಕೇಳವೆ ಯಾರೂ ಕೊಡುವುದಿಲ್ಲ. ಆದರಿಂದಲೇ ಇರಬೇಕು:

ಅಪ್ಪ ಬರೆದು ರಿಜಿಸ್ಟರನ್ನೇ ಮಾಡಿರುವುದು. ಎಂದರೆ ಅಪ್ಪನ ಮನಸ್ಸಿನಲ್ಲಿ ಏನಿತ್ತು? ಇನ್ನು ನಾನು ಮದುವೆಯಾಗುವುದಿಲ್ಲ, ವೆಂಕಟೇಶ ತಾನಾಗಿಯೇ ಏನೂ ಕೊಡುವುದಿಲ್ಲ, ತನ್ನ ಮಗಳು ಜವಳಿ ಅಂಗಡಿಯಲ್ಲಿ ಚಾಕರಿ ಮಾಡಿ ಅನ್ನ ಸಂಪಾದನೆ ಮಾಡುವುದು ಬೇಡ – ಎಂದು ಯೋಚಿಸಿರಬಹುದು. ಆದರೆ ನನ್ನ ಕೈಲಿ ಯಾಕೆ ಹೇಳಲಿಲ್ಲ?

ಈ ವಿಷಯದಲ್ಲಿ ಬೆಟ್ಟಯ್ಯನವರು ಮತ್ತೆ ಏನೂ ಹೇಳಲಿಲ್ಲ. 'ನೀವು ಬೆಂಗಳೂರಿಗೆ ಮತ್ತೆ ಯಾವಾಗ ಹೋಗ್ತೀರ?' – ಎಂದರು.

'ನಂಗೇ ಸರಿಯಾಗಿ ಗೊತ್ತಿಲ್ಲ. ಅಪ್ಪನ ತಿಥಿ ಆದ್‌ಮೇಲೆ ಹೋಗ್ತೀನಿ. ಇಲ್ಲೇನು ಮಾಡ್ಕೆ ಕೂತ್ಕಂಡು?'

ಸ್ವಲ್ಪ ಹೊತ್ತು ಕೂತಿದ್ದು, ಸತ್ತುಹೋದವರ ಒಳ್ಳೆಯ ಗುಣವನ್ನು ನೆನಸಿಕೊಂಡು ಬೆಟ್ಟಯ್ಯನವರು ಹೊರಟರು. ಆಗ ಸತ್ಯ ಜ್ಞಾಪಿಸಿಕೊಂಡು ಹೇಳಿದಳು: 'ನೋಡಿ, ಅವತ್ತು ನಾನು ಮನೆಗೆ ಬಂದೆನಲ್ಲ, ಆ ಗಳುವಿಗೆ ನೇತುಹಾಕಿರುವ ಚೀಲದಲ್ಲಿ ಅಪ್ಪ ಎರಡು ಸಾವಿರ ರೂಪಾಯಿ ಇಟ್ಟಿದ್ದ, ಸಿಕ್ಕಿತು. ಇದ್ಯಾಕೆ ಅಂತ ಕೇಳಿದೆ. ಅವನ ಮಾತಿನಲ್ಲಿ ಅದು ಮಾತಂಗಿಗೆ ಕೊಡಬೇಕು ಅನ್ನೊ ಅರ್ಥವಿತ್ತು. ಅವಳನ್ನ ಕರ್ಕಂಡು ಬರ್ತೀರಾ, ಕೊಟ್ಟುಬಿಡಾಣ.'

ಬೆಟ್ಟಯ್ಯನವರು ಆರು ವರ್ಷ ಗಾಂಧಿಯ ಆಶ್ರಮದಲ್ಲಿದ್ದವರು. ಎಂಥೆಂಥ ದೊಡ್ಡ ಕೃತಿಗಳನ್ನು, ತ್ಯಾಗಗಳನ್ನು ಮಾಡಿದವರನ್ನು ನೋಡಿದ್ದವರು. ಆದರೆ ಈ ಹುಡುಗಿ ಇಷ್ಟೊಂದು ಪ್ರಾಮಾಣಿಕತೆ ತೋರಿಸುತ್ತಿರುವುದನ್ನು ನೋಡಿ ಅವರಿಗೆ ಆಶ್ಚರ್ಯವಾಯಿತು. ನಾಲ್ಕು ದಿನದ ಹಿಂದೆ ಊರಿನವರೆಲ್ಲ ಅವರ ಮಗನ ಮೇಲೆ ಜಿದ್ದು ತೆಗೆಯಲು ಮಸಣಿಸುತ್ತಿದ್ದಾಗ ಇವಳು ಪೋಲೀಸ್ ಸ್ಟೇಶನ್ನಿಗೆ ಬಂದು ಅವನ ತಪ್ಪಿಲ್ಲವೆಂದು ಪ್ರಾಮಾಣಿಕವಾಗಿ ಹೇಳಿಕೆ ಕೊಟ್ಟಾಗಲೇ ಅವರಿಗೆ ಅವಳ ಮೇಲೆ ಗೌರವ ಉಂಟಾಗಿತ್ತು. ಈಗ ಇವನ್ನು ಕಂಡು ಅದು ಇಮ್ಮಡಿಸಿತು. 'ಅವಳಿಗೇ ಕೊಟ್ಟುಬಿಡಬೇಕು ಅಂತೀರಾ?' – ಎಂದು ಮತ್ತೆ ಕೇಳಿದರು.

"ಅಪ್ಪನ ಉದ್ದೇಶ ನಂಗೆ ಸ್ಪಷ್ಟವಾಗಿ ಅರ್ಥವಾಯ್ತು. ಅದೂ ಅಲ್ದೆ ಅವಳಿಗೆ ಇಷ್ಟಾದರೂ ಸೇರಬೇಕು. ಒಂದು ಪಕ್ಷ ಅಪ್ಪ ಅವಳನ್ನೇ ಅಲ್ಲದೆ ಮತ್ತೆ ಯಾರನ್ನೇ ಆಗಲಿ ಮದುವೆ ಮಾಡ್ಕಂಡಿದ್ರೆ, ಅವಳ ಹೊಟ್ಟೇಲಿ ಮಕ್ಕಳಾಗಿದ್ರೆ ಆಸ್ತೀಲಿ ಪಾಲು ಕೊಡ್ತಿರಲಿಲ್ವೆ? ನನ್ನ ಕೇಳಿದರೆ ಎರಡು ಸಾವಿರ ಕಮ್ಮಿ ಹಣ ಅನ್ಸುತ್ತೆ. ಆದರೆ ಜಾತಿ, ಸಮಾಜದ ಪರಿಸ್ಥಿತಿ ಬೇರೆಯೇ ಇದೆ. ಆ ಹುಡುಗನಿಗೆ ಸರ್ಕಾರದೋರೇ ಅನ್ನ ಬಟ್ಟೆ, ಪುಸ್ತಕ, ಎಲ್ಲ ಕೊಡ್ತಿದಾರೆ. ಮಾತಂಗಿಗೂ

ಜಮೀನು, ಮನೆ, ಕೊಟ್ಟಿದಾರೆ. ಅವಳೇನು ಈಗ ಕೂಲಿ ಮಾಡ್ಕಂಡು ತಿನ್ನೊ ಸ್ಥಿತೀಲಿಲ್ಲ. ಈ ಹಣಾಂತೂ ಅವಳಿಗೆ ಕೊಟ್ಟುಬಿಡಬೇಕು.'

ಬೆಟ್ಟಯ್ಯನವರು ಮಾತನಾಡಲಿಲ್ಲ. ಮೌನವಾಗಿ ಅವಳ ಮುಖವನ್ನು ನೋಡುತ್ತಾ ಕುಳಿತರು. ಹತ್ತು ನಿಮಿಷದ ಮೇಲೆ, 'ಅವ್ಳನ್ನೇ ಕರ್ಕಂಡ್ ಬತ್ತೀನಿ' ಎಂದು ಹೇಳಿ ಹೊರಟುಹೋದರು. ಸತ್ಯ ಆ ದಿನದ ಅಡಿಗೆಗೆ ಇಟ್ಟಳು. ಕೊಳದಲ್ಲಿ ಸ್ನಾನ ಮಾಡಿ ಬಟ್ಟೆ ಒಗೆದು ಒಣಗಹಾಕಿದಳು. ಇನ್ನು ಎಷ್ಟು ದಿನ ಇಲ್ಲಿರುವುದು, ಬೆಂಗಳೂರಿಗೆ ಹೋಗಬೇಕು ಎಂದುಕೊಂಡಳು. ಅಪ್ಪ ತನ್ನ ಹೆಸರಿಗೆ ಬರೆದಿರುವ ಜಮೀನಿನ ನೆನಪಾಯಿತು. ತಾನೊಬ್ಬಳು. ಈ ಜಮೀನನ್ನು ಇಟ್ಟುಕೊಂಡು ಇಲ್ಲಿ ಏನು ಮಾಡುವುದು? ವೆಂಕಟೇಶ ನೋಡಿಕೊಳ್ಳುತ್ತಾನೆ. ಸುಗ್ಗಿ ಕಳೆದ ಮೇಲೆ, ಕೊಬ್ಬರಿ ಸುಲಿಸಿದ ಮೇಲೆ ಏನಾದರೂ ನಾಲ್ಕು ಕಾಸು ಕೊಟ್ಟರೆ ಕೊಡಲಿ. ಇಲ್ಲದಿದ್ದರೆ ಬ್ಯಾಡ – ಎಂದುಕೊಂಡಳು. ಅಡಿಗೆ ಎಲ್ಲ ಆದ ಎಷ್ಟೋ ಹೊತ್ತಿನ ತನಕ ಕೊಳದ ದಡದಲ್ಲಿ ಸುಮ್ಮನೆ ಕೂತಿದ್ದಳು. ಎದ್ದು ಊಟಕ್ಕೆ ಹೋಗಬೇಕು, ಅಷ್ಟರಲ್ಲಿ ಹೊಳೆಬಾಗಿಲು ತೆಗೆದುಕೊಂಡು ಮಾತಂಗಿ ಬರುತ್ತಿರುವುದು ಕಾಣಿಸಿತು. ಸತ್ಯ ಅವಳನ್ನು ಈಗ ಆರು ದಿನದಲ್ಲಿ ನೋಡಿದಾಗ ಕತ್ತಲೆಯಾಗಿತ್ತು. ಸರಿಯಾಗಿ ಕಂಡಿರಲಿಲ್ಲ. ಆದರೂ ಈಗ ಅವಳು ಹತ್ತಿರ ಬಂದಾಗ ಗೊತ್ತಾಯಿತು. ಗಂಡ ಸತ್ತ ಹೆಂಗಸಿನಂತೆ ಅವಳು ಆರು ದಿನದಲ್ಲೇ ಕೃಶಳಾಗಿಹೋಗಿದ್ದಾಳೆ. ಹತ್ತಿರ ಬಂದವಳೇ ಸೆರಗನ್ನು ಬಾಯಿಗೆ ಕೊಟ್ಟುಕೊಂಡು ಒಳಗೇ ತಡೆದು ತಡೆದು ಅಳತೊಡಗಿದಳು. ಎಷ್ಟು ಸಮಾಧಾನ ಹೇಳಿದರೂ ಕಾಲು ಗಂಟೆ ಅಳು ನಿಲ್ಲಲಿಲ್ಲ. ಅನಂತರ, 'ಒಳಗೆ ಬಾ' ಎಂದು ಕರೆದೊಯ್ದರೆ ಗುಡಿಸಲಿನ ಬಾಗಿಲಿನಲ್ಲೇ ನಿಂತಳು. ಬಲವಂತ ಮಾಡಿದರೂ ಒಳಗೆ ಬರಲಿಲ್ಲ.

ಅವಳಿಗಾಗಿ ಅಯ್ಯನವರು ದುಡ್ಡು ಇಟ್ಟಿರುವುದನ್ನು ಹೇಳಿದಾಗ ಅವಳು, 'ಜೆಟ್ಟಣ್ಣಾರು ಯಲ್ಲಾ ಏಳಿದ್ರು' ಎಂದು ಮತ್ತೆ ಕಣ್ಣೀರು ಹಾಕಿಕೊಂಡಳು. ಗಳುವಿಗೆ ನೇತುಹಾಕಿದ್ದ ಚೀಲದಿಂದ ಅರಿವೆ ಬಳಲಿನ ಗಂಟನ್ನು ಬಿಚ್ಚಿ ನೋಟಿನ ಕಟ್ಟನ್ನು ಅವಳ ಮುಂದೆ ನೀಡಿದಾಗ ಅವಳು, 'ವಲ್ಲೆ' ಎಂದು ಕೈ ಆಡಿಸಿ ಹೇಳಿದಳು: 'ಗಂಟು ಇಸ್ಕಣಾಕ್ ನಾನ್ ಬರ್ನಿಲ್ಲ ಕಣವ್ವ. ನೀನು ಮಾರಾಯ್ತಿ, ನಿನ್ನ ನೋಡ್ಕಂಡ್ ಓಗಾನ ಅಂತ ಬಂದೆ. ಅಯ್ನಾರು ಆಗ್ಲೇ ಮೂರು ಸಾವಿರ ಕೊಟ್ಟಿದ್ರು. ನಗ ಮಾಡ್ಸಿ ಮಡಿಕಂಡಿದೀನಿ.'

'ಆಗ ಕೊಟ್ಟಿದ್ದುದು ಬೇರೆ ಮಾತು. ಇದು ನಿನ್ನ ಹೆಸರೇಳಿ ಇಟ್ಟಿರೂದು. ತಗ' – ಎಂದು ಬಲವಂತ ಮಾಡಿದರೂ ಅವಳು ಒಪ್ಪಲಿಲ್ಲ.

'ಗಂಟು ತಗಾಣಾಕ್ ನಾನೇನ್ ಸೂಳೆಯ?' – ಎಂದಳು.

'ಸೂಳೆಗೆ ಯಾರೂ ಸತ್ತಮೇಲೆ ಕೊಡುಲ್ಲ. ನೀನು ಅವರ ಹೆಂಡತಿ ಅಂತಲೇ ತಿಳ್ಕ.'

'ಇಂತಾ ಮಾತಾಡ್ಬ್ಯಾಡ್ದು ಕಣವ್ವ' – ಗಾಬರಿಗೊಂಡ ಅವಳು ಎಂದಳು.

'ಹಂಗಾದ್ರೆ ನಿಂಗೂ ಅವರಿಗೆ ಇದ್ದ ಸಂಬಂಧ ಎಂಥದು?' – ಎಂದು ಕೇಳಿದುದಕ್ಕೆ ಅವಳ ಬುದ್ಧಿಗೆ ಕಕ್ಕಾವಿಕ್ಕಿಯಾಯಿತು.

ಯೋಚಿಸಿದರೂ ತಿಳಿಯುವ ಸಂಬಂಧವಲ್ಲ ಅದು. ಮಾದಿಗಿತ್ತಿಯಾದ ತಾನು ಬ್ರಾಹ್ಮಣಯ್ಯನವರ ಹೆಂಡತಿಯಾಗುವುದು ಹೇಗೆ? ಆದರೆ ಅವರ ಸೂಳೆಯಾಗಿರಲು ಅವಳು ಎಂದಿಗೂ ಯೋಚಿಸಿದವಳಲ್ಲ. ಮತ್ತೆ ಅದೆಂಥ ಸಂಬಂಧ ತಮ್ಮದು? ಅವಳೇ ಎಂದಳು: 'ಅವ್ವಾ, ನಂಗೂ ಅಯ್ಯಾರಿಗೂ ಹಿಂಗಿತ್ತು ಅಂತ ಯಾರ ಕುಟ್ಟೂ ಅನ್ನಬ್ಯಾಡ್ರಿ. ನಾನು ಹ್ಯಂಗೂ ಮಾದಿಗಿತ್ತಿ. ಬೀತಿ ಇಲ್ಲ. ಅವರು ಅಯ್ಯನೋರು. ಸತ್ಮ್ಯಾಗೂ ಅವರ ಮರ್ವಾದಿ ಹ್ವಾಗಬ್ಯಾಡ್ದು.'

ಸತ್ಯ ಮಾತಂಗಿಯ ಮುಖವನ್ನು ನೆಟ್ಟ ದೃಷ್ಟಿಯಿಂದ ನೋಡಿದಳು. ಅವಳ ಮಾತಿನಲ್ಲಿ ಕಿಂಚಿತ್ತೂ ಬೆರಕೆ ಕಾಣಲಿಲ್ಲ. ಸಂಪೂರ್ಣ ಶ್ರದ್ಧೆಯಿಂದ ಆಡಿದ್ದಳು. ಸತ್ಯ ಮುಂದೆ ಹೋಗಿ ಅವಳ ತೋಳು ಹಿಡಿದುಕೊಂಡಳು. ಬ್ರಾಹ್ಮಣ ಹುಡುಗಿ ತನ್ನನ್ನು ಮುಟ್ಟಿದ್ದಕ್ಕೆ ಅವಳು ಗಾಬರಿಗೊಂಡು ಹಿಂದೆ ಸರಿದಳು. ಆದರೆ ಅವಳು ವಿರೋಧಿಸಲು ಅವಕಾಶಕೊಡದೆ ಸತ್ಯ ನೋಟಿನ ಕಟ್ಟನ್ನು ಅವಳ ಸೆರಗಿಗೆ ಕಟ್ಟಿ ಗಂಟು ಹಾಕಿ ಹೇಳಿದಳು: 'ನಿಂಗೆ ಸೇರಬೇಕು ಅಂತ ಅಯ್ಯಾರು ಹೇಳಿದ್ರು. ನೀನು ವಲ್ಲೆ ಅಂದ್ರೆ ಅವರ ಜೀವ ಸ್ವರ್ಗಕ್ಕೆ ಹೋಗಬೇಕೋ ಬ್ಯಾಡವೋ? ಇಟ್ಕ. ವಡವೆ ಗಿಡವೆ ಮಾಡಿಸ್ಕ.'

'ಎಂತಾ ಮಾತು ಅಂತೀಯವ್ವ! ಅವರು ಸತ್ತಮ್ಯಾಕೆ ನಂಗೆಂತಾ ವಡವೆ?'

ಸತ್ಯಳಿಗೆ ತನ್ನ ಮಾತಿನ ಅನೌಚಿತ್ಯದ ಅರಿವಾಯಿತು. 'ಹೋಗ್ಲಿ ಬಿಡು. ಅಡಿಗೆ ಮಾಡಿದೀನಿ. ಊಟ ಮಾಡು' – ಎಂದಳು. ಅವಳು ಒಲ್ಲೆನೆಂದರೂ ಬಿಡದೆ ಒಂದು ಅಡಿಕೆಪಟ್ಟೆ ಹಾಕಿ ಅನ್ನ ಸಾರುಗಳನ್ನು ನೀಡಿದಳು. ಮಾತಂಗಿ ಗುಡಿಸಲಿನ ಒಳಗೆ ಬರಲಿಲ್ಲ. ಬಾಗಿಲಿನ ಆಚೆಯ ಬದುವಿನ ಮೇಲೆ ಕುಳಿತೇ ಉಂಡಳು. ತಾನೂ ಹೊರಗೆ ಕುಳಿತು ಸತ್ಯ ಊಟ ಮುಗಿಸಿದಳು. ಆಮೇಲೆ ತಾನು ಉಂಡ ಅಡಿಕೆಹಾಳೆಯನ್ನು ಮುದುರಿ ಬೇಲಿಯ ಆಚೆಗೆ ಎಸೆದು, ಕೊಳದ ನೀರನ್ನು ಮುಟ್ಟದೆ ದಡದಲ್ಲೇ ನಿಂತು ಸತ್ಯಳ ಕೈಲಿ ನೀರು ಹಾಕಿಸಿಕೊಂಡು ಕೈ ತೊಳೆದು, ಬಾಯಿಗೆ ಬಲ ಅಂಗೈಯನ್ನು ಅಡ್ಡ ಕೊಟ್ಟು ಚರುಕಿನಲ್ಲಿ ನೀರು ಬಿಡಿಸಿಕೊಂಡು ಕುಡಿದು, ಕೈಯನ್ನು ಶಾಲೆಗೆ ಶೀಟಿಕೊಂಡು, 'ನಾನ್ ಬಯ್ತಿನ್ ಕಣವ್ವ' ಎಂದು ಹೇಳಿ ಮಾತಂಗಿ ಹೊರಟುಹೋದಳು.

# ೪

ಮಾತಂಗಿ ಹೋದ ಸ್ವಲ್ಪ ಹೊತ್ತಿಗೆ ವೆಂಕಟೇಶ ಬಂದ. ತಂಗಿಯ ಎದುರಿಗೆ ಕೊಳದ ದಡದ ಮೇಲೆ ಕುಳಿತು ಹೇಳಿದ: 'ಇಲ್ಲಿ ಒಬ್ಬಳೇ ಇದೀಯಲ, ಯಾವ ಹುಚ್ಚು ನಿಂಗೆ?'

'ಹುಚ್ಚೂ ಅಲ್ಲ, ಏನೂ ಅಲ್ಲ. ಏನೋ ಇಲ್ಲಿರಬೇಕು ಅನ್ನಿಸ್ತು, ಇದೀನಿ.'

'ಹುಚ್ಚೂ ಅಲ್ಲ ಬೆಪ್ಪೂ ಅಲ್ಲ, ಶಿವಲೀಲೆ. ನಿಂಗೆ ಯಾರು ಹೇಳುಕ್ಕಾಗುತ್ತೆ?' – ಎಂದವನು ಅಪ್ಪನ ಶ್ರಾದ್ಧದ ವಿಷಯ ಮಾತನಾಡಿದ. ಏಳನೆಯ ದಿನದಿಂದ ಕರ್ಮ ಆರಂಭವಾಗಬೇಕು. ನಾಳೆಯೇ ತಾವರೆಕೆರೆಗೆ ಹೋಗಿ ಸಾಮಾನು ಗೀಮಾನು ತರಬೇಕು. ನೀನು ಮನೆಗೆ ಬಂದು ಜವಾಬ್ದಾರಿ ತೆಗೆದುಕೊಂಡು ನೋಡಿಕೊಳ್ಳಬೇಕು – ಎಂದೆಲ್ಲ ಹೇಳಿದ.

'ಶ್ರಾದ್ಧದಲ್ಲಿ ನಿಂಗೆ ನಂಬಿಕೆ ಇದ್ದರೆ ಮಾಡು. ನಂಗೆ ವಿಶ್ವಾಸವಿಲ್ಲ.'

'ಸತ್ತೋರಿಗೆ ಒಂದು ತುತ್ತು ಅನ್ನಾನೂ ಕಾಣಿಸಬಾರದು ಅಂತೀಯ?'

'ನಾವಿಲ್ಲಿ ಮೂರು ಉಂಡೆ ಅನ್ನ ಮಿದ್ದು ದರ್ಭೆ ಮೇಲಿಟ್ಟು ಮಂತ್ರ ಹೇಳಿದರೆ ಅಲ್ಲಿ ಅವನಿಗೆ ಸೇರುತ್ತೆ ಅಂತೀಯ? ಸತ್ತ ಮೇಲೆ ಆತ್ಮ ಅನ್ನೋದು ಇದೆಯೋ ಇಲ್ಲವೋ? ಇದ್ದರೆ ಏನಾಗುತ್ತೋ ಎಲ್ಲಿಗೆ ಹೋಗುತ್ತೋ ಬಲ್ಲೋ-ರ್ಯಾರು? ಅಪ್ಪ ನಿಂಗೆ ಕಠೋಪನಿಷತ್ತು ಹೇಳಿಕೊಟ್ಟಾಗ ನಂಗೂ ಹೇಳಿ ಕೊಟ್ಟಿದ್ದ. ಅದು ನಿಜ ಅಂತ ಒಪ್ಪಿಕೊಂಡ್ರೂ ಬ್ರಾಹ್ಮಣ್ರನ್ನೇ ಕರೆದು ಅನ್ನ ಹಾಕಬೇಕು ಅನ್ನೋ ಜಾತಿಸಿದ್ಧಾಂತದ ಶಾಸ್ತ್ರ ನಂಗೆ ಒಪ್ಪಿಗೆಯಾಗುಲ್ಲಪ್ಪ.'

'ಬ್ರಾಹ್ಮಣರು ಅಂದ್ರೆ ವೇದಾಧ್ಯಯನ ಮಾಡಿದ ಜ್ಞಾನಿಗಳು ಅಂತ.'

'ಅಂಥೋರು ನಿಂಗೆ ಎಲ್ಲಿ, ಎಷ್ಟು ಜನ ಸಿಕ್ತಾರೆ? ಸಿಕ್ಕಿದ್ರೂ ಅವರು ಬ್ರಾಹ್ಮಣರ ಹೊಟ್ಟೇಲೇ ಹುಟ್ಟಿದೋರು ಯಾಕಾಗಿರಬೇಕು?'

'ಸತ್ಯ, ನಿನ್ನ ಆನರ್ಸ್, ಎಂ.ಎ. ನಾಲೆಡ್ಜ್ ನಂಗೆ ಗೊತ್ತು. ನಿಂಗೆ ಯಾವುದೂ ಬ್ಯಾಡ. ನಾನು ಊರು ಕೇರಿ ಅಂತ ಸಂಸಾರ ಮಾಡಿಕೊಂಡಿರ ಬೇಕಾದೋನು. ನಾಕು ಜನ ಆಡ್ಕಳೂ ಹಾಗೆ ಮಾಡಬಾರದು. ಕ್ರಮವಾಗಿ ಶಾಸ್ತ್ರ ಪ್ರಕಾರ ನಾನು ಮಾಡಿಯೇ ಮಾಡ್ತೀನಿ.'

'ನಿಂಗೆ ನಾನು ಅಡ್ಡ ಬರ್ಲಿಲ್ಲ. ಜನ ಆಡ್ಕಳೂ ಹೆದರಿಕೆಗೆ ಯಾಕೆ ಮಾಡ್ತೀಯ? ನಿಂಗೆ ಸ್ವಂತ ಶ್ರದ್ಧೆ ಇದ್ರೆ ಮಾಡು.'

'ಶ್ರದ್ಧೆ ಇದ್ದೇ ಇದೆ. ನಾನು ಯಲ್ಲಾ ಬಿಟ್ಟೋನಲ್ಲ' – ಎನ್ನುವಾಗ, ನಿನ್ನ ಹಾಗೆ ಎಂಬುದು ಧ್ವನಿಸುತ್ತಿತ್ತು. ಆದರೆ ಸತ್ಯ ಅದನ್ನು ಉಪೇಕ್ಷಿಸಿ, ತನಗೆ

ತಿಳಿಯಲೇ ಇಲ್ಲವೆಂಬಂತೆ ಸುಮ್ಮನಾದಳು.

ಎರಡು ನಿಮಿಷದ ನಂತರ ವೆಂಕಟೇಶ ಎಂದ: 'ನೋಡು, ಇನ್ನೂ ಸೂತಕ ಕಳೆಯುಕ್ಕೆ ಮುಂಚೆ ಈ ಮಾತಾಡಬಾರದು. ಆದರೆ ನಮ್ಮಪ್ಪನ ಸೂತಕವೇ ಆದ್ದರಿಂದ ಒಂದು ಥರಕ್ಕೆ ಆಡಿದರೂ ಪರವಾಗಿಲ್ಲ. ಎಷ್ಟು ಮುಂಚೆ ಈ ಕಾರ್ಯ ವಾದರೆ ಅದರ ಪುಣ್ಯ ಅವನಿಗೆ ಸೇರುತ್ತೆ. ಅದೇ ಕೊರಗಿನಲ್ಲೇ ಅವನು ಸತ್ತ.'

'ಯಾವುದು?'

'ನಿನ್ನ ಮದುವೇದು. ನೀನು ಆ ಸೂಳೆಮಗುನ್ನ ನೆಚ್ಚಿಕಂಡೆ. ನಂಬಿದ್ದುಕ್ಕೆ ತಕ್ಕ ಹಾಗೆ ಅವನು ಇದ್ದನೇ? ಸುಖವಾಗಿ ದಡೂತಿ ಮನೇಲಿ ಹೆಣ್ಣು ತಂದು ಮದುವೆ ಮಾಡ್ಕಂಡ. ಈಗ ಎಸ್.ಎಸ್.ಎಂ.ಎಸ್, ಅಂದ್ರೆ ಶ್ರೀ ಶ್ರೀನಿವಾಸ ಮೋಟಾರ್ ಸರ್ವೀಸ್ ಅಂತ ಸಾಕು ಬಸ್ ಲೈನು ಮಾಡ್ಕಂಡು ಹೊಸಾ ಹೊಸಾ ಬಸ್ ಓಡುಸ್ತಿದಾನೆ. ಈಗ ಹದಿನೈದು ದಿನದಾಗೆ ಎರಡು ಲಾರಿ ತರಿಸಿದ್ನಂತೆ.'

'ಮೋಟಾರು ಲೈನೆಲ್ಲ ಸರ್ಕಾರದೋರು ತಗಾತಿಲ್ವೆ? ನ್ಯಾಶನಲೈಸೇಶನ್ ಆಗ್ತಿಲ್ವೆ?'

'ಅವರಿಗೆ ಬೇಕಾದೋರಿಗೆ ಸಂದಿ ಗೊಂದಿ ಲೈನು ಕೊಡ್ತಾನೇ ಇದಾರೆ. ದೊಡ್ಡ ದೊಡ್ಡ ಲೈನುಗಳು ಮಾತ್ರ ಸರ್ಕಾರದ ಕೈಲಿವೆ. ಅವನ ಮೂನಂದು ಮಳವಳ್ಳಿ ಕಡೆ ಹತ್ತು ಲೈನುಗಳಿವೆ. ಅವರ ಡೈರಕ್ಷನ್. ಅಳಿಯ ದುಡ್ಡು ಉದುರುಸ್ತಿದಾನೆ, ಸ್ವಾತಿ ಮಳೆ ಹಾಗೆ. ಮಧ್ಯದಲ್ಲಿ ಎಪ್ಪೆಬಿದ್ದುದ್ದು ನಿನಗೇ. ನೀನೇನೋ ಅದುಕ್ಕೆ ಕೇರ್ ಮಾಡುಲ್ಲ ಅನ್ನಭೌದು. ಅದರೆ ಇರೋಳು ಒಬ್ಬ ತಂಗಿ. ನೀನು ಹೀಗಿದ್ದರೆ ನನ್ನ ಮರ್ಯಾದೆ ಏನಾಗುತ್ತೆ? ಆ ಬೋಳಿಮಗ ಅವನೊಬ್ಬನೇ ಏನು ದುಡ್ಡು ಕಂಡಿರೋನು? ನಾನು ಹೇಳಿದ್ದುಕ್ಕೆ ಒಪ್ಕ. ನೀನು ಎಂ.ಎ. ಮಾಡಿದೀಯ. ಕೊನೇ ಪಕ್ಷ ಎಂ.ಎ.; ಎಲ್‌ಎಲ್.ಬಿ. ಅಥವಾ ಎಂ.ಎ., ಪಿ.ಎಚ್‌ಡಿ. ಇಂಥದೇನಾದ್ರೂ ಓದಿರೂ ಗಂಡು ಹುಡುಕಾಣ. ಅಷ್ಟು ಓದಿದರೂ ಗಂಡಿನ ಹತ್ರ ಹ್ಯಾಗೆ ಪ್ರಸ್ತಾಪ ಮಾಡೂದು ಅಂತ ನಂಗೆ ಅನುಭವವಿಲ್ಲ. ನೀನೇ ಹೇಳು, ಹೀಗೆ ಹೀಗೆ ಮಾಡಬೇಕು ಅಂತ. ಹದಿನೈದಲ್ಲ ಇಪ್ಪತ್ತು ಸಾವಿರ ಖರ್ಚಾಗ್ಲಿ. ಅವನ ತಲೆಮ್ಯಾಲೆ ಹೊಡದ ಹಾಗೆ ಮದುವೆ ಮಾಡಿ ಕಾರಿನಲ್ಲಿ ಮೆರವಣಿಗೆ ಮಾಡಿಸಿ ತಂಜಾವೂರಿನ ವಾಲಗದೋರ ಕರೆಸಿ ಊದುಸ್ತೀನಿ.'

ಅಣ್ಣನ ಈ ಮಾತಿನಲ್ಲಿ ಅವಳಿಗೆ ಸಂಪೂರ್ಣ ಉಪೇಕ್ಷೆ ಉಳಿಯಲಿಲ್ಲ. ಗಂಭೀರಳಾಗಿ ಯೋಚಿಸುತ್ತಾ ಹೇಳಿದಳು: 'ಯಾರ ಮೇಲಿಂದೋ ಉಮೇದಿಗೆ

ನೀನ್ಯಾಕೆ ಹೀಗೆ ದುಡ್ಡು ಹಾಳು ಮಾಡಬೇಕು?'

'ಯಾರ ಮೇಲಿಂದು ಅಂದ್ರೆ ಹಾದೀಲಿ ಹೋಗೂ ದಾಸಯ್ಯನ ಮೇಲೆ ಉಮೇದು ಮಾಡ್ತಿದೀನೆಯೇ ನಾನು? ಹಲಾಲ್‌ಕೋರ ನನ್ಮಗ ಅವ್ನು. ನೀನು ಜವಳಿ ಅಂಗ್ಡೀಲಿ ಕೂಲಿ ಮಾಡಿದರೆ ನಮಗೆ ಗೌರವವೆ? ಅದು ಈ ಊರೋರಿಗೆಲ್ಲ ಗೊತ್ತಿದೆ.'

ಅವಳಿಗೆ ಆಶ್ಚರ್ಯವಾಯಿತು. ಆದರೆ ಸ್ವತಃ ಅಪಮಾನವೆನಿಸಲಿಲ್ಲ. ಬೆಟ್ಟಯ್ಯನವರ ಮೂಲಕ ಒಬ್ಬಿಬ್ಬರಿಗೆ ತಿಳಿದು ಅಲ್ಲಿಂದ ಉಳಿದವರಿಗೆ ಹಬ್ಬಿರಬಹುದೆಂದು ಅವಳು ಊಹಿಸುತ್ತಿರುವಾಗಲೇ ವೆಂಕಟೇಶ ಎಂದ: 'ಅವನ ಮಗನ ಮದುವೆಗೆ ದೊಡ್ಡ ಸೀರೆ ತರುಕ್ಕೆ ಅಂತ ಹೆಂಡ್ತಿ ಜೊತೆ ನಿನ್ನ ಅಂಗ್ಡಿಗೆ ಬಂದಿದ್ನಂತೆ. ಶೆಟ್ರು ಹೇಳಿದ ಹಾಗೆ ನೀನೇ ಸೀರೆ ತಂದು ತಂದು ಬಿಡಿಸಿ ಸೆರಗು ಅಂಚು ತೋರಿಸಿದೆಯಂತೆ. ಅಂಥಾ ಚಾಕರಿಗೆ ಲಾಯಕ್ ಆದ ಹುಡುಗೀನ ನನ್ನ ಸೊಸೆಯಾಗಿ ತಂದ್ಕತ್ತೀನೇ ಅಂತ ಸುತ್ತಲ ಹಳ್ಳಿಯ ರೈತಮುಖಂಡರ ಕೈಲಿ ಅಂದಿದಾನೆ.'

'ಅದು ನಡೆದದ್ದು ಹಾಗಲ್ಲವೇ ಅಲ್ಲ. ನನ್ನ ಮುಖ ಕಂಡು ಅವರೆಲ್ಲ ಅಂಗಡಿಯಿಂದ ಹೊರಗೆ ಹೊರಟುಹೋದರು.'

'ಅವರು ಹೊರಟುಬಂದಿರಭೌದು. ಆದರೆ ಅವನು ಹೇಳಿರೂದು ಹೀಗೆ. ಕಡಗದಹಳ್ಳೀ ಬೋರನಿಂಗಪ್ಪ ಎಲೆಕ್ಷನ್‌ನಲ್ಲಿ ಗೆದ್ನಲ. ಅದಕ್ಕೆ ನಾನು ಎಷ್ಟೋ ಕೆಲಸ ಮಾಡಿದೀನಿ. ಎದುರು ಪಕ್ಷ ನಿಂತಿದ್ದೋರು ಸೋಶಲಿಸ್ಟ್ ಪಾರ್ಟಿ ನಾರಾಯಣರಾಯರು. ಅವರಿಗೆ ಓಟು ಕೊಡಬ್ಯಾಡಿ ಅಂತ ಹೇಳುಕ್ಕೆ ಅವನು ಏನೇನಂತ ಪ್ರಚಾರ ಮಾಡಿದಾನೆ ಗೊತ್ತಾ? ಸಾವಿರಾರು ವರ್ಷದಿಂದ ಹಾರುವರ ಹೆಂಗಸರು ಮನೇಲಿ ಕೂತ್ಕಂಡು ತಿಂದು ಚರ್ಮ ಬೆಳ್ಳಗೆ ಮಾಡ್ಕಂಡಿದಾರೆ. ನಮ್ಮ ಹೆಂಗಸರು ಬಿಸಿಲಲ್ಲಿ ಸಸಿ ಹಾಕಿ ಕಳೆ ಕಿತ್ತು ಕಪ್ಪಗಿದಾರೆ. ಅವರ ಮನೇಲಿ ಮುಸುರೆ ಪಾತ್ರೆ ತಿಕ್ತಿದ್ರು. ನನ್ನ ಕೈಗೆ ಇನ್ನು ಹತ್ತು ವರ್ಷ ಅಧಿಕಾರ ಬರ್ಲಿ. ಹಾರುವರ ಹೆಂಗಸರು ನಮ್ಮ ಜನ್ದೋರ ಮನೇಲಿ ಕಸಗುಡಿಸಿ ಮುಸುರೆ ತಿಕ್ಕಬೇಕು. ನಮ್ಮ ಹೊಲದಲ್ಲಿ ಸಸಿ ಹಾಕಿ ಕಳೆ ಕೀಳಬೇಕು. ಹಾಗೆ ಮಾಡುಸ್ತೀನಿ —ಅಂತೆಲ್ಲ ಅಂದು ಓಟು ಕೊಡಿಸಿದಾನೆ.'

'ಇದೆಲ್ಲ ಕಿವಿಗೆ ಬಿದ್ರೂ ನೀನು ಅವರ ಕಡೆ ಯಾಕೆ ಕೆಲಸ ಮಾಡಿದೆ?'

'ಏನ್ಮಾಡ್ತೀಯು, ರಾಜಕೀಯ ಅಂದ್ರೆ ಮಾಡಲೇ ಬೇಕು. ಇಲ್ದೆ ಇದ್ರೆ ಗೆಟ್ ಆನ್ ಆಗುಕ್ಕೇ ಆಗುಲ್ಲ.'

'ರಾಜಕೀಯ ಬಿಟ್ಟು ಜೀವನ ಮಾಡುಕ್ಕಾಗುಲ್ವೆ?'

'ಅದು ಹ್ಯಾಗಾಗುತ್ತೆ? ಯಾವ ಬಾಬಿನಲ್ಲಿ ಸರಿಯಾಗಿ ಮುಂದುವರಿಯು

ಬೇಕು ಅಂದ್‌ರೂ ಅದು ಬೇಕೇ ಬೇಕು. ಬೋರನಿಂಗಪ್‌ನೋರನ್ನ ಹ್ಯಂಗಾದ್‌ರೂ ಗೆಲ್ಲಿಸಿಬಿಡು ವೆಂಕಟೇಶು, ನಿಂಗೊಂದು ಮೋಟಾರು ಲೈನು ಕೊಡು. ಸ್ತೀನಿ ಅಂದಿದ್ದ. ಈಗ ಅವನ ಮಗುಂಗೆ ನಾಲ್ಕು ಲೈನಾಯ್ತು. ನಾನು ಕೇಳಿದರೆ, ಸರ್ಕಾರ ನ್ಯಾಶನಲೈಸ್ ಮಾಡ್ತಿದೆ, ಪ್ರೈವೇಟ್ ಮಾಲೀಕರಿಗೆ ಬಸ್ ಲೈನ್ ಕೊಡಬ್ಯಾಡಿ ಅಂತ ನೆಹರೂನೇ ಕಾಗದ ಬರೆದಿದಾರೆ ಅಂತ ಕೊಸರಾಟ ಮಾಡ್ತಾನೆ ನಾಟಕದ ನನ್ಮಗ.'

ಈ ಮಾತಿಗೆ ಸತ್ಯ ಪ್ರತಿ-ಉತ್ತರ ಹೇಳಲಿಲ್ಲ. ಶ್ರೀನಿವಾಸ ಮತ್ತು ಅವನ ಹೆಂಡತಿಯನ್ನು ನೋಡಿದ ದಿನ ಅವಳ ಮನಸ್ಸು ವಿಚಲವಾಗಿತ್ತು. ಅದನ್ನು ಹೇಗೋ ಸ್ತಿಮಿತಕ್ಕೆ ತಂದುಕೊಂಡಿದ್ದಳು. ಅಪ್ಪನ ಹುಚ್ಚು ಗಮನವನ್ನು ತನ್ನ ಕಡೆಗೆ ಎಳೆದುಕೊಂಡು, ಅದನ್ನು ಮರೆಸಿತ್ತು. ಈಗ ಅದು ಮತ್ತೆ ಕೆದಕಿದಂತೆ ಆಯಿತು. ವೆಂಕಟೇಶ ಅಂದ: "ಅವರ ಜಾತಿಯೋರ ಮನೇಲಿ ಹಾರುವರ ಹೆಂಗಸರು ಮುಸುರೆ ತಿಕ್ಕಬೇಕು ಅಂತ ಅವನು ಅಂದದ್ದು ಅವತ್ತಿನ ಎರಡನೇ ದಿನವೇ ನನ್ನ ಕಿವಿಗೆ ಬಿತ್ತು. ಎಲಾ ಸೂಳೆಮಗನೆ, ನೋಡ್ಕತ್ತೀನಿ ಇವನಿಗೆ ಅಂದ್‌ಕಂಡೆ. ಅವತ್ತಿನ ಬೆಳಗ್ಗೆಯೇ ಬೋರನಿಂಗಪ್ಪನ ಎಲೆಕ್ಷನ್ ಕಾರಿನಲ್ಲಿ ಕೂತು ತುಮಕೂರಿಗೆ ಹೋಗಿ ನಿನ್ನ ಅತ್ತಿಗೆಗೆ ಒಂದು ಜೊತೆ ವಜ್ರದ ಓಲೆ, ಒಂದು ವಜ್ರದ ಬೇಸರಿ ಮಾಡಿಸುಕ್ಕೆ ಹಾಕಿದೆ. ಎರಡೂವರೆ ಸಾವಿರ ಆಯ್ತು. ಅದನ್ನ ತಂದ ದಿನ ಅವನು ಇಲ್ಲಿಗೆ ಬಂದಿದ್ದ. ಅವನಿಗೆ ತೋರಿಸಿ, 'ನನ್ನ ಹೆಂಡ್ತಿ ವಜ್ರದ ಓಲೆಯೇ ಬೇಕು, ಸಾದಾ ಕಲ್ಲಿಂದು ಇಡುಲ್ಲ ಅಂದ್ಲು. ಮಾಡ್ಸಿದೀನಿ ನೋಡಿ. ನಮ್ಮ ಜಾತಿಗೌರವಕ್ಕೆ ತಕ್ಕಹಾಗಿರಬೇಕಲ್ಲವೆ ಒಡವೆ!' ಅಂದೆ. ಕೇಳಿ ಅವನ ಮುಖ ಪೆಚ್ಚಾಯ್ತು."

ಅಣ್ಣನ ಮಾತಿಗೆ ಏನು ಹೇಳಲೂ ಅವಳಿಗೆ ತಿಳಿಯಲಿಲ್ಲ. ಅವಳ ಮನಸ್ಸು ಗಂಭೀರವಾಗಿ ಯೋಚಿಸುತ್ತಿತ್ತು. ಆಲೋಚನೆಯ ಗಾಂಭೀರ್ಯವು ಒಂದು ತೆರನಾದ ಅನ್ಯಮನಸ್ಕತೆಯನ್ನುಂಟುಮಾಡಿತ್ತು.

ಅವನು ಹೇಳುತ್ತಿದ್ದ: 'ಸುಮ್ಮನೆ ನಾನು ಹೇಳಿದ ಹಾಗೆ ಕೇಳು. ದುಡ್ಡಿಗೆ ನಾನು ಯಾವತ್ತೂ ಕೇರ್ ಮಾಡುಲ್ಲ. ಸರಿಯಾದ ಕಡೆ ಹುಡುಕಿ ಮದುವೆ ಮಾಡ್ತೀನಿ. ಅಲ್ಲಿಗೆ ಅವನ ತಲೆಮೇಲೆ ಹೊಡೆದ ಹಾಗೆ ಆಗುತ್ತೆ. ಜೋಡೀಲಿ ದೊಡ್ಡ ಫೋಟೋ ತೆಗೆಸಿ ಪೇಪರಿನಲ್ಲಿ ಹಾಕುಸ್ತೀನಿ.'

ಅವಳು ಈಗಲೂ ಮಾತನಾಡಲಿಲ್ಲ. ಆದರೆ ಅವನ ಈ ಮಾತು ಅವಳ ಕಿವಿಗೆ ಬಿದ್ದು ಅನ್ಯಮನಸ್ಕತೆಯನ್ನು ಎಳೆದು ಬುದ್ಧಿಯನ್ನು ಮುಟ್ಟಿತು. ವೆಂಕಟೇಶ ಕುಳಿತಿದ್ದವನು ಎದ್ದು ತೋಟವನ್ನು ಒಂದು ಸುತ್ತು ಹಾಕಿದ. ಬೇಲಿ ಎಲ್ಲಿ ಎಲ್ಲಿ

ಸಂದುಬಿದ್ದಿದೆ ಎಂಬುದನ್ನು ಪರೀಕ್ಷಿಸಿದ. ಮರಗಳಲ್ಲಿ ಗೊನೆ ಬಂದಿವೆ, ನಾಳೆ ನಾಡಿದ್ದರಲ್ಲೇ ಕಾಯಿ ಕೆಡವಿಸಬೇಕು, ತಿಥಿಗೂ ನೂರು ನೂರೈವತ್ತು ಕಾಯಿ ಬೇಕಾಗುತ್ತೆ ಎಂದು ಲೆಕ್ಕ ಹಾಕಿದ. ಸತ್ಯ ಕೊಳದ ಹತ್ತಿರವೇ ಕುಳಿತಿದ್ದಳು. ಅವಳ ಹತ್ತಿರ ಬಂದು ನಿಂತು ಕೇಳಿದ: 'ಗುಡ್ನಲ್ಲಿ ಎರಡು ಸಾವಿರ ರೂಪಾಯಿ ಇದೆ ಅಂದ್ಯಲ, ಕೊಡು. ನಾಳೆ ತಿಥಿ ಸಾಮಾನು ತರುಕ್ಕೆ ತಾವರೇಕೆರೆಗೆ ಹೋಗಬೇಕು.'

ಅನ್ಯಮನಸ್ಕಳಾಗಿದ್ದ ಅವಳಿಗೆ ಈ ಮಾತು ತಕ್ಷಣ ತಿಳಿಯಲಿಲ್ಲ. ಅವನು ಮತ್ತೆ ಕೇಳಿದಮೇಲೆ ಹೇಳಿದಳು: 'ಇವತ್ತು ಬೆಳಗ್ಗೆ ಮಾತಂಗೀನ ಕರೆಸಿ ಕೊಟ್ಟು ಕಳಿಸಿದೆ.'

'ಅವಳಿಗ್ಯಾಕೆ ಕೊಟ್ಟೆ?'

'ಅವಳಿಗೆ ಕೊಡಬೇಕು ಅಂತಲೇ ಅಪ್ಪನ ಉದ್ದೇಶವಾಗಿತ್ತು.'

'ಹುಚ್ಚು ಹಿಡಿದು ಬುದ್ಧಿ ಕೆಟ್ಟಾಗ ಅವನಿಗೆ ಬೇಕಾದ ಉದ್ದೇಶವಾಗುತ್ತೆ. ನೀನ್ಯಾಕೆ ಕೊಟ್ಟೆ?'

'ವೆಂಕಟೇಶ, ಕೊಡೂದು ಧರ್ಮ. ಅವಳಿಗೂ ಅಪ್ಪನಿಗೂ ಮೂರು ವರ್ಷದ ಸಂಬಂಧ ಇತ್ತಂತೆ. ಒಂದು ಗಂಡು ಹುಡುಗನೂ ಆಗಿದೆ.'

'ಲೌಡಿಗೆ ಕಡಿತ ಹತ್ತಿತ್ತು. ಬಂದು ಬೇಲಿಸಂದೀಲಿ ಬಿದ್ದುಕಂಡು ಉಜ್ಜು-ಸ್ಕಂಡು ಹೋಗ್ತಿದ್ಲು. ಬಸುರಿಯೂ ಆದ್ಲು. ಅದುಕ್ಕೆ ದುಡ್ಡು ಯಾಕೆ ಕೊಡಬೇಕು? ನೀನು ಯಾರುನ್ನ ಹೇಳಿ ಕೇಳಿ ಕೊಟ್ಟೆ?'

'ಅಪ್ಪನೇ ತಂದಿಟ್ಟಿದ್ನಲಾ?'

'ಅವನು ಸತ್ತ ಹುಚ್ಚ. ಅವನು ಸತ್ತಮ್ಯಾಲೆ ಈ ಮನೆ ಯಜಮಾನ ಯಾರು? ನನ್ನ ಹೇಳದೆ ಕೇಳದೆ ದೊಡ್ಡ ವ್ಯವಹಾರ ಮಾಡುಕ್ಕೆ ನಿಂಗೆ ಯಾರು ಅಧಿಕಾರ ಕೊಟ್ಟೋರು?'

ಅವಳು ಉತ್ತರ ಹೇಳಲಿಲ್ಲ. 'ಸ್ವಲ್ಪ ಹಾಳತಕ್ಕಿರು. ಕಟ್ಟು ಹರಿದ ಪಂಜಾಗಿದೀಯ ಕತ್ತೆ ಲೌಡಿ' – ಎಂದು ಗದ್ದರಿಸಿ ಅವನು ಮನೆಗೆ ಹೊರಟುಹೋದ.

ವೆಂಕಟೇಶ ಹೇಳಿದ ಮಾತೇ ಅವಳ ಮನಸ್ಸನ್ನು ಆಕ್ರಮಿಸಿತು. ಶ್ರೀನಿವಾಸ ತನ್ನಷ್ಟೇ ಅಥವಾ ತನಗಿಂತ ಅನುಕೂಲಸ್ಥರ ಮನೆಯ ಹೆಣ್ಣು ತಂದುಕೊಂಡು ಮದುವೆಯಾದ. ಅದೂ ತನ್ನನ್ನು ಆಗಬೇಕಾದ ಮೂರೇ ತಿಂಗಳಿನಲ್ಲಿ. ಈಗ ನಾಲ್ಕು ಬಸ್ಸು, ಎರಡು ಲಾರಿಗಳನ್ನಿಟ್ಟಿದ್ದಾನೆ. ಮುಂದೆ ಬೇಕಾದ ಹಾಗೆ ಸಂಪಾದನೆ ಮಾಡುತ್ತಾನೆ. ಹೆಂಡತಿ ಬಸುರಿ. ಪಾಳೇಗಾರರ ವಂಶ ಬೆಳೆಯುತ್ತೆ. ಅವನ ತಂದೆ ಮಹಾ ತಂತ್ರಿಗಳೆಂಬುದು ಸುಳ್ಳಲ್ಲ. ಇಲ್ಲದಿದ್ದರೆ ಅವರು ಮಂತ್ರಿ

ಗಳು ಹೇಗೆ ಆಗುತ್ತಿದ್ದರು? ಈ ಊರಿನಲ್ಲಿದ್ದುಕೊಂಡು ಅವರ ತಂತ್ರಗಳನ್ನು ಉಪೇಕ್ಷಿಸಿ ಜೀವಿಸುವುದು ಕಷ್ಟ. ಒಂದು ಥರಕ್ಕೆ ವೆಂಕಟೇಶ ಹೇಳೂದು ಸರಿ. ಶ್ರೀನಿವಾಸ ಯಾಕೆ ಹೀಗೆ ಮಾಡಿದ? ಅವನ ಪ್ರೀತಿ ಶ್ರದ್ಧೆಗಳ ಆಳ ಇಷ್ಟೆಯೇ? ನಾನು ಚಿಕ್ಕ ವಯಸ್ಸಿನಿಂದ ಕಂಡಿದ್ದವನು ಬರೀ ಮೇಲುನೋಟಕ್ಕೆ ಕಾಣುತ್ತಿದ್ದ ನಟನೇ? ನಿಜವಾದ ವ್ಯಕ್ತಿ ಶ್ರೀನಿವಾಸನಲ್ಲ, ತಿರುಮಲೇಶಗೌಡ. ಇನ್ನು ನನಗೂ ಅವನಿಗೂ ಸಂಬಂಧವಿಲ್ಲ, ಇರುವ ಅಥವಾ ಉಂಟಾಗುವ ಸಾಧ್ಯತೆಯೂ ಇಲ್ಲ. ನನ್ನ ದಾರಿ ಯಾವುದು?

ಜವಳಿ ಅಂಗಡಿಯ ಚಾಕರಿಯೇ? ಅಥವಾ ಬೇರೆ ಯಾವುದಾದರೂ ಹೆಚ್ಚಿನ ಸಂಬಳದ ಕೆಲಸ ಹುಡುಕುವುದೆ? ಪ್ರಯತ್ನ ಪಡುತ್ತಿದ್ದರೆ ಹೆಚ್ಚಿನ ಸಂಬಳದ ಯಾವುದಾದರೂ ಕೆಲಸ ಸಿಕ್ಕಬಹುದು. ಊಟ ತಿಂಡಿ, ಬಟ್ಟೆ ಬರೆಗಳಲ್ಲಾದರೂ ಸ್ವಲ್ಪ ಅನುಕೂಲವಾಗಿರಬಹುದು. ಆದರೆ ಅದು ಮುಖ್ಯ ಪ್ರಶ್ನೆಯಲ್ಲ. ಅದೆಷ್ಟು ದಿನ ಹೀಗೆ ಒಂಟಿಯಾಗಿರುವುದು? ಅಪ್ಪ ಸತ್ತಮೇಲೆ, ತಾನು ಒಂಟಿ ಎಂಬ ಭಾವನೆ ಅವಳಲ್ಲಿ ಅದಮ್ಯವಾಗಿ ತುಂಬಿಬಿಟ್ಟಿದೆ. ಹೀಗೆ ಈ ತೋಟದಲ್ಲಿ ಇನ್ನು ಹತ್ತು ದಿನ ಇರಬಹುದು. ಅಥವಾ ಮೂರು ನಾಲ್ಕು ತಿಂಗಳು ಇರಬಹುದು. ಆದರೆ ಇದೇ ತನ್ನ ಜೀವನದ ಖಾಯಂ ವಿಧಾನವಾಗುವುದು ಸಾಧ್ಯವಿಲ್ಲ. ವೆಂಕಟೇಶ ಹೇಳುವುದು ಒಂದು ಥರಕ್ಕೆ ಸರಿ. ತಕ್ಕ ಒಂದು ಗಂಡನ್ನು ಹುಡುಕಿ ಮದುವೆಯಾಗಬೇಕು. ವೆಂಕಟೇಶ ಹೇಳಿದುದನ್ನು ಅವಳ ಮನಸ್ಸು ಪೂರ್ತಿಯಾಗಿ ಅನುಮೋದಿಸಲು ಪ್ರಾರಂಭಿಸಿತು. ಅವರ ತಲೆಯ ಮೇಲೆ ಹೊಡೆವ ಹಾಗೆ ಮದುವೆಯಾಗಬೇಕು. ಎಂದರೆ ಅವರ ಹಾಗೆ ಖರ್ಚು ಮಾಡಿ ಕಳೆದುಕೊಳ್ಳುವುದು ಬೇಡ. ಸರಿಯಾದ ಒಬ್ಬ ವಿದ್ಯಾವಂತ ಬುದ್ಧಿವಂತ ಗಂಡನ್ನು ಹುಡುಕಿಸಿ ಮದುವೆಯಾಗಬೇಕು. ಶ್ರೀನಿವಾಸ ಅಂತಹ ಬುದ್ಧಿವಂತನಲ್ಲ. ಓದಿನಲ್ಲಿ ಅಷ್ಟು ಚುರುಕೂ ಇರಲಿಲ್ಲ. ಅವನ ಬಗೆಗೆ ನಾನು ಹೇಗೆ ಆಕರ್ಷಿತಳಾದೆ? – ಎಂದು ತನ್ನಲ್ಲಿ ತಾನೇ ಆಶ್ಚರ್ಯಪಟ್ಟಳು.

ತಾನು ಮದುವೆಯಾಗಿ ಶ್ರೀನಿವಾಸನಿಗಿಂತ ಹೆಚ್ಚು ಸುಖಿಯಾಗಿರುವಂತೆ ಅವಳು ಆ ಸಂಜೆ ಎಲ್ಲ ಕನಸು ಕಂಡಳು. ಆ ಚಿತ್ರವನ್ನು ಬಿಟ್ಟರೆ ಕಲ್ಪನೆಯು ಬೇರೆ ಏನನ್ನೂ ಸೃಷ್ಟಿಸಲಿಲ್ಲ, ಬದಲಾಯಿಸಲಿಲ್ಲ. ರಾತ್ರಿ ಅಡಿಗೆ ಇರಲಿಲ್ಲ. ಮಧ್ಯಾಹ್ನ ಮಾಡಿದುದನ್ನು ಮಾತಂಗಿಗೆ ಅರ್ಧ ಬಡಿಸಿದ್ದಳು. ಈಗ ಮತ್ತೆ ಅಕ್ಕಿ ತೊಳೆದು ಇಟ್ಟು ಒಲೆ ಹೊತ್ತಿಸಿದಳು. ಕಾಯಿತುರಿ ಉಪ್ಪಿನಲ್ಲಿ ಒಂದಿಷ್ಟು, ಮೊಸರಿನಲ್ಲಿ ಒಂದಿಷ್ಟು ತಿಂದರೆ ಸಾಕು. ಸಾರಿಗೆ ಬೇಳೆ ಬೇಯಿಸುವುದು ಬೇಡ ಎಂದುಕೊಂಡಳು. ಅನ್ನವಾಗಿ ಊಟವಾಗುವ ಹೊತ್ತಿಗೆ ರಾತ್ರಿ ಎಂಟು ಗಂಟೆ

ಯಾಯಿತು. ಅಪ್ಪ ಮಲಗುತ್ತಿದ್ದ ತಟ್ಟಿ ಗೋಣಿಚೀಲಗಳನ್ನು ಹಾಸಿಕೊಂಡು ಮಲಗಿದಳು. ಬರೀ ಗೋಣಿಚೀಲದ ಹಾಸಿಗೆಯು ಮೈಕೈಯನ್ನು ಒತ್ತುತ್ತಿತ್ತು. ಹೊದೆದ ದುಪ್ಪಟಿ ಬೆಚ್ಚಗೆನಿಸಲಿಲ್ಲ. ಜ್ಯೇಷ್ಠಮಾಸವಾಗಿದ್ದರೂ ಎಲ್ಲೂ ಮಳೆ ಬಿದ್ದಿರಲಿಲ್ಲ. ಆದರೆ ಪಡುವಣ ಥಂಡಿಗಾಳಿ ಆರಂಭವಾಗಿತ್ತು. ಇಲ್ಲಿ ಯಾಕೆ ಮಲಗಿದೀನಿ? ಈ ವನವಾಸ ಯಾಕೆ, ಎನಿಸಿತು. ಎದ್ದು ಊರೊಳಕ್ಕೆ ಹೋಗಿ ಮನೆಯಲ್ಲಿ ಸುಖವಾಗಿ ಬೆಚ್ಚಗೆ ಮಲಗಬೇಕು ಎಂಬ ಯೋಚನೆ ಬಂತು. ಎದ್ದು ಹೋಗಲಿಲ್ಲ. ಅದೇ ಯೋಚನೆಯಲ್ಲೇ ಮುದುರಿಕೊಂಡು ಮಲಗಿದಳು. ಯಾವ ಪುರುಷಾರ್ಥ ಸಾಧನೆಗಾಗಿ ಇಲ್ಲಿ ಹೀಗೆ ಚಳಿಯಲ್ಲಿ ನರಳುತ್ತಿದೀನಿ – ಎಂದು ಕೊಂಡಳು.

ಅಷ್ಟರಲ್ಲಿ ಹೊರಗೆ ಗಾಳಿ ಬೀಸಿತು. ತೆಂಗಿನ ಗರಿಗಳು ಸುಂಯ್ಯಲಿಟ್ಟುವು ಮೂರು ನಾಲ್ಕು ಸೋಗೆ ಕುರುಂಬಾಳೆಗಳು ಸೊರ್ ಸೊಪ್ ಎಂದು ಬಿದ್ದುವು. ದೂರದ ಯಾರದೋ ತೋಟದಲ್ಲಿ ಎರಡು ಮೂರು ತೆಂಗಿನಕಾಯಿಗಳು ಬಿದ್ದ ಧೊಪ್ ಎಂಬ ಸದ್ದು ಕೇಳಿಸಿತು. ಅವಳಿಗೆ ಭಯವಾಗಲು ಪ್ರಾರಂಭವಾಯಿತು. ಈ ಇಡೀ ಗದ್ದೆ ತೋಟಗಳ ಮಧ್ಯದಲ್ಲಿ, ಹೆಣ ಸುಡುವ ಸ್ಮಶಾಣಕ್ಕೆ ಎರಡು ಫರ್ಲಾಂಗ್ ಹತ್ತಿರದಲ್ಲಿ, ದೊಡ್ಡಕೆರೆಯ ಹಿಂಭಾಗದಲ್ಲಿ ನಾನೊಬ್ಬಳೇ ಯಾಕಿ ದೀನಿ, ಹ್ಯಾಗಿದೀನಿ, ಎಂದುಕೊಂಡಳು. ಇಷ್ಟು ದಿನವೂ ಅದು ಹ್ಯಾಗೆ ಇದ್ದೆನೋ? ಒಂದು ರೀತಿಯ ಭೂತ ಹಿಡಿದವಳ ಹಾಗೆ ಇದ್ದೆ. ಆದರೆ ಈಗ ಮನಸ್ಸು ಸಾಮಾನ್ಯ ಸ್ಥಿತಿಗೆ ಬರುತ್ತಿದೆ. ಇಪ್ಪತ್ತಮೂರರ ಹುಡುಗಿ ಒಬ್ಬಳೇ ಇಂಥ ಕಡೆ ರಾತ್ರಿಯ ಹೊತ್ತು ಇರುವುದೆಂದರೇನು? ಎದ್ದು ಹೋಗಬೇಕು. ಈಗಲೇ ಎದ್ದು ಹೋಗಬೇಕು – ಎಂದುಕೊಂಡಳು. ಆದರೆ ಏಳಲು ಮಾತ್ರ ಆಗಲಿಲ್ಲ. ಅದೇನೋ ತನ್ನನ್ನು ಬಂಧಿಸಿ ಮಲಗಿಸಿರುವಂತೆ ಎನಿಸುತ್ತಿತ್ತು. ತನ್ನ ಮನಸ್ಸನ್ನು ತಾವೇ ವಿಶ್ಲೇಷಿಸಿ ನೋಡಿಕೊಂಡಳು. ಎದ್ದು ಹೊರಗೆ ಹೋಗಿ ಊರು ಸೇರಲು ಹೆದರಿಕೆಯಾಗುತ್ತಿದೆ. ಹೊರಗೆ ಕತ್ತಲು ಕವಿದಿದೆ. ತೆಂಗಿನ ಮರಗಳೆಲ್ಲ ಕಪ್ಪು ದೆವ್ವಗಳಂತೆ ನಿಂತಿವೆ. ದಾರಿಯಲ್ಲಿ ಸಿಕ್ಕುವ ಹಿಪ್ಪೆ ಮರವು ಮಹಾ ರಾಕ್ಷಸನಂತಿದೆ. ಅದರ ಕೆಳಗೇ ಹೋಗಬೇಕು. ಬಲಭಾಗದ ದಿಬ್ಬದ ಮೇಲೆ ಗುಡಿ. ಅದರ ಆಚೆಗೆ ಏರಿ. ಏರಿಗೆ ಒದೆಮು ನಿಂತ ನೀರು. ಅಲ್ಲೇ ಅಪ್ಪ ನೀರಿಗೆ ಬಿದ್ದು ಸತ್ತದ್ದು. ಮೀನುಗಳೆಲ್ಲ ಕಿತ್ತು ತಿಂದು ಅಪ್ಪನ ಮೈ.... ನೆನಪಿನಿಂದಲೇ ಭಯವು ಹೆಚ್ಚಾಗುತ್ತಿತ್ತು. ಅದನ್ನು ಬಿಟ್ಟು ಬೇರೆ ಏನಾದರೂ ಜ್ಞಾಪಿಸಿಕೊಳ್ಳಬೇಕೆಂದರೂ ಸಾಧ್ಯವಾಗುತ್ತಿರಲಿಲ್ಲ. ಈ ಭಯದಿಂದ ತಾನು ಈ ರಾತ್ರಿಯೊಳಗೆ ಸಾಯುವುದು ಖಂಡಿತವೆನಿಸಿತು.

ನಡುರಾತ್ರಿ ಕಳೆದಮೇಲೆ ಒಂದು ಉಪಾಯ ಹೊಳೆಯಿತು. ಅಪ್ಪ ಸತ್ತ ಮೇಲೆ ಹವನಕುಂಡವನ್ನು ಹೊತ್ತಿಸಿಯೇ ಇಲ್ಲ. ಅದನ್ನಾದರೂ ಉರಿಸಿಕೊಂಡು ಕೂತರೆ ಭಯ ಕಡಿಮೆಯಾಗಬಹುದು. ತಕ್ಷಣ ಮೇಲೆ ಎದ್ದು ಕಡ್ಡಿ ಗೀರಿ ಲಾಟೀನು ಹೊತ್ತಿಸಿದಳು. ಸೌದೆಯ ಕೊರಡು ಗುಡಿಸಲಿನ ಹಿಂಭಾಗದಲ್ಲಿದೆ. ಎದ್ದು ಹೊರಗೆ ಹೋಗದೆ ತರುವ ಹಾಗಿಲ್ಲ. ಅಡಿಗೆಗೆ ಇಟ್ಟುಕೊಂಡಿದ್ದ ಸಣ್ಣ ಸಣ್ಣ ಚೂರುಗಳನ್ನೇ ಹವನಕುಂಡದಲ್ಲಿಟ್ಟು ಹೊತ್ತಿಸಿದಳು. ಸ್ವಲ್ಪ ಹೊತ್ತಿನಲ್ಲಿ ಅದು ಉರಿಯಲು ಶುರುವಾಯಿತು. ಧೈರ್ಯ ಮಾಡಿ ಎಡಗೈಲಿ ಲಾಟೀನು ಹಿಡಿದು ಹೊರಕ್ಕೆ ಹೋಗಿ ಎರಡು ತುಂಡುಗಳನ್ನು ತಂದು ಅವುಗಳ ಮೂತಿಗಳನ್ನು ಉರಿಗೆ ಇಟ್ಟಳು. ಸ್ವಲ್ಪ ಹೊತ್ತಿಗೆ ಹೊತ್ತಿಕೊಂಡುವು. ಅಪ್ಪ ಹವನ ಮಾಡುವಾಗ ಹೇಳುತ್ತಿದ್ದ ಮಂತ್ರ ಜ್ಞಾಪಕಕ್ಕೆ ಬಂತು. ಜ್ಞಾಪಕಕ್ಕೆ ಬಂದಷ್ಟನ್ನು ಗುನುಗಿಕೊಂಡಳು. ಆದೇ ಬೆಂಕಿಯಲ್ಲಿ ಮೈ ಶಾಖವೂ ಆಯಿತು. ಯೋಚನೆಯು ಮತ್ತೆ ವೆಂಕಟೇಶ ಹೇಳಿದ ಮಾತಿನ ಕಡೆಗೆ ಹರಿಯಿತು. ಹಾರುವರ ಹೆಂಗಸರು ನಮ್ಮ ಹೊಲದಲ್ಲಿ ಕೂಲಿ ಮಾಡುವ ಹಾಗೆ ಮಾಡ್ತೀನಿ ಎಂದರಂತೆ ಮೇಲಗಿರಿಗೌಡರು. ಅವರು ಅಂದಿದ್ದರೆ ಆಶ್ಚರ್ಯವಿಲ್ಲ. ಅವರ ಸ್ವಭಾವ ಅಂಥದೇ. ಅದಕ್ಕೆ ವೆಂಕಟೇಶ ಯಾಕೆ ಹೆಂಡತಿಗೆ ವಜ್ರದ ಓಲೆ, ಬೇಸರಿ ಮಾಡಿಸಬೇಕು? ಒಂದಕ್ಕೊಂದು ಏನು ಸಂಬಂಧ? ಅವನದು ಛಲದ ಬುದ್ಧಿ. ಮನಸ್ಸು ಬೇರೆಯೇ ಆದ ದಿಕ್ಕಿನಲ್ಲಿ ವಿಚಾರ ಮಾಡಿತು. ಶತಶತಮಾನಗಳಿಂದ ಆ ಹೆಂಗಸರು ಹೊಲಗಳಲ್ಲಿ ದುಡಿದಿದ್ದಾರೆ. ನಮ್ಮವರು ದುಡಿದಿಲ್ಲ. ಹಿಂದೆ ಋಷಿ ಮುನಿಗಳ ಕಾಲದಲ್ಲಿ ನಮ್ಮವರೂ ಕಾಡಿನ ಆಶ್ರಮಗಳಲ್ಲಿ ವಾಸ ಮಾಡಿ ದನಕರುಗಳನ್ನು ಸಾಕಿ, ಬ್ರಾಹ್ಮೀ ಮುಹೂರ್ತದ ಚಳಿಯಲ್ಲಿ ತಣ್ಣೀರು ಸ್ನಾನ ಮಾಡುತ್ತಿದ್ದರಲ್ಲ. ನಗರ-ನಾಗರಿಕತೆ ಬೆಳೆದು ಬ್ರಾಹ್ಮಣರು ನಗರಗಳನ್ನು ಸೇರಿದ ಮೇಲೆ ನಮ್ಮ ಹೆಂಗಸರು ಕೆಲಸ ಮಾಡಲಾರದ ಹೇಡಿಗಳಾದರು. ಒಂದು ಥರಕ್ಕೆ ಮೇಲಗಿರಿಗೌಡರು ಹೇಳುವುದು ಸರಿ. ನಮ್ಮ ಹೆಂಗಸರು ಹೊಲದಲ್ಲಿ ದುಡಿಯಬೇಕು. ಆದರೆ ತಮ್ಮ ಜಾತಿಯವರ ಹೊಲದಲ್ಲಿ ಇವರನ್ನು ದುಡಿಸಬೇಕೆನ್ನುವ ಮಂತ್ರಿಗಳ ಅಪೇಕ್ಷೆ ಬರೀ ಈರ್ಷ್ಯೆಯಿಂದ ಕೂಡಿದೆ, ಪ್ರತೀಕಾರ ಭಾವದಿಂದ ಕೂಡಿದೆ. ಈ ಮಂತ್ರಿಗಳ ಮನೆಯಲ್ಲಿ ಯಾವ ತಲೆಯಲ್ಲಿ ತಾನೆ ಹೆಂಗಸರು ಹೊರಗೆ ದುಡಿದಿದ್ದಾರೆ? ಅವರು ಹೇಳಿ ಕೇಳಿ ಪಾಳೆಯಗಾರರ ಮನೆಯವರು. ರಾಜ್ಯ ಆಳಿದ ಮನೆಯ ಹೆಂಗಸರು ಹೊಲದಲ್ಲಿ ಮಣ್ಣು ಮುಟ್ಟುವುದೆ? ಅವನ ಅಜ್ಜ ಹಾಗನ್ನುತ್ತಾರೆ ಎಂದು ಶ್ರೀನಿವಾಸ ಒಂದೊಂದು ಸಲ ಹೇಳುತ್ತಿದ್ದ.

ಅಷ್ಟರಲ್ಲಿ ಹೊರಗೆ ಎಲ್ಲೋ ನಾಲ್ಕು ಹನಿ ಮಳೆ ಬಿದ್ದಂತೆ ಆಯಿತು. ಬರೀ ಹನಿಗಳು. ದಪ್ಪ ಮಳೆಯಿಲ್ಲ. ಆಮೇಲೆ ಗಾಳಿ ಬೀಸಿತು. ಎಲ್ಲೋ ದೂರದಲ್ಲಿ ಮಳೆಯಾಗಿದೆ; ಅಥವಾ ಆಗುತ್ತಿದೆ. ಮಳೆಯ ವಾಸನೆ. ಮಣ್ಣಿನ ವಾಸನೆ. ಅವಳು ಒಂದು ಸಲ ಉಸಿರನ್ನು ದೀರ್ಘವಾಗಿ ಎಳೆದುಕೊಂಡಳು. ಮಣ್ಣಿನ ವಾಸನೆ ಅಷ್ಟೇ ಹಿತವಾಗಿದೆ. ಚಿಕ್ಕ ವಯಸ್ಸಿನಲ್ಲಿ ಅವಳೂ ವೆಂಕಟೇಶನೂ ಕೂಡಿ ಹಿತ್ತಿಲಲ್ಲಿ ಸೊಪ್ಪಿನ ಮಡಿ ಅಗೆದು ನೀರು ಹೊಯ್ಯುತ್ತಿದ್ದುದು ನೆನಪಿಗೆ ಬಂತು. ಕಾದ ಮಣ್ಣಿಗೆ ಮೊದಲ ಸಲ ನೀರು ಹಾಕಿದಾಗ ಗಮಗಮ ವಾಸನೆ ಬರುತ್ತಿತ್ತು. ಈಗಲೂ ಅಂತಹ ವಾಸನೆಯೇ ಬರುತ್ತಿದೆ. ಹೊರಗೆ ಹೋಗಿ ನಿಂತು ಅದನ್ನು ಮೂಗಿನಿಂದ ಕುಡಿಯಬೇಕೆನಿಸಿತು. ಎದ್ದು ಗುಡಿಸಲಿನ ಬಾಗಿಲು ತೆಗೆದು ಹೊರಗೆ ಬಂದು ನಿಂತಳು. ಗಾಳಿ ಒಳಗೆ ನುಗ್ಗಿ, ಒಳಗಿನ ಬೆಂಕಿಯ ಉರಿ ಎತ್ತೆತ್ತಲೋ ಹಾಯಲು ಮೊದಲಾಯಿತು. ಬಾಗಿಲನ್ನು ಮುಚ್ಚಿಕೊಂಡು ಹೊರಗೆ ನಿಂತಳು. ವಾಸನೆಗೆ ಆನಂದವಾಗುತ್ತಿದೆ. ಮಲ್ಲಿಗೆಯ ದಂಡೆಯನ್ನು ಕೈಲಿ ಹಿಡಿದವರು ಉಸಿರನ್ನು ಎಳೆದೆಳೆದುಕೊಂಡು ಆನಂದಿಸುವಂತೆ ಅವಳು ಪೃಥ್ವಿಯ ಮೂಲಗಂಧವನ್ನು ಮೂಗಿನಿಂದ ಹೀರಿಕೊಂಡಳು. ಏಳೆಂಟು ಹೆಜ್ಜೆ ಮುಂದೆ ಹೋಗಿ, ಉತ್ತಿದ್ದ ಜಾಗದಲ್ಲಿ ಕುಳಿತು, ನೆಲದ ಹತ್ತಿರಕ್ಕೆ ಬಾಗಿದಳು. ಮಳೆ ಹನಿ ಬಿದ್ದು ಸಣ್ಣ ಸಣ್ಣ ಉಂಡೆಯಂತಾಗಿದ್ದ ಹುಡಿಮಣ್ಣು ಸೊಗಡನ್ನು ಬೀರುತ್ತಿತ್ತು. ಎಷ್ಟೋ ವರ್ಷಗಳಾಯಿತು ಇಂತಹ ಸುಖವನ್ನನುಭವಿಸಿ ಎಂಬಂತೆ ಅವಳು ಅದನ್ನು ಮೂಸಿನೋಡಿದಳು. ಕೈಹಾಕಿ ಒಂದು ಶಾರೆ ಮಣ್ಣನ್ನು ತೆಗೆದುಕೊಂಡು ಮೂಗಿನ ಹತ್ತಿರಕ್ಕೆ ಇಟ್ಟುಕೊಂಡಳು.

ಅಲ್ಲಿಯೇ ಸ್ವಲ್ಪ ಹೊತ್ತು ಕುಳಿತಿದ್ದಳು. ಇನ್ನೂ ಕತ್ತಲೆ ಕವಿದಿತ್ತು. ಆಕಾಶದಲ್ಲಿ ಮೋಡ ಮುಸುಕಿತ್ತು. ಈಗ ತನಗೆ ಹೆದರಿಕೆಯೇ ಆಗುತ್ತಿಲ್ಲ. ಅದೇಕೆ ಇದಕ್ಕೆ ಮೊದಲು ಇಷ್ಟು ಹೆದರಿಕೊಂಡೆ? ಹೆಂಗಸಾದರೆ ಹೆದರಬೇಕೆ? ನೆನಪಾಯಿತು: ಮೂತಂಗಿ ಈ ತೋಟಕ್ಕೆ ರಾತ್ರಿ ಎಂಟು ಗಂಟೆಯ ಹೊತ್ತಿನಲ್ಲಿ ಬರುತ್ತಿದ್ದಳಂತೆ. ಬೆಳದಿಂಗಳ ದಿನಗಳಲ್ಲಿ ತಪ್ಪಿಸುತ್ತಿದ್ದಳಂತೆ. ಕತ್ತಲೆಯ ದಿನಗಳಲ್ಲೇ ಬಂದು ಅಪ್ಪನ ಜೊತೆ ಇದ್ದು ಆಮೇಲೆ ಗದ್ದೆಯ ಹಳ್ಳದ ದಾರಿಯಲ್ಲಿ ಒಬ್ಬಳೇ ಹೋಗುತ್ತಿದ್ದಳಂತೆ. ಅವಳ ಜಾತಿಯ ಹೆಂಗಸರು ಈಗಲೂ ರಾತ್ರಿ, ಕತ್ತಲು, ಎಂಬ ಭಯವಿಲ್ಲದೆ ಒಬ್ಬೊಬ್ಬರೇ ಹೊರಗೆ ತಿರುಗುತ್ತಾರೆ. ನಡುರಾತ್ರಿಯಲ್ಲಿ ಎದ್ದು ನೀರಿನ ಕಡೆಗೆ ಹೋಗಿ ಬರುತ್ತಾರೆ. ನನಗೇಕೆ ಈ ಹೆದರಿಕೆ, ಎಂದುಕೊಂಡಳು. ಒಳಗೆ ಬೆಂಕಿ ಉರಿಯುತ್ತಿತ್ತು. ಗುಡಿಸಲಿನ ಬಾಗಿಲು ಮುಚ್ಚಿತ್ತು. ಅವಳು ಕತ್ತಲೆಯಲ್ಲೇ, ಮಬ್ಬುಮಬ್ಬಾಗಿ ಕಾಣುತ್ತಿದ್ದ ತೆಂಗಿನ ಮರಗಳ ಕೆಳಗೆ

ಹೆಜ್ಜೆ ಹಾಕಿಕೊಂಡು ತೋಟದಲ್ಲೆಲ್ಲ ಒಂದು ಸುತ್ತು ತಿರುಗಿದಳು. ಒಂದು ಯೋಚನೆ ಬಂತು: ಅಪ್ಪ ಹ್ಯಾಗೂ ಸ್ವಂತದ ಅರ್ಧ ಜಮೀನನ್ನು ನನಗೆ ಬರೆದಿದಾನೆ. ನಾನು ಇಲ್ಲೇ ಇದ್ದುಬಿಡಬೇಕು. ಸ್ವಂತ ಜಮೀನು ಮಾಡಬೇಕು. ಶೂದ್ರ ಹೆಂಗಸರಂತೆ ಮಣ್ಣು ಮುಟ್ಟಿ ಕೆಲಸ ಮಾಡಬೇಕು. ಈ ತೋಟದಲ್ಲೇ ವಾಸಮಾಡಬೇಕು. ಅನುಕೂಲವಾಗಿ ಇಲ್ಲೇ ಒಂದು ಸಣ್ಣ ಮನೆ ಕಟ್ಟಿಸಿಕೊಳ್ಳಬೇಕು. ಒಟ್ಟಿನಲ್ಲಿ ನಾನು ಶೂದ್ರಳಾಗಬೇಕು. ಮಾತಂಗಿಗಿಂತ ಹೆಚ್ಚಿನ ಶೂದ್ರಳಾಗಬೇಕು.

ಇದ್ದಕ್ಕಿದ್ದಹಾಗೆಯೇ ತನ್ನಲ್ಲಿ ಹುಟ್ಟಿಕೊಂಡು ಬಲವಂತವಾದ ಈ ಶೂದ್ರತ್ವದ ಬಯಕೆಯಿಂದ ಅವಳಿಗೇ ಆಶ್ಚರ್ಯವಾಯಿತು. ಆದರೆ ಅದರಲ್ಲಿ ಅದಮ್ಯ ಆಕರ್ಷಣೆಯಿತ್ತು. ಇದೇ ತನ್ನ ದಾರಿ ಎಂಬ ನಿಶ್ಚಯ ಮಾಡಿಕೊಂಡು ಗುಡಿಸಲಿಗೆ ಬಂದಳು. ಎರಡು ಕೊರಡುಗಳಲ್ಲೂ ಬೆಂಕಿ ಕವರುತ್ತಿತ್ತು. ಅವಳಿಗೆ ವಿಚಿತ್ರವೆನಿಸಿತು. ಇದೆಂತಹ ಹವನಕುಂಡ? ಮಂತ್ರವಿಲ್ಲ, ತಂತ್ರವಿಲ್ಲ. ಆದರೆ ಇದನ್ನು ಹೊತ್ತಿಸಿದ ಮೇಲೆ ತನ್ನ ಭಯ ಕಡಿಮೆಯಾಯಿತು. ಆದರೆ ಇದನ್ನು ಮರೆತು ಹೊರಗೆ ಹೋಗಿ ಮಣ್ಣನ್ನು ಮೂಸುತ್ತಾ ಕೂತಾಗಲೂ ಭಯವಾಗಲಿಲ್ಲ. ಈಗ ಇಲ್ಲಿ ಒಳಗೆ ಬಂದಾಗ ಇದರಲ್ಲಿ ಅರ್ಥವೇ ಕಾಣುತ್ತಿಲ್ಲ. ನಾನು ಬ್ರಾಹ್ಮಣಿಯೇ ಅಲ್ಲವೆ? ನೆನಪಾಯಿತು: ಮಣ್ಣಾಗಿದ್ದ ಬಲಬೆರಳನ್ನೇ ಎಡಭುಜದ ಮೇಲೆ ರವಿಕೆಯ ಒಳಗೆ ಸರಿಸಿ ಮುಟ್ಟಿಕೊಂಡಳು. ಅಪ್ಪ ಹಾಕಿದ ಜನಿವಾರ ಅಲ್ಲೇ ಇದೆ. ತಾನೇನು ಆಚಮನ ಮಾಡುತ್ತಿಲ್ಲ. ಗಾಯತ್ರಿ ಪಠಿಸುತ್ತಿಲ್ಲ. ಇದನ್ನು ತೆಗೆದು ಎಸೆಯಲೆ? – ಎನಿಸಿತು. ಆದರೆ ಮನಸ್ಸು ಬರಲಿಲ್ಲ. ಅರುಂಧತಿ ಬರುವ ತನಕ ಈ ಅಗ್ನಿಯನ್ನು ಕಾಪಾಡುವ ಕೆಲಸ ನಿನ್ನದು ಅಂತ ಅಪ್ಪ ತನಗೆ ಯಜ್ಞೋಪವೀತ ಧಾರಣೆ ಮಾಡಿ ಗಾಯತ್ರಿ ಉಪದೇಶ ಮಾಡಿದ. ಅವನು ಹುಚ್ಚಿನಲ್ಲಿ ಮಾಡಿದ ಕೆಲಸ ಇದು ಎಂದುಕೊಳ್ಳಲು ಅವಳಿಗೆ ಮನಸ್ಸು ಬರಲಿಲ್ಲ.

ಅವಳಿಗೆ ಸ್ನಾನ ಮಾಡಬೇಕೆನಿಸಿತು. ನೆನ್ನೆ ಒಗೆದು ಒಣಗಿಸಿಟ್ಟಿದ್ದ ಲಂಗ ರವಿಕೆ ಸೀರೆಗಳನ್ನು ತೆಗೆದುಕೊಂಡು ಕೊಳದ ದಡಕ್ಕೆ ಬಂದಳು.

೫೫

ಆರನೆಯ ದಿನ ವೆಂಕಟೇಶನ ಅತ್ತೆ ಮಾವ ಇಬ್ಬರೂ ಬಂದರು. ತಿಥಿಗೆ ಸಾಮಾನು ತರುವುದಕ್ಕೆಂದು ವೆಂಕಟೇಶ ಅದೇ ದಿನ ತಾವರೆಕೆರೆಗೆ ಹೋದ. ಬ್ಯಾಂಕಿನಲ್ಲಿ ಅವನ ಸ್ವಂತ ಲೆಕ್ಕ ಬೇರೆ ಇತ್ತು. ಅದರಲ್ಲಿ ಎರಡು ಸಾವಿರ

ರೂಪಾಯಿ ತೆಗೆದುಕೊಂಡು ಪೇಟೆಯ ಕಡೆಗೆ ತಿರುಗುತ್ತಿದ್ದ. ಎದುರಿಗೆ ಲಾಯರ್ ಕೃಷ್ಣಪ್ಪನವರು ಸಿಕ್ಕಿದರು. ಸಂತಾಪ ವ್ಯಕ್ತಪಡಿಸುತ್ತಾ ಹೇಳಿದರು: 'ಸಾಯೂ ಇಚ್ಛೆ ಅವರಿಗೆ ಆಗಲೇ ಬಂದಿತ್ತೇನೊ. ಅದಕ್ಕೆ ಅಂತ ಕಾಣುತ್ತೆ ವಿಲ್ ಬರೆದು ರಿಜಿಸ್ಟರ್ ಕೂಡ ಮಾಡಿಸಿಬಿಟ್ಟರು.'

'ಏನು ವಿಲ್?' – ವೆಂಕಟೇಶ ಆಶ್ಚರ್ಯದಿಂದ ಕೇಳಿದ.

'ದೇವಸ್ಥಾನದ ಪೂಜೆ ಮಾಡುವ ಇಚ್ಛೆ ಇದ್ದರೆ ಅದರ ಜಮೀನು ಪೂರ್ತಿ ಮಗನಿಗೆ. ಸ್ವಂತದ್ದರಲ್ಲಿ ಮಗ, ಮಗಳು, ಇಬ್ಬರಿಗೂ ಸಮಪಾಲು ಅಂತ. ವಿವರ ನನಗೆ ನೆನಪಿಲ್ಲ. ನಾನೇ ಕಾಗದ ಬರೆದೆ. ಸಬ್‌ರಿಜಿಸ್ಟ್ರಾರ್‌ರ ಆಫೀಸಿನಿಂದ ಕಾಗದ ತಗೊಂಡಿಲ್ಲ ಅಂತ ಕಾಣುತ್ತೆ ಇನ್ನೂ.'

ಸಲೀಸಾಗಿ ಹೋಗುತ್ತಿದ್ದವನಿಗೆ ಕಾಲು ಉಳುಕಿದಂತೆ ಆಯಿತು. ವೆಂಕಟೇಶ ಒಂದು ಕ್ಷಣ ಗರಹಿಡಿದವನಂತೆ ಆದ. ಎರಡು ನಿಮಿಷದ ನಂತರ, 'ನನ್ನ ಒಂದು ಮಾತು ಕೇಳಿಯಲ್ಲವೆ ನೀವು ಬರೆಯೂದು?' ಎಂದ.

'ಇವತ್ತೇ ಆಗಬೇಕು ಅಂದ್ರು. ಇಷ್ಟು ವಿಷಯ ನೀವು ಬರೆಯೂ ಅಗತ್ಯವೇ ಇಲ್ಲ, ಹೊಸ ಕಾನೂನೇ ಹಾಗೆ ಬಂದಿದೆ ಅಂದೆ. ಆದರೂ ನಾನು ಬರೀಲೇ ಬೇಕು ಅಂದ್ರು.'

'ಎಷ್ಟು ದಿನವಾಯ್ತು?'

'ಸರಿಯಾಗಿ ಜ್ಞಾಪಕವಿಲ್ಲ. ಒಂದೂವರೆ ಎರಡು ತಿಂಗಳಾಗಿರಬಹುದು.'

ವೆಂಕಟೇಶ ಅಲ್ಲಿಂದ ಸಬ್‌ರಿಜಿಸ್ಟ್ರಾರರ ಆಫೀಸಿಗೆ ಹೋಗಿ ಗುಮಾಸ್ತೆಗೆ ಐದು ರೂಪಾಯಿ ಕೊಟ್ಟು, ಪತ್ರದ ಅಸಲು ಪ್ರತಿ ಕೇಳಿದ. ಬರೆದವರು ಅಧಿಕಾರ ಪತ್ರ ಕೊಡದೆ ಅದನ್ನು ಕೊಡಲು ಸಾಧ್ಯವಿಲ್ಲವೆಂದ ಅವನು, ಅದರ ಪ್ರತಿಯನ್ನು ತೋರಿಸಿದ. ರಿಜಿಸ್ಟರ್ ಆಗಿ ರಿಜಿಸ್ಟರಿನಲ್ಲಿ ಸೇರಿಹೋದ ಮೇಲೆ ತಾನು ಪ್ರತಿಯನ್ನು ಕೇಳಿ ಪ್ರಯೋಜನವಿಲ್ಲವೆಂದುಕೊಂಡ ವೆಂಕಟೇಶ ವಿಲ್ಲಿನ ವಿವರಗಳನ್ನು ಗುರುತು ಹಾಕಿಕೊಂಡ. ಪೇಟೆಗೆ ಸಾಮಾನಿಗೆ ಹೋಗುವಾಗ ಯೋಚಿಸಿದ: ಇಷ್ಟೊಂದು ದುಡ್ಡು ಖರ್ಚು ಮಾಡಿ ತಿಥಿ ಮಾಡದಿದ್ದರೆ ಏನು? ಪಶ್ಚಿಮವಾಹಿನಿಗೋ ಹೊಂಪರಕ್ಕೋ ಹೋಗಿ ಹೊಳೆಯ ದಡದಲ್ಲಿ ನೂರಿನ್ನೂರು ರೂಪಾಯಿಯಲ್ಲಿ ದರ್ಭೆ ಚಿವುಟಿಹಾಕಿ ಎಳ್ಳು ನೀರು ಹೀಗಂದು ಸುಮ್ಮನೆ ಬರಬಹುದು. ಗರ್ಭಿಣಿ ಹೆಂಡತಿ, ಮನೆಯಲ್ಲಿ ಮಾಡೋರಿಲ್ಲ ಅಂದ್ರೆ ಆಯಿತು. ಅದೇ ನಿಶ್ಚಯದಲ್ಲಿ ಬಸ್‌ಸ್ಟ್ಯಾಂಡಿಗೆ ಬಂದ. ಆದರೆ ಬೇರೊಂದು ವಿಚಾರ ಬಂತು: ಕೆಲಸ ಕಾರ್ಯ ನೋಡಿಕೊಳ್ಳಕ್ಕೆ ಅತ್ತೆ ಮಾವ ಬಂದಿರೂದು ಕೇರಿಯ ಬ್ರಾಹ್ಮಣರಿಗೆಲ್ಲ ಗೊತ್ತಾಗಿದೆ. ಈಗ ಪಶ್ಚಿಮವಾಹಿನಿಗೆ ಹೋದರೆ ಇವನು ಕಾಸು ಉಳಿಸುಕ್ಕೇ

ಹೋದ ಅನ್ನೂ ಹಾಗಾಗುತ್ತೆ. ವೈಕುಂಠ ಸಮಾರಾಧನೆ ದಿನ ರೈತವರ್ಗ-ದೋರಿಗೂ ಒಂದಿಷ್ಟು ಅನ್ನ ಹಾಕಬೇಕು. ಇವೆಲ್ಲ ಆಗೂ ಖರ್ಚೇ – ಎಂದು ಕೊಂಡು, ಮತ್ತೆ ಪೇಟೆಗೆ ಹೋಗಿ, ತಾನು ಬರೆದು ತಂದಿದ್ದ ಪಟ್ಟಿಯಂತೆ ಸಾಮಾನು ಕಟ್ಟಿಸಿದ.

ವಾಪಸು ಬರುವಾಗ ಬುದ್ಧಿ ಯೋಚಿಸಲು ಆರಂಭಿಸಿತು. ರಿಜಿಸ್ಟರಾಗಿರುವ ತಾರೀಕು ನೋಡಿದರೆ ಅಪ್ಪ ಬೆಂಗಳೂರಿನಿಂದ ಸೀದಾ ತಾವರೆಕೆರೆಗೆ ಬಂದಿದಾನೆ. ಈಗ ಸತ್ಯ ಎಲ್ಲಿ ವಾಸವಾದಾಗಿಳೋ ಆ ಭಾಗವೇ ಅವಳಿಗೆ ಹೋಗಬೇಕು ಅಂತ ಬರೆದಿದಾನೆ. ಇದೆಲ್ಲ ನೋಡಿದರೆ ಇದು ಅವಳಿಗೆ ಮೊದಲೇ ಗೊತ್ತಿತ್ತೆ? ತಂತ್ರ ಗಾರ ಲೌಡಿ ಏನೂ ಗೊತ್ತಿಲ್ಲದೋಳ ಹಾಗಿದಾಳೆಯೆ? – ಎಂದುಕೊಂಡ. ಆದರೆ ಅವಳು ಬುದ್ಧಿವಂತೆಯೇ ಹೊರತು, ಅವಳ ವ್ಯವಹಾರಜ್ಞಾನ ಕಡಿಮೆ ಎಂಬ ತನ್ನ ತೂಕವನ್ನು ಅನ್ವಯಿಸಿ, ಅವಳಿಗೆ ಗೊತ್ತಿಲ್ಲದೆ ಇದ್ದರೂ ಇರಬಹುದು, ಉಪಾಯವಾಗಿ ತಿಳಕೋಬೇಕು ಎಂದು ನಿರ್ಧರಿಸಿದ. ಊರಿಗೆ ಬಂದವನೇ ಏರಿಯ ಮೇಲೆ ಆಚೆ ಕೋಡಿಯ ತನಕ ನಡೆದು ಬೆಟ್ಟಯ್ಯನವರನ್ನು ಕರೆಸಿ ಮೊದಲು ಅವರ ಕಷ್ಟ ಸುಖ ವಿಚಾರಿಸಿದ. ಅವರ ಮಗನ ಮೇಲೆ ಕಿತಾಪತಿ ಮಾಡಹೊರಟಿದ್ದ ಊರವರನ್ನು ಬೈದ. ಮಾತಂಗಿ ಹಣವನ್ನು ಹಾಳು ಮಾಡದೆ ಸರಿಯಾಗಿ ಇಟ್ಟುಕೊಂಡಿರುವಂತೆ ನೋಡಿಕೊಳ್ಳುವ ಹಾಗೆ ಹೇಳಿದ. ಅನಂತರ ಪ್ರಾಸಂಗಿಕವಾಗಿ ಎಂಬಂತೆ ಅಪ್ಪನ ವಿಲ್ ವಿಷಯ ತೆಗೆದ.

'ನಿಮ್ಮ ತಂಗ್ಯವ್ನುಗೆ ಗೊತ್ತೇ ಇರ್ನಿಲ್ಲ ಅದು. ಆಚೆ ಮನ್ನೆ ತಾವರೆಕೆರೆಗೆ ಹೋಗಿದ್ನಲ, ಆಗ ಲಾಯರು ಕ್ರಿಷ್ಣಪ್ಪಾರು ಸಿಕ್ಕಿದ್ರು. ಅವರು ಹೆಂಗಂದ್ರು. ಅದ್ನ ನಾನು ಮನ್ನೆ ಬೆಳಗ್ಗೆ ತಂಗ್ಯವ್ನುಂಗೆ ಹೇಳಿದೆ.'

ತಕ್ಕ ರೀತಿಯಲ್ಲಿ ಆ ಮಾತನ್ನು ಮುಗಿಸಿ ಅವನು ಅಲ್ಲಿಂದ ಹೊರಟ. ಮೊನ್ನೆ ನಾನು ತೋಟಕ್ಕೆ ಹೋಗಿದ್ದಾಗ ಅವಳಿಗೆ ಗೊತ್ತಾಗಿತ್ತು. ಆದರೂ ನನ್ನ ಕೈಲಿ ಸುದ್ದಿ ತೆಗೀಲೇ ಇಲ್ಲ. ಅಂದ್‌ರೆ ಜಮೀನನ್ನು ಅನುಭವಿಸುಕ್ಕೆ ಅವಳಿಗೇನು ಇಷ್ಟವಿದೆಯೋ, ಇಲ್ಲವೋ? ಅಥವಾ ಅಪ್ಪ ಸತ್ತ ದುಃಖದಲ್ಲಿ ಯಾಕೆ ಈ ಮಾತು ಅಂತ ಎತ್ತಲಿಲ್ಲವೋ? ಹ್ಯಾಗಾದರೂ ಸರಿ, ಇವನ್ನು ಉಪಾಯವಾಗಿ ಕೆದಕಬೇಕು – ಎಂದುಕೊಂಡ.

ದಿನಸಿ ಧಾನ್ಯ, ಕಾಯಿ ಕಸಿ, ಸೌದೆ ಸೊಪ್ಪು, ದಾನಕ್ಕೆ ಕೊಡುವ ಪಾತ್ರೆ ಪರಟೆ ಗೋವುಗಳೆಲ್ಲ ಮನೆಯಲ್ಲೇ ಇದ್ದುವು. ಇದರ ಮೇಲೆ ಎರಡು ಸಾವಿರ ಖರ್ಚು ಮಾಡಿದ್ದುದರಿಂದ ಶ್ರಾದ್ಧ ಭರ್ಜರಿಯಾಗಿ ನಡೆಯಿತು. ವೆಂಕಟೇಶ ಮೂರ್ತಿಯ ಕಾಲವೆಂದರೆ ವೆಂಕಟರಮಣಯ್ಯನವರ ಕಾಲವಲ್ಲ ಎಂಬುದು

ಎಲ್ಲರಿಗೂ ಗೊತ್ತಿದ್ದ ಸಂಗತಿ. ಈಗ ಅದು ಪುನಃ ಪ್ರತಿಷ್ಠಿತವಾಯಿತು. ಮಾಸಿಕ ಮತ್ತು ವೈಕುಂಠದ ಎರಡು ದಿನಗಳೂ ಸತ್ಯ ಮನೆಗೆ ಬಂದಿದ್ದಳು. ಆದರೆ ರಾತ್ರಿ ಮಲಗಲು ತೋಟಕ್ಕೆ ಹೊರಟುಹೋದಳು. ಮರುದಿನ ಕೈಮಂಡೆಗೂ ಬಂದು ಹೋದಳು. ಅವಳು ಹೀಗೆ ತೋಟದಲ್ಲಿರುವುದನ್ನು ಕಂಡ ವೆಂಕಟೇಶನ ಅತ್ತೆ ಮಾವಂದಿರಿಗೂ ಆಶ್ಚರ್ಯ. ಜಯಮ್ಮನ ಇಬ್ಬರು ಅಣ್ಣಂದಿರಿಗೂ ಆಶ್ಚರ್ಯ.

ಮೊದಲ ಬಾಣಂತಿತನಕ್ಕಂತೂ ಊರಿಗೆ ಕರೆದುಕೊಂಡು ಹೋಗಲಿಲ್ಲ. ಈಗಲಾದರೂ ಕರೆದೊಯ್ಯಬೇಕೆಂಬುದು ಅವರ ಆಶೆಯಾಗಿತ್ತು. ಆದರೆ ಶ್ರಾದ್ಧಕ್ಕೆ ಬಂದವರು ಬಾಣಂತಿತನಕ್ಕೆ ಕರೆದುಕೊಂಡು ಹೋಗಬಾರದು. ಎಂಟು ಹತ್ತು ದಿನ ಕಳೆದ ಮೇಲೆ ವೆಂಕಟೇಶನೇ ಕರೆದುಕೊಂಡು ಬರುವಂತೆ ಹೇಳಿ ಅವರು ಕೈಮಂಡೆಯ ದಿನವೇ ಹೊರಟುಹೋದರು. ಮರುದಿನ ವೆಂಕಟೇಶ ಅಪ್ಪನ ವಿಲ್ಲಿನ ವಿಷಯವನ್ನು ಹೆಂಡತಿಯ ಕೈಲಿ ಮಾತನಾಡಿದ. ಜಯಮ್ಮ ಸ್ವಭಾವತಃ ಒಳ್ಳೆಯವಳು. ವಿಧವೆಯಾಗಿಯೋ ದಿಕ್ಕು ಕೆಟ್ಟೋ ನಿರ್ಗತಿಕಳಾಗಿಯೇ ಹೋದ ಹೆಣ್ಣುಮಕ್ಕಳಿಗೆ ಒಂದೆರಡು ಆರಿನ ಉಕ್ಕೆ ಹೊಲ, ಎರಡು ಅಂಕಣ ಮನೆಯನ್ನು ಕೊಡುವುದನ್ನು ಕಂಡಿದ್ದಳು. ಆದರೆ ಮದುವೆಯಾಗದ ಹುಡುಗಿಗೆ ಸಮಸಮ ಅರ್ಧಗಾಲು ಬರೆಯುವುದೆಂದರೆ ಏನು! ಅಂದರೆ, ಅವಳು ಮದುವೆ ಆಗುವುದೇ ಇಲ್ಲವೆ? ಆಗುವುದು ಬೇಡ ಅಂತ ಮಾವನೋರ ಇಷ್ಟವಾಗಿತ್ತೆ? ದೇವಸ್ಥಾನದ್ದೂ ಕೂಡಿ ಒಟ್ಟು ಆಸ್ತಿಯಲ್ಲಿ ಮುಕ್ಕಾಲು ಭಾಗ ತಮಗೇ ಉಳಿಯುತ್ತದೆ. ಗಂಡ ಹೋಟೆಲಿನಲ್ಲಿ, ಪೇಪರ್ ಏಜನ್ಸಿಯಲ್ಲಿ, ಮೇಲೆ ರಾಜಕೀಯದಲ್ಲಿ, ಹೊಸ ಮಾದರಿ ಬತ್ತ ಬೆಳೆಸುವುದರಲ್ಲಿ ಕೈತುಂಬ ಸಂಪಾದನೆ ಮಾಡುತ್ತಿದ್ದಾನೆ. ಆದರೆ ಮನೆಯ ಆಸ್ತಿಯನ್ನು ಹೆಣ್ಣುಮಕ್ಕಳಿಗೆ ಬರೆಯುವುದು ಅನ್ಯಾಯ ಎಂದುಕೊಂಡಳು. ಮನಸ್ಸಿನಲ್ಲಿಯೇ ಮಾವ ಮತ್ತು ನಾದಿನಿಯನ್ನು ಬೈದುಕೊಂಡಳು. ಆದರೆ ಅಬ್ಬರ ಮಾಡುವುದಾಗಲಿ, ಜಗಳ ಕಾಯುವುದಾಗಲಿ, ಹೊರಗಿನವರ ಕೈಲಿ ಹೇಳುವುದಾಗಲಿ ಅವಳ ಸ್ವಭಾವವಲ್ಲ.

ಕೈಮಂಡೆಯ ಮರುದಿನ ವೆಂಕಟೇಶ ತೋಟಕ್ಕೆ ಹೋದ. ತೋಟದ ಬಲ ಮೂಲೆಯಲ್ಲಿದ್ದ ಬಿದಿರುಮೆಳೆಯ ಒಂದು ಬೊಂಬನ್ನು ಹತ್ತಿ ಸತ್ಯ ಮಚ್ಚುಗತ್ತಿಯಿಂದ ಮುಳ್ಳು ಕಡಿಯುತ್ತಿದ್ದಳು. 'ನೀನ್ಯಾಕೆ ಈ ಕೆಲಸ ಮಾಡ್ತಿದೀಯ?' –ಅವನು ಎಂದ.

'ನೋಡು, ತೋಟದ ಬೇಲಿ ಎಲ್ಲ ಸಂದಿ ಬಿಟ್ಟುಕೊಂಡಿದೆ. ಹೊರಭಾಗಕ್ಕೆ ಎರಡು ಜೋಡಿಯಾದರೂ ಹೊಸ ಮುಳ್ಳು ಹಾಕಿ ಬಿಗಿಯಬೇಕು.'

'ಅದನ್ನ ನೀನ್ಯಾಕೆ ಮಾಡಬೇಕು? ಆಳಿಲ್ಲವೆ?'

'ನಾನೇ ಮಾಡಬೇಕು ಅಂತಿದೀನಿ. ನೋಡು, ಇನ್ನು ಮೇಲೆ ನಾನು ಬೆಂಗಳೂರಿಗೆ ಹೋಗುಲ್ಲ. ಅಂಗಡಿಗೆ ಆಗಲೇ ಕಾಗದ ಬರೆದು ಹಾಕಿಬಿಟ್ಟೆ. ಒಂದು ದಿನ ಹೋಗಿ ರೂಮಿನ ಬಾಡಿಗೆ ಕೊಟ್ಟು ಸಾಮಾನು ತಗಂಡು ಬರ್ತೀನಿ. ಇಲ್ಲೇ ಇದ್ದು ನೆಲದಲ್ಲಿ ಕೆಲಸ ಮಾಡಬೇಕು ಅಂತ ಮಾಡಿದೀನಿ.'

'ನಿಂಗೆ ಬುದ್ಧಿ ನೆಟ್ಟಗಿಲ್ಲ' – ಎಂದ. ಅವಳು ಮಾತನಾಡಲಿಲ್ಲ.

ಅವನೇ ಮಾತು ತೆಗೆದ: 'ಅಪ್ಪ ವಿಲ್ ಬರೆದಿದಾನಂತೆ.'

'ಐದಾರು ದಿನದ ಹಿಂದೆ ಬೆಟ್ಟಯ್ಯನೋರು ಹೇಳಿದ್ರು.'

'ಈಗ ಏನಂತೀಯ? ನೋಡು, ನೀನು ಬ್ಯಾರೆಯಲ್ಲ, ನಾನು ಬ್ಯಾರೆಯಲ್ಲ. ಪಿತ್ರಾರ್ಜಿತ ಆಸ್ತಿ ನನ್ನ ತಂಗಿಗೆ ಸೇರಿದರೆ ನಂಗೇನು ದುಃಖವಿಲ್ಲ. ನಾನು ಹೊಟ್ಟೇಕಿಚ್ಚು ಪಡ್ತೀನಿ ಅನ್ನೊ ಹಾಗೆ ಅಪ್ಪ ಒಳಗಿಂದೊಳಗೇ ಹೀಗೆ ಮಾಡಬಾರದಾಗಿತ್ತು. ಮಾಡಿದ. ಹೊಕ್ಕಳ್ಲಿ. ಈಗ ನೀನು ಹೇಳು. ನೀನು ಜಮೀನು ವಹಿಸ್ಕತ್ತಿಯೋ, ಮದುವೆ ಮಾಡ್ಕಂತಿಯೊ? ನಾನು ಅವತ್ತೇ ಹೇಳಿದ ಹಾಗೆ ಇಪ್ಪತ್ತು ಸಾವಿರವಾಗಲಿ ಮದುವೆ ಮಾಡ್ತೀನಿ.'

ಅವಳು ಮಾತನಾಡಲಿಲ್ಲ. ತಾನು ಹತ್ತಿದ್ದ ಬೊಂಬಿನಿಂದ ಬಲಭಾಗಕ್ಕೆ ಕೈಗೆ ಸಿಕ್ಕುವಷ್ಟು ಮುಳ್ಳುಗಳನ್ನು ಕಡಿದಳು. ಕೆಳಗೆ ಇಳಿದ ಮೇಲೆ ಹೇಳಿದಳು: 'ನಂಗೆ ಮದುವೆಯಾಗುಕ್ಕೆ ಇಷ್ಟವಿಲ್ಲ. ಸ್ವಂತ ದುಡೀಬೇಕು ಅನ್ನೊ ಆಶೆಯಿದೆ. ಇದು ನನ್ನ ಪಾಲು, ಅದು ನಿನ್ನ ಪಾಲು ಅನ್ನೊ ವ್ಯತ್ಯಾಸ ನಂಗಿಲ್ಲ. ಈ ತೋಟದಲ್ಲೇ ಇರ್ತೀನಿ. ಈ ಗುಡಿಸಲಿರೂ ಜಾಗದಲ್ಲಿ ಒಂದು ಸಣ್ಣ ಹೆಂಚಿನ ಮನೆ ಕಟ್ಟಿಸಿಕೊಡು. ನೇಗಿಲು, ಗುದ್ದಲಿ, ಕುಡುಗೋಲುಗಳನ್ನ ಇಡುಕ್ಕೆ ಅನುಕೂಲವಾಗಿದ್ದರೆ ಸಾಕು. ಒಂದು ಸಣ್ಣ ಅಡಿಗೆಮನೆ. ಇನ್ನೇನೂ ಬ್ಯಾಡ. ಯಜಮಾನಿಕೆ ಎಲ್ಲ ನೀನು ನೋಡ್ಕ.'

ಅಲ್ಲಿಗೆ ಅವಳ ತೀರ್ಮಾನ ಗೊತ್ತಾಯಿತು. ವೆಂಕಟೇಶನಿಗೆ ಒಂದು ರೀತಿಯ ಸಮಾಧಾನವಾಯಿತು. ಆದರೆ ಮನಸ್ಸು ಪೂರ್ತಿ ಸ್ವಸ್ಥವಾಗಲಿಲ್ಲ. ಮನೆಗೆ ಹಿಂತಿರುಗುವಾಗ ಅದೇ ಬಗೆಗೆ ಯೋಚಿಸುತ್ತಿದ್ದ. ಮೂರು ನಾಲ್ಕು ದಿನ ಅದೇ ಯೋಚನೆಯಲ್ಲಿದ್ದ. ಅನಂತರ ಒಂದು ಉಪಾಯ ಹೊಳೆಯಿತು.

ಮರುದಿನ ಹೆಂಡತಿಯನ್ನು ಕರೆದುಕೊಂಡು ವಿಠಲಾಪುರಕ್ಕೆ ಹೋಗುವುದೆಂದು ನಿಶ್ಚಯಿಸಿದ. ಜಯಮ್ಮ ತೌರನ್ನು ನೋಡಿ ಒಂದೂವರೆ ವರ್ಷವಾಗಿತ್ತು. ಬಸುರಿ ಹೆಂಗಸಿನ ಹೊಟ್ಟೆಗೆ ಒದೆದಾನೆಂದು ಮಗು ವಾಸುವನ್ನು ಅವನು ತನ್ನ ಹತ್ತಿರವೇ ಮಲಗಿಸಿಕೊಳ್ಳುತ್ತಿದ್ದ. ನರಸಿಂಹಜೋಯಿಸರು ಹೊರಗೆ ಪಡಸಾಲೆ

ಯಲ್ಲಿ ಮಲಗುತ್ತಿದ್ದರು. ಗಂಡ ಹೆಂಡತಿ ಒಳಗಿನ ಚಿಕ್ಕ ಮನೆಯಲ್ಲಿ ಹಾಸಿಕೊಳ್ಳುತ್ತಿದ್ದರು. ವೀಳ್ಯದೆಲೆ ಅಗಿಯುತ್ತಾ ಮಲಗಿ ವೆಂಕಟೇಶ ಹೆಂಡತಿಗೆ ಹೇಳಿದ: 'ಹೆಣ್ಣು ಮಕ್ಕಳಿಗೆ ಆಸ್ತೀಲಿ ಪಾಲು ಕೊಡಬೇಕು ಅಂತ ಸರ್ಕಾರದೋರು ಮಾಡಿರೂದು ಬರೀ ನಮ್ಮ ಮನೆಗೇ ಅಲ್ಲ. ದೇಶ ದೇಶಕ್ಕೇ ಆಗಿದೆ.' ದೀಪ ಆರಿಸಿ ಜಯಮ್ಮನೂ ಮಲಗಿದಳು. 'ಹೂಂ' – ಎನ್ನುವುದನ್ನು ಬಿಟ್ಟರೆ ಅವಳಿಗೆ ಮತ್ತೆ ಏನು ಹೇಳುವುದಕ್ಕೂ ತಿಳಿಯಲಿಲ್ಲ. ವೆಂಕಟೇಶ ಮುಂದುವರಿಸಿದ: 'ಒಂದು ಥರಕ್ಕೆ ಇದರಲ್ಲಿ ನಫೆಯೂ ಇಲ್ಲ, ನುಕ್ಸಾನೂ ಇಲ್ಲ. ಅಲ್ಲಿ ಬರುತ್ತೆ, ಇಲ್ಲಿ ಹೋಗುತ್ತೆ. ಕೇಳ್ತಾ?'

'ಅವಳು 'ಹೂಂ' ಎಂದಳು. ಅವನು, 'ನಿಮ್ಮ ಅಣ್ಣಂದಿರು ಇನ್ನೂ ಪಾಲಾಗಿಲ್ಲ. ಅದರಲ್ಲಿ ನಂಗೆ ಬರಬೇಕಾದ ಒಂದು ಭಾಗ ಕೊಡಿ ಅಂತ ಕೇಳು.'

ಈಗ ಅವಳಿಗೆ ಅವನ ಮಾತಿನ ಅರ್ಥವಾಯಿತು. 'ಏನು ನೀವನ್ನೂದು? ಹೆಣ್ಣು ಮಕ್ಕಳು ಹೀಗನ್ನಕ್ಕೆ ನಿಂತ್ಕಂಡ್ರೆ ತೌರುಮನೆಯೋರು ಚಿಕ್ಕನಾಯ್ಕನ ಹಳ್ಳಿ ಚಿಪ್ಪು ಹಿಡಕೊಬೇಕು. ಅವರೇನು ಸಾಕಿ ಸಲಹಿ ಮದುವೆ ಗಿದುವೆ ಮಾಡಿಲ್ವೆ?'

'ಅದನ್ನೂ ಲೆಕ್ಕ ಹಾಕಾಣ. ನೀನು ಕೇಳೂದು ಕೇಳು' – ಎಂದು ಅವನು ನಿದ್ದೆ ಬಂದವನಂತೆ ಮಲಗಿಕೊಂಡ. ನಿದ್ದೆಹೊತ್ತದಿದ್ದುದು ಜಯಮ್ಮನಿಗೆ.

ಬೆಳಗಿನ ಮೋಟರಿನಲ್ಲಿ ಇವರು ವಿಠಲಾಪುರಕ್ಕೆ ಹೋಗುವ ಮುನ್ನ ಸತ್ಯ ಬಂದು ನೋಡಿಕೊಂಡು ಹೋದಳು. ತಿರುಮಲಾಪುರಕ್ಕೂ ವಿಠಲಾಪುರಕ್ಕೂ ಇಪ್ಪತ್ತು ಮೈಲಿ. ಹತ್ತು ಗಂಟೆಗೆ ಹೊರಟು ಇವರು ಹನ್ನೆರಡು ಗಂಟೆಯ ಹೊತ್ತಿಗೆ ತಲುಪಿದರು. ಅಪರೂಪಕ್ಕೆ ಬರುತ್ತಿರುವ ಅಳಿಯನೆಂದು ಇವನಿಗೆ ಅಕ್ಕರೆಯ ಸ್ವಾಗತವಾಯಿತು. ಆದರೆ ಅವನ ತಂದೆ ಸತ್ತು ಇನ್ನೂ ತಿಂಗಳು ತುಂಬಿಲ್ಲವಾದುದರಿಂದ ಯಾವ ವೈಭವವನ್ನೂ ಮಾಡಲಿಲ್ಲ. ವೆಂಕಟೇಶ ಅಲ್ಲಿ ಆ ದಿನವಲ್ಲದೆ ಮರುದಿನವೂ ಇದ್ದ. ಮರುದಿನ ರಾತ್ರಿ ಹೆಂಡತಿಯೊಡನೆ ಬೇರೆ ಕೋಣೆಯಲ್ಲಿ ಮಲಗಿದ್ದಾಗ ಹೇಳಿದ: 'ನಿಂಗೂ ಪಾಲು ಕೊಡಬೇಕು ಅಂತ ಆವತ್ತು ಊರಲ್ಲಿ ಹೇಳಿದೆನಲ್ಲ. ನಾನು ಖಂಡಿತ ಹೇಳ್ತಿದೀನಿ ನೋಡು. ಅವರು ಕೊಡಲಿಲ್ಲ ಅಂದ್ರೆ ನೀನು ತೌರುಮನೇಲೇ ಇರಬೇಕು.'

ಮೊನ್ನೆ ರಾತ್ರಿ ಅವನು ಅಂದದ್ದನ್ನು ಅವಳು ಹೆಚ್ಚುಕಮ್ಮಿ ಮರೆತಿದ್ದಳು. ಈಗ ಹೇಳುವುದನ್ನು ಕೇಳಿ ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿದಳು. ಆದರೆ ಗಟ್ಟಿಯಾಗಿ ಅತ್ತು, ಹೊರಗಿನ ತೊಟ್ಟಿಯಲ್ಲಿ ಮಲಗಿರುವ ಅಪ್ಪ ಅಣ್ಣಂದಿರಿಗೆ ಕೇಳುವಂತೆ ಮಾಡಲು ಇಷ್ಟವಿಲ್ಲ. ಅಂದೂ ಬೆಳಗಿನ ಜಾವದ ತನಕ ನಿದ್ರೆ ಇಲ್ಲದೆ

ಕಳೆದಳು. ಬೆಳಗ್ಗೆ ಎದ್ದ ವೆಂಕಟೇಶ ತನ್ನ ಬಟ್ಟೆಬರೆಗಳನ್ನು ಚೀಲಕ್ಕೆ ಹಾಕಿಕೊಂಡ. ಅವರ ಕಾಫಿ ತಿಂಡಿಗೂ ಕಾಯಲಿಲ್ಲ. ಮಗು ವಾಸುವನ್ನು ಎತ್ತಿಕೊಂಡು ಯಾರಿಗೂ ಹೇಳದೆ ಬಸ್ ರಸ್ತೆಗೆ ಬಂದ. ಮೊದಲನೆಯ ಬಸ್ಸು ಏಳು ಗಂಟೆಗೆ ಬರುತ್ತಿತ್ತು. ಎದ್ದು ಕೆರೆ ಕಡೆಗೆ ಹೋಗಿದ್ದ ಅವನ ಎರಡನೆಯ ಭಾವ್ಮೈದ ರಸ್ತೆಯ ಹತ್ತಿರ ಸಿಕ್ಕಿ, 'ಇದೇನು ಭಾವ, ಈಗಲೇ ಹೊರಟಿರಿ? ಮಗೂನ ಯಾಕೆ ಕರ-ಕಂಡು ಬಂದ್ರಿ?' ಎಂದದ್ದಕ್ಕೆ – 'ಇವನು ನಂಗೇ ಹೊಂದಿಕೊಂಡಿದಾನೆ. ಅಲ್ಲಿ ನನ್ನ ತಂಗಿ ನೋಡ್ಕತ್ತಾಳೆ. ನಾನು ಜಯ್ಯನ ಕೈಲಿ ಎಲ್ಲಾ ಹೇಳಿದೀನಿ. ಅದರ ಹಾಗೆ ಮಾಡಿ' ಎಂದ. ಏನು ಎಂಬುದನ್ನು ಹೇಳಲಿಲ್ಲ. ಐದು ನಿಮಿಷದಲ್ಲಿ ಬಸ್ಸು ಬಂತು. 'ಜಯ್ಯನ ಕೈಲಿ ಹೇಳಿದೀನಿ' – ಎಂದು ಮತ್ತೊಮ್ಮೆ ಹೇಳಿ ಮಗುವಿನೊಡನೆ ಹತ್ತಿ ಕುಳಿತುಕೊಂಡ.

ಊರಿನಲ್ಲಿ ಬಸ್‌ಸ್ಟ್ಯಾಂಡಿನಲ್ಲಿ ಇಳಿದು ತನ್ನ ಹೋಟಿಲಿನಲ್ಲಿಯೇ ಮಗುವಿಗೆ ಇಡ್ಲಿ ತಿನ್ನಿಸಿ ತಾನೂ ಪೂರಿ ದೋಸೆ ತಿಂದು ಮನೆಗೆ ಹೋದ. ನರಸಿಂಹಜೋಯಿಸರು ಬೀಗ ಹಾಕಿಕೊಂಡು ದೇವಸ್ಥಾನಕ್ಕೆ ಹೋಗಿದ್ದರು. ಇವನು ಮಗು ಎತ್ತಿಕೊಂಡು ತೋಟಕ್ಕೆ ಬಂದ. ಸತ್ಯ ಒಬ್ಬ ಆಳಿನ ಜೊತೆ ಬೇಲಿ ಕಟ್ಟುತ್ತಿದ್ದಳು. ಅವಳು ಬೇಲಿಯ ಹೊರಭಾಗದಲ್ಲಿ ನಿಂತು ಮುಳ್ಳನ್ನು ಆನಿಸಿಕೊಟ್ಟು ಒಂದು ಕವೆಯಿಂದ ನೂಕಿ ತೂರಿಸುತ್ತಿದ್ದಳು. ಈ ಕಡೆಯಿಂದ ತೂರಿಸಿಕೊಟ್ಟ, ನೀರಿನಲ್ಲಿ ನೆನೆದ ಈಚಲಕಟ್ಟನ್ನು ಆಳು ಒಳಗಿನಿಂದ ಬಿಗಿದು ಕಟ್ಟುತ್ತಿದ್ದ. ಮಗುವನ್ನು ನೋಡಿ ಅವಳು ಕೇಳಿದಳು: 'ಇವನು ಅಲ್ಲೇ ಇರ್ತಾನೆ ಅಂದಿದ್ಲು ಜಯಮ್ಮ.'

'ನನ್ನ ಬಿಟ್ಟಿರುಲ್ಲ ಅಂದ. ಕರ್ಕಂಡ್ ಬಂದೆ, ನಿಂಗೂ ಬೇಜಾರಾದ್ರೆ ಆಟ ಆಡುಕ್ಕೆ ಇರ್ಲಿ ಅಂತ.'

ಸತ್ಯ ತಲೆ ತಿರುಗಿಸಿ ಮಗುವನ್ನು ನೋಡಿದಳು. ಅದರ ತಾಯಿಯಂತೆ ದುಂಡಗೆ ತುಂಬಿಕೊಂಡ ಮುದ್ದು ಮುಖ. ಇಷ್ಟು ದಿನ ತಾನು ಅದನ್ನು ಸರಿಯಾಗಿ ಎತ್ತಿಕೊಂಡೇ ಇಲ್ಲವಲ್ಲ ಎಂಬ ಜ್ಞಾಪಕ ಬಂತು.

ಮನೆಯಲ್ಲಿ ನರಸಿಂಹ ಜೋಯಿಸರು ಅಡಿಗೆ ಮಾಡಿದರೂ ವೆಂಕಟೇಶ ಮತ್ತು ಮಗು ಹೆಚ್ಚು ಕಡಿಮೆ ತೋಟದಲ್ಲೇ ಇರುತ್ತಿದ್ದರು. ವಾಸು ಸತ್ಯಳಿಗೆ ತುಂಬ ಹೊಂದಿಕೊಂಡಿದೆ. ಗುಡಿಸಲಿನ ಹತ್ತಿರವೇ ಇರುವ ಕೊಳಕ್ಕೆ ಎಲ್ಲಿ ಬಿದ್ದೀತೋ ಎಂಬ ಆತಂಕವನ್ನು ಬಿಟ್ಟರೆ ಅದರಿಂದ ಅವಳಿಗೆ ಯಾವ ಕಷ್ಟವೂ ಇಲ್ಲ. ತಾಯಿಯಂತೆ ಶಾಂತಸ್ವಭಾವದ ಅದು ಸುಮ್ಮಸುಮ್ಮನೆ ರಗಳೆ ಮಾಡುವುದಿಲ್ಲ. 'ನಿನ್ನ ಅಳಿಯ ನಿಂಗೆ ಹ್ಯಾಗೆ ಅಂಟಿಕಂಡಿದಾನೆ ನೋಡು' – ವೆಂಕಟೇಶ ಅನ್ನುತ್ತಾನೆ. ಅವಳಿಗೆ ಎಂತಹ ಮನೆ ಬೇಕು, ಅದರ ವಾಯು ಹೇಗಿರಬೇಕು, ಎಂಬು

ದನ್ನು ಅವಳನ್ನು ಕೇಳಿ ಚರ್ಚಿಸುತ್ತಾನೆ. 'ಕಟ್ಟಿಸೊದು ಕಟ್ಟಿಸ್ತೀವಿ, ನಾಡ ಹೆಂಚು ಬ್ಯಾಡ, ಮಂಗಳೂರು ಹೆಂಚೇ ಹಾಕಿಸೋಣ' –ಎಂದು ಸಲಹೆ ಕೊಡುತ್ತಾನೆ. 'ಈ ಸಲಿ ನನ್ನಗನ ಮಳೆ ಕೈಕೊಟ್ಟದೆ ಅಂತ ಕಾಣುತ್ತೆ. ಹ್ಯಾಗಾ ದರೂ ಸರಿ. ಮಳೆಗಾಲ ಕಳೆದ ಮ್ಯಾಲೆ ಮನೆ ಕೆಲಸ ಹಿಡಿಯಾಣ' –ಎಂದು ನಿಶ್ಚಯಿಸಿದ್ದಾನೆ.

ಮೂರನೆಯ ಬೆಳಗ್ಗೆ ಮಗುವನ್ನು ತಂದು ತಂಗಿಯ ಹತ್ತಿರ ಬಿಟ್ಟು, 'ನೋಡು, ಒಂದು ಸಲವಾದರೂ ಅಮ್ಮನನ್ನು ಜ್ಞಾಪಿಸಿಕೊಂಡು ಅಳಲಿಲ್ಲ. ಬೆಳಗ್ಗೆ ಎದ್ದು ಅತ್ತೆ ಅಂತ ಶುರು ಮಾಡಿದ್ದ' ಎಂದು ಹೇಳಿ ಅವನು ಹೋಟೆಲ್ ಕಡೆಗೆ ಹೋದ. ವೆಂಕಟೇಶ ಈಗ ಮನೆಯಿಂದ ಅಕ್ಕಿಹಿಟ್ಟು ರವೆ ಮೊದಲಾಗಿ ತಿಂಡಿಯ ಸಾಮಾನು ಗಳನ್ನು ಬಾಂಡಲೆಯಾದಿಯಾಗಿ ಕೆಲವು ಹೆಚ್ಚು ಪಾತ್ರೆಗಳನ್ನು ತಂದು ಕೊಟ್ಟಿದ್ದ. ಮಗುವಿಗೆ ಏನಾದರೂ ತಿಂಡಿ ಮಾಡಲು ಸತ್ಯ ಒಲೆ ಹೊತ್ತಿಸಿದಳು. ಮಗು ಬಾಗಿಲಿನಲ್ಲಿ ಕೂತು ಆಡುತ್ತಿತ್ತು. ಒಂಬತ್ತೂ ಮುಕ್ಕಾಲು ಗಂಟೆಯ ಹೊತ್ತಿಗೆ ಯಾರೋ ನಾಲ್ಕೈದು ಜನ ಗುಡಿಸಲಿಗೆ ಬಂದಂತಾಯಿತು. ಮಗು, 'ಅಮ್ಮ' ಎಂದಿತು. ಅವಳು ಹೊರಗೆ ಬಂದು ನೋಡುತ್ತಾಳೆ: ಜಯಮ್ಮ, ಅವಳ ಇಬ್ಬರು ಅಣ್ಣಂದಿರು, ತಂದೆ ತಾಯಿ ಬಂದಿದ್ದಾರೆ. ಎಲ್ಲರ ಮುಖದಲ್ಲೂ ಚಿಂತೆ ಎದ್ದು ಕಾಣುತ್ತಿದೆ. ಬಸುರಿ ಜಯಮ್ಮನ ಕಣ್ಣು ಊದಿ ಕೆಂಪಗಾಗಿವೆ. ಇವರೆಲ್ಲ ಹೀಗೆ ಬಂದದ್ದನ್ನು ಕಂಡು ಸತ್ಯಳಿಗೆ ಆಶ್ಚರ್ಯ. 'ನೀನೇ ಸಂಸಾರ ಉಳಿಸಬೇಕಮ್ಮ'– ಎಂದು ಜಯಮ್ಮನ ತಾಯಿ, ಸತ್ಯಳ ಕೈ ಹಿಡಿದುಕೊಂಡು ಅಳಲು ಶುರುಮಾಡಿ ದರು. ಅಮ್ಮನನ್ನು ಕಂಡ ವಾಸು ಹತ್ತಿರ ಹೋಗಿ ತಬ್ಬಿಕೊಂಡಿತು. ಅದನ್ನು ಹಿಡಿದುಕೊಂಡು ಅವಳು ಅಳತೊಡಗಿದಳು. ಸತ್ಯಳಿಗೆ ಏನೂ ಅರ್ಥವಾಗಲಿಲ್ಲ.

ನಡೆದಿರುವ ಸಂಗತಿಯನ್ನು ಜಯಮ್ಮನೇ ಹೇಳಿದಳು. ಈ ಬೀಗರ ಮನೆಯ ವಿಷಯ ಸತ್ಯಳಿಗೂ ಗೊತ್ತಿದೆ. ವಂಶಪಾರಂಪರ್ಯವಾದ ಶ್ಯಾನುಭೋಗಿಕೆಯನ್ನು ಸರ್ಕಾರದವರು ಸದ್ಯದಲ್ಲಿ ತೆಗೆದುಹಾಕುತ್ತಾರೆ. ಅಲ್ಲದೆ ಇನ್ನೂರು ತೆಂಗಿನಮರ, ನಾಲ್ಕೆಕರೆ ಹೊಲ, ಒಂದೆಕರೆ ಗದ್ದೆ ಇದೆ. ಜಯಮ್ಮ ಕೊನೆಯವಳು. ಅದೃಷ್ಟಕ್ಕೆ ಒಬ್ಬಳೇ ಮಗಳು. ಹಿರಿಯ ಅಣ್ಣ ಅಶ್ವತ್ಥ ಬಿ.ಎ. ಮಾಡಿದ್ದರೂ ಕೆಲಸ ಸಿಕ್ಕಿಲ್ಲ. ಎರಡನೆಯವ ನಾಗೇಶ ಎಸ್.ಎಸ್.ಎಲ್.ಸಿ.ಯನ್ನೇ ಪಾಸು ಮಾಡಲಿಲ್ಲ. ಊರಲ್ಲಿ ಆರಂಭ ಮಾಡುತ್ತಿದ್ದಾನೆ. ಅಶ್ವತ್ಥ ಈಗ ಒಂದು ವರ್ಷದಿಂದ ಊರಿ ನಲ್ಲಿ ಚಿಲ್ಲರೆ ಅಂಗಡಿ ಇಟ್ಟುಕೊಂಡು ಸ್ವಲ್ಪ ವೃದ್ಧಿ ಮಾಡುತ್ತಿದ್ದಾನೆ. ತನ್ನ ಸಂಪಾದನೆ ಗಟ್ಟಿಯಾಗುವ ತನಕ ಮದುವೆ ಬೇಡವೆಂದು, ಮೂವತ್ತು ವರ್ಷ ವಾದರೂ ಹಾಗೆಯೇ ಇದ್ದಾನೆ. ಅವರ ಸ್ಥಿತಿಯಲ್ಲಿ ಮೂರನೇ ಒಂದು ಪಾಲನ್ನು

ಮಗಳಿಗೆ ಕೊಟ್ಟರೆ ಅವರ ಗತಿ ಏನು?

'ಹೋಟೆಲಿನಲ್ಲೇ ಇದ್ದ. ನೀವು ಆ ಕಡೆ ನೋಡಲಿಲ್ಲ ಅಂತ ಕಾಣುತ್ತೆ. ಹೋಗಿ ಕರ್ಕಂಡು ಬನ್ನಿ' – ಎಂದು ಅಶ್ವತ್ಥನಿಗೆ ಹೇಳಿ ಕಳಿಸಿ, ಸತ್ಯ ಅವರೆಲ್ಲರಿಗೂ ಉಪ್ಪಿಟ್ಟು ಮಾಡಲು ಹೊರಟಳು. ಆದರೆ ಅಷ್ಟು ದೊಡ್ಡ ಪಾತ್ರೆಯೇ ಇರಲಿಲ್ಲ. ಇರುವುದರಲ್ಲೇ ಎರಡು ಸಲ ಮಾಡುವುದೆಂದು ಹವಣಿಸುತ್ತಿರುವಾಗ, 'ಅಮ್ಮ, ನೀನು ಮಾಡಬ್ಯಾಡ. ನಾವು ಬಾಯಿಗೆ ಒಂದು ಹನಿ ನೀರೂ ಬಿಡುಲ್ಲ' ಎಂದು ಶ್ಯಾನುಭೋಗ ರಾಮಯ್ಯನವರು ಸತ್ಯಾಗ್ರಹ ಮಾಡುವವರಂತೆ ಹೇಳಿಬಿಟ್ಟರು. ಆದರೆ ಬಸುರಿ ಅತ್ತಿಗೆ ಉಪವಾಸವಿರಬಾರದೆಂಬ ಕನಿಕರ ಸತ್ಯಳಿಗೆ.

ವೆಂಕಟೇಶ ಅಶ್ವತ್ಥನೊಡನೆ ಬಂದ. 'ಇದೇನು ವೆಂಕಟೇಶ ಇದು?' – ಸತ್ಯ ಕೇಳಿದಳು.

'ಏನು?' – ಎಂದು ಅವನು ಗತ್ತು ಮಾಡಿದ.

'ಪಾಪ, ಅವರ ಸ್ಥಿತೀಲಿ ಏನು ಕೊಟ್ಟಾರು? ಶಕ್ತಿ ಇದ್ದಷ್ಟು ಚನ್ನಾಗಿ ಮದುವೆ ಮಾಡಿಕೊಟ್ರು. ಮುಂದೆ ಕರೆದು ಕಳಿಸಿ ಮಾಡೇ ಮಾಡ್ತಾರೆ. ಹುಡುಗಿ ಚನ್ನಾಗಿದಾಳೆ, ಏನೂ ಕೊಡದೆ ಇದ್ರೂ ಬ್ಯಾಡ ಅಂತ ನೀನೇ ಒಪ್ಕಂಡಲ್ಲವೆ ಮದುವೆಯಾದದ್ದು?'

ವೆಂಕಟೇಶ ಸುಮ್ಮನೆ ಕೂತಿದ್ದ.

'ನಂಗೇನೂ ಬೇರೆ ದಿಕ್ಕಿಲ್ಲ. ಜವಳೀ ಅಂಗ್‌ಡೀಲಿ ಕೂಲಿ ಮಾಡ್ತಿದ್ದೆ. ಅದನ್ನ ನೋಡಿ ಅಪ್ಪ ಹೀಗೆ ಬರೆದಿದಾನೆ. ಆದರೆ ನಿಂಗೇನು ಕಮ್ಮಿಯಾಗಿವೆ? ನೀನೇನು ಕಮ್ಮಿ ಸಂಪಾದನೆ ಮಾಡ್ತಿದೀಯ?'

'ಕಾನೂನು ಅಂದ್‌ರೆ ಕಾನೂನು. ಒಬ್ರಿಗೊಂದು ಇನ್ನೊಬ್ರಿಗೊಂದು ಇರಕೂಡದು. ಆದರೆ ಎಲ್ಲಾರಿಗೂ ಆಗಬೇಕು. ಇಲ್ಲದಿದ್ದರೆ ಯಾರಿಗೂ ಇರಕೂಡದು. ಅರ್ಥ ಮಾಡ್ಕ' – ವೆಂಕಟೇಶ ಅಂದ.

'ಏನು ನೀನು ಹೇಳೂದು?'

'ತಲೆಹರಟೆ ಬ್ಯಾಡ. ನಿನ್ನ ಕೈಲಿ ಏನು ಹುಯುತ್ತೋ ಅಷ್ಟು ಮಾಡು. ನಂಗೆ ಬುದ್ಧಿ ಹೇಳುಕ್ ಬರ್‌ಬ್ಯಾಡ' – ಎಂದುಬಿಟ್ಟ.

ಇವರ ಎಮರಿಗೆಲ್ಲ ಹೀಗೆ ಅನ್ನಿಸಿಕೊಂಡಿದ್ದಕ್ಕೆ ಸತ್ಯಳಿಗೆ ಅವಮಾನವೆನಿಸಿತು. ಅವಳು ಎದ್ದು ಗುಡಿಸಲಿನ ಒಳಕ್ಕೆ ಹೋದಳು. ಕಣ್ಣಲ್ಲಿ ನೀರು ಬರುವಂತಾದರೂ ಅಭಿಮಾನದಿಂದ ತಡೆದುಕೊಂಡಳು. ವೆಂಕಟೇಶನ ಉದ್ದೇಶವೇನೆಂದು ಶಾಂತವಾಗಿ ಯೋಚಿಸಿದಳು. ಅವನ ಮಾತಿನ ಅರ್ಥವೇನು?

'ಕಾನೂನು ಅಂದರೆ ಕಾನೂನು. ಆದರೆ ಎಲ್ಲರಿಗೂ ಆಗಬೇಕು. ಇಲ್ಲದಿದ್ದರೆ ಯಾರಿಗೂ ಇರಕೂಡದು. ಅರ್ಥ ಮಾಡ್ಕ. ನಿನ್ನ ಕೈಲಿ ಏನು ಹರಿಯುತ್ತೋ ಅಷ್ಟು ಮಾಡು.' ಎಂದರೆ ಅಪ್ಪ ಬರೆದಿರುವ ವಿಲ್ ನನಗೆ ಬೇಡವೆಂದು ನಾನು ಬರೆದುಕೊಟ್ಟರೆ ಇದು ಸರಿಹೋಗುತ್ತದೆಯೇ? ಆ ಉದ್ದೇಶದಿಂದಲೇ ಹೀಗೆಲ್ಲ ಮಾಡಿದಾನೆಯೇ? ಅಥವಾ ಹೆಂಡತಿಯ ಕಡೆಯಿಂದ ಪಾಲು ಬರಲಿ ಅಂತ ಹೀಗೆ ಮಾಡಿ, ಅವರೇ ಏನಾದರೂ ನನ್ನ ಹತ್ತಿರ ಬಂದಿದ್ದಾರೆಯೆ? ಇವರು ನೇರವಾಗಿ ತೋಟಕ್ಕೆ ಯಾಕೆ ಬಂದರು? ಮನೆಗೆ ಬೀಗ ಹಾಕಿತ್ತೆ? ಅಲ್ಲಿಗೆ ಹೋಗಿ ಬಂದರೇ? ಒಳತೊಟ್ಟಿಗೆ ಬೀಗ ಹಾಕಿಕೊಂಡು ನರಸಿಂಹ ಜೋಯಿಸರು ಪೂಜೆಗೆ ಹೋಗಿದ್ದರೂ, ಆಳು ಕೊಟ್ಟಿಗೆಯಲ್ಲಿ ಕೆಲಸ ಮಾಡುತ್ತಿರಬಹುದು. ಅವನು ಇನ್ನೂ ಹಾಲು ತಂದು ಕೊಟ್ಟಿಲ್ಲ. ಇವರು ನೇರವಾಗಿ ಇಲ್ಲಿಗೆ ಯಾಕೆ ಬಂದರು? ಆಲೋಚನೆ ಪೂರ್ತಿಯಾಗಿ ವೆಂಕಟೇಶನದೇ ಇರಲಿ, ಅಥವಾ ಬೀಗರದೇ ಇರಲಿ. ಒಟ್ಟಿನಲ್ಲಿ ನಾನು ಅಪ್ಪನ ವಿಲ್ ಬೇಡ ಅಂದ್ರೆ ಸರಿಹೋಗುತ್ತೆ. ನನಗ್ಯಾಕೆ ಬೇಕು ಇದು? ಈ ಜಮೀನಿನ ಮಾಲೀಕತ್ವದಿಂದ ಏನು ಸಾಧಿಸಬೇಕು ನಾನು? ಬೆಂಗಳೂರಿಗೆ ಹೊರಟುಹೋಗಬೇಕು – ಎಂದುಕೊಂಡಳು. ಆದರೆ ಮಣ್ಣಿನಲ್ಲಿ ದುಡಿಯಬೇಕೆಂಬ ಆಶೆಯ, ಸಂಕಲ್ಪದ ನೆನಪಾಯಿತು. ನೆಲ ವೆಂಕಟೇಶನಿಗೆ ಸೇರಿದರೂ ನಾನು ಕೆಲಸ ಮಾಡಬಹುದಲ್ಲ. ಅವನು ಬೇಡ ಅನ್ನುವುದಿಲ್ಲ ಎಂಬ ಸಮಾಧಾನ ಬಂತು. ಆದರೆ ಅವನ ಸ್ವಭಾವದ ನೆನಪಾಯಿತು. ಅವನ ತಂತ್ರದ ಮುಳ್ಳುಗಳು ಎಷ್ಟೆಷ್ಟು ಆಳದಲ್ಲಿ ಯಾವ ಯಾವ ದಿಕ್ಕಿನಲ್ಲಿ ನೆಟ್ಟಿರುತ್ತವೆಯೋ ಯಾರಿಗೆ ಗೊತ್ತು? ನನ್ನದನ್ನು ಅವನಿಗೆ ಕೊಟ್ಟು, ನಾನೇಕೆ ಅವನ ನೆಲದ ಆಳಾಗಿ ದುಡಿಯಬೇಕು? ಈಗ ಹರಿಜನರೆನಿಸಿಕೊಂಡಿರುವ ಹೊಲೆಯ ಮತ್ತು ಮಾದಿಗರ ನೆನಪಾಯಿತು. ಸ್ವಂತ ಭೂಮಿ ಇಲ್ಲದೆ ಪಾಳೇಗಾರ ದೊಡ್ಡ ಪಟೇಲರ ಮತ್ತು ಉಳಿದ ಕೆಲವು ಜಮೀನುದಾರರ ನೆಲದಲ್ಲಿ ದುಡಿಯುವ ಇತರ ಶೂದ್ರ ಆಳುಗಳ ನೆನಪಾಯಿತು. ಸಾವಿರಾರು ವರ್ಷಗಳ ಇತಿಹಾಸ ನೆನಪಿಗೆ ಬಂತು. ನಾನು ಆ ಇತಿಹಾಸಕಾಲದ ಶೂದ್ರಳಾಗುವುದಿಲ್ಲ; ನನಗೆ ಬೇಕಾದುದು ಸ್ವಾವಲಂಬೀ ಶೂದ್ರತ್ವ – ಎಂದುಕೊಂಡಳು.

ಹೊರಗೆ ವೆಂಕಟೇಶನಿಗೂ ಬೀಗರಿಗೂ ಮಾತು ನಡೆಯುತ್ತಿತ್ತು. ಸತ್ಯಳಿಗೆ ಇದ್ದಕ್ಕಿದ್ದ ಹಾಗೆಯೇ ಒಂದು ಅಂಶ ಹೊಳೆಯಿತು: ಈ ದೇಶದಲ್ಲಿ ಸಹಸ್ರಾರು ವರ್ಷಗಳಿಂದ ಹೆಂಗಸರೆಲ್ಲ ಶೂದ್ರರಾಗಿದ್ದಾರಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರುಗಳ ಸ್ತ್ರೀಯರು ಸಹ ಶೂದ್ರರೇ. ಅವರಿಗೆ ವೇದಾಧಿಕಾರವಿಲ್ಲ. ಸಿಂಹಾಸನಾರೋಹಣದ ಅಧಿಕಾರವಿಲ್ಲ. ಆಸ್ತಿಯ ಅಧಿಕಾರವಿಲ್ಲ. ತಂದೆ, ಗಂಡ, ಮಗನ

ಆಡಳಿತಕ್ಕೆ ಒಳಪಟ್ಟು ಇರಬೇಕು. ವೇದಕಾಲದ ಸ್ತ್ರೀಯರ ಬ್ರಾಹ್ಮಣತ್ವ ಆಮೇಲೆ ಕುಸಿದುಹೋಯಿತು. ಆದರೆ ವೇದಕಾಲದಲ್ಲಿ ಶೂದ್ರತ್ವವು ಈ ರೂಪ ದಲ್ಲಿರಲೇ ಇಲ್ಲವಲ್ಲ. ಶೂದ್ರನಾಗಿ ಹುಟ್ಟಿದವನು ಬ್ರಾಹ್ಮಣನಾಗಬಹುದಾಗಿತ್ತಲ್ಲ. ಬಹುತೇಕ ಜನರನ್ನು, ಉಳಿದ ಅಲ್ಪಸಂಖ್ಯೆಯ ಅರ್ಧ ಭಾಗವಾದ ಸ್ತ್ರೀಯರನ್ನು ಸಹ, ಶೂದ್ರತ್ವವು ಆಕ್ರಮಿಸಿಕೊಂಡ ದುರ್ದೈವದ ಪರಿಕ್ರಮ ಯಾವಾಗ, ಹೇಗೆ ಆರಂಭವಾಯಿತು? ಇದೇ ದೇಶದ ಇತಿಹಾಸ; ಜೀವನ ದರ್ಶನ. ಇದನ್ನು ತಿಳಿಯ ಬೇಕು – ಎಂದುಕೊಂಡಳು.

ಮತ್ತೊಂದು ಅಂಶ ನೆನಪಾಗಿ ಮೈ ಪುಳಕಿತವಾಯಿತು. ತನ್ನ ಬಲಗೈ ಬೆರಳನ್ನು ಎಡ ಹೆಗಲ ರವಿಕೆಯ ಸಂದಿಗೆ ತೂರಿಸಿ ತನ್ನ ಯಜ್ಞೋಪವೀತವನ್ನು ಮುಟ್ಟಿ ನೋಡಿಕೊಂಡಳು. ಅಪ್ಪ ತನಗೆ ಆಸ್ತಿಯಲ್ಲಿ ಪಾಲು ಬರೆದಿರುವುದು ಮಾತ್ರವಲ್ಲ, ಯಜ್ಞೋಪವೀತವನ್ನೂ ಧಾರಣೆ ಮಾಡಿಸಿ ಮಂತ್ರಾಧಿಕಾರ ಕೊಟ್ಟಿ ದ್ದಾನೆ. ಅದನ್ನು ಅವನು ಹುಚ್ಚಿನಲ್ಲಿ ಮಾಡಿದನೆ? ಅವನಿಗೆ ಉಂಟಾಗಿದ್ದುದು ನಿಜವಾಗಿಯೂ ಹುಚ್ಚೆ? ಅವಳ ಗಮನ ಎದುರಿಗೇ ಇದ್ದ ಹವನಕುಂಡದ ಕಡೆಗೆ ಹೋಯಿತು. ಅಪ್ಪ ಸತ್ತಮೇಲೆ ನಾನು ಇಲ್ಲಿ ಏನೂ ಮಾಡಿಲ್ಲವಲ್ಲ. ಅಗ್ನಿಯು ಎಂದಿಗೂ ಆರದಂತೆ ನೋಡಿಕೊಂಡಿರಲಿ ಎಂದಲ್ಲವೇ ಅವನು ನನಗೆ ಬ್ರಹ್ಮೋ-ಪದೇಶ ಮಾಡಿದುದು?

ಹೊರಗೆ ವೆಂಕಟೇಶ ಹೇಳುತ್ತಿದ್ದ: 'ಕಾನೂನಿನಂತೆ ನಿಮ್ಮ ಮಗಳಿಗೆ ಕೊಡೂದ ಕೊಡಿ. ಇಲ್ಲದಿದ್ರೆ ನೀವೇ ಇಟ್ಟುಕೊಂಡು ಸಾಕಿ.'

'ಎಂಥ ಮಾತು ಆಡ್ತೀಯ? ಮದುವೆಯಾದ ಮಗಳನ್ನ ನಾವು ಮನೇಲಿ ಇಟ್ಕತ್ತೀವೆಯೆ? ನಾವು ಖರ್ಚು ಮಾಡಿ ಮದುವೆ ಮಾಡಿಲ್ಲವೆ? ಎಂಟು ಸಾವಿರ ಮಾಡಿದೀವಲ್ಲ?'

'ಅದರಲ್ಲಿ ನಂಗೆ ಬಂದದ್ದೇನು? ಹುಳಿತೋವೆ, ಮಜ್ಜಿಗೆಹುಳಿ ಬೇಯಿಸಿ ನಿಮ್ಮ ನೆಂಟರಿಷ್ಟರಿಗೆ, ನಿಮ್ಮೂರಿನೋರಿಗೆ ಸುರಿದಿರಿ. ನನಗೆ, ನಿಮ್ಮ ಮಗಳಿಗೆ ಅದರಲ್ಲಿ ನಾಲ್ಕು ಸಾವಿರ ಸಂದಿದ್ದರೆ ಹೆಚ್ಚು' – ಅವನು ಉತ್ತರ ಕೊಟ್ಟ.

'ಎಲ್ಲಾ ಮಾಡೂದು ಹಾಗೆಯೇ.'

'ಈಗ ಕಾನೂನು ಬದಲಾಗಿದೆ. ಆಸ್ತಿಯಲ್ಲಿ ಮೂರು ಪಾಲು ಮಾಡಿ. ನಾಲ್ಕು ಸಾವಿರ ಕಳೆದು ಉಳಿದದ್ದ ಕೊಡಿ. ನನಗೆ ಅದರಲ್ಲಿ ಒಂದು ದಮಡಿಯೂ ಬ್ಯಾಡ. ನಿಮ್ಮ ಮಗಳ ಹೆಸರಲ್ಲೇ ಈ ಊರಲ್ಲಿ ಒಂದು ಆಸ್ತಿ ಮಾಡಾಣ.'

ಚರ್ಚೆ ನಡೆಸೇ ನಡೆಯಿತು. ನಿಮ್ಮ ಮಗಳು ನಿಮ್ಮ ಮನೆಯಲ್ಲಿರಲಿ ಎಂಬ ಮಾತನ್ನು ಅವನು ಮೂರು ಸಲ ಆಡಿದ. ಬಸುರಿ ಒಂದೇಸಮನೆ ಅಳುತ್ತಿದ್ದಳು.

ಕೊನೆಗೆ ಅಶ್ವತ್ಥ ತನ್ನ ತಂದೆಯ ಕೈಲಿ ಅಂದ: 'ಅಣ್ಣ, ಚರ್ಚೆ ಮಾಡಬ್ಯಾಡಿ. ಒಟ್ಟು ನಮ್ಮ ಆಸ್ತಿಯ ಬೆಲೆ ಎಷ್ಟಾಗುತ್ತೆ ಲೆಕ್ಕ ಹಾಕಿ. ನಿಮ್ಮದೊಂದು ಅಜ್ಜಿ ಪಾಲು ಸೇರಿ ನಾಲ್ಕನೇ ಒಂದು ಭಾಗದ ಬೆಲೆ ಕಟ್ಟಿ ಮದುವೇಮ ನಾಲ್ಕು ಸಾವಿರ ಕಳೆದು ಉಳಿದ ದುಡ್ಡು ಅವಳ ಹೆಸರಿಗೆ ಕೊಟ್ಟು, ನನ್ನ ಪಾಲು ಬಂತು ಅಂತ ಬರೆಸಿಕೊಳ್ಳೋಣ.'

'ಈಗ ದುಡ್ಡೆಲ್ಲಿ ತರ್ತೀಯಾ?'

'ನನ್ನ ಅಂಗಡಿ ಬಂಡವಾಳ ಹಾಕ್ತೀನಿ. ನೀವು ತಿಪಟೂರಿನ ಕೊಬ್ಬರಿ-ಮಂಡೀಲಿ ಸಿಕ್ಕಿದಷ್ಟು ಸಾಲ ತನ್ನಿ. ಸಾಲದ್ದಕ್ಕೆ ಅಮ್ಮನ ಚಿನ್ನ ಮಾರಾಣ.'

ಅವರ ಆಸ್ತಿಯ ಬೆಲೆಕಟ್ಟಲು ಪ್ರಾರಂಭಿಸಿದರು. ಒಟ್ಟು ನಲವತ್ತು ಸಾವಿರ ವೆಂದು ಅವರ ಲೆಕ್ಕವಾಯಿತು.

'ಹಾಗಾದರೆ ನಲವತ್ತು ಸಾವಿರ ನಗದು ಕೊಡ್ತೀನಿ. ನಿಮ್ಮ ಜಮೀನೆಲ್ಲ ಬರೆಕೊಡ್ತೀರಾ? ನಿಮ್ಮ ಕಡೆ ತೆಂಗಿನ ತೋಟದ ಖರೀದಿ ನಂಗೆ ಗೊತ್ತಿಲ್ವೇ? ನೂರಾ ಮೂವತ್ತೊಂದನೇ ಸರ್ವೇ ನಂಬರಿನ ಗದ್ದೆಯ ಬೆಲೆ ಎಷ್ಟು?' – ಎಂದು ವೆಂಕಟೇಶ ಕೇಳಿದ.

ಮೂವತ್ತು ವರ್ಷ ಶ್ಯಾನುಭೋಗಿಕೆ ಮಾಡಿದ ರಾಮಯ್ಯನವರಿಗೆ ಊರಿನ ಎಲ್ಲ ಜಮೀನಿನ ಸರ್ವೆ ನಂಬರು, ಖಾತೆ ನಂಬರು, ಆಕಾರ ವಿಸ್ತೀರ್ಣಗಳೂ ಬಾಯಿಯಲ್ಲಿದ್ದುವು. ಆದರೆ ತಮಗಿದ್ದ ಎರಡು ಗದ್ದೆಗಳಲ್ಲಿ ಒಂದರ ಸರ್ವೆ ನಂಬ ರನ್ನೇ ಹೇಳಬೇಕಾದರೆ, ಈ ಅಳಿಯನ ತಿಳಿವಳಿಕೆ ಕಮ್ಮಿಯದಲ್ಲ. ತೂಬಿನ ಕೆಳ ಗಿನ ಗದ್ದೆಯಾದುದರಿಂದ ಅದು ಕಳ್ಳನಿಗೆ ಕೊಟ್ಟರೂ ಆರು ಸಾವಿರಕ್ಕೆ ಹೋಗು ತ್ತದೆ. ಮನೆ, ಅದರ ಹಿಂದಿನ ಪಾಳು, ಎಂದು ವೆಂಕಟೇಶ ಒಂದೊಂದಾಗಿ ಮತ್ತೆ ಲೆಕ್ಕಹಾಕಿದ. ಎಂಬತ್ತು ಸಾವಿರಕ್ಕೆ ಕಡಿಮೆ ಇಲ್ಲದ ಆಸ್ತಿ. ಅಜ್ಜಿಪಾಲನ್ನು ಈಗ ತೆಗೆಯಬಹುದು. ಅವರು ಗತಿಸಿದನಂತರ ಅದರಲ್ಲಿ ಮಗಳಿಗೆ ಮೂರನೆ ಒಂದು ಪಾಲು ಬರಲೇ ಬೇಕು. ಈಗ ಸದ್ಯಕ್ಕಂತೂ ಇಪ್ಪತ್ತು ಸಾವಿರ ಬರಬೇಕು. ಅದ ರಲ್ಲಿ ನಾಲ್ಕು ಸಾವಿರ ಕಳೆದರೆ ಹದಿನಾರು ಸಾವಿರ ನಗದು ಕೊಡಬೇಕು. ಅವರ ಎದೆ ಒಡೆಯಿತು. ಅತ್ತೆ ಅವನ ಕಾಲನ್ನೇ ಹಿಡಿಯಲು ಬಂದರು. ಹಿರಿಯ ಮಗ ಅಶ್ವತ್ಥ, 'ಆದದ್ದಾಯ್ತು ಅಮ್ಮ, ಗಂಡು ಮಕ್ಕಳು ನಾವಿದ್ದು ನೀನ್ಯಾಕೆ ಕಾಲು ಹಿಡೀಬೇಕು? ಕೊಟ್ಟುಬಿಡಾಣ. ನಾನು ಮದುವೆಯೇ ಆಗುಲ್ಲ' – ಎಂದ.

ಮಾವನವರು ಮತ್ತೆ ಲೆಕ್ಕಾಚಾರ ಮಾಡಿಸಿದರು: ಬೇಡಿಕೊಂಡರು. 'ನೀವು ಹಿರಿಯರು ಅಂದಮೇಲೆ ನಾನು ಕೇಳ್ತೀನಿ. ಅಜ್ಜಿಪಾಲಿನಲ್ಲಿ ಮುಂದೆ ಇವಳಿಗೆ ಯಾವ ಹಕ್ಕೂ ಬ್ಯಾಡ. ಹದಿನಾರು ಸಾವಿರ ಕೊಟ್ಟುಬಿಡಿ. ರಿಕಾರ್ಡು ಚುಕ್ತಾ

ಮಾಡಿಸಿಕೊಳ್ಳಿ' – ಎಂದು ಹೇಳಿ ವೆಂಕಟೇಶ ಮೇಲೆ ಎದ್ದ. ಇನ್ನು ಒಂದು ತಿಂಗಳಿನಲ್ಲಿ ಹಣ ಒದಗಿಸಿ ಕಾಗದ ಮಾಡಿಸುವುದಾಗಿ ಅವರು ಮೇಲೆ ಎದ್ದರು. ಒಳಗೆ ಕುಳಿತಿದ್ದ ಸತ್ಯಳಿಗೆ ಇದು ಅನ್ಯಾಯವೆನಿಸಿತು. ಆದರೆ ತಾನು ಮಾತ ನಾಡಲು ಹೋದರೆ ವೆಂಕಟೇಶನ ಕೈಲಿ ಬೈಸಿಕೊಳ್ಳುವುದು ಮಾತ್ರವಲ್ಲ, ತಾನೇ ಪೇಚಿಗೆ ಸಿಕ್ಕಬೇಕಾಗುತ್ತದೆ ಎಂದುಕೊಂಡು ಸುಮ್ಮನಾದಳು. ಹೊರಗೆ ಬಂದು 'ಒಂದು ಗಂಟೆ ಇಲ್ಲೇ ಇರಿ. ಅಡಿಗೆ ಮಾಡ್ತೀನಿ' ಎಂದಳು.

ಅಶ್ವತ್ಥ, 'ಇವಳು ನಿಮ್ಮ ಮನೆಗೆ ಸೇರಿದೋಳು. ಇವಳಿಗೆ ಬೇಕಾದರೆ ಏನಾದರೂ ಕೊಡಿ. ನಾವ್ಯಾರೂ ಈ ಮನೇಲಿ ಇನ್ನು ಒಂದು ಲೋಟಾ ನೀರೂ ಮುಟ್ಟೊದಿಲ್ಲ' ಎಂದ.

'ಹಾಗನ್ನಬಾರದು' – ತಾಯಿ ಸಮಾಧಾನ ಹೇಳಬಂದರು.

'ನೀನ್ ಸುಮ್ನಿರಮ್ಮ' – ಎಂದು ಮಗ ಗದ್ದರಿಸಿಕೊಂಡ.

೭

ಅವರೆಲ್ಲ ಅದೇ ದಿನ ವಿಠಲಾಪುರಕ್ಕೆ ಹಿಂತಿರುಗಿದರು. ವೆಂಕಟೇಶ ಮಗುವನ್ನು ತಾಯಿಯ ಜೊತೆ ಕಳಿಸಿದ. ತನ್ನ ಹೋಟೆಲು ಕಟ್ಟಡದ ಪಕ್ಕದಲ್ಲಿ ಮನೆ ಕಟ್ಟಿಸಬಹುದಾದ ಜಾಗವಿತ್ತು. ಅವರು ಬಸ್ಸಿಗೆ ಹೋದ ತಕ್ಷಣವೇ ಅವನು ಅದರ ಉದ್ದ ಅಗಲಗಳನ್ನು ಕರಾರುವಾಕ್ ಅಳೆದ. ಆ ಜಾಗದಲ್ಲಿ ಎರಡು ಅಂಗಡಿ ಮಳಿಗೆ ಕಟ್ಟಿಸಬೇಕು. ಹಿಂಭಾಗದಲ್ಲಿ ಗೋಡೌನ್ ಇರಬೇಕು. ಮೇಲ್-ಭಾಗದಲ್ಲಿ ಒಟ್ಟು ಎಂಟು ರೂಮು ಕಟ್ಟಿಸುವುದು. ಪರಸ್ಥಳದಿಂದ ಬರುವ ಹೈಸ್ಕೂಲು ಮೇಷ್ಟರುಗಳಿಗೆ, ಆಸ್ಪತ್ರೆಯವರಿಗೆ ಬಾಡಿಗೆಗೆ ಕೊಡಬಹುದು – ಎಂದು ಮುಂತಾಗಿ ಲೆಕ್ಕ ಹಾಕಿದ. ಹದಿನಾರು ಸಾವಿರದಲ್ಲಿ ಕಟ್ಟಡ ಆಗುವುದಿಲ್ಲ. ಮೇಲೆ ಇಪ್ಪತ್ತು ಸಾವಿರವಾಗಲಿ, ಒಟ್ಟಿನಲ್ಲಿ ಖಾಲಿ ಜಾಗ ಬಿಟ್ಟಿರಬಾರದು. ಬ್ಯಾಂಕಿನಲ್ಲಿ ಖಾಲಿ ಹಣವನ್ನೂ ಬಿಟ್ಟಿರಬಾರದು. ಇನ್‌ಕಮ್ ಟ್ಯಾಕ್ಸಿನವರು ಎಲ್ಲಿಂದ ಬಂತು ದುಡ್ಡು, ಎಂದು ಹಿಡ್ಕೊತ್ತಾರೆ. ಹೋಟೆಲಿನ ಬಾಡಿಗೆ ಅಂದರೆ ಜಡಿದು ಟ್ಯಾಕ್ಸ್ ಹಾಕುತ್ತಾರೆ – ಎಂದು ಯೋಚಿಸಿದ.

ಅದರ ಮರುಬೆಳಗ್ಗೆ ಸತ್ಯ ಬೆಟ್ಟಯ್ಯನವರ ಮನೆಗೆ ಹೋದಳು. ಅಪ್ಪನ ವಿಲ್ಲಿನ ವಿವರವನ್ನು ತಾನು ತಿಳಿಯಬೇಕೆಂದಳು. ಅವರು, 'ನಾನು ಜೋಡೀಲಿ ಬಂಪ್ರೆ ನಿಮ್ಮಣ್ಣಯ್ಯಾರಿಗೆ ತಿಳೀತಿದೆ. ನಿಷ್ಟುರವಾಯ್ತದೆ. ನಾಗರಹಾವಿ ನಂತೋರು ಅವರು. ನೀವೇ ಲಾಯರು ಕ್ರಿಷ್ಣಪ್ಪನೋರ ತಾವ ಹೋಗಿ

ಕೆಂಡ್ ಬಲ್ರಿ' ಎಂದರು.

ವಳೊಬ್ಬಳೇ ತಾವರೆಕೆರೆಗೆ ಹೋದಳು. ಹಿಂದೆ ಎರಡು ಸಲ ಕೃಷ್ಣಪ್ಪನವರು ಯಾವುದೋ ರೈತರ ಕೆಲಸಕ್ಕೆ ತಿರುಮಲಾಪುರಕ್ಕೆ ಬಂದಾಗ ತಮ್ಮ ಮನೆಯಲ್ಲಿ ಇಳಿದುಕೊಂಡಿದ್ದರು. ಆಗ ನೋಡಿದ್ದ ನೆನಪಷ್ಟೆ. ಈಗ ಅವರು ವಿಶ್ವಾಸದಿಂದ ಮಾತನಾಡಿಸಿದರು. ಮನೆಯಲ್ಲಿ ಊಟ ಮಾಡುವಂತೆ ಬಲವಂತ ಮಾಡಿದರು. ಅವರ ಗುಮಾಸ್ತೆಯನ್ನು ಜೊತೆಯಲ್ಲಿ ಸಬ್‌ರಿಜಿಸ್ಟ್ರಾರರ ಆಫೀಸಿಗೆ ಕಳಿಸಿದರು. ವಿವರಗಳನ್ನೆಲ್ಲ ಅವಳು ಗುರ್ತು ಹಾಕಿಕೊಂಡಳು. ತೋಟದ ಪೂರ್ವದಿಕ್ಕಿನಲ್ಲಿ ಅರ್ಧ, ಎಂದರೆ ಈಗ ಕೊಳ, ಗುಡಿಸಲು ಇರುವ ಭಾಗದ ನೂರೈವತ್ತು ಮರ ತನಗೆ. ಹೊಲದಲ್ಲಿ ಮೂರು ಎಕರೆ, ಗದ್ದೆಯಲ್ಲಿ ಒಂದು ಎಕರೆ. ತನಗೆ ಮನೆ ಕಟ್ಟಲು ಹತ್ತು ಸಾವಿರ ಕೊಟ್ಟು ಉಳಿದದ್ದರಲ್ಲಿ ಇಬ್ಬರಿಗೂ ಅರ್ಧರ್ಧ, ಎಂದರೆ ಬ್ಯಾಂಕಿನಲ್ಲಿ ಎಷ್ಟಿದೆಯೋ ನೋಡಬೇಕು – ಎಂದಳು. ಗುಮಾಸ್ತೆ ಬ್ಯಾಂಕಿಗೆ ಕರೆದೊಯ್ದು, ಅಲ್ಲಿ ತನಗೆ ಗುರುತಿದ್ದ ಒಬ್ಬರನ್ನು ಕೇಳಿದ. ಇಪ್ಪತ್ತೈದೂವರೆ ಸಾವಿರ ರೂಪಾಯಿ ಇತ್ತು. ಸತ್ಯಳೇ ಮ್ಯಾನೇಜರರ ಹತ್ತಿರ ಹೋಗಿ, 'ನಮ್ಮ ತಂದೆಯ ವಿಲ್ ಹೀಗಿದೆ. ಅವರು ಈಗ ಸತ್ತಿದಾರೆ. ಹಣ ತಗಳೂಕೆ ಏನು ಮಾಡಬೇಕು?' ಎಂದು ಕೇಳಿದಳು.

'ಅವರ ಡೆತ್ ಸರ್ಟಿಫಿಕೇಟ್ ಮತ್ತು ಸಬ್‌ರಿಜಿಸ್ಟ್ರಾರರ ರುಜು ಆದ ವಿಲ್ಲಿನ ಕಾಪಿ ತಂದುಕೊಟ್ಟರೆ ಹೆಡ್ ಆಫೀಸಿಗೆ ಬರೆದು ಒಂದು ವಾರದಲ್ಲಿ ಆರ್ಡರ್ ತರುಸ್ತೀನಿ. ಹಣ ಕೈಗೆ ಬರುತ್ತೆ' ಎಂದರು.

ಲಾಯರಿಗೆ ನಮಸ್ಕಾರ ಹೇಳಿ ಅವಳು ಊರಿಗೆ ಬಂದಳು. ಬಸ್ ಇಳಿದವಳೇ, ತನ್ನ ಅಣ್ಣ ಸಿಕ್ಕಿದರೆ ಕಳಿಸುವಂತೆ ಹೋಟೆಲಿನಲ್ಲಿ ಹೇಳಿ ತೋಟಕ್ಕೆ ಬಂದಳು. ಸಂಜೆಯ ಹೊತ್ತಿಗೆ ವೆಂಕಟೇಶ ಬಂದ. ಸತ್ಯ ನೇರವಾಗಿ, ತಾವರೆಕೆರೆಗೆ ಹೋಗಿದ್ದೆ, ಅಪ್ಪನ ವಿಲ್ಲಿನ ತಪ್ಸೀಲು ಹೀಗೆ ಹೀಗಿದೆ, ಬ್ಯಾಂಕಿನ ಮ್ಯಾನೇಜರು ಹೀಗಂದ್ರು ಎಂದು ತಿಳಿಸಿ, 'ನೋಡಪ್ಪ, ಇಬ್ಬರೂ ಸೇರಿ ಲೆಕ್ಕ ಸರಿ ಮಾಡಾಣ. ನಂಗೆ ದುಡ್ಡು ಬೇಕು' ಎಂದಳು.

'ಎಷ್ಟು ಬೇಕು? ತಗ' – ಎಂದು ಅವನು ಜೇಬಿಗೆ ಕೈ ಹಾಕಿದ.

'ನೀನ್ಯಾಕೆ ಕೊಡಬೇಕು ಕೈಯಿಂದ? ಅಪ್ಪ ಬರೆದಿರುವಷ್ಟು ಸಾಕು.'

ಅವನಿಗೆ ಪೆಚ್ಚಾಯಿತು. ಇವಳ ಕೈಲಿ ವಾದ ಮಾಡಿ ಪ್ರಯೋಜನವಿಲ್ಲ ಎಂದುಕೊಂಡ. ಆದರೆ ತನ್ನ ಪೆಚ್ಚನ್ನು ಬಿಟ್ಟುಕೊಡದೆ ಹೇಳಿದ: 'ಬ್ಯಾಂಕಿನಿಂದ ದುಡ್ಡು ಬರೂತಂಕ ಏನು ಮಾಡ್ತೀಯ? ಅಲ್ಲೀತಂಕ ತಗ ಒಂದು ನೂರಿನ್ನೂರು. ನೋಡು, ಅಪ್ಪ ಬೇಕಾದ್ದು ಬರೆದಿರಬಹುದು. ಆದರೆ ಬರೀ ಅಪ್ಪನ್ನ

ನಿನಗೆ ಕೊಟ್ಟು ಕೈ ತೊಳಕೊಳ್ಳೊ ಅಣ್ಣ ಅಲ್ಲ ನಾನು. ನಿಂಗೆ ಸಾಲದಿ ಮೇಲೆ ಎಷ್ಟಾದರೂ ಕೊಡೂ ಜವಾಬ್ದಾರಿ ನಂದು. ಇಲ್ಲಿ ಒಂದು ಮನೆ ಕಟ್ಟಿಸ ಬೇಕು ಅಂದೆ ಅಲ್ಲವೆ?'

'ಹೂಂ.'

'ಕಟ್ಟಿಸಾಣ. ನೋಡು, ತ್ವಾಟಕ್ಕೆ ಮಧ್ಯ ಬೇಲಿ ಹಾಕಿಸೂದು ಬ್ಯಾಡ. ಅಣ್ಣ ತಂಗಿ ಬೇರೆ ಬೇರೆ ಆದ್ರು ಅಂತ ಜನ ಆಡ್ಕ್ಯಾಬಾರದು. ಆ ನಡುವಿನ ಪಟ್ಟೆಗೆ ಅರ್ಧ ಆಗುತ್ತೆ. ಆ ಕಡಿಗೆ ನೂರೈವತ್ತು ಈ ಕಡಿಗೆ ನೂರೈವತ್ತು ಮರ. ಈ ಕಡೇದ ನೀನು ಕೆಡವಿಸ್ಕಂಡು ಮಾರು. ಆ ಕಡೇದು ನಂಗಿರಲಿ.'

ಅವಳು ಸುಮ್ಮನಿದ್ದಳು. 'ಬ್ಯಾಂಕಿನಿಂದ ಬರೂತನಕ ಬೇಕಾದರೆ ಇಟ್ಕೊ' – ಎಂದು ಹತ್ತು ರೂಪಾಯಿಗಳ ಹದಿನೈದು ನೋಟುಗಳನ್ನು ಎಣಿಸಿ ಅವಳ ಮುಂದೆ ಹಾಕಿ, 'ನಿಂಗೆ ಮನೆಯಿಂದ ಯಾವತ್ತು ಏನು ಬೇಕಾದರೂ ಬಂದು ತಗಂಡು ಹೋಗು' ಎಂದು ಹೇಳಿ ಹೊರಟುಹೋದ.

ಅಣ್ಣನ ಔದಾರ್ಯದ ಅರ್ಥ ಅವಳಿಗೆ ಆಗಲಿಲ್ಲ. ಅವನಿಗೆ ತಂಗಿಯನ್ನು ಕಂಡರೆ ಪ್ರೀತಿ ಇಲ್ಲದೆ ಇಲ್ಲ. ಆದರೆ ವ್ಯವಹಾರದಲ್ಲಿ ತಾನು ಎಚ್ಚರವಾಗಿರಬೇಕೆಂದು ಯೋಚಿಸಿದಳು. ಅವನು ಹೇಳುವ ಹಾಗೆ ಬೇಲಿ ಹಾಕುವುದು ಬೇಡ. ಆದರೆ ಅಪ್ಪನ ವಿಲ್ಲಿನಂತೆ ಶ್ಯಾನುಭೋಗರ ಲೆಕ್ಕದಲ್ಲಿ ನಮೂದಿಸಿ, ಕಂದಾಯವನ್ನು ಮಾತ್ರ ತನ್ನ ಹೆಸರಿನಲ್ಲಿ ಕಟ್ಟಿ ರಶೀತಿ ಇಟ್ಟುಕೊಳ್ಳಬೇಕು. ಬೇಸಾಯ ಮತ್ತು ಕಾಯಿ ಕೆಡವಿಸುವ ಯಜಮಾನಿಕೆ ಅವನ ಕೈಲೇ ಇರಲಿ. ಸಂಸಾರ ಒಟ್ಟಿಗೇ ಇದೆ, ಅವನೇ ಯಜಮಾನ ಅನ್ನುವ ಗೌರವ ಅವನಿಗೂ ಇರಬೇಕು – ಎಂದು ತೀರ್ಮಾನಿಸಿದಳು.

೭

ಮರುದಿನ ಸಂಜೆ ಅವಳಿಗೆ ತೋಟದಿಂದ ಎಲ್ಲಾದರೂ ತಿರುಗಾಡಿಕೊಂಡು ಬರಬೇಕೆನಿಸಿತು. ದೇವಸ್ಥಾನದ ಹತ್ತಿರದಿಂದ ಕಾಲುವೆಯ ದಡದಲ್ಲಿ ನಡೆದು ತೂಬಿನ ಹತ್ತಿರ ಕೆರೆಯ ಏರಿಯನ್ನು ಹತ್ತಿದಳು. ಸ್ವಲ್ಪ ಮುಂದೆ ನಡೆದ ಮೇಲೆ ಅಪ್ಪ ನೀರಿಗೆ ಬಿದ್ದಿದ್ದ ಜಾಗ ಬಂತು. ಅವಳು ಸ್ವಲ್ಪ ಹೊತ್ತು ಅಲ್ಲಿಯೇ ನಿಂತಿದ್ದಳು. ಅನಂತರ ಆಚೆ ಕೋಡಿಯ ಕಡೆಗೆ ನಡೆದಳು. ಹಿಂದಿನಿಂದ ಬೆಟ್ಟಯ್ಯನವರ ಮಗಳು ಮೀರಾ ಬಂದಳು. ಇವಳ ಕೈಲಿ ಮಾತಾಡಬೇಕೆಂಬ ಆಸೆ, ಆದರೆ ಸಂಕೋಚವು ಅವಳ ಮುಖದಲ್ಲಿ ಕಾಣುತ್ತಿತ್ತು. ಸುಮ್ಮನೆ 'ನಮಸ್ತೆ' ಎಂದು

ಬಾಗಿಲು ಮುಚ್ಚಿಕೊಂಡು, ಅವಳು ಮಲಗಿದ್ದ ಮಂಚದ ಬದಿಗೆ ಕುಳಿತುಕೊಂಡ. ಅವಳು ಬೇರೆ ಕಡೆಗೆ ಹೊರಳಿದಳು.

'ಇದ್ಯಾಕೆ ಇಷ್ಟು ಸಿಟ್ಟು?' – ಎಂದು ಅವಳ ತೋಳಿನ ಮೇಲೆ ಕೈ ಇಟ್ಟ.

ಅವಳು ಸುಮ್ಮನೆ ತನ್ನ ತೋಳನ್ನು ಕೊಸರಿಕೊಂಡಳು. ಮಾತನಾಡಲಿಲ್ಲ. ಮತ್ತೆ ಮಾತನಾಡಲು ಅವನಿಗೂ ತಿಳಿಯಲಿಲ್ಲ. ಮೂಕನಂತೆ ಕೂತುಬಿಟ್ಟ. ಹತ್ತು ನಿಮಿಷದ ನಂತರ ಅವಳಿಗೆ ಅಳು ಬಂತು. ಸಣ್ಣಗೆ ಬಿಕ್ಕುತ್ತಾ ಹೇಳಿದಳು: 'ಆ ಮುದುಕರ ಮಾತು ನಿಜವಾಗುತ್ತೆ. ಈ ಹೆಂಗೇಲಿ ನಾನೂ ಉಳಿಯುಲ್ಲ, ಮಗುವೂ ಉಳಿಯುಲ್ಲ.'

ಇದನ್ನು ಕೇಳಿದ ಅವನ ಮನಸ್ಸಿನ ಜಡತೆ ಸ್ವಲ್ಪ ಹರಿಯಿತು. 'ಯಾಕೆ ಕೆಟ್ಟ ಮಾತು ಆಡ್ತೀಯ?' – ಎಂದು ಕೇಳಿದ.

'ಕೆಟ್ಟ ಮಾತಲ್ಲ. ನಿಮ್ಮ ಮನಸ್ಸಿನೊಳಗೆ ಏನಿದೆ ನಿಜ ಹೇಳಿ.'

'ಏನಿದೆ?'

'ನಾನು ಸತ್ತರೆ ಅವಳನ್ನ ಸುಖವಾಗಿ ಮದುವೆ ಮಾಡ್ಕಬಹುದು ಅಂತ ಇಲ್ಲವೆ?'

'ಇಲ್ಲ. ನಿನ್ನಾಣೆಗೂ ಇಲ್ಲ.'

'ಒಂದು ಸಲ ಅವಳಿಗೆ ಸುಳ್ಳು ಹೇಳಿದಿರಿ. ಈಗ ನಂಗೆ ಹೇಳಬೇಡಿ.'

'ಅವಳಿಗೇನು ಹೇಳಿದ್ದು?'

'ಅವಳು ಅಗ್ತೀನಿ ಅಂತ ಹಟಮಾಡಬೇಕಾದರೆ, ನಿನ್ನೇ ಮಾಡ್ಕತ್ತೀನಿ ಅಂತ ಅವಳ ಕೈಲಿ ಹೇಳಿಯೇ ಇರ್ತೀರ. ಯಾಕೆ ಮಾಡ್ಕಳ್ಲಿಲ್ಲ?'

'ಬೇರೆ ಜಾತಿಯೋಳು.'

'ಹಾಗಾದರೆ ಬೇರೆ ಜಾತಿಯೋಳನ್ನ ಯಾಕೆ ಪ್ರೀತಿಸಿದಿರಿ?'

ಅವನಿಗೆ ಉತ್ತರ ತಿಳಿಯಲಿಲ್ಲ. ಮೂಕನಂತೆ ಕೂತುಬಿಟ್ಟ. ತಾನು ಅವಳನ್ನು ಯಾಕೆ ಪ್ರೀತಿಸಿದೆ? ಅದು ಹ್ಯಾಗೆ ಬೆಳೆಯಿತು? ಅವಳಲ್ಲಿ ಏನಿತ್ತು ಅಂತಹ ವಿಶೇಷ? ಈಗ ಮೂರು ತಿಂಗಳಿನಲ್ಲಿ ಒಂದು ದಿನ ಇದೇ ಪ್ರಶ್ನೆಯನ್ನು ಕೇಳಿ ಕೊಂಡಿದ್ದ. ಆಗ ಹೊಳೆದಿದ್ದ ಉತ್ತರ ಈಗಲೂ ನೆನಪಿಗೆ ಬಂತು. ಅವಳು ಬ್ರಾಹ್ಮಣ ಹುಡುಗಿ ಎಂದು ತಾನು ಪ್ರೀತಿಸಿದೆನೇ? ಸುಳ್ಳಿರಬೇಕು. ಜೊತೆಯಲ್ಲಿ ಬೆಳೆದೆವು. ಪ್ರೀತಿ ಬೆಳೆಯಿತು. ಪ್ರೀತಿ ಬೆಳೆಯುವುದು, ಬೆಳೆಯದಿರುವುದು ಯಾರ ಕೈಲಿದೆ? – ಎಂದು ಯೋಚಿಸುತ್ತಿದ್ದ. ಅವನು ಮಾತನಾಡದಿರುವುದನ್ನು ಕಂಡು ಕುಮುದಿನಿ ಎಂದಳು: 'ಅವಳನ್ನು ಪ್ರೀತಿಸಿಯೇ ಇರಲಿಲ್ಲ ಅಂತ ಒಂದು ಸುಳ್ಳು ಹೇಳಿ ನೋಡಾಣ.'

ಅವಳ ಮಾತಿನ ಚೂಪು ಅವನಿಗೆ ಅರ್ಥವಾಯಿತು. ಹೇಗೆ ಹೇಳಿದರೂ ಅದರ ಅರ್ಥ ತನ್ನನ್ನು ಕೆಳಗೆ ಕೆಡಹುವುದೇ ಆಗಿದೆ. ನಾನು ಬಿ.ಎಲ್. ಪರೀಕ್ಷೆ ಮಾಡಲೇ ಇಲ್ಲ. ಇವಳು ಮಾಡಿ ಲಾಯರಾಗಬೇಕಾಗಿತ್ತು – ಎಂದುಕೊಂಡ.

'ಈಗ ಯಾಕೆ ಬಂದಿರಿ?' – ಕುಮುದಿನಿ ಕೇಳಿದಳು.

'ನಿನ್ನನ್ನು ನೋಡುಕ್ಕೆ.'

'ನಮ್ಮ ತಂದೆ ಬೆಂಗಳೂರಿಗೆ ಹೋದರು. ಅವರು ಏನೋ ಹೇಳಿದಾರೆ. ಅದಕ್ಕೇ ಬಂದಿರಿ. ನೀವಾಗಿಯೇ ಬರಲಿಲ್ಲ ಅಲ್ಲವೆ?'

ತಕ್ಷಣ ತಕ್ಕ ಉತ್ತರ ಹೇಳಲು ಅವನಿಗೆ ಈಗಲೂ ತಿಳಿಯಲಿಲ್ಲ. ಇಷ್ಟು ದಿನ ಅವಳೊಡನೆ ಸಂಸಾರ ಮಾಡಿದ್ದಾನೆ. ಅವಳು ಹೀಗೆ ಒಂದೇ ಸಮನೆ ಕಠಿಣಳಾಗಬಲ್ಲಳೆಂಬ ಕಲ್ಪನೆಯೇ ಅವನಿಗೆ ಇರಲಿಲ್ಲ. ಸುಮ್ಮನೆ ಕುಳಿತುಬಿಟ್ಟ. ಕುಮುದಿನಿ ಮಲಗಿದಲ್ಲಿಂದ ಮೇಲೆ ಎದ್ದಳು. ಅವನ ಕಡೆಗೆ ತಿರುಗಿ ನೋಡಲೂ ಇಲ್ಲ. ಕೋಣೆಯ ಬಾಗಿಲು ತೆಗೆದು ದಿವಾನ್‌ಖಾನೆಗೆ ಬಂದು ಸೋಫಾದ ಮೇಲೆ ಕುಳಿತಳು. ಅವಳ ತಾಯಿ, ಒಬ್ಬ ಅತ್ತಿಗೆ ಮತ್ತು ಅಣ್ಣಂದಿರ ಮೂವರು ಮಕ್ಕಳು ಅಲ್ಲಿದ್ದರು. ರೂಮಿನಲ್ಲಿ ಶ್ರೀನಿವಾಸ ಒಬ್ಬನೇ ಉಳಿದ. ಅವನಿಗೆ ಅಪಮಾನವೆನಿಸಿತು. ಕಾಲುಗಂಟೆ ಕಾದರೂ ಅವಳು ಮತ್ತೆ ಒಳಗೆ ಬರಲಿಲ್ಲ. ತಾನು ಹೊರಗೆ ಬಂದು ಅತ್ತೆ ಮತ್ತು ಭಾವಮೈದುನನ ಹೆಂಡತಿಯ ಎದುರಿಗೆ ಮುಖ ತೋರಿಸಲು ಸಂಕೋಚವಾಯಿತು. ಇದ್ದಕ್ಕಿದ್ದ ಹಾಗೆಯೇ ಸಿಟ್ಟು ಬಂತು. ಎದ್ದು ದಿವಾನ್‌ಖಾನೆಯ ಮೂಲಕವೇ ಹೊರಗೆ ಬಂದ. ಪೋರ್ಟಿಕೋವಿನ ಕೆಳಗೆ ನಿಲ್ಲಿಸಿದ್ದ ಕಾರಿನ ಬಾಗಿಲು ತೆಗೆದು ಕೂತು ಸ್ಟಾರ್ಟ್‌ಮಾಡಿ ನಡೆಸಿದ. ಹತ್ತು ಅಡಿ ಮುಂದೆ ಚಲಿಸಿದ್ದಾಗ ಒಳಗಿನಿಂದ ಅತ್ತೆ ಓಡಿಬಂದರು. 'ಎಲ್ಲಿಗೆ ಹೊರಟ್ರೀ?' – ಎಂದು ಗಾಬರಿಯಿಂದ ಅವರು ಕೂಗಿದುದು ಕೇಳಿಸಿತು. ಆದರೆ ಅವನು ಉತ್ತರ ಕೊಡಲಿಲ್ಲ. ದೊಡ್ಡ ಕಾಂಪೌಂಡಿನ ಬಾಗಿಲು ತೆಗೆದಿತ್ತು. ಕಾರಿನ ವೇಗವನ್ನು ತಕ್ಷಣ ಹೆಚ್ಚು ಮಾಡಿಕೊಂಡು ಓಡಿಸಿದ. ಇವರು ಸಕ್ಕರೆ ಕಂಪನಿ ಸಾವ್ಕಾರರಾಗಿರಭೌದು. ನಾನು ಪಾಳೇಗಾರರ ಮನೆ ಮಗ. ಇವರ ಜಂಬಕ್ಕೆ ನನ್ನ ಎಕ್ಕಡ ಹ್ವಡೆಯ – ಎಂದುಕೊಂಡು ಕಾರನ್ನು ಮುಖ್ಯ ರಸ್ತೆಗೆ ತಿರುಗಿಸಿದ.

ಅವಳು ಹೇಳಿದ ಮಾತುಗಳೆಲ್ಲ ದಾರಿಯಲ್ಲಿ ನೆನಪಿಗೆ ಬರುತ್ತಿದ್ದುವು. 'ಆ ಮುದುಕರ ಮಾತು ನಿಜವಾಗುತ್ತೆ. ಈ ಹೆರಿಗೇಲಿ ನಾನೂ ಉಳಿಯುಲ್ಲ, ಮಗುವೂ ಉಳಿಯುಲ್ಲ.' ಅವಳು ಅದನ್ನು ಹೇಳಿದಾಗ ಅವನಿಗೆ ಶಾಕ್ ಹೊಡೆದಂತೆ ಆಗಿ ಅಂತಃಕರಣ ಕಲಕಿತ್ತು. ಆದರೆ ಅದೇ ಮಾತು ಈಗ ನೆನಪಿಗೆ ಬರುತ್ತಿರುವಾಗ ಸ್ವಲ್ಪವೂ ದುಃಖವಾಗುತ್ತಿಲ್ಲ. ಅಕಸ್ಮಾತ್ ಅವಳು ಸತ್ತರೆ

ಏನು? ನನ್ನದು ತಪ್ಪಾಯಿತು ಅಂತ ಹೋಗಿ ಸತ್ಯಳನ್ನು ಕೇಳಬೇಕು. ಅಪ್ಪ, ಅವ್ವ, ಅಜ್ಜ, ಯಾರು ಎದುರುಬಿದ್ದರೂ ಕೇಳದೆ ಮದುವೆಯಾಗಬೇಕು – ಎಂಬ ಕಲ್ಪನೆ ಮನಸ್ಸಿನಲ್ಲಿ ಬರುತ್ತಿತ್ತು.

೪

ಮಂಡ್ಯದಲ್ಲಿ ಏನಾಯಿತು? ಹೆಂಡತಿಯನ್ನು ಹೇಗೆ ಸಮಾಧಾನಮಾಡಿದೆ? – ಎಂದು ಅವನ ಅಪ್ಪಾಜಿ ಕೇಳಿದರು. ಇದು ಬರೀ ಗಂಡಹೆಂಡಿರ ಮುನಿಸಿನ ಪ್ರಶ್ನೆಯಲ್ಲ. ಎರಡು ದೊಡ್ಡ ಸಂಸಾರಗಳ, ಇಬ್ಬರು ಮುಖಂಡರ, ಮತ್ತು ಎರಡು ಜಿಲ್ಲೆಗಳ ರೈತಬಾಂಧವರ ಬಾಂಧವ್ಯದ ಪ್ರಶ್ನೆಯಾದುದುದರಿಂದ ತಾವು ವಿವರಗಳನ್ನೆಲ್ಲ ತಿಳಿದು ಮಗನಿಗೆ ತಿಳಿವಳಿಕೆ ಹೇಳುವುದು ಅಗತ್ಯವೆಂದು ಅವರು ಯೋಚಿಸಿದರು. ಆದರೆ ಅವನು ಸರಿಯಾಗಿ ಉತ್ತರ ಹೇಳಲಿಲ್ಲ. 'ಅವಳಿಗೆ ಹ್ಯಾಗೆ ಗೊತ್ತಾಯ್ತಂತೆ?' – ಎಂದು ಕೇಳಿದ್ದಕ್ಕೆ, 'ನಾನು ಕೇಳಲಿಲ್ಲ' – ಎಂದ.

'ಅಲ್ಲಿಗೆ ಹೋಗಿ ಏನು ಕೇಳಿದೆ?'

'ಅವಳು ತಲೆ ಎಲ್ಲಾ ಹರಟಿದಳು. ಸುಮ್ಮನೆ ಬಂದೆ' – ಎಂದು ಹೇಳಿ ಅವನು ತನ್ನ ಕೋಣೆಗೆ ಹೊರಟುಹೋದ.

ಎಂದೂ ತಲೆಹರಟೆ ಆಡದೆ, ಗಂಡ ಅತ್ತೆಮಾವಂದಿರೊಡನೆ ಗೌರವದಿಂದ ನಡೆಯುತ್ತಿದ್ದ ಆ ಹುಡುಗಿ ಈಗ ಯಾಕೆ ಹೀಗಾಯ್ತು? ತನ್ನ ಮದುವೆಗೆ ಮುಂಚೆ ಗಂಡ ಇನ್ನೊಬ್ಬ ಹುಡುಗೀನ ಮಾಡ್ಕಬೇಕು ಅಂತಿದ್ದ. ಆಗಲಿಲ್ಲ. ಇದ್ಯಾವ ದೊಡ್ಡ ವಿಷಯ ಹಿಂಗೆ ತಲೆಗೆ ಹಚ್ಕಳಾಕೆ ಎಂದು ತಮ್ಮನ್ನು ತಾವೇ ಕೇಳಿಕೊಂಡರು. ಅದರ ಮರುದಿನ ಮತ್ತೆ ಮಗನನ್ನು ಆ ವಿಷಯದಲ್ಲಿ ಮಾತ ನಾಡಿಸಿದರು. ಅವನು ಎಪರಾತೊಪರ ಉತ್ತರ ಕೊಟ್ಟು, ಜಾಗ ಬಿಟ್ಟನೇ ಹೊರತು ಅವರಿಗೆ ಬೇಕಾದ ವಿವರಗಳನ್ನು ಹೇಳಲಿಲ್ಲ. ಅದರ ಮರುದಿನ ತನ್ನ ಬಟ್ಟೆಬರೆಗಳನ್ನು ತೆಗೆದುಕೊಂಡು, 'ತುಮಕೂರಿನಲ್ಲಿಯೇ ಇದ್ದು ಮೋಟಾರು ಲಾರಿಯ ವ್ಯವಹಾರ ನೋಡ್ಕಬೇಕು. ಅಲ್ಲೇ ಇರ್ತೀನಿ. ಇಲ್ಲಿಗೆ ಬರ್ತಿರ್ತೀನಿ' ಎಂದು ತಾಯಿಗೆ ಹೇಳಿ ಹೊರಟುಹೋದನಂತೆ. ಎಂದರೆ ಸೊಸೆಯ ಮುನಿಸು ಅತಿಯಾಗಿದೆ. ಇವನ ಸೆಟಕೂ ಜೋರಾಗಿದೆ.

ವಯಸ್ಸಿಗೆ ಬಂದ ಮಗನನ್ನು ಎದುರು-ಹಾಕಿಕೊಳ್ಳಬಾರದು, ಸೊಸೆಗೇ ಬುದ್ಧಿ ಹೇಳಬೇಕು – ಎಂದು ಯೋಚಿಸಿ, ಹೆಂಡತಿಯನ್ನೂ ಕರೆದುಕೊಂಡು

ಅವರು ಒಂದು ಸಂಜೆ ಮಂಡ್ಯಕ್ಕೆ ಹೋದರು. ಬೀಗರು ಮತ್ತು ಸೊಸೆಯನ್ನು ಎದುರಿಗೆ ಕೂರಿಸಿಕೊಂಡು ಹೇಳಿದರು: 'ಒಂದೂರಿನೋರು. ಕಾಲೇಜಾಗೆ ಓದು ವಾಗ ಪ್ರೈಸೂರಾಗಿದ್ರು. ಯಾವ ಗ್ಯಾನದಲ್ಲೋ ಏನೋ ಹಂಗಂದ. ನಾವೇನು, ನಮ್ಮ ಮನೆತನವೇನು, ರೈತಸಮಾಜವೇನು? ಬೆಳಗ್ಗೆ ಎದ್ದು ಹಾರುವರ ಮುಖ ನೋಡಿದ್ರೆ ಅವತ್ತೆಲ್ಲ ಗ್ರಾಚಾರ ಕಾಡುತ್ತೆ. ಇನ್ನು ಹಾರುವರ ಹುಡುಗಿ ತಂದ್ರೆ ಮನೆ ಉಳೀತದಾ? ಛೀ ಅಂತ ಬುದ್ಧಿ ಹೇಳಿದೆವು. ಅಲ್ಲಿ ಅವಳ ಅಪ್ಪ ಯರ್ಕ್‌ಡಾನೇ ತಗಂಡು ಹ್ವಡದು ಅವಳನ್ನ ಸರಿಮಾಡಿದ. ಅಲ್ಲಿಗೆ ಮುಗೀತು. ಮಾದಗಿತ್ತಿ ಇದ್ದ್‌ಹಂಗವ್‌ಳೆ ಅವ್ಳು. ನಿನ್ನ ಲಕ್ಷಣ ಎಲ್ಲಮ್ಮ ಬರಬೇಕು? ನೀನು ಅಂದ್‌ರೆ ಅವನು ದೇವತೆ ಅಂತ ಪೂಜೆ ಮಾಡ್ತಾನೆ. ಇದುಕ್ಕೆಲ್ಲ ಯಾಕೆ ಹಿಂಗೆ ಕ್ವಾಪಿಸ್ಕಂಡಿದೀಯಮ್ಮ?'

'ಪ್ರೀತಿ ಕಪ್ಪು ಬಣ್ಣ ನೋಡುತ್ತೆಯೇ, ಜಾತಿವ್ಯತ್ಯಾಸ ನೋಡುತ್ತೆಯೇ, ಅಪ್ಪಾಜಿ?'

ಸೊಸೆಯ ಪ್ರಶ್ನೆಯಿಂದ ಅವರು ವಿಸ್ಮಿತರಾದರು. ಇಂತಹ ಮಾತುಗಳು ಅವರು ಕೇಳಿದುವಲ್ಲ. ಆದರೆ ಸೊಸೆ ತನ್ನ ತಂದೆತಾಯಿಗಳ ಎದುರಿಗೆ ತಮ್ಮನ್ನು ಹೀಗೆ ಕೇಳುತ್ತಾಳೆಂದು ಅವರು ಭಾವಿಸಿರಲಿಲ್ಲ. ಆದರೆ ತಕ್ಷಣ ಹೇಳಿದರು: 'ಪ್ರೀತಿ ಇದ್ರೆ ಬ್ಯಾರೆ ಮಾತು. ಅವನಿಗೆ ಅವಳ ಗ್ಯಾಪಕವೇ ಇಲ್ಲ.'

'ನಿಮಗೆ ಗೊತ್ತಿಲ್ಲ. ಅವರಿಗೆ ನನ್ನ ಮೇಲೆ ಸ್ವಲ್ಪವೂ ಮನಸ್ಸಿಲ್ಲ. ಈ ಹೆಂಗೇಲಿ ನಾನು ಸತ್ತರೆ ಅವರು ಅವಳನ್ನೇ ಮಾಡಿಕೊತ್ತಾರೆ. ಸುಖವಾಗಿ ಮಾಡಿಕೊಳ್ಳಲಿ. ನಾನು ಕಂಟಕವಾಗಿರುಲ್ಲ.'

'ಕೆಟ್ಟ ಮಾತು ಯಾಕೆ ಆಡ್ತೀ, ಅಮ್ಮಯ್ಯ' – ಎಂದು ಕೆಂಪಣ್ಣನವರು ಸಿಟ್ಟುಕೊಂಡರು. ಅವಳ ತಾಯಿಯೂ ಆಕ್ಷೇಪಿಸಿದರು.

'ಏನು ಈ ಕಾಲದ ಹುಡುಗರು ನೋಡಿ – ಜಾತಿ, ಮತಧರ್ಮ ಅಂತ ದೇವರು ಮಾಡಿದ್ದೇ ಸುಳ್ಳೇ?' – ಎಂದು ಮಂತ್ರಿಗಳು ಬೀಗರಿಗೆ ಒಪ್ಪಿಸಿದರು: 'ಅವ್ನನ್ನ ಕಳುಸ್ತೀನಿ. ಅವನಿಗೆ ನೀವೂ ತಂದೆ ಸಮಾನ. ಎಲ್ಲಾ ಕೇಳಿ ಬೇಕಾದ್ರೆ. ಏನಾರಾ ತಪ್ಪಿದ್ರೆ ಬುದ್ಧಿ ಹೇಳಿ.'

ಆ ರಾತ್ರಿ ಬೀಗರಲ್ಲಿಯೇ ಉಳಿದಿದ್ದು ಬೆಳಗ್ಗೆ ಅವರು ಬೆಂಗಳೂರಿಗೆ ಬಂದರು. ಬಂದು ತಮ್ಮನ್ನು ಕಾಣುವಂತೆ ಹೇಳಿಕಳಿಸಿದರೆ ತುಮಕೂರಿನಿಂದ ಅವನು ಬರಲಿಲ್ಲ. ಟ್ರಂಕ್‌ಕಾಲ್ ಮಾಡಿದರೆ 'ಅವರಿಲ್ಲ' ಎಂಬ ಉತ್ತರ ಬಂತು. ಎದುರು ನಿಂತು ಅವಿಧೇಯತೆಯ ಉತ್ತರ ಕೇಳುವ ಪ್ರಸಂಗ ಬರಬಾರದೆಂದು ಯೋಚಿಸಿ, ತಾವೇ ಸ್ವತಃ ಹೋಗಲಿಲ್ಲ; ಹೆಂಡತಿಯನ್ನು ಕಳಿಸಿದರು. ಅದೇ

ಹೇಳಿ ನಿಂತ ಅವಳನ್ನು ಸತ್ಯಳೇ ಮಾತನಾಡಿಸಿದಳು: 'ಏನು ಸ್ಕೂಲಿನಿಂದ ಬರ್ತಾ ಇದೀರ?'

'ಹೂಂ.'

'ಹ್ಯಾಗನ್ಸುತ್ತೆ ಸ್ಕೂಲು?'

ಮೀರ ಸುಮ್ಮನೆ ಮುಖವನ್ನು ಅರಳಿಸಿದಳು.

'ಮಧ್ಯಾಹ್ನ ಊಟಕ್ಕೆ ಏನು ಮಾಡ್ತೀರಿ?'

'ಮನೆಯಿಂದ ತಗಂಡು ಹೋಗಿರ್ತೀನಿ.'

ಇಬ್ಬರೂ ಜೊತೆಯಲ್ಲಿ ಹೆಜ್ಜೆ ಹಾಕಿದರು. ಮೀರ ಸಂಕೋಚದಿಂದ ಅಂದಳು: 'ನೀವು ನನ್ನ ಬಹುವಚನದಾಗೆ ಮಾತಾಡಿಸಬಾರದು.'

'ಯಾಕಮ್ಮ?' – ಸತ್ಯ ಆಶ್ಚರ್ಯ ಮತ್ತು ಸಂತೋಷದಿಂದ ಅವಳ ಕಡೆಗೆ ತಿರುಗಿ ನೋಡಿದಳು. ಅವಳಿಗೆ ತನಗಿಂತ ಒಂದೆರಡು ವರ್ಷ ಕಡಿಮೆ ವಯಸ್ಸು ಅಷ್ಟೆ. ಆದರೆ ದಷ್ಟಪುಷ್ಟವಾಗಿ ಬೆಳೆದಿದ್ದಳು. ಮುಖ ಮತ್ತು ಕಣ್ಣುಗಳಲ್ಲಿ ಗೆಲುವಿತ್ತು.

ಮೀರ, 'ನಂಗೆ ಹ್ಯಾಗೆ ಹ್ಯಾಗೋ ಆಗುತ್ತೆ' ಎಂದಳು.

'ಆಗಲಿ ಬಿಡು. ನೀನೂ ನನ್ನ ಏಕವಚನದಲ್ಲಿ ಕೂಗು.'

'ಬ್ಯಾಡಿ.'

ಸತ್ಯ ಬಲವಂತ ಮಾಡಲಿಲ್ಲ. ಇಬ್ಬರೂ ಜೊತೆಯಲ್ಲಿ ನಡೆದರು. ಮೀರಳಿಗೆ ಮಾತನಾಡಲು ಏನೋ ಒಂದು ರೀತಿಯ ಸಂಕೋಚ. ಆದರೆ ಇವಳೊಡನೆ ನಡೆಯುತ್ತಿರುವ ಅವಕಾಶಕ್ಕೆ ಒಂದು ತೆರನಾದ ಸಂತೋಷವು ಅವಳ ಮುಖದಲ್ಲಿ ಕಾಣುತ್ತಿತ್ತು. ಸತ್ಯ ಕೇಳಿದಳು: 'ನಾವು ಓದುವಾಗ ಮಿಡ್ಲ್‌ಸ್ಕೂಲಿನಲ್ಲಿ ಹೆಣ್ಣು ಮಕ್ಕಳಿಗೂ ಹೊಡೀತಿದ್ರು. ಈಗಲೂ ಹೊಡೀತೀರ ನೀವು?'

'ಬಾಕಿ ಮೇಷ್ಟ್ರು ಹ್ವಡೀತಾರೆ.

'ನೀನು ಗಾಂಧೀಭಕ್ತಳೇನು?'

'ನಾನು ಹುಡುಗ್ರುನ್ನ ಮುಟ್ಟಬ್ಯಾಡ್‌ದಲ.'

ಅದರಲ್ಲಿ ಆಶ್ಚರ್ಯವಿರಲಿಲ್ಲ. ಆದರೆ ಇಂತಹ ಸಣ್ಣ ವಿವರಗಳು ಸತ್ಯಳಿಗೆ ತಿಳಿದಿರಲಿಲ್ಲ.

'ಹಾಗಾದರೆ ಹುಡುಗರ ಪಾಠ ತಿದ್ದುವಾಗ ಹ್ಯಾಗೆ ಮಾಡ್ತೀಯ?'

'ದೂರದಾಗೆ ನಿಂತ್ಕಂಡು ಹುಡುಗ್ರು ಪುಸ್ತಕ ಮೇಜದ ಮ್ಯಾಲೆ ಇಡ್ತಾವೆ. ನಾನು ತಿದ್ದಿ ಇಟ್ಟ ಮ್ಯಾಲೆ ಹಂಗೆ ದೂರದಾಗೆ ಬಗ್ಗಿ ತಗಾತಾರೆ.'

'ಬಾಕಿ ಮೇಷ್ಟರುಗಳು ಹ್ಯಾಗೆ?'

'ನಾನೊಬ್ಬಳೇ ಹೆಂಗಸು ಮೇಡಂ. ಉಳಿದೋರೆಲ್ಲ ಗಂಡಸರು. ದೂರ ಕುಂತಿರ್ತಾರೆ.'

'ಮಧ್ಯ ಕಾಫಿ ಗೀಫಿ ಬೇಕಾದ್ರೆ?'

'ನಂದೇ ಒಂದು ಗಾಜಿನ ಗ್ಲಾಸು ಇಟ್ಕಂಡಿದೀನಿ. ಜವಾನ ನಿಮ್ಮಣ್ಣಾರ ಹೋಟಲಿಂದ ತಂದು ಅದುಕ್ಕೆ ಬಗ್ಗುಸ್ತಾನೆ.'

'ನೀನು ಸುಮ್ನೆ ಯಾಕಿರ್ತಿಯ? ಗಲಾಟೆ ಮಾಡು.'

'ಏನು ಗಲಾಟೆ ಮಾಡ್ಲಿ? ಕೇಳಾರ್‍ಯಾರು?'

ಸತ್ಯ ಗಂಭೀರವಾಗಿ ಯೋಚಿಸಲು ಆರಂಭಿಸಿದಳು. ಇದು ಕಳೆಯುವುದು ಇನ್ನು ಎಷ್ಟು ವರ್ಷಕ್ಕೆ? ಕಳೆಯುತ್ತದೆಯೋ ಅಥವಾ ಶೂದ್ರತ್ವದ ಈ ಪರ್ಯಾಪ್ತ ರೂಪವು ಒಂದೆರಡು ಜಾತಿಗಳವರ ಮೇಲೆ ಗಟ್ಟಿಯಾಗಿ ಕೂತೇ ಇರುತ್ತದೆಯೋ? ಅವಳಿಗೆ ನೆನಪಾಯಿತು: ಮೀರಳ ಅಪ್ಪ ಬೆಟ್ಟಯ್ಯನವರೇ ಈ ಹಳೆಯ ಕ್ರಮ ವನ್ನು ಒಪ್ಪಿಕೊಂಡಂತೆ ಕಾಣುತ್ತದೆ. ಈಗ ಅವರು ಅನುಕೂಲವಾಗಿದ್ದಾರೆ. ಆದರೆ ಪದ್ಧತಿಯೊಡನೆ ರಾಜಿ ಮಾಡಿಕೊಂಡಿದ್ದಾರೆ.

ಅವಳು ಮೀರಳೊಡನೆ ಅವಳ ಕಾಲೋನಿಗೆ ಹೋಗಿ ಅವಳ ಮನೆಗೂ ಹೋದಳು. ಮೀರಳ ತಾಯಿ ಸುಂಕವ್ವನೂ ಬಂದು ಕಂಬದ ಹತ್ತಿರ ನಿಂತು ಇವಳನ್ನು ಮಾತನಾಡಿಸಿದಳು. ಇವಳು ಕೇಳಿದಳು: 'ಮೀರಾ, ನೀನು ಎಸ್.ಎಸ್.ಎಲ್.ಸಿ.ಯಲ್ಲಿ ಯಾವ ಕ್ಲಾಸು?'

'ಫಸ್ಟ್‌ಕ್ಲಾಸಿಗೆ ಇಪ್ಪತ್ತು ನಂಬರ್ ಕಮ್ಮಿಯಾಯ್ತು.'

'ಕಾಲೇಜಿಗೆ ಯಾಕೆ ಹೋಗಲಿಲ್ಲ?'

'ನಾನು ಹ್ವಾಗಬೇಕು ಅಂತಿದ್ದೆ. ಅಪ್ಪಾರೇ ಸಾಕು ಅಂದ್ರು.'

'ಈಗಲೂ ಯಾಕೆ ಸೇರಬಾರದು? ಕಾಲೇಜು ಬಾಗಿಲು ತೆಗೆದು ಹದಿನೈದು ಇಪ್ಪತ್ತು ದಿನ ಆಗಿರಬಹುದು. ಬೇಗ ಅಪ್ಲಿಕೇಶನ್ ಹಾಕು.'

ಆದರೆ ಅವಳ ತಾಯಿ ಅಂದಳು: 'ಈಟ್ ಓದಿರಾಕೇ ಉಡುಗ ಸಿಕ್ನಿಲ್ಲ. ಕಾಲೀಜ್ ಪಾಲೀಜ್ ಬ್ಯಾಡ ಕಣವ್ವ.'

'ಗಂಡನ ಮಾತು ಬ್ಯಾರೆ. ನಿಂಗೆ ಓದುವ ಇಷ್ಟ ಇದೆಯೋ ಇಲ್ಲವೋ?' – ಎಂದು ಮೀರಾಳನ್ನು ಸತ್ಯ ಕೇಳಿದಳು.

'ಇಷ್ಟ ಅದೆ.'

'ನಾನು ನಿಮ್ಮ ಅಪ್ಪಾರಿಗೆ ಹೇಳ್ತೀನಿ ತಡಿ.'

ಬೆಟ್ಟಯ್ಯನವರು ಮನೆಗೆ ಬರುವತನಕ ಸತ್ಯ ಕೂತಿದ್ದಳು. ವಿದ್ಯಾಭ್ಯಾಸ ವಾಗದೆ ಅವರ ಜಾತಿ ಮುಂದುವರಿಯುವುದಿಲ್ಲ. ಹೆಂಗಸರೂ ಓದದೆ ಯಾವ

ಜಾತಿಯೂ ಮುಂದೆ ನಡೆಯುವುದಿಲ್ಲ ಎಂದು ಹೇಳಿದುದಕ್ಕೆ ಅವರು, 'ಮಹಾತ್ಮರು ಹೆಂಗಂತಿದ್ರು' ಎಂದರು.

'ಹಾಗಾದರೆ ನಿಮ್ಮ ಮಗಳನ್ಯಾಕೆ ಓದಿಸಲಿಲ್ಲ?' – ಎಂದದ್ದಕ್ಕೆ ನಿರುತ್ತರರಾದರು.

ಆ ದಿನ ಸತ್ಯ ಬಹಳ ಹೊತ್ತು ಅವರೊಡನೆ ಮಾತನಾಡಿದಳು. ಮರುದಿನ ಬೆಳಗೆಯೂ ಬಂದು ಹೋದಳು. ಪರಿಣಾಮವಾಗಿ ಮೀರ ಮೇಡಂ ಕೆಲಸ ಬಿಟ್ಟು ಬೆಂಗಳೂರಿನ ಮಹಾರಾಣೀ ಕಾಲೇಜಿಗೆ ಸೇರಿದಳು.

# ಹನ್ನೊಂದು

## ೧

ಮದುವೆಯಾದ ಹೊಸತರಲ್ಲಿ ಶ್ರೀನಿವಾಸ ಹೆಂಡತಿಯನ್ನು ತುಂಬ ಪ್ರೀತಿಸು ತ್ತಿದ್ದ. ರೂಪದಲ್ಲಿ ನರ್ಗಿಸಳನ್ನು ಹೋಲುತ್ತಿದ್ದ ಅವಳು ಮೈಕಟ್ಟಿನಲ್ಲಿ ಇನ್ನೂ ಸ್ವಲ್ಪ ತೆಳುವಾಗಿದ್ದಳು. ಬಣ್ಣವಂತೂ ಬಿಳುಪು. ಮಂಡ್ಯಕ್ಕೆ ಆಗ ಇನ್ನೂ ಬಿ.ಎ. ಬಿ.ಎಸ್ಸಿ. ಬಂದಿರಲಿಲ್ಲ. ಅಲ್ಲಿ ಇದ್ದ ಇಂಟರ್‌ಮೀಡಿಯಟ್ ಓದಿದ್ದಳು. ಅಲ್ಲಿಗೆ ಬರುತ್ತಿದ್ದ ಪ್ರತಿಯೊಂದು ಸಿನಿಮಾವನ್ನೂ ನೋಡಿದ್ದಳು. ಕನ್ನಡ ಕಥೆ ಪುಸ್ತಕಗಳನ್ನೆಲ್ಲ ಓದಿಹಾಕಿದ್ದಳು. ಶಬ್ದ ಬಳಕೆ, ವಾಕ್ಯವಿನ್ಯಾಸ ಉಚ್ಚಾರಗಳಲ್ಲಿ ಅವಳ ಕನ್ನಡವು ಸ್ಥಳೀಯ ಬ್ರಾಹ್ಮಣರ ಭಾಷೆಯಂತೆಯೇ ಇತ್ತು. ಸ್ವಲ್ಪವೂ ವ್ಯತ್ಯಾಸ ಕಾಣುತ್ತಿರಲಿಲ್ಲ. 'ಹಾಗೆ' ಎಂಬುದಕ್ಕೆ ಅವಳು ಎಂದೂ 'ಹಂಗೆ' ಅನ್ನುವುದಿಲ್ಲ. 'ಕೋಪ' ಎನ್ನುವುದಕ್ಕೆ 'ಕ್ವಾಪ' ಅನ್ನುವುದಿಲ್ಲ. ಮದುವೆಯಾಗಿ ಗಂಡಹೆಂಡಿರಲ್ಲಿ ಸ್ವಲ್ಪ ಸಲಿಗೆ ಬೆಳೆದಮೇಲೆ ಶ್ರೀನಿವಾಸನ ಕನ್ನಡವನ್ನೇ 'ಹಳ್ಳಿಯ ಭಾಷೆ' ಎಂದು ಅವಳು ಒಮ್ಮೊಮ್ಮೆ ತಮಾಷೆ ಮಾಡುತ್ತಿದ್ದಳು. ಅವನು ಎಚ್ಚರ ವಾಗಿ ತಿದ್ದಿಕೊಳ್ಳುತ್ತಿದ್ದ. ವೀಣೆಯ ಮೇಲೆ ಕೈಗಳನ್ನು ಬಾರಿಸಿಕೊಂಡು ಹಾಡುತ್ತಿದ್ದ ಅವಳು ಯಾವ ಸಿನಿಮಾ ಹಾಡುಗಳನ್ನು ಬೇಕಾದರೂ ಬಾರಿಸು ತ್ತಿದ್ದಳು. ಲತಾ ಮಂಗೇಶ್ಕರಳಂತೆಯೇ ಹಾಡುತ್ತಿದ್ದಳು.

ಅವಳ ಮನೆಯೂ ಅಷ್ಟೆ. ದಿವಾನರ ಬಂಗಲೆಯ ರೀತಿಯ ಕಟ್ಟಡ. ರೇಡಿಯೋ, ರೆಫ್ರಿಜಿರೇಟರ್, ಸೋಫಾ, ಸ್ಪ್ರಿಂಗ್‌ಮಂಚಗಳು. ಬ್ರಾಹ್ಮಣ ಅಡಿಗೆಯವರು. ಗಂಧದ ಮಂದಾಸನ ಮತ್ತು ಮಂಟಪಗಳ ದೇವರಮನೆ. ತನ್ನ ತಿರುಮಲಾಪುರದ ಮನೆ ಪಾಳೆಯಗಾರರದ್ದಿರಬಹುದು. ಈ ನಾಗರಿಕತೆ ಅಲ್ಲಿಲ್ಲ. ಯಾವ ಬ್ರಾಹ್ಮಣರ ಮನೆಯಲ್ಲಿಯೂ ಇಲ್ಲ – ಎಂದು ಶ್ರೀನಿವಾಸ ತನ್ನಲ್ಲಿ ತಾನೇ ಹೇಳಿಕೊಂಡ.

ಮದುವೆ ಆದದ್ದೂ ಹಾಗೆಯೇ. ಮಂತ್ರ ತಂತ್ರಗಳೆಲ್ಲ ಕೂಡಿ ಬ್ರಾಹ್ಮಣರದ್ದೇ ಶಾಸ್ತ್ರ. ಬ್ರಾಹ್ಮಣರಂತೆಯೇ ವರದಕ್ಷಿಣೆ. ಎಂದರೆ ನಗದು ಅಲ್ಲ. ಶವರ್ಲೆ ಕಾರು, ಒಮೆಗಾ ಕೈಗಡಿಯಾರ, ಅದಕ್ಕೆ ಚಿನ್ನದ ಸರಪಣಿ, ಉಲ್ಲನ್ ಸೂಟುಗಳು. ಕಲಾಪತ್ತಿನ ಪಂಚೆ. ಜರಿಪೇಟ....ಆಮೇಲೆ ಅವನ ಹೆಸರಿಗೆ ನಾಲ್ಕು ಲೈಸನುಗಳು ಸಿಕ್ಕಿದುವು. ಬಸ್ಸುಗಳಿಗೆ ಅಪ್ಪನೇನೋ ದುಡ್ಡು ಕೊಟ್ಟರು. ಅವುಗಳಲ್ಲಿ ಎರಡು

ಹೊಸ ಬಸ್ಸುಗಳು. ಮತ್ತೆ ಎರಡು, ಅವನ ಮಾವನವರೇ ಕೊಡಿಸಿದ ಸೆಕೆಂಡ್ ಹ್ಯಾಂಡಿನವು; ಆದರೂ ಚೆನ್ನಾದ ಸ್ಥಿತಿಯಲ್ಲಿರುವಂಥವು. ಬಸ್‌ಲೈಸಿನ, ಅದರಲ್ಲೂ ಹಳ್ಳೀ ಲೈಸಿನ, ಮೇಲ್ವಿಚಾರಣೆ ನೋಡಿಕೊಳ್ಳುವ ತಿಳಿವಳಿಕೆ ಅವನಿಗಿಲ್ಲ. ಅವರೇ ಒಬ್ಬ ನೆಂಟರ ಮನುಷ್ಯನನ್ನು ಕಳಿಸಿದ್ದಾರೆ. ಅವನು ತುಮಕೂರಿನಲ್ಲಿದ್ದು ಕೊಂಡು ಎಲ್ಲ ವ್ಯವಸ್ಥೆಗಳನ್ನೂ ನೋಡಿಕೊಳ್ಳುತ್ತಾನೆ. ಲಾರಿಗಳ ಮೇಲ್ವಿ ಚಾರಣೆಯೂ ಅವನದೇ. ದುಡ್ಡಿನ ಸುರಿಮಳೆಯಾಗುತ್ತಿದೆ. ಶ್ರೀನಿವಾಸ ಬೆಂಗಳೂರಿನಲ್ಲಿ ಇದ್ದುಕೊಂಡೇ ಕಾರಿನಲ್ಲಿ ಆಗಾಗ ತುಮಕೂರಿಗೆ ಹೋಗಿ ಬರುತ್ತಾನೆ. ಹೆಂಡತಿಯೊಡನೆ ಮಂಡ್ಯಕ್ಕೆ ಹೋಗಿಬರುತ್ತಾನೆ. ನಂದೀಬೆಟ್ಟ ಕನ್ನಂಬಾಡಿಗಳಿಗೂ ಹೋಗುತ್ತಾನೆ.

ಅವನಿಗೆ ಇತ್ತೀಚೆಗೆ ದೈವಭಕ್ತಿ ಹೆಚ್ಚಾಗಿದೆ. ನಾವು ಏನೇ ಮಾಡಲಿ, ನಮಗಿಂತ ಮೇಲಿನ ಒಂದು ಶಕ್ತಿ ಇದ್ದೇ ಇದೆ; ಅದು ಯಾವಾಗಲೂ ಮನೆ-ದೇವರ ರೂಪದಲ್ಲಿ ಕಾಣುತ್ತವೆ; ಅದನ್ನು ಧಿಕ್ಕರಿಸಿದವನಿಗೆ ಸುಖವಿಲ್ಲ – ಎಂಬ ನಂಬಿಕೆ ಹೆಚ್ಚಾಗುತ್ತಿದೆ. ಹೆಂಡತಿ ಕುಮುದಿನಿಗೂ ದೈವಭಕ್ತಿ ಹೆಚ್ಚು. ಅವಳು ತೌರಿನಲ್ಲಿ ಶ್ರೀರಾಮನನ್ನು ಪೂಜಿಸುತ್ತಿದ್ದಳು. ಈಗ ತಿರುಮಲ ಶ್ರೀನಿವಾಸನ ಪೂಜೆ ಮಾಡುತ್ತಾಳೆ. ಬೆಳಗ್ಗೆ ಎದ್ದು ಸ್ನಾನ ಮಾಡಿ, ಅರ್ಧ ಗಂಟೆಯಾದರೂ ಪೂಜೆ ಮಾಡದೆ ದೇವರ ಮನೆಯಿಂದ ಹೊರಗೆ ಬರುವುದಿಲ್ಲ. ಅವಳು ಬಂದಮೇಲೆ ಬೆಂಗಳೂರಿನ ಸರ್ಕಾರೀ ಬಂಗಲೆಯಲ್ಲಿ ಒಂದು ಕೋಣೆಯನ್ನು ದೇವರಿಗಾಗಿ ಮೀಸಲು ಮಾಡಿ ಅಣಿಮಾಡಿದ್ದಾಳೆ. ತೌರಿನಿಂದ ತಂದ ಪೂಜಾಪರಿಕರಗಳನ್ನು ಅಂದವಾಗಿ ವ್ಯವಸ್ಥೆ ಮಾಡಿದ್ದಾಳೆ. ಒಬ್ಬ ಬ್ರಾಹ್ಮಣ ಅರ್ಚಕರನ್ನೇ ಇಟ್ಟು ಕೊಳ್ಳಬೇಕೆಂಬ ಅವಳ ಅಪೇಕ್ಷೆಯನ್ನು ಮಾವನವರು ಒಪ್ಪಲಿಲ್ಲ. ಆದ್ದರಿಂದ ತಾನೇ ಸ್ವತಃ ಹಾಡು ಹೇಳಿಕೊಂಡು ಪೂಜೆ ಮಾಡುತ್ತಾಳೆ. ಸೊಸೆಯ ದೇವರ ಪೂಜೆಯ ಕ್ರಮ ಮತ್ತು ವಿವರಗಳನ್ನು ಕಂಡು ರಂಗಮ್ಮನಿಗೆ ಮೆಚ್ಚಿಗೆಯೋ ಮೆಚ್ಚಿಗೆ. ಈ ವಯಸ್ಸಿನಲ್ಲಿ ತಾನು ಅಷ್ಟನ್ನೆಲ್ಲ ಕಲಿಯಲಾರೆನೆಂದು ಅವಳು ಸೊಸೆಯ ಪೂಜೆ ಮುಗಿದ ಮೇಲೆ ಹಣೆಯನ್ನು ನೆಲಕ್ಕೆ ಮುಟ್ಟಿಸಿ ಕೈ ಮುಗಿಯು ತ್ತಾಳೆ. ತನ್ನ ಹರಕೆ ಮತ್ತು ಮನೆದೇವರಾದ ತಿರುಮಲ ಶ್ರೀನಿವಾಸ ಕಣ್ಣು ಬಿಟ್ಟು ನೋಡಿದುದರಿಂದ ಸೊಸೆಯು ಮದುವೆಯಾದ ಎರಡು ತಿಂಗಳಿಗೇ ಬಸುರಿ ಯಾಗಿದ್ದಾಳೆ.

ಮದುವೆಯಾಗಿ ಹೆಂಡತಿಯೊಡನೆ ಬಂದ ಮೇಲೆ ಶ್ರೀನಿವಾಸ ಒಂದು ದಿನವೂ ಒಂಟಿಯಾಗಿರಲಿಲ್ಲ. ಅವಳನ್ನು ತೌರಿಗೆ ಇವನೇ ಕರೆದುಕೊಂಡು ಹೋಗುತ್ತಿದ್ದ. ಇವನೂ ಅಲ್ಲಿ ಜೊತೆಯಲ್ಲಿರುತ್ತಿದ್ದ. ಬಸುರಿಯಾಗಿ ಮಗಳಿಗೆ ಮೂರು ತಿಂಗಳು

ನಡೆಯುತ್ತಿರುವಾಗ ಅವಳು ತಮ್ಮ ಮನೆಯಲ್ಲಿ ಒಟ್ಟಿಗೆ ಹದಿನೈದು ದಿನವಾದರೂ ಇರಬೇಕೆಂದು ಕೆಂಪಣ್ಣನವರು ಬಯಸಿದರು. ಆ ಹದಿನೈದು ದಿನವೂ ಅಳಿಯ ನೆನ್ನಿಸಿಕೊಂಡವನು ಮಾವನ ಮನೆಯಲ್ಲಿ ಕೂರುವುದು ಗೌರವಕ್ಕೆ ಕಮ್ಮಿ ಯಾದುದರಿಂದ, 'ನೀನು ಇಲ್ಲೇ ಇರು. ಇಲ್ಲಾ ತುಮಕೂರಾಗಿದ್ದು ಬಸ್ಸು ಲಾರಿ ನೋಡ್ಕ' ಎಂದು ತಂದೆ ಮಗನಿಗೆ ಹೇಳಿದರು. ಅವನಿಗೂ ಸಂಕೋಚ ವಾಯಿತು. ನಡುವೆ ಬಂದು ಹೋಗುವುದಾಗಿ, ದಿನವೂ ಕಾಗದ ಬರೆಯುವು ದಾಗಿ ಹೇಳಿ ಹೆಂಡತಿಯೊಬ್ಬಳನ್ನೇ ಮಾವನವರ ಕಾರಿನಲ್ಲಿ ಕಳಿಸಿದ. ಕುಮುದಿನಿ ದಿನವೂ ಕಾಗದ ಬರೆಯುತ್ತಿದ್ದಳು. ಎಷ್ಟು ಚನ್ನಾಗಿ ಬರೆಯುತ್ತಾಳೆ! ಯಾವ ಸಿನಿಮಾದಲ್ಲಿಯೂ ಹಾಗೆ ಬರೆಯುವುದಿಲ್ಲ. ಯಾವ ಕಥೆ ಪುಸ್ತಕದಲ್ಲಿಯೂ ಅಂತಹ ಭಾಷೆ ಇರುವುದಿಲ್ಲ. ಉತ್ತರ ಬರೆಯಲು ತಾನೂ ಪೆನ್ನು ಹಿಡಿದು ಕೂರುತ್ತಾನೆ. ಆದರೆ ಹಾಗೆ ಬರೆಯಲು ಬರುವುದೇ ಇಲ್ಲ. ಅವಳು ಕನ್ನಡದಲ್ಲಿ ಅಷ್ಟು ಚನ್ನಾಗಿ ಬರೆದರೆ ತಾನು ಇಂಗ್ಲಿಷಿನಲ್ಲಿ ಪ್ರತಿಯಾಗಿ ಬರೆಯಬಹುದು. ಅವಳಿಗೆ ಅಷ್ಟು ಚನ್ನಾಗಿ ಇಂಗ್ಲಿಷ್ ಬರುವುದಿಲ್ಲವಾದುದರಿಂದ ತನ್ನ ಕಾಗದ ಹೇಗಿದ್ದರೂ ಒಪ್ಪಿಕೊಳ್ಳುತ್ತಾಳೆ – ಎಂದು ಇಂಗ್ಲಿಷಿನಲ್ಲಿಯೇ ದೊಡ್ಡ ಕಾಗದ ಬರೆದ. ಬರೆಯುವಾಗ, 'ನಾನು ನಿನ್ನನ್ನು ಪ್ರೀತಿಸುತ್ತೇನೆ. ನೀನಿಲ್ಲದೆ ಸ್ವರ್ಗವೂ ಇಲ್ಲ' ಎಂದೆಲ್ಲ ಸ್ಫೂರ್ತಿ ಬಂದಂತಾಗಿತ್ತು. ಅದನ್ನು ಪೋಸ್ಟಿಗೆ ಹಾಕಿ ಬಂದ ಮೇಲೆ ಅವನಿಗೆ ಇದ್ದಕ್ಕಿದ್ದ ಹಾಗೆಯೇ ಸತ್ಯಳ ಜ್ಞಾಪಕ ಬಂದುಬಿಟ್ಟಿತು.

ಈಗ ಅವಳು ಬೆಂಗಳೂರಿನಲ್ಲೇ ಇದ್ದಾಳೆ. ಆ ಜವಳಿಯ ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದಾಳೆ. ಅಥವಾ ಬೇರೆ ಎಲ್ಲಾದರೂ ಸೇರಿದ್ದಾಳೆ. ಅದೇ ಕೋಣೆಯಲ್ಲಿರಬಹುದು. ವಿಚಾರಿಸಿದರೆ ಪತ್ತೆ ಹಚ್ಚುವುದು ಕಷ್ಟವಿಲ್ಲ. ಹೋಗಿ ಅವಳನ್ನು ನೋಡಬೇಕು ಎನಿಸಿತು. ಒಂದು ದಿನ ಚಿಕ್ಕಪೇಟೆಯ ಜವಳಿ ಅಂಗಡಿಯ ಕಡೆಗೆ ಹೋದ. ಆದರೆ, 'ಈಗ ಯಾಕೆ ಬಂದೆ?' – ಎಂದು ಅವಳು ಕೇಳಿದರೆ ಏನೆಂದು ಉತ್ತರ ಕೊಡುವುದು, ಎಂಬ ಯೋಚನೆ ಬಂದು ಹಿಂತಿರುಗಿ ಬಂದುಬಿಟ್ಟ. ಆ ದಿನ ಮಧ್ಯಾಹ್ನದ ಪೋಸ್ಟಿನಲ್ಲಿ ಕುಮುದಿನಿಯ ಕಾಗದ ಬಂತು. ಒಡೆದು ಓದಿದಾಗ ಅದೆಲ್ಲ ನೀರಸ ಬರವಣಿಗೆ ಎನಿಸಿತು. ಸತ್ಯ ಎಂದೂ ಹಾಗೆ ಬರೆದವಳಲ್ಲ; ಪ್ರೀತಿಯ ಮಾತನಾಡಿದವಳಲ್ಲ. ಸಿನಿಮಾದಲ್ಲಿ ಮಾಡಿದಂತೆ ಬೃಂದಾವನದ ಕಾರಂಜಿಯ ಎದುರಿಗೆ ತನ್ನ ತೋಳಿಗೆ ಕೈಹಾಕಿ ನಿಂತವಳಲ್ಲ. ಆದರೆ ಅವಳ ನೆನಪು ಈಗ ಪ್ರಚಂಡವಾಗಿ ಬರುತ್ತಿದೆ. ಅವಳ ನೆನಪಿನ ಚಿತ್ರದ ಎದುರಿಗೆ ಕುಮುದಿನಿ ಚಿತ್ರದ ಗೊಂಬೆ ಎನಿಸಿತು.

ಏನಾದರೂ ಮಾಡಿ, ಹೋಗಿ ಸತ್ಯಳನ್ನು ಕಂಡು ಮಾತನಾಡಬೇಕೆನಿಸಿತು.

ಒಂದು ದಿನ ಧೈರ್ಯ ಮಾಡಿದ. ಅವಳ ಅಂಗಡಿಯ ಫೋನಿನ ನಂಬರನ್ನು ಡೈರೆಕ್ಟರಿಯಲ್ಲಿ ನೋಡಿ ಕರೆದ: 'ಮಿಸ್ ಸತ್ಯಭಾಮಾ ಇದ್ದರೆ ಕರೀರಿ.'

ಸತ್ಯ ಬಂದಳು. 'ಯಾರು ಮಾತಾಡ್ತಿರೋರು?' – ಎಂದಳು. 'ನಾನು' – ಎಂದರೆ 'ಯಾರು ನೀವು?' ಎಂದು ಕೇಳಿದಳು. ಎಂದರೆ ಅವಳ ಉತ್ತರ ಏನೆಂಬುದು ಶುರುವಿಗೇ ತಿಳಿಯಿತು ಎಂದುಕೊಂಡು ಅವನು ಫೋನನ್ನು ಕೆಳಗೆ ಇಟ್ಟುಬಿಟ್ಟ. ಒಂದು ಗಂಟೆಯ ನಂತರ ನೆನಪಿಗೆ ಬಂತು. ನನ್ನ ಧ್ವನಿ ಅವಳಿಗೆ ಚನ್ನಾಗಿ ಗೊತ್ತು. ಆದರೆ ಫೋನಿನಲ್ಲಿ ತಕ್ಷಣ ಗುರುತು ಹತ್ತದೆ, 'ಯಾರು ನೀವು?' ಎಂದಿರ ಬಹುದು. ಅವಳೆಂದೂ ಫೋನಿನಲ್ಲಿ ನನ್ನ ಧ್ವನಿ ಕೇಳಿಲ್ಲ. ನಾನೇ ಎಡವಟ್ಟು ಮಾಡಿದೆ. ಮತ್ತೆ ಫೋನು ಮಾಡಬೇಕು ಎನಿಸಿತು. ಗುರುತು ಹೊತ್ತಿದರೂ, 'ಯಾರು ನೀವು?' ಅಂದರೆ ಏನು ಮಾಡುವುದು, ಎಂಬ ಭಯವೂ ಆಯಿತು. ಸುಮ್ಮನಾಗಿಬಿಟ್ಟ.

ಆ ದಿನ ಸಂಜೆಯ ಹೊತ್ತಿಗೆ ಅವನು ಸತ್ಯಳನ್ನು ದ್ವೇಷಿಸಲು ಪ್ರಾರಂಭಿಸಿದ. ಅವಳಲ್ಲಿ ಯಾವ ವಿಶೇಷವಿದೆ? ಯಾವ ಮಹಾ ರೂಪ, ಬಣ್ಣ, ಆಕಾರ ಅವಳದ್ದು? ಏನೋ ಜೊತೆಯಲ್ಲಿ ಓದಿದೆವು. ಮನಸ್ಸು ಹಾಗೆ ಬಂತು. ಆಗಲಿಲ್ಲ. ಹೋಯಿತು. ಅದಕ್ಯಾಕೆ ಇಷ್ಟು ಹುಚ್ಚಾಗಬೇಕು ನಾನು, ಎಂದು ತನ್ನನ್ನು ತಾನೇ ಕೇಳಿಕೊಂಡ. ಸಂಜೆಯ ಪೋಸ್ಟಿಗೆ ಕುಮುದಿನಿಯ ಇನ್ನೊಂದು ಕಾಗದ ಬಂತು. 'ನಿಮ್ಮಿಂದ ಮೂರು ದಿನವಾದರೂ ಕಾಗದವಿಲ್ಲ. ನಾನು ಇಷ್ಟು ಬೇಗ ಮರೆತುಹೋದೆನೇ?' – ಎಂದು ಕೇಳಿ, ತನ್ನ ವಿರಹದ ದುಃಖವನ್ನು ವರ್ಣಿಸಲು ಶಬ್ದ ಸಾಲದೆಂದು ಮೂರು ಪುಟ ಬರೆದಿದ್ದಳು. ಅವನು ಕಾಗದವನ್ನು ಎರಡು ಸಲ ಓದಿಕೊಂಡ. ಆದರೆ ಉತ್ತರ ಬರೆಯಲಿಲ್ಲ. ಸತ್ಯಳಲ್ಲಿ ಏನಿದೆ ವೈಶಿಷ್ಟ್ಯ? – ಎಂಬ ಪ್ರಶ್ನೆಗೆ ಉತ್ತರವನ್ನು ಶೋಧಿಸಲು ಒಂದೇ ಸಮನೆ ಪ್ರಯತ್ನಿಸಿದ. ಮರು ದಿನ ಕುಮುದಿನಿಯ ಕಾಗದ ಬರಲಿಲ್ಲ. ಮುನಿಸಿಕೊಂಡು ಸುಮ್ಮನಿರಬಹುದು ಎಂದುಕೊಂಡ. ಸತ್ಯಳ ಆಕರ್ಷಣೆ ಮಾತ್ರ ಹೆಚ್ಚುತ್ತಲೇ ಹೋಯಿತು. ಮೂರ ನೆಯ ದಿನ ಒಂದು ಉತ್ತರ ಹೊಳೆಯಿತು. ಬುದ್ಧಿವಂತೆ, ಎಂ.ಎ. ಓದಿದವಳು ಎಂಬುದಷ್ಟೇ ತನ್ನ ಆಕರ್ಷಣೆಯ ಕಾರಣವಲ್ಲ. ಅವಳು ಬ್ರಾಹ್ಮಣ ಹುಡುಗಿ, ತನಗಿಂತ ಮೇಲುಜಾತಿಯವಳು ಎಂಬ ವಿಶೇಷಭಾವನೆ, ಅವಳೊಡನೆ ಓದು ವಾಗಿನಿಂದ ತನ್ನಲ್ಲಿತ್ತು. ಹಣ, ಅಧಿಕಾರ, ಎಲ್ಲದರಲ್ಲೂ ತಾನು ಮೇಲ್ಮಟ್ಟದ ಮನೆಯಲ್ಲಿ ಹುಟ್ಟಿದವನಾದರೂ ಬುದ್ಧಿವಂತೆಯಾದ ಬ್ರಾಹ್ಮಣ ಹುಡುಗಿಯು ತನ್ನ ಜೊತೆ ಸ್ನೇಹವಾಗಿದ್ದಾಳೆ ಎಂಬ ಹೆಮ್ಮೆಯಿತ್ತು. ಅದು ಈಗ ಜ್ಞಾಪಕಕ್ಕೆ ಬಂತು. ಇಷ್ಟೇಯೇ ಅದರ ತಿರುಳು? – ಎಂದುಕೊಂಡ. ಬ್ರಾಹ್ಮಣರ ಹುಡುಗಿ

ಯಾದರೆ ಏನು, ಕುಮುದಿನಿಯಲ್ಲಿಲ್ಲದ ವಿಶೇಷ ಗುಣ, ಶಕ್ತಿ, ಏನಿದೆ ಅವಳಲ್ಲಿ? ರೂಪ, ಲಾವಣ್ಯ, ಒನಪು, ಒಯ್ಯಾರ, ಗಂಡಸನ್ನು ಸಂತೋಷಪಡಿಸುವ ಯಾವ ಗುಣದಲ್ಲಿ ಕುಮುದಿನಿ ಕಡಿಮೆಯಾಗಿದ್ದಾಳೆ? ಬುದ್ಧಿಶಕ್ತಿಯಲ್ಲೂ ಅವಳು ಕಡಿಮೆ ಯಿಲ್ಲ. ಆದರೂ ಯಾಕೆ ಈ ಸೆಳೆತ? ಮೇಲುಜಾತಿಯವರನ್ನು ಮದುವೆಯಾಗುವ ಬಯಕೆ ಎಲ್ಲರಿಗೂ ಇರುತ್ತದೆ. ಆದರೆ ತಾನು ಮೇಲಿನವಳು ಅಂತ ಸತ್ಯ ಒಪ್ಪುವುದೇ ಇಲ್ಲ. ಆದಕ್ಕೇ ತಾನು ಅವಳನ್ನು ಬಯಸುವುದು ಸಾಧ್ಯವಾಯಿತು. ಆದರೆ ಈ ವ್ಯತ್ಯಾಸವನ್ನೇ ಅಲ್ಲಗಳೆಯುವ ಅವಳಲ್ಲಿ ಬ್ರಾಹ್ಮಣತ್ವದ ವಿಶೇಷ ವೇನಿದೆ, ಎಂದು ಕೇಳಿಕೊಂಡ. ಅವಳು ಒಪ್ಪದಿರಬಹುದು. ಆದರೆ ಅವಳು ಬ್ರಾಹ್ಮಣಿಯೇ ಹೌದು. ಅವಳನ್ನೇ ಮಾಡಿಕೊಳ್ಳಬೇಕಾಗಿತ್ತು – ಎಂದು ಕೊಂಡ. ಆದರೆ ದೇವರ ಮುಂದೆ ನಿಂತಾಗ ಅದು ಪಾಪ ಎನಿಸಿತಲ್ಲ. ಪಾಪ ಮಾಡುವುದರಲ್ಲೇ ಆಕರ್ಷಣೆ ಇದೆಯೇ? ಪಾಪ ಮಾಡಿಸುವುದಕ್ಕೆಂದೇ ದೇವರು ನಮ್ಮನ್ನು ಸೃಷ್ಟಿಸುತ್ತಾನೆಯೆ? ಪಾಪದ ಬಯಕೆಯಲ್ಲಿ ಯಾಕೆ ಇಂತಹ ಪ್ರಚಂಡ ಆಕರ್ಷಣೆ ಇರಬೇಕು, ಎಂಬ ಪ್ರಶ್ನೆ ಹುಟ್ಟಿತು. ಬಿ.ಎ. ಓದುವಾಗ ಶೇಕ್ಸ್‌ಪಿಯರನ ಮ್ಯಾಕ್‌ಬೆತ್ ನಾಟಕ ಇಟ್ಟಿದ್ದರು. ಪಾಠ ವಿವರಿಸುವಾಗ ಇಂಗ್ಲಿಷ್ ಮೇಷ್ಟರು ಶೇಕ್ಸ್‌ಪಿಯರನ ಪಾಪಕಲ್ಪನೆಯ ಬಗೆಗೆ ವರ್ಷವಿಡೀ ವಿವರಿಸುತ್ತಿದ್ದ ಮಾತುಗಳು ನೆನಪಿಗೆ ಬಂದುವು.

ಒಂದು ವಾರದಲ್ಲಿ ಅವನಿಗೆ ಅಸಹನೀಯವಾಯಿತು. ಹೊತ್ತು ಕಳೆಯುವುದು ಕಷ್ಟವಾಗಿದ್ದುದು ಮಾತ್ರವಲ್ಲ. ಯೋಚನೆಗಳು ಹೊಸಕುತ್ತಿದ್ದುವು. ಒಂಟಿ ಯಾಗಿ ಕೂರಲು ಸಾಧ್ಯವಾಗಲಿಲ್ಲ. ಯಾವುದಾದರೂ ಸಿನಿಮಾಕ್ಕಾದರೂ ಹೋಗಬೇಕೆನಿಸಿತು. ಯಾವ ಯಾವ ಥೇಟರಿನಲ್ಲಿ ಯಾವ ಯಾವ ಚಿತ್ರಗಳಿವೆ ಎಂದು ಆವೊತ್ತಿನ ಪೇಪರ್ ತೆಗೆದು ನೋಡಿದ. ಅರೆ, ಒಳ್ಳೆಯ ಚಿತ್ರ ಬಂದಿದೆ. ದೇವದಾಸ ನಡೆಯುತ್ತಿದೆ. ತನಗೆ ಗೊತ್ತೇ ಇರಲಿಲ್ಲ. ಕಾರನ್ನು ನಡೆಸಿಕೊಂಡು ಸಿನಿಮಾಕ್ಕೆ ಹೋದ. ಎರಡೂಮುಕ್ಕಾಲು ರೂಪಾಯಿ ಸೀಟಿನಲ್ಲಿ ಕುಳಿತು ನೋಡಿದ. ದೇವದಾಸ ಸಿನಿಮಾವನ್ನು ಅವನು ಈ ಹಿಂದೆ, ಎಂದರೆ ಮೂರು ವರ್ಷದ ಹಿಂದೆ ಒಂದು ಸಲ ನೋಡಿದ್ದ. ಆದರೆ ಆಗ ಅದರ ಪರಿಣಾಮ ಇಷ್ಟು ತೀವ್ರವಾಗಿರಲಿಲ್ಲ. ಈಗ ಅದು ತನ್ನ ಜೀವನದಲ್ಲಿ ಅರ್ಥವೇ ಇಲ್ಲವೆಂಬುದನ್ನು ತೋರಿಸಿಬಿಟ್ಟಿದೆ. ಚಿತ್ರವನ್ನು ಮುಗಿಸಿಕೊಂಡು ಸಂಜೆ ಕಬ್ಬನ್‌ಪಾರ್ಕಿಗೆ ಹೋಗಿ ಕಾರನ್ನು ರಸ್ತೆಯ ಬದಿಯ ಒಂದು ಮರದ ಕೆಳಗೆ ನಿಲ್ಲಿಸಿದ. ತಲೆಯಲ್ಲಿ ಗುನುಗುತ್ತಿತ್ತು. ದೇವದಾಸನಿಗೆ ಯಾಕೆ ಹೀಗಾಯಿತು? ಅವನದೇ ತಪ್ಪಲ್ಲವೆ? ಪಾರ್ವತಿಯನ್ನಲ್ಲದೆ ಬೇರೊಬ್ಬಳನ್ನು ಮಾಡಿಕೊಳ್ಳುವುದಿಲ್ಲವೆಂದು ಧೈರ್ಯವಾಗಿ

ಹಟ ಹಿಡಿಯಬಹುದಾಗಿತ್ತು. ಅವಳನ್ನು ಕರೆದುಕೊಂಡು ಕಲ್ಕತ್ತೆಗೆ ಓಡಿಹೋಗ ಬೇಕಾಗಿತ್ತು. ಅವಳು ಬರುಲ್ಲ ಅಂತಿದ್ದಳೇ? ಪಾರ್ವತಿಯ ಜಾಗದಲ್ಲಿ ಸತ್ಯಳ ಪಾತ್ರ ಬರಲು ಆರಂಭವಾಯಿತು. ನಾನೇ ದೇವದಾಸನಾಗಿದ್ದರೆ, ಎಂದುಕೊಂಡ. ದೇವದಾಸನ ತಂದೆತಾಯಿಯ ಮೇಲೆ ಪ್ರಚಂಡ ಸಿಟ್ಟು ಬಂತು. ಈ ಹಿರಿಯ ರಿಂದಲೇ ಪ್ರಪಂಚದಲ್ಲಿ ಪ್ರೀತಿ ಪ್ರೇಮಗಳು ಹಾಳಾಗುವುದು. ಅವನ ಅಪ್ಪ ಆಮೇಲೆ ಸಾಯುವ ಬದಲು ಮೊದಲೇ ಸಾಯಬೇಕಾಗಿತ್ತು. ಮಗ ಕುಡುಕ ನಾಗಿದ್ದಾನೆಂಬುದನ್ನು ತಿಳಿದು ಮುದುಕ ಸ್ವಲ್ಪವಾದರೂ ಕಣ್ಣೀರಿಡುವ ಹಾಗಾ ಯಿತಲ್ಲ. ಅವನಿಗೆ ಅದಕ್ಕಿಂತ ಹೆಚ್ಚು ಶಿಕ್ಷೆಯಾಗಬೇಕಾಗಿತ್ತು – ಎಂದುಕೊಂಡ.

ಆ ದಿನ ರಾತ್ರಿ ಮನೆಗೆ ಹೋಗಿ ಊಟಕ್ಕೆ ಕೂತರೆ ಊಟ ಸೇರದು. 'ಯಾಕೋ ಹಿಂಗಿದೀಯ?' – ಎಂದು ತಾಯಿ ಕೇಳಿದರೆ ಉತ್ತರವನ್ನೂ ಕೊಡ ಲಿಲ್ಲ. ರಾತ್ರಿಯೆಲ್ಲ ದೇವದಾಸನದೇ ಸಮಸ್ಯೆ ಕಾಡುತ್ತಿದೆ. ಬೆಳಗ್ಗೆ ಏಳುವ ಹೊತ್ತಿಗೆ ಮನಸ್ಸು ಮಂಕಾಗಿತ್ತು. ಪ್ರಪಂಚವೇ ಶೂನ್ಯ ಎನಿಸುತ್ತಿತ್ತು. ಹೋಗಿ ಸತ್ಯಳನ್ನು ಇವತ್ತು ನೋಡಲೇ ಬೇಕು ಅನಿಸಿತು. ಇಷ್ಟೊಂದು ಮಜವಾಗಿ ಇದೀಯ. ನಿನಗೆ ನನ್ನ ಅಗತ್ಯವೇನು?' ಅಂತ ಅವಳು ಕೇಳಿದರೆ! – ಎಂಬ ಅಂಜಿಕೆ ಆಯಿತು. ಈ ಬೇಸರ, ಈ ಶೂನ್ಯವನ್ನು ಕಳೆಯಲು, ಬಾರಿಗೆ ಹೋಗಿ ಒಂದಿಷ್ಟು ಕುಡಿಯಬೇಕು ಎಂಬ ಯೋಚನೆ ಇದ್ದಕ್ಕಿದ್ದಹಾಗೆಯೇ ಬಂತು. ಬೆಳಗ್ಗೆ ಹತ್ತು ಗಂಟೆಯ ಹೊತ್ತಿನಲ್ಲಿ ಕಾರು ನಡೆಸಿಕೊಂಡು ಬ್ರಿಗೇಡ್ ರಸ್ತೆಯ ಕಡೆಗೆ ಹೋದ. ಮೈಸೂರಿನಲ್ಲಿ ಓದುತ್ತಿದ್ದಾಗ ಅವನು ಸ್ನೇಹಿತರೊಡನೆ ಕೂಡಿ ಒಟ್ಟು ಏಳೆಂಟು ಸಲ ಬೀರ್ ಕುಡಿದು ಬಲ್ಲ. ಹೆಚ್ಚಿನದರ ಹೆಸರು ಗೊತ್ತಿತ್ತೇ ವಿನಾ ಅನುಭವ ವಿರಲಿಲ್ಲ. ಕಾರನ್ನು ಹೊರಗೆ ನಿಲ್ಲಿಸಿ ಒಳಗೆ ಆರಾಮವಾದ ಮೆತ್ತನೆಯ ಕುರ್ಚಿಯ ಮೇಲೆ ಕುಳಿತ. ಒಬ್ಬನೇ ಬಂದು ಕುಳಿತ ಇವನ ಹತ್ತಿರಕ್ಕೆ ಬಂದು ಬೇರರ್, 'ಏನು ಸಾರ್?' ಎಂದರೆ ತಕ್ಷಣ ಹೆಸರು ತಿಳಿಯದೆ, 'ಏನೇನಿದೆ?' ಎಂದು ಹೋಟ ಲಿನಲ್ಲಿ ಕೇಳುವಂತೆ ಕೇಳಿದ. ಅವನು, 'ಎಲ್ಲ ಇದೆ, ಸಾರ್' ಎಂದ. ಏನಾದ ರೊಂದು ಹೇಳಲೇಬೇಕು. ಆ ಕ್ಷಣಕ್ಕೆ ನೆನಪಿಗೆ ಬಂದ ವಿಸ್ಕಿ ಎಂಬ ಹೆಸರು ಹೇಳಿದ. ಅವನು ಸೋಡಾ ಮತ್ತು ಒಂದು ಬಾಟಲಿ, ಅದನ್ನು ತೆಗೆಯುವ ಪರಿ- ಕರಗಳನ್ನು ತಂದಿಟ್ಟು ಹೋದ.

ಬಾಟಲಿಯನ್ನು ಕೈಲಿ ಹಿಡಿದು ಶ್ರೀನಿವಾಸ ಅದರ ಮೇಲೆ ಬರೆದಿದ್ದುದನ್ನು ಓದಿಕೊಂಡ. ಇದು ಬೀರ್ ಅಲ್ಲ. ಬಹಳ ಜೋರಾಗಿ ಏರುತ್ತೆ. ಬುದ್ಧಿ ಸ್ತಿಮಿತ ತಪ್ಪಬಹುದು. ನಾನು ಇಲ್ಲಿಯೇ ಜ್ಞಾನತಪ್ಪಿ ಬೀಳಬಹುದು. ಅಥವಾ ಕಾರು ನಡೆಸುವಾಗ ಯಾವುದಕ್ಕಾದರೂ ಡಿಕ್ಕಿ ಹೊಡೆಸಿ ಸಾಯಿಸಬಹುದು ಎಂಬ

ಹೆದರಿಕೆಯಾಯಿತು. ಹತ್ತು ನಿಮಿಷ ಅನುಮಾನಿಸುತ್ತಾ ಕುಳಿತಿದ್ದ. ಬೇರರ್ ಹತ್ತಿರ ಬಂದು, 'ಏನಾದರೂ ಮಿಸ್ಟೇಕ್ ಇದೆಯಾ, ಸಾರ್?' ಎಂದು ಕೇಳಿದ.

'ಇದು ಬ್ಯಾಡ. ಒಂದು ಬಾಟಲ್ ಬೀರ್ ತಾ' – ಎಂದ.

ತನ್ನ ಮೀಸೆಯ ಒಳಗೇ ತಿರಸ್ಕಾರದಿಂದ ನಗುತ್ತಾ ಅವನು ಅದನ್ನು ಎತ್ತಿ ಕೊಂಡು ಹೋಗಿ ಬೀರನ್ನು ತಂದು ಇಟ್ಟ. ಅದನ್ನೇ ನಿಧಾನವಾಗಿ ಕುಡಿದು, ಏನೂ ಆಗಿಲ್ಲವೆಂಬ ಧೈರ್ಯ ಮಾಡಿಕೊಂಡ ಮೇಲೆ ಬಿಲ್ ಕೊಟ್ಟು, ಬೇರರ್‌ನಿಗೆ ಒಂದು ರೂಪಾಯಿ ಟಿಪ್ ಹಾಕಿ ಹೊರಗೆ ಬಂದು ಕಾರಿನಲ್ಲಿ ಕುಳಿತು ಸ್ಟಾರ್ಟ್ ಮಾಡಿದ. ಕಾರು ನಡೆಸುತ್ತಿದ್ದರೆ ಎಲ್ಲೋ ಸ್ವಲ್ಪ ಜೋಂಪಿನಂತೆ ಆಗುತ್ತಿತ್ತೇ ವಿನಾ ಹೆಚ್ಚಿನ ಪರಿಣಾಮವಾಗಿರಲಿಲ್ಲ. ದಾರಿಯಲ್ಲಿ ಒಂದು ಪಾನ್ ಅಂಗಡಿಯ ಹತ್ತಿರ ನಿಲ್ಲಿಸಿ ಏಲಕ್ಕಿ ಲವಂಗಗಳನ್ನು ಹೆಚ್ಚು ಹಾಕಿಸಿ ಎರಡು ಮಸಾಲೆ ಪಾನು ಕಟ್ಟಿಸಿ ತಿಂದು ಬಾಯಿಯ ವಾಸನೆ ಗೊತ್ತಾಗದಂತೆ ಮಾಡಿ ಮತ್ತೆ ಕಾರು ನಡೆಸಿಕೊಂಡು ಮನೆಗೆ ಬಂದ. ಒಳಗೆ ಪ್ರವೇಶಿಸಿದಾಗ ಯಾರೂ ಇರಲಿಲ್ಲ. 'ನಾನು ಊಟ ಮಾಡುಲ್ಲ. ನನ್ನ ಎಬ್ಬಿಸಬ್ಯಾಡಿ ಅಂತ ಅವ್ವಾರಿಗೆ ಹೇಳು' – ಎಂದು, ಮದುವೆಯಾದ ಮೇಲೆ ನಿಯಮಿಸಿಕೊಂಡಿದ್ದ ಆಳಿಗೆ ಹೇಳಿ ಸುಮ್ಮನೆ ಹೊದೆದುಕೊಂಡು ಮಲಗಿಬಿಡಲು ತನ್ನ ರೂಮಿಗೆ ಹೋಗುತ್ತಾನೆ: ಒಳಗೆ ಕುಮುದಿನಿ ಇದ್ದಾಳೆ. ತನ್ನ ಸೂಟ್‌ಕೇಸಿನಿಂದ ತೆಗೆದ ಸೀರೆಗಳನ್ನು ಗಾಡ್ರೆಜ್ ಬೀರುವಿನಲ್ಲಿ ಜೋಡಿಸಿ ಇಡುತ್ತಿದ್ದಾಳೆ. ಅವನ ಮೈ ಸೂಕ್ಷ್ಮವಾಗಿ ಬೆವರಿತು. ಹಾಗೆಯೇ ಮಂಚದ ಮೇಲೆ ಕುಳಿತುಕೊಂಡ. ಏನು ಮಾತನಾಡಬೇಕೆಂಬುದು ತಿಳಿಯಲಿಲ್ಲ. ಅವಳೂ ಮಾತನಾಡಿಸಲಿಲ್ಲ. ಕಂಡರೂ ಕಾಣದಂತೆ ಮುನಿಸಿ ಕೊಂಡು, ತನ್ನ ಸೀರೆಗಳನ್ನು ಕ್ರಮವಾಗಿ ಇರಿಸುವವಳಂತೆ ಬೀರುವಿನ ಕಡೆಗೆ ತಿರುಗಿ ನಿಂತಳು. ಹತ್ತು ನಿಮಿಷ ಹಾಗೆಯೇ ಕೂತಿದ್ದ ಅವನಿಗೆ ನುತ್ತು ಬರು ತ್ತಿತ್ತು. ಮಂಚದ ಕಟ್ಟಿಗೆ ಮಡಿಸಿ ಹಾಕಿದ್ದ ರಗ್ಗನ್ನು ಎಳೆದುಕೊಂಡು, ಹಾಕಿದ್ದ ಪ್ಯಾಂಟು ಬುಶ್‌ಶರಟುಗಳಲ್ಲಿಯೇ ಮಲಗಿ ಮುಸುಕು ಹಾಕಿಕೊಂಡ. ಕುಮು ದಿನಿ ಹತ್ತು ನಿಮಿಷ ಕಾಯ್ದಳು. ಹದಿನೈದು ನಿಮಿಷ ಕಾಯ್ದಳು. ಅಷ್ಟರಲ್ಲಿ ಅವಳಿಗೆ ಅಳು ಬಂದುಬಿಟ್ಟಿತು. ಮದುವೆಯಾದ ಇಷ್ಟು ದಿನದಲ್ಲಿ ಒಂದು ಸಲವೂ ಗಂಡ ತನ್ನನ್ನು ಹೀಗೆ ಉಪೇಕ್ಷೆ ಮಾಡಿರಲಿಲ್ಲ. ಇವತ್ತಿನ ಹಾಗೆ, ಕಂಡರೂ ಮಾತನಾಡಿಸದೆ ಮಲಗಿ ಮುಸುಕು ಹಾಕಿಕೊಂಡಿರಲಿಲ್ಲ. ಕೋಣೆಯ ಬಾಗಿಲು ಹಾಕಿಕೊಂಡು ಬಂದು ಅವನ ಪಕ್ಕದಲ್ಲಿ ಕುಳಿತು, ಹೊದೆದಿದ್ದ ರಗ್ಗನ್ನು ಕಿತ್ತು ಎಳೆದಳು. ಅವನು ಕಣ್ಣು ಬಿಟ್ಟ.

'ನೀವು ಕಾಗದ ಯಾಕೆ ಬರೀಲಿಲ್ಲ?' – ಎಂದು ಅವಳು ಕೇಳಿದಳು.

ತಕ್ಷಣ ಉತ್ತರ ಹೇಳಲು ಅವನಿಗೆ ತಿಳಿಯಲಿಲ್ಲ.

'ನೀವು ಕಾಗದ ಬರೀಲಿಲ್ಲ ಅಂತ ಮನಸ್ಸು ತಡೀದೇ ಹೊರಟು ಬಂದಿದೀನಿ. ನಮ್ಮ ತಂದೆ ಲೈಸನ್ಸಿಗೆ ಅಂತ ಹೊರಟಿದ್ದರು. ಅವರ ಜೊತೆ ಬಂದೆ. ಕಂಡರೂ ಯಾಕೆ ಮಾತಾಡಿಸಲಿಲ್ಲ?' – ಎಂದು ಬಿಕ್ಕಿ ಅತ್ತಳು.

'ಹುಶಾರಿರಲಿಲ್ಲ' – ಎಂದು ಬಾಯಿಬಿಟ್ಟ.

ತಕ್ಷಣ ಅವಳಿಗೆ ಗೊತ್ತಾಗಿಬಿಟ್ಟಿತು: 'ನೀವು ಕುಡಿದಿದೀರ.'

'ಸುಳ್ಳು.'

'ನಂಗೆ ಗೊತ್ತಾಗುತ್ತೆ. ಬೀರ್ ಕುಡಿದಿದೀರ. ವಾಸನೆ ಗೊತ್ತಾಗದೆ ಇರಲಿ ಅಂತ ಯಾಲಕ್ಕಿ ಲವಂಗದ ಪಾನ್ ಹಾಕ್ಕಂಡಿದೀರ. ನಿಜ ಹೇಳಿ. ನನ್ನಾಣೆ.'

'ಸುಳ್ಳು.'

'ನಂಗೆ ಅದರ ವಾಸನೆ ಗೊತ್ತಿದೆ. ನಮ್ಮ ತಂದೆಯೂ ಕುಡೀತಾರೆ. ನೀವು ಕುಡೀತೀರ ಅಂತ ನಂಗೆ ಗೊತ್ತಿರಲಿಲ್ಲ.'

'ಇವತ್ತೇ ಮೊದಲು ಕುಡಿದುದ್ದು.'

'ಯಾಕೆ ಹಾಗೆ ಮಾಡಿದಿರಿ?'

'ಬೇಜಾರು ತಡೆಯೂದು ಹ್ಯಾಗೆ?'

ಅವಳಿಗೆ ಕಣ್ಣು ತುಂಬಿಬಂತು. ಜೊತೆಗೆ ಅಷ್ಟು ಸಂತೋಷವೂ ಆಯ್ತು. ಅವನ ಕೈ ಹಿಡಿದುಕೊಂಡು ಎದೆಯ ಮೇಲೆ ಮುಖವಿಟ್ಟು ಹೇಳಿದಳು: 'ನಾನು ಎಂಟು ದಿನ ನಿಮ್ಮ ಜೊತೆ ಇಲ್ಲದೆ ಇದ್ದರೆ ಅಷ್ಟು ಬೇಜಾರಾ? ಇನ್ನು ಮೇಲೆ ಅದ ಮುಟ್ಟಲ್ಲ ಅಂತ ಆಣೆ ಮಾಡಿ' – ಎಂದು ಅವನ ಕೈಯನ್ನು ಹಿಸುಕಿದಳು.

ಅವನಿಗೆ ನೆನಪು ಬಂತು. ಚಂದ್ರಮುಖಿಯೂ ದೇವದಾಸನನ್ನು ಹೀಗೆಯೇ ಕೇಳುತ್ತಾಳೆ. ಎಂತಹ ಪ್ರೀತಿ ಅವಳದು! ಎರಡು ಕೈಗಳನ್ನೂ ಎತ್ತಿ ಕುಮುದಿನಿಯ ಮುಖವನ್ನು ಹಿಡಿದುಕೊಂಡು ನೋಡಿದ. ಚಂದ್ರಮುಖಿಯ ಪಾರ್ಟನ್ನು ವೈಜಯಂತಿಮಾಲಳ ಬದಲು ನರ್ಗೀಸ್ ಮಾಡಿದ್ದರೆ ಚನ್ನಾಗಿತ್ತು ಎನಿಸಿತು.

'ಇನ್ನು ಎಂದೂ ಕುಡಿಯುಲ್ಲ' – ಎಂದು ಅವಳ ಕೈಹಿಡಿದು ಹೇಳಿದ.

೨

ಮದುವೆಯಲ್ಲಿ ಮಗನಿಗೆ ಬಂದ ಕಾರು ಸೂಟುಗಳಲ್ಲಿ ಮಂತ್ರಿಗಳಿಗೆ ವಿಶೇಷವೇನಿಲ್ಲ. ತಮಗಿರುವ ಆಸ್ತಿಯಲ್ಲಿ ಸ್ವಂತಕ್ಕೆ ನಾಲ್ಕು ಕಾರು ಕೊಳ್ಳುವುದು ಅವರಿಗೆ ಎಂದೂ ಕಷ್ಟವಿರಲಿಲ್ಲ. ಆದರೆ ಹಾಗೆ ಖರ್ಚು ಮಾಡುವ ಅಭ್ಯಾಸವಿರ

ಲಿಲ್ಲ. ಬಸ್ಸಿನ ಲೈಸು ಮಾಡಿಸಿದವರು ತಾವೇ. ಹೊಸ ಬಸ್ಸುಗಳ ಮತ್ತು ಟ್ರಕ್ಕು ಗಳಿಗೆ ಹಣ ಕೊಟ್ಟಿರುವವರೂ ತಾವೇ. ಸೆಕಂಡ್‌ಹ್ಯಾಂಡ್ ಬಸ್ಸನ್ನು ಕೊಡಿಸಿ ದವರು ಮತ್ತು ಲೈನು ನಡೆಸುವ ಯೋಜನೆಯನ್ನು ಸೂಚಿಸಿದವರು ಮಾತ್ರ ಬೀಗರು. ಮೇಲ್ವಿಚಾರಣೆಯನ್ನು ಅವರು ನೋಡಿಕೊಳ್ಳುತ್ತಿದ್ದಾರೆ. ಶ್ರೀನಿವಾಸ ಅದರ ಬಗೆಗೆ ಎಷ್ಟು ಜೋಪಾನವಾಗಿರಬೇಕೋ ಅಷ್ಟು ಇಲ್ಲ. ಮದುವೆಯಾದ ಹೊಸತು; ನಾಕು ದಿನ ಕಳೆದ ಮೇಲೆ ಅವನೇ ವ್ಯವಹಾರಕ್ಕೆ ನಿಗಾ ಕೊಡುತ್ತಾ ನೆಂದು ಅವರು ಸುಮ್ಮನಾಗಿದ್ದರು. ಸೊಸೆ ಅತಿ ತೆಳವು ಎಂಬುದನ್ನು ಬಿಟ್ಟರೆ ಲಕ್ಷಣ, ಗೆಲುವು ಮತ್ತು ಅವಳು ಕನ್ನಡವನ್ನು ಶುದ್ಧವಾಗಿ ಆಡುವ ಬಗೆಗೆ ಅವರಿಗೆ ಹೆಮ್ಮೆ ಇತ್ತು. 'ಆ ಕರೀ ಮುಸುಡಿ ಮಾಡ್ಕಬೇಕು ಅಂತಿದ್ನಲ, ಈ ಬುದ್ಧಿ ಇಲ್ಲದ ಹೈದ' – ಎಂದುಕೊಂಡರು ಅವರು.

ನೆಂಟು ಬೆಳೆದು ಆರು ತಿಂಗಳಾದರೂ ಅವರು ಉಪಮಂತ್ರಿ ಸ್ಥಾನದಿಂದ ಸಂಪುಟ ಸಚಿವ ಮಟ್ಟಕ್ಕೆ ಬಡ್ತಿ ಪಡೆದಿಲ್ಲ. ಇದರಲ್ಲಿ ಬೀಗರ ತಪ್ಪೇನೂ ಇಲ್ಲ. ಕೆಂಪಣ್ಣನವರಿಗೆ ಅವರ ಕಡೆಯ ನಾಲ್ಕು ಜನ ಎಂ.ಎಲ್.ಎ.ಗಳ ಬೆಂಬಲ ಇದೆ. ಅಷ್ಟಿದ್ದವರು ತಾವೇ ಒಬ್ಬ ಉಪಮಂತ್ರಿಯಾಗಬೇಕಾಗಿತ್ತು. ಆದರೆ ಅವರಿಗೆ ಅದರಲ್ಲಿ ಆಸ್ಥೆ ಇಲ್ಲ. ಕಾರ್ಖಾನೆಗಳ ಆಡಳಿತ ಮಂಡಳಿಯ ಸದಸ್ಯತ್ವ, ಮೋಟಾರು ಲೈನುಗಳು, ಇಂಥವುಗಳಲ್ಲಿಯೇ ಅವರಿಗೆ ಇಷ್ಟ ಹೆಚ್ಚು. ತಮಗೆ ಏಳು ಜನದ ಬೆಂಬಲ ಇದ್ದೇ ಇದೆ. ಈಗ ಬೀಗರದೂ ಸೇರಿ ಹನ್ನೊಂದು + ತಮ್ಮ ದೊಂದು = ಹನ್ನೆರಡು. ಹನ್ನೆರಡು ಎಂ.ಎಲ್.ಎ. = ಒಬ್ಬ ಸಂಪುಟಸಚಿವರಾಗು ವುದಿಲ್ಲವೆ? ಉಳಿದ ಎಲ್ಲ ಸಂಪುಟ ಸಚಿವರಿಗೂ ಅಷ್ಟು ಬೆಂಬಲವಿದೆಯೆ? ಮಂತ್ರಿಮಂಡಲವನ್ನು ರಚಿಸಿದಾಗ ತಮಗಿದ್ದ ಅನುಯಾಯಿ ಸಂಖ್ಯೆಯ ಆಧಾರ ವನ್ನು ಈಗಲೂ ಲೆಕ್ಕ ಹಾಕುವುದು ಎಂತಹ ಅನ್ಯಾಯ! – ಎಂದುಕೊಂಡರು. ಈಗಾಗಲೇ ನಾಲ್ಕು ತಿಂಗಳಿಂದ ಆ ಬಗೆಗೆ ಸನ್ನಾಹ ನಡೆಯುತ್ತಿದೆ. ಮುಖ್ಯ ಮಂತ್ರಿಗಳಿಗೆ ಇಬ್ಬರಿಂದ ಪ್ರತ್ಯೇಕವಾಗಿ ಸೂಚನೆ ಕಳಿಸಿದ್ದಾರೆ. ಒಮ್ಮೆ ತಾವೇ ಖುದ್ದು ಮಾತನಾಡಿದ್ದಾರೆ. ಅವರು ಇಲ್ಲವೆಂದಿಲ್ಲ. ಖಂಡಿತ ಆಗಲಿ ಎಂದಿದ್ದಾರೆ. 'ಈಗ ನಿಮ್ಮ ದರ್ಜೆಯನ್ನು ಏರಿಸಬೇಕಾದರೆ ಈಗ ಮಾಡಿರುವ ಇಲಾಖೆಗಳ ವ್ಯವಸ್ಥೆಯಲ್ಲಿ ಅದಲು ಬದಲು ಮಾಡಬೇಕಾಗುತ್ತೆ. ತಮ್ಮ ಕೈಕೆಳಗಿರುವ ಇಲಾಖೆಯನ್ನು ಬಿಟ್ಟುಕೊಡುಕ್ಕೆ ಯಾರೂ ಇಷ್ಟಪಡುಲ್ಲ. ಅದಕ್ಕೆ ಹೊಸ ದೊಂದು ಇಲಾಖೆಯನ್ನೇ ಸೃಷ್ಟಿಸುತ್ತೇನೆ. ಈ ಸಲದ ಅಸೆಂಬ್ಲಿ ಕಳೆಯಲಿ. ಸ್ವಲ್ಪ ತಾಳಿ. ಇಲ್ಲದಿದ್ದರೆ ವಿರೋಧ ಪಕ್ಷದವರು ಅಸೆಂಬ್ಲಿಯಲ್ಲಿ ಗಲಾಟೆ ಮಾಡ್ತಾರೆ' – ಎಂದು ಭರವಸೆ ಕೊಟ್ಟಿದ್ದಾರೆ. ಈಗ ಅಸೆಂಬ್ಲಿ ಕಳೆದರೂ ಅವರು ಏನೂ ಮಾಡಿಲ್ಲ.

ತಾವು ಮೇಲೆ ಬಂದರೆ ಮುಂದೆ ಮುಖ್ಯಮಂತ್ರಿ ಪದವಿಗೆ ಬಾಯಿಬಿಡುತ್ತಿರುವವರಿಗೆ ತಾನು ಪ್ರತಿಸ್ಪರ್ಧಿಯಾಗ್ತೀನಿ ಅಂತ ಯಾರ್‍ಯಾರು ಅದರ ವಿರುದ್ಧ ಚೀಫ್ ಮಿನಿಸ್ಟರಿಗೆ ಹೇಳ್ತಿದಾರೋ! – ಎಂದುಕೊಂಡರು. ಆದರೆ ಪ್ರಯತ್ನವನ್ನು ಕಡಿಮೆ ಮಾಡಿಲ್ಲ. ಹನ್ನೆರಡು = ಏನು? – ಎಂಬುದನ್ನು ಗಟ್ಟಿಯಾಗಿ ಹಿಡಿದಿದ್ದಾರೆ.

ಮಗನ ಮದುವೆಗೆ ಮುನ್ನ ಜವಳಿ ಅಂಗಡಿಯಲ್ಲಿ ವೆಂಕಟರಮಣಜೋಯಿಸರ ಮಗಳನ್ನು ನೋಡಿದಾಗ ಎರಡು ಮೂರು ದಿನ ಅವರಿಗೆ ಮನಸ್ಸು ಕಸಿವಿಸಿಯಾಗಿತ್ತು. ಈ ಹುಡುಗಿ ಇಲ್ಲಿ ಯಾಕಿತ್ತು? ಕಾಲೇಜಿನಾಗೆ ಮೇಡಂ ಆಗಿದ್ದುದು ಜವಳಿ ಅಂಗಡಿಯಲ್ಲಿ ಯಾಕೆ ಚಾಕರಿ ಮಾಡ್ತಿದೆ? – ಎಂದುಕೊಂಡರು. ಮತ್ತೆ ಮೂರು ದಿನಗಳ ನಂತರ ಬೆಟ್ಟಯ್ಯನವರು ಸಿಕ್ಕಿದ್ದಾಗ ಆ ಮಾತು ತೆಗೆದರು.

'ಅವತ್ತಿನ ಬ್ಯಳಿಗ್ಗಿನಾಗೆ ನಾನ್ ಹ್ವಾಗಿದ್ದೆ. ಎಲ್ಲಾ ಇಚಾರಿಸ್ದೆ. ಶೂದ್ರ ಉಡುಗುನ್ನ ಲಗ್ನವಾಕ್ತೀನಿ ಅಂದಿದ್ದು ಕಾಲೇಜಿನೋರಿಗೆ ತಿಳೀತಂತೆ. ಬ್ರಾಂಬ್ರ ಕಾಲೇಜು ಅದು. ನಮ್ ಜಾತಿಗೆ ಅವಮಾನ ಮಾಡಿದ್ಲು ಅಂತ ಕೆಲಸದಿಂದ ತೆಗುದ್ರಂತೆ.'

ಮಂತ್ರಿಗಳು ಗಂಭೀರರಾಗಿ ಯೋಚಿಸಿದರು. ಅನಂತರ ಹೇಳಿದರು: 'ನೋಡಿದ್ರಾ, ಈ ಜಾತಿ ಯೋಗ್ತಿಯ? ನಾವೇ ಮೇಲು ಅಂತ ಎಷ್ಟಿದೆ ಅವರ ಹಾಂಕಾರ? ಇಂಥ ಕಾರಣಕ್ಕೆ ಹಿಂಗೆ ಮಾಡಿದ್ರು ಅಂತ ಸರ್ಕಾರಕ್ಕೆ ಒಂದು ಕಂಪ್ಲೇಂಟ್ ಕೊಡುಕ್ಕೆ ಹೇಳಿ ಆ ಹುಡುಗಿಗೆ. ಆ ಕಾಲೇಜಿಗೆ ಕೊಡ್ತಿರೂ ಗ್ರಾಂಟು ನಿಲ್ಲುಸ್ತೀನಿ.' ಮತ್ತೆ ಏನೋ ಜ್ಞಾಪಿಸಿಕೊಂಡು ಕೇಳಿದರು: 'ಆ ಕೆಲಸ ಹೋಯ್ತು. ಕಂಡೋನ ಅಂಗ್‌ಡೀಲಿ ಕೂಲಿ ಮಾಡಾಕೆ ಅವಳಪ್ಪನಿಗೇನು ಬಡತನ ಬಂದಿತ್ತಾ?'

'ಆಯುಸ್ಮನೇ ಊರಿಗೆ ಹ್ವಾಗಿಲ್ಲ. ನಂಗೆ ಹಿಂಗಾಗ್ಯದೆ ಅಂತ ಬರ್ರ್ದಾ ಇಲ್ಲ.'

'ಬರ್‍ದಿದ್ರೂ ಆ ವಯ್ಯ ತಿರುಗಿ ನೋಡ್ತಿರ್ನಿಲ್ಲ ಕಣ್ರೀ. ಆ ಜಾತಿ ಗುಣ ನಿಮಿಗ್ ಗೊತ್ತಿಲ್ಲ. ಅದ ಕಂಡೇ ನಾನು ಈ ಮದ್ವಿ ಬ್ಯಾಡ ಅಂದೆ. ನೋಡೀ, ನೀವು ಆಶ್ರಮದಲ್ಲಿದ್ದೋರು, ನಾನೂ ಇದ್ದೋನು. ಮಹಾತ್ಮರೇನೋ ಯಲ್ಲಾ ಒಂದಾಗ್‌ಬೇಕು ಅಂದ್‌ರು. ನಾವೂ ಹಂಗಂತೀವಿ. ಆದರೆ ಮೇಲಿನೋರು ಒಪ್ತಾರೇನ್ರೀ? ಅವರಿಂದಲೇ ಸಮಾಜ ಒಡೆದು ಚೂರುಚೂರಾಗಿರೂದು.'

ಹತ್ತು ನಿಮಿಷದ ನಂತರ ಯೋಚಿಸಿ ಹೇಳಿದರು: 'ಆಯ್ತು. ಅವರು ಸಣ್ಣ ಬುದ್ಧಿ ಮಾಡಭೌದು. ಆದರೆ ಆಶ್ರಮದಲ್ಲಿದ್ದ ನಾವು ಮಾಡಬ್ಯಾಡ್‌ದು. ಆ ಹುಡುಗೀಗೆ ಹೇಳಿ. ಸರ್ಕಾರಿ ಕಾಲೇಜಿನಾಗೆ ಕೆಲ್ಸ ಖಾಲಿ ಇದ್‌ರೆ ಅಪ್ಲಿಕೇಶನ್ ಹಾಕ್‌ಲಿ. ಇಲ್ದೆ ಇದ್ರೆ ಇನ್ಯಾವುದಾದ್ರೂ ಪ್ರೈವೇಟ್ ಕಾಲೇಜಿನಾಗಾದ್ರೂ ಸರಿ.

ನಾನು ಕೊಡುಸ್ತೀನಿ. ಬಡಮುಂಡೇದು, ಶೆಟ್ರ ಅಂಗ್ಡೀಲಿ ಕೂಲಿ ಮಾಡುತ್ತೆ.'

'ನಾನು ಹಂಗಂದೆ. ಎಲ್ಲಾರಾ ಬ್ಯಾರೆ ಕೆಲ್ಸ ಇದ್‌ರೆ ನಂಗೆ ಹ್ಯೇಳಿ, ನಾನು ಕೊಡುಸ್ತೀನಿ ಅಂದೆ. ನೀವು ಹ್ಯಂಗೆ ಕೊಡುಸ್ತೀರಿ? ಮೇಲಗಿರಿಗೌಡರಿಗೆ ಹೇಳಿ ಅಲ್ಲವೆ? ನಂಗೆ ಯಾವ ಕೆಲಸವೂ ಬ್ಯಾಡ. ಹಿಂಗೇ ಪೈನಾಗಿದೀನಿ ಅಂದ್‌ರು'– ಎಂಬ ಮಾತನ್ನು ಆಡಿದ ಮೇಲೆ ಬೆಟ್ಟಯ್ಯನವರಿಗೆ, ತಾವು ಅದನ್ನು ಹೇಳಬಾರದಾಗಿತ್ತು ಎನಿಸಿತು.

'ನಾವೇನ್ರಪ್ಪ ಮಾಡಾದು, ನೋಡಿದ್ರಾ ಹಾಂಕಾರಾನ?' – ಎಂದು ಮಂತ್ರಿಗಳು ಅವರಿಗೇ ನ್ಯಾಯ ಒಪ್ಪಿಸಿದರು.

ಬೆಟ್ಟಯ್ಯನವರು ಮಾತನಾಡಲಿಲ್ಲ. ಯಾವುದನ್ನಾದರೂ ಕೇಳಿ ಸುಮ್ಮನಿದ್ದುಬಿಡುವುದು ಅವರ ಸ್ವಭಾವ. ಅದು ಮಂತ್ರಿಗಳಿಗೂ ಗೊತ್ತು. ಮುಂದೆ ಏಳೆಂಟು ದಿನ ಮಂತ್ರಿಗಳ ಮನಸ್ಸಿನಲ್ಲಿ, ತಮ್ಮ ಊರಿನ ಆ ಬ್ರಾಹ್ಮಣ ಹುಡುಗಿಯ ಉದ್ಧಟತನವೇ ಕೊರೆಯುತ್ತಿತ್ತು. ವಿರೋಧಿಗಳು ತಮ್ಮನ್ನು ಧಿಕ್ಕರಿಸುವುದು ರಾಜಕೀಯದಲ್ಲಿರುವ ಅವರಿಗೆ ಹೊಸತೇನಲ್ಲ. ಆದರೆ ಈ ಹುಡುಗಿಯು ಹೀಗೆ ಅಂದದ್ದು ತಮಗೆ ಅಪಮಾನವೆನಿಸಿತು. ಆದರೆ ಮಾಡುವುದೇನು? ದಡ್ಡ ಹುಡುಗಿ. ತಿಳಿವಳಿಕೆಯಿಲ್ಲ. ಅದರ ಮ್ಯಾಲೆ ನಂದೇನು – ಎಂದುಕೊಂಡು ಸುಮ್ಮನಾದರು. ಅನಂತರ ಆ ಬಗೆಗೆ ಎಲ್ಲಾದರೂ ಮಾತು ಬಂದಾಗ ಆಡುತ್ತಾರೆ. ಇಲ್ಲದಿದ್ದರೆ ಆ ಯೋಚನೆಯೂ ಬರುವುದಿಲ್ಲ. ಬರಲು ಮನಸ್ಸಿಗೆ ವ್ಯವಧಾನವೂ ಇರಲಿಲ್ಲ.

ಈಗ ಅದೆಲ್ಲ ಮರೆತುಹೋಗಿದೆ. ರಾಜಕೀಯದಲ್ಲಿ ಬೆಳಗ್ಗೆದ್ದರೆ ಇಪ್ಪತ್ತೆಂಟು ಘಟನೆಗಳು ನಡೆಯುತ್ತಿರುತ್ತವೆ; ಹಳೆಯದಾಗುತ್ತವೆ. ಅಂತಹ ಸಾವಿರದಲ್ಲಿ ಇದೂ ಒಂದಾಗಿ ಹಳೆಯದಾಗಿ ಮುಸುಕಿಹೋಗಿದೆ. ಈಗ ಇರುವುದು ಒಂದೇ ಒಂದು ಪ್ರಶ್ನೆ: ತಾವು ಸಂಪುಟ ಮಟ್ಟದ ಸಚಿವರಾಗುವುದು ಹೇಗೆ? ಇನ್ನು ಒಂದು ವರ್ಷದಲ್ಲಿ ಪುನಃ ಚುನಾವಣೆ ನಡೆಯುತ್ತೆ. ಈಗ ಸಂಪುಟಸಚಿವರಾಗಿದ್ದರೆ ಮುಂದಿನ ಮಂತ್ರಿಮಂಡಲದಲ್ಲಿ ಅವಕಾಶ ಖಂಡಿತ, ಅದೂ ಸಂಪುಟ ಮಟ್ಟದಲ್ಲಿ. ಇಲ್ಲದಿದ್ದರೆ ಮುಂದೆ ಜಾಗವೇ ಇಲ್ಲವಾಗಬಹುದು. ಸಂಪುಟ ಮಟ್ಟದಲ್ಲಿದ್ದರೆ ಒಂದಲ್ಲೊಂದು ದಿನ ಮುಖ್ಯಮಂತ್ರಿಯ ಪದಕ್ಕೆ ಸ್ಪರ್ಧಿಸಬಹುದು. ಹನ್ನೆರಡು ಬೆಂಬಲಿಗರಿದ್ದೂ ಕಷ್ಟವಾಗುತ್ತಿದೆಯಲ್ಲ. ಇನ್ನೂ ಮೂರು ನಾಲ್ಕು ಜನರನ್ನು ಸಂಪಾದಿಸಬೇಕು; ಆದರೆ, ಹೇಗೆ? ಒಬ್ಬ ಹೊಸಬನನ್ನು ಸಂಪಾದಿಸಬೇಕೆಂದರೂ ಅವನನ್ನು ಮತ್ತೊಬ್ಬ ನಾಯಕನ ಜೇಬಿನಿಂದ ಕಸಿಯಬೇಕು. ಆಗ ಆ ನಾಯಕನ ವಿರೋಧ ಹುಟ್ಟುತ್ತೆ. ಇನ್ನೂ ಎರಡು ಮೂರು ಜನ ಗಂಡು ಮಕ್ಕಳಿರಬೇಕಾಗಿತ್ತು. ಚನ್ನಾಗಿ ಓದಿ ಫಾರಿನ್ ರಿಟರ್ನ್ಡ್ ಆಗಬೇಕಿತ್ತು.

ಸರಿಯಾದ ಕಡೆಗಳಲ್ಲಿ ಸಂಬಂದ ಹುಡುಕುತ್ತಿದ್ದೆ. ಒಂದು ಮದುವೆಗೆ ನಾಲ್ಕು ಎಂ.ಎಲ್.ಎ. ಸಪೋರ್ಟ್ ಅಂದ್ರೆ ಮೂರಕ್ಕೆ ಹನ್ನೆರಡು. ಹನ್ನೆರಡು+ಹನ್ನೆರಡು=ಇಪ್ಪತ್ತನಾಲ್ಕು=ಏನು? ಶುರೂನಲ್ಲಿ ಅಷ್ಟಿದ್ದರೆ ಅದನ್ನೇ ಬೆಳೆಸಿಕೊಂಡು ಮುಖ್ಯಮಂತ್ರಿಯಾಗುಕ್ಕೆ ಆಗುಲ್ಲವೆ?–ಎಂಬ ಕನಸು ಕಾಣುವುದು. ಆದರೆ ತಕ್ಷಣ ವಾಸ್ತವತೆಯ ಅರಿವಾಗಿ, ಇಲ್ಲದ್ದು ನೆನಸಿಕೊಂಡು ಲೆಕ್ಕಹಾಕಾದು ಬ್ಯಾಡ. ಈಗ ಇರೂದ್ರಲ್ಲಿ ಏನು ಮಾಡಬೇಕು, ಎಂದು ತಲೆ ಕೆರೆದುಕೊಳ್ಳುವರು. ಅಕ್ಬರ ರಾಜಪೂತರ ಮನೆ ಹುಡುಗೀರ ಮದುವೆಮಾಡ್ಕಂಡು ಜನಾನಾಕ್ಕೆ ತುಂಬಿ ತುಂಬಿಕಂಡೇ ಚಕ್ರಾಧಿಪತ್ಯ ಬೆಳೆಸಿದನಂತೆ. ಆದರೆ ಪ್ರಜಾಪ್ರಭುತ್ವ ಅಂದ್ರೆ ಮಾದ್ರಿಜೋದೀ ನನ್ಮಗನ ಶಿಷ್ಟಂ–ಎಂದು ಇತಿಹಾಸವನ್ನು ಹೋಲಿಸುವರು.

ಇದೇ ಸಮಯಕ್ಕೆ ಸರಿಯಾಗಿ ಊರಿನಿಂದ ಬಂದ ಅವರ ಹೆಂಡತಿ, ಒಂದು ಅವಲಕ್ಷಣದ ವರದಿ ಹೇಳಿದಳು. ಸೊಸೆಗೆ ಆರನೆಯ ತಿಂಗಳು ನಡೆಯುತ್ತಿತ್ತು. ಅವಳು ಬೇಗ ಬಸುರಿಯಾದರೆ ದೇವರಿಗೆ ಅಭಿಷೇಕ ಮಾಡಿಸ್ತೀನಿ ಅಂತ ರಂಗಮ್ಮ ಹರಕೆ ಮಾಡಿಕೊಂಡಿದ್ದಳಂತೆ. ಮದುವೆಯಾದ ಎರಡನೆಯ ದಿನ ಸೋಬನವಾಯಿತು–ಮುಂದೆ ಎರಡು ತಿಂಗಳಿಗೆ ಸೊಸೆ ಬಸುರಿಯೂ ಆದಳು. ಆದರೆ ಊರಿಗೆ ಹೋಗಿ ದೇವರ ಸೇವೆ ಮಾಡಿಸಲು ಆಗಿರಲಿಲ್ಲ. ಈಗ ಹೆಂಡತಿ, ಮಗ, ಸೊಸೆ, ಮೂವರೂ ಹೋಗಿದ್ದರು. ಮೂರು ಜನವೂ ದೊಡ್ಡ ಯಜಮಾನರ ಜೊತೆ ದೇವಸ್ಥಾನಕ್ಕೆ ಹೋಗಿದ್ದರಂತೆ. ಅಲ್ಲಿಗೆ ಬಂದ ಪೂಜಾರಿ ವೆಂಕಟರಮಣಯ್ಯ, 'ಈ ಗರ್ಭ ಉಳಿಯುಲ್ಲ, ಈ ಬೀಜ ಮೊಳೆಯುಲ್ಲ, ಈ ತಳಿ ಬೆಳೆಯುಲ್ಲ' ಅಂತ ಒಂದೇಸಮುಕ್ಕೆ ಶಾಪ ಹಾಕಿದನಂತೆ. ಅವನಿಗೆ ಮಂಕುಹಿಡಿದಿದೆ, ಈಗ ತೋಟದಲ್ಲೇ ಗುಡ್ಲು ಕಟ್ಟಿಕೊಂಡಿರ್ತಾನೆ–ಎಂದು ಮಂತ್ರಿಗಳು ಕೇಳಿದ್ದರು. ಈಗ ಹುಚ್ಚೇ ಹಿಡಿದಿದೆಯಂತೆ–ಎಂದು ಎಲ್ಲವನ್ನೂ ರಂಗಮ್ಮ ವಿವರಿಸಿದಳು. ಎಂಟು ದಿನದಲ್ಲಿ ಊರಿನಿಂದ ಇನ್ನೊಂದು ಸುದ್ದಿ ಬಂತು. ವೆಂಕಟರಮಣಯ್ಯ ಹೊಟ್ಟೆಗೆ ಕಲ್ಲು ಕಟ್ಟಿಕೊಂಡು ಕೆರೆಗೆ ಬಿದ್ದನಂತೆ. ಅವನಿಗೂ ಮಾದಿಗಿತ್ತಿ ಮಾತಂಗಿಗೂ ಬಹಳ ಮುಂಚೆ ಸಂಬಂಧವಿತ್ತಂತೆ. ಈಗ ಅವನಿಗೆ ಅವಳ ಹುಚ್ಚು ಹಿಡಿದಿತ್ತಂತೆ. ಮೋಹನದಾಸ ಅದನ್ನು ಹಿಡಿದು ಪಂಚಾಯ್ತಿ ಮಾಡಿಸ್ತೀನಿ ಅಂತ ಹೆದರಿಸಿದ್ದಕ್ಕೆ ಮರ್ಯಾದೆಗೆ ಅಂಜಿ ಜೀವ ಕಳ್ಕಂಡನಂತೆ. ಮೋಹನದಾಸನ ಮೇಲೆ ಕೇಸು ಹಾಕಿಸಲು ತಮ್ಮ ತಂದೆಯೇ ಮುಂದಾಳಾಗಿ ನಿಂತಿದ್ದರು. ಆದರೆ ವೆಂಕಟರಮಣಯ್ಯನ ಮಗಳೇ, ಅವನ ತಪ್ಪಿಲ್ಲ ಅಂತ ಹೇಳಿಕೆ ಕೊಟ್ಟಿದ್ದಳು. ಮಗನಿಗೆ ಏನೂ ಆಗದ ಹಾಗೆ ಮಾಡಿಸಲು ಬೆಟ್ಟಯ್ಯನವರು ತಮ್ಮ ಹತ್ತಿರ ಬಂದಿದ್ದರು. ಊರಿನಲ್ಲಿ ದೊಡ್ಡ ಯಜಮಾನರಿಗೆ ಬೇಕಾದ ಸಮಾ

ಥಾನ ಹೇಳಿ ಅವರು ತಾಲ್ಲೂಕ್ ಪೋಲೀಸ್ ಇನ್‌ಸ್ಪೆಕ್ಟರಿಗೂ ಸೂಚನೆ ಕಳಿಸಿದರು.

ಆ ಪೂಜಾರಿಗೆ ಇಷ್ಟು ವರ್ಷದ ಮ್ಯಾಲೆ ಯಾಕೆ ಆ ಕರೀ ಮಾದಿಗಿತ್ತಿಯ ಹುಚ್ಚು ಹಿಡೀತು? ಅವಳ ಹತ್ತಿರ ಏನಿದೆ ಅಂತ? ಮೊದಲು ತಾವೂ ಒಬ್ಬ ಮಾದಿಗಿತ್ತಿಯ ಮೈಯ ಉದ್ದ ಅಗಲಗಳನ್ನು ಅಳೆದು ನೋಡಿದ್ದವರೇ. ಅದು ಆಳುಗಳಿಗೂ ಗೊತ್ತು. ತುಮಕೂರಿನಿಂದ ತಾವು ತೋಟದ ಮನೆಗೆ ಹೋದರೆ ಅವರೆಲ್ಲ ತೋಟದಿಂದಲೇ ಹೊರಟುಹೋಗುತ್ತಿದ್ದರು. ಬಿದಿರುಮೆಳೆ ಕಡೆಯ ಬೇಲಿಯ ಸಂದಿನಿಂದ ಅವಳು ಬಂದು ಹೋಗುತ್ತಿದ್ದಳು. ಅವಳಂತೆಯೇ ಈ ಮಾತಂಗಿಯೂ ಇರಭೌದು, ಕಪ್ಪಗೆ ದಿಮ್ಮದಿಮ್ಮಗೆ. ಹೇಳಿ ಕೇಳಿ ಈ ಹಾರುವಯ್ಯ ಅವಳ ಮೋಹದಲ್ಲಿ ಬಿದ್ದ. ಹೆಂಡತಿ ಸತ್ತ ಮ್ಯಾಲೆ ಸುಖವಾಗಿ ಬ್ಯಾರೆ ಮದುವೆ ಮಾಡ್ಕಬಾರದಾಗಿತ್ತಾ, ಎಂದು ಯೋಚಿಸಿದರು. ಮೋಹನದಾಸ ಹೆದರಿಸಿರಬಹುದು. ಆ ಮಾದಿಗ ನನ್ಮಗ ಹೆದರಿಸ್ದ ಅಂತ ಈ ಪುಳಿಚಾರು ಹಾರುವಯ್ಯ ಜೀವ ಯಾಕೆ ಕಣ್ಕಾಬೇಕಾಗಿತ್ತು? ಸುಖ ಬೇಕು, ಧೈರ್ಯವಿಲ್ಲ – ಎಂದುಕೊಂಡರು.

ಬ್ರಾಹ್ಮಣ, ಅದೂ ಮನೆದೇವರ ಪೂಜಾರಿ, ಹೀಗೆ ಶಾಪ ನುಡಿದದ್ದಕ್ಕೆ ಹೆಂಡತಿ ರಂಗಮ್ಮ ಭಯಗೊಂಡಿದ್ದಾಳೆ. ಬೇರೆ ಬ್ರಾಹ್ಮಣರನ್ನೇ ಕರೆಸಿ, ಶಾಸ್ತ್ರ ಮಾಡಿಸಿ, ಬಿಡ್ತು ಅನ್ನಿಸಬೇಕು – ಎಂದು ಸಲಹೆ ಮಾಡುತ್ತಾಳೆ. ಇದಕ್ಕೆ ಇಷ್ಟು ಬೆದರುವ ಕಾರಣವು ಮಂತ್ರಿಗಳಿಗೆ ಕಾಣುತ್ತಿಲ್ಲ. ಆ ವಯ್ಯಂಗೆ ಹುಚ್ಚು ಹಿಡಿದಿತ್ತು. ಬಾಯಿಗೆ ಬಂದ ಹಂಗೆ ಸಿಕ್ಕಿಸಿಕ್ಕಿದೋರ್ನ ಬೈಯಾದೇ ಹುಚ್ಚರ ಗುಣ. ಬಸುರಿ ಹೆಂಗಸನ್ನ ನೋಡಿದ. ತಕ್ಷಣ ಬಸುರು, ಬೀಜದ ಮಾತು ತೆಗೆದುಕೊಂಡು, ನಾಶದ ಮಾತಾಡಿದ. ಅದಕ್ಕೆ ಯಾಕೆ ಹೆದರಬೇಕು? – ಎಂದು ಸಮಾಧಾನ ಹೇಳಿದರೆ ಹೆಂಡತಿ ಕೇಳುವುದಿಲ್ಲ. ಆಯಿತು, ಒಂದಿಬ್ಬರು ಹಾರುವರನ್ನ ಕರೆಸಿ ಶಾಸ್ತ್ರ ಮಾಡಿಸಾಣ. ಒಂದೊಂಬತ್ತು ಪಾವು ದಿನಸಿ, ನಾಕು ತೆಂಗಿನಕಾಯಿ, ಮೇಲೆ ಎರಡು ರೂಪಾಯಿ ಖರ್ಚಾಗಲಿ – ಎಂದರು.

೩

ದೇವಸ್ಥಾನಕ್ಕೆ ಹೋದ ಮೇಲೆ ಕುಮುದಿನಿ, 'ಯಾರು ಆ ಮುದುಕ?' – ಎಂದು ಅತ್ತೆಯನ್ನು ಕೇಳಿದಳು. 'ಈ ಗುಡಿಪೂಜೆ ಮಾಡ್ತಿದ್ರು. ಈಗ ಹುಚ್ಚು ಹಿಡಿದಿದೆ' – ಎಂದು ರಂಗಮ್ಮ ಹೇಳಿದಳು.

'ಅವರನ್ನ ಕರಕೊಂಡು ಹೋದ ಹುಡುಗಿ ಯಾರು?'

'ಆ ವಯಸ್ಸೋರ ಮಗಳು.'

'ಅದ್ಯಾಕೆ ಹಾಗೆ ಶಾಪ ಹಾಕಿದ್ರು?'

'ಬುದ್ಧಿ ಕೆಟ್ಟಯ್ತೆ. ಕಂಡಕಂಡೋರ್‍ನ್ನೆಲ್ಲ ಬೊಯ್ತದೆ.'

ಅಲ್ಲಿಗೆ ಅವಳು ಸುಮ್ಮನಾದಳು. ಶ್ರೀನಿವಾಸ ಪ್ರತ್ಯೇಕವಾಗಿ ಕಂಬದ ಹತ್ತಿರ ನಿಂತುಕೊಂಡ. ನೆನ್ನೆ ಊರಿಗೆ ಬಂದಾಗಿನಿಂದ ಅವನು ಒಂದು ಥರ ಮಂಕಾಗಿದ್ದ. ಈಗ ಗ್ರಹ ಬಡಿದವನಂತೆ ಆಗಿಬಿಟ್ಟಿದ್ದಾನೆ. ಅತ್ತೆ ರಂಗಮ್ಮ ಸೊಸೆಗೆ ಸಮಾಧಾನ ಹೇಳಿದರೂ, ತಾನೇ ಮನಸ್ಸಿನಲ್ಲಿ ಸಮಾಧಾನವಿಲ್ಲದವಳಾಗಿದ್ದಾಳೆ. ಮಂಗಳಾರತಿಯಾಗುವಾಗ ಕುಮುದಿನಿ, ದೇವರ ಥಳಥಳಿಸುವ ಬೆಳ್ಳಿಯ ಕಣ್ಣುಕಟ್ಟು ಮತ್ತು ಕಿರೀಟವನ್ನು ನೋಡಿದಳು. ಆ ಹುಚ್ಚುಬ್ರಾಹ್ಮಣ ಅಂದ ಕೆಟ್ಟ ಮಾತು ತನಗೆ ತಗುಲದಿರಲಿ ಎಂದು ಪ್ರಾರ್ಥಿಸಿಕೊಂಡಳು. ಶ್ರೀನಿವಾಸನೂ ದೇವರನ್ನು ನೋಡಿದ. ಅವನಿಗೆ ಭಯವಾಯಿತು. ಯಾವ ಕಾರಣಕ್ಕೆ ಎಂಬುದು ತಿಳಿಯಲಿಲ್ಲ. ಬೆಳ್ಳಿಯ ಚೊಂಬಿನ ಭರ್ತಿ ಕೊಟ್ಟ ಪಂಚಾಮೃತ ಮತ್ತು ತಟ್ಟೆಯಲ್ಲಿ ತುಂಬಿಕೊಟ್ಟ ರಸಾಯನಗಳನ್ನು ತೆಗೆದುಕೊಂಡು ಎಲ್ಲರೂ ಮನೆಗೆ ಬಂದರು.

ಶ್ರೀನಿವಾಸ ಊಟ ಮಾಡಿ ತನ್ನ ಪಾಡಿಗೆ ತಾನು ಮಹಡಿಗೆ ಹೋಗಿ ಮಲಗಿಕೊಂಡ. ರಂಗಮ್ಮನನ್ನು ಕಾಣಲು ಊರೊಳಗಿನ ದ್ಯಾವಕ್ಕ ಬಂದಿದ್ದಳು. ತಾನೂ ಮೇಲೆ ಹೋಗಿ ಗಂಡನ ಹತ್ತಿರ ಕೂರಲು ಕುಮುದಿನಿಗೆ ಸಂಕೋಚವೆನಿಸಿತು. ಅವರೇ ತನ್ನನ್ನು ಮಾತನಾಡಿಸಿಲ್ಲ. ಅಲ್ಲದೆ ಈ ಹಳ್ಳಿಯಲ್ಲಿ, ಹಗಲು ಹೊತ್ತಿನಲ್ಲಿ, ಗಂಡ ಮಲಗಿರುವ ಮಹಡಿಗೆ ಹೋಗಬಾರದೆಂಬ ತಿಳಿವಳಿಕೆ ಬೇರೆ. ಅಡಿಗೆಮನೆಯಲ್ಲಿಯೇ ಇದ್ದ ನಿಂಗಮ್ಮನ ಕೈಲಿ ಅವಳು ಮಾತಾಡುತ್ತಾ ಕುಳಿತಳು. ದೇವಸ್ಥಾನದ ಹತ್ತಿರ ನಡೆದ ಘಟನೆಯನ್ನು ತಿಳಿಸಿ, ಕೇಳಿದಳು: 'ನನ್ನೇ ಹಾಗನ್ನಬೇಕಾದರೆ ಅವರಿಗೆ ಏನು ದ್ವೇಷವಿತ್ತು?'

'ಅವರ ಮಗಳನ್ನ ಮಾಡ್ಕಳ್ಳಿಲ್ಲ ಅಂತ ಕ್ವಾಪ ಇರಬೈದು' – ಎಂದ ನಿಂಗಮ್ಮ, ತಕ್ಷಣ ನಾಲಿಗೆಯನ್ನು ಕಡಿದುಕೊಂಡಳು.

'ಯಾರು ಮಾಡ್ಕಳ್ಳಿಲ್ಲ ಅಂತ?' – ಅರ್ಥವಾಗದೆ ಕುಮುದಿನಿ ಕೇಳಿದಳು.

ನಿಂಗಮ್ಮ ಮಾತನಾಡಲಿಲ್ಲ. ಇವಳಿಗೆ ಅನುಮಾನವಾಯಿತು. ಬಲವಂತ ಮಾಡಿ ಕೇಳಿದಳು. ಅವಳ ಕೈಹಿಡಿದು, 'ಅತ್ತೆ, ನಿಮ್ಮಾಣೆ, ನಾನು ಯಾರ ಕೈಲೂ ಹೇಳುಲ್ಲ, ನಿಜ ಹೇಳಿ' – ಎಂದಳು. ಇಷ್ಟು ಚಂದವಾಗಿರುವ, ಬ್ರಾಹ್ಮಣ ಹುಡುಗಿಯಂತೆ ಮಾತನಾಡುವ, ಬಿಳೀ ಸಕ್ಕರೆಕಂಪನಿಯ ಮನೆಯ ಹುಡುಗಿ ಹೀಗೆ ತನ್ನ ಕೈಹಿಡಿದು ಕೇಳಿದ್ದರಿಂದ ನಿಂಗಮ್ಮನ ಮನಸ್ಸು ಇಳಿಬಿತ್ತು. ಶ್ರೀನಿವಾಸ

ಮತ್ತು ಪೂಜಾರಯ್ಯನವರ ಮಗಳ ವಿಷಯವಾಗಿ ಎಲ್ಲವನ್ನೂ ಹೇಳಿಬಿಟ್ಟಳು. ತಾಳ್ಮೆಯಿಂದಿರಬೇಕೆಂದು ಎಷ್ಟೇ ಯತ್ನಿಸಿದರೂ ಕೇಳುಕೇಳುತ್ತಾ ಕುಮುದಿನಿಗೆ ಅಳು ಬರುತ್ತಿತ್ತು. ಆದರೆ ನಿಂಗನ್ಮನ ಎದುರಿಗೆ ಅಳಬಾರದೆಂದು ತಡೆದು ಕೊಂಡಳು. ಸ್ವಲ್ಪದರಲ್ಲಿ ಮುಗಿಸಬೇಕೆಂದು ಆರಂಭಿಸಿದ ನಿಂಗಮ್ಮ, ಹೇಳು ಹೇಳುತ್ತಾ ತನಗೆ ತಿಳಿದುದ್ದನ್ನೆಲ್ಲ ಒರೆದಳು.

'ಅಷ್ಟು ಪ್ರೀತಿ ಇದ್ದೋರು ಇವರ್‍ಯಾಕೆ ಅವಳನ್ನೇ ಮಾಡ್ಕಳ್ಳಿಲ್ಲ?'

'ಇನ್ನೇನೋ ಮಾಡ್ಕ್ಯಬೇಕು ಅಂತಿದ್ದ. ರಂಗಪ್ಪ, ದೊಡ್ಡ ಗೌಡರು, ಸ ಗೌಡರು, ಜೋಯಿಸರಯ್ಯಾರ ಮಗ ಯಂಗ್‌ಟೇಶಯ್ಯಾರು, ಯಲ್ಲಾ, ಇದು ಅಲ್ಲದ ಕ್ಯಲ್ಸ ಅಂತ ಹ್ಯೇಳಿ ಒಪ್ಸಿದ್ರು. ನಂಗೆ ಮದುವೆಯೇ ಬ್ಯಾಡ ಅಂ ಮೈಸೂರಿಗೆ ಹ್ವಂಟೋಗಿದ್ದ.'

ಕುಮುದಿನಿ ಮುಂದೆ ಏನೂ ಕೇಳಲಿಲ್ಲ. ಅವಳಿಗೆ ಎಲ್ಲವೂ ಹೊಳೆದು ಹೋಯಿತು. ಆ ರಾತ್ರಿ ಅವರೆಲ್ಲ ತಿರುಮಲಾಪುರದಲ್ಲೇ ಇದ್ದರು. ಶ್ರೀನಿವಾಸ ರಾತ್ರಿ ಊಟದ ತನಕ ಕೆಳಗೆ ಬರಲಿಲ್ಲ. ಮದುವೆಗೆ ಮುಂಚಿನ ತನ್ನ ಪ್ರಿಯ- ತಮೆಯನ್ನು ಕಂಡು ಅವರು ಹೀಗಾಗಿದ್ದಾರೆಂದು ಅವಳು ಊಹಿಸಿದಳು. ಅವಳೂ ಬೆಂಗಳೂರಿನಲ್ಲೇ ಇದ್ದಾಳಂತೆ. ಅವರು ಆಗಾಗ್ಗೆ ಅವಳನ್ನು ಹೋಗಿ ಕಾಣುತ್ತಿರ ಬಹುದು. ಆದರೆ ಇವರು ಸದಾ ನನ್ನ ಜೊತೆಯೇ ಇರುತ್ತಾರಲ್ಲ. ಬಸ್ ಮತ್ತು ಲಾರಿಗಳ ಲೆಕ್ಕ ನೋಡಲು ತುಮಕೂರಿಗೆ ಹೋಗುವಾಗಲೂ ಎಷ್ಟೋ ದಿನ ನನ್ನನ್ನೂ ಜೊತೆಗೆ ಕರೆದುಕೊಂಡು ಹೋಗುತ್ತಾರಲ್ಲ, ಎಂಬ ನೆನಪು ಬಂದರೂ ಸಂಶಯ ಮಾತ್ರ ಹೋಗಲಿಲ್ಲ. ರಾತ್ರಿ ಅವನು ಮಲಗಲು ಮಹಡಿಯ ಮೇಲೆ ಹೋದ. ಮೆಟ್ಟಲು ಹತ್ತಲು ತನ್ನ ಕೈಲಾಗುವುದಿಲ್ಲವೆಂದು ಹೇಳಿ ಅವಳು ಕೆಳಗೇ ಮಲಗಿದಳು. ಹೆಂಡತಿ ಬರದಿದ್ದುದರಿಂದ ವ್ಯಾಕುಲನಾಗಿ ಸೂಕ್ಷ್ಮವನ್ನು ವ್ಯಕ್ತ ಪಡಿಸುವುದಕ್ಕಾದರೂ ಅವನು ಕೆಳಗೆ ಸುಳಿಯಲಿಲ್ಲ.

ಬೆಳಗ್ಗೆ ಮೂವರೂ ಕಾರಿನಲ್ಲಿ ಬೆಂಗಳೂರಿಗೆ ಹೊರಟರು. ತನ್ನ ಮದುವೆಯಲ್ಲಿ ಕೊಟ್ಟಿದ್ದ ಶವರ್ಲೆಯನ್ನು ಗಂಡ ನಡೆಸುತ್ತಿದ್ದ. ಅವಳು ಅತ್ತೆಯೊಡನೆ ಹಿಂದಿನ ಸೀಟಿನಲ್ಲಿ ಕುಳಿತಳು. ಆದರೆ ಊರಿಗೆ ಬರುವಾಗ ಅವನ ಪಕ್ಕದಲ್ಲಿ ತಾನು ಕುಳಿತು ತನ್ನ ಎಡಬದಿಗೆ ಅತ್ತೆಯನ್ನು ಕೂರಿಸಿಕೊಂಡಿದ್ದಳು. ಈಗ ಯಾಕೆ ಈ ಬದಲಾವಣೆ ಎಂದು ಅವನೂ ಕೇಳಲಿಲ್ಲ. ಅತ್ತೆಗೆ ಅಷ್ಟು ಸೂಕ್ಷ್ಮ ತಿಳಿಯಲಿಲ್ಲ. ಬಸುರಿ ಹುಡುಗಿ ಕೈಕಾಲು ಚಾಚಲು ಜಾಗವಿರಲಿ ಎಂದು ಇಲ್ಲಿ ಕೂತಿದಾಳೆ– ಎಂದುಕೊಂಡಳು.

ಸ್ವಲ್ಪವೂ ಕುಲುಕದೆ, ತುಂಬಿದ ಬಸುರಿಗೆಂದೇ ಹೇಳಿ ಮಾಡಿಸಿಕೊಟ್ಟಂತಹ

ಶವರ್ಲೆ ಕಾರು ನಡೆಯುತ್ತಿತ್ತು. ಕುಮುದಿನಿ ಇದುವರೆಗೂ ಗಂಡನನ್ನು ಎಷ್ಟೊಂದು ಪ್ರೀತಿಸುತ್ತಿದ್ದಳು! ತಾನು ಕಥೆ ಕಾದಂಬರಿಗಳಲ್ಲಿ ಓದಿದ್ದ, ಸಿನಿಮಾ ಗಳಲ್ಲಿ ನೋಡಿದ್ದ ನಾಯಕರ ಪ್ರೇಮವೆಲ್ಲ ತನ್ನ ಗಂಡನಲ್ಲಿ ಒಟ್ಟುಗೂಡಿದೆ ಎಂದು ಭಾವಿಸಿದ್ದಳು. ತಾನು ಎಂಟು ದಿನ ಊರು ಬಿಟ್ಟು ಹೋದರೆ, ಒಬ್ಬನೇ ಇರಲಾರದೆ ಬೀರ್ ಕುಡಿದ ಗಂಡನ ಮೇಲೆ ಅವಳ ಪ್ರೀತಿಯು ಶತಗುಣಗೊಂಡಿತ್ತು. ಇದುವರೆಗೂ ಪರಮನಾಯಕನಾಗಿದ್ದ ಅವನು ಈಗ ಅವಳ ಮಟ್ಟಿಗೆ ಮೋಸಮಾಡಿದ ಖಳನಾಯಕನಂತೆ ಕಾಣುತ್ತಿದ್ದಾನೆ. ಅವಳೇನು ಹಳ್ಳಿಯವಳಲ್ಲವಾದುದರಿಂದ ಮದುವೆಯ ಸಂಜೆಯೇ ಗಂಡನೊಡನೆ ಮಾತನಾಡಿದ್ದಳು. ನಾಚುತ್ತಾ ನಾಚುತ್ತಾ ಕಿವಿಯನ್ನು ಕೆಂಪಗೆ ಮಾಡಿಕೊಂಡು ಅವನೇ, 'ನಿಮಗೆ ಮದುವೆ ಇಷ್ಟ ವಾಯ್ತಾ?' ಎಂದು ಕೇಳಿದ್ದ. 'ನಿಮಗೆ ಆಗಿದ್ದರೆ ನಾನು ಧನ್ಯೆ' – ಎಂದು ಅವಳು ಹೇಳಿದ್ದಳು. ಹೇಳಿದ ಮೇಲೆ ಸಮಯಕ್ಕೆ ಸರಿಯಾಗಿ ಎಷ್ಟು ಒಳ್ಳೆಯ ವಾಕ್ಯ ಜ್ಞಾಪಕಕ್ಕೆ ಬಂತು! ಹೀಗಿರಬೇಕು ಸಂಭಾಷಣೆ ಎಂದುಕೊಂಡಳು. ಎರಡನೆಯ ದಿನ ಪ್ರಸ್ತವಾಯಿತು. ತಮ್ಮ ಜಾತಿಯ ಪದ್ಧತಿ ಎಂದರೆ ಮದುವೆ ಯಾದ ಮೇಲೆ ಕಾರುಹಬ್ಬದ ತನಕ ಹೆಂಡತಿ ತೌರಿನಲ್ಲೇ ಇರಬೇಕು. ಕಾರು ಹಬ್ಬಕ್ಕೆ ಅಳಿಯ ಅತ್ತೆಯ ಮನೆಗೆ ಬಂದಾಗ ಜೊತೆ ಬಿಡುತ್ತಾರೆ. ಆದರೆ ತಮ್ಮ ಮನೆಯಲ್ಲಿ ಎಲ್ಲವೂ ಬ್ರಾಹ್ಮಣರಂತೆಯೇ. ಧಾರೆಯ ಮರುದಿನವೇ ಪ್ರಸ್ತ. ಆದರೆ ಮರುದಿನ ಬ್ರಾಹ್ಮಣ ಮುತ್ತೈದೆಯರನ್ನು ಕರೆಸಿ ಹೂವೀಳ್ಯ ಶಾಸ್ತ್ರ ಮಾಡಿದು ದರಿಂದ ಅದರ ಮರುದಿನ ಇಟ್ಟಿದ್ದರು. ಹೂವೀಳ್ಯ ಶಾಸ್ತ್ರದ ದಿನ ಅವಳು, ಎರಡು ಸಲ, ಗಂಡ ಇದ್ದ ಮಹಡಿಯ ಮೇಲಿನ ರೂಮಿಗೆ ಹೋಗಿ ಕಾಫಿ ತಿಂಡಿ ಕೊಟ್ಟು ಅರ್ಧ ಅರ್ಧ ಗಂಟೆ ಕೂತು ಮಾತನಾಡಿ ಬಂದಿದ್ದಳು. ಅವರ ತಟ್ಟೆ ಯಲ್ಲೇ ತಾನೂ ತಿನ್ನಬೇಕೆಂದು ಅವರು ಕೈಹಿಡಿದು ಆಗ್ರಹ ಮಾಡಿದ್ದರು.

ಬ್ರಾಹ್ಮಣರಂತೆಯೇ, ಅವರಿಗಿಂತ ಹೆಚ್ಚು ಅದ್ದೂರಿಯಿಂದ ಪ್ರಸ್ತದ ಕೋಣೆ ಯನ್ನು ಅಲಂಕರಿಸಿದ್ದರು. ತೇಗದ ಮಂಚ, ರೇಷ್ಮೆಯ ಹಾಸಿಗೆಗಳನ್ನು ಬೆಂಗಳೂರಿನಿಂದ ಮಾಡಿಸಿ ತರಿಸಿದ್ದರು. ನಾಗಮಂಗಲ, ಬೆಳ್ಳೂರು, ಕೊಡಿಯಾಲ, ಮಂಡ್ಯಗಳ ನಾಟಕ ಸೆಟ್ಟುಗಳನ್ನು ಮಾಡಿ ಸೀನರಿ ಬರೆದು ಹೆಸರುವಾಸಿಯಾಗಿದ್ದ ವೀರಭದ್ರಾಚಾರಿಯನ್ನೇ ಕರೆಸಿ ಪ್ರಸ್ತದ ಕೋಣೆಯನ್ನು ಅಲಂಕರಿಸಿದ್ದರು. ಜೋಯಿಸರು ಮಂತ್ರ ಹೇಳಿ ಮುತ್ತೈದೆಯರು ಮೇಲೆ ಕರೆದುಕೊಂಡು ಹೋಗಿ ತನ್ನನ್ನು ಗಂಡನೊಡನೆ ಮಂಚದ ಮೇಲೆ ಕೂರಿಸಿ ಆರತಿ ಮಾಡಿ ಆ ದೊಡ್ಡ ಹಾಲಿನ ಬಾಗಿಲು ಎಳೆದುಕೊಂಡು ಹೊರಗೆ ಹೋದಾಗ ಅವಳು ಸುತ್ತ ಕಣ್ಣಾಡಿಸಿ ನೋಡುತ್ತಾಳೆ: ತಾನು ದಿನವೂ ನೋಡುತ್ತಿದ್ದ ಮಹಡಿಯ ಹಾಲನ್ನು

ವೀರಭದ್ರಾಚಾರಿ ರತಿಭವನವನ್ನೇ ಮಾಡಿದ್ದಾನೆ. ಅವನನ್ನು ಮಯ ಎಂದು ನಾಟಕ ರಸಿಕರು, ತನ್ನ ತಂದೆ ಸಹ, ಕೂಗುತ್ತಿದ್ದುದು ನಿಜ ಎನ್ನಿಸಿತು. ಅದೆಂತಹ ಮರ, ಬಳ್ಳಿ, ಹೂವು, ಕಾರಂಜಿಗಳ ಚಿತ್ರಗಳು! ಅವತ್ತಿನ ಬೆಳಗ್ಗೆ ಮೈಸೂರಿನಿಂದ ಒಂದು ನೂರು ರೂಪಾಯಿಯ ಮಲ್ಲಿಗೆಯ ಹೂವು ಬಂದಿದ್ದುದು ತನಗೆ ಗೊತ್ತಿತ್ತು. ಅದನ್ನು ಕಂಬ ತೊಲೆ ಮಂಚದ ಕಟ್ಟು ಮೊದಲಾದುವುಗಳಿಗೆ ಯಾವ ಯಾವ ಆಕಾರದಲ್ಲಿ ಕಟ್ಟಿ ಇಳಿಬಿಟ್ಟಿದ್ದಾನೆ!

ಶ್ರೀನಿವಾಸ ತನ್ನ ಕೈ ಹಿಡಿದು, 'ನನ್ನನ್ನು ಪ್ರೀತಿಸ್ತೀಯಾ, ಕುಮುದಾ?' ಎಂದು ಕೇಳಿದ.

'ನಿಮ್ಮ ಅಖಂಡ ಪ್ರೇಮ ನನ್ನದಾಗುವ ಭಾಗ್ಯ ನನಗಿದೆಯೆ?' –ಎಂದು ತಾನು ಕೇಳಿದೆ.

'ಯಾಕೆ ಹೀಗ್ ಕೇಳ್ತೀಯ? – ಅವರು ಅಂದರು.

'ದಾಸಿ ಯಾಚನೆ ಮಾಡ್ತಿದಾಳೆ' – ಎಂದಳು. ಮಾತಿನ ಈ ನಯ, ಈ ವೈಖರಿ ಅವರಿಗೆ ಎಲ್ಲಿ ಬರಬೇಕು! ಎರಡು ದಿನದಿಂದ ಮಾತನಾಡಿದ್ದುದರಿಂದಲೇ ಅವಳು ಅರ್ಥಮಾಡಿಕೊಂಡಿದ್ದಳು, ಅವರು ತನ್ನಷ್ಟು ಕಥೆ ಪುಸ್ತಕಗಳನ್ನು ಓದಿಲ್ಲ ಎಂದು.

'ಎಲ್ಲಾ ನಿನ್ನದೇ' – ಎಂದು ಅವರು ಹೇಳಿದರು. ಇಬ್ಬರೂ ಒಬ್ಬರ ಕೈಯನ್ನು ಒಬ್ಬರು ಹಿಡಿದು ಅಖಂಡ ಪ್ರೇಮದ ಬಗೆಗೆ ಆಣೆ ಮಾಡಿದರು.

ಪ್ರಸ್ತವಾಗಿ ಎಂಟು ತಿಂಗಳಾಗಿದೆ. ಆಗಿನಿಂದ ತಾವಿಬ್ಬರೂ ಎಷ್ಟು ದಿನ ಪರಸ್ಪರ ಪ್ರೇಮದ ಬಗೆಗೆ ಮಾತನಾಡಿಲ್ಲ! ತನ್ನಷ್ಟು ಚನ್ನಾಗಿ ಮಾತನಾಡಲು ಅವರಿಗೆ ಬರುವುದಿಲ್ಲ. ಆದರೆ ತಮ್ಮ ಅಖಂಡ ಪ್ರೇಮವನ್ನು ತನಗೆ ಅರ್ಪಿಸಿರುವುದಾಗಿ ಎಷ್ಟು ಸ್ಪಷ್ಟವಾಗಿ ಅವರು ಹೇಳಿರಲಿಲ್ಲ! ಆದರೆ ಎಲ್ಲವೂ ವಂಚನೆ, ಮೋಸ. ಪ್ರಪಂಚವೇ ಮೋಸ. ಗಂಡಸರೆಲ್ಲ ಕಪಟಿಗಳು. ಯಾರನ್ನೂ ನಂಬಬಾರದು. ಪ್ರೇಮದಲ್ಲಿ ನಿರಾಶಳಾದ ತಾನು ಪ್ರಾಣ ಕಳೆದುಕೊಳ್ಳಬೇಕು. ನನ್ನ ಬೆಲೆ ಏನು ಅನ್ನುವುದು ಸತ್ತಮೇಲೆ ಇವರಿಗೆ ಗೊತ್ತಾಗಬಹುದು.

ಗಂಡನ ಕೈಲಿ ಮಾತನಾಡಲೇಬಾರದೆಂದು ಅವಳು ನಿರ್ಧರಿಸಿಕೊಂಡಳು. ಆದರೆ ಬೆಂಗಳೂರು ತಲುಪಿ ವಿಶ್ರಾಂತಿಗೆಂದು ಮಂಚದಮೇಲೆ ಮಲಗಿದ್ದಾಗ ಅವನು ಅದೇ ಕೋಣೆಗೆ ಬಂದ. ತಕ್ಷಣ ಸಿಟ್ಟು ಉಕ್ಕಿತು. ಅವನ ತೋಳನ್ನು ಹಿಸುಕಿ ಹಿಡಿದು ಕೇಳಿದಳು: 'ನನಗ್ಯಾಕೆ ಹೀಗೆ ಅನ್ಯಾಯ ಮಾಡಿದಿರಿ? ಚಂಡಾಲರು ನೀವು?'

ಅವನಿಗೆ ಏನೂ ತಿಳಿಯಲಿಲ್ಲ. 'ನಾನೇನು ಮಾಡಿದೆ?' – ಎಂದ.

'ನೆನ್ನೆಯಿಂದ ನೀವು ಯಾವಳನ್ನ ಕುರಿತು ಯೋಚಿಸುತ್ತಿದೀರ ಹೇಳಿ. ಗೊತ್ತಾಗುತ್ತೆ' – ಎಂದಳು. ಅವನು ಅವಾಕ್ಕಾದ.

'ನೆನ್ನೆ ಆ ಮುದುಕ್ರನ್ನ ಕರಕೊಂಡು ಹೋದಳಲ್ಲ, ಅವಳನ್ನ ತಬ್ಬಿ ಹಿಡ ಕೊಂಡು ಸಮಾಧಾನಪಟ್ಟುಕೊತ್ತಿದೆ ಅಲ್ಲವೆ ನಿಮ್ಮ ಮನಸ್ಸು?'

ಶ್ರೀನಿವಾಸನಿಗೆ ತಕ್ಷಣ ಹೇಳಲು ಯಾವ ಉತ್ತರವೂ ತಿಳಿಯಲಿಲ್ಲ. ಅದು ಸುಳ್ಳು, ಅಥವಾ ನಿನಗೆ ಯಾರು ಹೇಳಿದರು ಇದೆಲ್ಲ, ಎನ್ನಲು ಸಹ ಮಾತು ತೋಚಲಿಲ್ಲ. ಅವನ ತೋಳನ್ನು ಅತ್ತ ನೂಕಿ ಮಂಚದ ಕಟ್ಟಿಗೆ ತಲೆ ಕೊಟ್ಟು ಅವಳು ಬಿಕಿಬಿಕ್ಕಿ ಅಳಲು ಪ್ರಾರಂಭಿಸಿದಳು. ಹತ್ತಿರ ಹೋಗಿ ಹೆಂಡತಿಯ ತಲೆ ಹಿಡಿದೆತ್ತಿ ಏನಾದರೂ ಸಮಾಧಾನ ಹೇಳಲೂ ಅವನಿಗೆ ತಿಳಿಯಲಿಲ್ಲ. ಸುಮ್ಮನೆ ನಿಂತುಬಿಟ್ಟ.

ಮರುದಿನ ಬೆಳಗ್ಗೆ ಎಂಟು ಗಂಟೆಗೇ ಮಂತ್ರಿಗಳು ಹೊರಗೆ ಹೋದರು. ಕುಮುದಿನಿ ಮಂಡ್ಯದ ತೌರುಮನೆಗೆ ಟ್ರಂಕ್‌ಕಾಲ್ ಮಾಡಿದಳು. ಅವಳ ತಂದೆಯೇ ಫೋನ್ ಎತ್ತಿಕೊಂಡಿದ್ದರು. 'ನಿಮ್ಮನ್ನು ನೋಡಬೇಕು ಅನ್ನಿಸಿದೆ' – ಎಂದಳು. ಚೊಚ್ಚಲು ಬಸುರಿಯನ್ನು ಆರನೆಯ ತಿಂಗಳಾದರೂ ಕರೆದುಕೊಂಡು ಹೋಗಲಿಲ್ಲವೆಂಬುದು ಅವರಿಗೆ ನೆನಪಾಯಿತು. ಹೆಂಡತಿ ಈಗಾಗಲೇ ನಾಲ್ಕು ಸಲ ಜ್ಞಾಪಿಸಿದ್ದ ಮಾತು ಅದು. 'ಇವತ್ತೇ ಬರ್ತೀನಿ ಅಮ್ಮಯ್ಯ' – ಎಂದು ಅವರು ಹೇಳಿದರು.

ಮೂರು ಗಂಟೆಯ ಹೊತ್ತಿಗೆ ಅವರು ಕಾರಿನಲ್ಲಿ ಬಂದಾಗ ಕುಮುದಿನಿ ಟ್ರಂಕ್‌ಕಾಲ್ ಮಾಡಿದ್ದ ಸುಳಿವು ಇವರ್‍ಯಾರಿಗೂ ಸಿಕ್ಕಲಿಲ್ಲ. ಅವರೂ ಅದನ್ನು ಹೇಳಲಿಲ್ಲ. ಆಫೀಸಿಗೇ ಹೋಗಿ ಬೀಗರನ್ನು ನೋಡಿಕೊಂಡು ಬಂದ ಕೆಂಪಣ್ಣ ನವರು ಬೀಗಿತ್ತಿ ಮತ್ತು ಅಳಿಯನಿಗೆ ಹೇಳಿದರು. ಮಗಳು ಸಿದ್ಧಳಾಗಿದ್ದಳು. 'ನೀವೂ ಬನ್ರಿ' – ಎಂದು ಅಳಿಯನಿಗೆ ಹೇಳಿ ಮಗಳೊಡನೆ ಹೊರಟುಹೋದರು.

ಶ್ರೀನಿವಾಸನ ಮನಸ್ಸಿಗೆ ಮೊನ್ನೆಯಿಂದ ಮಂಕು ಹಿಡಿದುಹೋಗಿದೆ. ಕಳೆದ ರಾತ್ರಿ ಒಂದೇ ಕೋಣೆಯಲ್ಲಿ ದೊಡ್ಡ ಮಂಚದ ಮೇಲೆ ಮಲಗಿದ್ದರೂ ಹೆಂಡತಿಗೆ ಸಮಾಧಾನ ಹೇಳಲು ಅವನಿಗೆ ತಿಳಿಯಲಿಲ್ಲ. ಅವಳೂ ಮಾತನಾಡದೆ ಅತ್ತ ತಿರುಗಿ ಮಲಗಿದ್ದಳು. ಈಗ ಅವಳು ಊರಿಗೆ ಹೋದಮೇಲೆ ಅವನಿಗೆ ತನ್ನ ತಪ್ಪಿನ ಅರಿವಾಗುತ್ತಿದೆ. ಒಂದು ಕಾಗದವನ್ನಾದರೂ ಬರೆಯಲೇ – ಎಂದು ಕೊಳ್ಳುತ್ತಾನೆ. ಕಾಗದವನ್ನು ಮೇಜಿನ ಮೇಲೆ ಇಟ್ಟುಕೊಂಡು ಕೈಲಿ ಪೆನ್ನು ಹಿಡಿದು ಕೂರುತ್ತಾನೆ. ಏನು ಬರೆಯಬೇಕೆಂದು ತಿಳಿಯುತ್ತಿಲ್ಲ. ಅವೆಲ್ಲ ಸುಳ್ಳು, ಆಗಹೋಗದ ಮಾತು, ನಮ್ಮ ಜಾತಿ ನಮ್ಮದು, ನಾನು ನಿನ್ನನ್ನಲ್ಲದೆ ಬೇರೆ

ಯವರನ್ನು ಎಂದೂ ಪ್ರೀತಿಸಿಲ್ಲ. ಈಗಲೂ ಹೇಳುತ್ತೇನೆ, ದೇವರಾಣೆ – ಎಂದು ಬರೆಯುವ ವಿಚಾರ ಬರುತ್ತದೆ. ಇದರಿಂದ ಅವಳಿಗೆ ಸಮಾಧಾನವಾಗ ಬಹುದು. ಆದರೆ ಬರೆಯಲು ಸಾಧ್ಯವಾಗುತ್ತಿಲ್ಲ. ಕೈ ತಡೆದಂತೆ ಆಗುತ್ತಿದೆ. ಪೆನ್ನಿಗೆ ಮುಚ್ಚಳ ಹಾಕಿಟ್ಟು ಮಂಚದ ಮೇಲೆ ಮಲಗುತ್ತಾನೆ. ಒಮ್ಮೊಮ್ಮೆ ಹೊರಗೆ ಹೋಗುತ್ತಾನೆ. ಹೊತ್ತು ಕಳೆಯಲು ಯಾವುದಾದರೂ ಸಿನಿಮಾಕ್ಕೆ ಹೋಗುತ್ತಾನೆ. ಮನೆಗೆ ಬಂದು ಮಲಗುತ್ತಾನೆ.

ಏಳೆಂಟು ದಿನ ಕಳೆಯಿತು. ಬೆಟ್ಟಯ್ಯನವರು ಮನೆಗೆ ಬಂದಿದ್ದರು. ಊರಿನಲ್ಲಿ ಸತ್ಯಳ ತಂದೆ ನೀರಿಗೆ ಬಿದ್ದು ಸತ್ತರಂತೆ. ಅವರಿಗೂ ಮಾದಿಗಿತ್ತಿ ಮಾತಂಗಿಗೂ ಹತ್ತು ಹದಿನೈದು ವರ್ಷದ ಹಿಂದೆ ಸಂಬಂಧವಿತ್ತಂತೆ. ಈಗ ಅವಳದೇ ಹುಚ್ಚು ಹಿಡಿದಿತ್ತಂತೆ. ಈ ಮಾತನ್ನು ಕೇಳಿದ ಅವನಿಗೆ ಅವರ ಮೇಲೆ ಇದ್ದಕ್ಕಿದ್ದಹಾಗೆಯೇ ತುಂಬ ಗೌರವ ಹುಟ್ಟಿಬಿಟ್ಟಿತು. ನಾನೂ ಹಾಗೆ ಹುಚ್ಚನಾಗಬೇಕು. ಈ ಪ್ಯಾಂಟು ಸಿಲ್ಕ್ ಶರಟುಗಳನ್ನು ತೆಗೆದುಹಾಕಿ ಒಂದು ತುಂಡು ದಟ್ಟಿ ಉಟ್ಟು ಬನಿಯ್ನೈಲಿ ಕಿರುಚಿಕೊಂಡು ಬೀದಿಯಲ್ಲಿ ತಿರುಗಬೇಕು. ನಮ್ಮೂರಿನ ದೇವಸ್ಥಾನದ ಹತ್ತಿರ ಮಣ್ಣಿನಲ್ಲಿ ಹೊರಳಬೇಕು – ಎನಿಸಿತು. ಅದೇ ಯೋಚನೆ, ಅದೇ ಕಲ್ಪನೆ ಮನಸ್ಸನ್ನು ಹಿಡಿದುಬಿಟ್ಟಿದೆ. ಬೇಸರವಾಗಿ ತಪ್ಪಿಸಿಕೊಳ್ಳಬೇಕೆಂದರೂ ಬಿಡುತ್ತಿಲ್ಲ. ಒಂದು ಸಿನಿಮಾಕ್ಕೆ ಹೋಗಿ ಬಂದ.

ಅದರ ಮರುದಿನ ಮಾವನವರು ಬಂದರು. ತಂದೆಯ ಕೈಲಿ ಮಾತನಾಡಿದರು. 'ನಿಮ್ಮ ಮಗ ಯಾವುದೋ ಬ್ರಾಹ್ಮಣ ಹುಡುಗೀನ ಮಾಡ್ಕಬೇಕು ಅಂತಿದ್ದನಂತೆ. ಅದು ಅವಳಿಗೆ ಗೊತ್ತಾಗ್ಯದೆ. ಭಾಳಾ ಕೊರಗ್ತಿದಾಳೆ. ನಿಮ್ಮ ಮಗನಾದರೂ ಬಂದು ಸಮಾಧಾನ ಮಾಡಬ್ಯಾಡ್ದಾ ಕೈಹಿಡಿದ ಹೆಂಡ್ತೀನ? – ಎಂದರು. ಬೀಗರು ಇದ್ದಕ್ಕಿದ್ದ ಹಾಗೆಯೇ ಬಂದು ಸೊಸೆಯನ್ನು ಕರೆದುಕೊಂಡು ಹೋದದ್ದು, ಹುಚ್ಚು ಹಿಡಿದ ಪೂಜಾರಿ ಊರಿನಲ್ಲಿ ಶಾಪಹಾಕಿದ್ದು, ಇವೆಲ್ಲವೂ ಮಂತ್ರಿಗಳ ನೆನಪಿಗೆ ಬಂತು. ಕೋಣೆಗೆ ಬಂದು ಮಗನನ್ನು ಬೈದರು. 'ನ್ಯಟ್ಟಗೆ ಹೆಂಡ್ತೀನ ಸಮಾಧಾನ ಮಾಡಾಕ್ ಬರಾದಿಲ್ಲ ಈ ಕಾಲದ ಹುಡುಗರಿಗೆ' – ಎಂದರು.

ಕೆಂಪಣ್ಣನವರು ಆ ದಿನ ಸಂಜೆಯ ತನಕ ಬೆಂಗಳೂರಿನಲ್ಲಿರಬೇಕಾಗಿತ್ತು. ಮಧ್ಯಾಹ್ನ ಊಟವಾದ ಮೇಲೆ ಶ್ರೀನಿವಾಸ ಕಾರು ನಡೆಸಿಕೊಂಡು ಹೊರಟ. ನಾಲ್ಕು ಗಂಟೆಯ ಹೊತ್ತಿಗೆ ಮಂಡ್ಯದಲ್ಲಿ ಅವರ ಮನೆಯನ್ನು ಮುಟ್ಟಿ ಒಳಗೆ ಹೋದಾಗ ಅತ್ತೆ ಮಾತನಾಡಿಸಿದರು. ಆದರೆ ಅರ್ಧ ಗಂಟೆಯಾದರೂ ಕುಮುದಿನಿ ಹೊರಗೆ ಬರಲಿಲ್ಲ. ಕೆಳಗಿನ ದಿವಾನ್‌ಖಾನೆಯ ಎದುರು ಕೋಣೆಯಲ್ಲಿ ಮಲಗಿದ್ದಳು. ಅಲ್ಲಿಗೇ ಹೋಗುವಂತೆ ಅತ್ತೆ ಹೇಳಿದಳು. ಶ್ರೀನಿವಾಸ ಒಳಗೆ ಹೋಗಿ

ದಿನ ಹಿಂತಿರುಗಿದ ಆಕೆ, 'ಅವ್ನ ಅಂತ ಮಕ ನೋಡದೆ ಬೊಯ್ತಾನೆ' ಎಂದು ಕಣ್ಣೀರು ಹಾಕಿದಳು.

ಕುಮುದಿನಿ ಪದೇ ಪದೇ ಅಂದಂತೆಯೇ ಆಯಿತು. ಆರು ತುಂಬಿ ಏಳನೆಯ ತಿಂಗಳು ನಡೆಯುತ್ತಿದ್ದಾಗ ಒಂದು ದಿನ ನೋವು ಕಾಣಿಸಿಕೊಂಡಿತು. ಡಾಕ್ಟರು ಬಂದರು. ತಕ್ಷಣ ಆಸ್ಪತ್ರೆಗೆ ಕರೆದೊಯ್ದು ಸೇರಿಸಿದರು. ಬೆಂಗಳೂರಿಗೆ ಟ್ರಂಕ್ ಕಾಲ್ ಹೋಯಿತು. ಆರೋಗ್ಯ ಸಚಿವರಿಗೆ ಫೋನ್ ಮಾಡಿ, ಅವರ ಮೂಲಕ ಒಬ್ಬ ತಜ್ಞ ಲೇಡಿ ಡಾಕ್ಟರನ್ನು ಕರೆದುಕೊಂಡು ಮಂತ್ರಿಗಳು ಪತ್ನೀಸಮೇತ ಮಂಡ್ಯಕ್ಕೆ ಹೋದರು. ಹೋಗುವ ಹೊತ್ತಿಗೆ, ಪೂರ್ತಿ ಬಲಿಯುವ ಮುನ್ನವೇ ಮಗು ಹೊರಬಂದು ಸತ್ತಿತ್ತು. ರಕ್ತಸ್ರಾವವನ್ನು ತಡೆಯಲಾರದೆ ಕುಮುದಿನಿ ಹೆಣಗುತ್ತಿದ್ದಳು. ಪ್ರಜ್ಞೆ ತಪ್ಪಿತ್ತು. 'ಬೆಂಗಳೂರಿಗೆ ಕರಕೊಂಡು ಹೋಗೋಣವೆ? ಮತ್ತೆ ನಾಲ್ಕು ಜನ ಡಾಕ್ಟರ್ನ ಕಳಿಸಿ ಅಂತ ಫೋನ್ ಮಾಡಲೆ?' – ಎಂದು ಇವರು ತಡಪಡಿಸಿದರು.

'ಈಗ ಏನೂ ಮಾಡುವಂತಿಲ್ಲ. ಉಳಿದರೆ ಅದೃಷ್ಟ. ಪ್ರಯತ್ನ ಮಾಡ್ತಿದೀವಿ' – ಎಂದು ಸ್ಥಳದ ಸರ್ಕಾರಿ ಆಸ್ಪತ್ರೆಯ ವೈದ್ಯರು ಹೊರಕ್ಕೆ ಹೇಳಿಕಳಿಸಿದರು. ಬೆಂಗಳೂರಿನ ಲೇಡಿ ಡಾಕ್ಟರು ಒಳಗೆ ಹೋದರು.

ಕುಮುದಿನಿ ಉಳಿಯಲಿಲ್ಲ. 'ಬಹಳ ವೀಕ್ ಕಾನ್ಸ್ಟಿಟ್ಯೂಶನ್ ಸಾರ್. ಇಂಥೋರಿಗೆ ಮೊದಲ ಹೆರಿಗೆ ಅಪಾಯವೇ' – ಲೇಡಿ ಡಾಕ್ಟರೇ ಹೇಳಿದರು.

ಹೇಳಿಕಳಿಸಿದರೂ ಶ್ರೀನಿವಾಸ ಬೆಂಗಳೂರಿಗೆ ಬರಲಿಲ್ಲ. ಮುಖ್ಯ ವಸ್ತುವೇ ಹೋದಮೇಲೆ ಅವನು ಬಂದು ಆಗಬೇಕಾದದ್ದೇನು ಎಂದುಕೊಂಡರೂ, ಅವನು ಮಂಡ್ಯಕ್ಕೆ ಹೋಗಿ, ಸತ್ತ ಹೆಂಡತಿಯನ್ನು ಜ್ಞಾಪಿಸಿಕೊಂಡು ಕಣ್ಣೀರು ಹಾಕಿ, ತಾನು ಅವಳನ್ನು ನಿಜವಾಗಿಯೂ ಅಕ್ಕರೆಯಿಂದ ಕಂಡಿದ್ದೆ, ತನ್ನದೇನೂ ತಪ್ಪಿಲ್ಲವೆಂದು ಅತ್ತೆ ಮಾವಂದಿರಿಗೆ ಮನದಟ್ಟು ಮಾಡಿಕೊಡಬೇಕೆಂದು ಮಂತ್ರಿಗಳ ಅಪೇಕ್ಷೆಯಾಗಿತು. ಆದರೆ ಇದನ್ನು ಅವನಿಗೆ ತಿಳಿಯಪಡಿಸುವುದು ಹೇಗೆ? ಸ್ವತಃ ಎದುರಿಗೆ ಹೋಗಿ ಅವಿಧೇಯತೆಯನ್ನು ಎದುರ್ಗೊಳ್ಳಲು ಅವರಿಗೆ ಇಷ್ಟವಿಲ್ಲ. ಒಂದು ಸಲ ಅವಿಧೇಯತೆಯ ಪ್ರಸಂಗಕ್ಕೆ ಅವಕಾಶ ಕೊಟ್ಟರೆ ಮುಂದೆ ಪದೇ ಪದೇ ಹಾಗೆ ನಡೆಯುವುದು ಅವನಿಗೆ ಸುಲಭವಾಗುತ್ತೆ. ಅವನ ತಾಯಿಯನ್ನೇ ಕಳಿಸಿದರೆ ಮತ್ತೆ ಬೈದು ಕಳಿಸಿಯಾನು. ಸೊಸೆಯ ತಿಥಿಕರ್ಮವನ್ನು ಮಂತ್ರಿಗಳು ತಮ್ಮ ಊರಿನಲ್ಲಿ ಮಾಡಲು ಏರ್ಪಾಟು ಮಾಡಿದರು. ಅದಕ್ಕೆ ಮಾತ್ರ ಮಗ ಊರಿಗೆ ಬಂದಿದ್ದ. ತಮ್ಮ ಕೈಲಿ ಮುಖ ಕೊಟ್ಟು ಮಾತನಾಡಲಿಲ್ಲ. ಮತ್ತೆ ತುಮಕೂರಿಗೆ ಹೊರಟುಹೋದ.

ಮಂತ್ರಿಗಳಿಗೆ ದೊಡ್ಡ ಯೋಚನೆ ಬಂತು. ಮಗಳು ಸತ್ತಳು ಎಂದರೆ ನಮ್ಮ, ನಮ್ಮ ಬಾಂಧವ್ಯ ಒಡೆದುಹೋಗಬೇಕೆಂದಿಲ್ಲ. ಆದರೆ ಮಗಳು ಇದ್ದಾಗ ಅವರಿಂದ ಸಿಕ್ಕುತ್ತಿದ್ದ ಜೋರಿನ ಸಪೋರ್ಟ್ಟ್ ಇನ್ನುಮೇಲೆ ಬರುವುದಿಲ್ಲ. ಮೊದಲು ಟ್ರಂಕ್‌ಕಾಲ್ ಮಾಡಿ ಹಿಂಗಲ್ಲ ಹಿಂಗೆ ಅಂದ್ರೆ, ಅವರು ಹಂಗೇ ಸರಿ ಅನ್ನುತ್ತಿದ್ದರು. ಉಳಿದ ಅವರ ಕಡೆಯ ಎಂ.ಎಲ್.ಎ.ಗಳೂ ಹೂಂ ಅನ್ನುತ್ತಿದ್ದರು. ಈಗ ಲೆಕ್ಕಾಚಾರ ಸಡಿಲಾಗಿದೆ. ಸದ್ಯದಲ್ಲೇ ಚೀಫ್‌ಗೆ ಒತ್ತಾಯ ತಂದು ಕೆಲಸ ಮಾಡಿಸಬೇಕು. ಆದರೆ ಚೀಫ್ ಪಾಕಡ ಮನುಷ್ಯ. ಪಾಕಡ ಇಲ್ಲದಿದ್ದರೆ ಚೀಫ್ ಹ್ಯಂಗೆ ಆಗ್ತಿದ್ದ? ಅವರ ಮಗಳೇ ಸತ್ತಮೇಲೆ ಅವರ ಕಡೆಯೋರ ಸಪೋರ್ಟ್ಟ್ ಇನ್ನು ಮುಂದೆ ಹಿಂಗೇ ಇರೂದಿಲ್ಲ ಅಂತ ಅರ್ಥ ಮಾಡ್ಕಂಡಿರ್ತಾನೆ. ಇದೇನು ಕೃಟ್ಟ ಗ್ರಾಚಾರ! ಸರಿಯಾಗಿ ಕುಂಡಲಿ ನೋಡಿಸಿ ಕೇಳಬೇಕು – ಎಂದುಕೊಂಡರು.

ಮಗನ ಭವಿಷ್ಯದ ಕಡೆಗೂ ಯೋಚನೆ ಹೋಯಿತು. ಅವನು ನಿಜವಾಗಿಯೂ ಹಾರುವಯ್ಯನ ಮಗಳ ಮೇಲೆ ಮನಸ್ಸು ಇಟ್ಟಿಬಿಟ್ಟವ್‌ನಾ? ಆ ಸಲಿ ಮಾಡಿದ ಹಂಗೆ ಈಗ ಅವನೂ ಅವಳೂ ರಿಜಿಸ್ಟರ್ ಮದುವೆ ಮಾಡ್ಕಂಡ್ರೆ ಮಾಡಾದೇನು? ಕಾನೂನು ಪ್ರಕಾರ ನಾನು ಏನೂ ಮಾಡೂ ಹಂಗಿಲ್ಲ. ನಾವಿಬ್ಬರೂ ಮೆಜಾರಿಟಿಗೆ ಬಂದಿದೀವಿ, ಯಾಕ್ರಿ ಮಾಡ್ಸಲ್ಲ ಅಂತ ಸಬ್‌ರಿಜಿಸ್ಟ್ರಾರನ್ನ ಕೇಳಿದ್ರೆ ಅವರು ಏನೂ ಮಾಡೂ ಹಂಗಿಲ್ಲ. ನನ್ನ ಮಗನೇ ಹಾರುವರ ಹುಡುಗೀನ ಕಟ್ಕೆಕಂಡ್‌ರೆ ರೈತ ಸಮಾಜದಲ್ಲಿ ನನ್ನ ಸ್ಥಾನವೇನು? ಮುಖಂಡರೆಲ್ಲ ಏನಂತಾರೆ? – ಎಂಬ ಪ್ರಶ್ನೆಗಳು ತಲೆತಿನ್ನುತ್ತಿದ್ದುವು.

ರಂಗಮ್ಮನ ಮನಸ್ಸಿನಲ್ಲಿ ಭಯ ಹುಟ್ಟಿದೆ. ಪೂಜಾರಯ್‌ನೋರ ಶಾಪ ನಿಜವಾಯ್ತು. ಈ ಗರ್ಬ ಉಳಿಯುಲ್ಲ ಅಂದ್‌ರು. ಈ ಬೀಜ ಮೊಳೆಯುಲ್ಲ ಅಂತಲೂ ಅಂದಿದ್ರಲ್ಲ. ಅಂದ್‌ರೆ ಮಲ್ಲೇಶನಿಗೆ ಮುಂದೆ ಮಕ್ಕಳೇ ಆಗಾಕಿಲ್ವೆ? ಅವನಿಗೆ ಇನ್ನೂ ಅಯ್ಯನೋರ ಮಗಳ ಮ್ಯಾಲೆ ಗ್ಯಾನ ಇದೆಯಾ? ಈಗ ಅವಳು ಊರಲ್ಲೇ ಅವ್‌ಳಂತೆ. ತ್ವಾಟದಾಗೆ ಅಪ್ಪ ಇದ್ದ ಗುಡ್ಸ ಜಾಗದಲ್ಲಿ ಮನೆ ಕಟ್ಟುಸ್ತಾ ಅವ್‌ಳಂತೆ. ಅಪ್ಪ ಅವಳಿಗೆ ಅರ್ದ ಜಮೀನು, ಮ್ಯಾಲೆ ಹದಿನೈದು ಸಾವಿರ ರೂಪಾಯಿ ಬರೆದು ಸತ್ತವ್ರಂತೆ. ಅವನು ಅವಳನ್ನ ಆದರೆ ದೇವರು ಸುಮ್ಮನಿರುತ್ತಾ? ಬಾಂಬ್ರ ಹುಡುಗಿ ಸ್ವಸೆಯಾಗಿ ಬಂದು ನಮ್ಮ ಎಂಜಲುಪಂಜಲು ಮುಟ್ಟಿದರೆ ಮನೆಗೆ ಒಳ್ಳೆದಾಯ್ತದಾ? ಅದೇಟಾದ್‌ರೂ ಮ್ಯಾಲೆ ಹರಿಯೂ ನೀರು. ಕಾಲುವೆ ನೀರು ಕಾಲುವೇಲಿ ಹರೀಬೇಕು. ಹಳ್ಳದ ನೀರು ಹಳ್ಳದಾಗಿರಬೇಕು. ಇದೇನು ಗ್ರಾಚಾರ ಹಿಂಗೆ ಬಂತು? ದೇವರಿಗೆ

ಅಬಿಸೇಕಾನಾದ್ರೂ ಮಾಡಿಸಬೇಕು. ಇವನಿಗೆ ಒಳ್ಳೇ ಬುದ್ಧಿ ಬಂದು ಅಪ್ಪಂತೋರ ಮನೆ ಹೆಣ್ಣು ತಂದ್ಕಂಡು ಮದುವೆಯಾಗಬೇಕು – ಎಂದು ಹರಕೆ ಕಟ್ಟಿದಳು.

ಕುಮುದಿನಿ ಸತ್ತ ಸುದ್ದಿ ಬಂದಾಗ ಶ್ರೀನಿವಾಸನ ಕಣ್ಣಿನಲ್ಲಿ ನೀರು ಬಂತು. ಅವನಿಗೇ ಆಶ್ಚರ್ಯವಾಯಿತು. ಅವಳು ಸಾಯುತ್ತಾಳೆಂದು ಅವನ ಅಂತಃ ಪ್ರಜ್ಞೆ ಹೇಳುತ್ತಿತ್ತು. ಆ ಹೇಳಿಕೆಯಿಂದ ತನಗೆ ದುಃಖವಾಗುತ್ತಿರಲಿಲ್ಲ. ಅನಂತರ ಸತ್ಯಳನ್ನು ಮದುವೆಯಾಗಬಹುದೆಂಬ ನೆಮ್ಮದಿಯನ್ನು ಮನಸ್ಸಿನಲ್ಲೇ ಬೆಳೆಸಿ ಕೊಂಡಿದ್ದ. ಆದರೆ ಅಂತಃಪ್ರಜ್ಞೆಯ ದನಿಯು ನಿಜವೇ ಆದಾಗ ತನಗೆ ದುಃಖ ವಾಗುತ್ತಿದೆ. ಸುಮಾರು ಒಂಬತ್ತು ತಿಂಗಳಲ್ಲಿ ತನ್ನ ಮನಸ್ಸು ಅವಳ ವಶ ವಾಗಿದೆ. ಅವಳ ಆಕರ್ಷಕ ಮುಖ, ಕಲಾತ್ಮಕ ವೇಷಭೂಷಣ, ಮೃದುವಾದ, ಎಂದೂ ಒರಟಿಲ್ಲದ ಮಾತುಗಳು ನೆನಪಿಗೆ ಬರುತ್ತಿವೆ. ಇಷ್ಟೆಲ್ಲ ಇದ್ದರೂ ನಾನೇಕೆ ಅವಳ ಸಾವನ್ನು ಬಯಸಿದೆ? ಅವಳು ಊರಿಗೆ ಹೋಗಿದ್ದಾಗ ಸತ್ಯಳ ಜ್ಞಾಪಕ ವೇಕೆ ಅಷ್ಟೊಂದು ಕಾಡಿತು ಎಂಬ ಪ್ರಶ್ನೆ ಬಂದಾಗ ಅವನಿಗೇ ಉತ್ತರ ತಿಳಿಯ ಲಿಲ್ಲ.

ಇನ್ನು ಈ ಬಸ್ ಮ್ಯಾನೇಜ್‌ಮೆಂಟಿಗೆ ಅವರ ಕಡೆಯ ಕರಿಯಪ್ಪ ಇಲ್ಲಿ ಹಾನೇ ದಿನ ಇರುವುದಿಲ್ಲ. ನಾನೇ ಬೇರೆ ಒಬ್ಬರನ್ನು ಗೊತ್ತು ಮಾಡಬೇಕು – ಎಂದುಕೊಂಡ. ಕುಮುದಿನಿಯ ಮದುವೆಯಲ್ಲಿ ಬಳುವಳಿಯಾಗಿ ಕೊಟ್ಟ ಶವರ್ಲೆ ಕಾರನ್ನು ನಡೆಸಿಕೊಂಡು ಬೆಂಗಳೂರಿಗೆ ಹೋದ. ಮಗ ತಾನಾಗಿಯೇ ಬಂದ ದ್ದನ್ನು ಕಂಡ ತಂದೆ ತಾಯಿಗೆ ಸಂತೋಷವಾಯಿತು. ಅವನು ಅಪ್ಪನಿಗೆ ಹೇಳಿದ: 'ಈ ಕಾರು ನಂಗೆ ಬ್ಯಾಡ. ಮಂಡ್ಯಕ್ಕೆ ಕಳಿಸಿಬಿಡಿ. ನಂಗೆ ಒಂದು ಬ್ಯಾರೆ ಅಂಬ್ಯಾ ಸಡರ್ ಕೊಡಿಸಿ.'

'ಮದುವೇಲಿ ಬಂದದ್ದನ್ನ ಅವರಿಗ್ಯಾಕೆ ಕೊಡಬೇಕು?' – ತಂದೆ ಕೇಳಿದರು.

'ನಂಗೆ ಬ್ಯಾಡ. ದುಡ್ಡು ಬ್ಯಾಂಕಿನಲ್ಲಿ ಬೇಕಾದಷ್ಟವೆ. ಕಾರು ಸಿಕ್ಕಬೇಕಾ ದರೆ ಕಾಯಬೇಕು. ನಿಮಗೆ ಕೊಡಿಸುಕ್ಕಾಗದೆ ಇದ್ರೆ ಬ್ಯಾಡ. ನಾನು ಸೈಕಲ್ ನಾಗೆ ತಿರುಗ್ತೀನಿ' – ಎಂದು ಹೇಳಿ ಊಟಕ್ಕೂ ನಿಲ್ಲದೆ ಹೊರಟುಹೋದ.

ಅವನ ತಂದೆ ಒಂದು ದಿನವೆಲ್ಲ ಯೋಚನೆ ಮಾಡಿದರು. ಕೊನೆಗೆ ಮಂಡ್ಯಕ್ಕೆ ಟ್ರಂಕ್‌ಕಾಲ್ ಮಾಡಿ ಬೀಗರ ಕೈಲಿ ಮಾತಾನಾಡಿದರು: 'ನೋಡಿ, ಆ ಕಾರು ನೋಡಿದ್ರೆ ಅವಳ ಗ್ಯಾಪಕ ಬರುತ್ತೆ, ನಂಗೆ ತಡೆಯುಕ್ಕಾಗುಲ್ಲ ಅಂತ ಕಣ್ಣೀರು ಹಾಕ್ತಾವ್ನೆ. ನಿಮಗೇ ವಾಪಸ್ ಕಳಿಸಿ ಅಂತ ಹಟ ಮಾಡ್ತಾವ್ನೆ. ಯಾರ ಕುಟ್ಟೆ ಕಳಿಸ್ಲಿ?'

'ಅದನ್ನ ನೋಡಿದ್ರೆ ನಮಗೆ ಕಣ್ಣಲ್ಲಿ ನೀರು ಬರುಲ್ವೆ? ದಾರಿ ಎರೆದುಕೊಟ್ಟ ಪದಾರ್ತ ನಾವು ಹ್ಯಂಗೆ ಇಸ್ಕಳಾಣ?'

'ಏನು ಮಾಡಾಣ ಹೇಳಿ, ಕರಳು ಕುಯ್ದು ಹಂಗೆ ಆಗ್ತಿದೆ ನಮಗೆಲ್ಲ' – ಎಂದು ಇವರು ಫೋನಿನಮೇಲೆ ತೋಡಿಕೊಂಡರು.

# ಹನ್ನೆರಡು

## ೧

ಗುಡಿಸಲಿದ್ದ ಜಾಗದಲ್ಲಿಯೇ ಸತ್ಯ ಒಂದು ಪುಟ್ಟ ಮನೆ ಕಟ್ಟಿಸಿಕೊಂಡಳು. ಎರಡಂಕಣದ ನಡುಮನೆ, ಎದುರಿಗೇ ಅಡಿಗೆಯ ಕೋಣೆ. ನಡುಮನೆಯ ಪಕ್ಕಕ್ಕೆ ಒಂದು ಕೋಣೆ. ಹಿಂಬದಿಯಲ್ಲಿ ಪ್ರತ್ಯೇಕವಾಗಿ ಆರು ಅಂಕಣವನ್ನು ಕಟ್ಟಿಸಿ, ನೇಗಿಲು ಮುಂತಾಗಿ ವ್ಯವಸಾಯದ ಉಪಕರಣಗಳನ್ನು ಇಡಲು, ದನ ಕಟ್ಟಲು ಮತ್ತು ಕೆಡವಿಸಿದ ತೆಂಗಿನಕಾಯಿ ತುಂಬಲು ಅಣಿಗೊಳಿಸಿದಳು. ಎರಡಕ್ಕೂ ಮಂಗಳೂರು ಹೆಂಚು ಹೊದೆಸಿದರೂ, ತೆಂಗಿನ ತೊಲೆ ತೀರುಗಳನ್ನು ಹಾಕಿ ಮಣ್ಣಿನ ಗೋಡೆ ಕಟ್ಟಿದ್ದುದರಿಂದ ಎಂಟು ಸಾವಿರದಲ್ಲಿ ಮುಗಿಯಿತು. ತನ್ನ ಪಾಲಿಗೆ ಉಳಿದ ಇನ್ನು ಒಂಬತ್ತೂವರೆ ಸಾವಿರ ರೂಪಾಯಿಗಳನ್ನು ಬ್ಯಾಂಕಿನಲ್ಲಿ ಇಟ್ಟುಕೊಂಡಳು. ವ್ಯವಸಾಯದ ಮೇಲ್ವಿಚಾರಣೆ ವೆಂಕಟೇಶ ನೋಡಿಕೊಳ್ಳುತ್ತಿದ್ದ. ಅವಳು ತನ್ನ ಕೈಲಾದಷ್ಟು ಕೆಲಸ ಮಾಡುತ್ತಿದ್ದಳು. ಇಷ್ಟು ಓದಿರುವ, ಇಷ್ಟು ಅನುಕೂಲವಾಗಿಯೂ ಇರುವ ಈ ಬ್ರಾಹ್ಮಣ ಹುಡುಗಿ ಹೀಗೆ ತೋಟದಲ್ಲಿ ವಾಸಿಸಿಕೊಂಡು ರೈತರ ಹೆಂಗಸರಂತೆ ಮಣ್ಣಿನಲ್ಲಿ ಕೆಲಸ ಮಾಡುವುದನ್ನು ಕಂಡು ತಿರುಮಲಾಪುರದವರಿಗೆ ಮಾತ್ರವಲ್ಲ, ಸುತ್ತ ಹಳ್ಳಿಗಳವರಿಗೆಲ್ಲ ಆಶ್ಚರ್ಯ. ಈ ಕಾರಣದಿಂದ ಸುತ್ತ ಹಳ್ಳಿಗಳಲ್ಲೆಲ್ಲ ಅವಳ ಹೆಸರು ಹರಡಿದೆ.

ಶ್ರೀನಿವಾಸನ ಹೆಂಡತಿ ಸತ್ತ ವರ್ತಮಾನ ಕೇಳಿದಾಗ ಅವಳಿಗೆ ಕೆಡುಕೆನಿಸಿತು. ಇದೇನು ಅಪ್ಪನ ಶಾಪವೇ? – ಎಂಬ ಸಂಶಯ ಅವಳಿಗೂ ಬಂತು. ತನಗೆ ಪೂರ್ಣ ವಿವರ ತಿಳಿಯದು. ಯಾರನ್ನಾದರೂ ಕೇಳಿ ತಿಳಿಯುವ ಮನಸ್ಸೇನೋ ಆಗುತ್ತಿತ್ತು. ಆದರೆ ಸಂಕೋಚ ಮತ್ತು ಅಭಿಮಾನಗಳಿಂದ ಅವಳು ಯಾರ ಸಂಗಡವೂ ಈ ವಿಷಯವಾಗಿ ಮಾತನಾಡುತ್ತಿರಲಿಲ್ಲ. ನನಗೆ ಸಂಬಂಧವಿಲ್ಲದ ಸಂಗತಿ ಇದು ಎಂದುಕೊಂಡು ಸುಮ್ಮನಿದ್ದುಬಿಡಲು ಯತ್ನಿಸುತ್ತಿದ್ದಳು.

ಅಪ್ಪ ಸತ್ತು ಐದು ತಿಂಗಳು ಕಳೆದಿತ್ತು. ಮರಗಳ ಮಧ್ಯೆ ಖಾಲಿ ಇದ್ದ ಜಾಗದಲ್ಲಿ ಹೊಸ ತೆಂಗಿನ ಸೊಸಿ ಹಾಕಿಸಲು ಅವಳು ಲೆಕ್ಕ ಹಾಕಿದಳು. ಒಟ್ಟು ಹದಿನಾರು ಸೊಸಿ ಕಟ್ಟಬಹುದಾಗಿತ್ತು. ಅವಳೇ ಗುದ್ದಲಿ ಹಿಡಿದು ಒಂದೊಂದಾಗಿ ಗುಂಡಿ ತೋಡುತ್ತಿದ್ದಳು. ಒಂದು ಮಧ್ಯಾಹ್ನ ಮೂರು ಗಂಟೆಯ ಹೊತ್ತಿನಲ್ಲಿ

ಗುಂಡಿ ತೋಡುತ್ತಿದ್ದಾಗ ಮೋಹನದಾಸ ತೋಟಕ್ಕೆ ಬಂದ. ಅವಳಿಗೆ ಆಶ್ಚರ್ಯ.

'ನಮಸ್ತೆ' – ಎಂದ ಅವನು, 'ತುಂಬ ಬಿಜಿ ಏನೊ?' – ಎಂದ.

'ಹೀಗೇ. ಕೂತ್ಕೊಳ್ಳಿ' – ಎಂದು ಅವಳು, ಹುಲ್ಲು ಬೆಳೆದಿದ್ದ ಬದುವನ್ನು ತೋರಿಸಿದಳು. ಬಿಳಿ ಪ್ಯಾಂಟು ಹಾಕಿದ್ದ ಅವನು ಅದರ ಮೇಲೆಯೇ ಕುಳಿತ.

'ನಾಲ್ಕೈದು ತಿಂಗಳಾಯ್ತಲ್ಲವೆ ನಿಮ್ಮನ್ನ ನೋಡಿ?' – ಸತ್ಯ ಸಹಜವಾಗಿ ಕೇಳಿದಳು.

'ನೀವು ನಂಗೆ ಉಪಕಾರ ಮಾಡಿದಿರಿ. ನಾನು ಥ್ಯಾಂಕ್ಸ್ ಹೇಳುಕ್ಕೆ ಸಹ ಬರಲಿಲ್ಲ. ಅಲ್ಲವೆ?'

'ಏನು ಉಪಕಾರ ಮಾಡಿದ್ದು?'

'ನಿಮ್ಮ ತಂದೆಯನ್ನ ನಾನು ಸಾಯಿಸ್‌ಲಿಲ್ಲ ಅಂತ ನೀವು ಹೇಳಿಕೆ ಕೊಟ್ಟಿರಲ್ಲ.'

'ಅದರಲ್ಲಿ ಉಪಕಾರವೇನು ಬಂತು? ನಿಜ ಹೇಳಿದೆ ಅಷ್ಟೆ.'

'ದಟ್ ಈಸ್ ರೈಟ್. ಯಾರ ದಯೆ ಕೇಳೂದಾಗ್ಲಿ ಉಪಕಾರ ತಗೋಳೂದಾಗ್ಲಿ ನಂಗೆ ಬೇಕಿಲ್ಲ.'

ಈ ಒರಟು ಮಾತನ್ನು ಕೇಳಿ ಸತ್ಯಳಿಗೆ ಬೇಸರವಾಯಿತು. ಸ್ವಭಾವತಃ ಇವನು ಒರಟನೆಂಬುದು ಅವಳ ತಿಳಿವಳಿಕೆಯಾಗಿತ್ತು. ಸಾಮಾನ್ಯ ಸೌಜನ್ಯದ ಜ್ಞಾನವೂ ಇಲ್ಲದೆ ಹೀಗೆ ವಿನಾಕಾರಣ ಕಾಲುಕೆರೆದುಕೊಂಡು ಜಗಳ ತೆಗೆಯುವ ಪ್ರವೃತ್ತಿಯನ್ನು ಕಂಡು ಸ್ವಲ್ಪ ರೇಗಿತು. ಈ ಮಾತನಾಡುವುದಕ್ಕೆ ಅವನು ಇಲ್ಲಿಗೆ ಬಂದಿದ್ದಾನೆಯೇ ಎಂಬ ಪ್ರಶ್ನೆ ಹುಟ್ಟಿದಾಗ, ಇಲ್ಲವೆನಿಸಿತು. ಎಂದಳು: 'ಅದು ಒಳ್ಳೆಯದು. ಯಾರಿಗಾದರೂ ಸ್ವಾವಲಂಬಿತನ, ಸ್ವಾಭಿಮಾನ ಇರ್ಬೇಕು.'

'ರೈಟ್, ನೀವು ನನ್ನ ಅಭಿಪ್ರಾಯ ಅರ್ಥಮಾಡ್ಕಂಡಿದೀರ' – ಎಂದು ಅವನು ಸಂತೋಷದಿಂದ ಹೇಳಿದ.

ಮತ್ತೆ ಮಾತನಾಡುವುದು ಹೇಗೆಂದು ಅವನಿಗೆ ತೋಚಲಿಲ್ಲ. ಆದುದರಿಂದ ಸುಮ್ಮನೆ ಕುಳಿತ. ಎರಡು ನಿಮಿಷವಾದರೂ ಇಬ್ಬರೂ ಮೌನವಾಗಿದ್ದರು. ಈ ಮುಜುಗರದ ಪರಿಸ್ಥಿತಿಯನ್ನು ಹೋಗಲಾಡಿಸಲು ಸತ್ಯಳೇ ಮಾತು ತೆಗೆದಳು: 'ವ್ಯಾಪಾರ ಹ್ಯಾಗೆ ನಡೀತಿದೆ?'

'ಚನ್ನಾಗಿದೆ. ಆದರಲ್ಲೂ ಕಾಂಪಿಟಿಶನ್ ಜಾಸ್ತಿ. ಹರಿಜನರಲ್ಲದೋರೂ ಚಪ್ಪಲ್, ಬೂಟು ವ್ಯಾಪಾರಕ್ಕೆ ಬರ್ತಿದಾರೆ.'

'ಬಂದರೆ ಏನು ತಪ್ಪು?'

'ಬರಲಿ. ಆದರೆ ನಾವು ಬೇರೆ ವ್ಯಾಪಾರದಲ್ಲಿ ಮುಂದುವರಿಯದ ಹಾಗೆ ತಡೀತಾರೆ.'

'ಹ್ಯಾಗೆ?'

'ನೇಟಿವ್ ಎಕ್ಕಡ ಕಮ್ಮಿಯಾಗ್ತಿದೆ. ಎಲ್ಲಾ ಕಂಪನಿ ಚಪ್ಪಲ್, ಚಡಾವ್, ಬೂಟುಗಳೇ ಬರ್ತಿವೆ. ಅವುಗಳ ಏಜೆನ್ಸೀನ ಮೇಲುಜಾತಿಯೋರು ತಗಾತಿ ದಾರೆ. ಮೊದಲಿನಿಂದ ನಮ್ಮ ಕೈಲಿದ್ದ ಎಕ್ಕಡ ಹೊಲಿಯೂ ಕೆಲಸ ಪ್ರಯೋಜ ನಕ್ಕೆ ಬರ್ತಿಲ್ಲ. ಆದರೆ ನಾವು ಜವಳಿ ಅಂಗಡಿ ಇಟ್ಟರೆ, ದಿನಸಿ ಅಂಗಡಿ ಇಟ್ಟರೆ, ಹೋಟೆಲಿಟ್ಟರೆ ಗಿರಾಕಿ ಬರುಲ್ಲ. ಬರದ ಹಾಗೆ ಇತರ ವ್ಯಾಪಾರಿಗಳೆಲ್ಲ ಪ್ರಚಾರ ಮಾಡ್ತಾರೆ. ಒಟ್ನಲ್ಲಿ ನಮ್ಮ ಬಡತನ ತಪ್ಪಲಿಲ್ಲ.'

'ಸರ್ಕಾರದೋರು ಜಮೀನು, ನೌಕರಿ, ಸ್ಕಾಲರ್‌ಶಿಪ್ ಕೊಡ್ತಿದಾರಲ್ಲ.'

'ದಾನ ಕೊಡ್ತಿದಾರೇನು? ಎಷ್ಟು ಸಾವಿರ ವರ್ಷದಿಂದ ದುಡಿದಿದೀವಿ ಈ ಭೂಮೀಲಿ! ಈಗ ಒಂದಿಷ್ಟು ರಿಯಾಯಿತಿ ಕೊಟ್ರೆ ಏನಾಯ್ತು? ಸರ್ಕಾರ ನೆಚ್ಚಿಕಂಡ್ರೆ ಆಗುಲ್ಲ. ನಾವು ಹಿಡ್ದು ಒದೀಬೇಕು.'

ಇಷ್ಟು ಮಾತನ್ನು ವಿಚಾರಪೂರ್ಣವಾಗಿ ಆಡುತ್ತಿದ್ದ ಇವನು ಈಗ ಇದ್ದ ಕ್ಕಿದ್ದ ಹಾಗೆಯೇ ಬಿಸಿಯಾದುದನ್ನು ಕಂಡು ಅವಳಿಗೆ ಕಸಿವಿಸಿಯಾಯಿತು. ಇದ್ಯಾಕೆ ಇಂತಹ ಸ್ವಭಾವ? ತಾಳ್ಮೆ ಯಾಕಿರಬಾರದು ಈತನಿಗೆ, ಎನಿಸಿತು. ಆದರೆ ಇವನು ಬುದ್ಧಿಶಕ್ತಿಯುಳ್ಳ ಮನುಷ್ಯ, ದಡ್ಡನಲ್ಲ ಎಂಬ ಅರಿವಾಯಿತು. ಕೇಳಿದಳು: 'ಯಾರನ್ನ ಹಿಡಿದು ಒದೀಬೇಕು?'

'ಮೇಲುಜಾತಿಯೋರನ್ನ. ಒದೀದೇ ಯಾವತ್ತೂ ಯಾರೂ ದಾರಿಗೆ ಬರುಲ್ಲ. ಯಾವ ದೇಶದ ಇತಿಹಾಸದಲ್ಲೇ ನೋಡಿ. ಹಿಸ್ಟಾರಿಕಲ್ ಟ್ರೂತ್ ನಾನು ಹೇಳೂದು. ಒದೀಬೇಕು, ದಂಗೆ ಏಳಬೇಕು. ಆಗಲೇ ನ್ಯಾಯ.'

ಅವಳಿಗೆ ಮೋಜೆನಿಸಿತು. ಮೋಹನದಾಸ ಬಿ.ಎ. ಪರೀಕ್ಷೆಯಲ್ಲಿ ಫೇಲಾದ ವನು. ಯಾವ ಯಾವ ವಿಷಯ ಓದಿದ್ದನೋ ಅವಳಿಗೆ ಗೊತ್ತಿಲ್ಲ. ತಾನು ಇತಿಹಾಸದಲ್ಲೇ ಎಂ.ಎ. ಓದಿ ಪ್ರಥಮ ದರ್ಜೆಯಲ್ಲಿ ಪಾಸಾದವಳು. ತನ್ನ ಎದುರಿಗೆ ಅವನು ಇತಿಹಾಸದ ಸತ್ಯವನ್ನು ಹೇಳುತ್ತಿದ್ದಾನೆ. ಅವನು ಹೇಳುತ್ತಿ ರುವ ಧ್ವನಿಯ ಆತ್ಮವಿಶ್ವಾಸದಿಂದ, ಅವಳ ಸ್ವಾಭಿಮಾನವನ್ನು ಕುಟುಕಿದಂತೆ ಆಯಿತು. ತನ್ನ ಓದು ಮತ್ತು ಇತಿಹಾಸದ ಜ್ಞಾನವನ್ನೇ ಅವನು ಪ್ರಶ್ನಿಸುತ್ತಿ ದ್ದಾನೆ ಎನಿಸಿ ಅವಳು ಕೇಳಿದಳು: 'ಕೆಲವು ಉದಾಹರಣೆ ಕೊಟ್ಟು ವಿವರಿಸ್ತೀರಾ?'

'ನಾನು ವಿವರಿಸಬಹುದಾಗಿದ್ದರೆ ನಿಮ್ಮ ತಾವ ಬಂದದ್ಯಾಕೆ? ತುಂಬ ಬುದ್ಧಿವಂತೆ. ಇತಿಹಾಸ ಓದಿದೋರು, ನೀವು ತಾನೆ? ನಾನು ಹೇಳಿದ್ದಕ್ಕೆ

ವಿವರಗಳನ್ನೆಲ್ಲ ನೀವು ಕೊಡಬೇಕು. ನಿಮ್ಮನ್ನ ಕೇಳಬೇಕು ಅಂತಲೇ ಬಂದೆ.'

'ನೀವು ಹೇಳಿದ ಹಾಗೆ ಇತಿಹಾಸಾನ ಬದಲಾಯಿಸುಕ್ಕೆ ಆಗುತ್ತೆಯೆ?'

'ನಿಜಕ್ಕೆ ತಕ್ಕಹಾಗೆ ಬದಲಾಯಿಸಿ ಅಂದ್ರೆ ನಿಜವಾದ ಇತಿಹಾಸ ಬರೀರಿ ಅಂತ ಅರ್ಥ. ಓದದೆ ಅದರ ನಿಜ ಹ್ಯಾಗೆ ಹೇಳ್ತೀಯ ಅಂತ ನೀವು ಕೇಳಭೌದು. ನಂಗೆ ಈಗಿನ ಜೀವನ ಗೊತ್ತಿದೆ. ಇದರ ನಿಜ ಗೊತ್ತಿದೆ. ಇದರ ನಿಜವೇ ಇತಿಹಾಸದ ನಿಜ. ಯಾಕೆಂದರೆ ಮನುಷ್ಯಸ್ವಭಾವ ಯಾವತ್ತೂ ಯಾವ ದೇಶದಲ್ಲೂ ಒಂದೇ.'

'ಏನು ಆ ಸ್ವಭಾವ?'

'ಹಿಡ್ಕಂಡು ಒದೀದೇ ಯಾರೂ ನ್ಯಾಯಕ್ಕೆ ಬರಲ್ಲ' – ಎಂದು ಅವನು ತನ್ನ ಮೊದಲ ಮಾತನ್ನೇ ಹೇಳಿದ.

ಅವಳು ಈ ಉತ್ತರವನ್ನು ಒಪ್ಪಲಿಲ್ಲ. ಆದರೆ ಇತಿಹಾಸದ ನಿಜದ ಬಗೆಗೆ ಅವನ ಮಾತು ಕುತೂಹಲಕಾರಿಯಾಗಿ ಕಾಣಿಸಿತು. 'ನಂಗೆ ಈಗಿನ ಜೀವನ ಗೊತ್ತಿದೆ. ಇದರ ನಿಜ ಗೊತ್ತಿದೆ. ಇದರ ನಿಜವೇ ಇತಿಹಾಸದ ನಿಜ. ಯಾಕೆ ಅಂದರೆ ಮನುಷ್ಯಸ್ವಭಾವ ಯಾವತ್ತೂ ಯಾವ ದೇಶದಲ್ಲೂ ಒಂದೇ' – ಎಂಬ ಮಾತನ್ನು ಹೇಳುವ ಇವನು ತಿಳಿವಳಿಕೆಯಲ್ಲಿ ಕಡಿಮೆಯವನಲ್ಲ ಎನಿಸಿತು. ಆದರೆ ಇದು ಇವನ ಸ್ವಂತ ಮಾತೇ? – ಅಥವಾ ಮತ್ತೆ ಎಲ್ಲಿಯಾದರೂ ಓದಿ ಬಾಯಿಪಾಠ ಮಾಡಿಕೊಂಡ ಮಾತೇ? – ಎಂಬ ಅನುಮಾನವೂ ಬಂತು. ಕೇಳಿದಳು: 'ನೀವು ಇತಿಹಾಸದಲ್ಲಿ ಏನೇನು ಓದಿದೀರಿ? ಅಂದ್ರೆ ಯಾವ ಯಾವ ಪುಸ್ತಕ ಓದಿದೀರಿ?'

'ಹೆಚ್ಚೇನೂ ಓದಿಲ್ಲ. ಬಿ.ಎ. ಫೇಲಾಗೂತನಕ ಯಾವುದನ್ನೂ ಸರಿಯಾಗಿ ಓದಲಿಲ್ಲ. ಆಮೇಲೆ ಒಂದೇಳೆಂಟು ಪುಸ್ತಕ ಕೊಂಡು ತಂದೆ. ಮನುಧರ್ಮ ಶಾಸ್ತ್ರ, ಒಂದೆರಡು ಪುರಾಣ ಓದಿದೀನಿ.'

'ಅಂದರೆ ನೀವು ಹೇಳೂ ಮಾತಿಗೆ ನೀವು ಓದಿರೂ ಪುಸ್ತಕದಲ್ಲಿ ಆಧಾರ ಇದೆಯೆ?'

'ಯಾವ ಒಂದು ಪುಸ್ತಕದಲ್ಲಿ ಮಾತ್ರ ಅಲ್ಲ, ಇಡೀ ಇತಿಹಾಸ ನಡೆದಿರೂದೇ ಹಾಗೆ. ನಮ್ಮ ದೇಶವ್ವೇ ಅಲ್ಲ. ಯೂರೋಪಿನಲ್ಲಿ ಕೂಡ ಹಾಗೆಯೇ. ಗಲಾಟೆಯಾಗಬೇಕು, ಒದೀಬೇಕು, ಸೊಂಟ ಮುರೀಬೇಕು. ಆಗ ಸುಧಾರಣೆಯಾಗುತ್ತೆ. ಈಗ ನಾನು ಬಂದಿರೂ ವಿಷಯ ಹೇಳ್ತೀನಿ ಕೇಳಿ. ಒಂದು ಸಣ್ಣ ಪುಸ್ತಕ ಬರೆದು ಕೊಡಬೇಕು. ಕನ್ನಡದಲ್ಲಿ ಸರಳವಾಗಿ, ನಮ್ಮ ಜನ ಓದಿ ಅರ್ಥ ಮಾಡಿಕೊಳ್ಳೂಹಾಗಿರಬೇಕು. ಶೂದ್ರರು ಅನ್ನೂ ಜನ ಯಾವತ್ತೂ ಈ ಸ್ಥಿತೀ-

ಲಿರಲಿಲ್ಲ; ಜೋರಾಗಿದ್ದ ಕಾಲವೂ ಆಗಾಗ ಇತ್ತು; ಆದರೆ ದಬಾಯಿಸಿ ಒದೀದೇ ಜೋರಾಗಲಿಲ್ಲ ಅನ್ನೂದನ್ನ ಇತಿಹಾಸದಲ್ಲಿ ತೋರಿಸಬೇಕು. ಅಂದರೆ ಈ ಪುಸ್ತಕ ಓದಿ ನಮ್ಮ ಜನ ರೊಚ್ಚಿಗೇಳಬೇಕು. ಸರ್ಕಾರ ಕೊಡೂ ಸಹಾಯ ಮೇದುಕೊಂಡು ಸಾಧು ಹಸುವಿನ ಹಾಗೆ ಮೆಲುಕು ಹಾಕ್ತಾ ಕತ್ತು ಹಾಕ್ಕಂಡಿರ ಕೂಡ್ದು, ನಮ್ಮಪ್ಪ ಮಾಡ್ತಿರೂ ಹಾಗೆ.'

'ಈ ಪುಸ್ತಕಾನ ಏನು ಮಾಡ್ತೀರ?'

'ನಾನು ಈಗಲೇ ಹೇಳ್ತೀನಿ. ನಿಮ್ಮ ಬರವಣಿಗೆ ನೂರು ಪುಟದೊಳಗಿರ ಬೇಕು. ಅದರ ಮೇಲೆ ನಮ್ಮೋರು ಏನೇನು ಮಾಡಬೇಕು ಅಂತ ನಾನು ನಲವತ್ತು ಐವತ್ತು ಪುಟ ಬರೀತೀನಿ. ನನ್ನ ಕೈಯಿಂದ ದುಡ್ಡು ಹಾಕಿ ಅಚ್ಚು ಮಾಡಿಸಿ ನಮ್ಮ ಜಾತಿಯೋರಿಗೆಲ್ಲ ಹಂಚುಸ್ತೀನಿ. ಹೇಳಿ, ಒಂದು ಮೂರು ತಿಂಗಳಿನಲ್ಲಿ ಬರೆದು ಕೊಡುಕ್ಕೆ ಸಾಧ್ಯವೆ? ವಿದ್ವಾಂಸರು ಸಹ ಇದು ಸುಳ್ಳು ಅನ್ನಕೂಡದು, ಹಾಗಿರಬೇಕು ಬರವಣಿಗೆ.'

ಸತ್ಯ ಐದು ನಿಮಿಷ ಯೋಚಿಸಿದಳು. ಒಬ್ಬರು ಹೇಳಿದ ಉದ್ದೇಶಕ್ಕೆ ಅನುಗುಣವಾಗಿ ಇತಿಹಾಸವನ್ನು ತಿರುಗಿಸುವುದು ಸತ್ಯಕ್ಕೆ ಅಪಚಾರವೆಂದು ಅವಳು ನಂಬಿದ್ದಳು. ಅಭಿಮಾನದಿಂದ ನಮ್ಮ ಇತಿಹಾಸವನ್ನು ಹೊಗಳಿಕೊಳ್ಳು ವುದು, ನಿಶ್ಚಿತ ಉದ್ದೇಶಕ್ಕೆ ಅಥವಾ ಸಿದ್ಧಾಂತಕ್ಕೆ ತಕ್ಕಂತೆ ಐತಿಹಾಸಿಕ ಘಟನೆ ಗಳ ಅರ್ಥವ್ಯಾಖ್ಯೆ ಮಾಡಿ ಅವುಗಳನ್ನು ತಿರುವುಮುರುವುಮಾಡುವುದು, ಇವೆಲ್ಲ ಬೌದ್ಧಿಕ ದುರಾಚಾರವೆಂದು ಭಾವಿಸಿದ್ದಳು. ಅವಳ ಪ್ರೊಫೆಸರರು ಹೇಳುತ್ತಿ ದ್ದರು: ಜೀವನಪ್ರವಾಹವೇ ಇತಿಹಾಸ. ಯಾವೊಂದು ಸಿದ್ಧಾಂತದ ಬೆಳಕಿನಲ್ಲಿ ಜೀವನವನ್ನು ಅರ್ಥಮಾಡಿಕೊಳ್ಳಲು ಹೊರಟರೂ ಅದರ ಆಳ ವೈಶಾಲ್ಯ ಸಂಕೀರ್ಣತೆಗಳು ಸಿಕ್ಕದಂತೆ ಆಗುತ್ತವೆ. ಆದರೆ ಸಿದ್ಧಾಂತಗಳೆಲ್ಲ ಹುಟ್ಟುವುದು ಜೀವನದಿಂದಲೇ. ಜೀವನವೇ ಸತ್ಯದ ಆಧಾರ, ಸಿದ್ಧಾಂತಗಳಲ್ಲ. ಇತಿಹಾಸವೂ ಹಾಗೆಯೇ. ಹೇಗೆ ಸತ್ಯದ ಹೆಸರಿನಲ್ಲಿ ಜೀವನವನ್ನು ವಿಕೃತಗೊಳಿಸಿ ನೋಡ ಬಾರದೋ, ಹಾಗೆ ಸಿದ್ಧಾಂತಕ್ಕೆ ಪಕ್ಕಾಗಿ ಇತಿಹಾಸವನ್ನು ತಿರುಗಿಸಬಾರದು. ಆದರೆ ಯಾವುದನ್ನು ಇತಿಹಾಸಲೇಖಕ ಮಾಡಬಾರದೋ ಅದನ್ನೇ ಮಾಡು ವಂತೆ ಈ ಮೋಹನದಾಸ ಹೇಳುತ್ತಿದ್ದಾನೆ.

ಅವಳು ಹೇಳಿದಳು: 'ಕ್ಷಮಿಸಿ. ನನಗೆ ಬರೆಯುಕ್ಕೆ ಸಾಧ್ಯವಿಲ್ಲ.'

'ಯಾಕೆ, ಏನು ತೊಂದರೆ? ಅದಕ್ಕೋಸ್ಕರ ನೀವು ಮೈಸೂರಲ್ಲೋ ಬೆಂಗ ಳೂರಲ್ಲೋ ಲೈಬ್ರರಿಯಲ್ಲಿ ಕೂತು ಕೆಲಸ ಮಾಡಬೇಕು. ದುಡ್ಡು ಖರ್ಚಾಗುತ್ತೆ. ಎಷ್ಟಾದರೂ ನಾನು ಕೊಡ್ತೀನಿ.'

'ದುಡ್ಡಿನ ವಿಷಯವಲ್ಲ. ನಿಮ್ಮ ಅಭಿಪ್ರಾಯಾನೇ ನಾನು ಒಪ್ಪಲ್ಲ.'

ಮೋಹನದಾಸ ಸುಮ್ಮನಾದ. ಎರಡು ನಿಮಿಷದಲ್ಲಿ ಅವನಿಗೆ ಸಿಟ್ಟುಬಂತು. ಅವನು ಅವಡುಗಚ್ಚಿಕೊಂಡಿದ್ದುದು ಅವನ ಹೊಂದಾಣಿಕೆಗೆ ಮೀರಿದ ದಪ್ಪ ಮೀಸೆಯ ಹಿಂಭಾಗದಲ್ಲಿ ಕಾಣುತ್ತಿತ್ತು. ಇದ್ದಕ್ಕಿದ್ದಹಾಗೆಯೇ ಎದ್ದುನಿಂತು, 'ನೀವು ಜಾತಿಪಾತಿ ಯಾವುದನ್ನೂ ನಂಬುಲ್ಲ, ನ್ಯಾಯವೊಂದೇ ನೋಡು ವಂಥೋರು ಅಂತ ನಮ್ಮಪ್ಪ ತುಮಕೂರಿಗೆ ಬಂದು ಹೇಳಿದ್ದರು. ಈಗ ಅರ್ಥ ವಾಯ್ತು. ನಮ್ಮ ಜಾತಿ ಕೆಲಸ ಬೇರೆಯೋರು ಯಾರೂ ಮಾಡುಲ್ಲ. ನಾವೇ ಮಾಡ್ಕಬೇಕು. ನೀವು ಎಷ್ಟಾದರೂ ಮೇಲುಜಾತಿಯೋರು. ನಮ್ಮನ್ನ ತುಳಿ ದಿರೋರು' ಎಂದು ಹೇಳಿ, 'ಹೋಗಿ ಬರ್ತೀನಿ' ಎಂಬ ಶಿಷ್ಟಾಚಾರದ ಒಂದು ಮಾತನ್ನು ಕೂಡ ಆಡದೆ ನಿಂತಲ್ಲಿಂದ ತಿರುಗಿ ಹೊರಟುಹೋದ.

ಸತ್ಯಳಿಗೆ ಅವನ ಉದ್ಧಟತನವನ್ನು ಕಂಡು ಸಿಟ್ಟು ಬಂತು. ಅಹಂಕಾರಿ ಎಂದುಕೊಂಡಳು. ಅಪ್ಪನ ಸ್ವಭಾವ ಬೇರೆ. ಮಗನ ಅಹಂಕಾರ ಬೇರೆ. ಅನ್ಯಾಯವಾಗ್ತಿದೆ. ಆದರೆ ಅದು ಕ್ರಮೇಣ ತಪ್ಪಬೇಕಾದುದು. ಸಾವಿರಾರು ವರ್ಷಗಳ ಪದ್ಧತಿ, ನಂಬಿಕೆ, ಆಚಾರಗಳು ಹತ್ತು ಹದಿನೈದು ವರ್ಷದಲ್ಲಿ ಬದ ಲಾಗುವುದು ಹೇಗೆ? ಅಪ್ಪನಿಗಿರುವ ತಾಳ್ಮೆ ಇವನಿಗೆ ಬೇಡವೆ? ಮೇಲುಜಾತಿಯ ಯಾರನ್ನು ಕಂಡರೂ ವಿಷ ಕಾರುವುದೇ ಇವನ ಚಟವಾಗಿದೆ. ಬುದ್ಧಿ ಸರಿ ಯಾಗಿಲ್ಲದ ನನ್ನ ಅಪ್ಪನನ್ನು ಅವನು ದೇವಸ್ಥಾನದ ಹತ್ತಿರ ಹ್ಯಾಗೆ ಹೆದರಿಸಿದ! ಇವನು ಹಾಗೆ ಮಾಡದೆ ಇದ್ದರೆ ಅಪ್ಪ ಸಾಯುತ್ತಿರಲಿಲ್ಲ – ಎಂದುಕೊಂಡಳು. ತಂದೆಯ ನೆನಪಿನಿಂದ ಕಣ್ಣಿನ ಅಂಗಳ ತೇವವಾಯಿತು.

ಆ ಸಂಜೆ ಎಲ್ಲ ಅವಳ ಮನಸ್ಸು ಸಿಟ್ಟಿನಿಂದಲೇ ತುಂಬಿತ್ತು. ಆದರೆ ಬುದ್ಧಿ ಮಾತ್ರ ಅವನ ಮಾತನ್ನು ಕುರಿತು ಯೋಚಿಸುತ್ತಿತ್ತು. ಅವನು ಹೇಳಿದ ಹಾಗೆ ತಿರುಗಿಬಿದ್ದು ಕಲಹ ಮಾಡದೆ ನ್ಯಾಯ ಸಿಕ್ಕುವುದಿಲ್ಲವೆ? ಇತಿಹಾಸದ ಯಾವ ಯಾವ ಕಾಲದಲ್ಲಿ ದಲಿತರು, ತುಳಿಯಲ್ಪಟ್ಟದ್ದವರು ಹೇಗೆ ಹೇಗೆ ಮೇಲೆ ಏರಿದ್ದರು ಎಂಬುದು ತುಂಬ ಕುತೂಹಲಕಾರಿಯಾದ ಪ್ರಶ್ನೆಯಾಗಿ ಕಂಡಿತು. ತಾನು ಬೆಂಗಳೂರಿನಲ್ಲಿ ಕಾಲೇಜಿನ ಕೆಲಸವನ್ನು ಕಳೆದುಕೊಂಡಾಗಿನಿಂದ ಗಂಭೀರವಾಗಿ ಏನನ್ನೂ ಓದಿಲ್ಲ. ಜವಳಿ ಅಂಗಡಿಯಲ್ಲಿದ್ದಾಗ ಮುದ್ದೇಗೌಡ ರಿಂದ ಪುಸ್ತಕ ತರಿಸಿಕೊಳ್ಳುತ್ತಿದ್ದರೂ, ಅಷ್ಟು ಸರಿಯಾಗಿ ಓದಲು ಆಗುತ್ತಿರಲಿಲ್ಲ. ಇಲ್ಲಿ ಊರಿಗೆ ಬಂದ ಐದು ಐದೂವರೆ ತಿಂಗಳಿನಿಂದ ಏನನ್ನೂ ಓದುತ್ತಿಲ್ಲ. ಪುಸ್ತಕಗಳೂ ಇಲ್ಲ. ನನ್ನ ಗಮನವೂ ಅತ್ತ ಹೋಗಿಲ್ಲ. ಇಎಂಥ ಜೀವನ ಮಾಡುತ್ತಿದ್ದೇನೆ ಎನಿಸಿತು. ಮೋಹನದಾಸ ಹೇಳಿದ ಏಳೆಂಟು ಇತಿಹಾಸ

ಪುಸ್ತಕ, ಮನುಧರ್ಮಶಾಸ್ತ್ರ, ಒಂದೆರಡು ಪುರಾಣ ಓದಿದೀನಿ ಎಂಬ ಮಾತಿನ ನೆನಪಾಯಿತು. ಮನುಧರ್ಮಶಾಸ್ತ್ರವನ್ನು ತಾನೂ ಓದಿದ್ದಳು. ಇತಿಹಾಸದ ವಿದ್ಯಾರ್ಥಿನಿಯಾಗಿ ಅದನ್ನು ಓದದಿದ್ದರೆ ಹೇಗೆ? ಅದರ ಕೆಲವು ಶ್ಲೋಕಗಳನ್ನು ಚಿಕ್ಕ ವಯಸ್ಸಿನಲ್ಲಿ ಅವಳ ತಂದೆಯೇ ಹೇಳಿಕೊಟ್ಟಿದ್ದರು. ಅದನ್ನು ಕಲಿತು ಅರ್ಥ ತಿಳಿದಾಗಲೇ ಅವಳಿಗೆ ಶಾಸ್ತ್ರ ಮತ್ತು ಜಾತಿವಿಂಗಡಣೆಯ ಬಗೆಗೆ ತಿರಸ್ಕಾರ ಆರಂಭವಾದದ್ದು. 'ಶೂದ್ರಂ ತು ಕಾರಯೇದ್ದಾಸ್ಯಂ ಕ್ರೀತಮ ಕ್ರೀತಿತಮೇವ ವಾ' – ಹಣ ಕೊಟ್ಟು ಕೊಂಡಿರಲಿ, ಹಾಗೆಯೇ ಬಂದಿರಲಿ, ಶೂದ್ರನು ದಾಸ್ಯವನ್ನೇ ಮಾಡಬೇಕು. 'ನ ಸ್ವಾಮಿನಾ ನಿಸೃಷ್ಟೋಽಪಿ ಶೂದ್ರೋ ದಾಸ್ಯಾದ್ವಿಮುಚ್ಯತೇ' – ಯಜಮಾನನು ಬಿಟ್ಟುಬಿಟ್ಟರೂ ಶೂದ್ರನು ದಾಸ್ಯದಿಂದ ವಿಮುಕ್ತನಾಗುವುದಿಲ್ಲ, ಅವನ ದಾಸ್ಯವು ನಿಸರ್ಗವಾದದ್ದು ಎಂಬಂತಹ ಮಾತುಗಳು ಚಿಕ್ಕವಯಸ್ಸಿನಲ್ಲೇ ಅವಳ ನ್ಯಾಯಪ್ರಜ್ಞೆಯನ್ನು ಕೆರಳಿಸಿದ್ದುವು. ಕಾಲೇಜಿನಲ್ಲಿ ಇತಿಹಾಸದ ದೃಷ್ಟಿಯಿಂದ ಮತ್ತೆ ಈ ಗ್ರಂಥವನ್ನು, ಅದರ ಮೇಲೆ ಇತಿಹಾಸಕಾರರ ವ್ಯಾಖ್ಯಾನವನ್ನು ಓದುವಾಗ ಆಗಿನ ಜೀವನದ ಹೊಸ ಹೊಸ ಪರಿಗಳು ತಿಳಿಯುತ್ತಿದ್ದುವು. ಹೆಸರಿಡುವಲ್ಲಿ ಸಹ ಜಾತಿಸೂತಕದ ಜೊತೆಗೆ, ಆ ಜಾತಿಯ ಸಾಮಾಜಿಕ ಮಟ್ಟವನ್ನು ತೋರಿಸುವುದು ಆಗಿನ ನಿಯಮವಾಗಿತ್ತು. ಬ್ರಾಹ್ಮಣನ ಹೆಸರು ಮಂಗಲವನ್ನೂ ಕ್ಷತ್ರಿಯನದು ಶಕ್ತಿಯನ್ನೂ ವೈಶ್ಯನ ಅಂಕಿತವು ಸಂಪತ್ತನ್ನೂ ಶೂದ್ರನದು ಜುಗುಪ್ಸೆಯನ್ನೂ ಸೂಚಿಸುವಂತಿರಬೇಕಿತ್ತು. ಮಂಗಲಂ ಬ್ರಾಹ್ಮಣಸ್ಯ ಸ್ಯಾತ್ ಕ್ಷತ್ರಿಯಸ್ಯ ಬಲಾನ್ವಿತಂ ವೈಶ್ಯಸ್ಯ ಧನ ಸಂಯುಕ್ತಂ ಶೂದ್ರಸ್ಯ ತು ಜುಗುಪ್ಸಿತಂ – ಎಂಬ ಸೂತ್ರವನ್ನು ಮಾಡಿದರು.

ಅವಳಿಗೆ ಈಗ ಇನ್ನೊಂದು ವಿಷಯ ನೆನಪಿಗೆ ಬಂತು: ಕೆಲವು ತತ್ತ್ವಗಳಿಗೆ ಇಂಥಿಂಥ ಜಾತಿಯವರಿಗೆ ಇಂಥಿಂಥ ದಂಡವೆಂದು ಮನುವೇ ಹೇಳಿದನಲ್ಲ. ಬ್ರಾಹ್ಮಣ ಕ್ಷತ್ರಿಯ ಮೊದಲಾಗಿ ಯಾರಾದರೂ ಗಂಡಸು ಶೂದ್ರಸ್ತ್ರೀಯನ್ನು ಬಲಾತ್ಕರಿಸಿದರೆ ಅವರು ಹತ್ತೋ ಇಪ್ಪತ್ತೋ ಪಣವನ್ನು ದಂಡ ಕೊಟ್ಟು ಮುಕ್ತರಾಗಬಹುದಿತ್ತು. ಆದರೆ ಶೂದ್ರನು ಮೇಲುಜಾತಿಯ ಸ್ತ್ರೀಯನ್ನು ಹಿಡಿದು ಭೋಗಿಸಿದರೆ ಮರಣದಂಡನೆಯನ್ನೇ ಅನುಭವಿಸಬೇಕು. ಎಂದರೆ ಶೂದ್ರ ಗಂಡಸರು ಹೀಗೆ ಮಾಡುತ್ತಿದ್ದರು. ಮೋಹನದಾಸ ಹೇಳುವ ದಂಗೆ ಈ ರೂಪದಲ್ಲಿ ನಡೆಯುತ್ತಿತ್ತೇನೊ! ಅಥವಾ ಎಂತಹ ಕಟ್ಟುನಿಟ್ಟಾದ ಶಿಕ್ಷೆಗೂ ಹೆದರದೆ ತನ್ನ ಕಾಮನೆಗಳನ್ನು ಪೂರೈಸಿಕೊಳ್ಳುವುದು ಮನುಷ್ಯಸ್ವಭಾವ.

ಸತ್ಯ ಆ ರಾತ್ರಿ ಎಲ್ಲ ಇದನ್ನೇ ಯೋಚಿಸುತ್ತಿದ್ದಳು. ಎಷ್ಟೋ ಹೊತ್ತಿಗೆ ನಿದ್ರೆ ಬಂತು. ಬೆಳಗ್ಗೆ ಎಚ್ಚರವಾದಾಗ ಒಂದು ವಿಷಯ ನೆನಪಿಗೆ ಬಂತು.

ಅವಳು ಎಂ.ಎ. ಓದುವಾಗ ಬರೆಯಬೇಕಾಗಿದ್ದ ಪ್ರಬಂಧಕ್ಕೆಂದು ಕೂರ್ಮ ಪುರಾಣವನ್ನು ಓದುತ್ತಿದ್ದಳು. ಅದರಲ್ಲಿ ಬರುವ ಕಲಿಗಾಲದ ವರ್ಣನೆ ಕುತೂಹಲಕಾರಿಯಾಗಿತ್ತು: ಮೂರ್ಖರಾದ ಶೂದ್ರ ಅಧಿಕಾರಿಗಳು, ಬ್ರಾಹ್ಮಣರು ಜಾಗ ಬಿಟ್ಟು ಏಳುವಂತೆ ಮಾಡಿ ಅವರನ್ನು ಹೊಡೆಯುತ್ತಾರೆ. ಕಲಿಯುಗದಲ್ಲಿ ರಾಜನು ಬ್ರಾಹ್ಮಣರನ್ನು ಅಗೌರವಗೊಳಿಸಿ ಅವರ ಸಂಗಡ ಉನ್ನತ ಸ್ಥಾನದಲ್ಲಿ ಶೂದ್ರರು ಕೂರುವಂತೆ ಮಾಡುತ್ತಾನೆ. ವೇದವಿದ್ಯೆಯಲ್ಲಿ ಕಡಿಮೆ ದರ್ಜೆಯ ಬ್ರಾಹ್ಮಣರು ಪುಷ್ಪ ಆಭರಣ ಮೊದಲಾದ ಶುಭವಸ್ತುಗಳಿಂದ ಶೂದ್ರರನ್ನು ಗೌರವಿಸುತ್ತಾರೆ. ಶೂದ್ರರ ಮನೆಯನ್ನು ಪ್ರವೇಶಿಸುವ ಧೈರ್ಯವಿಲ್ಲದೆ ಅವರಿಗೆ ಗೌರವ ತೋರಿಸುವ ಅವಕಾಶಕ್ಕಾಗಿ ದ್ವಾರದ ಹತ್ತಿರ ಕಾಯುತ್ತಾರೆ. ಶೂದ್ರರು ವಾಹನಗಳಲ್ಲಿ ಕುಳಿತಿರುವಾಗ ಅವರನ್ನು ಸುತ್ತುಗಟ್ಟಿ ಹೊಗಳಿ ವೇದವನ್ನು ಹೇಳಿ ಕೊಟ್ಟು ಅನ್ನವನ್ನು ಸಂಪಾದಿಸುತ್ತಾರೆ.

ಈ ಭಾಗದ ಐತಿಹಾಸಿಕ ಅರ್ಥವನ್ನು ಚರ್ಚಿಸಲು ಪ್ರೊಫೆಸರರ ಹತ್ತಿರ ಹೋದಾಗ ಅವರು ಹೇಳಿದ್ದರು: 'ಪುರಾಣಗಳಲ್ಲಿ ಬರುವ ಕಲಿಯುಗ ವರ್ಣನೆಗಳನ್ನು ಮೌರ್ಯರ ಕಾಲಾನಂತರದ ಸಾಮಾಜಿಕ ಸ್ಥಿತಿ ಅಂತ ಭಾವಿಸಬಹುದು. ಅಂದರೆ ಶೂದ್ರರು ವರ್ಣನಿಯಮದ ಸಾಮಾಜಿಕ ವ್ಯವಸ್ಥೆಯನ್ನು ವಿರೋಧಿಸಿ ದಂಗೆ ಏಳುತ್ತಿದ್ದರು ಅಂತ ಅರ್ಥವಾಗುತ್ತೆ.'

ಇದರ ಸಂಗಡವೇ ಅವಳಿಗೆ ಮೋಹನದಾಸನ ಮಾತು ನೆನಪಿಗೆ ಬಂತು. ಅವನು ಹೇಳಿದುದು ನಿಜ. ಬಲಪ್ರಯೋಗಮಾಡದೆ, ಅವನು ಹೇಳಿದಂತೆ, ಹಿಡಿದು ಒದೆಯದೆ ಯಾರೂ ನ್ಯಾಯ ಕೊಡುವುದಿಲ್ಲ. ಪುಸ್ತಕ ಭಂಡಾರದಲ್ಲಿ ಕಷ್ಟಪಟ್ಟು ವಿಷಯ ಸಂಗ್ರಹಿಸಿದರೆ ಇದನ್ನು ಇತಿಹಾಸದಲ್ಲೂ ತೋರಿಸಬಹುದು. ಯೂರೋಪಿನ ಇತಿಹಾಸದಲ್ಲಂತೂ ಇದು ನಡೆದುಬಂದ ಸತ್ಯವೇ. ಹಾಗಾದರೆ ಮೋಹನದಾಸ ನಿಜವಾಗಿಯೂ ಇತಿಹಾಸದ ಮರ್ಮವನ್ನು ತಿಳಿದಿದ್ದಾನೆಯೆ? – ಎನ್ನಿಸಿತು. ಅವನ ನೆನಪು ಬಂದ ಕೂಡಲೇ ಮನಸ್ಸಿನಲ್ಲಿ ತಿರಸ್ಕಾರವೂ ಹುಟ್ಟಿತು. ಈ ದ್ವೇಷ. ಈ ಅಹಂಕಾರ, ಈ ಜಗಳಗಂಟತನ ಅವನಿಗೆ ಯಾಕಿರಬೇಕು? ಮನಸ್ಸಿಗೆ ರೋಗ ಹಿಡಿದಿದ್ದ ಸಮ್ಮಪ್ಪ ಸಾಯುವ ಹಾಗೆ ಮಾಡಿದನಲ್ಲ ಅವನು, ಎಂಬ ಕೋಪವೂ ಬಂತು.

೨

ಎರಡು ದಿನದಲ್ಲಿ ಅವಳಿಗೆ ಓದುವ ಆಶೆಯುಂಟಾಯಿತು. ಹತ್ತಿರ ಇಷ್ಟು ದುಡ್ಡಿದೆ. ಆಗಾಗ್ಗೆ ಬೆಂಗಳೂರಿಗೋ ಮೈಸೂರಿಗೋ ಹೋಗಿ ಒಂದಿಷ್ಟು

ಪುಸ್ತಕಗಳನ್ನಾದರೂ ಕೊಂಡು ತರಬೇಕಿತ್ತು. ದಿನಕ್ಕೆ ಮೂರು ನಾಲ್ಕು ಗಂಟೆಯಾದರೂ ಓದಬೇಕಾಗಿತ್ತು. ಎಲ್ಲವನ್ನೂ ಬಿಟ್ಟು ನಾನು ಬರೀ ತೆಂಗಿನ ಸೊಸಿಯ ಗುಂಡಿ ತೆಗೆಯುವುದು, ತೋಟದ ಬೇಲಿ ಹಾಕುವುದು, ಗದ್ದೆಯ ಕೆಸರಿನ ಕೆಲಸ ಮಾಡುವುದರಲ್ಲೇ ಕಾಲ ಕಳೆಯುತ್ತಿದೀನಿ. ಯಾವ ಸಾರ್ಥಕ ಇದು? – ಎನಿಸಿತು. ಮೋಹನದಾಸ ಬಂದು ಮಾತನಾಡಿ ಹೋದಮೇಲೆ ಓದಿನ ವಿಷಯದಲ್ಲಿ ತಲೆ ಕೆಲಸ ಮಾಡುತ್ತಿದೆ. ಇದೇ ವಿಷಯವಾಗಿ ಓದಬೇಕು ಎಂದುಕೊಂಡಳು. ಅದಕ್ಕೆ ಮೊದಲು, ಅವನ ಪೂರ್ತಿ ವಿಚಾರವೇನೆಂದು ತಿಳಿಯಬೇಕೆನಿಸಿತು. ಆದರೆ ಅವನ ಬಗೆಗೆ ತಿರಸ್ಕಾರ ಮತ್ತು ಕೋಪ ಮಾತ್ರ ಕಡಿಮೆಯಾಗಿರಲಿಲ್ಲ. ಮತ್ತೆ ಎರಡು ದಿನ ಕಳೆಯಿತು. ಸ್ವಂತ ಸಿಟ್ಟು ತಿರಸ್ಕಾರಕ್ಕೆ ಸ್ಥಳ ಕೊಟ್ಟು, ಒಬ್ಬ ಮನುಷ್ಯನಿಂದ ತಿಳಿಯಬಹುದಾದದ್ದನ್ನು ದೂರ ಮಾಡಬಾರದು, ಅವನನ್ನು ಭೇಟಿಯಾಗಬೇಕು ಎಂದುಕೊಂಡಳು. ಆದರೆ ಅವನು ಇರುವುದು ತುಮಕೂರಿನಲ್ಲಿ. ಇಲ್ಲಿಗೆ ಯಾವಾಗ ಬರುತ್ತಾನೆಯೋ ನಿಶ್ಚಯವಿಲ್ಲ. ಒಂದು ದಿನ ಬೆಟ್ಟಯ್ಯನವರ ಮನೆಗೆ ಹೋಗಿ, ಅವನು ಊರಿಗೆ ಬಂದಾಗ ತನ್ನ ತೋಟಕ್ಕೆ ಬರುವಂತೆ ಹೇಳಿಬರಬೇಕು. ಬೆಟ್ಟಯ್ಯನವರನ್ನು ನೋಡಿ ಸಹ ತುಂಬ ದಿನವಾಯಿತು – ಎಂದುಕೊಂಡಳು.

ಆ ಮಧ್ಯಾಹ್ನ ನಾಲ್ಕು ಗಂಟೆಯ ಹೊತ್ತಿನಲ್ಲಿ ಅವಳು ಕೊನೆಯ ತೆಂಗಿನ ಗುಂಡಿಯನ್ನು ತೆಗೆಯುತ್ತಿದ್ದಳು. ದಿನಕ್ಕೆ ಎರಡಕ್ಕಿಂತ ಹೆಚ್ಚು ತೆಗೆಯುವುದು ಅವಳಿಗೆ ಸಾಧ್ಯವಾಗುತ್ತಿರಲಿಲ್ಲ. ಶೂದ್ರ ಆಳುಗಳು ಹನ್ನೆರಡು ಹದಿನೈದನ್ನು ಸುಲಭವಾಗಿ ಬಗೆದು ಎಸೆಯುತ್ತಿದ್ದರು. ಅವಳಿಗೆ ಇಷ್ಟು ಮಾಡುವುದರಲ್ಲಿ ತೋಳು ಭುಜ ಸೊಂಟಗಳು ನೋಯುತ್ತವೆ. ಇವತ್ತು ಇದನ್ನು ಮುಗಿಸಿದರೆ ನಾಳೆಯೋ ನಾಡದ್ದೋ ಕೆಳಗಿನ ಬೀದಿ ತಿಮ್ಮಯ್ಯನ ತೋಟದಿಂದ ಗೆಪ್ಪೆ ಸೊಸಿ ತಂದು ನೆಡಬೇಕು; ನೆಡಿಸಬೇಕು. ತೆಂಗಿನ ಸೊಸಿ ಕಿತ್ತು ನೆಡಲು ಅನುಭವ ಬೇಕು. ತಾನೇ ಬಂದು ಮಾಡಿಕೊಡುವುದಾಗಿ ತಿಮ್ಮಯ್ಯ ಹೇಳಿದ್ದಾನೆ. ಆಮೇಲೆ ಮೂರು ದಿನಕ್ಕೊಂದು ಸಲ ನೀರುಟ್ಟಿದ್ದರೆ ಸಾಕು – ಎಂದುಕೊಂಡು ಗುದ್ದಲಿಯನ್ನು ಎತ್ತಿ ಕಡಿಯುತ್ತಿದ್ದಳು.

ಅಷ್ಟರಲ್ಲಿ ಮೀರಾ ಬಂದಳು. ಕಾಲೇಜಿಗೆ ಸೇರಿದ ಮೇಲೆ ಅವಳು ಊರಿಗೆ ಬಂದಿರುವುದು ಈಗ ಎರಡನೆಯ ಸಲ. ಎರಡೂವರೆ ತಿಂಗಳ ಹಿಂದೆ ದಸರಾ ರಜೆಗೆ ಬಂದಿದ್ದಾಗ ನಾಲ್ಕು ಐದು ಸಲ ತೋಟಕ್ಕೆ ಬಂದಿದ್ದಳು. ಪ್ರತಿಸಲವೂ ಮೂರು ನಾಲ್ಕು ಗಂಟೆ ಕೂತು ಸತ್ಯಳ ಜೊತೆ ಹಲವಾರು ವಿಷಯಗಳ ಬಗ್ಗೆ ಮಾತನಾಡಿದ್ದಳು; ಎಂದರೆ ಅವಳನ್ನು ಕೇಳುತ್ತಿದ್ದಳು; ಅವಳು ಹೇಳುವುದನ್ನು ಗಮನ

ವಿಟ್ಟು ಕೇಳುತ್ತಿದ್ದಳು; ಅವಳನ್ನು ತನ್ನ ಗುರು ಎಂಬ ರೀತಿಯಲ್ಲಿ ಕಾಣುತ್ತಿದ್ದಳು. ಈಗ ಬಂದ ಮೀರಾ ನಮಸ್ಕಾರ ಹೇಳಿದಳು.

'ಯಾವಾಗ ಬಂದೆ?' – ಎಂದದ್ದಕ್ಕೆ, 'ನೆನ್ನೆ ಸಂಜೆ ಬಂದೆ. ಕ್ರಿಸ್‌ಮಸ್ ರಜ ಹದಿನೈದು ದಿನ' ಎಂದು, ಗುಂಡಿಯ ಪಕ್ಕದಲ್ಲಿ ನಿಂತಳು. ತನ್ನ ಗುರು ಗುದ್ದಲಿ ಹಿಡಿದು ಕೆಲಸ ಮಾಡುತ್ತಿರುವುದನ್ನು ಕಂಡ ಅವಳು, 'ನಂಗೆ ಕೊಡಿ. ನಾನು ತೆಗೀತೀನಿ' ಎಂದು ಬಾಗಿ ಗುದ್ದಲಿಯನ್ನು ತನ್ನ ಕೈಗೆ ಇಸಿದುಕೊಂಡಳು. ಮೀರಾ ಸತ್ಯಳಿಗಿಂತ ಚನ್ನಾಗಿ ಬೆಳೆದಿರುವ ಹುಡುಗಿ. ಸತ್ಯ ಕಳೆದ ಒಂದೂವರೆ ವರ್ಷದಿಂದ ಸಣ್ಣಗಾಗುತ್ತಿದ್ದರೆ, ಅವಳು ಮೈತುಂಬಿಕೊಂಡು ಬೆಳೆಯುತ್ತಿದ್ದಳು. ದಸರಾ ರಜಕ್ಕೆ ಬಂದಿದ್ದಾಗಿಗಿಂತ ಈಗ ಸ್ವಲ್ಪ ಹೆಚ್ಚು ಶೋಕಿಯಾಗಿ ವಸ್ತ್ರಧರಿಸಿದ್ದಳು. ಕೈಗಡಿಯಾರ ಮೊದಲೇ ಇತ್ತು. ಈಗ ಗುಲಾಲು ಬಣ್ಣದ ನೈಲಾನ್ ಸೀರೆಯುಟ್ಟು ಅದೇ ಬಣ್ಣದ ಕುಪ್ಪಸ ತೊಟ್ಟಿದ್ದಳು. ತಲೆಗೆ ಹೆಳಲು ಹಾಕಿ ಹೂವು ಮುಡಿದಿದ್ದಳು. ಮುಖದ ಸ್ನೋ ಪೌಡರಿನ ಬಿಳುಪು ಮತ್ತು ಹಣೆಯ ಮಧ್ಯದ ದುಂಡು ಕುಂಕುಮವು ಹದಕ್ಕೆ ತಕ್ಕಂತಿದ್ದುವು.

ಸತ್ಯ ಗುಂಡಿಯಿಂದ ಮೇಲೆ ಹತ್ತಿ ನಿಂತು ಸೊಂಟವನ್ನು ನೆಟ್ಟಗೆ ಮಾಡಿಕೊಂಡಳು. ಮೀರಾ ಸೀರೆಯ ಸೆರಗನ್ನು ಸೊಂಟಕ್ಕೆ ಸಿಕ್ಕಿಸಿ, ಎತ್ತಿ ಎತ್ತಿ ಗುದ್ದಲಿಯಲ್ಲಿ ಛಾಪು ಹಾಕಿದಳು. ಸತ್ಯಳಿಗಿಂತ ಅವಳ ಏಟು ಜೋರಿನದಾಗಿತ್ತು. ಆದರೆ ಹತ್ತು ಹದಿನೈದು ಸಲ ಅಗೆದು ನೆಲ ಕಡಿಯುವ ಹೊತ್ತಿಗೆ ಅವಳಿಗೆ ಆಯಾಸವಾಯಿತು. ಏದುಸಿರು ಕಾಣುತ್ತಿತ್ತು. ಹಣೆ ಮತ್ತು ಕೆನ್ನೆಗಳ ಪೌಡರು ಡಿಸೆಂಬರ್ ಕೊನೆಯ ಆ ಚಳಿಗಾಲದಲ್ಲಿ ಕಲಸಿಹೋಗಲು ಶುರುವಾಯಿತು. ಆದರೆ ಅಷ್ಟಕ್ಕೆ ನಿಲ್ಲಿಸಿದರೆ ತನಗೆ ಅಪಮಾನವೆಂಬ ಛಲದಿಂದ ಅವಳು ಉಸಿರನ್ನು ಹಿಡಿತಕ್ಕೆ ತಂದುಕೊಂಡು ಹೆಣಗಲು ಪ್ರಾರಂಭಿಸಿದಳು. ಸತ್ಯಳಿಗೆ ಅದು ಗೊತ್ತಾಗಿ, 'ನಿನ್ನ ಕೈಲಾಗುಲ್ಲ ಬಿಡು' ಎಂದಳು. 'ಇಲ್ಲ, ಆಗುತ್ತೆ' – ಎಂದು ಮರ್ಯಾದೆ ಉಳಿಸಿಕೊಳ್ಳುತ್ತಿದ್ದ ಅವಳುಸ್ಕೈಯಿಂದ ಬಲವಂತವಾಗಿ ಗುದ್ದಲಿಯನ್ನು ಕಿತ್ತುಕೊಂಡಳು. ಕೆಲಸ ಇನ್ನುಸ್ವಲ್ಪವೇ ಇತ್ತು. ಸತ್ಯ ಗುಂಡಿಗೆ ಇಳಿದು, ಅಗೆದ ಮಣ್ಣನ್ನು ಎತ್ತಿ ಎಸೆದಳು. ಕಾಲು ಗಂಟೆಯಲ್ಲಿ ಗುಂಡಿ ಮುಗಿಯಿತು. ಅನಂತರ ಕೊಳಕ್ಕೆ ಬಂದು ಕೈ ಕಾಲು ಮುಖಗಳನ್ನು ತೊಳೆದು, ಸೊಂಟಕ್ಕೆ ಬಿಗಿದಿದ್ದ ಸೆರಗು ಬಿಚ್ಚಿ ಮುಖವನ್ನು ಒರೆಸಿಕೊಂಡು, ಮೀರಳ ಜೊತೆ ಕೂತು ಕಷ್ಟ ಸುಖ ವಿಚಾರಿಸಿದಳು.

'ಹಾಸ್ಟೆಲಿನಲ್ಲಿ ಸ್ನೇಹಿತೆಯರಾಗಿದಾರೆಯೆ?'

'ಒಂದೆರಡು ಜನ.'

'ನಿನ್ನ ಜೊತೆ ಯಾವ ವ್ಯತ್ಯಾಸವೂ ಇಲ್ಲದೆ ನಡಕೊತ್ತಾರೆಯೆ?' – ಮೀರಾ ಇದ್ದುದು ಹರಿಜನ ವಿದ್ಯಾರ್ಥಿನಿ ನಿಲಯದಲ್ಲಲ್ಲ, ಹುಡುಗಿಯರ ಕಾಲೇಜಿನ ಹಾಸ್ಟೆಲಿನಲ್ಲಿ.

'ಕೆಲವರು ನಡಕೊತ್ತಾರೆ. ಬಾಕಿಯೋರು ದೂರ ದೂರವೇ ಇರ್ತಾರೆ. ಎಂ.ಎಲ್.ಎ. ಮಗಳು ಅಂತ ತಿಳಿದ ಮೇಲೆ ಮಾತಾಡಿಸ್ಕಂಡು ಬರ್ತಾರೆ. ಅದ ಕಂಡ್ರೆ ನಂಗೆ ಬೇಜಾರಾಗುತ್ತೆ.'

'ನೋಡು, ನಿಮ್ಮಣ್ಣ ಬಂದಿದ್ದರು. ಒಂದು ಪುಸ್ತಕ ಬರೀಬೇಕು ಅಂತ ನನ್ನ ಕೇಳಿದರು' – ಎಂದು ಸತ್ಯ ವಿವರಿಸಿದಳು.

'ನಂಗೆ ಗೊತ್ತದೆ. ಸತ್ಯಾಗ್ರಹ ಅಂದ್ರೆ ಅವನಿಗೆ ನಂಬಿಕೆ ಇಲ್ಲ. ದಬಾಯಿಸ ಬೇಕು, ಒದೀಬೇಕು, ಇಲ್ಲದಿದ್ದರೆ ಮೇಲುಜಾತಿಯೋರು ಬಗ್ಗುಲ್ಲ ಅಂತಾನೆ. ಅದಕ್ಕೇ ಅಂಥ ಒಂದು ಪುಸ್ತಕ ಬರೆಸಿ ನಮ್ಮ ಜನದ ವಿದ್ಯಾರ್ಥಿಗಳಿಗೆ, ಮುಖಂಡ ರಿಗೆಲ್ಲ ಫ್ರೀ ಕೊಡಬೇಕು ಅಂತಿದಾನೆ. ಕ್ರಾಂತಿ ಮಾಡಬೇಕು ಅಂತಿರ್ತಾನೆ.'

'ಮೊದಲಿನಿಂದ ಹಾಗೆಯೇ ಅವರ ಅಭಿಪ್ರಾಯ?'

'ಮೊದಲು ಹ್ಯಾಗಿದ್ದನೋ ನಂಗೆ ಗೊತ್ತಿಲ್ಲ. ನಂಗೂ ಅವನಿಗೂ ಏಳು ವರ್ಷ ವ್ಯತ್ಯಾಸ. ಅವನನ್ನ ಕಂಡ್ರೆ ನಂಗೆ ಹೆದರಿಕೆಯೇ ಇತ್ತು. ಅಪ್ಪ ಅಲ್ಲಿ ಆಶ್ರಮ ದಲ್ಲಿರ್ತಿದ್ರು. ನಾನು ಅವನು ಇಬ್ಬರೂ ಮಾವನ ಊರಲ್ಲಿದ್ದೆವು. ಅವನು ನನ್ನ ಹ್ವಡೀತಿದ್ದ. ಅವನ ಮದುವೆ ವಿಷಯದಲ್ಲಿ ಜಾತಿ ಅಡ್ಡ ಬಂದಮ್ಯಾಲೆ ಕ್ರಾಂತಿ ಮಾಡೂ ಬುದ್ಧಿ ಜಾಸ್ತಿಯಾಗಿದೆ.'

'ಮದುವೆ ವಿಷಯ ಏನು? ಈಗ ಮೂವತ್ತು ವರ್ಷ ಆಗಿರಭೌದಲ್ಲ. ಯಾಕೆ ಮದುವೆಯಾಗಿಲ್ಲ?'

'ಬಿ.ಎ. ಓದುವಾಗ ಒಬ್ಬ ಹುಡುಗೀನ ಪ್ರೀತಿಸಿದ. ನಮ್ಮಲ್ಲಿ ಎಡಗೈ ಬಲಗೈ ಅಂತ ವ್ಯತ್ಯಾಸ ಇದೆಯಲ. ಹೊಲೇರು ಬಲಗೈ ಅಂದ್ಕತಾರೆ. ನಮ್ಮನ್ನ ಎಡಗೈ ಅಂತಾರೆ. ಹುಡುಗಿ ಬಲಗೈನೋಳು. ನೆಲಮಂಗಲದ ಹತ್ತಿರ ಯಾವುದೋ ಊರಿನೋಳು. ಇಂಟರ್‌ಮೀಡಿಯೇಟ್ ಓದುತ್ತಿದ್ದಳಂತೆ. ಅವಳು ಇವನನ್ನ ನಿಜವಾಗಿ ಪ್ರೀತಿಸಿದ್ದಳೋ ಇಲ್ಲವೋ ನಂಗೆ ಸರಿಯಾಗಿ ಗೊತ್ತಿಲ್ಲ. ಒಟ್ಟಿನಲ್ಲಿ ಹರಿಜನ, ಒಂದೇ ಜಾತಿ ಅಂತ ಇವನ ಮಾತಿಗೆ ಒಪ್ಪಿದ್ದಳು. ಆಮೇಲೆ ಒಳಪಂಗಡದ ಮಾತು ಬಂತು. ಇವರು ಎಡಗೈನೋರು ಅಂತ ಗೊತ್ತಾದಮೇಲೆ ಅವಳ ಅಪ್ಪ ಕೀಳು ಜಾತಿಗೆ ಹೆಣ್ಣು ಕೊಡುಲ್ಲ ಅಂದನಂತೆ. ನಮಗೆ ಇಷ್ಟೆಲ್ಲ ಆಸ್ತಿಪಾಸ್ತಿ ಇದ್ದು ಅವನು ಹಂಗಂದ. ಹುಡುಗಿಯೂ ಆಮೇಲೆ ತನ್ನ ಅಪ್ಪನ ಮಾತೇ ಕೇಳಿದಳು. ಆಗಿನಿಂದ ಅವನಿಗೆ ಜಾತಿ ವಿಷಯದಲ್ಲಿ ಸಿಟ್ಟು ವಿಪರೀತ.

ಈ ವಿಷಯದಲ್ಲೇ ಬೇಜಾರಾಗಿ ಓದದೆ ಅವನು ಪರೀಕ್ಷೆಯಲ್ಲಿ ಫೇಲಾದ.'

ಸತ್ಯ ಐದು ನಿಮಿಷ ಸುಮ್ಮನೆ ಕುಳಿತಳು. ಮೀರಳ ಮಾತಿನಿಂದ ಅವಳಿಗೆ ಹೊಸ ತೀವ್ರತೆಯೊಂದು ತಿಳಿಯುತ್ತಿತ್ತು. ಹಳ್ಳಿಯಲ್ಲೇ ಹುಟ್ಟಿ ಬೆಳೆದ ಅವಳಿಗೆ ಜಾತಿ ಜಾತಿಗಳಲ್ಲಿ, ಪಂಗಡ ಪಂಗಡಗಳಲ್ಲಿ, ಇರುವ ವ್ಯತ್ಯಾಸದ ಅರಿವು ಇಲ್ಲದೆ ಇರಲಿಲ್ಲ. ಆದರೆ ಇತಿಹಾಸದ ಆದಿಯಿಂದ ಕೆಳಗೆ ಬಿದ್ದಿದ್ದು ಈಗ ಹರಿಜನರೆಂಬ ಹೊಸ ಹೆಸರನ್ನು ಪಡೆದಿರುವ ಇವರು, ತಮ್ಮ ತಮ್ಮ ನಡುವೆಯೇ ಈಗಲೂ ಇಂತಹ ವ್ಯತ್ಯಾಸವನ್ನು ಗಣಿಸುತ್ತಾರೆಂಬುದು ಸ್ಪಷ್ಟವಾಗಿ ತಿಳಿದಿರಲಿಲ್ಲ: ಅಲ್ಲದೆ ಇಂಟರ್‌ಮೀಡಿಯೆಟ್ ಓದುತ್ತಿರುವ ಹುಡುಗಿ, ಮಗಳನ್ನು ಕಾಲೇಜಿಗೆ ಕಳಿಸಿರುವ ತಂದೆ: ಇಷ್ಟು ಅನುಕೂಲವಾಗಿ ಬಿ.ಎ. ಓದುತ್ತಿದ್ದ ಗಂಡು ಸಿಕ್ಕಿರುವಾಗಲೂ ಹೀಗೆ ಜಾತಿಯ ವ್ಯತ್ಯಾಸ ಎಣಿಸಿ ಅಡ್ಡಗೋಡೆ ಕಾಯುವುದು ಆಶ್ಚರ್ಯವೆನಿಸಿತು.

'ಈ ಜಾತಿ ವ್ಯತ್ಯಾಸವನ್ನ ನೀನು ನಂಬ್ತೀಯ?' – ಸತ್ಯ ಕೇಳಿದಳು.

'ನಾನು ನಂಬಿದರೆ ಅಥವಾ ನಂಬದೆ ಇದ್ದರೆ ಏನು ವ್ಯತ್ಯಾಸ?'

'ಹ್ಯಾಗೆ?'

'ಎಲ್ಲರಿಗಿಂತ ಕೀಳು ಜಾತಿ ನಮ್ಮದು. ನಾನು ನಂಬುಲ್ಲ ಅಂದ್ರೆ ಸಮಾನ ವಾಗಿ ನಡೆಸ್ಕಳುಕ್ಕೆ ನಮಗಿಂತ ಕೀಳಾದ ಒಂದು ಜಾತಿ ಇರಬೇಕಲ್ಲ. ಅಮೆರಿಕದ ನೀಗ್ರೋಗಳು ವರ್ಣವ್ಯತ್ಯಾಸವನ್ನ ನಾವು ನಂಬುಲ್ಲ ಅಂದ್ರೆ ಯಾವ ಅರ್ಥವಿದೆ? ಈ ಮಾತನ್ನ ಕೆಂಪು ಜನ ಅನ್ನಬೇಕು. ಹಾಗೆಯೇ ಇದೂ.'

ಈ ಉತ್ತರವನ್ನು ಕೇಳಿ ಸತ್ಯಳಿಗೆ ಆಶ್ಚರ್ಯವಾಯಿತು. ಕಾಲೇಜಿಗೆ ಸೇರಿದ ಐದು ಆರು ತಿಂಗಳಿನಲ್ಲಿ ಅವಳ ವಾಸ್ತವ ಜ್ಞಾನ ಸ್ಪಷ್ಟವಾಗುತ್ತಿದೆ. ಅವಳು ಕೊಟ್ಟ ಹೋಲಿಕೆಯು ಸಹ ಕರಾರುವಾಕ್ ಹೊಂದುತ್ತದೆ. ಈ ಹುಡುಗಿ ಬುದ್ಧಿವಂತಳಾಗುವುದರಲ್ಲಿ ಸಂದೇಹವಿಲ್ಲ. ಆದರೆ ಅಣ್ಣನಂತೆ ಕ್ರಾಂತಿಕಾರಿ ಮನೋಭಾವದವಳಾಗುತ್ತಾಳೆಯೋ ಮತ್ತೆ ಏನಾಗುತ್ತಾಳೆಯೋ! ಅವಳು ಇತ್ತೀಚೆಗೆ ಏನು ಓದಿದಳೆಂದು ಸತ್ಯ ವಿಚಾರಿಸಿದಳು. ತಾನು ರಜೆಯಲ್ಲಿ ಓದಲು ನಾಲ್ಕು ಪುಸ್ತಕಗಳನ್ನು ತಂದಿರುವುದಾಗಿ, ಬೇಕಾದರೆ ಸತ್ಯಳಿಗೆ ತಂದು ಕೊಡುವು ದಾಗಿ ಅವಳು ಹೇಳಿದಳು.

'ನಿಮ್ಮಣ್ಣ ಯಾವಾಗ ಬರ್ತಾರೆ? ಅವರ ಕೈಲಿ ನಾನು ಸ್ವಲ್ಪ ಮಾತಾಡ ಬೇಕು.'

'ನಾಡದ್ದು ನಾನೇ ತುಮಕೂರಿಗೆ ಹೋಗ್ತೀನಿ. ಅವನಿಗೆ ಹಂಗಂತ ಹೇಳ್ತೀನಿ. ಇಲ್ದೆ ಇದ್ರೆ ನೀವೂ ಬನ್ನಿ. ಹೋಗಿ ಬರಾಣ. ನಿಮಗೂ ಬೇಜಾರು ಕಳೆದ ಹಾಗಾಗುತ್ತೆ.'

ಸತ್ಯಳಿಗೆ ಯಾಕೆ ಹೋಗಿಬರಬಾರದು ಎನಿಸಿತು. ಹಾಗೆಯೇ ತನಗೆ ಬೇಕಾದ ಒಂದು ಗುದ್ದಲಿ, ಒಂದು ಕೊನೆಗತ್ತಿ, ಒಂದು ಮಚ್ಚುಗತ್ತಿ, ಎರಡು ಬಕೇಟುಗಳನ್ನು ತರಬಹುದು. ಆ ಊರಿನಲ್ಲಿ ಹೇಳಿಸಿಕೊಳ್ಳುವಂತಹ ಪುಸ್ತಕದ ಅಂಗಡಿ ಇವೆಯೋ ಇಲ್ಲವೋ. ಇದ್ದರೆ ಒಂದೆರಡು ಪುಸ್ತಕಗಳನ್ನಾದರೂ ತರ ಬಹುದು.

ಮರುದಿನ ಬೆಳಗಿನ ಬಸ್ಸಿನಲ್ಲಿ ಇಬ್ಬರೂ ತುಮಕೂರಿಗೆ ಹೋದರು. ಇವರಿಬ್ಬರೂ ತಿರುಮಲಾಪುರದ ಸ್ಟ್ಯಾಂಡಿನಲ್ಲಿ ಸಂಧಿಸಿದುದನ್ನು ಮತ್ತು ಜೊತೆಯಲ್ಲೇ ಬಸ್ಸಿನಲ್ಲಿ ಕೂತಿದ್ದನ್ನು ಅಲ್ಲಿದ್ದವರೆಲ್ಲ ನೋಡಿದರು. ಜಾತಿಕುಲಗಳನ್ನೆಲ್ಲ ಬಿಟ್ಟವಳೆಂದು ಇವಳ ಬಗೆಗೆ ಮೊದಮೊದಲು ಇದ್ದ ಕುತೂಹಲವು ಈಗ ಇಳಿದುಹೋಗಿತ್ತು. ಅವಳು ಮಾದಿಗ ಹುಡುಗಿಯನ್ನು ಮುಟ್ಟಿಸಿಕೊಂಡು ಕೂತರೂ ಅದರಲ್ಲಿ ಈಗ ಅವರಿಗೆ ಸ್ವಾರಸ್ಯ ಕಾಣುತ್ತಿರಲಿಲ್ಲ. ಅವಳೆಷ್ಟಾದರೂ ಪೂರ್ತಿ ಕೆಟ್ಟುಹೋದವಳು. ತಾವು ನೆಟ್ಟಗಿದ್ದರೆ ಸಾಕು ಎಂಬ ಮನೋಭಾವ ಊರಿನವರಿಗೆಲ್ಲ ಬಂದು ಹೋಗಿತ್ತು.

ಹತ್ತು ಗಂಟೆಗೆ ತಲುಪಿ ಸ್ಟ್ಯಾಂಡಿನಲ್ಲಿ ಬಸ್ಸು ಇಳಿದು ಇಬ್ಬರೂ ನಡೆದು ಮಂಡಿಪೇಟೆಗೆ ಹೋದರು. ಮೋಹನದಾಸನ ಅಂಗಡಿ ಇಷ್ಟು ದೊಡ್ಡದೆಂದು ಸತ್ಯ ಕಲ್ಪಿಸಿಕೊಂಡೇ ಇರಲಿಲ್ಲ. ನಿಯಾನ್ ಬಲ್ಬಿನಲ್ಲಿ, ಬಾಟಾ ಎಂದು ಇಂಗ್ಲಿಷಿನಲ್ಲಿ ದಪ್ಪನಾಗಿ ಬರೆದ ಬೋರ್ಡು. ಪ್ರವೇಶಿಸಿದರೆ ಎಡಭಾಗಕ್ಕೆ ಉದ್ದಕ್ಕೂ ಹತ್ತು ಅಡಿ ಎತ್ತರಕ್ಕೆ ಬಾಟಾ ಬೂಟು, ಚಪ್ಪಲಿ, ಮತ್ತು ಸ್ಯಾಂಡಲುಗಳ ರಟ್ಟಿನ ಪೆಟ್ಟಿಗೆಗಳನ್ನು ಜೋಡಿಸಿದ ಸ್ಟ್ಯಾಂಡುಗಳು. ನೆಲಕ್ಕೆ ಒರಟು ರತ್ನಗಂಬಳಿ. ಗಿರಾಕಿಗಳು ಕೂರಲು ಮೆತ್ತೆ ಹಾಕಿದ ಸಾಲುಬೆಂಚು. ಬಾಗಿಲಿನ ಹತ್ತಿರವೇ ಕಬ್ಬಿಣದ ಮೇಜು ಕುರ್ಚಿಗಳು. ಮೇಜದ ಮೇಲೆ ಅಗಲವಾದ ಗಾಜಿನ ಹಲಗೆ. ಅದೇ ಅಂಗಡಿಗೆ ಹೊಂದಿದಂತೆ ಪಕ್ಕದಲ್ಲಿ ಮತ್ತೊಂದು ಪಾದರಕ್ಷೆಗಳ ಅಂಗಡಿ. ಸ್ವದೇಶೀ ಚಪ್ಪಲ್ ಮಾರ್ಟ್ ಎಂದು ಕನ್ನಡದಲ್ಲಿ ಬೋರ್ಡ್ ಇದ್ದ ಅದಕ್ಕೂ ಈ ಬಾಟಾ ಅಂಗಡಿಗೂ ನಡುವೆ ಒಂದು ಬಾಗಿಲು ಇತ್ತು. ಈ ಎರಡು ವಿಭಾಗಗಳೂ ಒಬ್ಬರ ಮಾಲೀಕತ್ವಕ್ಕೆ ಸೇರಿದುವೆಂದು ಯಾರಿಗಾದರೂ ಅರ್ಥವಾಗುತ್ತಿತ್ತು.

ವ್ಯಾಪಾರ ನಡೆಯುತ್ತಿತ್ತು. ಬಾಟಾ ವಿಭಾಗದ ಮೇಜದ ಹಿಂದೆ ಕೂತು ಲೆಕ್ಕ ಬರೆಯುತ್ತಿದ್ದವನು ಬ್ರಾಹ್ಮಣನೆಂದು ಮುಖ ನೋಡಿದರೇ ತಿಳಿಯುತ್ತಿತ್ತು. ಒಳಗೆ ಬರುವ ಗಿರಾಕಿಗಳ ಕಾಲು ಮುಟ್ಟಿ ಅಳತೆ ನೋಡಿ ಬೂಟುಗಳನ್ನು ತೊಡಿಸುತ್ತಿದ್ದ ಇಬ್ಬರು ಮೇಲುಜಾತಿಯವರೇ. ಒಬ್ಬನಂತೂ ಬ್ರಾಹ್ಮಣನೇ ಎಂದು ಮುಖ ನೋಡಿ ಸತ್ಯ ಅಂದಾಜು ಮಾಡಿಕೊಂಡಳು. ಬಿಲ್ ಕ್ಲರ್ಕ್ ಮತ್ತು

ಒಬ್ಬ ಸೇಲ್ಸ್ ಬಾಯ್ ಬ್ರಾಹ್ಮಣರವನು, ಮತ್ತೊಬ್ಬ ಗೌಡರವನೆಂದು ಮೋಹನದಾಸನೇ ಹೇಳಿದುದು ಅವಳ ನೆನಪಿಗೆ ಬಂತು. ಬಿಲ್ ಕ್ಲರ್ಕ್ ಮೀರಳಿಗೆ ನಮಸ್ಕಾರ ಹೇಳಿ, 'ಮೇಲಿದಾರೆ' ಎಂದ. ಮೀರಾ ಸತ್ಯಳನ್ನು ಕರೆದು ಕೊಂಡು ನೇರವಾಗಿ ಒಳಕೋಣೆಗೆ ಹೋಗಿ, ಅಲ್ಲಿದ್ದ ಮೆಟ್ಟಿಲುಗಳನ್ನು ಹತ್ತಿ ಮಹಡಿಗೆ ಹೋದಳು. ಅಲ್ಲಿಯೂ ಎಕ್ಕಡ ಮತ್ತು ಬೂಟುಗಳ ಸಂಗ್ರಹವಿತ್ತು. ಆದರೆ ಹಿಂಭಾಗದ ಒಂದು ಕೋಣೆ ಮಾತ್ರ ವಾಸಕ್ಕೆ ಯೋಗ್ಯವಾಗಿ ಸ್ವಚ್ಛ ವಾಗಿತ್ತು. ಒಂದು ಸ್ಪ್ರಿಂಗ್ ಮಂಚ. ಮರದ ಮೇಜ, ಬರೆಯುವ ಕುರ್ಚಿ, ನಾಲ್ಕು ಬೆತ್ತದ ಕುರ್ಚಿ. ಒಂದು ದೊಡ್ಡ ಗಾಡ್ರೆಜ್ ಅಲಮಾರು. ಮತ್ತೊಂದು ಗಾಜಿನ ಬಾಗಿಲಿನ ಮರದ ಪುಟ್ಟ ಬೀರು. ಅದರ ಭರ್ತಿ ಪುಸ್ತಕಗಳು ಕಾಣುತ್ತಿ ದ್ದುವು. ಎಡಗೈಲಿ ಸಿಗರೇಟು ಹಿಡಿದುಕೊಂಡು ಮೇಜದ ಮೇಲಿದ್ದ ಕೆಲವು ಕೈಬರಹದ ಹಾಳೆಗಳನ್ನು ನೋಡುತ್ತಿದ್ದ ಮೋಹನದಾಸ ತಂಗಿಯ ಜೊತೆಗೆ ಸತ್ಯಳನ್ನು ಕಂಡು ಆಶ್ಚರ್ಯ ಸಂಭ್ರಮಗಳಿಂದ ಎದ್ದು ನಿಂತ. 'ವೆಲ್‌ಕಂ' – ಎಂದವನು, 'ನೀವು ಬಂದದ್ದು ಆಶ್ಚರ್ಯ' ಎಂದ.

'ನಿನ್ನ ಕೈಲಿ ಮಾತಾಡಬೇಕು ಅಂದ್ರು. ಕರ್ಕಂಡು ಬಂದೆ' – ಮೀರಾ ಹೇಳಿದ ತಕ್ಷಣ ಸತ್ಯ, 'ಪೇಟೇಲಿ ಒಂದಿಷ್ಟು ಸಾಮಾನು ತಗೋಬೇಕಾಗಿತ್ತು. ಹಾಗೆಯೇ ಮೀರಾ ಜೊತೆಗೆ ಸಿಕ್ಕಿದಳು.'

ಮೋಹನದಾಸನಿಗೆ ಆ ಮಾತಿನ ಕಟು ತಾಕಿತು. ತಾಳ್ಮೆಯಿಂದ ಹೇಳಿದ: 'ನಿಂತೇ ಇದೀರಲ್ಲ. ಕೂತ್‌ಕೊಳಿ. ನಿಮ್ಮನ್ನೇ ಜ್ಞಾಪಿಸಿಕೊತ್ತಿದ್ದೆ. ನೋಡಿ, ಅವತ್ತು ಬಂದೆನಲ್ಲ, ನಾನೇ ಬರೆಯೋಣ ಅಂತ ಕೂತು ಐದಾರು ಹಾಳೆ ಬರೆದೆ. ಅದನ್ನ ನೋಡೂ ಮನಸ್ಸಾಗಿರಲಿಲ್ಲ. ಈಗ ಓದಿದರೆ ತಪ್ಪು ನಂಗೇ ತಿಳಿಯುತ್ತೆ' – ಎಂದು, ಬೆತ್ತದ ಕುರ್ಚಿಯ ಮೇಲೆ ಕುಳಿತ ಸತ್ಯಳ ಕೈಗೆ, ಮೇಜದ ಮೇಲಿಟ್ಟು ಕೊಂಡು ತಾನು ನೋಡುತ್ತಿದ್ದ ಹಾಳೆಗಳನ್ನು ಜೋಡಿಸಿಕೊಟ್ಟ. ಸತ್ಯ ಮೊದಲ ಪುಟವನ್ನು ಓದಿ ನೋಡಿದಳು. ಅವನ ಅಕ್ಷರ ಸ್ಪಷ್ಟವಾಗಿತ್ತು. ಭಾಷೆ ಕೃತಕ ವಾಗಿ ಸುತ್ತುದಾರಿಯ ಪ್ರೌಢತೆಯಿಂದ ಕೂಡಿತ್ತು. ಆದರೆ ವೈಖರಿ ಮಾತ್ರ ಮೇಲುಜಾತಿಯ ಬಗೆಗೆ ಟೀಕೆ, ಬಿರುಸು ಮಾತು, ನಿಂದೆ ಮತ್ತು ತಿರಸ್ಕಾರಗಳ ದ್ದಾಗಿತ್ತು. 'ಏನು ತಪ್ಪು ಗೊತ್ತಾಯ್ತು ನಿಮಗೆ ಇದರಲ್ಲಿ?' – ಸತ್ಯ ಕೇಳಿದಳು.

'ಬರವಣಿಗೆಯಲ್ಲಿ ಇಷ್ಟೊಂದು ಬಯ್ಯಬಾರದು ಅಂತ.'

'ನಿಜಜೀವನದಲ್ಲೂ ಅಷ್ಟೆ. ಮಾತಿನಲ್ಲಿ ವಿನಾಕಾರಣ ಕಟು. ವ್ಯಂಗ್ಯ ಇರ ಬಾರದು.'

ಅವನು ಕತ್ತು ತಿರುಗಿಸಿ ಅವಳ ಮುಖ ನೋಡಿದ. ಅವಳು ಗಂಭೀರ

ಳಾಗಿಯೇ ಇದ್ದಳು. ಅವನು ಹೇಳಿದ: 'ಪ್ರಾಯಶಃ ಇದನ್ನ ಬರೆಯುಕ್ಕೆ ನನ್ನ ಕೈಲಿ ಆಗುಲ್ಲ' ಎಂದರೆ, 'ನೀವೇ ಬರೆದುಕೊಡಿ' ಎಂಬಂತಿತ್ತು ಅವನ ಧ್ವನಿ.

'ನಾನು ಬರೀತೀನಿ. ಕನ್ನಡ ಬರೆದು ಅಭ್ಯಾಸವಿಲ್ಲ. ಆದರೆ ಕಷ್ಟವಾಗುಲ್ಲ.'

'ಇನ್ನು ಮೂರು ತಿಂಗಳಲ್ಲಿ ಬೇಕು. ನಿಮ್ಮ ಖರ್ಚು ಏನಿದ್ದರೂ ನಾನು ಕೊಡ್ತೀನಿ.'

'ಮೈಸೂರಿನಲ್ಲಿ ಇರಬೇಕಾಗುತ್ತೆ. ನೀವೇನೂ ಖರ್ಚು ಕೊಡಬೇಕಾಗಿಲ್ಲ. ನನ್ನ ಹತ್ತಿರ ಇದೆ.'

'ಆದರೆ ಇದು ನಮ್ಮ ಜಾತಿಯ ಕೆಲಸ.'

ಸತ್ಯ ಒಂದು ನಿಮಿಷ ಸುಮ್ಮನಾದಳು. ಆಮೇಲೆ ಹೇಳಿದಳು: 'ನಮ್ಮ ಜಾತಿ ಅನ್ನುವ ಜಾತೀಯ ಭಾವ ನಿಮ್ಮಲ್ಲಿ ತುಂಬಿರುವಾಗ ನಾನ್ಯಾಕೆ ಕೆಲಸ ಮಾಡಿ ಕೊಡಬೇಕು? ನನಗೇನು ದುಡ್ಡಿನ ಆಶೆಯಿಲ್ಲ.'

ಅಣ್ಣನ ಮಾತಿನಿಂದ ಮೀರಳಿಗೆ ಕೆಡುಕೆನಿಸಿತು. ತನ್ನ ಗುರುವನ್ನು ಅರ್ಥ ಮಾಡಿಕೊಳ್ಳದೆ ಅವರೊಡನೆ ಅವನು ಹೀಗೆ ಒರಟೊರಟಾಗಿ ಆಡುವುದನ್ನು ಅವಳು ಸಹಿಸಲಿಲ್ಲ. ಅವನೆದುರಿಗೆ ಮಾತನಾಡುವ ಧೈರ್ಯವೂ ಈ ಮೊದಲು ಇರಲಿಲ್ಲ. ಆದರೆ ಕಾಲೇಜಿಗೆ ಹೋಗಿದ್ದುದರಿಂದಲೋ ಅಥವಾ ತನ್ನ ತಿಳಿವಳಿಕೆ ಬೆಳೆದಿರುವುದರಿಂದಲೋ ಮಾತನಾಡಿದಳು: 'ಅಣ್ಣ, ಇಷ್ಟಾದರೂ ನಿಂಗೆ ಅವರ ಸ್ವಭಾವ ಅರ್ಥವಾಗಿಲ್ಲ. ಒರಟುತನ ಕಡಿಮೆ ಮಾಡಿಕೊಳ್ಳದಿದ್ದರೆ ನಿಂಗೆ ಜನಗಳ ಗುಣ ತಿಳಿಯೂದೇ ಇಲ್ಲ.'

ಮೋಹನದಾಸನಿಗೆ ನಾಚಿಕೆ ಎನಿಸಿತು. ತಂಗಿಗೆ ಇಷ್ಟು ಧೈರ್ಯ ಬಂದಿರುವುದನ್ನು ನೋಡಿ ಆಶ್ಚರ್ಯವೆನಿಸಿತು; ಸಿಟ್ಟೂ ಬಂತು. ಅವನು ಅವಳ ಮುಖವನ್ನು ದಿಟ್ಟಿಸಿ ನೋಡಿದ. ಅವಳು ತಲೆ ತಗ್ಗಿಸಿ ನೋಡಿದಳು. ಮಾತನ್ನು ಬದಲಾಯಿಸಿ ಸತ್ಯ ಕೇಳಿದಳು: 'ಶಾಂತಿ ಸತ್ಯಾಗ್ರಹಗಳಿಂದ ಹರಿಜನರ ಉನ್ನತಿ ಆಗುಲ್ಲ ಅಂತೀರಾ?'

ತಂಗಿಯ ಮೇಲೆ ರೇಗಿ ಪುನಃ ಒರಟನೆನಿಸಿಕೊಳ್ಳುವ ಅಥವಾ ರೇಗದೆ ಸುಮ್ಮನಿದ್ದು ನಾಚಿಕೆಯನ್ನು ಒಪ್ಪಿಕೊಳ್ಳುವ ಸಂದಿಗ್ಧದಿಂದ ತಪ್ಪಿಸಿಕೊಳ್ಳಲು ಈ ಪ್ರಶ್ನೆಯು ಅವನಿಗೆ ತುಂಬಾ ಅನುಕೂಲವಾಯಿತು. ಅದಕ್ಕೆ ಉತ್ತರ ಹೇಳಲು ಅವನು ಯೋಚಿಸಲೇ ಬೇಕಿರಲಿಲ್ಲ. ಹೇಳಿದ: 'ಶಾಂತಿಸತ್ಯಾಗ್ರಹ ನಮ್ಮಪ್ಪನಿಗೆ ಸೇರಿದ್ದು. ಅವರು ಆರು ವರ್ಷ ಇದ್ದರಲ್ಲ ಶಾಂತಿಯ ಆಶ್ರಮದಲ್ಲಿ, ಏನು ಸಾಧಿಸಿದರು? ಮಾದಿಗ ಹೊಲೆಯ ಅನ್ನೂ ವಾಸ್ತವ ಹೆಸರಿನ ಬದಲು ಹರಿಜನ ಅನ್ನೂ ಆಕರ್ಷಕ ಹೆಸರು ಕೊಟ್ಟರು. ಅಂದರೆ ಹರಿ ಅನ್ನುವ ಹೆಸರನ್ನ ಹೊಲೆಗೆಡಿ

ಸಿದರು. ಆ ಜನದ ವಿಷಯದಲ್ಲಿ ಇರುವ ತಿರಸ್ಕಾರ, ಹೊಲೆಮನೋಭಾವ ಮಾತ್ರ ಹೋಗಲಿಲ್ಲ. ಇನ್ನು ಸತ್ಯಾಗ್ರಹ: ನಮ್ಮಪ್ಪನೇ ಒಂದು ಸಲ ಊರಿನ ದೇವಸ್ಥಾನಕ್ಕೆ ಜಾತ್ಯಸ್ಥರನ್ನೆಲ್ಲ ಕರಕೊಂಡು ಹೋಗಿದ್ದನಂತೆ. ಈಗ ಡೆಪ್ಯೂಟಿ ಮಿನಿಸ್ಟರ್ ಆಗಿದಾನಲ್ಲ ಮೇಲಗಿರಿಗೌಡ, ಅವನ ಜೊತೆ ನಿಂತು ಇವರು ಒಳಗೆ ತೀರ್ಥ ತಗೊಂಡ ಫೋಟೋ ಪೇಪರಲ್ಲಿ ಬಂದಿದ್ದು, ಅದಕ್ಕೆ ಕಟ್ಟು ಹಾಕಿಸಿ ಇಟ್ಟಿದಾರೆ ನಮ್ಮ ಮನೇಲಿ. ಅದಾದ ಮೇಲೆ ಊರ್ನೋರೆಲ್ಲ ಕೂಡಿ ದೇವರಿಗೆ, ದೇವಸ್ಥಾನಕ್ಕೆ ಮಡಿ ಮಾಡಿದರಂತೆ. ಆಮೇಲೆ ನಾವು ಒಂದು ಸಲವಾದರೂ ದೇವಸ್ಥಾನಕ್ಕೆ ಹೋಗಿದೇವೆಯೇ?'

'ಯಾಕೆ ಹೋಗಬಾರದು?'

'ಹೋದ್ರೆ ಕಲ್ಲು ತಗಂಡು ಹೊಡೀತಾರೆ. ಖೂನಿಯಾಗ್ತವೆ. ನೀವು ಮೈಸೂರಲ್ಲಿ ಓದ್ತಿದ್ರಲ, ಆಗ ಒಂದು ದಿನ ನಾನು ನಿಮ್ಮೂರಿನಲ್ಲಿ ನಿಮ್ಮಣ್ಣ ನೋರ ಹೋಟೆಲಿಗೆ ನುಗ್ಗಿ, ನನಗ್ಯಾಕೆ ಕಾಫಿ ಕೊಡುಲ್ಲ ಅಂತ ಕೇಳಿದೆ. ಕೂತು ಕಾಫಿ ಕುಡೀತಿದ್ದೋರೇ, ಮಾದಿಗಸೂಳೆಮಗ ಒಳಗೆ ಬಂದ ಅಂತ ಎದ್ದು ಬಂದು ಹೊಡೆದರು. ಗೌಡ, ಲಿಂಗಾಯತ, ಮುಗ್ಗ, ಹಜಾಮ, ಎಲ್ಲಾ ಸೇರಿ ಹೊಡೆದರು. ಇಲ್ಲಿ ನೋಡಿ' – ಎಂದು ಮೇಲೆ ಎದ್ದು ಸ್ವಲ್ಪ ಹತ್ತಿರ ಬಂದು, ತನ್ನ ದಪ್ಪ ಮೀಸೆಯ ಬಲಭಾಗದ ಕೂದಲನ್ನು ಸ್ವಲ್ಪ ಬಿಡಿಸಿ ತೋರಿಸಿದ. ತುಟಿ ಸ್ವಲ್ಪ ಭಾಗ ಹರಿದು ಕುರೂಪವಾಗಿದ್ದುದು ಸತ್ಯಳಿಗೆ ಕಾಣಿಸಿತು. 'ಹೀಗೆ ಗಾಯವಾಗೂ ಹಾಗೆ ಒಬ್ಬ ಗಾಜಿನ ಲೋಟದಲ್ಲಿ ಹೊಡೆದ. ಪೋಲೀಸಿನೋರಿಗೆ ಹೇಳಿದರೆ ನೀನ್ಯಾಕೆ ಹಾಗೆ ಜನಾಭಿಪ್ರಾಯದ ವಿರುದ್ಧ ಹೋಟೆಲಿಗೆ ನುಗ್ಗಿದೆ ಅಂದ್ರು. ತುಟಿ ಹರಿದಿರೂದು ಕಾಣದಿರಲಿ ಅಂತ ಇಷ್ಟು ದಪ್ಪ ಮೀಸೆ ಬೆಳೆಸಿದೀನಿ.'

ಸತ್ಯಳಿಗೆ ಈ ಸಂಗತಿ ತಿಳಿದಿರಲಿಲ್ಲ. ಅವಳು ಗಂಭೀರಳಾಗಿ ಯೋಚಿಸುತ್ತಾ ಕುಳಿತಳು. ಒಂದು ನಿಮಿಷ ಅವನೂ ಮಾತನಾಡಲಿಲ್ಲ. ಅನಂತರ ಹೇಳಿದ: "ನಮ್ಮಪ್ಪ ಆಶ್ರಮಕ್ಕೆ ಯಾಕೆ ಓಡಿಹೋದರು ಗೊತ್ತೆ? ಮೀಸೆ ಬೆಳೆಸಿದರಂತೆ. ಅದರಿಂದ ಊರ ಯಜಮಾನ ಇದಾನಲ ತಿರುಮಲೇಗೌಡ, ಮಂತ್ರಿಯ ಅಪ್ಪ, ಅವನಿಗೆ ಅವಮಾನವಾಯ್ತಂತೆ. ಮಾದಿಗ ಮೀಸೆ ಬಿಡೂದು ಅಂದ್ರೆ ಏನು? ಇವರನ್ನ ಎಳೆತರಿಸಿ ಕಂಬಕ್ಕೆ ಕಟ್ಟಿಸಿ ಬಾರುಕೋಲಲ್ಲಿ ಹುಯ್ಸಿದನಂತೆ. ನಾಚಿಕೆ ಯಾಗಿಯೋ, ಹೆದರಿಕೊಂಡೋ, ಅಂತೂ ನಮ್ಮಪ್ಪ ಊರು ಬಿಟ್ಟು ಹೋಗಿ ಅಲ್ಲಿ ಆಶ್ರಮವಾಸಿಯಾಗಿದ್ದ. ಸ್ವತಂತ್ರ ಬಂದ ಮ್ಯಾಲೆ ಊರಿಗೆ ಬಂದು ನೆಲಸಿದ. ನಮ್ಮ ಅಪ್ಪ ನನ್ನ ಈ ಮೀಸೆ ನೋಡಿ ಏನಂತಾಳೆ ಗೊತ್ತಾ? 'ಅಪರಸ್ವಾರು

ಮೀಸೆ ಬಿಟ್ರು ಅಂತ ಬಾರುಕೋಲಲ್ಲಿ ಹ್ವಡೆಸಿದ್ರು. ಅದರ ಮುಯ್ಯಿ ಸ್ಕಣಾಕ್ಕೆ ನನ್ನ ಮಗ ದಪ್ಪ ಮೀಸೆ ಬೆಳೆಸಿಯುವ್ನೆ' ಅಂತಾಳೆ. ಹಾಗಾದ ಅರ್ಥವಾಗಭೌದು. ನಮ್ಮಪ್ಪ ನಂಗೆ ಕೊಟ್ಟದ್ದೇನು ಗೊತ್ತೆ? ಸತ್ತಿಗ ಅಂ ಹುಟ್ಟುಹೆಸರು ತೆಗೆದು ಮೋಹನದಾಸ ಅಂತ ಮಾಡಿದ. ಮುಂದುವರಿದ ಹೆಸರು ಬೇಕಾಗಿದ್ದರೆ ಬರೀ ಮೋಹನ ಅಂತ ಯಾಕೆ ಇಡಲಿಲ್ಲ? ದಾಸ ಅಂತ ಯಾ ಸೇರಿಸಿದ? ಅಂದ್ರೆ ನಾವು ಮೂಲತಃ ದಾಸರು ಅನ್ನೋದನ್ನ ಅವನು ಒಪ್ಪಿ ಕೊಂಡಿದಾನೆ."

'ಮಹಾತ್ಮರಹೆ ಸರೇ ಮೋಹನದಾಸ ಅಂತಲ್ಲವೆ? ಇದ್ದದ್ದು?'

'ಮಗನಿಗೆ ಹೆಸರಿಡುಕ್ಕೂ ಗುರುವಿಗೆ ದಾಸನಾಗಬೇಕಿತ್ತೆ ಇವನು? ಸ್ವಂ ವಾಗಿ ಒಂದು ಹೆಸರು ಹೊಳೀಲಿಲ್ಲವೆ? ನಾನು ಹೇಳೋಬೇನು ಅಂದ್ರೆ ನಮ್ಮ ಜನದ ಇಂಥ ದಾಸ್ಯ ಹೋಗದೆ ನಾವು ಮಾದಿಗತನದಿಂದ ಮೇಲೆ ಬರುಕ್ಕೆ ಸಾಧ್ಯವಿಲ್ಲ.'

ಸತ್ಯ ಸುಮ್ಮನೆ ಕುಳಿತಿದ್ದಳು. ಮೋಹನದಾಸನೂ ಸುಮ್ಮನಾದ. ಹತ್ತು ನಿಮಿಷ ಎಲ್ಲ ಮೌನವಾಗಿದ್ದರು. ಮೀರಾ ಕೈಗಡಿಯಾರ ನೋಡಿಕೊಂಡು ಅಂದಳು: 'ಅಣ್ಣ, ನಾವಿಬ್ಬರೂ ತಿಂಡಿ ತಿಂದಿಲ್ಲ. ಹನ್ನೊಂದೂವರೆಯಾಗಿದೆ.

'ತಿಂಡಿ ಆಮೇಲಾಗುತ್ತೆ' – ಸತ್ಯ ಅಂದಳು.

'ಸಾರಿ' – ಎಂದ ಮೋಹನದಾಸ, ತನ್ನ ಮೇಜದ ಕಾಲಿಗೆ ತಗುಲಿಸಿದ್ದ ಕಾಲಿಂಗ್ ಬೆಲ್ ಒತ್ತಿದ. ಕೆಳಗೆ ಕೆಲಸ ಮಾಡುತ್ತಿದ್ದ ಒಬ್ಬ ಬಂದ. 'ಎರಡು ಪ್ಲೇಟ್ ಇಡ್ಲಿ ಬೆಣ್ಣೆ, ಎರಡು ತುಪ್ಪದ ದೋಸೆ, ಮೂರು ಪ್ಲೇಟ್ ಉದ್ದಿನ ಒಡೆ, ಮೂರು ಕಾಫಿ ತರಿಸು' – ಎಂದ. ಕೆಲಸಗಾರ ಹೊರಟುಹೋದ.

ಸತ್ಯ ಕೇಳಿದಳು: 'ಹಿಡಿದು ಒದೀಬೇಕು ಅಂತೀರಲ್ಲ, ಆ ಮಾತಿನ ಅರ್ಥ ವೇನು? ಯಾವ ರೀತಿ ಜೋರು ಮಾಡಿದರೆ ಹರಿಜನರಿಗೆ ಸಮಾನತೆ ಬರುತ್ತೆ ಅಂತೀರ? ಬೆಂಕಿ ಹೊತ್ತಿಸಿ ಮನೆ ಸುಟ್ಟು, ಕೆರೆ ಕಟ್ಟೆ ಒಡೆದು, ಟೈಂ ಬಾಂಬು ಇಟ್ಟು ರೈಲ್ವೆ ಸ್ಟೇಷನ್ ಸಿಡಿಸಿದರೆ ಆಗುತ್ತೆ ಅಂತಲೆ?'

'ನಾನು ಬರೆದದ್ದ ನೋಡಿದಿರಲ್ಲ. ಸಿಟ್ಟಿನ ಮಾತು ಬಂದ್ರೆ ಅಭಿಪ್ರಾಯ ಸ್ಪಷ್ಟವಾಗುಲ್ಲ ಅಂತ ನಂಗೆ ಇವತ್ತು ಗೊತ್ತಾಯ್ತು. ಒದೆಯೋದು ಅಂದ್ರೆ ಅದಲ್ಲ ಅರ್ಥ. ನಮ್ಮಪ್ಪನ್ನ ನೋಡಿ, ಅವರು ಕೊಡೂ ಎಂಜಲ ತಿಂಡಿಗೆ ಅವನು ಹೇಳಿದ ಹಂಗೆ ಅಸೆಂಬ್ಲೀಲಿ ಕೈ ಎತ್ತಿಕೊಂಡಿದಾನೆ. ನಮ್ಮೋರೆಲ್ಲ ಹೀಗೆಯೇ. ಊರಲ್ಲೂ ಅಷ್ಟೇ. ನಮ್ಮ ಜನಕ್ಕೆ ಆತ್ಮಗೌರವವೇ ಇಲ್ಲ. ಒಂದು ಸಲ ದೇವ ಸ್ಥಾನಕ್ಕೆ ಹೋದರು. ಅಲ್ಲಿಗೆ ಮುಗೀತು. ಒಂದು ಕೆಲಸ ಮಾಡಬೇಕು. ಅಸೆಂಬ್ಲಿ

ಸಿಂಬರುಗಳ, ಮಂತ್ರಿಗಳ ಹತ್ತಿರ ಹೋಗಬೇಕು. ನಮ್ಮೂರಲ್ಲಿ ಇಂಥ ಗುಡಿ ಇದೆ. ಅದಕ್ಕೆ ದಿನಾ ನಾವು ಹೋಗಿ ಬತ್ತೀವಿ. ಗಲಾಟೆಯಾದರೆ ನೋಡಿಕಳುಕ್ಕೆ ಪೋಲೀಸರನ್ನ ಕಳಿಸಿ. ನೀವು ಕಳಿಸಲಿಲ್ಲ, ಪೇಪರಿನಲ್ಲಿ ಬರೀತೀವಿ. ನಿಮಗೆ ಬೆಂಬಲ ಕೊಡುಲ್ಲ. ವಿರೋಧಪಕ್ಷದೋರ ಜೊತೆ ಸೇರ್ತೀವಿ ಅಂತ ಬೆದರಿಕೆ ಹಾಕಬೇಕು. ಸೇರಬೇಕು. ಒಪ್ಕಂಡು ಕಳಿಸಿದರು: ಊರಲ್ಲಿ ಇಪ್ಪತ್ತು ಮೂವತ್ತು ಜನ ನಮ್ಮೋರ ಒಂದು ಕಮಿಟಿ ಮಾಡಬೇಕು. ಬೆಳಗ್ಗೆ ಸಂಜೆ ನಾಲ್ಕು ನಾಲ್ಕು ಜನ ದೇವಸ್ಥಾನಕ್ಕೆ ಊದುಗಡ್ಡಿ ಕೊಟ್ಟು ಬರೂಕ್ಕೆ ಹೋಗ ಬೇಕು. ಹೀಗೆ ನೂರು ತಿಂಗಳು ಮಾಡಲಿ. ಜನಕ್ಕೆ ಅಭ್ಯಾಸವಾಗುತ್ತೆ. ಅಷ್ಟ ರಲ್ಲೂ ಅಭ್ಯಾಸ ಮಾಡಿಕೊಳ್ಳದಿದ್ದರೆ ಆ ದೇವಸ್ಥಾನಾನೇ ಡೈನಾಮೈಟ್ ಹಾಕಿ ಡಂ ಅನ್ನಿಸಬೇಕು.'

'ಇಷ್ಟಾದರೆ ಸಾಕೆ' – ಸತ್ಯ ಕೇಳಿದಳು.

'ಇಲ್ಲ. ಹೋಟೆಲಿಗೆ ನುಗ ಬೇಕು. ಮೊದಮೊದಲು ಪೋಲೀಸ್‌ನೋರು ಜೊತೇಲಿ ಇರಲಿ. ಆಮೇಲೆ ನಮ್ಮೋರೇ ಧೈರ್ಯವಾಗಿ ಹೋಗಬೇಕು. ಹಾಗೂ ಯಾರಾದರೂ ತಡೆದರು, ಹಿಡ್‌ಕಂಡು ಅವರಿಗೆ ಹಲ್ಲು ಮುರಿದುಬಿಡಬೇಕು. ರಾತ್ರಿ ಹೊತ್ತು ಕಾದಿದ್ದು ಅಂಥೋರ ಕೈ ಕಾಲು ಮುರೀಬೇಕು. ಒಂದೆರಡು ಖೂನಿಯೂ ಆಗಬೇಕು. ಅಂಥದುಕ್ಕೆಲ್ಲ ನಮ್ಮ ಜನದಲ್ಲಿ ಒಗ್ಗಟ್ಟು ಬೇಕು. ನಾನು ಹೇಳೂ ವಿಚಾರ ಅವರಿಗೆ ಚನ್ನಾಗಿ ಅರ್ಥವಾಗಬೇಕು. ಅಂದ್ರೆ ಅಸೆಂಬ್ಲಿ ಮೆಂಬರು ನಮ್ಮಪ್ಪನಂತೋರು ಆಗಕೂಡದು, ಗಂಡಸರು ಆಗ್ಬೇಕು.'

ಅಷ್ಟರಲ್ಲಿ ಹೋಟೆಲಿನ ಮಾಣಿ ತಿಂಡಿ ತಂದ. ಮೋಹನದಾಸನ ನಾಷ್ಟ ಆಗಲೇ ಮುಗಿದಿತ್ತು. ಆದುದರಿಂದ ಅವನು ಬರೀ ಒಡೆ ತೆಗೆದುಕೊಂಡ. ಮಾಣಿ ಮತ್ತೆ ಹೋಗಿ ನಿಧಾನವಾಗಿ ಕಾಫಿ ತರುವ ಹೊತ್ತಿಗೆ ಇವರಿಬ್ಬರೂ ತಿಂಡಿ ತಿಂದರು. ಕಾಫಿ ಕುಡಿದನಂತರ ಸತ್ಯ ಮೇಲೆ ಎದ್ದು ಗಾಜಿನ ಬಾಗಿಲಿದ್ದ ಬೀರುವಿನ ಹತ್ತಿರ ಹೋಗಿ ನೋಡಿದಳು. ಮೋಹನದಾಸ ಅದರ ಬಾಗಿಲು ತೆಗೆದುಕೊಟ್ಟ. ಇತಿಹಾಸದ ಎಂಟು ಪುಸ್ತಕಗಳಿದ್ದುವು. ಮನುಧರ್ಮಶಾಸ್ತ್ರ, ಕೂರ್ಮಪುರಾಣ, ವಿಷ್ಣುಪುರಾಣಗಳ ಇಂಗ್ಲಿಷ್ ಅನುವಾದ. ಅಂಬೇಡ್ಕರರ ಹೆಚ್ಚು ಕಡಿಮೆ ಎಲ್ಲ ಪುಸ್ತಕಗಳೂ ತುಂಬಿದ್ದುವು. ಅವುಗಳಲ್ಲದೆ ನಾಲ್ಕು ರಸಾಯನಶಾಸ್ತ್ರದ ಪುಸ್ತಕಗಳು. 'ಈ ಕೆಮಿಸ್ಟ್ರಿ ಪುಸ್ತಕ ನಿಮಗ್ಯಾಕೆ?' – ಅವಳು ಕೇಳಿದಳು.

'ಸುಮ್ಮನೆ. ಇಂಟರೆಸ್ಟ್ ಇದೆ' – ಎಂದ. ಆ ಪ್ರಶ್ನೆ ತನಗೆ ಇಷ್ಟವಾಗಲಿಲ್ಲ ವೆಂಬುದು ಅವನ ಧ್ವನಿಯಲ್ಲಿ ವ್ಯಕ್ತವಾಗುತ್ತಿತ್ತು. ಅವಳು ಮತ್ತೆ ಕೇಳಲಿಲ್ಲ.

ಪುನಃ ಒಂದು ಗಂಟೆ ಕುಳಿತು ಅವಳು ಅವನ ಕೈಲಿ ಮಾತನಾಡುತ್ತಿದ್ದಳು. ಮೀರಾ ಆಸ್ಥೆಯಿಂದ ಕೇಳುತ್ತಿದ್ದಳು. ಆದರೆ ಮಾತನಾಡುತ್ತಿರಲಿಲ್ಲ. ಅನಂತರ ಅಂಗಡಿಗೆ ಹೋಗಿ ಬರಲು ಸತ್ಯ ಎದ್ದಳು. 'ನಿಮಗೆ ಬೇಕಾದ ಸಾಮಾನು ಪಟ್ಟಿ ಹೇಳಿ. ಆಳು ಕಳಿಸಿ ತರುಸ್ತೀನಿ' – ಮೋಹನದಾಸ ಎಂದ.

'ಇಲ್ಲ. ನಾವಿಬ್ಬರೂ ಪೇಟೆ ತಿರುಗಿಕೊಂಡು ಬರ್ತೀವಿ. ನಾನು ಒಂದು ನಾಲ್ಕು ಪುಸ್ತಕ ತಗೋಬೇಕು. ಅವ್ವನಿಗೆ ಸೀರೆ ತಗೋಬೇಕು' – ಮೀರಾ ಎಂದಳು.

'ನಾನೂ ಪುಸ್ತಕ ತಗೋಬೇಕು. ಇಬ್ಬರೂ ಹೋಗಿ ಬರ್ತೀವಿ' – ಎಂದು ಸತ್ಯಳೂ ಹೇಳಿದಳು.

'ನಾನು ಕೆಳಗೆ ಅಂಗ್ಡೀಲಿ ಇರ್ತೀನಿ ಬನ್ನಿ' – ಎಂದು ಹೇಳಿ ತಾನೂ ಕೆಳಗಿಳಿದು ಬಾಗಿಲಿನ ಹೊರಗಿನ ತನಕ ಬಂದು ಮೋಹನದಾಸ ಅವರನ್ನು ಕಳಿಸಿ ಕೊಟ್ಟ.

ಮಂಡೀಪೇಟೆಯನ್ನು ದಾಟುವಾಗ ಬಲಭಾಗದಲ್ಲಿ ಒಂದು ಬೋರ್ಡು ಕಾಣಿಸಿತು: ಎಸ್. ಎಸ್. ಮೋಟಾರ್ ಸರ್ವೀಸ್ – ಎಂಬ ಹೆಸರನ್ನು ನೋಡಿ ಸತ್ಯಳ ರಕ್ತಚಲನೆ ಸ್ವಲ್ಪ ಕ್ರಮತಪ್ಪಿತು. ಆದೇ ಹೊತ್ತಿಗೆ ಅದರ ಬಾಗಿಲಿನಿಂದ ಹೊರಗೆ ಬಂದ ಶ್ರೀನಿವಾಸ ಎದುರಿಗಿದ್ದ ಅಂಬ್ಯಾಸಡರ್ ಕಾರಿನೊಳಗೆ ಹೋಗಿ ಕುಳಿತು ಸ್ಟಾರ್ಟ್ ಮಾಡಿದ. ಅವನು ಇವರಿಬ್ಬರನ್ನೂ ನೋಡಿದ. ಸತ್ಯಳನ್ನು ಮಾತನಾಡಿಸುವವನಂತೆ ಯಂತ್ರವನ್ನು ನಿಲ್ಲಿಸಿ ಬಾಗಿಲು ತೆಗೆದುಕೊಂಡು ಕೆಳಗೆ ಇಳಿದ. ಸತ್ಯ ತನಗೆ ಏನೂ ಗೊತ್ತಾಗಲಿಲ್ಲವೆಂಬಂತೆ ರಸ್ತೆಯ ಎಡಗಡೆಗೆ ನೋಡಿಕೊಂಡು ಬೇಗ ಬೇಗ ಹೆಜ್ಜೆ ಹಾಕಿದಳು. ಈ ಎಲ್ಲ ಸೂಕ್ಷ್ಮವೂ ಮೀರಳಿಗೆ ತಿಳಿಯಿತು. ಅವಳೂ ಬೇಗ ಬೇಗ ನಡೆದಳು.

ತುಮಕೂರು ಸತ್ಯಳಿಗಿಂತ ಮೀರಾಗೆ ಚನ್ನಾಗಿ ಗೊತ್ತು. ಇವರು ಪುಸ್ತಕದ ಅಂಗಡಿ ನೋಡಿಕೊಂಡು ತಮ್ಮ ಸಾಮಾನುಗಳನ್ನೆಲ್ಲ ಕೊಂಡು, ಎರಡು ಬಕೀಟು, ಗುದ್ದಲಿ, ಕೊನೆಗತ್ತಿ, ಕುಡುಗೋಲುಗಳನ್ನು ಒಬ್ಬ ಆಳಿನ ಕೈಲಿ ಹೊರಿಸಿಕೊಂಡು ಬರುವಾಗ ಅವಳು ಎಸ್. ಎಸ್. ಮೋಟಾರ್ ಸರ್ವೀಸಿನ ಆಫೀಸಿನ ಭಾಗವನ್ನು ತಪ್ಪಿಸಿ ಬೇರೆ ಕಡೆಯಿಂದ ಅಣ್ಣನ ಅಂಗಡಿಗೆ ಕರೆದು ಕೊಂಡು ಬಂದಳು. ಅಷ್ಟರಲ್ಲಿ ಮಧ್ಯಾಹ್ನ ಮೂರು ಗಂಟೆಯಾಗಿತ್ತು. 'ಹೋಗುವಾಗಲೇ ಊಟ ಮಾಡಬೇಕಾಗಿತ್ತು. ನಿಮಗೆ ಜ್ಞಾಪಿಸೋದು ಮರೆತೆ. ಇಬ್ರೂ ಹಾಗೆ ಹೋಟೆಲಿಗೆ ಹೇಳಿಕಳಿಸಿದೀನಿ. ಆರಿರುತ್ತೆ ಅಷ್ಟೆ. ನಡೀರಿ' – ಎಂದು ಇಬ್ಬರನ್ನೂ ಕರೆದುಕೊಂಡು ಹೋಗಿ ಮೋಹನದಾಸ ಅವರ ಸಂಗಡ ತಾನೂ

ಊಟಕ್ಕೆ ಕುಳಿತ. ಅವನು ಉಪವಾಸವಿದ್ದು ಕಾಯುತ್ತಿದ್ದದನ್ನು ಕಂಡು ಸತ್ಯಳಿಗೆ ಸಂಕೋಚವೆನಿಸಿತು. ಅನ್ನ ಕಲಸಿ ಎರಡು ತುತ್ತು ತಿಂದಮೇಲೆ ಅವಳು ಹೇಳಿದಳು: 'ಇನ್ನು ಒಂದು ವಾರದಲ್ಲಿ ನಾನು ಮೈಸೂರಿಗೆ ಹೋಗ್ತೀನಿ. ನನ್ನ ಪ್ರೊಫೆಸರರಿಗೆ ನಾಳೆಯೇ ಕಾಗದ ಬರೀತೀನಿ. ಹುಡುಗೀರ ಹಾಸ್ಟೆಲಿನಲ್ಲಿ ಮೂರು ತಿಂಗಳಿಗೆ ಜಾಗ ಕೊಡಿಸಿದರೆ ಸಾಕು. ಅವರ ಸಹಾಯಾನೂ ತಗಂಡು ನೀವು ಹೇಳಿದ್ದು ಬರೀತೀನಿ. ಆದರೆ ಮುಂದಿನ ಭಾಗ ಏನು ಬರೀತೀರಿ ನೀವು?'

'ಹೇಳಿದೆನಲ್ಲ. ಮುಂದೆ ಹೀಗಾಯ್ತು. ಈಗ ಸರಿಯಾಗಿ ಒದೀದೇ ಸಮಾನತೆ ಸಿಕ್ಕಲ್ಲ ಅಂತ ನಾನು ಬರೀತೀನಿ. ನೀವು ಕ್ರಮವಾಗಿ ಭಾಷೇನ ತಿದ್ದಿ.'

ಅವಳಿಗೆ ಇದ್ದಕ್ಕಿದ್ದಹಾಗೆಯೇ ಒಂದು ಅಂಶ ಅರಿವಿಗೆ ಬಂದು, ಕೇಳಿದಳು: 'ಇದು ಯಾವ ಜನದ ಹೋಟೆಲು?'

'ಉಡುಪಿ ಬ್ರಾಹ್ಮಣರದ್ದು.'

'ನೀವು ಹರಿಜನರು ಅಂತ ಅವರಿಗೆ ಗೊತ್ತಿಲ್ಲವೆ?'

'ಗೊತ್ತಿರಬಹುದು. ಇದು ದೊಡ್ಡ ಊರು. ಯಾಕೆ ಸೇರಿಸಿದಿರಿ ಅಂತ ಜನ ಬಂದು ಮಾಲೀಕನನ್ನ ಬೆದರಿಸಿ ಹೋಟೆಲಿಗೆ ಬೆಂಕಿ ಹಾಕುಲ್ಲ. ಹಳ್ಳೀಲಿ ಹಾಗಲ್ಲವಲ್ಲ.'

'ಅಂದ್‌ರೆ ಬರೀ ಹಳ್ಳೀ ಸುಧಾರಣೆಯಾಗಬೇಕು ಅಂತೀರಾ?'

'ಪಟ್ಣಲೀನೂ. ಈ ಊರ ದೇವಸ್ಥಾನದ ಒಳಕ್ಕೆ ನಾನು ಹೋಗಿ ಯಾರಾದರೂ ಗುರುತಿಸಿದರೆ ನನ್ನ ಚರ್ಮ್‌ಡಾ ತೆಗೆದು ಚಪ್ಪಲ್ ಮಾಡಿ ಹಾಕ್ಕಂಡಾರು' – ಎನ್ನುವಾಗ ಅವನು ಅವಡುಗಚ್ಚಿದ್ದ.

ಅಂಗಡಿಯ ಬ್ರಾಹ್ಮಣ ಆಳು ಬಕೀಟು ಮೊದಲಾದ ಎಲ್ಲ ಸಾಮಾನುಗಳನ್ನೂ ತಂದು ಬಸ್ಸಿಗೆ ಇಟ್ಟುಕೊಟ್ಟ. ಮೋಹನದಾಸ ಬಂದು ಇಬ್ಬರನ್ನೂ ಬಸ್ಸು ಹತ್ತಿಸಿದ.

ಆದರ ಮರುದಿನ ಸತ್ಯ ವೆಂಕಟೇಶನನ್ನು ಕರೆಸಿ ಹೇಳಿದಳು: 'ನಾಳೆ ಈ ಗುಂಡಿಗೆಲ್ಲ ಸಸಿ ಕಟ್ಟುಸ್ತೀನಿ. ಇನ್ನು ಏಳೆಂಟು ದಿನದಲ್ಲಿ ನಾನು ಮೈಸೂರಿಗೆ ಹೋಗ್ತೀನಿ. ಮೂರು ತಿಂಗಳು ಅಲ್ಲೇ ಇರ್ತೀನಿ. ಲೈಬ್ರರೀಲಿ ಕೂತು ಸ್ವಲ್ಪ ಓದಬೇಕಾಗಿದೆ. ಅಲ್ಲೀತನಕ ಸಸಿಗೆ ಮೂರು ದಿನಕ್ಕೊಂದು ಸಲ ನೀರು ಹಾಕಿಸೂ ಭಾರ ನಿಂದು.'

'ನಾನು ಮೊದಲೇ ಹೇಳ್ಲಿಲ್ವೇನೇ ನಿಂಗೆ, ನಿನ್ನ ಕೈಲಿ ಬ್ಯಾಸಾಯ ಮಾಡ್ಕಂಡಿರುಕ್ಕಾಗುಲ್ಲ ಅಂತ? ಓದಿದೋರಿಗೆ ಓದೂ ಚಟ ಇರುತ್ತೇ ಹೊರತು

ಮಣ್ಣಿನಲ್ಲಿ ಗೇಯುೂ ಚಟ ಎಷ್ಟು ದಿನ ಇರುತ್ತೆ? ನಮ್ಮ ನಮ್ಮ ಜಾತಿಗೆ ಹೇಳಿ ಸಿದ್ದು ನಾವು ನಾವು ಮಾಡಬೇಕು.'

ಈ ಮಾತು ಸತ್ಯಳ ಮನಸ್ಸನ್ನು ಎಲ್ಲಿಯೋ ಕುಟುಕಿತು. ಅವನ ಮಾತು ಪೂರ್ತಿ ಸುಳ್ಳಲ್ಲವೆನಿಸಿತು. ಆದರೆ ತಾನು ಚಿಕ್ಕ ವಯಸ್ಸಿನಿಂದ ಸ್ವಲ್ಪವೂ ಓದ ದಿದ್ದರೆ ಈ ಓದುವ ಚಟ ಬರುತ್ತಲೇ ಇರಲಿಲ್ಲ. ಇದಕ್ಕೆ ಜಾತಿಯ ಸಂಬಂಧ ವೇನು?–ಎಂದುಕೊಂಡಳು. ಆದರೆ ತಾನು ಓದುವುದನ್ನೇ ಬಿಟ್ಟಿದ್ದರೆ, ಎಂಬ ಕಲ್ಪನೆಯೂ ಅವಳಿಗೆ ಸಾಧ್ಯವಾಗಲಿಲ್ಲ. ವೆಂಕಟೇಶನಿಗಿರುವ ಗಂಡು ಮಗ ಮತ್ತು ಕೈಯಿನ ಪುಟ್ಟ ಹೆಣ್ಣುಮಗುವನ್ನು ಓದಿಸದೆ ಇರಲು ಸಾಧ್ಯವೆ? ಅವನು ಬೇಡವೆಂದರೂ ತಾನು ಬಿಡದೆ ಬೈದು ಓದಿಸಲು ಕಳಿಸುತ್ತೇನೆ–ಎಂದು ತನ್ನಲ್ಲಿ ತಾನೇ ಹೇಳಿಕೊಂಡಳು.

೩

ಸತ್ಯ ಮೈಸೂರಿನಲ್ಲಿ ಮೂರೂವರೆ ತಿಂಗಳಿದ್ದಳು. ಪುಸ್ತಕ ಭಂಡಾರದಲ್ಲಿ ಓದುವುದು, ಹಾಸ್ಟೆಲಿಗೆ ಬಂದು ಮಲಗಿದಾಗ ಅದೇ ವಿಷಯವನ್ನು ಸ್ವಪ್ನದಲ್ಲೂ ಕಾಣುವುದು, ಹೀಗೆ ಅವಳು ಅಷ್ಟು ದಿನಗಳು ಇತಿಹಾಸದ ಕಾಲವನ್ನೇ ಕಾಣು ತ್ತಿದ್ದಳು, ಆ ಕಾಲದಲ್ಲೇ ಇರುತ್ತಿದ್ದಳು. ಮೊದಮೊದಲು ಅವಳಿಗೆ ಬೇಕಾದ ವಿಷಯ ಹಿಡಿತಕ್ಕೆ ಸಿಕ್ಕುತ್ತಿರಲಿಲ್ಲ. ಶ್ರೀನಿವಾಸನ ಬೇರೆ ಮದುವೆ, ಅವನ ಹೆಂಡತಿಯ ಬಸುರು, ಅಪ್ಪನ ಹುಚ್ಚು, ಅವರ ಅರುಂಧತಿ, ಶ್ರೀನಿವಾಸನ ಹೆಂಡತಿಗೆ ಶಾಪ, ಅವಳ ಸಾವು, ತಾನು ಅಪ್ಪನ ನೆಲಕ್ಕೆ ಸಂಬಂಧಿತಳಾದುದು, ಈ ನಿಜಜೀವನದ ಘಟನೆಗಳ ಪ್ರಭಾವದಿಂದ ಮುಕ್ತವಾಗಿ, ಪೂರ್ಣವಾಗಿ ಇತಿಹಾಸದ ಕಾಲ ವನ್ನು ಪ್ರವೇಶಿಸುವುದು ಮನಸ್ಸಿಗೆ ಸಾಧ್ಯವಾಗುತ್ತಿರಲಿಲ್ಲ. ವರ್ತಮಾನಕ್ಕೂ ಭೂತಕ್ಕೂ ತಮ್ಮವೇ ಆದ ವ್ಯತ್ಯಾಸಗಳಿದ್ದುವು. ಆದರೆ ಓದು ಮತ್ತು ಚಿಂತನೆ ಗಳು ಬೆಳೆದಂತೆಲ್ಲ ಈ ವ್ಯತ್ಯಾಸಗಳು ಕಡಿಮೆಯಾಗಿ ಕೊನೆಗೆ ಇಲ್ಲವಾದುವು. ತನ್ನ ಸುತ್ತುಮುತ್ತಿನ, ತನ್ನ ಹಳ್ಳಿಯ, ತನ್ನ ಮನೆಯ ಜೀವನವನ್ನೇ ಇತಿಹಾಸದಲ್ಲೂ ನೋಡುತ್ತಿರುವೆನೇನೋ ಎಂದು ತೋರುವ ಮಟ್ಟಿಗೆ ಅವಳಿಗೆ ಸಮಸ್ಯೆಯೂ ಸ್ಪಷ್ಟವಾಗಿ ಗೋಚರಿಸಲು ಪ್ರಾರಂಭಿಸಿತು.

ತನಗೆ ಬೇಕಾದ ವಿಷಯಗಳನ್ನೆಲ್ಲ ಸಂಗ್ರಹಿಸಿ ಟಿಪ್ಪಣಿ ಸಿದ್ಧವಾದ ಮೇಲೆ ಮೈಸೂರನ್ನು ಬಿಡುವುದೆಂದು ನಿರ್ಧರಿಸಿದಳು. ಅಷ್ಟರಲ್ಲಿ ಊರಿನ ಜ್ಞಾನ ಎಳೆಯುತ್ತಿತ್ತು. ತೋಟ, ಕೊಳ, ಹೊಸದಾಗಿ ಕಟ್ಟಿಸಿದ ಮನೆ, ಅದಕ್ಕಿಂತ

ಹೆಚ್ಚಾಗಿ ಅಪ್ಪ ತನಗೆ ಯಜ್ಞೋಪವೀತ ಹಾಕಿದ ಜಾಗವು ಅವಳನ್ನು ಪ್ರಚಂಡ ಶಕ್ತಿಯಿಂದ ಸೆಳೆಯುತ್ತಿದ್ದುವು. ಅಪ್ಪ ಹವನ ಮಾಡುತ್ತಿದ್ದ ಜಾಗವನ್ನು ತಾನು ಕಟ್ಟಿಸಿದ ಮನೆಯಲ್ಲಿ ಹಾಗೆಯೇ ಬಿಡಿಸಿದ್ದಳು. ಒಂದು ದಿನ ತನ್ನ ಪ್ರೊಫೆಸರರಿಗೆ, ಹಾಸ್ಟೆಲ್ ವಾರ್ಡನರಿಗೆ, ಪುಸ್ತಕ ಭಂಡಾರಗಳಿಗೆ ವಂದನೆ ಸಲ್ಲಿಸಿ ತನ್ನ ಟಿಪ್ಪಣಿ ಬಟ್ಟೆ ಬರೆಗಳನ್ನೆಲ್ಲ ಕಟ್ಟಿ ಹೊರಟಳು. ಬಸ್‌ಸ್ಟ್ಯಾಂಡಿಗೆ ಬಂದಾಗ ಅತ್ತಿಗೆ ಜಯಮ್ಮ ಹಿರಿಯ ಮಗು ಮತ್ತು ಕೈಯಿನ ರಾಧಾ ಇವರ ನೆನಪು ಬಂತು. ಸ್ಟ್ಯಾಂಡಿನಿಂದ ಜವಳಿ ಅಂಗಡಿಗೆ ಹೋಗಿ ಜಯಮ್ಮನಿಗೆ ಒಂದು ಒಳ್ಳೆಯ ವ್ಯಾಲ್ ಸೀರೆ, ಬ್ಲೌಸ್ ಬಟ್ಟೆ, ಮಕ್ಕಳಿಗೆ ರೆಡಿಮೇಡ್ ಬಟ್ಟೆ, ಮತ್ತು ಹಣ್ಣುಗಳನ್ನು ಕೊಂಡಳು.

ಮಧ್ಯಾಹ್ನ ಮೂರು ಗಂಟೆಗೆ ಊರಿನ ಸ್ಟ್ಯಾಂಡಿನಲ್ಲಿ ಇಳಿದವಳು ತನ್ನ ಸಾಮಾನುಗಳನ್ನು ಹೊತ್ತುಕೊಂಡು ನೇರವಾಗಿ ಅಣ್ಣನ ಮನೆಗೆ ಹೋದಳು. ನರಸಿಂಹ ಜೋಯಿಸರು ಜಗುಲಿಯ ಮೇಲೆ ಮಲಗಿ ನಿದ್ರಿಸುತ್ತಿದ್ದರು. ಇವಳನ್ನು ಕಂಡ ಜಯಮ್ಮ ಸಂಭ್ರಮದಿಂದ ಸ್ವಾಗತಿಸಿದಳು. 'ಇಂಥ ಹೋಲ್ಡಾಲು, ಈ ಕೈಚೀಲಾನ ಒಬ್ಬಳೇ ಹೊತ್ಕಂಡು ಬಂದೆಯಲ, ಹೋಟಿಲು ಹತ್ತಿರ ಯಾರೂ ಆಳುಗಳೇ ಇರಲಿಲ್ಲವೇ? ನಮ್ಮ ಸಾಮಾನು ನಾವು ಹೊರಬೇಕು ಅಂತೀಯ. ಈಗ ಇನ್ನೂ ಎಷ್ಟು ಬಡವಾಗಿದೀಯ, ಕನ್ನಡೀಲಿ ನೋಡ್ಕ' – ಎಂದು, ತಲೆಯ ಮೇಲಿನ ಹೋಲ್ಡಾಲನ್ನು ಇಳಿಸಿಕೊಂಡಳು. ವೆಂಕಟೇಶ ಮನೆಯಲ್ಲಿರಲಿಲ್ಲ. ಊರಿನಲ್ಲಿ ಸೆನ್ಸಸ್ ನಡೆಯುತ್ತಿದೆಯಂತೆ. ಊರೊಳಗೆ ಹೋಗಿದ್ದಾನೆ. ಸತ್ಯ ಕೈ ಕಾಲು ತೊಳೆದು ಬಟ್ಟೆ ಬದಲಾಯಿಸಿದಳು. ವಾಸು ತಿಂಡಿ ಹೊಸ ಬಟ್ಟೆ ಕಂಡು ಕುಣಿದ. ಕೈಯಿನ ಮಗು ಮಲಗಿತ್ತು. 'ನಂಗ್ಯಾಕೆ ಸೀರೆ ತಂದೆ?' – ಎಂದು ಆಕ್ಷೇಪಿಸಿದರೂ ಅದರಿಂದ ಜಯಮ್ಮನಿಗೆ ಸಂತೋಷವಾಯಿತು. ಸತ್ಯ ಊಟ ಮಾಡುವಾಗ ಅತ್ತಿಗೆಯನ್ನು ಸರಿಯಾಗಿ ನೋಡಿದಳು. ಈಗ ಮಗುವಿಗೆ ಎಂಟು ತಿಂಗಳು. ಬಾಣಂತಿತನ ಮುಗಿಸಿಕೊಂಡು ಬಂದಾಗ ಜಯಮ್ಮ ಸಣ್ಣಗಿದ್ದಳು. ಈಗ ಇಷ್ಟು ದಿನವಾದರೂ ಮೈ ತುಂಬಿಕೊಂಡಿಲ್ಲ. ಮಗು ಹಾಲು ಕುಡಿಯುತ್ತಿರುವಾಗ ಹಾಗೇಯೋ ಏನೋ! – ಎಂದುಕೊಂಡರೂ ಕೇಳಿದಳು: 'ನೀನ್ಯಾಕೆ ಹೀಗಿದೀಯ, ಸರಿಯಾಗಿ ಹಾಲು ತುಪ್ಪ ತಿಂದು ಚನ್ನಾಗಬ್ಯಾಡವೆ? ಮನೇಲಿ ಹಸು ಕೊಡ್ತಿಲ್ಲವೆ?'

'ಕೊಡ್ತಿದೆ.'

'ಅದ್ಯಾಕೆ ಹೀಗೆ ವಣಕ್ಕಂಡಿದೀಯ?'

'ವಣಕ್ಕಂಡೇನು. ಚನ್ನಾಗೇ ಇದೀನಿ ಅದೃಷ್ಟ ಇದ್ದಹಾಗೆ!' – ಎಂದು

ಅವಳು ಸುಮ್ಮನಾದಳು.

ಅವಳ ತವರುಮನೆಯಿಂದ ಹದಿನಾರು ಸಾವಿರ ರೂಪಾಯಿಯನ್ನು ವೆಂಕಟೇಶ ಕಿತ್ತಿದ್ದರಿಂದ ಅಲ್ಲಿ ಅವರಿಗೆ ಕಷ್ಟವಾಗಿದೆ, ಆ ಯೋಚನೆ ಜಯಮ್ಮನಿಗೆ ಹೊತ್ತಿದೆ ಎಂದು ಸತ್ಯ ಅರ್ಥಮಾಡಿಕೊಂಡಳು. 'ವಿಠಲಾಪುರದಲ್ಲಿ ಹ್ಯಾಗಿದಾರೆ, ಕಾಗದ ಬಂದಿತ್ತೆ?'

'ಬಂದಿತ್ತಮ್ಮ. ಹ್ಯಾಗಿದ್ರೂ ಕೇಳುಕ್ಕೆ ನಂಗಿನ್ನು ಯಾವ ಮುಖವಿದೆ?'

ಸತ್ಯ ಸುಮ್ಮನೆ ಮಜ್ಜಿಗೆ ಅನ್ನ ಉಣ್ಣುತ್ತಿದ್ದಳು. ಅತ್ತಿಗೆಯ ಮಾತಿನ ಅರ್ಥ ಅವಳ ಅಂತಃಕರಣವನ್ನು ತಟ್ಟುತ್ತಿತ್ತು. ಜಯಮ್ಮ ಅಂದಳು: 'ನಿಂಗೆ ಹೀಗಾಯ್ತು. ಊರಿಗೆ ಬರುಕ್ಕೆ ಹೀನಾಯ ಮಾಡ್ಕಂಡು ನೀನು ಅಲ್ಲಿ ಜವಳೀ ಅಂಗ್ಡೀಲಿ ಕೆಲಸ ಮಾಡ್ತಿದೀಯ ಅಂದ್ಕಂಡು ಅಪ್ಪ ನಿನ್ನ ಹೆಸರಿಗೆ ಒಂದಿಷ್ಟು ಜಮೀನು ಬರೆದರು. ಏನು ಗಂಟು ಹೋದದ್ದು? ಇಲ್ಲಿ ನಮಗೇನು ಕಮ್ಮಿ ಉಳಿದಿತ್ತೇ? ಪಿತ್ರಾರ್ಜಿತ ಆಸ್ತೀಲಿ ಅರ್ಧ. ಪ್ರೂರ್ತಿ ದೇವರ ಜಮೀನು. ಈ ಮನೆ, ಹಿತ್ತಿಲು. ಅಲ್ಲದೆ ಹೋಟೆಲಿನಲ್ಲೇ ದಿನಕ್ಕೆ ಹದಿನೈದು ರೂಪಾಯಿ ಬರ್ತಿದೆ. ಪೇಪರು ಏಜನ್ಸೀದು. ಇದರ ಮೇಲೆ ಇವರು ಯಾವ ಯಾವ ಬಾಬಿನಲ್ಲೋ ಸಂಪಾದನೆ ಮಾಡ್ತಾರೆ. ಇಷ್ಟು ಸಾಲದು ಅಂತ ಹೆಣ್ಣು ಕೊಟ್ಟೋರ ಎದೆ ಕೆರೆದರು. ಅಶ್ವತ್ಥಣ್ಣನ್ನ ನೋಡಿದ್ರೆ ಹೊಟ್ಟೆ ಉರಿಯುತ್ತೆ. ಈಗ ಮೂವತ್ತೊಂದು ಅವನಿಗೆ. ನಾನು ಮದುವೆಯೇ ಮಾಡ್ಕಳುಲ್ಲ ಅಂತಾನೆ. ಈ ಸಲ ಊರಲ್ಲಿ ಬಾಣಂತನ ಮಾಡುಸ್ಕಳುಕ್ಕೆ ನಂಗೆ ಎಷ್ಟು ಹೀನಾಯವಾಯ್ತು ಅಂತೀಯ? ಅವರೇನೋ ಕರೆದು ಕಳಿಸಿ ಮಾಡ್ತೀವಿ ಅನ್ನಭೌದು. ಆದರೆ ಅಲ್ಲಿ ಹೋಗಿ ಉಪಚಾರ ಮಾಡಿಸ್ಕಂಡು ಹೊಸ ಸೀರೆ ಉಡುಸ್ಕಂಡು ಬರುಕ್ಕೆ ನಂಗೆ ಹ್ಯಾಗೆ ಮುಖವಿರುತ್ತೆ? ಒಟ್ಟನಲ್ಲಿ ತೌರುಮನೆ ತಪ್ಪೀತು.'

ಜಯಮ್ಮನ ಭಾವನೆ ಸತ್ಯಳಿಗೆ ಅರ್ಥವಾಗುತ್ತಿತ್ತು. ಆದರೆ ವೆಂಕಟೇಶನ ಸ್ವಭಾವ ಅದಕ್ಕಿಂತ ಹೆಚ್ಚು ಅರ್ಥವಾಗಿತ್ತು. ಈ ಮಧ್ಯೆ ತಾನು ಏನೂ ಮಾಡುವಂತಿಲ್ಲ. ಸಮಾಧಾನ ಹೇಳಿದಳು: 'ಈಗ ಆದದ್ದಾಗಿದೆ. ಮನಸ್ಸಿಗೆ ಯೋಚನೆ ಹಚ್ಚಿಸಿಕೊಂಡು ಯಾಕೆ ಕೊರಗ್ತೀಯ? ಕೊರಗಿ ಸಣ್ಣಗಾಗಿ ಕಾಹಿಲೆ ಬರಿಸಿಕಂಡ್ರೆ ಏನು ಪ್ರಯೋಜನ? ಮಕ್ಳನ್ನ ನೋಡ್ಕಳೋರು ಯಾರು?'

'ಅಯ್ಯೋ, ನಾನು ಸತ್ರೆ ಯಾರು ಅಳಬೇಕು ಬಿಡು' – ಎಂದು ಅವಳು ಕಣ್ಣನ್ನು ತೇವಮಾಡಿಕೊಂಡಳು.

'ಅತ್ತರೆ ಆಗಿರೂದು ಬದಲಾಗುತ್ಯೇ?'

'ಅದು ಹೊಕ್ಕಲ್ಲಿ. ಕಷ್ಟಪಡೂದು ತನ್ನ ತೌರುಮನೆಯೋರ ಹಣೇಲಿ ಬರೆದಿದೆ,

ಷಡ್ತಾರೆ. ಆದರೆ ಇಲ್ಲಿ ನಾನಾದರೂ ಸುಖವಾಗಿದೀನೇ?'

'ಏನಾಗಿದೆ ಹೇಳು ಜಯಮ್ಮ, ಬಿಡಿಸಿ ಹೇಳು' – ಎಂದು ಸತ್ಯ ಪ್ರೀತಿಯಿಂದ ಒತ್ತಿ ಕೇಳಿದಳು.

'ಕೈ ತೊಳ್ಕಂಡ್ ಬಾ ಹೇಳ್ತೀನಿ.'

ಸತ್ಯ ತಟ್ಟೆ ಹಿಡಿದುಕೊಂಡು ಎದ್ದು ಬಚ್ಚಲುಮನೆಗೆ ಹೋಗಿ ಕೈ ತೊಳೆದು ತಟ್ಟೆ ತೊಳೆದಳು. ಜಯಮ್ಮ ಹಿಂದೆಯೇ ಗೋಮೆ ಹಾಕಿಕೊಂಡು ಬಂದಳು. ಇಬ್ಬರೂ ಮತ್ತೆ ಅಡಿಗೆಮನೆಗೆ ಬಂದಮೇಲೆ ಜಯಮ್ಮ ಧ್ವನಿಯನ್ನು ಸಣ್ಣಗೆ ಮಾಡಿ ಹೇಳಿದಳು: 'ನಾನು ಬಾಣಂತನಕ್ಕೆ ಹೋಗಿದ್ದೆನಲ್ಲ, ಆಗ ನಮ್ಮ ಮನೆ ಹಿತ್ತಿಲ ಬಾಗಿಲಿನಿಂದ, ಆ ಹಜಾಮರ ಒಬ್ಬ ಹುಡುಗಿ ಇದಾಳೆ ನೋಡು ಸೂಳೆಮುಂಡೆ ರುದ್ರಿ ಅಂತ, ಅವಳು ಬರ್ತಿದ್ಳಂತೆ. ಅವಳು ಬರುಕ್ಕೆ ಮುಂಚೆ ಇವರು ನರಸಿಂಹ ಜೋಯಿಸರನ್ನ ಪೂಜೆಗೋ ಗದ್ದೆಗೋ ಅಥವಾ ಹೋಟೆಲು ಹತ್ತಿರಕ್ಕೋ ಕಳುಸ್ತಿದ್ರಂತೆ.'

ಸತ್ಯಳಿಗೆ ವ್ಯಸನವಾಯಿತು. ಹೆಚ್ಚು ಆಶ್ಚರ್ಯವಾಗಲಿಲ್ಲ. ಈ ದಾರಿ ಹಿಡಿದೇ ವೆಂಕಟೇಶ ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲಿ ಫೇಲಾದದ್ದು. ಮನೆಗೆ ಅಡಿಗೆ ಮಾಡುವ ಸೊಸೆ ಬೇಕೆಂಬುದರ ಜೊತೆಗೆ ಈ ಕಾರಣವೂ ಸೇರಿ ಅಪ್ಪ ಅವನಿಗೆ ಬೇಗ ಮದುವೆ ಮಾಡಿದರು. ಈ ವಿಷಯ ಜಯಮ್ಮನಿಗೆ ಗೊತ್ತಿಲ್ಲ. ಜಯಮ್ಮ ತುಂಬ ಲಕ್ಷಣವಾದ ಹುಡುಗಿ. ಮದುವೆಯಲ್ಲಂತೂ ಕರ್ಪೂರದ ಗೊಂಬೆಯ ಹಾಗೆ ಕಾಣುತ್ತಿದ್ದಳು. ನಮ್ಮ ಜನದಲ್ಲಿ ಈ ಬಣ್ಣ ಈ ರೂಪರೇಖೆ ಇರುವ ಹೆಣ್ಣುಮಕ್ಕಳು ಅಪರೂಪವೆಂದು ಸತ್ಯಳೇ ಅಂದುಕೊಂಡಿದ್ದಳು. ಈಗ ಎರಡು ಮಕ್ಕಳ ತಾಯಿಯಾದ ಮೇಲೂ ಅವಳ ಲಕ್ಷಣ ಮತ್ತು ಮುಖದ ಮೇಲಿನ ಕಳೆ ಕಮ್ಮಿಯಾಗಿಲ್ಲ. ಮಿಡ್ಲ್‌ಸ್ಕೂಲು ಮಾತ್ರ ಮುಗಿಸಿದ್ದರೂ ಅವಳ ಮುಖದ ಮೇಲೆ ದಡ್ಡತನದ ಸುಂಕು ಇಲ್ಲ. ಬುದ್ಧಿಶಕ್ತಿಯೂ ಚುರುಕಾಗಿದೆ. ಸ್ವಭಾವವಂತೂ ಒಳ್ಳೆಯದು. ಇಂತಹ ಹೆಂಡತಿ ಇರುವಾಗ ವೆಂಕಟೇಶ ಯಾಕೆ ಹೀಗೆ ಮಾಡಿದ? ಅವಳು ಸಮಾಧಾನ ಹೇಳಿದಳು: 'ಒಬ್ಬೊಬ್ಬರ ಸ್ವಭಾವ ಹಾಗಿರುತ್ತೆ. ನೀನು ಬಾಣಂತನಕ್ಕೆ ಹೋಗಿದ್ದಾಗ ಹಾಗೆ ಮಾಡಿರಬಹುದು. ಈಗ ನಿಂತಿರಬಹುದು.'

'ಹೆಂಡತಿ ಬಾಣಂತನಕ್ಕೆ ಹೋದ್ರೆ ಇವರಿಗೆ ನೆಟ್ಟಗಿರುಕ್ಕಾಗುಲ್ವೆ? ಅವಳು ಹೇಳಿ ಕೇಳಿ ಹಜಾಮರೋಳು. ಅವಳ ಅಪ್ಪ ಮುಟ್ಟೆ ಕ್ಷೌರ ಮಾಡಿದ್ರೆ ಹಂಡೆಗೆ ತುಳಸಿ ಬೇರಿನ ಮಣ್ಣು ಹಾಕಿ ಸ್ನಾನ ಮಾಡ್ತಾರೆ.'

'ಅವಳನ್ನ ನೀನು ನೋಡಿದೀಯ?'

'ಕುದುರೆ ಇದ್ದ ಹಾಗಿದಾಳೆ ಸೂಳೆಮುಂಡೆ.'

'ನಿಂಗೆ ಯಾರು ಹೇಳಿದ್ರು? ಸುಳ್ಳಿದ್‌ರೂ ಇರಭೌದು.'

"ಕುಪ್ಪಣ್ಣಯ್ಯಂಗಾರರ ಹೆಂಡತಿ ಒಬ್ಬರಲ್ಲ, ಇನ್ನೂ ಎರಡು ಮೂರು ಜನ ಅಂದ್‌ರು. ಸುಳ್ಳೇನಲ್ಲ. ಈಗ ಸಂಬಂಧ ಇದೆಯೋ ಇಲ್ಲವೋ ಗೊತ್ತಿಲ್ಲ. ನಾನು ಕೇಳಿದ್ರೆ, 'ನಿಂಗೆ ಯಾವಳು ಹೇಳಿದ್ಲು? ಯಕ್ಕಡ ತಗಂಡು ಹಾಕ್ತೀನಿ ಅವಳಿಗೆ' ಅಂತ ದಬಾಯಿಸಿಬಿಟ್‌ರು. ಯಾರು ತಾನೆ ಇಂಥ ವಿಷಯದಲ್ಲಿ ಎದುರಿಗೆ ಬಂದು ಹೇಳ್ತಾರೆ? ನಾನು ತಾನೇ ಅವರ ಹೆಸರನ್ನು ಹ್ಯಾಗೆ ಹೇಳ್ಲಿ?"

ಸತ್ಯಳಿಗೆ ಅತ್ತಿಗೆಯ ಬಗೆಗೆ ಕನಿಕರವೆನಿಸಿತು. ವೆಂಕಟೇಶನಿಗೆ ತಾನು ಒಂದು ಮಾತು ಹೇಳಬಹುದು. ಆದರೆ ಅವನು ತನ್ನನ್ನೇ ದಬಾಯಿಸುತ್ತಾನೆ. ಈಗ ಮಾಡಿರುವುದನ್ನು ಒಪ್ಪಿಕೊಳ್ಳದಿದ್ದರೂ ಮುಂದೆ ಇಂಥದಕ್ಕೆ ಹೋಗಲು ಸ್ವಲ್ಪ ಭಯವಿದ್ದರೆ ಸಾಕು. ಆದುದರಿಂದ ತಾನು ಹೇಳಬೇಕು – ಎಂದುಕೊಂಡಳು. ಅದೇ ಮಾತನ್ನು ಅತ್ತಿಗೆಗೆ ಹೇಳಿದಳು.

'ನೀನು ಹೇಳಬೇಕು. ಅವರು ಇನ್ಯಾರಿಗೂ ಒಂದು ಚಿಟಿಕೆ ಉಪ್ಪು ಹಾಕುಲ್ಲ' – ಎಂದು ಜಯಮ್ಮನೂ ಒತ್ತಾಯ ಮಾಡಿದಳು.

ಸತ್ಯ ಸಂಜೆಗೆ ತೋಟಕ್ಕೆ ಹೊರಟಳು. ಆದರೆ ಜಯಮ್ಮ ಬಿಡಲಿಲ್ಲ. 'ಅಲ್ಲಿ ಬೀಗ ಹಾಕಿದೆ. ಒಳಗೆ ಎಷ್ಟು ಧೂಳು ತುಂಬಿದೆಯೋ ಕಾಣೆ. ಈಗ ಹೋಗಿ ಏನು ಮಾಡ್ತೀಯ? ನೋಡು, ನೀನ್ಯಾಕೆ ಅಲ್ಲಿ ಒಬ್ಬಳೇ ಇರ್ತೀಯ? ಸುಮ್ಮನೆ ಇಲ್ಲಿರು. ಬೇಕಾದರೆ ತ್ವಾಟಕ್ಕೆ ಹೋಗಿ ದಿನಾ ಸುತ್ತಿಕಂಡು ಬಾ.'

'ನಿಂಗೆ ಅರ್ಥವಾಗುಲ್ಲ. ನಾನು ಅಲ್ಲೇ ಇರಬೇಕು.'

'ಅಷ್ಟು ಆಶೆಯಾದರೆ ನಾಳೆ ಹೋಗು. ಈಗ ಬಸ್ಸಿನಲ್ಲಿ ಬಂದು ಸಾಕಾಗಿದೀಯ' – ಎಂಬ ಬಲವಂತಕ್ಕೆ ಅವಳು ಒಪ್ಪಿಕೊಂಡಳು.

ಜಯಮ್ಮ ಎಂದಳು: 'ನೋಡು, ನಿನ್ನ ಕೈಲಿ ಹೇಳ್ಕಂಡಿದ್ರಿಂದ ಮನಸ್ಸಿಗೆ ಸ್ವಲ್ಪ ಸಮಾಧಾನವಾಯ್ತು. ಹೊರಗಿನೋರ ಕೈಲಿ ಹೇಳಿದ್ರೆ ನಮ್ಮನೆ ಮರ್‍ಯಾದೆ ಉಳಿಯುತ್ತೆ?'

ಅಷ್ಟರಲ್ಲಿ ವಾಸು, ಜೋಡಿಸಿಟ್ಟಿದ್ದ ಒಂದು ಕಂತೆ ಬಣ್ಣಬಣ್ಣದ ಅಚ್ಚಾದ ಕಾಗದಗಳನ್ನು ಹಿಡಿದುಕೊಂಡು ಅಡಿಗೆ ಮನೆಗೆ ಬಂತು. ಬೀಡಿ ಅಥವಾ ಟೂರಿಂಗ್ ಟಾಕೀಸ್‌ಗಳ ಜಾಹೀರಾತು ಚೀಟಿಗಳಂತೆ ಕಾಣುತ್ತಿದ್ದ ಅವು ಬೇರೆ ಬೇರೆ ಬಣ್ಣ, ಉದ್ದ ಅಗಲದವುಗಳಾಗಿದ್ದುವು. ಜಯಮ್ಮ ಎದ್ದು ಮಗುವಿನ ಕೈಯಿಂದ ಅವನ್ನು ಕಿತ್ತುಕೊಂಡು, 'ಮೇಜದ ಖಾನಿಗೆ ಯಾಕೆ ಕೈಹಾಕಿದ್ಯೋ? ಇದ ಹರಿದುಹಾಕಿದರೆ ನಿಮ್ಮಣ್ಣ ಬಯ್ತಾರೆ ನೋಡು' ಎಂದಳು. ಸತ್ಯಳಿಗೆ

ಕುತೂಹಲವಾಯಿತು. ಇಸಿದುಕೊಂಡು ಓದುತ್ತಾಳೆ – ಎಲ್ಲವೂ ಒಂದೇ ವಿಷಯಕ್ಕೆ ಸಂಬಂಧಿಸಿದುವು. ಒಂದೊಂದು ಒಳಪಂಗಡದವರೂ ತಮ್ಮ ಜನರಿಗೆ ಬರೆದುಕೊಂಡಿರುವ ಸೂಚನಾಪತ್ರ. ಮೇಲಿನ ಕೆಂಪು ಬಣ್ಣದ ಕಾಗದದ ಮೇಲ್ಭಾಗದ ಮಧ್ಯದಲ್ಲಿ ಗಡ್ಡಮೀಸೆಗಳುಳ್ಳ ಒಬ್ಬ ಸಾಧುವಿನ ಚಿತ್ರ. ಹಣೆಯ ಮೇಲೆ ಮೂರು ನಾಮ, ಕೊರಳ ಜನಿವಾರ ಕಾಣುತ್ತಿವೆ. ಚಿತ್ರದ ಕೆಳಗೆ ಶ್ರೀ ವಾಲ್ಮೀಕಿ ಮಹರ್ಷಿ ಪ್ರಸನ್ನ ಎಂದು ಬರೆದು ಅದರ ಕೆಳಗಿನಿಂದ ಪ್ರಾರಂಭಿಸಿತ್ತು:

ಮಹರ್ಷಿ ಸಂತಾನರೆ,

ನಿಮ್ಮ ಪೂರ್ವ ಪಿತಾಮಹರನ್ನು ಜ್ಞಾಪಿಸಿಕೊಳ್ಳಿ. ವಾಲ್ಮೀಕಿ ಮಹರ್ಷಿಗಳೆಂದು ಪ್ರಖ್ಯಾತರಾಗಿ ಸರ್ವ ರುಷಿಗಳಿಗೂ ಶ್ರೇಷ್ಠರಾದ ವಾಲ್ಮೀಕಿಗಳು ಮಹರ್ಷಿಗಳಾಗುವ ಮುಂಚೆ ಬೇಡರಾಗಿದ್ದರು. ಆದರೆ ಭಗವಂತನ ತಪಸ್ಸಿನಿಂದ ರುಷಿಗಳಾಗಿ ಶ್ರೀ ರಾಮಾಯಣವನ್ನು ಬರೆದು ಲೋಕೋಪಕಾರ ಮಾಡಿದುದೇ ಅಲ್ಲ. ಲೋಕಮಾತೆ ಸೀತಮ್ಮನವರನ್ನು ತಮ್ಮ ಆಶ್ರಮದಲ್ಲಿಟ್ಟುಕೊಂಡು ಸಾಕಿ ಲವ ಕುಶರಿಗೆ ವಿದ್ಯೆ ಕಲಿಸಿದರು. ಹೀಗೆ ಶ್ರೀರಾಮನ ಮಕ್ಕಳ ಗುರುಗಳೇ ಆದ ಅವರು ಸೀತಮ್ಮನವರಿಗೆ ತಂದೆಯಾದರು. ಅವರ ವಂಶಜರಾದ ನಮ್ಮನ್ನು ಬೇಡ ಎಂಬ ಕೀಳು ಹೆಸರಿನಿಂದ ಕರೆದು ಇತರ ಮೇಲುಜಾತಿಗಳವರು ಅವಮಾನಮಾಡುತ್ತಿದ್ದಾರೆ. ಹಿಂದಿನ ಕಾಲದಲ್ಲಿ ರುಷಿ ಮುನಿಗಳೆಲ್ಲರೂ ಬೇಡರೇ ಆಗಿದ್ದರು. ವಾಸ್ತವವಾಗಿ ನಾವೂ ಬ್ರಾಹ್ಮಣರೇ. ಈ ಸರ್ತಿ ಮಾಡುವ ಜನಗಣತಿಯಲ್ಲಿ ನೀವೆಲ್ಲ ವಾಲ್ಮೀಕಿ ಬ್ರಾಹ್ಮಣ ಎಂದು ಹೆಸರು ಬರೆಸಬೇಕೇ ಹೊರತು ಬೇಡ ಎನ್ನಕೂಡದು.

ಜೈ ವಾಲ್ಮೀಕಿ ಮಹರ್ಷಿ. ರಾಮಬ್ರಹ್ಮ.

ಸತ್ಯಳಿಗೆ ಕುತೂಹಲವೆನಿಸಿತು. ಮೊದಲು ಒಂದು ಕ್ಷಣ ನಗೆ ಬಂತು. ಅನಂತರ ಗಂಭೀರಳಾಗಿ ಅದನ್ನು ಮತ್ತೊಮ್ಮೆ ಓದಿದಳು. ನಂತರ ಎರಡನೆಯದನ್ನು ನೋಡಿದಳು.

ಕಾಳಿದಾಸ ಮಹಾಕವಿಗೆ ಜಯವಾಗಲಿ ಎಂದು ಆರಂಭಿಸಿದ ಅದರಲ್ಲಿ ಚಿತ್ರವಿರಲಿಲ್ಲ. 'ಕಾಳಿದಾಸನೆಂದು ವಿಶ್ವಪ್ರಸಿದ್ಧನಾಗಿರುವ ಕವಿಯು ನಮ್ಮವನು. ಸರಸ್ವತಿಯ ವರಪುತ್ರರು ನಾವು. ಇತರ ಮೇಲುಜಾತಿಯವರು ಕುರುಬ ಎಂಬ ಹೆಸರಿನಿಂದ ಕರೆದು ನಮ್ಮನ್ನು ದಡ್ಡರೆಂದು ಹಾಸ್ಯಮಾಡುತ್ತಾರೆ. ವಾಸ್ತವವಾಗಿ ನಮ್ಮ ಮತದ ಹೆಸರು ಕಾಳಿದಾಸ ಮತ ಎಂದು. ಈಗ ಆಗುವ ಜನಗಣತಿಯಲ್ಲಿ ಯಾರೂ ಕುರುಬ ಎಂದು ಬರೆಸಬಾರದಾಗಿ ಮತಬಾಂಧವರಲ್ಲಿ ಪ್ರಾರ್ಥನೆ. ಎಲ್ಲರೂ ಕಾಳಿದಾಸ ಮತ ಎಂದು ಬರೆಸಬೇಕೆಂದು ವಿನಂತಿ.

ಶ್ರೀ ವಿಶ್ವಕರ್ಮಾಯ ನಮಃ ಎಂದು ಆರಂಭವಾದ ಮೂರನೆಯ ಚೀಟಿಯು, ಬ್ರಹ್ಮನಿಗೆ ಪ್ರತಿಸ್ಪರ್ಧಿಯಾಗಿ ನಿಂತ ವಿಶ್ವಕರ್ಮಾಚಾರ್ಯನು ಪ್ರಪಂಚವನ್ನು

ಸೃಷ್ಟಿಸಿದನೆಂಬ ಕಥೆ ಸುಳ್ಳೆಂದೂ ಪರಬ್ರಹ್ಮನೇ ವಿಶ್ವಕರ್ಮದ ರೂಪ ತಳೆದು ವಿಶ್ವವನ್ನು ಸೃಷ್ಟಿಸಿದನೆಂದೂ ಪ್ರತಿಪಾದಿಸಿತ್ತು. ಆ ಬ್ರಹ್ಮಾವತಾರವಿಲ್ಲದಿದ್ದರೆ ಈ ಪ್ರಪಂಚ, ಇಲ್ಲಿಯ ಮನುಷ್ಯರು, ಯಾರೂ ಇರುತ್ತಿರಲಿಲ್ಲ. ಆದುದರಿಂದ ಅವನೇ ಸರ್ವಸೃಷ್ಟಿಯ ಮೂಲ. ಆಚಾರ್ಯ ಎಂದರೆ ಸರ್ವರಿಗೂ ಸರ್ವ ವಿದ್ಯೆಕ್ಕೂ ಗುರು ಎಂದು ಅರ್ಥ. ವಾಸ್ತವವಾಗಿ ಶೃಂಗೇರಿ ಮೊದಲಾದ ಮಠಸ್ಥಾಪನೆ ಮಾಡಿದ ಶಂಕರಾಚಾರ್ಯರು ನಮ್ಮವರು. ಒಂದು ಸಲ ತುಂಗಾದಡದಲ್ಲಿ ಸ್ನಾನ ಮಾಡಿ ಅವರು ಆವುಗೆಯನ್ನು ಮರೆತು ಶಾರದಮ್ಮನವರ ದೇವಸ್ಥಾನಕ್ಕೆ ಹೋದರು. ಪೂಜೆ ಮಾಡಿ ಹೊರಗೆ ಬಂದಾಗ ಬಿಸಿಲಿಗೆ ಕಾಲು ಸುಟ್ಟಿತು. ಹತ್ತಿರ ಕೆಲವು ಹುಡುಗರು ಆಡುತ್ತಿದ್ದರು. ಅವರನ್ನು ಕರೆದು, 'ಮಕ್ಕಳಿರಾ, ನದಿಯ ತಾವ ನನ್ನ ಮಠದ ಆವುಗೆಗಳಿವೆ. ತನ್ನಿ' ಎಂದರು. ಹುಡುಗರು ಓಡಿದರು. ಅವರಲ್ಲಿದ್ದ ಬ್ರಾಹ್ಮಣ ಹುಡುಗರು, ಕೈಗೆ ಸಿಕ್ಕಿದ ಒಂದು ಆವುಗೆಯನ್ನು ತಲೆಯ ಮೇಲೆ ಇಟ್ಟುಕೊಂಡು ಬಂದರು. ವಿಶ್ವಕರ್ಮದ ಹುಡುಗರು ಒಬ್ಬೊಬ್ಬರಾಗಿ ಕಾಲಿಗೆ ಸಿಕ್ಕಿಸಿಕೊಂಡು ತಂದರು. ಇದನ್ನು ಕಂಡು ಕುಪಿತರಾದ ಶಂಕರಾಚಾರ್ಯರು, 'ನಿಮ್ಮ ಅಹಂಕಾರಕ್ಕೆ ಶಾಪ ಕೊಡುತ್ತೇನೆ. ನೀವು ನನ್ನ ಜನವೇ ಆದರೂ ಇನ್ನುಮೇಲೆ ಈ ಮಠದ ಆಡಳಿತ ನಿಮಗೆ ಸಿಕ್ಕದೆ ಇರಲಿ. ಪರಮತದವರಾದ ಬ್ರಾಹ್ಮಣಂಗೆ ಸೇರಲಿ' ಎಂದರು. ಆಚಾರ್ಯರ ಶಾಪ ತಿಳಿದು ಅನಂತರ ವಿಶ್ವಕರ್ಮದ ಹಿರೀಕರೂ ಯಜಮಾನರೂ ಬಂದು ಅಡ್ಡಬಿದ್ದು ಕೇಳಿಕೊಳ್ಳಲಾಗಿ, ಒಂದು ಸಹಸ್ರ ವರ್ಷಗಳನಂತರ ನಿಮಗೆ ಶಾಪಮುಕ್ತಿಯಾಗುತ್ತೆ ಎಂದು ಅನುಗ್ರಹಿಸಿ ಅಲ್ಲಿಂದ ಹಿಮಾಲಯಕ್ಕೆ ತಪಸ್ಸಿಗೆ ಹೋದರು. ಈಗ ಒಂದು ಸಹಸ್ರ ವರ್ಷ ಕಳೆದಿದೆ. ನಾವು ಬ್ರಾಹ್ಮಣ ಮಠಗಳ ಆಡಳಿತವನ್ನು ಪಡೆಯಲು ಹೋರಾಡುವ ಕಾಲ ಬಂದಿದೆ. ಅದು ಹೋಗಲಿ. ಅದು ಬೇರೆಯ ಮಾತು.

'ಆದರೆ ನಮ್ಮನ್ನು ಜನಗಳು ಅಕ್ಕಸಾಲಿಗರು ಎಂಬ ಹೀನಾಯದ ಹೆಸರಿನಿಂದ ಕರೆಯುವುದನ್ನು ತಪ್ಪಿಸಬೇಕು. ಈಗ ಬರುವ ಜನಗಣತಿಯಲ್ಲಿ ನೀವು ಎಲ್ಲರೂ ವಿಶ್ವಕರ್ಮ ಬ್ರಾಹ್ಮಣ ಎಂಬ ಹೆಸರನ್ನು ಬರೆಸತಕ್ಕದ್ದು. ಯಾರೂ ಅಕ್ಕಸಾಲಿಗ, ಆಚಾರಿ, ಎಂದು ಬರೆಸಕೂಡದು. ಕಸುಬು ಎಂಬ ಹೆಡಿಂಗಿನಲ್ಲಿ ವಿಶ್ವಕರ್ಮ ಎಂದು ಬರೆಸಬೇಕೇ ವಿನಾ ಚಿನ್ನ-ಬೆಳ್ಳಿ ಎಂದಾಗಲಿ, ಕುಲುಮೆ ಕಟ್ಟುವುದು ಎಂದಾಗಲಿ ಬರೆಸಕೂಡದು.'

ಒಂದೊಂದನ್ನೂ ಓದುತ್ತಿದ್ದಂತೆ ಸತ್ಯಳಿಗೆ ಇತಿಹಾಸದ ಹೊಸ ರೂಪವೇ ಕಾಣುತ್ತಿತ್ತು. ಕಲ್ಪನೆಯು ಕ್ಷಣಕಾಲ ನಿಂತುಹೋದರೂ, ಅನಂತರ, ಜನರ

ಯುಗ ಯುಗಗಳ ಬಯಕೆಯನ್ನು ಗುರುತಿಸಲು ತೊಡಗಿತು. ನಾಲ್ಕನೆಯ ಚೀಟಿಯ ಮೇಲ್ಭಾಗದಲ್ಲಿ ದೊಡ್ಡದಾಗಿ ಈಶ್ವರಲಿಂಗದ ಚಿತ್ರವಿತ್ತು. 'ಒಗ್ಗಟ್ಟಿನಲ್ಲಿ ಬಲ. ಒಟ್ಟುಗೂಡಿದರೆ ಕೈಲಾಸ, ಒಡೆದರೆ ಭವ' – ಎಂದು ಆರಂಭವಾದ ಅದು ಲಿಂಗಾಯತರ ಒಗ್ಗಟ್ಟಿಗೆ ಕರೆಕೊಟ್ಟಿತ್ತು:

'ಅಣ್ಣದಿರೆ, ಅಕ್ಕದಿರೆ, ವೇದಗಳಿಗಿಂತ ಪುರಾತನವಾದ ವೀರಶೈವ ಮತವನ್ನು ಬಸವಣ್ಣನವರು ಸ್ಥಾಪಿಸಿದರೆಂದು ಕರೆದು ನಮ್ಮ ಪರಮ ಪ್ರಾಚೀನ ಧರ್ಮವನ್ನು ಇತ್ತೀಚಿನದಾಗಿ ಮಾಡುವ ಪ್ರಯತ್ನ ನಡೆದಿದೆ. ಅಲ್ಲದೆ ನಮ್ಮನಮ್ಮಲ್ಲಿಯೇ ಒಡಕು ಹುಟ್ಟಿಸಿ ನಮ್ಮನ್ನು ನೊಣಬ, ಬಣಜಿಗ, ಬಿಳಿಮಗ್ಗ, ಶೆಟ್ಟಿ, ಜಂಗಮ, ಎಂಬ ಒಳಪಂಗಡದಿಂದ ಕರೆಯುವ ಪದ್ಧತಿಯೂ ಬೆಳೆದಿದೆ. ಎಚ್ಚರಿಕೆ. ಒಗ್ಗಟ್ಟಿರಲಿ. ಈಗ ನಡೆಯುವ ಜಣಗಣತಿಯಲ್ಲಿ ಪ್ರತಿಯೊಬ್ಬರೂ ತನ್ನ ಮತವನ್ನು ಲಿಂಗಾಯತ ಅಥವಾ ವೀರಶೈವ ಎಂದು ಮಾತ್ರ ಹೇಳಬೇಕು. ಒಳಪಂಗಡವನ್ನು ಹೇಳಬಾರದೆಂದು ಪ್ರಾರ್ಥನೆ.'

ಸತ್ಯ ಉಳಿದ ಹಾಳೆಗಳನ್ನು ತಿರುಗಿಸಿ ನೋಡಿದಳು. ಬ್ರಾಹ್ಮಣರು ಯಾರೇ ಆಗಲಿ ಬರೀ ಬ್ರಾಹ್ಮಣ ಎಂದು ಮಾತ್ರ ಹೇಳಬೇಕು, ಒಳಪಂಗಡದ ಹೆಸರು ಹೇಳಬಾರದೆಂದು ನಿಖಿಲ ಕರ್ಣಾಟಕ ತ್ರಿಮತ ಬ್ರಾಹ್ಮಣ ಸಂಘದ ಹೆಸರಿನಲ್ಲಿ ಅಚ್ಚುಹಾಕಿತ್ತು. ಆದರೆ ಅದರ ಕೆಳಗೆ ಇದ್ದ ಚೀಟಿಯಲ್ಲಿ ಮಂಡ್ಯಂ, ಹೆಬ್ಬಾರ್, ಮೊದಲಾಗಿ ಯಾವುದೇ ಒಳಪಂಗಡವಿದ್ದರೂ, ಶ್ರೀವೈಷ್ಣವರು ಶ್ರೀವೈಷ್ಣವ ಬ್ರಾಹ್ಮಣ ಎನ್ನಬೇಕೇ ಹೊರತು ಉಪಪಂಗಡವನ್ನು ಹೇಳಬಾರದೆಂದು ಮತ್ತೊಂದು ಚೀಟಿಯಿತ್ತು. ಅದರ ಅಡಿಯಲ್ಲಿ ಮಂತ್ರಾಲಯ, ಉಡುಪಿ, ಮೊದಲಾದ ಉಪಪಂಥಗಳನ್ನು ಗಮನಿಸದೆ ಮಾಧ್ವರೆಂದು ಒಗ್ಗಟ್ಟಿನ ಹೆಸರು ಹೇಳುವಂತೆ ಇನ್ನೊಂದು ಚೀಟಿ. ಇಂಥವೇ ಒಟ್ಟು ಇಪ್ಪತ್ತೈದು ಚೀಟಿಗಳಿವೆ. ಎಲ್ಲವನ್ನೂ ಒಂದೇಸಲ ವಿವರವಾಗಿ ಓದಲು ಸಾಧ್ಯವಿಲ್ಲದೆ ಸತ್ಯ ಬರೀ ತಲೆಬರಹಗಳನ್ನು ನೋಡಿದ ನಂತರ ಜಯಮ್ಮನನ್ನು ಕೇಳಿದಳು: 'ಇವೆಲ್ಲ ಎಲ್ಲಿದ್ದುವು?'

'ಸೆನ್ಸಸ್ ನಡೀತಿದೆಯಲ. ಈಗ ಒಂದು ತಿಂಗಳಿಂದ ಯಾವ ಯಾವ ಊರಿನಿಂದಲೋ ಮುಖಂಡರು ಬಂದು ಆಯಾಯ ಜಾತಿಯೋರಿಗೆ ಕೊಟ್ಟು ಹೋಗ್ತಿದಾರೆ. ಇವರು ಎಲ್ಲಾನೂ ಒಂದೊಂದು ಚೀಟಿ ಇರಲಿ ಅಂತ ಹುಡುಕಿ ತಂದು ಜೋಡಿಸಿ ಮೇಜದಲ್ಲಿ ಇಟ್ಟಿದಾರೆ. ಗೋಡೆ ಮೇಲೆಲ್ಲ ಅದೇ ಅಂಟಿಸಿದಾರೆ, ನೀನು ನೋಡ್‌ಲಿಲ್ವೆ?'

'ಇಲ್ಲ.'

'ತಲೆ ಮೇಲೆ ಹೋಲ್ಡಾಲ್ ಹೊತ್‌ಕಂಡು ಬಂದೆ. ಅತ್ಲಾಗೆ ಇತ್ಲಾಗೆ

ನೋಡಲಿಲ್ಲ ನೀನು. ಅಲ್ಲಿ ಬಾಗಿಲು ಹತ್ರ ನಿಂತ್ಕಂಡು ನೋಡು ಕಾಣುತ್ತೆ.'

ಸತ್ಯ ಹೋಗಿ ಹೊರಬಾಗಿಲಿನ ಆಚೆ ನಿಂತು ನೋಡಿದಳು. ಬೀದಿಯ ಉದ್ದಕ್ಕೂ ಗೋಡೆಗಳ ಮೇಲೆಲ್ಲಾ ಸಿನಿಮಾ ಜಾಹೀರಾತುಗಳಂತೆ ದೊಡ್ಡ ದೊಡ್ಡ ಅಚ್ಚಿನ ಕಾಗದಗಳನ್ನು ಅಂಟಿಸಿತ್ತು. 'ಒಳಪಂಗಡ ಮರೆಯಿರಿ. ವೀರಶೈವ ಎನ್ನಿರಿ', 'ಬೇಡರಲ್ಲ. ವಾಲ್ಮೀಕಿ ಬ್ರಾಹ್ಮಣರು', 'ಕಾಳಿದಾಸ ಮತಕ್ಕೆ ಜಯವಾಗಲಿ' – ಎಂಬಂತಹ ಪೋಸ್ಟರುಗಳಿಂದ ಊರ ಮನೆಗಳ ಗೋಡೆಗಳೆಲ್ಲ ತುಂಬಿ ಹೋಗಿದ್ದುವು. ಮೈಸೂರಿನಲ್ಲಿ ಸದಾ ಪುಸ್ತಕ ಭಂಡಾರದಲ್ಲಿ ಹೊತ್ತು ಕಳೆಯುತ್ತಿದ್ದ ತನಗೆ ಈ ಒಂದು ವಿಷಯವೂ ತಿಳಿಯದಿದ್ದುದಕ್ಕೆ ವಿಷಾದಿಸಿಕೊಂಡು ಸತ್ಯ ಒಳಕ್ಕೆ ಬಂದಳು. ಎರಡು ನಿಮಿಷದಲ್ಲಿ ವೆಂಕಟೇಶ ಮನೆಗೆ ಬಂದ. ತಂಗಿಯ ಕ್ಷೇಮ ಸಮಾಚಾರ ವಿಚಾರಿಸಿದ. ಅಷ್ಟರಲ್ಲಿ ಹದಿನೈದು ಇಪ್ಪತ್ತು ಜನಗಳ ಒಂದು ಗುಂಪು ಅವನನ್ನು ಹುಡುಕಿಕೊಂಡು ಬಂತು. ಹೊರ ಅಂಗಳಕ್ಕೆ ಅವನು ಬಂದ ತಕ್ಷಣ ಫಿರ್ಯಾದು ಹೇಳಿದರು: 'ಆ ಮೇಷ್ಟ್ರಯ್ಯಂಗೆ ಹಿಡಕಂಡು ಒದೀಬೇಕು ಕಣ್ರಯ್ನೋರೆ.'

'ಯಾಕ್ರಪ್ಪ?'

"ನಮ್ ನಮ್ ಜಾತಿ ಹ್ಯಸರು ನಾವ್ರು ಏಳ್ದಂಗೆ ಬರಿ ಅಂದ್ರೆ, 'ಸರ್ಕಾರಿ ಲೆಕ್ಕದಲ್ಲಿ ಹಂಗಿಲ್ಲ. ಇದ್ದಂಗೆ ಬರೀತೀವಿ' ಅಂತಾನೆ. ನಾವೇಳ್ದಂಗೆ ಬರುದ್ರೆ ಅವರಪ್ಪನ ಗಂಟು ಓಯ್ತದಾ?"

'ನೀನೇನಂತ ಏಳ್ದೆಯಪ್ಪ?' – ಎಂದು ವೆಂಕಟೇಶ ಅವರ ಪೈಕಿ ಒಬ್ಬನನ್ನು ನಿರ್ದೇಶಿಸಿ ಕೇಳಿದ.

'ಮೇಲುಸಕ್ಕರೆ ಅಂತ ಬರ್ಕಳ್ರೀ ಅಂದ್ರೆ, ಇಲ್ಲ ಉಪ್ಪಾರ್ರು ಅಂತ ಬರೀತೀನಿ ಅಂದ. ಉಪ್ಪಾರ್ರು ಅಂದ್ರೆ ನಮ್ಮ ಜಾತಿಗೆ ಅವಮಾನವಲ್ವೇನ್ರಿ?'

'ನ್ಯಾಯ ನ್ಯಾಯ' – ಎಂದು ತಲೆಹಾಕಿದ ವೆಂಕಟೇಶ.

'ಈಗ ಏನು ಮಾಡ್ಬೇಕು ಏಳ್ರಿ.'

'ನೀವೆಲ್ಲಾ ಏನು ಮಾಡ್ಕಂಡಿದೀರಾ?'

'ಇಷ್ಟ ಗಣತಿ ಬರೆದಿರಾವೇ ತೆಪ್ಪ. ಅವನ ಲೆಕ್ಕ ಹ್ಯಂಗಾರಾ ಇರ್ಲಿ. ಊರಾಗೆ ಯಾರ ಯಾರ ಮರ್ವಾದಿ ಏನು ಅಂತ ನಾಡಿದ್ದು ಸಂಜೆಗೆ ದೊಡ್ಡ ಗೌಡರು ತೀರ್ಮಾನ ಮಾಡಬೇಕು ಅಂತ ಒಪ್ಕಂಡವ್ರೆ.'

'ಸರಿ ಬುಡು.'

'ಸರಿ ಬುಡು ಅನ್ನಾಕಾದು ಅಯ್ನೋರೆ. ನೀವು ನ್ಯಾಯವಾಗಿ ಏಳಬೇಕು.'

'ನ್ಯಾಯ ಅಂದ್ರೆ ಏನು?'

'ನಮ್ಮುನ್ನ ಉಪ್ಪಾರ್ರು ಅನ್ನಾಕಾದು. ಮೇಲುಸಕ್ಕರೆ ಅನ್ನಬೇಕು. ಪೂಜಾರೈನೋರು, ನಿಮ್ಮ ಮಾತೇ ಯಲ್ಲಾ ಒಪ್ಕಂತಾರೆ.'

'ನಿನ್ನ ಮೇಲುಸಕ್ಕರೆ ಅಂದ್‌ರೆ ನಂಗೊಂದು ಸವಾಸೇರು ಸಕ್ರೆ ತಂದ್ ಕೊಡ್ತಿ ಏನೋ?'

'ಒಂದ್ ಧಡೇವು ಕೊಡ್ತೀನಿ ಕಣಪ್ಪ.'

'ಆಯಿತು ಬಿಡು. ಈಗ ನಡೀರಿ. ನಾನು ಕಾಪಿಗೀಪಿ ಕುಡಿದಿಲ್ಲ' – ಎಂದು ಹೇಳಿ ವೆಂಕಟೇಶ ಅವರನ್ನು ಕಳಿಸಿದ.

ಮೈಸೂರಿನಲ್ಲಿ ಏನು ಮಾಡುತ್ತಿದ್ದೆ ಎಂದು ವೆಂಕಟೇಶ ಸತ್ಯಳನ್ನು ವಿಚಾರಿಸಿದ. ಆದರೆ ತಾನು ಅಲ್ಲಿಗೆ ಹೋಗಿದ್ದ ನಿಜವಾದ ಕಾರಣವನ್ನು ಅವಳು ಹೇಳಲಿಲ್ಲ. 'ಲೈಬ್ರರಿಯಲ್ಲಿ ಕೂತು ಮನಸ್ಸು ಪೂರ್ತಿ ಓದಿದೆ' – ಎಂದಳು. 'ತೆಂಗಿನ ಸಸಿಗಳೆಲ್ಲ ಹತ್ತಿ ಕಂಡಿವೆಯೆ?' –ಎಂದದ್ದಕ್ಕೆ, 'ನಂಗೆ ವಹಿಸಿದಮೇಲೆ ನಿಂಗ್ಯಾಕೆ ಯೋಚನೆ?' ಎಂದ. ಆಗಲೇ ತೋಟಕ್ಕೆ ಹೊರಡಲು ಅವಳು ಚಡಪಡಿಸಿದಳು. 'ಏನು ಅವಾಂತರ?'–ಎಂದು ಅವನೂ ತಡೆದ. ಅಷ್ಟರಲ್ಲಿ ಬೇಡರ ಜಾತಿಯ ಮಲ್ಲನಾಯಕ ಬಂದ. ಆ ಮತದ ಯಜಮಾನ ಅವನು. ಕಳೆದ ಹತ್ತು ವರ್ಷದಿಂದ ಮಾಂಸ ಮಡ್ಡಿ ತಿನ್ನುವುದನ್ನು ಬಿಟ್ಟುಬಿಟ್ಟಿದ್ದಾನೆ. ಹಣೆಗೆ ವಿಭೂತಿ ಧರಿಸಿ ತಲೆಗೆ ಬಿಳೀ ಲಪ್ಪಟೆ ಸುತ್ತಿದ್ದ. ಅರವತ್ತರ ಹತ್ತಿರದ ವಯಸ್ಸಿನ ಅವನನ್ನು ಸತ್ಯಳು ಮೊದಲಿನಿಂದ ನೋಡಿದ್ದಳು. ಬಂದವನೇ ವೆಂಕಟೇಶನನ್ನು ಕರೆದು ಆಪ್ತಧ್ವನಿಯಲ್ಲಿ ಕೇಳಿದ: 'ಯಪ್ಪಾ, ನಾಡಿದ್ದು ನೀನು ನಮ್ಮುನ್ನ ಬಿಟ್ಟುಕೊಡಬ್ಯಾಡ್‌ದು.'

'ನನ್ನೇನು ಮಾಡು ಅಂತೀಯ?'

'ನಾವು ಬ್ಯಾಡರಲ್ಲ, ವಾಲ್ಮೀಕಿಗಳು ಅಂತ ಸಾಸ್ತ್ರದಾಗೈತೆ ಅಂತ ನೀನು ಏಳಬೇಕು. ಅಲ್ಲೀಗ್ ಒಪ್ಕತಾರೆ ದೊಡ್ಡ ಗೌಡರು.'

'ಇಲ್ಲದ್ದನ್ನ ನಾನು ಹ್ಯಂಗೆ ಅನ್ನಿ ಮಲ್ಲನಾಯಕ?'

ಮತದ ಯಜಮಾನನಾದ ತನ್ನನ್ನು ಏಕವಚನದಲ್ಲಿ ಅಂದದ್ದರಿಂದ ಮುದುಕನಿಗೆ ಸಿಟ್ಟು ಬಂತು. ಆದರೆ ತನ್ನ ಮತದ ಅಂತಸ್ತಿನ ನಿರ್ಣಯ ಇವನ ಕೈಲಿದೆ. ಬ್ರಾಹ್ಮಣಮುಖ್ಯನಾದ ಇವನಿಂದ ಬೆಂಬಲ ಸಿಕ್ಕದೆ ನಿರ್ಣಯವಾಗುವುದಿಲ್ಲವೆಂಬ ಅರಿವಿನಿಂದ ಅವನು ಅದನ್ನು ಗಮನಿಸಲಿಲ್ಲ. 'ಹಂಗಾರೆ ನಮ್ಮೋರು ವಾಲ್ಮೀಕಿಯಾದದ್ದು ಸುಳ್ಳಾ?'

'ನಿಮ್ಮ ಲಕ್ಷದಲ್ಲಿ ಒಬ್ಬ ವಾಲ್ಮೀಕಿಯಾದರೆ ನೀವೆಲ್ಲ ಅವನ ಮಕ್ಕಳು ಮೊಮ್ಮಕ್ಕಳು ಹ್ಯಾಂಗೆ ಆಗ್ತೀರ? ವಾಲ್ಮೀಕಿ ಋಷಿಗೆ ಮಕ್ಕಳಿದ್ದುವು ಅಂತ ರಾಮಾಯಣದಲ್ಲಿ ಬರೆದೇ ಇಲ್ಲ.'

ಈ ಯಜಮಾನನಿಗೆ ಪೇಚಿಗಿಟ್ಟುಕೊಂಡಿತು. ನಾಡದ್ದಿನ ನಿರ್ಣಯದಲ್ಲಿ ತನ್ನ ಮತವು ಬೇಡವಾಗಿಯೇ ಉಳಿದರೆ ಮುಂದೆ ಇಡೀ ಗ್ರಾಮಮರ್ಯಾದೆಯಲ್ಲಿ ತಾವು ಕೆಳಗುಳಿಯಬೇಕು. ಆದುದರಿಂದ ಏನಾದರೂ ಮಾಡಿ ವಾಲ್ಮೀಕಿಯ ಸಂತಾನದ ಅಂತಸ್ತನ್ನು ಸಂಪಾದಿಸಬೇಕು. 'ಏನಾರ ಮಾಡಪ್ಪ. ನೀನು ಈಟೊಂತರ ಸಾಸ್ತ್ರ ಪಾಸ್ತ್ರ ಓದಿದೀಯ. ಉಡುಕಪ್ಪ ನ್ಯಟ್ಟಗೆ' – ಎಂದು ಅಂಗಲಾಚಿದ.

ಅವನ ಆಶಯ ವೆಂಕಟೇಶನಿಗೆ ಮೊದಲೇ ಅರ್ಥವಾಗಿತ್ತು. 'ಬರೀ ಹುಡುಕಿದರೆ ಸಿಕ್ಕಾಕಿಲ್ಲ. ಶಾಸ್ತ್ರ ಮಾಡಬೇಕು.'

'ಮಾಡಪ್ಪ ಹಂಗಾರೆ.'

'ಬರೀ ನಾನು ಮಾಡಿದರೆ ಆಗಾಕುಲ್ಲ. ಮಠಕ್ಕೆ ನೂರು ರೂಪಾಯಿ ಮುಡಿಪು ಕಟ್ಟಿದರೆ ಮಂತ್ರ ಮಾಡಿಕೊಡ್ತಾರೆ. ಆದ ತಂದು ರಾಮಾಯಣದಾಗೇ ಐತೆ ಅನ್ನಬೇಕು.'

ನೂರು ಎಂದದ್ದಕ್ಕೆ ಮುದುಕ ಹಿಂದು ಮುಂದು ಯೋಚಿಸಿದ. 'ನೂರು ಅಂದ್ರೆ ಎಲ್ಲಿ ತರಾಣ?' – ಎಂದ.

'ಎಲ್ಲಿ ತರಾಣ ಅಂದ್ರೆ ಮಠದೋರು ಒಪ್ಕತ್ತಾರಾ? ಹೊಸದಾಗಿ ಶಾಸ್ತ್ರ ಮಾಡಾದು ಅಂದ್ರೆ ಪುಗಸಟ್ಟೆಯ?'

ನಾಯಕ ಯೋಚಿಸಿದ. ಅವನ ಮತದವರು ಒಟ್ಟು ಇಪ್ಪತ್ತು ಸಂಸಾರಗಳಿವೆ. ಸುತ್ತ ಹಳ್ಳಿಗಳಲ್ಲಿ ಇಪ್ಪತ್ತು ಮೂವತ್ತು ಆಗುತ್ತವೆ. ಚಂದಾ ಎತ್ತಿ ಕೊಡಬೇಕು. ಈಗ ಕೊಡದಿದ್ದರೆ ಮುಂದೆ ತನ್ನ ಘನತೆ ಉಳಿಯುವುದಿಲ್ಲ – ಎಂದುಕೊಂಡವನು, 'ನಾಳೆ ಬ್ಯಾಳಗ್ಗೆ ದೇವರು ಹುಟ್ಟೋದ್ರೊಳಗೆ ಸಿಕ್ಕಿದೋಟು ಹಣ ತರ್ತೀನಿ. ಅಂತ್ಹಾ ನೀನು ಕೆಲ್ಸ ಮಾಡಬೇಕು' – ಎಂದು ಹೇಳಿ, ಗೆದ್ದವನಂತೆ ಹೊರಟು ಹೋದ.

ಒಳಬಾಗಿಲಿನ ಕತ್ತಲೆಯಲ್ಲಿ ಕುಳಿತು ಸತ್ಯ ವ್ಯವಹಾರ ಮತ್ತು ಸಂಭಾಷಣೆಗಳನ್ನೆಲ್ಲ ಕೇಳಿಕೊಳ್ಳುತ್ತಿದ್ದಳು. ವೆಂಕಟೇಶನ ಸಂಪಾದನೆ ಮತ್ತು ಆಸೆಗೆ ಮಿತಿ ಇಲ್ಲ ಎನ್ನಿಸಿತು. ಆದರೆ ತಾನು ಮಾತನಾಡಹೋದರೆ ಅವನು ಬೈಯುತ್ತಾನೆ, ನಾನು ಇದೀಗ ಊರಿಗೆ ಬಂದಿದ್ದೇನೆ, ಯಾಕೆ ಸುಮ್ಮನೆ ಜಗಳ, ಎಂದು ಸುಮ್ಮನೆ ಕುಳಿತಿದ್ದಳು. ವೆಂಕಟೇಶ ಅಡಿಗೆಮನೆಗೆ ಹೋದ. ಜಯಮ್ಮ ಬಟ್ಟಲಿಗೆ ಹಾಕಿ ಕೊಟ್ಟ ಕಾಫಿಯನ್ನು ಒಂದು ಗುಟುಕು ನುಂಗಿದ್ದ. ಅಷ್ಟರಲ್ಲಿ ಕುರುಬಗೌಡರ ಯಜಮಾನ ಸೌದ್ರೇಗೌಡರು ಮನೆಗೆ ಬಂದು ಕೂಗಿದರು. ಬೇಗ ಕಾಫಿ ಕುಡಿದು ಹೊರಗೆ ಬಂದು ವೆಂಕಟೇಶ ಅವರನ್ನು ಸ್ವಾಗತಿಸಿ ಗೋಣಿಚೀಲದಮೇಲೆ ಕೂರಿಸಿದ.

ಅವರೂ ಮಲ್ಲನಾಯಕ ಬಂದಿದ್ದ ಕೆಲಸಕ್ಕೆ ಬಂದಿದ್ದರು. ಮಲ್ಲನಾಯಕನಿಗೆ ಕೊಟ್ಟ ಉತ್ತರ ಮತ್ತು ಉಪಯೋಗಿಸಿದ ತಂತ್ರವನ್ನೇ ಉಪಯೋಗಿಸಿ ವೆಂಕಟೇಶ ನಾನೂರು ರೂಪಾಯಿ ಕೇಳಿದ. 'ನೋಡಿ, ಒಳಗೆ ಮಗೀಗೆ ಹುಶಾರಿಲ್ಲ. ಇಂಥಾದ್ರಲ್ಲಿ ನಾಳೆ ಮಠಕ್ಕೆ ಹೋಗಿ ಬರಬೇಕು ಅಂದ್‌ರೆ ನಂಗೇನು ದರ್ದಾ?' – ಎಂದ.

'ನನ್ನ ಮಕ ನೋಡಿ ಕ್ಯಲ್ಸ ಮಾಡ್ಕ್ಯಂಡ್ ಬಾರಪ್ಪ' – ಅವರೆಂದರು.

'ಆಯ್ತು. ಹಣ ಕೈಲಿ ಕುಂಡುಹೋಗಬೇಕು.'

'ನಾನೂರು ಗೀನೂರು ಆಗಾಕಿಲ್ಲ. ನೂರು ರೂಪಾಯಿ ರಾತ್ರಿಗೇ ತಂದು ಕೊಡ್ತೀನಿ. ನಾನು ಹಿಂಗೆ ಬಂದಿದ್ದೆ ಅಂತ ಯಾರ ಕುಟ್ಲೂ ಬಾಯಿಬಿಡಬ್ಯಾಡ' – ಎಂದು ಹೇಳಿ ಹೊರಡುವುದರಲ್ಲಿದ್ದ ಅವರು, 'ನಮ್ಮ ಜಾತಿಗೆ ಕಾಳಿದಾಸ ಮತ ಅಂದ್‌ರೆ ಚಂದವೋ ಹಾಲುಮತ ಅಂದ್‌ರೆ ಚಂದವೋ?' – ಎಂದು ಹೊಸದಾಗಿ ಕೇಳಿದರು.

'ಹಾಲುಮತ ಅಂದ್‌ರೂ ಅದೇ, ಕುರುಬಗೌಡರು ಅಂದ್‌ರೂ ಅದೇ. ಕಾಳಿದಾಸರು ಅಂದ್ರೆ ಮೇಲಕ್ಕೆ ಬಂದ ಹಂಗಲ್ಲವಾ?' – ಅವನು ಸೂಚಿಸಿದ. ತಮ್ಮ ಪ್ರಶ್ನೆಯ ಪೆದ್ದುತನಕ್ಕೆ ತಾವೇ ನಕ್ಕು ಅವರು ಹೋದರು.

ಒಳಗೆ ಕುಳಿತಿದ್ದ ಸತ್ಯಳ ಸಿಟ್ಟು ಉರಿಯುತ್ತಿತ್ತು. ಆದರೆ ತಾನು ಮಾತನಾಡಿದರೆ ಜಗಳವಾಗುತ್ತದೆಂದು ತಡೆದುಕೊಳ್ಳುತ್ತಿದ್ದಳು. ಸ್ವಲ್ಪ ಹೊತ್ತಿಗೆ ಸಾತಾನಿ ಜಾತಿಯ ರಾಮಾನುಜಯ್ಯನವರು ಬಂದರು. ಕಚ್ಚೆ ಪಂಚೆ ಉಟ್ಟು ಯಾವಾಗಲೂ ಶಾಲು ಹೊದೆಯುವ ಅವರು, ಬ್ರಾಹ್ಮಣರಂತೆ ಬತ್ತಿ ಜುಟ್ಟು ಬಿಟ್ಟು ತಲೆಯನ್ನು ನುಣ್ಣಗೆ ಮಾಡಿಸಿಕೊಂಡಿದ್ದಾರೆ. ಎಡಹೆಗಲಿನ ಮೇಲೆ, ಎದ್ದು ಕಾಣುವಂತೆ ಜನಿವಾರ ಹಾಕುತ್ತಾರೆ. ಶ್ರೀವೈಷ್ಣವ ಬ್ರಾಹ್ಮಣರಂತೆ ದಪ್ಪ ಎರಡು ಬಿಳಿ ಮತ್ತು ಮಧ್ಯ ಒಂದು ಕೆಂಪು ನಾಮ ಹಾಕಿ ಮೂಗಿನ ತುದಿಗೆ ಬಿಳಿಯ ಗೂಟದ ಪಾಯ ಕೊಡುತ್ತಾರೆ. ತಾವು ಬ್ರಾಹ್ಮಣರೆನ್ನುವುದು ಯಾವಾಗಿನಿಂದಲೂ ಅವರ ವಾದ. ಶ್ರೀರಾಮಾನುಜಾಚಾರ್ಯರ ವಂಶೀಕರೆಂದು ಹೇಳುತ್ತಾರೆ. ಆದರೆ ಹೊಲೆಯರಲ್ಲಿ ವೈಷ್ಣವ ಪಂಥಿಗಳಾದವರು ಮಾತ್ರ ಅವರನ್ನು ಗುರುಗಳೆಂದು ಭಾವಿಸುತ್ತಾರೆ. ಅಂಥವರು ಬ್ರಾಹ್ಮಣರಾಗುವದು ಹೇಗೆ? ತಾವು ಇಲ್ಲಿ ಬಂದು ಮಾತನಾಡುತ್ತಿರುವುದನ್ನು ಎದುರು ಮನೆಯ ಕುಪ್ಪಣ್ಣಯ್ಯಂಗಾರರು ಕಂಡಾರೆಂಬ ಅಂಜಿಕೆ ಬೇರೆ. 'ಸ್ವಲ್ಪ ಹಿತ್ತಿಲ ಕಡೆ ಹೋಗಿ ಮಾತಾಡೋಣವೆ?' – ವೆಂಕಟೇಶನನ್ನು ಕೇಳಿದರು.

'ಬನ್ನಿ, ಬನ್ನಿ. ಕಾಫಿ ತಗೋತೀರಾ?'

'ಹಾ, ಹಾ, ಹಾ' – ಎಂದು ನಕ್ಕು, 'ತಪ್ಪೇನಿಲ್ಲ. ಆದರೆ ಮೊದಲಿಂದ ಪದ್ಧತಿ ಬರಲಿಲ್ಲ. ಏನೂ ತಿಳಕೋಬಾರದು' ಎಂದು ಕೈಮುಗಿದರು. ವೆಂಕಟೇಶ ಬಲವಂತ ಮಾಡಲೂ ಇಲ್ಲ. ಅವರನ್ನು ಕರೆದುಕೊಂಡು ದನದ ಕೊಟ್ಟಿಗೆಗೆ ಹೋದ. ರಾಮಾನುಜಯ್ಯನವರ ಸಮಸ್ಯೆ ಕಠಿಣವಾದುದು. ಅವರು ಯಜ್ಞೋಪವೀತ ಧರಿಸುತ್ತಾರೆ. ಸಂಧ್ಯಾವಂದನೆ ಮಾಡುತ್ತಾರೆ. ಮಾಂಸ ಮಡ್ಡಿ ತಿನ್ನುವುದಿಲ್ಲ. ಮಡಿ ಹುಡಿ ಎಲ್ಲ ಆಚರಿಸುತ್ತಾರೆ. ಆದರೆ ಊರವರು ಅವರನ್ನು ಸಾತಾನಿ ಎನ್ನುವರೇ ವಿನಾ ಬ್ರಾಹ್ಮಣ ಎಂದು ಕರೆಯುವುದಿಲ್ಲ. ಹಿಂದೆ ಒಮ್ಮೆ ತಮ್ಮ ಹೆಸರಿನ ಮುಂದೆ, ಅಯ್ಯಂಗಾರರು ಎಂಬುದನ್ನು ಹಚ್ಚಿಕೊಳ್ಳಲು ಅವರು ಪ್ರಯತ್ನಿಸಿದ್ದುಂಟು. ಆದರೆ ಸ್ಥಳೀಯ ಶ್ರೀವೈಷ್ಣವ ಬ್ರಾಹ್ಮಣರು ಒಟ್ಟುಗೂಡಿ, ದೊರೆ ತಿರುಮಲೇಗೌಡರ ತನಕ ದೂರು ಒಯ್ದು ರಾಮಾನುಜಯ್ಯನವರ ತೋಟದ ಮರಗಳಲ್ಲಿ ಕಾಯಿ ಕಳ್ಳತನ ಮಾಡಿಸಿ ಅವರ ಮೂಲ ಹೆಸರನ್ನು ನಿಲ್ಲಿಸಿದರು. ಈಗ ಜನಗಣತಿಯಲ್ಲಿ ಬ್ರಾಹ್ಮಣ ಎಂದು ಸೇರಿಸಲು ಅವರು ಯತ್ನಿಸಿದರು. ಆದರೆ ಬರೆದ ಮೇಷ್ಟರು ಸಾತಾನಿ ಎಂಬ ಕಾಲಮಿನಲ್ಲೇ ಸೇರಿಸಿದರು. ಸುಳ್ಳು ಬರೆಯಕೂಡದೆಂದು ಅವರಿಗೆ ಸೆನ್ಸಸ್ ಅಧಿಕಾರಿಗಳಿಂದ ಹುಕುಂ ಮತ್ತು ಎಚ್ಚರಿಕೆ ಬಂದಿದ್ದುವು. ನಾಡದ್ದಿನ ಸಭೆಯಲ್ಲಾದರೂ ತಾವು ಬ್ರಾಹ್ಮಣರೆಂದು ನಿರ್ಧರಿಸಲ್ಪಡಬೇಕೆಂಬ ಆಶೆಯಿಂದ ಅವರು ವೆಂಕಟೇಶನ ಸಹಾಯಕ್ಕೆ ಅಂಗಲಾಚಿದರು.

'ನಂದೇನೂ ಆಕ್ಷೇಪವಿಲ್ಲ. ಆದರೆ ಶ್ರೀವೈಷ್ಣವ ಬ್ರಾಹ್ಮಣರು ವಿರೋಧ ಮಾಡ್ತಾರೆ. ಅವರಿಗೆ ವಿರುದ್ಧವಾಗಿ ನಾನು ಹೇಳಿದರೆ ಈ ಬೀದೀಲಿ ನನ್ನ ಸ್ಥಿತಿ ಕಷ್ಟವಾಗುತ್ತೆ. ಏನು ಮಾಡೂದು?' – ವೆಂಕಟೇಶ ಹೇಳಿದ.

'ಶ್ರೀವೈಷ್ಣವ ಬ್ರಾಹ್ಮಣರಿಗೆ ಸಮ ಅನ್ನದಿದ್ದರೆ ಬ್ಯಾಡ. ಇವರೂ ಒಂದು ಥರದ ಬ್ರಾಹ್ಮಣರು ಅಂದ್ರೆ ಸಾಕು. ಬ್ರಾಹ್ಮಣರಲ್ಲಿ ಸಾವಿರ ಒಳಪಂಗಡ ಇಲ್ಲವೆ? ಅದರಲ್ಲಿ ಒಂದು. ಕೊನೇದಾದರೂ ಸಾಕು. ನಾವೇನು ನಿಮ್ಮ ಯಾರನ್ನೂ ನಮ್ಮ ಮನೆ ಭೋಜನಕ್ಕೆ ಬನ್ನಿ ಅನ್ನುಲ್ಲ. ನಾನೇ ನಿಮ್ಮ ಮನೇಲಿ ಗಂಗೋದಕ ಮುಟ್ಟುಲ್ಲ.'

'ಅದು ನಿಜ. ಅದಕ್ಕೆ ನೀವು ಏನಾದರೂ ಶಾಸ್ತ್ರಾಧಾರ ಹೇಳ್ತೀರಾ?'

'ನಂಗೆ ಗೊತ್ತಿಲ್ಲ. ನಾವಂತೂ ಶ್ರೀರಾಮಾನುಜಾಚಾರ್ಯರ ಕುಲದವರೇ.'

'ಬರೀ ಅಷ್ಟು ಹೇಳಿದರೆ ಸಾಲುಲ್ಲ.'

'ನೀವೇ ಏನಾದರೂ ಆಧಾರ ಹುಡುಕಬೇಕು. ಕೈಮುಗೀತೀನಿ.'

'ನಮ್ಮ ಮನೆ ಶಾಸ್ತ್ರದ ಪುಸ್ತಕದಲ್ಲಿ ಏನೂ ಇಲ್ಲ. ಮೈಸೂರು ಸಂಸ್ಕೃತ

ಕಾಲೇಜಿನ ಓಲೆಕಟ್ಟಿನ ಭಂಡಾರದಲ್ಲಿ ಹುಡುಕಬೇಕು. ಅದೂ ನಾಡದ್ದು ಸಂಜೆ ಒಳಗೆ ಬರಬೇಕು. ಅಲ್ಲಿ ಹೋದರೆ ವಿದ್ವಾಂಸರು ದಕ್ಷಿಣೆ ಕೇಳ್ತಾರೆ.'

ರಾಮಾನುಜಯ್ಯನವರು ಇಪ್ಪತ್ತೈದು ಕೊಡುವುದಾಗಿ ಹೇಳಿದರು. ಆದರೆ ಇಪ್ಪತ್ತೈದರಲ್ಲಿ ಮೈಸೂರಿಗೆ ಹೋಗಿ ಬರುವ, ಅಲ್ಲಿ ಒಂದು ದಿನ ಇರುವ ಖರ್ಚೇ ಆಗುವುದಿಲ್ಲವೆಂಬ ವೆಂಕಟೇಶನ ವಿವರಣೆಗೆ ಐವತ್ತಕ್ಕೆ ಏರಿದರು. ಸಂಸ್ಕೃತ ಕಾಲೇಜಿನ ಪಂಡಿತರೆಂದರೆ ಅಷ್ಟು ಅಗ್ಗವಲ್ಲವೆಂದು ವೆಂಕಟೇಶ ಖಡಾಖಂಡಿತ ಹೇಳಿದ.

'ನಾವೂ ನಿಮ್ಮ ಹಾಗೆ ಬಡ ಬ್ರಾಹ್ಮಣರು' – ಎಂದು ರಾಮಾನುಜಯ್ಯನವರು ಕಷ್ಟ ಹೇಳಿಕೊಂಡರು. ಕೊನೆಗೆ ನೂರು ರೂಪಾಯಿ ತಂದು ಕೊಡಲು ಒಪ್ಪಿಕೊಂಡರು. ತಾವು ಬಂದ ಬೀದಿಯ ಬಾಗಿಲಿನಲ್ಲಿ ಹೋದರೆ ಎದುರು ಮನೆಯ ಕುಪ್ಪಣ್ಣಯ್ಯಂಗಾರರು ಕಂಡಾರೆಂಬ ಭಯದಿಂದ ಅವರು ಹಿತ್ತಿಲಿನ ಹೊರ ಬಾಗಿಲು ತೆರೆಸಿಕೊಂಡು ಹೋದರು. ಅವರನ್ನು ಕಳಿಸಿ ಕೊಟ್ಟಿಗೆಯ ಬಾಗಿಲಿಂದ ಹಿಂತಿರುಗಿ ಬರುವಾಗ ವೆಂಕಟೇಶನಿಗೆ ಕೊಟ್ಟಿಗೆಯ ಪಕ್ಕದ ತೊಟ್ಟಿಯಲ್ಲಿದ್ದ ಪೆಟ್ಟಿಯ ಹತ್ತಿರ ಸತ್ಯ ನಿಂತಿದ್ದುದು ಕಾಣಿಸಿತು. ಎಲ್ಲವನ್ನೂ ಅವಳು ಕೇಳಿಸಿಕೊಳ್ಳುತ್ತಿದ್ದಾಳೆಂಬುದು ಅವನಿಗೆ ಗೊತ್ತು. ಕೇಳಿಸಿಕೊಳ್ಳಲಿ, ನನಗೇನು ಎಂದು ಸುಮ್ಮನಿದ್ದ.

ಆ ದಿನ ಒಟ್ಟು ಎಂಟು ಜನ ಬಂದರು. ಸತ್ಯಳ ಲೆಕ್ಕದಲ್ಲಿಯೇ ವೆಂಕಟೇಶನಿಗೆ ಆರು ನೂರ ಐವತ್ತು ರೂಪಾಯಿ ಸಂಪಾದನೆಯಾಗಿತ್ತು. ಅವಳಿಗೆ ವಿಭ್ರಮೆ ಹಿಡಿದಂತೆ ಆಗಿತ್ತು. ವೆಂಕಟೇಶನ ಕೈಲಿ ಜಗಳ ಕಾಯುವ ಶಕ್ತಿ ಸಹ ಮನಸ್ಸಿಗೆ ಇಲ್ಲದಂತೆ ಆಗಿಹೋಗಿತ್ತು. ರಾತ್ರಿ ಊಟವಾಗಿ ಅವರು ಮಲಗಿದಾಗ ಹನ್ನೊಂದು ಗಂಟೆ. ಅಷ್ಟರಲ್ಲಿ ವೆಂಕಟೇಶನ ದುಡ್ಡೆಲ್ಲ ಬಂದು ಆಗಿತ್ತು. ಬೇಸಗೆಯಾದ್ದರಿಂದ ನರಸಿಂಹಜೋಯಿಸರು ಜಗುಲಿಯ ಮೇಲೆ ಮಲಗಿದರು. ಸತ್ಯ ಒಳಗೆ ಅಡಿಗೆ ಮನೆಯ ಮುಂದಿನ ತೊಟ್ಟಿಯಲ್ಲಿ ವಾಸುವನ್ನು ಜೊತೆಗೆ ಮಲಗಿಸಿಕೊಂಡು ಮಲಗಿದಳು. ಜಯಮ್ಮ ಮತ್ತು ಕೈಮಗುವಿನೊಡನೆ ವೆಂಕಟೇಶ ಅವರ ಪಕ್ಕದ ಚಿಕ್ಕ ಮನೆಯಲ್ಲಿ ಕಬ್ಬಿಣದ ಸರಳಿನ ಬಾಗಿಲಿಗೆ ಅತು ಸವಡಿಸಿದ. ಹಿಂದಿನ ಕಾಲದ ಮಣ್ಣಿನ ಗೋಡೆ ಮತ್ತು ತಿರುಗಣೆ ಬಾಗಿಲಿನ ಕಟ್ಟಡವಾಗಿದ್ದುದರಿಂದ ಚಿಕ್ಕ ಮನೆಯಲ್ಲಿ ಮಾತನಾಡಿದರೆ ತೊಟ್ಟಿಗೆ ಕೇಳಿಸುತ್ತಿತ್ತು. ವೆಂಕಟೇಶ ಕೇಳಿದ: 'ಸತ್ಯ, ನಾಳೆ ಒಂದೇಳೆಂಟು ಸಂಸ್ಕೃತ ಶ್ಲೋಕ ಹೆಣೆದುಕೊಡ್ತೀನಿ. ಅ ವ್ಯಾಕರಣಶುದ್ಧವಾಗೂ ಹಾಗೆ ಮಾಡಿ ನೀನು ತಿದ್ದಿಕೊಡು.'

ಅವನು ಹೆಣೆಯುವ ಶ್ಲೋಕಗಳು ಎಂಥವು ಮತ್ತು ಯಾವ ಉದ್ದೇ ಎಂಬುದು ಅವಳಿಗೆ ಅರ್ಥವಾಯಿತು.

ಅವಳು ಉತ್ತರ ಕೊಟ್ಟಳು: 'ಶ್ಲೋಕದ ವ್ಯಾಕರಣ ತಿದ್ದುವಷ್ಟು ನನಗೆ ಗೊತ್ತಿಲ್ಲಪ್ಪ.'

'ಮತ್ತೆ ನೀನು ಕಾಲೇಜಿನಲ್ಲಿ ಓದಿದೆ. ಹಿಸ್ಟರಿಗೆ ಅಂಥ ಹಳೇ ಗ್ರಂಥಗಳನ್ನೇ ಓದಿದೆ ಅಂದೆ.'

ಸತ್ಯ ಉತ್ತರ ಹೇಳಲಿಲ್ಲ. ಒಂದು ನಿಮಿಷದ ನಂತರ ವೆಂಕಟೇಶನೇ ಎಂದ: 'ಶಾಸ್ತ್ರ ಹೊಸದಾಗಿ ಮಾಡೂದು ಸರಿಯಲ್ಲ. ಇತಿಹಾಸಾನ ತಿದ್ದಬಾರದು ಅಂತಲೇ?'

'ಅಷ್ಟೇ ಅಲ್ಲ. ದುಡ್ಡು ತಗಂಡು, ಇಲ್ಲದ ಶಾಸ್ತ್ರ ಸೃಷ್ಟಿಸುಕ್ಕೆ ಹೊರಟದೀಯಲ್ಲ. ನಿನ್ನ ದುರಾಶೆಗೆ ಕೊನೆಯೇ ಇರಬಾರದೆ?' – ಸಂಜೆಯಿಂದ ಸಂಚಯವಾಗಿ ಅದುಮಿ ಹಿಡಿದಿಟ್ಟಿದ್ದ ಅವಳ ಸಿಟ್ಟು ಈಗ ಹೊರಹೊಮ್ಮಿತು.

ಆದರೆ ವೆಂಕಟೇಶ ಸಿಟ್ಟು ಮಾಡಿಕೊಳ್ಳಲಿಲ್ಲ. "ನನ್ನ ಯಾಕೆ ದುರಾ[illegible] ಅಂತೀಯ? ಇವೆಲ್ಲ ಏನು ಬರೀ ನಮ್ಮೂರಲ್ಲಿ ನಡೀತಾ ಇರೂದೇನು? ಬೇ[illegible] ವಾಲ್ಮೀಕಿ ಅನ್ನಿಸ್ಕಬೇಕು, ಕುರುಬ ಕಾಳಿದಾಸನಾಗಬೇಕು, ಆಚಾರಿ ವಿಶ್ವಕರ್ಮ[illegible] ಬ್ರಾಹ್ಮಣನಾಗಬೇಕು ಅನ್ನೂ ಆಶೆ, ಪ್ರಯತ್ನ, ಎಲ್ಲಾ ಕಡೇಲೂ ನಡೀತಿದೆ. ಬಾಕಿ ಊರುಗಳಲ್ಲಿ ಹೀಗೆ ದುಡ್ಡು ಕೊಡ್ತಿದಾರೋ ಏನೋ ಗೊತ್ತಿಲ್ಲ. ಆದರೆ ಒಂದು ತಿಳ್ಕ. ಅವರ ಅಂತಸ್ತು ಎಷ್ಟೇ ಮೇಲಕ್ಕೆ ಬರಲಿ, ಬಂದಿದೆ, ಅಸ್ತು ಅಂತ ಮೇಲಿನೋರ ಕೈಲಿ ಅನ್ನಿಸ್ಕಳ್ದೆ ಸಮಾಧಾನವಿರುಲ್ಲ. 'ನೀನು ಬ್ರಹ್ಮರ್ಷಿಯಾದೆ ಅಸ್ತು' – ಅಂತ ವಸಿಷ್ಠರ ಕೈಲಿ ಅನ್ನಿಸ್ಕಳುಕ್ಕಲ್ಲವೆ ವಿಶ್ವಾಮಿತ್ರ ಕಂಡ ಪ್ರಯ[illegible] ಮಾಡಿದ್ದು? 'ನೀವೂ ಬ್ರಾಹ್ಮಣರು. ನೀವೂ ನಮ್ಮ ಸಮ' ಅಂತ ನಮ್ಮ ಕೈ[illegible] ಅನ್ನುಸ್ಕಳುಕ್ಕೆ ಎಲ್ಲಾ ಹಾತೊರೀತಾರೆ."

"ಜಾಗನ್ನೂದಿಪ್ರೆ ಅನ್ನು. ಪ್ರಪಂಚದಲ್ಲಿ ಹುಟ್ಟಿದ ಮನುಷ್ಯಜೀವಿಗ[illegible] ಬ್ರಹ್ಮದ ಅಂಶವೇ. 'ಶುದ್ಧವಾದ ಆಚರಣೆ ಮಾಡಿ. ನೀವೆಲ್ಲ ಬ್ರಾಹ್ಮಣ[illegible] ಅಂತ ಹೇಳು. ದುಡ್ಡು ತಗಂಡು ಸುಳ್ಳು ಸಾಕ್ಷಿ ಹೇಳೂ ಕೀಳು ಕೆಲಸ ಯ[illegible] ಮಾಡ್ತಿಯಾ?"

'ದುಡ್ಡೇನು ಪುಕಸಟ್ಟೆ ಕೊಡ್ತಾರೇನು? ಒಡಬ್ರಾಹ್ಮಣನಾಗಿದ್ದರೆ [illegible] ರೂಪಾಯಿ ಕೊಡ್ತಿರಲಿಲ್ಲ. ನಾನು ಬರೀ ಗ್ರಾಮಪುರೋಹಿತ ಅಲ್ಲ. ಅನ[illegible] ವಾಗಿದೀನಿ. ರಾಜಕೀಯ ಮಾಡ್ತೀನಿ. ಸುತ್ತ ಊರಲ್ಲಿ ನನ್ನ ಮಾತ[illegible] ಯುತ್ತೆ. ಅದರಿಂದಲೇ ನಾಡದ್ದಿನ ಸಭೇಲಿ ನನ್ನ ಬಾಯಿಂದ ಬಂದ[illegible] ಶಂಖದಿಂದ ಬಿದ್ದ ನೀರಾಗುತ್ತೆ.'

'ಬರೀ ನೀನು ಹೇಳಿಬಿಟ್ಟರೆ ಎಲ್ಲ ಒಪ್ಕತ್ತಾರಾ?'

‘ಏನಿಲ್ಲ. ಯಾವ ಜಾತಿ ಅನುಕೂಲವಾಗುತ್ತೆ, ಇನ್ನೊಬ್ರಿಗೆ ಸಾಲಸೋಲ, ಲೇವಾದೇವಿ ಕೊಡೂ ಯೋಗ್ಯತೆ ಇರುತ್ತೆ, ಅವರು ಮೇಲಿನ ಹೆಸರು ಅಂತಸ್ತು ಕೇಳಿದರೆ ಉಳಿದೋರು ಒಪ್ಕತ್ತಾರೆ. ಇಲ್ಲದೆ ಇದ್ರೆ ಒದೀತಾರೆ.’

‘ಈ ವ್ಯವಹಾರದಲ್ಲಿ ನೀನ್ಯಾಕೆ ಲಂಚ ತಿಂದೆ? ಈ ಪಾಪದ ದುಡ್ಡಿನಿಂದ ಬದುಕಬೇಕೆ? ನಿಂಗಿರೂದು ಸಾಲದೆ?’

‘ಯಾವುದನ್ನ ಪಾಪದ ದುಡ್ಡು ಅಂತೀಯ ನೀನು? ಅಪ್ಪನ ಮನೇಲಿ ಇವಳ ಪಾಲು ತರಿಸಿದ್ದುಕ್ಕೆ ಪಾಪ ಅಂತ ಇವಳೂ ಅಂತಾಳೆ. ಇದನ್ನ ನೀನು ಪಾಪ ಅಂತೀಯ. ನಂಗೆ ಯಾವ ಮಹಾ ಆಸ್ತಿ ಇದೆ ಅಂತ ತಿಳ್ಕಂಡಿದೀಯ? ದೇವಸ್ಥಾನದ ಗದ್ದೆ ಇನ್ನು ನಾಲ್ಕೈದು ವರ್ಷದಲ್ಲಿ ಎದ್ದುಹೋಗುತ್ತೆ. ಮಂತ್ರಿ ನೀಲಗಿರಿಗೌಡನ ಪ್ಲಾನ್ ಏನು ಗೊತ್ತೆ? ದೇವಸ್ಥಾನದ ಕಮಿಟಿಗೆ ಅವನ ಅಪ್ಪ, ಇಲ್ಲಾ ಅವನು, ಅಧ್ಯಕ್ಷನಾಗಿರಬೇಕು. ಆದರೆ ಪೂಜಾರಿಯ ಇನಾಮತಿ ಜಮೀನು ಸರ್ಕಾರಕ್ಕೆ ಸೇರಬೇಕು. ಪೂಜಾರಿಗೆ ಸಂಬಳ ಗೊತ್ತುಮಾಡಬೇಕು. ತಿಂಗಳಿಗೆ ಮೂವತ್ತೋ ನಲವತ್ತೋ. ಅಂದ್ರೆ ಪೂಜಾರಿ ಯಾವತ್ತೂ ಬಡವ ಆಗಿಯೇ ಇರಬೇಕು. ಪೂಜೆ ಮಾತ್ರ ನಡೀಬೇಕು. ನಾನು ಆ ಸಂಬಳಕ್ಕೆ ಸೇರ್ಕಳ್ಳಲೇ? ಇನಾಮತಿ ಗದ್ದೆ ಹೋದ ಮೇಲೆ ನಂಗೆ ಮಹಾ ಉಳಿಯೂದೇನು? ಅದಕ್ಕೆ ಮೊದಲೇ ಒಂದಿಷ್ಟು ಸರಿಯಾಗಿ ಆಸ್ತಿ ಮಾಡ್ಕಳ್ಳದೆ ಇದ್ರೆ ನನ್ನ ಗತಿ ಏನು? ಈ ಮಕ್ಕಳ ಗತಿ ಏನು?’

ಸತ್ಯಳಿಗೆ ತಕ್ಷಣ ಉತ್ತರ ತಿಳಿಯಲಿಲ್ಲ. ಒಂದು ನಿಮಿಷದ ನಂತರ ಕೇಳಿದಳು: ‘ಸಂಪಾದನೆ ಮಾಡಬೇಕು. ಆದರೆ ಅನ್ಯಾಯದ ದಾರಿ ಕೂಡದು.’

‘ಯಾವುದನ್ನ ನ್ಯಾಯ ಯಾವುದನ್ನ ಅನ್ಯಾಯ ಅಂತೀಯ? ಇಷ್ಟೆಲ್ಲ ಆಸ್ತಿ ನಟ್ಟು, ಬಸ್ ಲೈನುಗಳೆಲ್ಲ ಸರ್ಕಾರದ್ದಾಗಬೇಕು ಅಂತ ಗೌರ್ನಮೆಂಟೇ ಹೇಳ್ತಿರು ಮೇಗ, ಅವನು ಮಗನಿಗೆ ನಾಲ್ಕು ಲೈನು, ಎರಡು ಲಾರಿ ಕೊಡಿಸಿರೂದು [illegible]ಯುವೇ? ಐನೂರು ಮರ, ಮಗನ ವ್ಯಾಪಾರ, ತನಗೆ ಎಂ.ಎಲ್.ಎ. ಮನೆಗಳ, ಇಷ್ಟಿದ್ದರೂ ಬೆಟ್ಟಯ್ಯ ಮಗಳಿಗೆ ಜಾತಿಸ್ಕಾಲರ್‌ಷಿಪ್ ಕೊಡಿಸ್ಕಂಡಿ-[illegible] ನ್ಯಾಯವೇ? ಅವನವನಿಗೆ ಸಿಕ್ಕಿದ ದಾರೀಲಿ ಅವನವನು ಗುಂಜಿಕಾಬೇಕು ಮನೆ[illegible] ಜಾತಿ ಅಂದ್ರೆ ಏನು ತಿಳ್ಕಂಡಿದೀಯ? ತಾವರೆಕೆರೆ ಕ್ವಾಮಟಿಗರ ‘ಸ[illegible]ವಾರಲ, ಅವರೆಲ್ಲ ಗುಪ್ತ ಅಂತ ಹೆಸರು ಬದಲಾಯಿಸ್ಕತ್ತಿದಾರೆ. ತಾವರೆ ವ್ಯಾಕಸ್ಯಾಟೆ ಬೀದೀಲಿ ಸ್ಟೇಶನರಿ ಅಂಗಡಿ ಇಟ್ಕಂಡಿದ್ನಲ್ಲ ವರ್ಧಮಾನಯ್ಯ, ಅವ[illegible]. ಟಿ. ಜೈನ್ ಅಂತ ಬದಲಾಯಿಸ್ಕಂಡ ಈಗ ಒಂದು ತಿಂಗಳ್‌ನಾಗೆ. ಎಂಬುದು ಗೊತ್ತಾ? ಗುಪ್ತ, ಜೈನ್ ಅನ್ನೂ ಜಾತಿಯೋರು ಉತ್ತರ ಇಂಡಿಯಾ

ದೇಶದಲ್ಲಿ ತುಂಬ ಅನುಕೂಲಸ್ಥರಾಗಿದಾರಂತೆ. ತಾವೂ ಅವರೂ ಒಂದೇ ಅಂತ ಹೇಳ್ಕಳುಕ್ಕೆ. ಈಗ ಅವರೆಲ್ಲ ಆಲ್ ಇಂಡಿಯಾ ಅಸೋಸಿಯೇಶನ್ ಮಾಡ್ತಿದಾರೆ. ನಮ್ಮ ಮಂತ್ರಿ ಮೇಲಗಿರಿಗೌಡರೂ ಮದರಾಸು ಕಡೆ ಅವರ ಜಾತಿ ಮುಖಂಡ್ರನ್ನ ಹಿಡಿದು ಸಂಘ ಮಾಡುಕ್ಕೆ ಹೊರಟಿದಾರೆ. ನಮ್ಮ ಕೆಳಗಿನ ಬೀದಿ ಲಿಂಗಾಯಿತ ಗುರುಬಸಪ್ಪನೋರು ಹುಬ್ಬಳ್ಳಿ ಧಾರವಾಡ ಸೊಲ್ಲಾಪುರದ ಕಡಿಗೆ ಹೋಗಿ ಬಂದ್ರು. ನೀನಲ್ಲಿ ಲೈಬ್ರರಿಗೆ ಹೋಗಿದ್ಯಾ ಹಿಸ್ಟರಿ ಓದುಕ್ಕೆ. ಇಲ್ಲೇನು ನಡೀತಿದೆ ನ್ಯಟ್ಟಗೆ ತಿಳ್ಕ.'

ಅಷ್ಟರಲ್ಲಿ ಚಿಕ್ಕ ಮನೆಯಿಂದ ಜಯಮ್ಮ ಮಾತನಾಡಿದಳು: 'ಎಷ್ಟು ಹೊತ್ತಾಗಿದೆ. ಇನ್ನೂ ಕೆಲಸಕ್ಕೆ ಬಾರದ ಮಾತೇ ಆಡ್ತಿದೀರ. ನಂಗೂ ನಿದ್ದೆ ಮಾಡುಕ್ಕೆ ಬಿಡುಲ್ಲ.'

ವೆಂಕಟೇಶ ಹತ್ತಿರವೇ ಇಟ್ಟುಕೊಂಡಿದ್ದ ಟಾರ್ಚ್ ಹಾಕಿ ಕೈಗಡಿಯಾರ ನೋಡಿಕೊಂಡ. ಹನ್ನೆರಡೂಕಾಲು ತೋರಿಸುತ್ತಿತ್ತು. 'ಹೊತ್ತಾಯ್ತು. ನಾಳೆ ಬೆಳಗ್ಗೆ ಎಲ್ಲಾದರೂ ಹೋಗಿ ನಾಡದ್ದು ಬೆಳಗ್ಗೆ ಬರಬೇಕು. ಈಗ ಹೇಳು: ಒಂದು ಎಂಟು ಶ್ಲೋಕ ನಾನೇ ಹೇಳ್ತೀನಿ. ಅದ ತಿದ್ದಿಕೊಡ್ತಿಯೋ ಇಲ್ವೊ?'

'ಆ ಕೆಲಸ ನಾನು ಮಾಡುಲ್ಲಪ್ಪ' – ಖಡಾಖಂಡಿವಾಗಿ ಸತ್ಯ ಹೇಳಿದಳು.

'ನೀನು ಮಾಡುಲ್ಲ. ಮನೆಗೆ ಮಾರಿ, ಪರರಿಗೆ ಉಪಕಾರಿ. ತಾವರೆಕೆರೆಗೆ ಹೋಗಿ ವಿಶ್ವೇಶ್ವರಶಾಸ್ತ್ರಿಗಳಿಗೆ ಐದು ರೂಪಾಯಿ ವೀಳ್ಯದೆಲೆ ಅಡಿಕೆ ಕೊಟ್ರೆ ಎರಡು ನಿಮಿಷದಲ್ಲಿ ತಿದ್ದಿಕೊಡ್ತಾರೆ.'

'ವೆಂಕಟೇಶ, ಈ ಅನ್ಯಾಯ ಒಳ್ಳೇದಲ್ಲ. ಈಗಲೂ ಅವರವರ ದುಡ್ಡು ಅವರವರಿಗೆ ಕೊಟ್ಟುಬಿಡು. ಇಲ್ದೆ ಹೋದರೆ ನಾಡದ್ದಿನ ಸಭೆಗೆ ನಾನು ಬಂದು ನೀನು ಮಾಡಿದ್ದೆಲ್ಲ ಹೇಳಿಬಿಡ್ತೀನಿ.'

'ಅಲ್ಲೇ ಹಿಡಕಂಡು ಒದ್ದುಬಿಡ್ತೀನಿ ಮಾದರ್‌ಚೋದ್ ಲೌಡಿ' – ವೆಂಕಟೇಶನಿಗೆ ಸಿಟ್ಟು ಹೊತ್ತಿತು: 'ನನ್ನ ಯಾರು ಅಂತ ತಿಳ್ಕಂಡಿದೀಯ? ಜಾತಿ ಕುಲ ಬಿಟ್ಟು ಆ ಶೂದ್ರನನ್ನ ಕಟ್ಕಳುಕ್ಕೆ ಹೋಗಿ ಒಂದು ಸಲ ನಮ್ಮ ಮನೆಗೇ ಅವಮಾನ ಮಾಡಿ, ಅಪ್ಪನಿಗೆ ಹುಚ್ಚು ಹಿಡಿಸಿ ಸಾಯಿಸ್ದೆ. ಈಗ ಮತ್ತೆ ಗಾಂಚಾಲಿ ಮಾಡುಕ್ಕೆ ಹೊರಟ್ರೆ ಎಕ್ಕಡ ತಗಂಡು ನೆತ್ತಿಕೂದಲು ಉದುರಿಸಿಬಿಡ್ತೀನಿ.'

'ಸಾಕು, ಅದೇನು ಮಾತಾಡ್ತೀರ ಮನೆ ಹೆಣ್ಣುಮಗಳುನ್ನ' – ಎಂದು ಜಯಮ್ಮ ಅಡ್ಡಬಂದಳು.

'ಮುಚ್ಕಂಡ್ ಬಿದ್ಗಳೀ ನೀನು. ನಂಗೆ ಹೇಳೂಕ್ ಬರಬ್ಯಾಡ. ಒಂದು

ಸಲ ಒದ್ದರೆ ನೋಡು' – ಎಂದು ಹೆಂಡತಿಯನ್ನು ಎಚ್ಚರಿಸಿದ. ಸತ್ಯ ಮತ್ತೆ ಮಾತನಾಡಲಿಲ್ಲ. ವೆಂಕಟೇಶನೂ ಸುಮ್ಮನಾದ. ಐದು ನಿಮಿಷದ ನಂತರ ಅವನೇ ಹೇಳಿದ: 'ಇದು ಸುಳ್ಳು ಅಂತ ನೀನೇನು ಹೇಳೂದು! ಅದು ಎಲ್ಲರಿಗೂ ಗೊತ್ತಿದೆ. ಆದರೆ ಸುಳ್ಳೇ ಎಲ್ಲರಿಗೂ ಮಂತ್ರೋಕ್ತ ಬೇಕಾಗಿದೆ. ಸಭೇಲಿ ನಾನು ಬೇಕು, ಪುರೋಹಿತ. ನೀನು ಮಧ್ಯೆ ಬಾಯಿಹಾಕಿದರೆ ಯಾರೂ ಕೇಳುಲ್ಲ.'

ಸತ್ಯ ಮಾತನಾಡಲಿಲ್ಲ. ಎರಡು ನಿಮಿಷದಲ್ಲಿ ಎದ್ದು ಅವಳು ತಾನು ಮಲಗಿದ್ದ ತೊಟ್ಟಿಯ ದೀಪ ಹೊತ್ತಿಸಿ ಕೇಳಿದಳು: 'ಜಯಮ್ಮ, ತೋಟದ ಮನೆ ಬೀಗದ ಕೈ ಕೊಡು. ನಾನು ಹೋಗಬೇಕು.'

ಜಯಮ್ಮನಿಗೆ ಗಾಬರಿಯಾಯಿತು. ಎದ್ದು, ತಾನು ಮಲಗಿದ್ದ ಚಿಕ್ಕ ಮನೆಯ ಬಾಗಿಲು ತೆಗೆದುಕೊಂಡು ಅವಳ ಹತ್ತಿರ ಬಂದು ಕೇಳಿದಳು: 'ಸತ್ಯ, ಅವರಿಗೆ ಬುದ್ಧಿ ನೆಟ್ಟಗಿಲ್ಲ. ನೀನು ಹೀಗೆ ಸಿಟ್ಟು ಮಾಡ್ಕಂಡು ನಡುರಾತ್ರೀಲಿ ಹೋಗಬಾರದು.'

'ಅಲ್ಲಿ ಒಂದೇ ಕಡೆ ನಾನು ಶಾಂತಿಯಿಂದ ಇರಭೌದು, ನನಗೆ ನ್ಯಾಯ ಅನ್ನಿಸ್ದಾಗೆ ಯೋಚನೆ ಮಾಡಭೌದು. ಈ ಊರೊಳಗೆ ಅಂಥ ಯೋಚನೆ ಮಾಡುಕ್ಕೂ ಸಾಧ್ಯವಿಲ್ಲ ಅನ್ಸುತ್ತೆ' – ಎನ್ನುವಾಗ ಸತ್ಯಳ ಕಣ್ಣಿನಲ್ಲಿ ನೀರು ತುಂಬಿಕೊಂಡಿತು.

'ಯಾಕೆ ಅಳ್ತೀಯ? ನಿಮ್ಮಣ್ಣನ ಗುಣ ಗೊತ್ತಿಲ್ವೆ ನಿಂಗೆ?' – ಎಂದು ಜಯಮ್ಮ ಅವಳ ಕೈ ಹಿಡಿದು ಸಮಾಧಾನ ಹೇಳಿದಳು.

'ಅವನ ತಪ್ಪಲ್ಲ, ಅವನೊಬ್ಬನ ತಪ್ಪಲ್ಲ. ಊರೊಳಗೇ ಹಾಗೆ' – ಎಂದು ಸತ್ಯ ಸೆರಗಿನಿಂದ ಕಣ್ಣನ್ನು ಒರೆಸಿಕೊಂಡಳು.

ತಂಗಿ ಅಳುತ್ತಿರುವ ಸಂಗತಿ ವೆಂಕಟೇಶನಿಗೂ ಗೊತ್ತಾಯಿತು. ಅತ್ತರೆ ಅಳಲಿ ಎಂದು ಒಂದು ನಿಮಿಷ ಸುಮ್ಮನೆ ಮಲಗಿದ್ದ. ಆಮೇಲೆ ತಾನೂ ಎದ್ದು ಹೊರಗೆ ಬಂದು, 'ಇವಳ ಬಹುಮಾನ ಭಾಳ. ತಿಳಿದೂ ತಿಳಿದೂ ನನ್ನ ಯಾಕೆ ರೇಗುಸ್ಬೇಕು ನೀನು? ಹೆಂಗಸು ಹ್ಯಾಗಿರಬೇಕೋ ಹಾಗಿರಬೇಕು. ಸುಮ್ಮನೆ ಮಲೀಕೊ. ಬೇಕಾದರೆ ಬೆಳಗ್ಗೆ ಹೋಗುವಂತೆ' ಎಂದ. ಜಯಮ್ಮ ಅವಳ ಭುಜ ಹಿಡಿದು ಹಾಸಿಗೆಯ ಮೇಲೆ ಕೂರಿಸಿದಳು.

೯

ಹತ್ತು ನಿಮಿಷವೂ ಕಳೆದಿರಲಿಲ್ಲ. ಬೀದಿಯ ಬಾಗಿಲನ್ನು ತಟ್ಟಿದ ಶಬ್ದ

ವಾಯಿತು. ನರಸಿಂಹ ಜೋಯಿಸರು, 'ವೆಂಕಟೇಶಮೂರ್ತಿಗಳೇ' ಎಂದು ಕೂಗಿದುದು ಕೇಳಿಸಿತು. ಅವನು ಹೋಗಿ ಬಾಗಿಲು ತೆಗೆದ. ಬೆಟ್ಟಯ್ಯನವರು ಬಂದಿದ್ದರು. ಸೂರುಕಟ್ಟಿನ ಹೊರಗೆ ನಿಂತಿದ್ದ ಅವರು ಹೇಳಿದರು: 'ಸ್ವಲ್ಪ ಅರ್ಜೆಂಟ್ ಇಚಾರ ಮಾತಾಡಬೇಕು.'

ಅವರನ್ನು ಒಳಗೆ ಕರೆದು ಕೂರಿಸುವಂತಿಲ್ಲ. ಅವರು ಬಂದಿರುವ ಹೊತ್ತು ಮತ್ತು ಮಾತಿನ ಧ್ವನಿಯನ್ನು ನೋಡಿದರೆ ಗುಟ್ಟಿನ ವಿಷಯವೆಂದು ಸ್ಪಷ್ಟವಾಗುತ್ತಿತ್ತು. 'ಹಿತ್ತಿಲ ಕಡೆಗೆ ಬನ್ನಿ ಆ ಕಡೆಯಿಂದ' – ಎಂದು ವೆಂಕಟೇಶ ದಾರಿ ತೋರಿಸಿದ. ಅವರು ಟಾರ್ಚ್ ಹಿಡಿದು ಪಕ್ಕದ ಪಾಳನ್ನು ದಾಟಿಕೊಂಡು ನಡೆದರು. ವೆಂಕಟೇಶ ಹಿಂಭಾಗಕ್ಕೆ ಹೋಗಿ ದನದ ಕೊಟ್ಟಿಗೆ ಬಾಗಿಲು ತೆರೆದು, ಅಲ್ಲಿಂದ ಹಿತ್ತಿಲಿನ ಗೋಡೆಗೆ ದನಗಳು ಆಳುಗಳು ಬರಲು ಮಾಡಿದ್ದ ಬಾಗಿಲನ್ನು ತೆಗೆದ. ಬೆಟ್ಟಯ್ಯನವರು ಒಳಗೆ ಬಂದರು. 'ಪರವಾಗಿಲ್ಲ ಬನ್ನಿ' – ಎಂದು ಅವನು ಅವರನ್ನು ದನದ ಕೊಟ್ಟಿಗೆಯ ಕಲ್ಲುಚಪ್ಪಡಿಯ ಮೇಲೆ ಕೂರಿಸಿ, ತಾನು ಎದುರಿಗೆ ದಬ್ಬ ಹಾಕಿದ್ದ ದೊಡ್ಡ ಮುಂಕರಿಯಮೇಲೆ ಕುಳಿತುಕೊಂಡ. ಬೆಟ್ಟಯ್ಯನವರು ನೇರವಾಗಿ ವಿಷಯಕ್ಕೆ ಬಂದರು: 'ನಾಡಿದ್ದು ಸಭೆ ಆಗ್ತದಲ. ಅದರಾಗೆ ನೀವು ನಮ್ಮ ಜನಗಳನ್ನ ವಸಿ ನೋಡ್ಕಬೇಕು.'

ವೆಂಕಟೇಶನಿಗೆ ಆಶ್ಚರ್ಯವಾಯಿತು. ಇವರೂ ಬ್ರಾಹ್ಮಣರೆಂದು ಸಾಧಿಸಲು ಹೊರಟಿರುವರೇ ಎಂಬ ಅನುಮಾನವೂ ಬಂತು. ವಿಷಯವನ್ನು ಪೂರ್ತಿ ತಿಳಿಯದೆ ಅವನು ಮಾತನಾಡುವಂತಿಲ್ಲ. ಎಂ.ಎಲ್.ಎ. ಆಗಿರುವ ಇವರಿಗೆ, ಆಗುಲ್ಲವೆಂದು ತಕ್ಷಣ ಹೇಳುವಂತೆಯೂ ಇಲ್ಲ: 'ನನ್ನ ಏನು ಮಾಡು ಅಂತೀರಾ?'

'ಒಂದು ಥರಕ್ಕೆ ನೋಡಿದರೆ ನಾವು ಬ್ರಾಹ್ಮಣ ಸರೀರದಿಂದ ಹುಟ್ಟಿದೋರು. ನಮ್ಮುನ್ನ ಯಾಕೆ ಹಿಂಗೆ ಅಸ್ಪೃಶ್ಯರನ್ನ ಮಾಡಿದ್ರೋ ಕಾಣೆ. ಇದ್ದ ಇಶಯ ನೀವು ಹೇಳಿದರೆ ಸಾಕು. ಸುಳ್ಳು ಪಳ್ಳು ಬ್ಯಾಡ. ನಮ್ಮುನ್ನ ಅಸ್ಪೃಶ್ಯರು ಅನ್ನಬ್ಯಾಡಿ. ನಾವು ಊರೊಳಕ್ಕೆ, ನಿಮ್ಮ ಮನೆಯೊಳಕ್ಕೆ ಬಂದರೂ ಮೈಲಿಗೆ ಯಾಗುಲ್ಲ. ನಾವೇನು ನಿಮ್ಮ ಅಡಿಗೆ ಕ್ವಾಣೆಗೆ ಬರುಲ್ಲ ಅಂತ ನಾನು ಕೇಳ್ತೀನಿ.'

ಅಷ್ಟರಲ್ಲಿ ವೆಂಕಟೇಶನ ದೃಷ್ಟಿ ಪೆಟ್ಟಿಗೆಳನ್ನಿಟ್ಟಿದ್ದ ತೊಟ್ಟಿಯ ಕಡೆಗೆ ಹೋಯಿತು. ಸತ್ಯ ಅಲ್ಲಿ ನಿಂತಿರುವುದು ಕಾಣಿಸಿತು. ಈ ಮಾತಿನ ಮಧ್ಯೆ ಅವಳು ಬರುವುದು ಅವನಿಗೆ ಬೇಡವಾಗಿತ್ತು. ಬೆಟ್ಟಯ್ಯನವರಿಗೆ ತಾನು ಏನು ಹೇಳುವೆನೋ, ಅವರು ಏನು ಕೇಳುತ್ತಾರೋ, ತನ್ನ ತೀರ್ಮಾನ, ವಿಚಾರ, ಹೇಗೆ ಆಗುತ್ತೋ ಇನ್ನೂ ಗೊತ್ತಿಲ್ಲ. ಅದರೆ ಬೆಟ್ಟಯ್ಯನವರಿಗೂ ಅವಳಿಗೂ ಚೆನ್ನಾಗಿ ಪರಿಚಯವಿದೆ; ವಿಶ್ವಾಸವೇ ಇದೆ. ಇವಳು ಮಧ್ಯೆ ಮಾತನಾಡಿದರೆ

ಅವರು ಎತ್ತೆತ್ತಲೋ ನೆಗೆಯಬಹುದು – ಎಂಬ ಆಲೋಚನೆ ಕ್ಷಣಾಂಶದಲ್ಲಿ ಮಿಂಚಿತು. ಆದರೆ ಅವರೆದುರು ಸಿಟ್ಟಿನಿಂದ ಮಾತನಾಡಬಾರದೆಂಬ ವ್ಯಾವಹಾರಿಕ ವಿವೇಕದಿಂದ ಅವನು ಹೇಳಿದ: 'ಇಷ್ಟು ಹೊತ್ತಾಗಿದೆ. ನೀನು ಮಲಿಕೊ ಹೋಗವ್ವ ಸತ್ಯ.'

ಬೆಟ್ಟಯ್ಯನವರ ಗಮನ ಅತ್ತ ಹರಿಯಿತು. 'ಬಲ್ಲಿ, ಬಲ್ಲಿ. ನೀವು ಇದ್ರೆ ಚಂದ. ಮೈಸೂರಿಗೆ ಹ್ವಾಗಿದ್ದಿರಂತೆ. ಯಾವಾಗ ಬಂದ್ರಿ?' – ಎಂದರು.

ಸತ್ಯ ಮುಂದೆ ಬಂದು ಹೊಸಲಿನ ಮೇಲೆ ಕುಳಿತಳು. ಬೆಟ್ಟಯ್ಯನವರು ಬಂದದ್ದನ್ನು ತಿಳಿದು ಬೇಕೆಂದೇ ಅವಳು ಇಲ್ಲಿಗೆ ಬಂದಿದ್ದಳು. ಈ ದಿನ ಸಂಜೆ ಯಿಂದ ಒಟ್ಟು ಎಂಟು ಜನಗಳು ಬಂದಿದ್ದ ಕಾರಣವನ್ನು ಅನ್ವಯಿಸಿ ಈ ಹೊತ್ತಿ ನಲ್ಲಿ ಬಂದಿರುವ ಬೆಟ್ಟಯ್ಯನವರೂ ಇದೇ ಕಾರಣಕ್ಕೆ ಬಂದಿದ್ದಾರೆಂದು ಅವಳು ಊಹಿಸಿಕೊಂಡಳು. ಈಗ ತಾನು ಅಲ್ಲಿಗೆ ಹೋದರೆ ವೆಂಕಟೇಶನಿಗೆ ರೇಗುತ್ತ ದೆಂದು ಗೊತ್ತಿದ್ದರೂ ಈ ಮಾತಿನ ರೀತಿಯನ್ನು ತಿಳಿಯಬೇಕೆಂಬ ಕುತೂಹಲ ವನ್ನು ಅದುಮಿಡಲಾಗಲಿಲ್ಲ. ಪೆಟ್ಟಿಯ ಮರೆಯಲ್ಲಿ ನಿಲ್ಲುವುದಕ್ಕಿಂತ ಎದುರಿಗೇ ಇದ್ದು ಕೇಳುವ ಮನಸ್ಸಾಗಿ ಅಲ್ಲಿ ನಿಂತಿದ್ದಳು.

ಬೆಟ್ಟಯ್ಯನವರು ಎಂದರು: 'ಮಾದಿಗ ಅನ್ನೊ ಹೆಸರು ರುಶಿಯಾಶ್ರಮದ ಒಬ್ಬ ಕನ್ಯೆಯ ಹೆಸರಿನಿಂದ ಬಂತು. ನಿಮಗೇ ಗೊತ್ತಲ.'

'ಅದು ಯಾವ ಶಾಸ್ತ್ರಗ್ರಂಥದಲ್ಲೂ ಬರೆದಿಲ್ಲವಲ' – ವೆಂಕಟೇಶ ಹೇಳಿದ.

'ಅದೇನು ಕಥೆ?' – ಸತ್ಯ ಕೇಳಿದಳು.

'ನಿಮಗೆ ಗೊತ್ತೇ ಇಲ್ವರಾ?'

'ಇಲ್ಲ. ಹೇಳಿ.'

'ಜಮದಗ್ನಿ ರುಶಿಗಳ ಹೆಂಡತಿ ರೇಣುಕಾದೇವಿಯ ಕುತ್ತಿಗೇನ ಪರಶುರಾಮ ದೇವರು ಕಡಿದದ್ದು ಗೊತ್ತಾ?'

'ಗೊತ್ತಿದೆ.'

"ಅಲ್ಲಿಯೇ ಬತ್ತದೆ ಇದು. ರೇಣುಕಮ್ಮನೋರಿಗೆ ಒಬ್ಬ ಸಖಿ ಇದ್ದಳು. ಮಾತಂಗಿ ಅಂತ ಹೆಸರು. ಜಮದಗ್ನಿ ಮಹರ್ಷಿಗಳು ಬೆಳಗ್ಗೆ ಪೂಜೆಗೆ ಕುಂತಾಗ ದಿನಾ ಕತ್ಲಾಗೇ ರುಶಿಪತ್ನಿ ಗುಂಡ್ಯಾಚನು ನದಿಗೆ ಹ್ವಾಗಿ ನೀರು ತತ್ತಿದ್ರಲ, ಆಗ ಮಾತಂಗಿ ಜೊತಿಗೆ ಹ್ವಾಗ್ತಿದ್ಲು. ಅವರು ಗಡಿಗೆ, ಬಿಂದಿಗೆ, ತಗಂಡು ಹ್ವಾಗ್ತಿರಲಿಲ್ಲ. ಪತಿವ್ರತಾ ಶಕ್ತಿಯಿಂದ ನೀರನ್ನೇ ಗಡಿಗೆಯ ಆಕಾರ ಮಾಡಿ ತಲೆ ಮ್ಯಾಲೆ ಇಟ್ಕಂಡು ತರ್ತಿದ್ರು. ಸಾವಿರ ಕೈಯಿನ ಕಾರ್ತವೀರ್ಯಾರ್ಜುನನ ರೂಪ ವನ್ನು ಆಕಾಶದಲ್ಲಿ ನೋಡಿ ಮನಸ್ಸು ಕದಲಿದ ದಿನ, ನೀರು ಪಾತ್ರೆಯಿಲ್ಲದೆ

ಆಕಾರವಾಗಲಿಲ್ಲ. ರುಶಿಗಳಿಗೆ ವಿಷಯ ತಪೋಬಲದಿಂದ ತಿಳಿದುಹೋಯ್ತು. ಹೋಗಿ ನಿಮ್ಮ ಮಾತೇನ ಕೊಂದು ಬಾ ಅಂತ ಮಗ ಪರಶುರಾಮದೇವಂಗೆ ಹೇಳಿದ್ರಲ. ರಾಮದೇವರು ನದೀದಡಕ್ಕೆ ಹೋದರು. ಕುತ್ತಿಗೆಗೆ ಗುರಿ ಇಟ್ಟು ಬಾಣ ಬಿಟ್ಟರು. ಹಿಂದುಗಡೆ ನಿಂತಿದ್ದ ಮಾತಂಗಿಯ ಕುತ್ತಿಗೆಯೂ ಕತ್ತರಿಸಿ ಬಿತ್ತು. ಆಮ್ಯಾಲೆ ತಂದೆಯು ಮಗನ ವಿಧೇಯತೆಗೆ ಮೆಚ್ಚಿ, ವರ ಕೇಳು ಅಂದ್ರಲ, ನಮ್ಮ ಅವ್ವನ್ನ ಬದುಕಿಸಿ ಅಂತ ಮಗ ಕೇಳಿದ್ರಲ, ಆಗ ಅವರು ಕಮಂಡಲದ ನೀರು ಕೊಟ್ಟು, 'ನಿಮ್ಮವ್ವನ ತಲೆ, ಶರೀರಾನ ಕೂಡಿಸಿ ಈ ನೀರ ಚುಮಿಕಿಸು, ಜೀವ ವಾಗ್ತರೆ' ಅಂತ ಹೇಳಿದರು. ಪರಶುರಾಮ ದೇವರು ಬಂದು ನೋಡ್ತಾರೆ: ಎರಡು ತಲೆ, ಎರಡು ಶರೀರ ಬಿದ್ದವೆ. ಎರಡನ್ನೂ ಸೇರಿಸಿ ನೀರು ಚುಮುಕಿಸಿ ಇಬ್ಬರನ್ನೂ ಬದುಕಿಸಿ ಆಶ್ರಮಕ್ಕೆ ಕರ್ಕಂಡು ಬಂದ್ರು. ಅಷ್ಟರಾಗೆ ಬೆಳಕಾಗಿತ್ತು. ಬೆಳಕಿನಾಗೆ ಕಂಡಿತು: ಮಾತಂಗೀ ತಲೇನ ರೇಣುಕಮ್ಮನೋರ ಮೈಗೆ, ರೇಣುಕಮ್ಮನೋರ ತಲೇನ ಮಾತಂಗೀ ಮೈಗೆ ಕತ್ತಲೇಲಿ ಅಂಟಿಸಿ ಜೀವ ಬರಿಸಿ ತಪ್ಪು ಮಾಡಿದ್ದರು. ಈ ತಪ್ಪಿಗೇನು ಮಾಡಾದು? ಮತ್ತೆ ಸರಿಮಾಡಬೇಕಾದರೆ ಇನ್ನೊಂದು ಸಲ ಇಬ್ಬರ ಕುತ್ತಿಗೇನೂ ಕಡೀಬೇಕು, ಪಾಪ ಮಾಡಬೇಕು – ಅಂತ ತಂದೆಯವರಿಗೆ ಅಡ್ಡ ಬಿದ್ದು ಕೇಳ್ಕಂಡ್ರು. ರುಶಿಗಳು ಮತ್ತೆ ಕಡೀಬ್ಯಾಡ ಅಂತ ಹ್ಯೇಳಿ, ರೇಣುಕಮ್ಮನೋರ ತಲೆ ಮಾತಂಗಿಯ ಶರೀರ ಇದ್ದ ಹೆಂಗಸನ್ನ ತಮ್ಮ ಪತ್ನಿ ಅಂತ ಒಪ್ಕಂಡ್ರು. ಅಂದ್ರೆ ಮಾತಂಗಿಯ ಶರೀರ ರುಶಿಪತ್ನೀದು. ಜಮದಗ್ನಿ ಮಹಾರುಶಿಗಳ ಹೆಂಡತಿ ಶರೀರ. ಆಶ್ರಮದ ರುಶಿಕನ್ಯೆಯಾದ ಅವಳದೇ ತಲೆ. ಇಂಥೋಳ ಮಕ್ಕಳಾದ ನಾವು ಮುಟ್ಟಿಸ್ಕಬಾರ್ದೋರು ಹ್ಯಂಗಾದೆವು?"

ಸತ್ಯ ಕುತೂಹಲದಿಂದ ಕೇಳುತ್ತಿದ್ದಳು. ಇಂತಹ ಕಥೆಗಳನ್ನು ಕೇಳಿದಾಗಲೆಲ್ಲ ಅವಳಿಗೆ ಹುಸಿನಗೆ ಬರುತ್ತಿತ್ತು. ಪ್ರತಿಯೊಂದು ಜಾತಿಯೂ ತನ್ನ ಮೂಲವನ್ನು ಪುರಾಣದ ಒಂದು ಮಹಾ ವ್ಯಕ್ತಿ ಅಥವಾ ಮಹಾ ಘಟನೆಗೆ ಜೋಡಿಸಿಕೊಳ್ಳುತ್ತದೆನ್ನುವುದು ಅವಳಿಗೆ ಗೊತ್ತಿದ್ದ ಸಂಗತಿ. ಆದರೆ ಈ ಕಥೆ ಗೊತ್ತಿರಲಿಲ್ಲ. ವೆಂಕಟೇಶ ಕೇಳಿದ: 'ನೀವು ಹೇಳೂ ಕಥೆ ಸರಿ. ಆದರೆ ಮಾತಂಗಿ ಚಕ್ಕಳದ ಕೆಲಸ ಮಾಡೂ ಹೆಂಗಸು. ಮೂಲದಲ್ಲೇ ಅಸ್ಪೃಶ್ಯಳಾಗಿದ್ದಳು ಅಂತ ಇದೆ. ರೇಣುಕಮ್ಮನೋರ ಶರೀರಕ್ಕೆ ಅಂಟಿಕೊಂಡರೆ ತಲೆ ಬದಲಾಯಿಸಿತೆ? ಮನುಷ್ಯನ ಜಾತಿ ನಿರ್ಧರವಾಗೂದು ತಲೆಯಿಂದಲೋ ಶರೀರದಿಂದಲೋ?'

ತಮ್ಮ ಸುಳ್ಳನ್ನು ಹಿಡಿದು ತೋರಿಸಿದುದರಿಂದ ಬೆಟ್ಟಯ್ಯನವರಿಗೆ ಪೆಚ್ಚಾಯಿತು. ಮಾತಂಗಿ ಚಕ್ಕಳದ ಕೆಲಸ ಮಾಡುತ್ತಿದ್ದ ಹೆಂಗಸೆಂಬುದು ಅವರಿಗೆ ಗೊತ್ತಿಲ್ಲದ

ಸಂಗತಿಯಲ್ಲ. ಬೇಕೆಂದೇ ಅವರು ಅದನ್ನು ಬಿಟ್ಟು ಹೇಳಿದ್ದರು. ಈ ವೆಂಕಟೇಶಯ್ಯ ಖದೀಮ ಮನುಷ್ಯರು, ಇವರಿಗೆ ಗೊತ್ತಿಲ್ಲದ ಶಾಸ್ತ್ರವೇ ಇಲ್ಲ ಎಂದುಕೊಂಡು ಉತ್ತರ ಕೊಟ್ಟರು: 'ಒಂದೊಂದು ಪುಸ್ತಕದಾಗೆ ಒಂದೊಂದು ತರಾ ಇರ್ತದೆ. ನಾನು ಓದಿದ್ದು ಹಿಂಗೆ.'

'ಆ ಪುಸ್ತಕ ಸ್ವಲ್ಪ ತಂದು ಕೊಡ್ತಿರಾ?'

ಅವರು ಎರಡನೆಯ ಸಲ ಸಿಕ್ಕಿಕೊಂಡರು. ಸುಳ್ಳು ಹೇಳಿ ಅದನ್ನು ಬಚಾಯಿ-ಸುವ ಅಭ್ಯಾಸವೇ ಇಲ್ಲದ ಅವರಿಗೆ ಈಗ ಅವಮಾನವೆನಿಸಿತು. ಬುದ್ಧಿಯ ಚುರುಕು ಕಮ್ಮಿಯಾಗಿ ತಲೆ ಮಂದವಾಯಿತು. ಅವರ ಮುಂದಿನ ಉತ್ತರ ಏನಾಗ ಬಹುದೆಂದು ವೆಂಕಟೇಶ ಲೆಕ್ಕ ಹಾಕುತ್ತಾ, ಕುಳಿತಿದ್ದ ಭಂಗಿಯನ್ನು ಬದಲಾಯಿಸಿ ತನ್ನ ಕಾಲಿನ ಮೇಲೆ ಕಾಲು ಹಾಕಿಕೊಂಡ. 'ಶಾಸ್ತ್ರದಾಗೆ ಏನಾರ ಇದ್ಕಳ್ಳಿ. ನಾವು ಅಸ್ಪೃಶ್ಯರು ಅನ್ನೋದ ನೀವು ಏನಾರ ಮಾಡಿ ಕಳದುಬಿಡಿ ಸ್ವಾಮಿಗಳೆ. ರುಶಿಯಾಶ್ರಮದಲ್ಲಿ ಮಾತಂಗಿ ಇದ್ಳು. ರುಶಿಪತ್ನಿಯ ಜೋಡಿ ನದಿಗೆ ಹ್ವಾಗ್ತಿದ್ಳು. ಅವರ ಶರೀರವೇ ಅವಳದಾಯ್ತು. ಇಷ್ಟು ಸಾಲದಾ ಅವಳು ಅಸ್ಪೃಶ್ಯಳಲ್ಲ ಅನ್ನಾಕೆ? ಅದರ ಮ್ಯಾಲೆ ನೀವು ಮುಂದಿನ ಮಾತಾಡಿ.'

'ನೀವು ಎಷ್ಟಾದರೂ ಎಂ.ಎಲ್.ಎ.ಗಳು. ನಮಗೆ ಎಂಥಾ ಕೆಲಸ ಅಂದ್ರೂ ಮಾಡಿಕೊಡೋರು. ನಿಮ್ಮ ಆಶೋತ್ತರ ಇಲ್ಲ ಅನ್ನೊ ಹಾಗಿಲ್ಲ' – ವೆಂಕಟೇಶ ಪೀಠಿಕೆ ಹಾಕಿದ.

'ನನ್ನ ಕೈಲಾದದುಕ್ಕೆ ನಾನು ನಿಮ್ಮ ಯಾವ ಕೆಲಸಾನೂ ಇಲ್ಲ ಅನ್ನಲ್ಲ' – ಅವರು ವಚನ ಕೊಟ್ಟರು.

'ಅಲ್ಲ, ನೀವು ಕೆಲಸ ಮಾಡಿ ಕೊಡ್ತೀರ ಅಂತ ನಾನು ನಿಮ್ಮ ಪರ ಮಾತಾಡ ಬೇಕಾಗಿಲ್ಲ. ಇದು ಇರ್ಲಿ ಇಲ್ದೆ ಹೋಗ್ಲಿ, ನೀವು ಮಾಡಿಯೇ ಕೊಡ್ತೀರಿ. ನೀವು ಮಾಡಿಕೊಡಲಿ ಬಿಡಲಿ, ನಾನು ನಿಮಗೆ ಸಹಾಯ ಮಾಡಿಯೇ ಮಾಡ್ತೀನಿ. ನನ್ನ ನಿಮ್ಮ ವಿಶ್ವಾಸ ಹಾಗಿದೆ. ಆದರೆ ಸಭೇಲಿ ಜನ ಒಪ್ಪಬೇಕಲ್ಲ. ನನ್ನ ಮಾತು ಖಾಲಿಯಾಗಬಾರ್ದು.'

'ಒಪ್ಪೊಹಂಗೆ ನೀವು ಹ್ಯಂಗಾದ್ರೂ ಮಾತಾಡಬೇಕು' – ಎಂದು ಬೆಟ್ಟಯ್ಯ ನವರು ಅಂಗಲಾಚಿದರು.

ಇದುವರೆಗೂ ಸುಮ್ಮನೆ ಕುಳಿತಿದ್ದ ಸತ್ಯಳಿಗೆ ಬೇಸರವಾಯಿತು. ಬೆಟ್ಟಯ್ಯ ನವರ ಬಗೆಗೆ ಅವಳಲ್ಲಿ ಗೌರವವಿತ್ತು. ಹೆಚ್ಚು ಬುದ್ಧಿವಂತರಲ್ಲದಿದ್ದರೂ ಗಾಂಧೀಜಿಯ ಆಶ್ರಮದಲ್ಲಿದ್ದು ತಿಳಿವಳಿಕೆ ಸಂಪಾದಿಸಿದವರೆಂಬ ಮರ್ಯಾದೆ ಇತ್ತು. ತಾಳ್ಮೆ, ಸೌಜನ್ಯ, ಮೊದಲಾದ ಗುಣಗಳಿಂದ ಕೂಡಿದ ಅವರು ತಮ್ಮ ಆಸ್ತಿ, ಅಸೆಂಬ್ಲಿಯ

ಅಂತಸ್ತು ಮೊದಲಾದುವುಗಳಿಂದ ಎಂದೂ ಮೆರೆದವರಲ್ಲ. ಆದರೆ ಈಗ ಇಲ್ಲಿಗೆ ಬಂದು, ಕಳೆದ ಸಂಜೆ ಬಂದಿದ್ದ ಇತರ ಮತದ ಮುಖಂಡರಂತೆಯೇ ಹಪಹಪಿಸುತ್ತಿರುವುದನ್ನು ಕಂಡು ಕನಿಕರವೆನಿಸಿತು. ಮನಸ್ಸಿನಲ್ಲಿ ಸೂಕ್ಷ್ಮವಾಗಿ ಹುಟ್ಟಿದ ತಿರಸ್ಕಾರವನ್ನು ಪ್ರಜ್ಞಾಪೂರ್ವಕವಾಗಿ ಪ್ರಯತ್ನಿಸಿ ತೊಡೆದುಹಾಕಿ ಕೇಳಿದಳು: 'ಬೆಟ್ಟಯ್ಯನೋರೇ, ಈ ಕಥೆಗಳನ್ನ ನೀವು ನಂಬ್ತೀರಾ?'

ಅವರಿಗೆ ಸಂಭ್ರಾಂತಿಯಾಯಿತು. ನಂಬಬೇಕೋ, ನಂಬಬಾರದೋ? ನಂಬುತ್ತೇನೆಂದರೆ ಈ ಹೆಣ್ಣುಮಗಳು ಮತ್ತೆ ಏನು ಕೇಳುವಳೋ! ಈಕೆಗೆ ಯಾವ ನಂಬಿಕೆಯೂ ಇದ್ದಂತಿಲ್ಲ. ಇವರು ತಮ್ಮ ಮಗಳ ಕೈಲಿ ಆಡುವ ಮಾತುಗಳನ್ನು ಅವಳು ತಮಗೆ ಹೇಳುತ್ತಿರುತ್ತಾಳೆ. ಆದರೆ ನಂಬುವುದಿಲ್ಲವೆಂದರೆ, 'ಇಷ್ಟೆಲ್ಲ ಯಾಕೆ ಕಥೆ ಬೆಳೆಸ್ತೀರ?' ಅನ್ನಬಹುದು. ಆದ್ದರಿಂದ ಅನುಮಾನಿಸಿ ಯೋಚಿಸಿ ಹೇಳಿದರು: 'ಕಥೆ ನಿಜವೋ ಸುಳ್ಳೋ ಬ್ಯಾರೆ ಮಾತು. ಕತೆ ಅಂದ್‌ರೆ ಶಾಸ್ತ್ರ, ಶಾಸ್ತ್ರ ಅಂದ್‌ರೆ ಕತೆ. ಶಾಸ್ತ್ರದಾಗೆ ಹಿಂಗದೆ ಅಂದ್‌ರೆ ಜನ ನ್ಯಂಬೂದು ಸುಲಬ ಅಲ್‌ವಾ?'

'ಕಥೆಯ ಆಧಾರದ ಮೇಲೆ ನಿರ್ಮಿಸಿದ ಶಾಸ್ತ್ರಕ್ಕೆ ನೀತಿಯ ನೆಲೆ ಇರುಲ್ಲ. ಇದು ಒಳ್ಳೇದು, ಇದು ತಪ್ಪು, ಅನ್ನೂದನ್ನ ನೀತಿಯ ಒರೆಗೆ ಹಚ್ಚಬೇಕು. ಜನಕ್ಕೆ ಅದ ಕಲಿಸಬೇಕು. ಮನುಷ್ಯ ಮನುಷ್ಯರ ಮಧ್ಯೆ ಭೇದ ಮಾಡಬಾರದು. ಎಲ್ಲರ ಮೈಲಿರೂದು ಮನುಷ್ಯನ ರಕ್ತವೇ – ಅನ್ನುವಂಥ ತಿಳಿವಳಿಕೆ ಬೆಳೆಸಬೇಕು. ಅದ ಬಿಟ್ಟು ಸುಳ್ಳು ಕಥೆಗೆ ಇನ್ನಷ್ಟು ಸುಳ್ಳು ಸೇರಿಸಿ ನಿಮ್ಮ ಜನದ ಒಳ್ಳೇದು ಮಾಡುಕ್ಕೆ ಯಾಕೆ ಹೋಗ್ತೀರ? ಒಂದು: ಊರ ಜನದಲ್ಲಿ ನಿಜವಾದ ನೀತಿಯ ತಿಳಿವಳಿಕೆ ಬೆಳೆಸಿ. ಅಥವಾ: ನೀವು ನಮ್ಮ ಮೇಲೆ ಭೇದ ಮಾಡಿದರೆ ನಿಮ್ಮ ಮನೆ ಸುಟ್ಟುಹಾಕ್ತೀವಿ ನಿಮ್ಮನ್ನ ಖೂನಿ ಮಾಡ್ತೀವಿ ಅಂತ ಹೆದರಿಸಿ ಸಮಾನತೆ ಸಂಪಾದಿಸಿ. ಕಥಾಮಾರ್ಗ ಬ್ಯಾಡ.'

'ಮನೆ ಸುಟ್ಟು ಹಾಕೂದಾ? ಖೂನಿ ಮಾಡೂದಾ? ಅಹಿಂಸೆ, ಮಹಾತ್ಮರು ಅಂತಿದ್‌ರು....' – ಎಂಬ ಅವರ ಮಾತನ್ನು ಅರ್ಧಕ್ಕೆ ತಡೆದು ಆವಳು ಮುಂದುವರಿಸಿದಳು: 'ಸುಳ್ಳಿನ ಕಥೆ ಹಬ್ಬಿಸಿ ಕಲ್ಯಾಣ ಮಾಡುಕ್ಕೆ ಹೊರಡೂದಕ್ಕಿಂತ ಹಿಂಸೆ ಮಾಡೂದು ಮೇಲು. ನನ್ನ ಕೇಳಿದ್ರೆ ನೀವು ನಾಡದ್ದಿನ ಸಭೆಗೆ ಹೋಗದೆ ಇರೂದು ಮರ್ಯಾದೆ.'

'ಸತ್ಯ, ನಿನ್ನ ಪಾಡಿಗೆ ನೀನು ಮಲಕ್ಕೊ ಹೋಗು' – ವೆಂಕಟೇಶ ಬಾಯಿ ಹಾಕಿದ.

'ನಿನ್ನ ಮಾತಿನ ಅರ್ಥ ನಂಗೆ ಆಗುತ್ತೆ. ನಾನು ಮಧ್ಯೆ ಮಾತಾಡುಲ್ಲ.

ನಿನ್ನ ವ್ಯವಹಾರದಲ್ಲಿ ಬಾಯಿ ಹಾಕಿ ಜಗಳವಾಡುಕ್ಕೆ ನಂಗೆ ಇಷ್ಟವೂ ಇಲ್ಲ. ಬೆಟ್ಟಯ್ನೋರು ಅಂದ್ರೆ ನಂಗೆ ಗೌರವವಿದೆ. ಆ ಗೌರವವನ್ನ ಅವರು ಉಳಿಸಿಕೊ ಬೇಕು ಅಂತ ನನ್ನ ಆಶೆ' – ಎಂದು ಹೇಳಿ ಅವಳು ಎದ್ದು ಒಳಗೆ ಬಂದಳು.

ಅಷ್ಟರಲ್ಲಿ ಜಯಮ್ಮ ಚಿಕ್ಕ ಮನೆಯಲ್ಲಿ ಮಲಗಿ ನಿದ್ದೆ ಮಾಡುತ್ತಿದ್ದಳು. ಆಗಲೇ ತೋಟಕ್ಕೆ ಹೊರಟುಹೋಗಬೇಕೆಂದು ಸತ್ಯಳಿಗೆ ಮನಸ್ಸಾಯಿತು. ಆದರೆ ನಡುರಾತ್ರಿ ಕಳೆದು ಎರಡು ಗಂಟೆಯಾಗಿತ್ತು. ನಿದ್ದೆ ಬರುತ್ತಿದ್ದುದರ ಜೊತೆಗೆ ಮೈ ಕೈಯೂ ಭಾರವಾಗಿತ್ತು. ಹಾಸಿಗೆಗೆ ಅಡ್ಡವಾಗಿ ಹೊರಳಿದ್ದ ವಾಸುವನ್ನು ಸರಿಯಾಗಿ ಮಾಡಿ ದೀಪ ಆರಿಸಿ ಅವಳು ಮಲಗಿಕೊಂಡಳು. ದನದ ಕೊಪ್ಪಲಿನಲ್ಲಿ ಅವರಿಬ್ಬರೂ ಇನ್ನೂ ಮಾತನಾಡುತ್ತಲೇ ಇದ್ದರು. ಬೆಟ್ಟಯ್ಯನವರ ಬಗೆಗೆ ಅವಳ ಮನಸ್ಸಿನಲ್ಲಿ ಕನಿಕರ ತುಂಬುತ್ತಿತ್ತು. ಸ್ವಲ್ಪ ಹೊತ್ತಿನಲ್ಲಿ ನಿದ್ದೆ ಬಂತು.

ಅವಳು ಬೆಳಗ್ಗೆ ಎದ್ದಾಗ ಎಂಟು ಗಂಟೆಯಾಗಿತ್ತು. ಮುಖ ತೊಳೆದು ಜಯಮ್ಮ ಕೊಟ್ಟ ಕಾಫಿ ಕುಡಿಯುತ್ತಾ ಕೇಳಿದಳು: 'ವೆಂಕಟೇಶ ಎಲ್ಲಿ?'

'ಇಂಥ ಕಡೆಗೆ ಅಂತ ಹೇಳಲಿಲ್ಲ. ಯಾರಾದ್ರೂ ಕೇಳಿದ್ರೆ ಊರಲ್ಲಿಲ್ಲ ಅನ್ನು ಅಂತ ಹೇಳಿ ಚರ್ಮದ ಚೀಲ ತಗಂಡು ಹೋದ್ರು.'

ಲೋಟವನ್ನು ಕೆಳಗಿಟ್ಟು ಸತ್ಯ ಅಂದಳು: 'ನಾನೀಗ ತೋಟಕ್ಕೆ ಹೋಗ್ತೀನಿ.'

'ಅಲ್ಲಿಗೆ ಯಾಕೆ ಹೋಗ್ತೀಯ. ಒಳಗೆಲ್ಲ ಧೂಳು ತುಂಬಿರುತ್ತೆ.'

'ಯಾವಾಗ ಹೋದರೂ ಧೂಳು ಹೊಡೆದು ಗುಡಿಸಿ ಸಾರಿಸಿ ಮಾಡಲೇಬೇಕು. ಇಷ್ಟು ದಿನ ಬರೀ ಬೀಗ ಹಾಕಿತ್ತು. ವೆಂಕಟೇಶ ಒಳಗೆ ತೆಗೆದು ನೋಡಿದ್ದನೋ ಇಲ್ಲವೋ! ಒಳಗೆ ಬೆಲೆ ಬಾಳುವಂಥ ಪದಾರ್ಥ ಏನೂ ಇಲ್ಲ. ಆದ್ರೂ ಕಳ್ಳಗಿಳ್ಳ ತನವಾಗಿವೆಯೋ ಏನೋ!'

'ಕಳ್ಳತನ ಹ್ಯಾಗಾಗುತ್ತೆ? ಅಲ್ಲೆಲ್ಲ ಅಪ್ಪನ ದೆವ್ವ ತಿರುಗುತ್ತೆ. ಬ್ರಾಹ್ಮಣ ಜಡೆಮುನಿ ಸಂಚಾರ ಇದೆ ಅಂತ ಊರೋರೆಲ್ಲ ಹೆದರಿಕೊತ್ತಾರೆ.'

'ಯಾರಂತೆ ಕಂಡೋರು?'

ಧ್ವನಿಯನ್ನು ಸಣ್ಣಗೆ ಮಾಡಿ ತನ್ನ ಬಾಯನ್ನು ಅವಳ ಕಿವಿಯ ಹತ್ತಿರ ತಂದು ಜಯಮ್ಮ ಉಸುರಿದಳು: 'ರಾತ್ರಿ ಹೊತ್ತು ಯಾರಾದ್ರೂ ಕಳ್ಳತನ ಮಾಡಿಯಾರು ಅಂತ ನಿಮ್ಮಣ್ಣನೇ ನಾಕು ಜನವ ಕೈಲಿ ಹಾಗಂದ್ರು. ಈಗ ಬಾಕಿಯೋರ ತೋಟದಲ್ಲೆಲ್ಲ ಕಾಯಿ ಕದೀತಿದಾರೆ. ನಮ್ಮದರಲ್ಲಿ ಮಾತ್ರ ಒಂದು ಸ್ವಾಗೆ ಗರಿ ಅಲ್ಲಾಡುಲ್ಲ.'

ಯಥಾ ಪ್ರಕಾರ ಸುಳ್ಳಿನ ಮೇಲೆ ಭಯ. ಭಯದ ಮೇಲೆ ನೀತಿ ನಿಂತಿದೆ ಎಂದು

ಸತ್ಯ ಎಂದುಕೊಂಡಳು. ಇಂತಹ ಸುಳ್ಳು ಹೇಳದೆ ಕಳ್ಳತನ ನಿಲ್ಲಿಸುಕ್ಕೆ ಆಗುಲ್ಲವೆ, ಎಂದು ಯೋಚಿಸಲು ಪ್ರಾರಂಭಿಸಿದಳು. ಹೇಗೆ ಸಾಧ್ಯ ಎಂಬ ಪ್ರಶ್ನೆಗೆ ಉತ್ತರ ಸುಲಭವಾಗಿರಲಿಲ್ಲ. ಆದರೆ ಅದು ಸಾಧ್ಯವಾಗದೆ ನೀತಿ ಬೆಳೆಯುಲ್ಲವೆಂದು ಅವಳ ಅಂತಃಪ್ರಜ್ಞೆ ಹೇಳುತ್ತಿತ್ತು.

ಆ ದಿನ ಮಧ್ಯಾಹ್ನ ತನಗೆ ಊಟ ಕಳಿಸಲು ಹೇಳಿ ಅವಳು ಬೀಗದ ಕೈ ಇಸಿದ್ಕುಕೊಂಡು ತನ್ನ ಹೋಲ್ಡಾಲನ್ನು ಎತ್ತಿ ತಲೆಯ ಮೇಲೆ ಹೊತ್ತು ಚೀಲವನ್ನು ಕೈಲಿ ಹಿಡಿದು ತೋಟದ ಮನೆಗೆ ನಡೆದಳು.

೫

ತೆಂಗಿನ ಸೊಸಿಗಳು ಚನ್ನಾಗಿ ಹತ್ತಿಕೊಂಡಿದ್ದುವು. ಸದ್ಯಕ್ಕೆ ಬೇರೆ ಯಾವ ಕೆಲಸವನ್ನೂ ಮಾಡಕೂಡದು. ಸಂಗ್ರಹಿಸಿದ ವಿಷಯ ಸಿದ್ಧವಾಗಿದೆ. ಕೂತು ಬರೆಯುವುದೊಂದೇ ಕೆಲಸ. ಹತ್ತು ಹದಿನೈದು ದಿನದಲ್ಲಿ ಮುಗಿಸಿಕೊಡಬೇಕು. ಈಗ ರಜ ಬಂದಿದೆ. ಮೀರಾ ಊರಿಗೆ ಬಂದಿರುತ್ತಾಳೆ. ಅವಳಿಗೆ ಕೊಟ್ಟು ಉತ್ತಮ ಪ್ರತಿ ಮಾಡಿಸಿ ತುಮಕೂರಿಗೆ ಕಳಿಸಬೇಕು. ಮೋಹನದಾಸ ಬರೆಯುವ ಭಾಗವನ್ನೂ ತಾನು ತಿದ್ದಿಕೊಡಬೇಕು – ಎಂದು ಅವಳು ನಿಶ್ಚಯಿಸಿದಳು. ಮೋಹನದಾಸನ ನೆನಪಿನ ಜೊತೆಗೇ ಬೆಟ್ಟಯ್ಯನವರ ಜ್ಞಾಪಕ ಬಂತು. ಜೊತೆಗೇ ಮೋಹನದಾಸನ ಬಗೆಗೆ ಗೌರವ ಮೆಚ್ಚುಗೆಗಳು ಹುಟ್ಟಿದುವು. ತಾನು ತುಮಕೂರಿಗೆ ಹೋಗಿದ್ದಾಗ ಅವನು ತನ್ನ ಅಪ್ಪನ ಬಗೆಗೆ ಹಗುರವಾಗಿ ಮಾತನಾಡಿದ್ದಾಗ ಅವಳಿಗೆ ಇಷ್ಟವಾಗಿರಲಿಲ್ಲ. ಆದರೆ ಈಗ ಆ ಮಾತುಗಳು ಅವರಿಗೆ ಒಪ್ಪುವಂಥವೇ ಎನಿಸಿತು. ತಾನು ಬೇಗ ಬರವಣಿಗೆಯನ್ನು ಆರಂಭಿಸಿ ಮುಗಿಸಿಕೊಡಬೇಕೆಂದು, ಮನೆಯನ್ನು ಗುಡಿಸಿ ಸಾರಿಸಿದನಂತರ ಆ ಮಧ್ಯಾಹ್ನವೇ ಕುಳಿತು ಸಾಮಗ್ರಿ ಸಾಮಾನನ್ನು ಸಿದ್ಧಪಡಿಸಿಕೊಂಡಳು.

ಮರುದಿನ ಬೆಳಗ್ಗೆ ಮೂರು ಗಂಟೆಯ ಕಾಲ ಬರೆದಳು. ಅಡಿಗೆ ಮಾಡಿಟ್ಟು ಸ್ವಲ್ಪ ನಿದ್ದೆ ಮಾಡಿ ಎದ್ದು ಊಟ ಮಾಡಿ ಮತ್ತೆ ಬರೆಯಲು ಕುಳಿತಳು. ಮೂರೂವರೆ ಗಂಟೆಯ ಸುಮಾರಿಗೆ ಎಲ್ಲೋ ದೂರದಲ್ಲಿ ಜನಜಂಗುಳಿಯ ಗಿಜಿಗಿಜಿ ಸದ್ದು ಕೇಳಿಸಿತು. ಇದೇನೆಂದು ಮನೆಯಿಂದ ಹೊರಗೆ ಬಂದು ಸುತ್ತ ನೋಡಿದಳು. ಏನೂ ಕಾಣಲಿಲ್ಲ. ಹೊಳೆಬಾಗಿಲಿನ ತನಕ ಹೋಗಿ ನೋಡಿದಳು. ದೇವಸ್ಥಾನದ ದಿಬ್ಬದಲ್ಲಿ ಒಂದು ಜಾತ್ರೆಯ ಜನವೇ ನೆರೆದಿದೆ. ತಕ್ಷಣ ನೆನಪಾಯಿತು: ಊರಿನ ಎಲ್ಲ ಜಾತಿಗಳ ಅಂತಸ್ತನ್ನು ನಿರ್ಧರಿಸುವ ಸಭೆ ಸೇರಿದೆ.

ಮನಸ್ಸಿನಲ್ಲಿ ತಿರಸ್ಕಾರ ಹುಟ್ಟಿತು. ವಾಪಸು ಬಂದು ಬರೆಯಲು ಕುಳಿತಳು. ಆದರೆ ಮಗ್ನತೆ ಬರಲಿಲ್ಲ. ಅಲ್ಲಿ ನಡೆಯುತ್ತಿರುವುದನ್ನು ನೋಡಬೇಕೆನಿಸಿತು. ಅಲ್ಲಿ ಪ್ರತ್ಯಕ್ಷ ಇತಿಹಾಸ ನಡೆಯುತ್ತಿದೆ. ಅದನ್ನು ಬಿಟ್ಟು ನಾನು, ಇಲ್ಲಿ ಕೈಗೆ ಸಿಕ್ಕದ ಗತ ಇತಿಹಾಸವನ್ನು ಬರೆಯುತ್ತಿದ್ದೇನೆ. ಪ್ರತ್ಯಕ್ಷ ಸತ್ಯದ ಪ್ರಖರತೆ ಇಲ್ಲದ ನನ್ನ ಬರವಣಿಗೆಗೆ ಬೆಲೆಯಿಲ್ಲ. ಅದನ್ನು ನೋಡಿಕೊಂಡು ಬಂದಮೇಲೆ ಈ ಪುಸ್ತಕ ಹೆಚ್ಚು ಅರ್ಥಪೂರ್ಣವಾಗಬಹುದು – ಎನಿಸಿತು. ಪೆನ್ನನ್ನು ಅದರ ಮುಚ್ಚಳದೊಳಕ್ಕೆ ತಿರುಗಿಸಿಟ್ಟು ಕಾಲಿಗೆ ಚಪ್ಪಲಿ ಹಾಕಿಕೊಂಡು ಬಾಗಿಲಿಗೆ ಬೀಗ ಮೆಟ್ಟಿ, ಹೊಳೆಬಾಗಿಲು ಮುಚ್ಚಿ ಗದೆಯ ಬದುಗಳ ಮೇಲೆ ನಡೆದಳು.

ಅಲ್ಲಿ ಒಂದು ಜಾತ್ರೆಯ ಜನವೇ ಕೂಡಿತ್ತು. ದೇವಸ್ಥಾನದ ಅಂಗಳದಲ್ಲಿ ಮಾತ್ರವಲ್ಲದೆ ಇಡೀ ದಿಬ್ಬದ ಮೇಲೆ, ದಿಬ್ಬಕ್ಕೆ ಅಂಟಿದ ಗದ್ದೆಯ ಬದುವಿನ ಮೇಲೆಲ್ಲ ಗಂಡಸರು ಹೆಂಗಸರು ಮಕ್ಕಳು ತುಂಬಿದ್ದರು. ಅನೇಕ ಗಂಡಸರು ಸಿನಿಮಾ ಜಾಹೀರಾತಿಗೆ ತರುವ ಬಿದಿರು ತಟ್ಟೆಯ ಪೋಸ್ಟರ್‌ಗಳನ್ನು ದಬ್ಬೆಗಳಿಗೆ ಸಿಕ್ಕಿಸಿ ಎತ್ತಿ ಹಿಡಿದುಕೊಂಡಿದ್ದರು. ಊರಿನಲ್ಲಿ ಗೋಡೆಗಳಿಗೆ ಅಂಟಿಸಿದ್ದ 'ಉಪ್ಪಾರ ಅಲ್ಲ, ಮೇಲು ಸಕ್ಕರೆ', 'ಕುರುಬ ಅಲ್ಲ, ಕಾಳಿದಾಸ.' 'ಬೇಡ ಅಲ್ಲ, ವಾಲ್ಮೀಕಿ ಬ್ರಾಹ್ಮಣ', 'ಒಳಪಂಗಡವಿಲ್ಲ, ವೀರಶೈವ ಅಥಾವಾ ಲಿಂಗಾಯತ' ಮುಂತಾದ ಘೋಷಣೆಗಳು ಪೋಸ್ಟರುಗಳಲ್ಲಿ ಎದ್ದುಕಾಣಿಸುತ್ತಿದ್ದುವು. ಸತ್ಯ ಹೋಗಿ ಹೆಂಗಸರ ಕಡೆಯ ಗುಂಪಿನಲ್ಲಿ ಸೇರಿಕೊಂಡಳು. ಬರೀ ತಿರುಮಲಾಪುರ ದವರೇ ಅಲ್ಲದೆ ಸುತ್ತ ಹಳ್ಳಿಗಳಿಂದಲೂ ಕೆಲವರು ಬಂದಿರುವಂತೆ ಅವಳಿಗೆ ಭಾಸ ವಾಗುತ್ತಿತ್ತು. ಬ್ರಾಹ್ಮಣ ಹೆಂಗಸರು ಒಂದು ಪ್ರತ್ಯೇಕ ಗುಂಪಾಗಿ ಕುಳಿತಿದ್ದರು. ಬ್ರಾಹ್ಮಣ ಗಂಡಸರು ತಮ್ಮ ತಮ್ಮ ಒಳಸಂಪ್ರದಾಯಕ್ಕೆ ತಕ್ಕಂತೆ ಬೇರೆ ಬೇರೆ ಗುಂಪುಗಳಾಗಿ ಒಬ್ಬರ ಪಕ್ಕದಲ್ಲಿ ಒಬ್ಬರಂತೆ ಕೂತಿದ್ದರು. ಅವರ ಹತ್ತಿರ ಲಿಂಗಾ ಯಿತರ ಗುಂಪು. ಹೀಗೆ ಒಂದೊಂದು ಜಾತಿಯ ಗುಂಪೂ ಕುಳಿತಿದ್ದ ರೀತಿಯನ್ನು ನೋಡಿದರೆ ಆವರವರ ಸಾಮಾಜಿಕ ಅಂತಸ್ತು ಆಗಲೇ ನಿರ್ಣಯವಾಗಿದ್ದಂತೆ ಕಾಣುತ್ತಿತ್ತು. ದೊರೆ ತಿರುಮಲೇಗೌಡರು ಕುಳಿತುಕೊಳ್ಳುವ ಎತ್ತರವಾದ ಜಗುಲಿಯ ಎಡ ಪಕ್ಕದಲ್ಲಿ ಲಿಂಗಾಯಿತರು. ಬಲ ಪಕ್ಕದಲ್ಲಿ ಬ್ರಾಹ್ಮಣರು. ಇಳಿಜಾರಾದ ಆ ಭೂಮಿಯಲ್ಲಿ ಸ್ವಲ್ಪ ಕೆಳಗೆ ರೈತರು. ಅವರಲ್ಲಿ ಒಬ್ಬೊಬ್ಬರು ಒಂದೊಂದು ಎತ್ತರದಲ್ಲಿ. ಎಲ್ಲರಿಗಿಂತ ಕೊನೆಗೆ ಗದ್ದೆಯ ಬದುವಿನಲ್ಲಿ ಹರಿಜನರು, ಅವೂ ಎಡಗ್ಗೆ ಬಲಗ್ಗೆ ಎಂದು ಪ್ರತ್ಯೇಕ ಪ್ರತ್ಯೇಕವಾಗಿ ಒಬ್ಬರನ್ನೊಬ್ಬರು ಮುಟ್ಟಿಸಿಕೊಳ್ಳದವರಂತೆ ಕುಳಿತಿದ್ದರು.

ಎತ್ತರವಾದ ಜಗುಲಿಯ ಮೇಲೆ, ಕುಳಿತುಕೊಳ್ಳುವ ಮೆತ್ತೆ ಹಾಕಿ ದಪ್ಪ

ಒರಗುದಿಂಬು ಇಟ್ಟಿತ್ತು. ಮೆತ್ತೆಯ ಮೇಲೆ ದೊಡ್ಡ ಕೃಷ್ಣಾಜಿನ. ಪಕ್ಕದಲ್ಲೇ ಒಂದು ಪುಟ್ಟ ಮಂದಲಿಗೆ. 'ಈಗ ಕಾರ್ಯಕ್ರಮ ಶುರುವಾಗುತ್ತೆ. ಎಲ್ಲಾ ದಯವಿಟ್ಟು ಸುಮ್ಮನಿರಬೇಕು' – ಎಂದು ವೆಂಕಟೇಶ ಜಗುಲಿಗೆ ಬಂದು ಕೂಗಿ ಕೊಂಡ. ಗಂಟೆಯ ಶಬ್ದವಾಯಿತು. ನರಸಿಂಹಜೋಯಿಸರು ಒಳಗೆ ಮಂಗಳಾ ರತಿ ಮಾಡಿ ತಟ್ಟೆಯನ್ನು ತಂದು ಗುಡಿಯ ಜಗುಲಿಯ ಹತ್ತಿರ ಎತ್ತಿ ಹಿಡಿದರು. ಜನವೆಲ್ಲ ಕುಳಿತಲ್ಲಿಂದಲೇ ಕೈ ಎತ್ತಿ ಮುಗಿದು ಮಂಗಳಾರತಿ ಸ್ವೀಕರಿಸಿತು. ವೆಂಕಟೇಶ ಎದ್ದು ನಿಂತು, 'ಈಗ ಗ್ರಾಮದ ಗೌಡರು ಸಭಾಧ್ಯಕ್ಷತೆಗೆ ಬರ್ತಾರೆ' ಎಂದ. ದೊಡ್ಡ ಪಟೇಲ್ ತಿರುಮಲೇಗೌಡರು ಒಂದು ಕೃಷ್ಣಾಜಿನದ ಮೆತ್ತೆಯ ಮೇಲೆ ದಿಂಬು ಒರಗಿ ಮಂಡಿಸಿದರು. ಕಲಾಪತ್ತಿನ ಪಂಚೆಯುಟ್ಟು ರೇಶಿಮೆಯ ಅಂಗಿ ತೊಟ್ಟಿದ್ದ ಅವರು ಚಿತ್ತಾರದ ಕೆಲಸ ಮಾಡಿದ್ದ ಕಾಶ್ಮೀರದ ಶಾಲು ಹೊದೆದಿದ್ದರು. ನೊಮ್ಮಗನ ಮದುವೇಲಿ ಮಂಡ್ಯದ ಬೀಗರು ಕೊಟ್ಟಿದ್ದು ಎಂದು ರೈತರ ಗುಂಪಿನ ಒಬ್ಬ ಹೆಂಗಸು ಮತ್ತೊಬ್ಬಳಿಗೆ ಹೇಳಿದುದು ಸತ್ಯಳಿಗೆ ಕೇಳಿಸಿತು. ಅದೇ ದಿನ ಕ್ಷೌರ ಮಾಡಿಸಿಕೊಂಡಂತೆ ಕಾಣುತ್ತಿದ್ದ ಮುಖದಲ್ಲಿ ಬಿಳಿಯ ತುಂಬುಮೀಸೆ. ಹಣೆಯ ಮೇಲೆ ಬೊಟ್ಟುಕುಂಕುಮ. ತಲೆಗೆ ನಾಲ್ಕು ಬೆಟ್ಟಗಲ ಜರಿಪೇಟ. ಬಲಗೈ ಮಧ್ಯದ ಕೆಂಪು ಕಲ್ಲಿನ ಉಂಗುರ ಮತ್ತು ಮಣಿಕಟ್ಟಿನಲ್ಲಿ ಎದ್ದುಕಾಣುತ್ತಿದ್ದ ಬೆರಳು ಗಾತ್ರದ ಬಂಗಾರದ ಕಪ್ಪ. ಎಡಗೈ ಬೆರಳುಗಳ ಮೂರು ಬಿಳೀಕಲ್ಲಿನ ಉಂಗುರಗಳು ಥಳಥಳ ಹೊಳೆಯುತ್ತಿದ್ದುವು. 'ಗೌಡ್ರು ಒಳ್ಳೇ ಮಹಾರಾಜರು ಕಂಡಹಂಗೆ ಕಾಣ್ತಾರೆ ಅಲ್ವಾ?' – ಎಂದು ಸಭೆಗೆ ಸಭೆಯೇ ಮಾತನಾಡಿಕೊಂಡಿತು.

ಕಲಾಪತ್ತಿನ ಪಂಚೆಯುಟ್ಟು ಸಿಲ್ಕಿನ ಶರಟು ಹಾಕಿ ಮೇಲೆ ರೇಶ್ಮೆ ವಲ್ಲಿ ಹೊದೆದು, ಎಡಗೈಗೆ ಬಂಗಾರದ ಚೈನಿನ ಗಡಿಯಾರ ಕಟ್ಟಿದ್ದ ವೆಂಕಟೇಶ ಏಳೆಂಟು ಓಲೆಗರಿ ಕಟ್ಟುಗಳು, ಎರಡು ಅಚ್ಚಾದ ಪುಸ್ತಕಗಳು, ಮತ್ತು ಕೆಲವು ಕೈಬರಹದ ಹಾಳೆಗಳನ್ನು ತಂದು ಪಕ್ಕದಲ್ಲಿ ಇಟ್ಟುಕೊಂಡು ಮಂದಲಿಗೆಯ ಮೇಲೆ ನಿಂತು ಹೇಳಿದ: 'ಗ್ರಾಮ ಬಾಂಧವರೇ, ಈಗ ನಾವೆಲ್ಲ ಇಲ್ಲಿ ಶ್ರೀ ಶ್ರೀನಿವಾಸ ದೇವರ ಸನ್ನಿಧಾನದಲ್ಲಿ ಸೇರಿರುವ ಕಾರಣ ನಿಮಗೆಲ್ಲ ಗೊತ್ತೇ ಇದೆ. ಜಾತಿಮತದ ವಿಷಯಕ್ಕೆ ಹೊಡೆದಾಡೂದು ನಮಗೆ ಅವಮಾನ. ಬ್ರಾಹ್ಮಣೋ-ಸ್ಯ ಮುಖಮಾಸೀತ್। ಬಾಹೂ ರಾಜನ್ಯಃ ಕೃತಃ। ಊರೂ ತದಸ್ಯ ಯದ್ವೈ-ಶ್ಯಃ। ಪದ್ಭ್ಯಾಂ ಶೂದ್ರೋಽಜಾಯತ। ಅಂತ ವೇದದಲ್ಲೇ ಹೇಳಿದೆ. ಅದರ ಪ್ರಕಾರ ಸರ್ವ ಮತಗಳ ಅಂತಸ್ತು ಈ ಸಭೆಯಲ್ಲಿ ನಿರ್ಣಯವಾಗಬೇಕು. ಒಬ್ಬೊಬ್ಬರನ್ನಾಗಿ ನಾನು ಕೂಗಿದಾಗ ಆಯಾಯ ಮತಗಳ ಮುಖಂಡರು ಎದ್ದು

ನಿಂತು ತಮ್ಮ ತಮ್ಮ ಮತದ ಅಂತಸ್ತನ್ನು ವಿವರಿಸಿ ಹೇಳಬೇಕು. ಅದಕ್ಕೆ ಶಾಸ್ತ್ರದ ಆಧಾರವೇನಾದರೂ ಇದೆಯೋ ಇಲ್ಲವೋ ಅಂತ ನೋಡುಕ್ಕೆ ನಾನು ಇಷ್ಟೆಲ್ಲ ಪುರಾತನ ಓಲೆಗರಿ ಕಟ್ಟುಗಳನ್ನು ತಂದಿದೀನಿ. ನ್ಯಾಯ, ನ್ಯಾಯವೇ. ಶಾಸ್ತ್ರಾಧಾರವಿಲ್ಲದೆ ಯಾವುದೂ ನಿರ್ಣಯವಾಗುಲ್ಲ. ಒಟ್ಟಿನಲ್ಲಿ ಯಾವ ಮತಕ್ಕೂ ಅನ್ಯಾಯವಾಗಕೂಡದು....'

ಅವನ ಈ ವಾಕ್ಯವನ್ನು ತಡೆದು, ದೊರೆಯ ಪೀಠದಲ್ಲಿ ಮುಂಡಿಸಿದ ದೊಡ್ಡ ಪಟೇಲರು ಹೇಳಿದರು: 'ಈ ಸೆನ್ಸಸ್ ಅಂತ ಬಂದು ಜನದಾಗೆ ಗಲಾಟೆ ಮಾಡ್ಯದೆ. ಆಗೊಂದ್ಸಲ ಸೆನ್ಸಸ್ ಆದಾಗ್ಲೂ ಹಿಂಗೇ ಆಗಿತ್ತು. ಯಲ್ಲಾ ಅವರವರ ಮತ ನಡುಸ್ಕಂಡ್ ಹ್ವಾಗ್‌ಬೇಕು. ಇಲ್ದೆ ಇದ್ರೆ ಮಳೆ ಬೆಳೆ ಹ್ಯಂಗಾಗುತ್ತೆ? ಯಂಗ್-ಟೇಶ ಶಾಸ್ತ್ರದಲ್ಲಿರಾದು ಹೇಳ್ತಾನೆ. ನಂಗೂ ವಯಸ್ಸಾಯ್ತು, ಇವೆಲ್ಲ ಬ್ಯಾಡ, ದೇವರ ಧ್ಯಾನ ಮಾಡ್ಕಂಡಿರ್ತೀನಿ ರಾಜರ್ಷಿ ಇದ್‌ಹಂಗೆ ಅಂದ್‌ರೆ ಮುಕಂಡ್ರು ಬಿಡಲಿಲ್ಲ. ಕರ್ಕಂಡ್ ಬಂದು ಇಲ್ಲಿ ಕೂರಿಸ್ಯಾರೆ. ಇಂಥದುಕ್ಕೆಲ್ಲ ನನ್ನ ಮಗ ಬರಬೇಕಾಗಿತ್ತು. ಅವನಿಗೂ ಬೆಂಗಳೂರಾಗೆ ಬಲು ಕ್ಯಲ್ಸ. ದಿವಾನಿಕೆ ಅಂದ್ರೆ ಏನಂತೀರ? ಹಿಂದಿನ ಕಾಲದ್ಹಂಗಲ್ಲ. ಒಟ್ನಲ್ಲಿ ಯಲ್ಲಾ ಅವರವರ ಅಹವಾಲು ಹೇಳ್ಕಂಡ್ರೆ ನಾವು ಯಾರಿಗೂ ಅನ್ಯಾಯ ಆಗದ ಹಂಗೆ ತೀರ್ಮಾನ ಮಾಡ್ತೀವಿ. ಮೊದಲಿನಿಂದ ತಿರುಮಲಾಪುರ ಸಂಸ್ಥಾನ ಆಳಿದ ಮನೆ ಇದು. ನಮ್ಮ ವಂಶದ ತಲೆ ಇರೂ ಗಂಟ ಯಾರಿಗೂ ಅನ್ಯಾಯ ಆಗಾಕಾದು.'

ವೆಂಕಟೇಶ ಹೇಳದೆಯೇ ಬಣಜಿಗರ ಶಾಂತಪ್ಪ ಶೆಟ್ಟರು ಎದ್ದು ನಿಂತು ಹೇಳಿದರು: 'ನಮ್ಮ ಮಾತು ಮೊದಲು ಮುಗಿದುಹೋಗಲಿ. ನಾನು ಅಂಗಡಿ ಸಾಮಾನು ತರಕ್ಕೆ ಗಾಡಿ ಕಟ್ಟಿಸ್ಕಂಡಿ ತಿಪಟೂರಿಗೆ ಹ್ವಾಗಬೇಕು. ನಮ್ಮ ಆರಾಧ್ಯರ ತ್ವಾಟಪ್ಪಣ್ಣಾರು ಊರಾಗಿಲ್ಲ. ಮಗಳಿಗೆ ಯಾಕೆ ಮಕ್ಕಳಾಗಿಲ್ಲ ಅಂತ ಶಾಸ್ತ್ರ ಕೇಳಾಕೆ ಬಳ್ಳಾರಿಗೆ ಹ್ವಾಗಿದಾರೆ. ಅವರಿದ್ದಿದ್‌ರೆ ಶಾಸ್ತ್ರ ಸಂಬಂಧ ಯಲ್ಲಾ ಗಟ್ಟಿಯಾಗಿ ಹಿಡಿದು ಮಾತಾಡ್ತಿದ್ರು. ನಂಗೆ ಅಷ್ಟು ತಿಳಿವಳಿಕೆ ಇಲ್ಲ. ನಾನು ಹೇಳಾದೇನು ಅಂದ್‌ರೆ ಬ್ರಾಹ್ಮಣರು ತಲೆಯಿಂದ ಹುಟ್ಟಿದರು, ಕ್ಷತ್ರಿಯರು ರಟ್ಟೆಯಿಂದ ಹುಟ್ಟಿದರು, ವೈಶ್ಯರು ಹೊಟ್ಟೆಯಿಂದ ಬಂದರು. ಉಳಿದ ಶೂದ್ರರು ಕಾಲಿನೋರು ಅಂತ ಯಂಗ್‌ಟೇಶ ಜೋಯಿಸರು ಹೇಳಿದ್ದಕ್ಕೆ ನನಗೂ ಉಪಕಾರವಿಲ್ಲ. ಅದು ವಿಷ್ಣುದೇವರ ಪೂಜೆ ಮಾಡೋರು ಅನ್ನೊ ಮಾತು. ನಾವು ಲಿಂಗವಂತರು. ಲಿಂಗಕ್ಕೆ ತಲೆಯೂ ಇಲ್ಲ, ಕಾಲೂ ಇಲ್ಲ. ರಟ್ಟೆ ಮೊದಲೇ ಇಲ್ಲ. ಲಿಂಗ, ಪಾಣಿಬಟ್ಟು ಎಲ್ಡೇ. ಆದ್ದರಿಂದ ಯತ್ಯಾಸವೇ ಸುಳ್ಳು. ಲಿಂಗ ಅಂದ್ರೆ ಒಂದೇ. ಲಿಂಗವಂತರು ಅಂದ್‌ರೆ ಒಂದೇ. ನಮ್

ನಮ್ಮಲ್ಲಿ ಯತ್ಯಾಸ ಮಾಡಬ್ಯಾಡದು. ನಾವು ಹಾರುವರಿಗಿಂತ ಕಮ್ಮಿಯೋ ಜಾಸ್ತಿಯೋ ಅಂತ ಕೇಳಿದರೆ ಜಾಸ್ತಿಯೇ.'

'ಅದು ಹಾಗಂತೀರ?' – ವೆಂಕಟೇಶ ನಡುವೆ ಕೇಳಿದ.

'ನಾನು ಹೇಳಿದ್ನಲಾ, ನಮ್ಮ ಆರಾಧ್ಯರ ತ್ವಾಟಪ್ಪಣ್ಣಾರು ಇದ್ದಿದ್ರೆ ಯಲ್ಲಾ ಬಿಡಿಸಿ ಜವಾಬ್ ಮಾಡ್ತಿದ್ರು. ನಂಗವೆಲ್ಲ ಗೊತ್ತಿಲ್ಲ. ಲಿಂಗಕ್ಕಿಂತ ದೇವರಿಲ್ಲ. ಅದು ನಮ್ಮ ಎದೀ ಮ್ಯಾಲೇ ಇರಬೇಕಾದ್ರೆ ನಮಗಿಂತ ಯಾರೂ ಮೇಲಲ್ಲ' – ಎಂಬ ಅವರ ಮಾತನ್ನು ನಡುವೆಯೇ ತಡೆದು ಶ್ರೀವೈಷ್ಣವರ ಗರುಡೈಯಂಗಾರರು ಎದ್ದು ನಿಂತು, 'ಲಿಂಗಕ್ಕಿಂತ ದೇವರಿಲ್ಲ ಅನ್ನೋದು ಸುಳ್ಳು. ಮೂಲದಲ್ಲಿ ಶ್ರೀವ, ಮನ್ನಾರಾಯಣ, ವಿಷ್ಣು....' ಎಂದು ಆರಂಭಿಸುವ ಮೊದಲೇ ವೆಂಕಟೇಶ ಪ್ರವೇಶಿಸ್ಯ ಗಟ್ಟಿಯಾಗಿ, 'ಈ ವಾದ ಶುರುವಾದರೆ ಬೇಗ ಮುಗಿಯುಲ್ಲ. ಬಾಕಿ ಎಷ್ಟೋ ಮತಗಳ ವಿಷಯ ನಿರ್ಧರವಾಗಬೇಕು. ಅಲ್ಲದೆ ಶಾಂತಪ್ಪಶೆಟ್ಟರು ಅಂಗಡಿ ಸಾಮಾನಿಗೆ ತಿಪಟೂರಿಗೆ ಹೊರಟಿದಾರೆ. ಅವರಿಗೂ ಹೊತ್ತಾಗುತ್ತೆ. ಅಲ್ವೇನ್ರಿ ಶೆಟ್ರೇ?' ಎಂದುದ್ದಕ್ಕೆ ಶೆಟ್ಟರು, 'ಯಂಗ್‌ಟೇಶ ಜೋಯಿಸ್ರು ಅಂದ್‌ರೆ ಯವ-ಹಾರ ಕಾಡೋರು. ನಂಗೆ ಹೊತ್ತಾಯ್ತದೆ' – ಎಂದು ಹೇಳಿ ಸಭೆಯಿಂದ ಹೊರಟುಹೋದರು. ಗರುಡೈಯ್ಯಂಗಾರರ ಕಡೆ ಸ್ವಲ್ಪ ಹೊತ್ತು ಗಿಜಿಗಿಜಿ ಯಾಯಿತು. 'ಈ ಬೂದಿ ಬಳಕೊಳೂ ಸ್ಮಾರ್ತರೂ ಲಿಂಗಾಯತರೂ ಒಳ ಗೊಳಗೇ ಒಂದು' – ಎಂದು ಕುಪ್ಪಣ್ಣಯ್ಯಂಗಾರರು ಮೆಲ್ಲಗೆ ಹೇಳಿದರೆ ರಾಜ ಯ್ಯಂಗಾರರು, 'ಅದಲ್ಲ ಪ್ಯಾಂಟು. ಇದು ಶುದ್ಧ ವಿಷ್ಣುವಿನ ಗುಡಿ ಅಂತ ಸಿದ್ಧ ವಾದರೆ ಪೂಜೆ ಎಲ್ಲಿ ತನಗೆ ತಪ್ಪಿ ನಮ್ಮ ಜನದ ಕೈಗೆ ಬರುತ್ತೋ ಅಂತ ವೆಂಕ-ಟೇಶನ ತಂತ್ರ. ನರಿಯಂಥೋನು ಅವ' ಎಂದರು. ಅಷ್ಟರಲ್ಲಿ ಸಭೆ ಮತ್ತೆ ಆರಂಭವಾಯಿತು.

ಮೊದಲು ವಾಲ್ಮೀಕಿ ಬ್ರಾಹ್ಮಣರಾಗಬಯಸಿದ ಬೇಡರ ಮಲ್ಲನಾಯಕ ಎದ್ದು ನಿಂತ. ಅವನಿಗೆ ಅನುಕೂಲವಾಗುವಂತೆ ವೆಂಕಟೇಶ ಒಂದು ಶ್ಲೋಕ ಹೇಳಿದ ನಾದರೂ, 'ಅವರು ವಾಲ್ಮೀಕಿ ಎಂದುಕೊಳ್ಳಬಹುದು. ಬ್ರಾಹ್ಮಣ ಅನ್ನುವ ಹಾಗಿಲ್ಲ' ಎಂದ.

'ಎಂದರೆ ವಾಲ್ಮೀಕಿ ರುಸಿ ಬ್ರಾಂಬ್ರಲ್ಲವೆ?' – ನಾಯಕ ಕೇಳಿದ.

ವೆಂಕಟೇಶ ಎಂದ: 'ಈಗ ಯಾರ್ಯಾರು ಯಾವ್ಯಾವ ಹೆಸರು ಕೇಳ್ತಾರೋ ಮೊದಲು ನಿಶ್ಚಯವಾಗ್ಲಿ. ಆಮೇಲೆ ಅವರೆಲ್ಲ ಬ್ರಾಹ್ಮಣರು ಹೌದೇ ಅಲ್ಲವೇ, ಹೌದಾದರೆ ಯಾವ ಅಂತಸ್ತಿನ ಬ್ರಾಹ್ಮಣರು, ಅನ್ನೋದನ್ನ ಸಭೆ ಆಮೇಲೆ ತೀರ್ಮಾನ ಮಾಡುತ್ತೆ. ವಿಶ್ವಕರ್ಮರು, ಸಾತಾನಿಗಳು, ಕಾಳಿದಾಸರು ಹೀಗೆ

ನಿ ಇನ್ನೂ ಎಷ್ಟೋ ಜನರ ಮೂಲಪುರುಷರು ಬ್ರಾಹ್ಮಣರಾಗಿದ್ದರು. ಈಗ ಸೌದ್ರೇ ಗೌಡರು ಎದ್ದು ನಿಲ್ಲಬೇಕು.'

ತಮ್ಮ ಅಂತಸ್ತು ಇನ್ನೂ ಪೂರ್ಣ ಸಿಕ್ಕದುದರಿಂದ ಮಲ್ಲನಾಯಕನಿಗೆ ಸಿಟ್ಟು ಬಂತು. ಆದರೆ ಅದು ಕೊನೆಯಲ್ಲಿ ಎಲ್ಲ ಒಟ್ಟಿಗೆ ತೀರ್ಮಾನವಾಗಬೇಕಾದ ವಿಷಯವೆಂದಾಗ ಅವನು ಸುಮ್ಮನೆ ಕುಳಿತ.

ಮಗ್ನತೆಯಿಂದ ಈ ಇತಿಹಾಸವನ್ನು ನೋಡುತ್ತಾ ಕುಳಿತಿದ್ದ ಸತ್ಯಳ ಮನಸ್ಸು ಸಹಸ್ರಾರು ವರ್ಷಗಳ ವೈಶಾಲ್ಯಕ್ಕೆ ಹರಡಿತ್ತು. ಕಳೆದ ಮೂರೂವರೆ ತಿಂಗಳಿನಿಂದ ತಾನು ಗ್ರಂಥ ಭಂಡಾರದಲ್ಲಿ ಕಾಣುತ್ತಿದ್ದ ಚಿತ್ರವು ಕಣ್ಣುಮುಂದೆ ಚಲಿಸುತ್ತಿತ್ತು. 'ಬ್ರಾಹ್ಮಣನಾಗಬೇಕೆಂಬ ಬಯಕೆ. ಬ್ರಾಹ್ಮಣ ಹೆಚ್ಚೋ ಕ್ಷತ್ರಿಯ ಹೆಚ್ಚೋ' ಎಂಬ ಜಗಳ. ಅವರವರಲ್ಲೇ ಒಪ್ಪಂದ. ಆಳುವವನು ಪೃಥ್ವೀಪತಿ, ದೇವರ ಸಮಾನ. ಅವನಿಗೂ ಯಜ್ಞೋಪವಿತ ಧಾರಣೆಯ ಅಧಿಕಾರ. ಈ ದೇಶಕ್ಕೆ ಹೊರಗಿನಿಂದ ನುಗ್ಗಿಬಂದು ಆಳಿದ ಗುಂಪುಗಳೆಷ್ಟು? ಶಕರು, ಪಾಹಲವರು, ಯವನರು, ಹೂಣರು, ಕುಶಾನರು, ವತ್ಸರಾಜ, ಇಮ್ಮಡಿ ನಾಗಭಟ್ಟ, ಧರ್ಮಪಾಲ, ಭೋಜ, ಜಯಪಾಲ, ರಾಜ್ಯಪಾಲ ಮೊದಲಾದ ಹೆಸರಿನಿಂದ ಹಿಂದೂಗಳಾದ ಗುರ್ಜರ ಪ್ರತಿಹಾರರು, ವಾಸುದೇವನ ಭಕ್ತನಾದ ಗ್ರೀಸ್ ರಾಯಭಾರಿ ಹೆಲಿಯೋ ಡೋರಸ್....ಅವರೆಲ್ಲ ಕ್ಷತ್ರಿಯರಾದರು. ಯಜ್ಞೋಪವೀತಧಾರಿ ಪೃಥ್ವೀಪತಿಗಳಾದರು. ವಿಷ್ಣುಸಮಾನರೆನಿಸಿಕೊಂಡರು. ಆಳುವವನೇ ದೇವರು. ಒಂದು ಉಪಜಾತಿಯ ಅಂತಸ್ತನ್ನು ಚತುರ್ವರ್ಣದ ಕಟ್ಟಿನೊಳಗೆ ಏರಿಸುವ ಅಥವಾ ಇಳಿಸುವ ಅಧಿಕಾರ ರಾಜನದಾಗಿತ್ತು. ಅದಕ್ಕೆ ಶಾಸ್ತ್ರಾಧಾರ ಒದಗಿಸುತ್ತಿದ್ದವರು ಬ್ರಾಹ್ಮಣರು. ಧನ ಕನಕ ಗೋವುಗಳಿಂದ ಬ್ರಾಹ್ಮಣರನ್ನು ತೃಪ್ತಿಗೊಳಿಸಿ ಶಾಸ್ತ್ರವನ್ನು ಯಾರಾದರೂ ತಮಗೆ ಬೇಕಾದಂತೆ ಬದಲಿಸಿಕೊಳ್ಳಬಹುದಾಗಿತ್ತು. ಹೊರಗಿನಿಂದ ದಂಡೆತ್ತಿಬಂದು ಗೆದ್ದವರಿಗೆಲ್ಲ ಕ್ಷತ್ರಿಯ ಪಟ್ಟಕಟ್ಟಿ ಸೂರ್ಯವಂಶೀಯ, ಚಂದ್ರವಂಶೀಯ, ವಿಷ್ಣುವಂಶೀಯ, ರಘುವಂಶೀಯ ಎಂದು ದ್ವಿಜಜಾತ ಸಂಬಂಧದ ಶಾಸ್ತ್ರ ಪುರಾಣಗಳ ಸೃಷ್ಟಿಯಾಯಿತು. ಕಳೆದ ಎರಡು ಸಾವಿರ ವರ್ಷಗಳಿಂದ ಈ ದೇಶದಲ್ಲಿ ಯಾವ ಮೂಲಕ್ಷತ್ರಿಯನೂ ಆಳಿಲ್ಲ. ಬಾಹುಬಲದಿಂದ ಆಳುವವನೇ ಕ್ಷತ್ರಿಯನೆನಿಸಿಕೊಂಡ. ಹಾಗೆಯೇ ಮೂಲ ಬ್ರಾಹ್ಮಣರು ಯಾರು? ಮಂತ್ರ ಕಲಿತವರೆಲ್ಲ ಕಾಲಾನುಕ್ರಮದಲ್ಲಿ ರಾಜನಿಂದ ಬ್ರಾಹ್ಮಣ ಮುದ್ರೆ ಪಡೆದರು: ಬ್ರಾಹ್ಮಣರಾದರು. ಎಲ್ಲರೂ ಮೂಲಬ್ರಾಹ್ಮಣರೇ ಆದರೆ ಅದರೊಳಗೆ ಯಾಕೆ ಇಷ್ಟೊಂದು ಬೆಡಗು, ವ್ಯತ್ಯಾಸಗಳು? ಈಜಿಪ್ಟಿನಿಂದ ಹಡಗಿನಲ್ಲಿ ಬಂದವರು ವೇದವಿದ್ಯೆ ಕಲಿತು ನಾಗರ ಬ್ರಾಹ್ಮಣರಾದರಂತೆ.

ಇರಾನಿನಿಂದ ಬಂದವರು ಚಿತ್ತಪಾವನ ಬ್ರಾಹ್ಮಣರಾದರಂತೆ. ಒಂದೊಂದು ಗುಂಪೂ ಪ್ರತ್ಯೇಕವಾಗಿ ಬ್ರಾಹ್ಮಣಿಕೆಯ ಪಟ್ಟ ಗಿಟ್ಟಿಸಿಕೊಂಡಿತು. ಕದ್ದು ವೇದ ವಿದ್ಯೆ ಕಲಿತು ಬ್ರಾಹ್ಮಣ ಹುಡುಗಿಯನ್ನು ಮದುವೆಯಾದ ಮಾರಮ್ಮನ ಗಂಡ ಮಾಡಿದುದೂ ಇದೇ ಪ್ರಯತ್ನ: ಬ್ರಾಹ್ಮಣನಾಗುವ ಪ್ರಯತ್ನ.

ಈ ಇಡೀ ಇತಿಹಾಸವು ಯಾವ ದಿಕ್ಕಿನಲ್ಲಿ ಹೆಣಗುತ್ತಿದೆ? ಬ್ರಾಹ್ಮಣನಾಗಬೇಕೆಂಬ ಬಯಕೆ. ಯಾವ ಮಾರ್ಗವಾದರೂ ಸರಿ, ಬ್ರಾಹ್ಮಣನೆನಿಸಿಕೊಳ್ಳಬೇಕೆಂಬ ಪ್ರಯತ್ನ. ಬ್ರಾಹ್ಮಣಪಂಥವನ್ನು ಧಿಕ್ಕರಿಸಿದವರು ಸಹ ತಾವೇ ಒಂದು ಗುಂಪಾಗಿ, ಮುಂದೆ ಅವರಿಗಿಂತ ತಾವು ಉತ್ತಮರೆಂದುಕೊಂಡು ಆ ಬ್ರಾಹ್ಮಣಿಕೆಯನ್ನು ಬೇರೊಂದು ರೂಪದಲ್ಲಿ ಅನುಸರಿಸಿದರು. ಈ ಪ್ರಭಾವ, ಈ ಪರಿಕ್ರಮ, ಯಾರನ್ನೂ ಯಾವ ಗುಂಪನ್ನೂ ಬಿಡಲಿಲ್ಲ. ಎಂತಹ ಅದಮ್ಯ ಆಕರ್ಷಣೆ, ಪ್ರಚಂಡ ಶಕ್ತಿ ಇದು? ಈ ಬ್ರಹ್ಮತತ್ವದ ಶಕ್ತಿ ಎಂಥದು?

ಸತ್ಯಳ ಬುದ್ಧಿ, ತಾನು ಓದಿದ ಉಪನಿಷತ್ತುಗಳನ್ನು ನೆನೆಸಿಕೊಂಡಿತು. ಚರಾಚರವಸ್ತುಗಳೆಲ್ಲವೂ ಬ್ರಹ್ಮವೇ. ಪ್ರತಿಯೊಂದು ಜೀವವೂ ಬ್ರಹ್ಮವೇ. ಪ್ರತಿಯೊಂದು ಆತ್ಮವೂ ಬ್ರಹ್ಮದ ಅಂಶವೇ. ಭೇದ ಬೇಡ. ದ್ವೈತ ಬೇಡ. ಅವನೇ ನೀನು, ನೀನೇ ಅವನು. ದೇಶ ಕಾಲ ಭೇದಗಳೆಲ್ಲ ಮಿಥ್ಯ. ಬ್ರಹ್ಮವೇ ಸತ್ಯ. ಅದಕ್ಕೆ ಲಿಂಗವಿಲ್ಲ, ಜಾತಿ ಇಲ್ಲ, ವರ್ಣವಿಲ್ಲ. ಹಾಗಿರುವಾಗ ವರ್ಣಭೇದವು ಹೇಗೆ ಹುಟ್ಟಿತು? ಬ್ರಹ್ಮಜ್ಞಾನವು ಅದನ್ನು ಪ್ರತಿಪಾದಿಸುವವರ ಮನೋಬುದ್ಧಿ ಪ್ರಜ್ಞೆಗಳಲ್ಲಿ ಪೂರ್ಣವಾಗಿ ಬೆಳಗಲಿಲ್ಲವೋ ಅಥವಾ ಭೇದಸಿದ್ಧಾಂತದೊಡನೆ ರಾಜಿ ಮಾಡಿಕೊಂಡು ಈ ತತ್ವವು ಉಚ್ಚಕಂಠದಲ್ಲಿ ಘೋಷಣೆ ಮಾಡುತ್ತಿತ್ತೋ? ವರ್ಣಧರ್ಮವೆಂಬ ರೂಪದಲ್ಲಿ ಮಿಥ್ಯೆಯು ಬ್ರಹ್ಮಸತ್ಯವನ್ನು ಕಬಳಿಸಿತು; ಅಭೇದ, ಅದ್ವೈತವನ್ನು ಕಾಣಲಿಲ್ಲ. ವ್ಯಾವಹಾರಿಕ ಪಾರಮಾರ್ಥಿಕಗಳೆಂಬ ನೆಪದಲ್ಲಿ ಮಿಥ್ಯೆಯನ್ನೇ ಪುನಃ ಪ್ರತಿಷ್ಠಾಪಿಸಿದರು. ಶೂದ್ರತತ್ವವನ್ನು ಸುತ್ತಮುತ್ತಲೂ ಘೋಷಿಸುವ ಸಮಾಜರಚನೆಯನ್ನು ಎತ್ತಿಹಿಡಿದು ಬ್ರಹ್ಮದ ಉಸಿರು ಕಟ್ಟಿಸಿದರು. ಶೂದ್ರತ್ವವು ತನ್ನತನವನ್ನು ಕಳೆದುಕೊಂಡು ಬ್ರಹ್ಮವಾಗಲು ಪ್ರಯತ್ನಿಸುತ್ತಿದೆ. ಆದರೆ ಅದೇ ಶೂದ್ರತ್ವವು ಬೇರೊಂದು ರೂಪ ತಾಳಿ ಬ್ರಹ್ಮದ ಸೋಗು ಹಾಕಿ ಅದನ್ನು ವಿರೋಧಿಸುತ್ತಿದೆ. ಬ್ರಹ್ಮನಾಗಬಯಸುವವರನ್ನು ವಿರೋಧಿಸುವವರೆಲ್ಲ ಶೂದ್ರರು, ಪರಮ ಶೂದ್ರರು. ಮೂರು ಸಾವಿರ ವರ್ಷಗಳಿಂದ ಇದುವರೆಗೆ, ಇಲ್ಲಿ ಎದುರಿಗೆ ನಡೆಯುತ್ತಿರುವ ಪುನರ್ಘಟನೆಯವರೆಗೆ ಇದೇ ಇತಿಹಾಸವು ನಡೆಯುತ್ತಿದೆ.

ಸತ್ಯ ಕೂತಲ್ಲಿಂದ ಎದ್ದಳು. ಜಾಗ ಮಾಡಿಕೊಂಡು ದಿಬ್ಬವನ್ನು ಹತ್ತಿ

ಏರಲು ಆರಂಭಿಸಿದಳು. ಜನವೆಲ್ಲ ಅವಳನ್ನೇ ನೋಡುತ್ತಿತ್ತು. ವೆಂಕಟೇಶ ದಿಙ್ಮೂಢನಾಗಿ ನಿಂತುಬಿಟ್ಟ. ಹೋಗಿ ಜಗುಲಿಯನ್ನು ಹತ್ತಿ ಅವನ ಪಕ್ಕದಲ್ಲಿ ನಿಂತು ಅವಳು ಗಟ್ಟಿಯಾಗಿ ಕಿರುಚಿದಳು: 'ಬ್ರಾಹ್ಮಣರಾಗಬೇಕು ಅಂತ ಯಾರು ಯಾರಿಗೆ ಆಶೆ ಇದೆಯೋ ಅವರೆಲ್ಲ ಬ್ರಾಹ್ಮಣರು. ಅದನ್ನ ಎರಡನೆಯೋರು ಒಪ್ಪಬೇಕು ಅಂತ ಏನಿಲ್ಲ. ಮಲ್ಲನಾಯಕ, ಸೌದ್ರೇಗೌಡ, ಬೆಟ್ಟಯ್ಯನವರು, ಕೊರಚ, ಕುಳವಾಡಿ, ತಳವಾರ, ನೀರಗಂಟಿ, ಎಲ್ಲರೂ ಬ್ರಾಹ್ಮಣರೇ. ಯಾವ ಸಭೆಯ ಅಪ್ಪಣೆಯೂ ಬೇಕಿಲ್ಲ. ಇದೇ ನಿಜವಾದ ಬ್ರಾಹ್ಮಣತತ್ವ, ಬ್ರಾಹ್ಮಣಶಾಸ್ತ್ರ.'

ಜನವೆಲ್ಲ ಸ್ತಬ್ಧರಾಗಿದ್ದರು. 'ಸತ್ಯ, ನಿಂಗೇನು ಬುದ್ಧಿಗಿದ್ದಿ ನೆಟ್ಟಗಿದೆಯೋ ಇಲ್ಲವೋ?' – ಎಂದು ಪಕ್ಕದಲ್ಲಿ ನಿಂತಿದ್ದ ವೆಂಕಟೇಶ ಕೇಳಿದ. ಸತ್ಯಳಿಗೆ ವಾಸ್ತವತೆಯ ಪ್ರಜ್ಞೆ ಬಂತು. ತಾನು ಎಲ್ಲಿದ್ದೇನೆ, ಏನು ಆಡಿದ್ದೇನೆ ಎಂಬ ನೆನಪಾಯಿತು. ಒಂದು ನಿಮಿಷ ನಾಚಿಕೆ, ಅಷ್ಟು ಜನರೆದುರು ನಿಂತಿರುವ ಸಭಾಕಂಪ, ಮತ್ತು ಮುಂದೆ ಹೇಗೆ ನಿಭಾಯಿಸಬೇಕೆಂಬುದು ತಿಳಿಯದ ಸಂಭ್ರಾಂತಿಯಲ್ಲಿ ಸಿಕ್ಕಿಬಿದ್ದಳು. ಅವಳು ಇಲ್ಲಿಗೆ ಬಂದಿದ್ದುದು ಇತಿಹಾಸವನ್ನು ನೋಡಲು. ಭಾಗವಹಿಸದ ಪ್ರೇಕ್ಷಕಿಯಾದಾಗ ಮಾತ್ರವೇ ಇತಿಹಾಸದ ಎಲ್ಲ ಮುಖಗಳೂ ನಿಷ್ಪಕ್ಷಪಾತವಾಗಿ ಕಾಣುವುದು ಎಂದು ಅವಳು ನಂಬಿದ್ದಳು. ಆದರೆ ಇತಿಹಾಸಜ್ಞಳ ಪ್ರಜ್ಞೆಯು ಮಾಯವಾಗಿ ಅದು ಯಾವುದೋ ಬೇರೊಂದು ಪ್ರಜ್ಞೆಗೆ ಸಿಕ್ಕಿ ತಾನು ಈ ಇತಿಹಾಸದ ಒಂದು ಭಾಗವಾಗಿ ಸಕ್ರಿಯಳಾಗಿ ನಿಂತಿರುವ ಅರಿವುಂಟಾಯಿತು. ಇಲ್ಲಿಂದ ಇಳಿದು ಕೆಳಗೆ ಹೋಗಿ ತನ್ನ ಜಾಗದಲ್ಲಿ ಕುಳಿತುಕೊಳ್ಳಬೇಕೆನಿಸಿತು. ಅಷ್ಟರಲ್ಲಿ ವೆಂಕಟೇಶ ಮತ್ತೆ ಹೇಳಿದ: 'ಇಲ್ಲಿಂದ ಇಳಿದು ನಡಿ. ನಿನ್ನ ಜಾಗವಲ್ಲ ಇದು.'

ತಕ್ಷಣ ಅವಳಲ್ಲಿ ಒಂದು ವಿರೋಧ ಶಕ್ತಿ ಹುಟ್ಟಿತು. ಅದೇಕೆ ಇದು ತನ್ನ ಜಾಗವಾಗಬಾರದು? ಈ ಜನಕ್ಕೆ ಸತ್ಯವನ್ನು ಹೇಳಿಯೇ ಬಿಡಬೇಕು ಎನಿಸಿ ಗಟ್ಟಿಯಾಗಿ ಕೂಗಿದಳು: 'ಬ್ರಾಹ್ಮಣಿಕೆಯಲ್ಲಿ ಎರಡು ನಿಯಮಗಳಿವೆ. ಆತ್ಮಜ್ಞಾನ ಸ್ವರೂಪದ್ದು. ವೇದ ಅಂದರೆ ಜ್ಞಾನ. ಅಂದರೆ ಪ್ರತಿಯೊಂದು ಆತ್ಮಕ್ಕೂ ಜ್ಞಾನದ, ಅಂದರೆ ಅದನ್ನು ಪಡೆಯುವ, ಅಂದರೆ ವೇದಾಧ್ಯಯನದ ಅಧಿಕಾರವಿದೆ. ಅಂದರೆ ಪ್ರತಿಯೊಬ್ಬನಿಗೂ ಬ್ರಾಹ್ಮಣನಾಗುವ ಅಧಿಕಾರವಿದೆ. ಅಧಿಕಾರ ಕೊಡಿ ಅಂತ ಕೇಳಿದರೆ ಸಿಕ್ಕೋದಲ್ಲ, ಚಲಾಯಿಸಬೇಕು. ನೀವೆಲ್ಲ ಚಲಾಯಿಸಿ. ನೀವೆಲ್ಲ ಬ್ರಾಹ್ಮಣರೇ.'

'ಬರೀ ಹುಟ್ಟಿನಿಂದ ಜ್ಞಾನ ಹ್ಯಾಗೆ ಬರುತ್ತೆ? ಉಪದೇಶ ಮಾಡೋರು ಯಾರು?' – ವೆಂಕಟೇಶ ಕೇಳಿದ.

'ಉಪದೇಶ ಅನ್ನೂ ಸಂಸ್ಕಾರವೇ ಬೇಕಾಗಿದ್ದರೆ ಎಲ್ಲರಿಗೂ ಮಾಡಬೇಕು. ಹೆಂಗಸು ಗಂಡಸು ಅನ್ನುವ ವ್ಯತ್ಯಾಸವಿಲ್ಲದೆ ಮಾಡಬೇಕು.'

'ಹೆಂಗಸಿಗೆ ವೇದಾಧ್ಯಯನದ ಅಧಿಕಾರವಿಲ್ಲ.'

'ಯಾಕಿಲ್ಲ? ಬ್ರಾಹ್ಮಣರು ಮೊದಲು ಉಳಿದವರನ್ನೆಲ್ಲ ಶೂದ್ರರಾಗಿ ಉಳಿಸಿ, ಆಮೇಲೆ ತಮ್ಮ ಹೆಂಗಸರನ್ನೇ ಶೂದ್ರತ್ವಕ್ಕೆ ಇಳಿಸಿದರು. ಕೇಳಿ. ಇಲ್ಲಿ ಇರುವ ಹೆಂಗಸರು ಗಂಡುಸರಾದಿಯಾಗಿ ಎಲ್ಲರಿಗೂ ನಾನು ಬೇಕಾದರೆ ಬ್ರಹ್ಮೋಪದೇಶ ಮಾಡ್ತೀನಿ. ಮಾಡುವ ಅಧಿಕಾರ ನನಗಿದೆ. ನನಗೆ ಯಜ್ಞೋಪವೀತ ಧಾರಣೆ ಯಾಗಿದೆ. ನನ್ನ ತಂದೆ ತೋಟದ ಆಶ್ರಮದಲ್ಲಿ ಹವನ ಮಾಡ್ತಿದ್ದಾಗ ನನಗೆ ಬ್ರಹ್ಮೋಪದೇಶ ಮಾಡಿದರು. ಸಾಕ್ಷಿಗೆ ಇಲ್ಲಿ ನೋಡಿ' – ಎಂದು ಅವಳು, ತನ್ನ ಬಲಗೈ ಬೆರಳಿನಿಂದ ಎಡಹೆಗಲಿನ ರವಿಕೆಗೆ ಕೈಹಾಕಿ ಮೂರೆಳೆಯ ಜನಿವಾರವನ್ನು ಎಳೆದು ತೋರಿಸಿದಳು. ಅನಂತರ ಮತ್ತೆ ಕೂಗಿ ಹೇಳಿದಳು: 'ಇದೇ ದೇವಸ್ಥಾನದ ಮುಂದೆ ಹವನಕುಂಡ ಮಾಡಿ. ಬ್ರಾಹ್ಮಣರಾಗುವ ಆಸೆ ಇರೋರೆಲ್ಲ ಸ್ನಾನ ಮಾಡಿ ಬನ್ನಿ. ನಾನು ಒಬ್ಬೊಬ್ಬರಿಗಾಗಿ ಯಜ್ಞೋಪವೀತ ಹಾಕಿ ಬ್ರಹ್ಮೋಪ ದೇಶ ಮಾಡ್ತೀನಿ. ಯಾರ್‍ಯಾರು ಬೇಕು ಕೈ ಎತ್ತಿ; ಅಥವಾ ಎದ್ದು ನಿಲ್ಲಿ.'

ಯಾರೂ ಕೈ ಎತ್ತಲಿಲ್ಲ; ಯಾರೂ ಎದ್ದು ನಿಲ್ಲಲಿಲ್ಲ. ಆದರೆ ಒಂದು ನಿಮಿಷ ದಲ್ಲಿ, ವಾಲ್ಮೀಕಿಯಾಗಬಯಸಿದ ಬೇಡರ ಮಲ್ಲನಾಯಕ ಎದ್ದುನಿಂತು ಹೇಳಿದ: 'ಈಸಮ್ಮನಿಗೆ ಹುಚ್ಚು ಹಿಡಿದೈತೆ ಕಣ್ರೀ.'

ಗರುಡಯ್ಯಂಗಾರರು ಅಷ್ಟೇ ಗಟ್ಟಿಯಾಗಿ ಜೋಡಿಸಿದರು: 'ಹೆಂಗಸು ಜನಿವಾರ ಹಾಕ್ಕಂಡಿರೂದು ಅಂದರೆ ಹುಚ್ಚು ಹಿಡಿದಿರೂದೇ ನಿಜ.'

'ಇಲ್ಲ. ನಾನು ಸತ್ಯ ಹೇಳ್ತೀನಿ ಕೇಳಿ' – ಸತ್ಯ ಕೂಗಿದಳು.

ವೆಂಕಟೇಶನಿಗೆ ಗಾಬರಿಯಾಯಿತು. ತಕ್ಷಣ ಹೇಳಿದ: 'ಹುಚ್ಚು ಹಿಡಿದಿದ್ದ ನಮ್ಮ ಅಪ್ಪ ಇದ್ದ ತ್ವಾಟದಲ್ಲೇ ಹಗಲೂ ರಾತ್ರಿ ಇರ್ತಾಳೆ. ಬ್ಯಾಡ ಅಂದ್ರೂ ಕೇಳುಲ್ಲ.'

'ಮುಂಗಟ್ರಮಣಯ್ಯನ ದೆವ್ವ ಬಡಿದೈತೆ. ಈ ಹುಡುಗೀನ ಕರ್ಕಂಡು ಹ್ವಾಗಿ ಕಳಿಸಿ' – ಎಂದು ಸಭೆಯ ದೊರೆಯಾಗಿದ್ದ ದೊಡ್ಡ ಪಟೇಲರು ಹೇಳಿ ಬಿಟ್ಟರು.

ಸತ್ಯಳಿಗೆ ಪ್ರಚಂಡ ಕೋಪ ಬಂತು. ಮಾತನಾಡಲು ತುಟಿ ಚಲಿಸುತ್ತಿತ್ತು. ಆದರೆ ಒಂದು ಮಾತೂ ಬಾರದಂತೆ ಆಗಿತ್ತು. ತಲೆ ಶೂನ್ಯವಾಗಿಹೋಗಿತ್ತು. ತಲೆ ಸುತ್ತಿ ಬಂದಂತೆ ಆಯಿತು. ತಾನು ಈಗ ಕೆಳಗೆ ಬಿದ್ದುಬಿಡುತ್ತೇನೆಂಬ ಅರಿ ವಾಯಿತು. ಆದರೆ ಜಗುಲಿಯಿಂದ ಕೆಳಗೆ ಇಳಿದು ಕುಳಿತುಕೊಳ್ಳಬೇಕೆನ್ನುವುದ

ರೊಳಗೇ ಕುಸಿದುಬಿಟ್ಟಳು. ಜನವೆಲ್ಲ, 'ಸತ್ಹೋಯ್ತು, ಸತ್ಹೋಯ್ತು. ದೆವ್ವ ಬಡ್ಕಂತು' – ಎನ್ನುತ್ತಾ ಎದ್ದುನಿಂತರು.

'ತಲೆಗೆ ತಟ್ಟುಕ್ಕೆ ನೀರು ತನ್ನಿ' – ಎಂದು ಹೇಳಿ, ಸುತ್ತ ಸೇರಿದವರನ್ನು ಗದರಿಸಿ ದೂರ ಕಳಿಸಿ ವೆಂಕಟೇಶ ಗಾಳಿ ಹಾಕಿದ. ನರಸಿಂಹ ಜೋಯಿಸರು ಒಳಗಿನಿಂದ ಒಂದು ಚೊಂಬು ನೀರು ತಂದು ತಲೆಗೆ ತಟ್ಟಿದರು. ಐದು ನಿಮಿಷ ದಲ್ಲಿ ಅವಳಿಗೆ ಪ್ರಜ್ಞೆ ಬಂತು. 'ದೇವರ ತೀರ್ಥ ಆಕಿದ ವ್ಯಾಲೆ ದೆವ್ವ ಬುಡ್ತು' – ಎನ್ನುತ್ತಾ ಜನರು ಆಶ್ಚರ್ಯಪಟ್ಟರು. ಸತ್ಯಳಿಗೆ ನಾಚಿಕೆ ಎನಿಸಿತು. ತಕ್ಷಣ ಎದ್ದು ಹೊರಟಳು. 'ಬಿದ್ದೀಯ, ತಡಿ' – ಎಂದು ವೆಂಕಟೇಶ ತೋಳು ಹಿಡಿದು ಕೊಂಡ. ಸಿಟ್ಟಿನಿಂದ ಕೊಸರಿ ಅವನ ಕೈಯನ್ನು ಬಿಡಿಸಿಕೊಂಡು ಅವಳು ದೇವ ಸ್ಥಾನದ ಹಿಂಭಾಗಕ್ಕೆ ನಡೆದು ಅಲ್ಲಿ ದಿಬ್ಬವನ್ನು ಇಳಿದು ಕಾಲುವೆಯ ಕಡೆ ತಿರುಗಿ, ಕಾಲುವೆಯ ದಡದಲ್ಲಿ ನಡೆದು ತೋಟವನ್ನು ಸೇರಿದಳು. ಸುಮ್ಮನೆ ನೋಡುತ್ತಾ ಕುಳಿತಿದ್ದ ತಾನು ಯಾವ ಕ್ಷಣದಲ್ಲಿ ಹೇಗೆ ಸಭಾಪೀಠವನ್ನು ಹತ್ತಿ ನಿಂತೆ, ಹೇಗೆ ಮಾತನ್ನು ಶುರುಮಾಡಿದೆ ಎಂಬುದು ಎಷ್ಟು ಜ್ಞಾಪಿಸಿಕೊಂಡರೂ ತಿಳಿಯಲಿಲ್ಲ. ಕೊಳದಲ್ಲಿ ಮುಖ ಕೈ ಕಾಲುಗಳನ್ನು ತೊಳೆದುಕೊಂಡು ದಡದಲ್ಲಿ ಸುಮ್ಮನೆ ಕುಳಿತಳು. ಅಲ್ಲಿ ಉಂಟಾಗಿದ್ದ ನಾಚಿಕೆ ಮತ್ತು ಅವಮಾನಗಳು ಈಗ ಕಡಿಮೆ ಯಾಗಿದ್ದುವು. ಅದೇ ಸಮಯದಲ್ಲಿ ಯಾಕೆ ತಲೆ ಸುತ್ತಿ ಬಂತು ಎಂದು ವಿಷಾದ ಪೂರ್ವಕ ಆಶ್ಚರ್ಯಪಡುತ್ತಾ ಸುಮ್ಮನೆ ಕುಳಿತಿದ್ದಳು. ತಾನು ಆ ಸಭೆಯ ಎದುರಿಗೆ ನಿಂತು ಗಟ್ಟಿಯಾಗಿ ಹೇಳಿದ ಮಾತುಗಳ ನೆನಪಾಯಿತು. ನನಗೆ ಬ್ರಹ್ಮೋಪದೇಶವಾಗಿದೆ ಎಂದು ಹೇಳಿದ ನೆನಪಿನ ಜೊತೆಗೇ, ಅಪ್ಪ ಸತ್ತನಂತರ ತಾನು ಹವನವನ್ನೇ ಮಾಡಿಲ್ಲವಲ್ಲ ಎಂಬ ಅರಿವಾಯಿತು. ಶಾಂತಪ್ಪಶೆಟ್ಟರು ಹೇಳು ವಂತೆ ಚತುರ್ವರ್ಣವು ಈ ವಿಷ್ಣುದೇವರ ಕಲ್ಪನೆಗೆ ಅಂಟಿ ಬೆಳೆದಿರಬಹುದು. ಲಿಂಗಕ್ಕೆ ತಲೆ, ರಟ್ಟೆ, ಹೊಟ್ಟೆ, ಯಾವುದೂ ಇಲ್ಲದಿರಬಹುದು. ಇವೆಲ್ಲಕ್ಕಿಂತ ಆದಿಯಾದ ಹವನದಲ್ಲಿ ಅವಳಿಗೆ ವಿಶೇಷ ಆಕರ್ಷಣೆ ಕಾಣಿಸಿತು. ತಾನು ಇನ್ನು ಮೇಲೆ ದಿನಾ ಹವನ ಮಾಡಬೇಕೆನಿಸಿತು. ಆ ದಿನದಿಂದಲೇ ಆರಂಭಿಸಬೇಕೆಂದು ನಿಶ್ಚಯಿಸಿ, ಸಮಿತ್ತುಗಳನ್ನು ಶೇಖರಿಸಲು ಕುಡುಗೋಲು ತೆಗೆದುಕೊಂಡು ಬೇಲಿಯ ದಡದಲ್ಲಿದ್ದ ಮರಗಳ ಕೆಳಕ್ಕೆ ಹೋಗಿ, ಒಣಗಿ ಬಿದ್ದಿದ್ದ ಕೆಲವು ಕೊನೆ ಗಳನ್ನು ಕ್ರಮವಾಗಿ ಕಡಿದು ಜೋಡಿಸಲು ಆರಂಭಿಸಿದಳು. ಸ್ವಲ್ಪ ಹೊತ್ತಿನಲ್ಲಿ ದೊಡ್ಡ ಗದ್ದಲ ಕೇಳಿಸಿತು. ಆ ಕಡೆಗೆ ಕಿವಿಗೊಟ್ಟು ಆಲಿಸಿದಳು. ದೇವಸ್ಥಾನದ ಹತ್ತಿರ ದೊಡ್ಡ ಜಗಳ ಅಥವಾ ಹೊಡೆದಾಟವಾಗುತ್ತಿರುವಂತೆ ಅನಿಸಿತು. ಎದ್ದು ಹೊಳೆಬಾಗಿಲಿನತನಕ ಹೋಗಿ ನೋಡುತ್ತಾಳೆ: ಅಲ್ಲಿ ನಿಜವಾಗಿಯೂ ಹೊಡೆದಾಟ

ವಾಗುತ್ತಿದೆ. ಹೆಂಗಸರು ಮಕ್ಕಳು ಮತ್ತು ಕೈಲಾಗದವರು ಗದ್ದೆಯ ಹಳ್ಳ, ಕಾಲುವೆಯ ದಡ, ಕೆರೆಯ ಏರಿ, ಊರಿನ ಕಡೆ, ಹೀಗೆ ಒಂದೊಂದು ದಿಕ್ಕಿಗೂ ಹೆದರಿ ಚದುರಿ ಓಡುತ್ತಿದ್ದಾರೆ. ತಾನು ಹತ್ತಿರ ಹೋಗಿ ನೋಡಬೇಕೆಂಬ ಆಶೆಯಾಯಿತು. ಆದರೆ ಈ ಸಂದರ್ಭದಲ್ಲಿ ಹೋಗುವುದು ಅಪಾಯವೆಂಬ ಅರಿವಾಯಿತು. ಮನಸ್ಸಿನಲ್ಲಿ ತಿರಸ್ಕಾರವೂ ಹುಟ್ಟಿತು. ಹೊಳೆಬಾಗಿಲು ಹಾಕಿಕೊಂಡು ತೋಟದೊಳಕ್ಕೆ ಬಂದಳು.

# ಹದಿಮೂರು

## ೧

ಜನಗಣತಿ ಹತ್ತಿರ ಬರುತ್ತಿದೆ. ಜೊತೆಯಲ್ಲೇ ಮತದಾರರ ಪಟ್ಟಿ ಸಿದ್ಧ ವಾಗುತ್ತಿದೆ. ಇನ್ನು ಆರು ತಿಂಗಳಿಗೆ ಚುನಾವಣೆ. ಮಂತ್ರಿಗಳು ಹೆಚ್ಚುಹೆಚ್ಚಾಗಿ ಊರು ಮತ್ತು ಸುತ್ತಲಿನ ಹಳ್ಳಿಗಳ ಕಡೆ ಶವ್ರೋಲೆ ಕಾರಿನಲ್ಲಿ ಸುತ್ತುತ್ತಾರೆ. ತಾವು ಈ ಸಲ ಸಂಪುಟ-ಸಚಿವರಾಗುವುದು ಸಾಧ್ಯವಿಲ್ಲವೆಂದು ಅವರಿಗೆ ಖಚಿತ ವಾಗಿದೆ. ಈ ಚುನಾವಣೆಯಲ್ಲಿ ತಾವು ಸೋಲುವ ಸಂಭವವೇನಿಲ್ಲ. ಆದರೆ ಮುಂದಿನ ಸಲ ಈ ಉಪಮಂತ್ರಿ ಪದವಾದರೂ ಸಿಕ್ಕುವುದು, ತಾವು ಎಷ್ಟು ಜನ ಎಂ.ಎಲ್.ಎ.ಗಳ ಬೆಂಬಲವನ್ನು ಗಳಿಸುತ್ತೇವೆಂಬುದನ್ನವಲಂಬಿಸುತ್ತದೆ. ಆದುದ ರಿಂದ ತಮ್ಮ ಸುತ್ತಮುತ್ತ ಅಭ್ಯರ್ಥಿಗಳ ಆಯ್ಕೆಯಲ್ಲಿ, ಆಯ್ಕೆಗೊಂಡವರನ್ನು ಗೆಲ್ಲಿಸುವುದರಲ್ಲಿ, ಈಗಿನಿಂದಲೇ ಕಾರ್ಯೋನ್ಮುಖರಾಗಬೇಕು.

ಇದೇ ಸಂದರ್ಭದಲ್ಲಿ ಒಂದು ಶುಭಸೂಚನೆ ಬಂತು. ಹಾಸನ ಜಿಲ್ಲೆಯ ಒಬ್ಬ ಭಾರಿ ಕುಳ. ಅವರ ಮಗಳನ್ನು ಶ್ರೀನಿವಾಸನಿಗೆ ಕೊಡುವುದಾಗಿ ಹೇಳಿ ಕಳಿಸಿದ್ದಾರೆ. ಮುಂದಿನ ಚುನಾವಣೆಗೆ ನಿಲ್ಲುವ ಅಪೇಕ್ಷೆ ಇರುವುದು ಮಾತ್ರ ವಲ್ಲ. ಆ ಜಿಲ್ಲೆಯಲ್ಲಿ ತಮ್ಮ ಮತದಲ್ಲಿಯೇ ಅಲ್ಲದೆ ಉಳಿದ ಮತಗಳಲ್ಲಿ ಕೂಡ ಅವರ ಮಾತು ನಡೆಯುತ್ತದೆ. ಅಂದರೆ ಸಂಬಂಧವಾದರೆ ಮುಂದೆ ಆ ಕಡೆಯ ನಾಲ್ಕೈದು ಜನ ಎಂ.ಎಲ್.ಎ.ಗಳ ಬೆಂಬಲವಾದರೂ ಗ್ಯಾರಂಟಿ. ಹುಡುಗಿ ಯನ್ನು ಅವರು ನೋಡಿಲ್ಲ. ಆದರೆ ಗಟ್ಟಿಗಡಿತವಾಗಿ ಲಕ್ಷಣವಾಗಿದ್ದಾಳೆಂದು ಮಧ್ಯಸ್ಥದವರು ಹೇಳಿದ್ದಾರೆ. ಹೈಸ್ಕೂಲು ಮುಗಿಸಿದ್ದಾಳಂತೆ. ಅವಕ್ಕಿಂತ ಹೆಚ್ಚು ಇನ್ನೇನು ಬೇಕು? – ಎಂದು ಮಂತ್ರಿಗಳು ಲೆಕ್ಕ ಹಾಕಿದರು.

ಆದರೆ ಮನೆಯಲ್ಲಿಯೇ ನಿಜವಾದ ಕಷ್ಟವಿದೆ. ಹೆಂಡತಿ ಸತ್ತ ಮೇಲೆ ಶ್ರೀನಿವಾಸ ಬೆಂಗಳೂರಿಗೆ ಹೆಚ್ಚಾಗಿ ಬರುವುದಿಲ್ಲ. ಬಸ್ಸು ಲಾರಿಯನ್ನು ನೋಡಿ ಕೊಂಡು ತುಮಕೂರಿನಲ್ಲಿದ್ದಾನೆ. ನೋಡಿಕೊಂಡು ಅಂದರೆ ಏನು? ಲೈನು ಚನ್ನಾದದ್ದು. ಹಳ್ಳಿಯ ದಾರಿಗಳಾದರೂ, ಜನ ತುಂಬುತ್ತಾರೆ. ಕಂಡಕ್ಟರು ಡ್ರೈವರು ಲೈನಿಗೆ ನುಕ್ಸಾನು ಮಾಡುವಷ್ಟು ತಿನ್ನದೆ ಕಲೆಕ್ಷನ್ ತಂದು ಒಪ್ಪಿಸು ತ್ತಾರೆ. ಲೆಕ್ಕಪಕ್ಕ ಬರೆಯುಕ್ಕೆ ಗುಮಾಸ್ತರಿದ್ದಾರೆ. ಇವನು ಸುಮ್ಮನೆ ರುಜು ಮಾಡಿಕೊಂಡಿದ್ದಾನೆ. ಏನೂ ಕೆಲಸಮಾಡುವುದಿಲ್ಲವಂತೆ. ಸಿನಿಮಾಕ್ಕೆ ಹೋಗು

ತ್ತಾನಂತೆ. ಇಲ್ಲದಿದ್ದರೆ ಏನೋ ಯೋಚನೆ ಮಾಡುತ್ತಾ ಕೂತಿರುತ್ತಾನಂತೆ. ಅದೂ ಇಲ್ಲದಿದ್ದರೆ ಮಲಗಿ ನಿದ್ದೆ ಮಾಡುತ್ತಾನೆ. ಮದುವೆಯಾಗಿ ರುಚಿ ಕಂಡ ಮೇಲೆ ಈ ಚಿಕ್ಕ ವಯಸ್ಸಿನಲ್ಲಿ ಹೆಂಡತಿ ಇಲ್ಲದಿದ್ದರೆ ಆಗೂದೇ ಹಿಂಗೆ–ಮಂತ್ರಿಗಳು ಎಂದುಕೊಂಡರು.

ಒಂದು ದಿನ ಕಾರಿನಲ್ಲಿ ಹೆಂಡತಿಯನ್ನೇ ಕಳಿಸಿದರು. ಮಗನ ವಿಚಾರದಲ್ಲಿ ರಂಗಮ್ಮ ಗಂಡನಿಗಿಂತ ಹೆಚ್ಚು ಯೋಚಿಸುತ್ತಿದ್ದಳು. ಸೊಸೆ ಸತ್ತು ಎಂಟು ತಿಂಗಳಾಗಿದೆ. ಅಷ್ಟರಲ್ಲಿ ಅವನು ಬೆಂಗಳೂರಿಗೆ ನಾಲ್ಕು ಸಲ ಬಂದಿದ್ದಾನೆ. ಅದೂ ಕಾರನ್ನು ಗೇಟಿನ ಹತ್ತಿರವೇ ನಿಲ್ಲಿಸಿ ಒಳಗೆ ಬಂದು ಒಂದೀಟು ಹೊತ್ತು ಕೂತು ಹೊಂಟುಹೋಗಿದ್ದಾನೆ. ಕೇಳಿದ ಮಾತಿಗೆ ನೆಟ್ಟಗೆ ಜವಾಬಿಲ್ಲ. ಒಂದೊಂದು ಸಲ ನೋಡಿದ್ದಕ್ಕಿಂತ ಬಡವಾಗುತ್ತಿದ್ದಾನೆ. ಸೋಟೆ ಹೀರಿಕೊಂಡು ಒಳಕ್ಕೆ ಹೋಗುತ್ತಿದೆ. ಸಿಗರೇಟು ಸೇದಿ ಸೇದಿ ತುಟಿ ಕಪ್ಪಗಾಗುತ್ತಿದೆ. ಇವನಿಗೆ ಬೇಗ ಮದುವೆ ಮಾಡಬೇಕೆಂದು ಅವಳು ಗಂಡನಿಗೆ ಹೇಳುತ್ತಲೇ ಇದ್ದಳು. ಅವರು ಈಗ ನಿಗ ತಗಂಡಿದಾರೆ.

ಚಕ್ಕುಲಿ ಖಾರಶೇವೆ ಕಲ್ಲುತಂಬಟಗಳನ್ನು ಮಾಡಿಕೊಂಡು ಹೊರಟ ರಂಗಮ್ಮ ತುಮಕೂರು ಮುಟ್ಟಿದಾಗ ಮಧ್ಯಾಹ್ನ ಮೂರು ಗಂಟೆಯಾಗಿತ್ತು. ಮಂಡಿಪೇಟೆಯನ್ನು ಪ್ರವೇಶಿಸಿದರೆ ಎಡಭಾಗಕ್ಕಿರುವ ಮೋಟಾರು ಆಫೀಸಿನ ಕೋಣೆಯ ಹಿಂಭಾಗದ ದೊಡ್ಡ ಕೋಣೆಯಲ್ಲೇ ಶ್ರೀನಿವಾಸ ಇರುವುದೆಂದು ಡ್ರೈವರನಿಗೆ ಗೊತ್ತು. ಇವರು ಹೋದಾಗ ಆಫೀಸಿನಲ್ಲಿ ಗುಮಾಸ್ತ ಇದ್ದ. 'ಅವರು ಸಿನಿಮಾಕ್ಕೆ ಹೋಗಿದಾರೆ ಅಂತ ಕಾಣುತ್ತೆ. ಆರು ಗಂಟೆಗೆ ಬರಭೌದು. ಬೀಗದ ಕೈ ನನ್ನ ಹತ್ತಿರ ಇಲ್ಲ. ಇಲ್ಲೇ ಕೂತ್ಕಳಿ ಬನ್ನಿ'–ಎಂದು ಅವನು ವಿನಯದಿಂದ ಸ್ವಾಗತಿಸಿದ.

'ಅದ್ಯಾವ ಟಾಕೀಸಾಗೆ ಹ್ವಾಗಿ ಒಂದ್ ರವಷ್ಟು ಕರ್ಕಂಡ್ ಬಾರಪ್ಪ'–ಕಾರಿನಲ್ಲಿ ಕುಳಿತೇ ರಂಗಮ್ಮ ಹೇಳಿದಳು.

ಯಾವ ಟಾಕೀಸಿಗೆ ಹೋಗಿರಬಹುದು, ಅದರಲ್ಲಿ ಯಾವ ದರ್ಜೆಯ ಸೀಟಿನಲ್ಲಿ ಕೂತಿರುತ್ತಾರೆಂಬ ಪೂರಾ ಅಂದಾಜು ಗುಮಾಸ್ತೆಗೆ ಇತ್ತು. ಅವನು ಸೈಕಲ್ ಹತ್ತಿ ಹೋದ. ಇಪ್ಪತ್ತು ನಿಮಿಷದಲ್ಲಿ ಹಿಂತಿರುಗಿ ಬಂದು, 'ಅವರು ಬತ್ತಾರೆ. ನೀವ್ ಕುತ್ಕಂಡಿರಿ ಬನ್ನಿ. ಬೀಗದ ಕೈ ತಂದಿದೀನಿ'–ಎಂದು ಹೇಳಿ ಕೋಣೆಯ ಬಾಗಿಲು ತೆಗೆದ. ರಂಗಮ್ಮ ಒಳಗೆ ಪ್ರವೇಶಿಸಿದರೆ ಹೊರಗೆ ದಬ್ಬುವಷ್ಟು ಸಿಗರೇಟು ಹೊಗೆ ತುಂಬಿಕೊಂಡಿತ್ತು. ಗುಮಾಸ್ತೆ ಕಿಟಕಿಗಳನ್ನು ತೆಗೆದ. ಕೋಣೆಯ ತುಂಬ ಬಿದ್ದಿದ್ದ ಸಿಗರೇಟಿನ ತುಂಡುಗಳನ್ನು ಕಂಡು ಅವನಿಗೇ ನಾಚಿಕೆ

ಎನಿಸಿತು. ತಕ್ಷಣ ಹೊರಗೆ ಬಂದು, ಹಿಂಭಾಗದಲ್ಲಿ ಬಸ್ಸು ನಿಲ್ಲಿಸುವ ಕಾಂಪೌಂಡಿನಲ್ಲಿದ್ದ ಒಬ್ಬ ಕ್ಲೀನರನ್ನು ಕರೆದು ರೂಮಿನ ಕಸ ಗುಡಿಸುವಂತೆ ಹೇಳಿದ.

ರಂಗಮ್ಮ ರೂಮಿನಲ್ಲಿ ಕಾಯುತ್ತಾ ಕುಳಿತಳು. ಡ್ರೈವರ್ ಕಾಫಿ ಕುಡಿಯಲು ಎದುರಿನ ಹೋಟೆಲಿಗೆ ಹೋದ.

'ಕಾಫಿ ತಿಂಡಿ ತರಿಸಲೆ?' – ಎಂದು ಗುಮಾಸ್ತೆ ಯಜಮಾಂತಿಯ ಉಪಚಾರ ಮಾಡಿದ. ಅವಳು ಬೇಡವೆಂದಳು. ಎಷ್ಟು ಹೊತ್ತು ಕಾದರೂ ಶ್ರೀನಿವಾಸ ಬರಲಿಲ್ಲ. 'ನಿಮ್ಮಪ್ಪಾರು ಬಂದವ್‌ರೆ ಅಂತ ಹೇಳ್ದೆ ಏನಪ್ಪ?' – ಎಂದು ಕೇಳಿದ್ದಕ್ಕೆ ಗುಮಾಸ್ತೆ ಒಂದು ಕ್ಷಣ ಕಕ್ಕಾಬಿಕ್ಕಿಯಾಗಿ, 'ಇನ್ನೇನು ಬರ್ತಾರಮ್ಮ' ಎಂದು ಸುತ್ತು ಉತ್ತರ ಕೊಟ್ಟ. 'ಸಿನೀಮ್‌ದಾಗಿದ್ನಾ?' – ಎಂಬ ಪ್ರಶ್ನೆಗೆ, 'ಇಲ್ಲೇ ಹೋಗಿದಾರೆ. ಬೀಗದ ಕೈ ಕೊಟ್ಟು ಕಳಿಸಿದರು' ಎಂದ.

ಶ್ರೀನಿವಾಸ ಸಂಜೆ ಆರು ಗಂಟೆಗೆ ಕಾರಿನಲ್ಲಿ ಬಂದ. 'ನಾನೆಷ್ಟು ಹೊತ್ನಿಂದ ಕಾಯ್ತಿದೀನಿ. ಏನು ಮಾಡ್ತಿದ್ದೆಯಪ್ಪ?' – ಎಂದು ತಾಯಿ ಕೇಳಿದುದಕ್ಕೆ, 'ಸಿನಿಮಾ ನೋಡ್ತಿದ್ದೆ. ಏನು ಸಮಾಚಾರ?' ಎಂದ. ಅವಳಿಗೆ ಮುಖಕ್ಕೆ ಹೊಡೆದಂತಾಯಿತು. ಕಣ್ಣಿನಲ್ಲಿ ನೀರು ಹಾಕಿಕೊಂಡು, 'ಹಂಗಂತ ಹೇಳಿಯಾರ ಕಳುಸ್‌ಬ್ಯಾಡ್‌ದಾ? ಹೆತ್ತ ಅವ್ವಂಗೆ ಹಿಂಗೆಯಾ ಮಾಡಾದು?' ಎಂದಳು. ಅವನು ಮಾತನಾಡಲಿಲ್ಲ. ತಿಂಡಿಯ ಪೊಟ್ಟಣಗಳನ್ನು ಚೀಲದಿಂದ ತೆಗೆದಿಟ್ಟು, 'ನೀನು ಮನೆಗ್ಯಾಕೆ ಬರಾದಿಲ್ಲ?' – ಎಂದು ಕೇಳಿದಳು.

'ಯಾವ ಮನೆಗೆ?' – ಅವನು ಕೇಳಿದ.

ಅವಳಿಗೆ ಮಾತನಾಡಲು ತೋಚಲಿಲ್ಲ. ನೇರವಾಗಿ ವಿಷಯಕ್ಕೆ ಬಂದಳು: 'ಹಾಸನತಾವ್‌ಳ ಅದ್ಯಾವುದೋ ಊರಂತೆ. ಪುಟ್ಟೇಗೌಡ್ರು ಅಂತ ದೊಡ್ಡ ಗೌಡರಂತೆ. ಹುಡುಗಿ ವಳ್ಳೇ ಚಂದಾಗಿ ಗಟ್ಟಿಗಡತ್ತಾಗಿದಾಳಂತೆ. ಹೇಳಿಕಳಿಸಿದ್ರು. ನಡಿ ನೋಡ್ಕಂಡು ಬರಾಣ.'

'ಮದುವೆ ಯಾವ್‌ನಿಗ್ ಬೇಕು? ಬ್ಯಾಡ ಹೋಗು.'

'ಇದ್ಯಾಕ್ ಹೀಗಂತೀಯ? ಒಬ್‌ಳು ಹ್ವಾದ್‌ರೆ ಇನ್ನೊಬ್ಬಳ ಮಾಡ್ಕಳಾವೇ ಇಲ್ವಾ ಯಾರೂ? ಅವಳೇ ಬರ್ಲಿ ಅಂದ್‌ರೆ ಹ್ಯಂಗಾಯ್ತದೆ?'

'ಮಾಡ್ಕ ಅಂತ ನೀನು ಅಂದುದ್ದಕ್ಕೆ ನಾನು ಒಂದ್ ಸಲ ಮಾಡ್ಕಂಡ್ನೋ ಇಲ್ವೋ? ಮತ್ತೆ ನನ್ನ ಕೇಳಬ್ಯಾಡ. ನಾನು ಸಿನಿಮಾಕ್ಕೆ ಹ್ವಾಗಬೇಕು. ಹೊತ್ತಾಯ್ತು. ನೀನು ಹೋಗು' – ಎಂದು ಹೇಳಿ ಅವನು ಹೊರಗೆ ಹೊರಟು ಹೋದ. ಕಾರಿನ ಬಾಗಿಲು ತೆರೆದು ಸ್ಟಾರ್ಟ್ ಆಗಿ ಅದು ಮುಂದೆ ಹೋದ ಶಬ್ದವೂ ಕೇಳಿಸಿತು. ಈಗ ಸಿನಿಮಾ ನೋಡ್ಕಂಡು ಬಂದೋನು ಮತ್ತೆ ಯಾವು

ದಕ್ಕೆ ಹೋಗ್ತಾನೆ?' – ಎಂಬ ಆಶ್ಚರ್ಯವಾಯಿತು. ಗುಮಾಸ್ತೆಯನ್ನು ಕರೆದು ಕೇಳಿದಳು. ಅವನು, 'ನಂಗೇನು ಗೊತ್ತಮ್ಮ?' ಎಂದು ವಿನಯ ತೋರಿಸಿದ.

'ಮತ್ತೆ ಎಷ್ಟೊತ್ತಿಗೆ ಬರ್ತಾನೆ?'

'ನಾನು ಹ್ಯಾಗೆ ಹೇಳ್ಲಮ್ಮ?'

ಏನು ಮಾಡುವುದೆಂದು ತಿಳಿಯದೆ ರಂಗಮ್ಮ ಮತ್ತೆ ಒಂದು ಗಂಟೆ ಕೂತಿದ್ದಳು. ಗುಮಾಸ್ತೆ ಬಂದು, 'ನಂಗೆ ಹೊತ್ತಾಯ್ತು. ನಾನು ಹೋಗ್ತೀನಿ. ಬಸ್ಸುಗಳೆಲ್ಲ ಬಂದುವು' ಎಂದ.

ಕಾರಿನ ಡ್ರೈವರ್ ಬಂದು, 'ಈಗ ಏನು ಮಾಡ್ಲಿ?' ಎಂದ. ಇಲ್ಲಿ ಕಾಯುವುದು ಪ್ರಯೋಜನವಿಲ್ಲ, ಮತ್ತೆ ಒಂದು ದಿನ ಬರಬೇಕು ಎಂದುಕೊಂಡು, ಕೋಣೆಯ ಬಾಗಿಲು ಹಾಕಿಕೊಳ್ಳುವಂತೆ ಗುಮಾಸ್ತೆಗೆ ಹೇಳಿ ಅವಳು ಹೊರಟು ಬಂದಳು.

ಹೆಂಡತಿ ಹೇಳಿದುದನ್ನು ಕೇಳಿದ ಮಂತ್ರಿಗಳಿಗೆ ಆತಂಕವಾಯಿತು. ಅವನು ಇತ್ತೀಚೆಗೆ ಒಂದು ಥರಾ ಆಗಿದ್ದಾನೆಂಬುದು ಅವರಿಗೆ ಗೊತ್ತಿತ್ತು. ಆದರೆ ರಾಜಕಾರಣದ ಗಡಿಬಿಡಿಯಲ್ಲಿ ಆ ಕಡೆ ಅವರ ಪೂರ್ಣ ಗಮನ ಹೋಗಿರಲಿಲ್ಲ. ತಾಯಿ ಬಂದಿದ್ದಾಳೆಂದು ತಿಳಿದರೂ ಸಿನಿಮಾ ಬಿಟ್ಟು ಬರದೆ ಕಾಯಿಸಿ, ಮತ್ತೆ ಸಿನಿಮಾಕ್ಕೆ ಹೊರಟುಹೋದನೆಂಬುದು ಗಾಬರಿಪಡಬೇಕಾದ ನಡತೆಯೇ. 'ಸ್ವಾಟಿಯಲ್ಲಾ ವಳಿಕ್ ಹೋಗ್ಯದೆ – ಶಿಗರೇಟು ಶೇದಿ ಶೇದಿ ತುಟಿ ಕಪ್ಪಟಿ ಕರ್‍ರಗಾಗ್ಯಸೆ' – ಎಂಬ ವರ್ಣನೆಯು ಹೆಚ್ಚಿನ ಆತಂಕವನ್ನುಂಟುಮಾಡಿತು. ಎಷ್ಟೋ ಜನಕ್ಕೆ ಹೆಂಡತಿಯರು ಸಾಯುತ್ತಾರೆ. ಅಷ್ಟಕ್ಕೇ ಹೀಗಾಗಬೇಕೆ? ಆದರೆ, 'ಮಾಡ್ಕ ಅಂತ ನೀನು ಅಂದದ್ದಕ್ಕೆ ನಾನು ಒಂದ್‌ಸಲ ಮಾಡ್ಕಂಡ್ನೋ ಇಲ್ವೋ? ಮತ್ತೆ ನನ್ನ ಕೇಳಬ್ಯಾಡ' – ಎಂಬ ಮಾತಿನ ಒಳ ಅರ್ಥ ಅವರಿಗೆ ತಕ್ಷಣ ಆಯಿತು. ರಂಗಮ್ಮನಿಗೇ ಆಗಿರಲಿಲ್ಲ. ಆದರೆ ಅವರು ಅದನ್ನು ಹೆಂಡತಿಗೆ ಹೇಳಲಿಲ್ಲ. ಅವನ ಮನಸ್ಸು ಮತ್ತೆ ಬದಲಾಯಿಸಬೇಕು. ಮತ್ತೆ ಮದುವೆಗೆ ಒಪ್ಪಿಸಬೇಕು. ಹಿಂದೆ ತಾಯಿಯ ಮಾತಿಗೆ ಬೆಲೆ ಕೊಟ್ಟ. ಈಗ ಅದೂ ಕೊಡದವನಾಗಿದ್ದಾನೆ. ಊರಿನಲ್ಲಿ ಅಜ್ಜನಿಂದ ಹೇಳಿಸಿದರೆ ಕೆಲಸ ಆಗಬಹುದೆ? ಆದರೆ ದೊಡ್ಡ ಯಜಮಾನರ ಸ್ವಭಾವವೇ ಜಬರ್‌ದಸ್ತಿನದು. ತಾಯಿಗೆ ಮಾಡಿದ ಹಾಗೆ ಆವರಿಗ ಅವಮಾನ ಮಾಡಿದರೆ ಏಕ್‌ದಮ್ ರೇಗಿಬಿಡುತ್ತಾರೆ. ಸ್ವಲ್ಪ ಮಾಗಿದ ಮೇಲೆ ಅವರನ್ನು ಬಿಡಬೇಕು. ಆದರೆ ಮಾಗಿಸುವುದು ಹೇಗೆ?

ಇನ್ನೂ ಒಂದು ಯೋಚನೆ ಹೊತ್ತಿಕೊಂಡಿತು: ಹೀಗೆ ಸಿನಿಮಾ ನೋಡಿ ಸಿಗರೇಟು ಸೇದಿಕೊಂಡಿರುವ ಅವನು ಬಸ್ಸು ಲಾರಿಗಳ ವ್ಯವಹಾರ ಹ್ಯಾಗೆ

ನೋಡಿಕೊಂಡಿರುತ್ತಾನೆಯೋ? ಒಂದು ಸಾಮಾನು ಹೋದರೆ ಹಾಕಿಸುವ, ಸರ್ಕಾರಕ್ಕೆ ಕಟ್ಟುವ ತೆರಿಗೆ ಮೊದಲಾದುವು. ಬರುವ ಆದಾಯವೇನೋ ಇರಬಹುದು. ಅದಕ್ಕೆ ಸಾಲದಿದ್ದರೆ ನನ್ನ ಹತ್ತಿರ ಬರುತ್ತಿದ್ದ. ಆದರೆ ಅಲ್ಲಿ ಬಂದದ್ದು ಅಲ್ಲಿ ಖರ್ಚಾಗುತ್ತಿದ್ದರೆ ಸುರಿದ ಗಂಟು ಹುಟ್ಟಿ ಮೇಲೆ ಲಾಭ ಸೇರುವುದು ಹ್ಯಾಗೆ? ಅವರಿಗೆ ಎದೆ ನಡುಗುವಷ್ಟು ಗಾಬರಿಯಾಯಿತು. ಒಟ್ಟು ಮೂರು ಲಕ್ಷ ರೂಪಾಯಿಗಳ ಗಂಟು. ತಾವು ಸ್ವಲ್ಪವಾದರೂ ನಿಗಾ ನೋಡಿಕೊಳ್ಳಬೇಕಾಗಿತ್ತು – ಎಂದುಕೊಂಡರು. ಅದೇ ದಿನ ತುಮಕೂರಿನ ಆಫೀಸಿಗೆ ಟ್ರಂಕ್‌ಕಾಲ್ ಮಾಡಿ ಗುಮಾಸ್ತೆಯ ಕೈಲಿ ಮಾತನಾಡಿದರು. ಅವನೇ ಬೆಂಗಳೂರಿಗೆ ಬಂದು ತಮ್ಮನ್ನು ಕಾಣುವಂತೆ ಅಪ್ಪಣೆ ಹೇಳಿದರು. ಸಂಜೆಗೆ ಬಂದ ಗುಮಾಸ್ತೆಯಿಂದ ವಿಷಯ ತಿಳಿಯಿತು: ಶ್ರೀನಿವಾಸ ಬರೀ ತುಮಕೂರಿನ ಸಿನಿಮಾಗಳಿಗೆ ಹೋಗುವುದಿಲ್ಲ. ಎಷ್ಟೋ ದಿನ ಬೆಳಗ್ಗೆ ಎದ್ದು ಕಾರು ನಡೆಸಿಕೊಂಡು ಬೆಂಗಳೂರಿಗೆ ಬಂದು ಒಂದೆರಡು ಸಿನಿಮಾ ನೋಡಿ ಸಂಜೆ ತುಮಕೂರಿಗೆ ಹಿಂತಿರುಗುತ್ತಾನೆ. 'ಕುಡಿಗಿಡೀತಾನಾ?' – ಎಂದು ಕೇಳಿದುದಕ್ಕೆ ಗುಮಾಸ್ತೆ, 'ಅದೇನೋ ಗೊತ್ತಿಲ್ಲ ಸಾರ್' ಎಂದ.

'ನೀನೇನು ಹೆದರ್ಕಬ್ಯಾಡ ಹೇಳು.'

'ಬರೀ ಬೀರ್. ಹೆಚ್ಚಿಂದೇನೂ ಇದ್ದ ಹಾಗಿಲ್ಲ. ತುಮಕೂರಿನಲ್ಲಿ ಸಿಕ್ಕಲ್ಲವಲ್ಲ. ಒಂದು ಸಲ ಅವರು ಬೆಂಗಳೂರಿನಿಂದ ಆರು ಬೀರ್ ಬಾಟಲು ಕಾರಿನಲ್ಲಿ ತರ್ತಿದ್ರಂತೆ. ತುಮಕೂರು ಗೇಟಿನಲ್ಲಿ ಪೋಲೀಸಿನೋರು ಚೆಕ್ ಮಾಡಿ ಹಿಡಿದರಂತೆ. ನಿಮ್ಮ ಹೆಸರು ಹೇಳಿದ ಮೇಲೆ ಕೇಸ್ ಹಾಕಲಿಲ್ಲವಂತೆ.'

'ಹೆಂಗಸರು ಗಿಂಗಸರು?'

'ಛೆ, ಛೆ, ಅದೇನಿಲ್ಲ ಸಾರ್, ಸುಳ್ಳಾಡಬಾರದು.'

'ಸರಿ. ನೀನ್ ಇನ್ನು ಮ್ಯಾಲೆ ವಾರಕ್ಕೊಂದು ದಿನ ಇಲ್ಲಿಗೆ ಬಂದು ಲೆಕ್ಕಪತ್ರ ನಂಗೆ ತೋರಿಸ್ಕಂಡು ಹ್ವಾಗಬೇಕು' – ಎಂದು ಹೇಳಿ ಅವನನ್ನು ಕಳಿಸಿದರು.

ಎರಡು ದಿನದ ನಂತರ ಬೆಳಗ್ಗೆ ಎದ್ದ ತಕ್ಷಣ ಅವರೇ ತುಮಕೂರಿಗೆ ಹೋದರು. ಬೆಳಗೆ ಎಂಟು ಗಂಟೆಗೆ ಹೋದಾಗ ಆಫೀಸು ತೆಗೆದಿತ್ತು. ಗುಮಾಸ್ತೆ ಬಸ್‌ಸ್ಟ್ಯಾಂಡಿಗೆ ಹೋಗಿದ್ದಾರೆಂದು ಕ್ಲೀನರ್ ಹೇಳಿದ. ಬಸ್ಸುಗಳು ಹೊರಡುವ ಹೊತ್ತು ಅದು. ಒಳಭಾಗದ ಕೋಣೆಯ ಬಾಗಿಲು ಹಾಕಿತ್ತು. ಜೋರಾಗಿ ಬಡಿದ ಮೇಲೆ ಶ್ರೀನಿವಾಸ ಒಳಗಿನಿಂದ ಬೋಲ್ಟು ತೆಗೆದ. ಕಿಟಕಿಗಳನ್ನು ಸಹ ಮುಚ್ಚಿ ಮಲಗಿ ನಿದ್ರಿಸುತ್ತಿದ್ದ ಅವನ ಕಣ್ಣುಗಳು. ಬಾಗಿಲು ತೆಗೆದ ತಕ್ಷಣ ಬೆಳಕಿಗೆ ಮುಚ್ಚಿಕೊಂಡುವು. ಹೆಂಡತಿ ಹೇಳಿದಂತೆಯೇ, ಒಳಗೆ ಹೋದವರನ್ನು ಸಿಗ-

ರೇಟಿನ ಹೊಗೆ ಹೊರಗೆ ದಬ್ಬುತ್ತಿತ್ತು. ಅನಿರೀಕ್ಷಿತವಾಗಿ ತಂದೆಯನ್ನು ನೋಡಿ ಅವನಿಗೆ ಕಸಿವಿಸಿಯಾಯಿತು. ಟವೆಲು, ಬ್ರಶ್, ಪೇಸ್ಟು ಮತ್ತು ಸೋಪುಗಳನ್ನು ತೆಗೆದುಕೊಂಡು ಅವನು ಹಿಂಭಾಗದ ನಲ್ಲಿಯ ಕಡೆಗೆ ಹೊರಟುಹೋದ. ಕ್ಲೀನರಿಗೆ ಹೇಳಿ ಮಂತ್ರಿಗಳು ಕಿಟಕಿಗಳನ್ನು ತೆಗೆಸಿದರು. ಸಿಗರೇಟಿನ ತುಂಡುಗಳು ಮಂಚದ ಪಕ್ಕದಲ್ಲಿ ಬಿದ್ದಿದ್ದುವು. ಮಂಚದ ಕೆಳಗೆ ಸೀಸೆಗಳು. ಒಂದು ಗ್ಲಾಸು. ಹತ್ತಿರ ಹೋಗಿ ಅವರು ನೋಡಿದರು: ಗುಮಾಸ್ತೆ ಹೇಳಿದಂತೆ ಬರೀ ಬೀರ್ ಸೀಸೆಗಳು. ಹೆಚ್ಚಿನದೇನೂ ಇರಲಿಲ್ಲ.

ಅರ್ಧ ಗಂಟೆಯಾದರೂ ಅವನು ಮುಖ ತೊಳೆದು ಹಿಂತಿರುಗಲಿಲ್ಲ. ಇವರೇ ಹೋಗಿ ನೋಡಿದರೆ ನಲ್ಲಿಯ ಹತ್ತಿರ ಇರಲಿಲ್ಲ. ಕ್ಲೀನರನ್ನು ಕರೆದು ಹುಡುಕಲು ಹೇಳಿದರು. ಅಲ್ಲಿ ಮೂರನೆಯ ಕಟ್ಟಡದಲ್ಲಿರುವ ವಸಂತಾ ಹೋಟೆಲಿನಲ್ಲಿ ಕಾಫಿ ಕುಡಿಯುತ್ತಿರುವುದಾಗಿ, ಅವನು ಹುಡುಕಿಕೊಂಡು ಬಂದು ಹೇಳಿದ. ತಾಯಿಯನ್ನು ಮಾಡಿದ ಹಾಗೆಯೇ ಅವನು ತಮ್ಮನ್ನೂ ಬೇಕೆಂದೇ ಅಲಕ್ಷ್ಯ ಮಾಡುತ್ತಿದ್ದಾನೆ ಎಂದು ಅರ್ಥಮಾಡಿಕೊಂಡರು. ಮಹಾ ಸಿಟ್ಟು ಬಂತು. ಸೀದಾ ಹೋಟೆಲಿಗೆ ಹೋಗಿ ಕೆನ್ನೆಗೆ ಹೊಡೆದುಬಿಡಬೇಕೆನಿಸಿತು. ಕೋಪ ಮಾಡಿಕೊಂಡರೆ ಕೆಲಸ ಕೆಡುತ್ತದೆಂಬ ಅರಿವಾಗಿ ಸುಮ್ಮನೆ ಕುಳಿತರು. ಮತ್ತೆ ಕಾಲು ಗಂಟೆಯಾದರೂ ಅವನು ಬರಲಿಲ್ಲ. ಹೋಟೆಲಿಗೆ ಹೋಗಿ ಕರೆದುಕೊಂಡು ಬರುವಂತೆ ಕ್ಲೀನರನ್ನು ಕಳಿಸಿದರು. ಶ್ರೀನಿವಾಸ ಹತ್ತು ನಿಮಿಷದಲ್ಲಿ ಬಂದ. ಬ್ರಶ್. ಸೋಪು ಮತ್ತು ಪೇಸ್ಟುಗಳನ್ನು ಮೇಜದ ಮೇಲಿಟ್ಟು ಸುಮ್ಮನೆ ಮಂಚದ ಮೇಲೆ ಕುಳಿತುಕೊಂಡ. ಒಂದು ಮಾತೂ ಆಡಲಿಲ್ಲ.

ಬೆಳಗ್ಗೆ ಇಷ್ಟು ಹೊತ್ತಿಗೆ ಎದ್ದರೆ ಬಸ್ಸಿನ ವ್ಯವಹಾರ ಏನಾಗುತ್ತದೆಂದು ಕೇಳಬೇಕೆನಿಸಿದರೂ, ಸಂಭಾಷಣೆಯನ್ನು ಅಪ್ರಿಯವಾಗಿ ಆರಂಭಿಸಬಾರದೆಂದು ನೇರವಾಗಿ ವಿಷಯಕ್ಕೇ ಬಂದರು: 'ಆಗೂದು ಆಯ್ತಪ್ಪ. ಅದು ಯಾರ ಕೈಲೂ ಇರುಲ್ಲ. ದೇವರು ಹಣೇಲಿ ಬರೆದದ್ದು. ನಮಗೂ ಅವಳು ಒಳ್ಳೆಯ ಸೊಸೆಯಾಗಿದ್ದಳು. ಇನ್ನು ಹಿಂಗೆ ಎಷ್ಟು ದಿನ ಇರುಕ್ಕಾಗುತ್ತೆ?'

ಅವನು ಮಾತನಾಡಲಿಲ್ಲ. ಸುಮ್ಮನೆ ತಲೆ ತಗ್ಗಿಸಿ ಕೂತಿದ್ದ. 'ನಮಗೂ ದುಃಖವಾಗಿದೆ. ಆದರೆ ಮುಂದಿನ ಕೆಲಸ ಮಾಡಬೇಕು. ಪಾಳೇಗಾರರ ವಂಶ ಬೆಳೀಬೇಕಲ' – ಎಂದು ಮಾತು ನಿಲ್ಲಿಸಿದ ಎರಡು ನಿಮಿಷ ಕಳೆದರೂ ಅವನು ಸುಮ್ಮನೆ ಕೂತಿದ್ದ. 'ನೀನು ಮಾತೇ ಆಡದೆ ಇದ್ದರೆ ಏನು ಹೇಳೂದು ನಾನು?'

'ವಂಶ ಬೆಳೀದೆ ಇದ್ರೆ ಏನಾಯ್ತದೆ?'

ಈ ಮಾತು ಕೇಳಿ ಅವರಿಗೆ ಎದವಿಬಿದ್ದಂತಾಯಿತು. ಆದರೆ ಎಂತೆಂತಹ

ಹಳ್ಳ ತಿಟ್ಟುಗಳಲ್ಲಿ ನಡೆದು ಅಭ್ಯಾಸವಿರುವ ದಾರಿಗರಾದುದರಿಂದ ತಕ್ಷಣ ಉತ್ತರ ಕೊಟ್ಟರು: 'ಏನಾಯ್ತುದೆ ಅಂದ್ರೆ ಏನೂ ಹೇಳುಕ್ಕಾಗುಲ್ಲ. ಹಿರೀಕರ ಮನಸ್ಸು ನೋಡಬೇಕು. ಊರಾಗೆ ಅಪ್ಪಾಜಿ ಅಳ್ತದೆ. ನಿಮ್ಮವ್ವ ದಿನಾ ಕಣ್ಣೀರು ಹಾಕ್ತಳೆ. ನಿಂಗೆ ಅಂತ ಇಷ್ಟೆಲ್ಲ ಮಾಡಿದ ನಂಗಾದ್ರೂ ಯಾವ ಸುಖವಿದೆ?'

ಮಗ ಮಾತನಾಡಲಿಲ್ಲ. ತಂದೆ ಐದು ನಿಮಿಷ ಕಾದರೂ ಬೊಂಬೆಯಂತೆ ಕುಳಿತಿದ್ದ. 'ನಿನ್ನ ಮನಸ್ನಾಗೆ ಏನದೆ ಹೇಳಿಬಿಡು. ಸುಮ್ನೆ ಕೂತ್ರೆ ಏನು ತಿಳೀತದೆ?'

'ಬುದ್ಧಿ ಇದ್ರೆ ಅರ್ಥ ಮಾಡ್ಕಳಿ' – ಎಂದು ಅವನು ಹೊರಗೆ ಹೋಗಲು ಎದ್ದ.

'ಅದೇನು ಬಾಯಿಬಿಟ್ಟು ಹೇಳೋ' – ಎಂದು ಅವರು ಆತುರದಿಂದ ಕೇಳಿದರು.

'ನಾನು ಇಷ್ಟಪಟ್ಟ ಹುಡುಗೀ ತಂದು ಮಾಡಿದರೆ ಮಾಡಿ. ಇಲ್ದೆ ಇದ್ರೆ ಬ್ಯಾಡ. ಬ್ರಾಹ್ಮಣರು ಗೀಹ್ಮಣರು ಅಂತ ತರಲೆ ಮಾಡಾಕಾದು.'

ಈ ಉತ್ತರದ ತಿರುಳು ಅವರಿಗೆ ಅನಿರೀಕ್ಷಿತವಾಗಿರಲಿಲ್ಲ. ಆದರೆ ಅವನು ಹೇಳಿದ ಖಡಾಖಂಡಿತ ರೀತಿ ಮಾತ್ರ, ತೆಗೆದು ಹೊಡೆದಂತಿತ್ತು. ಇಷ್ಟು ಹೇಳಿ ಕಾಲಿಗೆ ಎಕ್ಕಡ ಮೆಟ್ಟಿಕೊಂಡು ಹೊರಟೇ ಬಿಟ್ಟ. ಅವನು ಕೋಣೆಯ ಬಾಗಿಲು ದಾಟುವ ಮುನ್ನ ಅವರು ಕೇಳಿದರು: 'ಅವಳ ಕೈಲಿ ಮಾತಾಡಿದೀ ಏನು ನೀನು?'

'ವಂಶ ಬೆಳೀಬೇಕು ಅನ್ನಾ ದರ್ದಿದ್ದೋರು ಬೇಕಾದ್ರೆ ಹೋಗಿ ಮಾತಾಡಿ. ನಂಗೇನು ತೆವಲಿಲ್ಲ' – ಎಂದು ಅವನು ಹೊಸಲು ದಾಟಿ ಮೆಟ್ಟಿಲು ಇಳಿದು ಹೊರಗೆ ಹೊರಟುಹೋದ.

ಮಂತ್ರಿಗಳ ಎದೆಯ ಮೇಲೆ ಚಪ್ಪಡಿ ಎಳೆದಂತಾಯಿತು. 'ಸೂಳೀಮಗನೆ' – ಎಂಬ ಮಾತು ಮನಸ್ಸಿನಲ್ಲಿ ಬಂತಾದರೂ ಬಾಯಿಂದ ಹೊರಡಲಿಲ್ಲ. ಇನ್ನು ಇಲ್ಲಿ ಕೂತು ಪ್ರಯೋಜನವಿಲ್ಲ. ಅವನು ಸದ್ಯದಲ್ಲಿ ಹಿಂತಿರುಗುವುದಿಲ್ಲ. ಎಲ್ಲಿ ಇದ್ದಾನೆಂದು ಕ್ಲೀನರ್ ಅಥವಾ ಗುಮಾಸ್ತೆಯ ಕೈಲಿ ಹುಡುಕಿಸಬಹುದಾದರೂ ಅದರಿಂದ ತಮಗೇ ಅವಮಾನವಾಗುತ್ತದೆ ಎಂದು ಎಣಿಸಿ ಹೊರಗೆ ಬಂದು, ಕೋಣೆಗೆ ಬೀಗ ಹಾಕಿಕೊಳ್ಳುವಂತೆ ಕ್ಲೀನರ್‌ನಿಗೆ ಹೇಳಿ ಕಾರು ಹತ್ತಿ ಸ್ಟ್ಯಾಂಡಿಗೆ ಹೋದರು. ಏಜೆಂಟ್ ಕೊನೆಯ ಬಸ್ಸಿನ ಚಲನ್ ಹರಿದು ಕಂಡಕ್ಟರನ ಕೈಲಿ ಕೊಡುತ್ತಿದ್ದ. ಬಸ್ಸಿನ ಸೀಟುಗಳಲ್ಲಿ ಒತ್ತಿಒತ್ತಿ ಕೂರಿಸಿದ್ದ ಜನಗಳೇ ಅಲ್ಲದೆ ಒಳಗೆಲ್ಲ ನಿಂತವರು ಉಸಿರು ಕಟ್ಟುತ್ತಿದ್ದರು. ಅನಿರೀಕ್ಷಿತವಾಗಿ ಇವರ ಮುಖ ನೋಡಿದ ಏಜೆಂಟ್, ಕಂಡಕ್ಟರು ಮತ್ತು ಗುಮಾಸ್ತೆಯ ಮುಖಗಳು ಮಂಕಾದುವು. 'ಕಲೆಕ್ಷನ್ ಎಷ್ಟಾಗ್ಯತೆ?' – ಎಂದು ಕೈನೀಡಿ ಚಲನ್ ಕೇಳಿದರು. ಭಯದಿಂದ ಕಂಡಕ್ಟರ್ ಅದನ್ನು ಅವರ ಕೈಗೆ ಕೊಟ್ಟ. ಒಟ್ಟು ಪ್ರಯಾಣಿಕರ ಸಂಖ್ಯೆ

ನಲವತ್ತೆರಡೆಂದು ತೇರೇಜ್ ಹಾಕಿತ್ತು. ಬಸ್ಸಿನೊಳಗೆ ಎಂಬತ್ತಾದರೂ ಜನರಿದ್ದಾರೆಂದು ಯಾರಾದರೂ ಎಣಿಸದೆಯೇ ಹೇಳಬಹುದಾಗಿತ್ತು. ಆದರೆ ಮಂತ್ರಿಗಳು ರೇಗಲಿಲ್ಲ. 'ಇನ್‌ಮ್ಯಾಲೆ ನಾನು ವಸಿ ನಿಗ ಮಡುಗ್ತೀನಿ. ಡಿ.ಎಸ್.ಪಿ.ಗೆ ಹೇಳಿ ಹೋಗ್ತೀನಿ ಕಳ್ಳತನ ಹಿಡೀರಿ ಅಂತ'–ಎಂದು ಹೇಳಿ, ಚಲನ್ನನ್ನು ಕಂಡಕ್ಟರ ಕೈಗೆ ಕೊಟ್ಟು ತಮ್ಮ ಕಾರು ಹತ್ತಿದರು.

೨

ಎರಡು ದಿನ ಅವರು ಸಿಟ್ಟು ಮಾಡಿಕೊಂಡಿದ್ದರು. ತುಮಕೂರಿಗೆ ಹೋಗಿದ್ದ ವಿಷಯ ಏನಾಯಿತೆಂದು ಕೇಳಿದ ಹೆಂಡತಿಯ ಮೇಲೆ ಚೆನ್ನಾಗಿ ರೇಗಿದರು. ರಾಜ್ಯ ಆಳೂ ನನ್ನತಾವ್ಳೇ ಜಬ್ರ್ ತೋರಿಸಿದ್ನಲಾ ಕಳ್ಳ ನನ್ನ ಮಗ ಎಂದು ಬೈದುಕೊಂಡರು. ಆದರೆ ಮೂರನೆಯ ದಿನ ಬುದ್ಧಿ ತಾಳ್ಮೆಯಿಂದ ಆಲೋಚಿಸಲು ಮೊದಲುಮಾಡಿತು. ಹಿಂದಿನ ಸಲದಂತೆ ಈಗ ಅವನು ಬಗ್ಗುವುದಿಲ್ಲವೆಂದು ಅವರ ಮನಸ್ಸು ಹೇಳಿತು. ಕೆಂಪಣ್ಣನವರ ಮಗಳು ಅಷ್ಟು ಚಂದಾದ ಹೆಣ್ಣು. ಯಾವ ಸಿನಿಮಾ ನಟಿಯೂ ಅವಳ ಮುಂದೆ ಅಲ್ಲ. ಆದರೆ ಅವಳು ಇದ್ದಾಗಲೇ ಅವನ ಗ್ಯಾನ ಪೂಜಾರಯ್ಯನ ಮಗಳ ಕಡೀಕೆ ಹೋಗಿತ್ತು. ಹಂಗಂತ ಅವಳು ಅಂದದ್ದು ನಿಜವಿದ್ದರೂ ಇರಭೌದು. ಇವನೂ ಅವಳೂ ಕದ್ದು ಸಂಧಿಸುತ್ತಾ ಇದ್ದರೇ?–ಎಂಬ ಅನುಮಾನ ಬಂತು. ಅವಳು ಬೆಂಗಳೂರಿನಲ್ಲಿದ್ದಾಗ ಗಂಡ ಹೆಂಡತಿ ಯಾವಾಗಲೂ ಜೋಡಿಯಾಗಿರ್ತಿದ್ರು. ಅಪ್ಪ ಸತ್ತ ಮೇಲೆ ಅವಳು ಊರಿನಾಗೇ ಇದಾಳಂತೆ, ತ್ವಾಟ ಗದ್ದೇಲಿ ನಮ್ಮ ಜಾತಿ ಹೆಂಗಸರ ಹಂಗೆ ಕೆಲಸ ಮಾಡ್ಕಂಡು. ಒಬ್ಬರಿಗೊಬ್ಬರಿಗೆ ಮಿಲಾಕಾತ್ ಇಲ್ಲ. ಆದ್ರೂ ಇವನಿಗೆ ಅವಳ ಗ್ಯಾನ ಬಿಟ್ಟಿಲ್ಲ. ಇದು ಹಿಂಗೆಯೇ ಬಿಟ್ಟರೆ ಇವನು ಇನ್ನೂ ಕೆಡಬಹುದು. ಬೀರಿನ ಬದಲು ವಿಸ್ಕಿಯತನಕ ಹೋಗಭೌದು. ಹಂಗಾದ್ರೆ ಗತಿ? ಸರಿಯಾದ ಬೇರೆ ಹುಡುಗೀನ ತಂದ್ರೆ ಇವನನ್ನು ದಾರಿಗೆ ತರಾಕ್ ಆಗುಲ್ಲವೆ ಎಂದು ಯೋಚಿಸಿದನು. ಅಂಥ ಹುಡುಗಿ ಎಲ್ಲಿದೆ? ಮತ್ತೆ ನೆನಪಾಯಿತು. ಕೆಂಪಣ್ಣೋರ ಮಗಳಿದ್ದಾಗಲೇ ಅವಳನ್ನ ಬಿಟ್ಟು ಹಾರುವಯ್ಯನ ಮಗಳನ್ನ ಧ್ಯಾನಿಸಿಕೋಬೇಕಾದ್ರೆ ಇನ್ನೆಂಥವಳು ಬಂದ್ರೂ ಆಗಾಕಿಲ್ಲ. ಹಂಗಾದ್ರೆ ಹಾರುವಯ್ಯನ ಮಗಳೇ ಗತಿಯೇ?

ಯಾಕೋ ತಮ್ಮ ಗ್ರಹಚಾರ ಚೆನ್ನಾಗಿಲ್ಲ. ಹಾಸನದ ಪುಟ್ಟೇಗೌಡರ ಸಂಬಂಧವಾಗಿದ್ದರೆ ಮುಂದಿನ ಮಂತ್ರಿ ಮಂಡಲದಲ್ಲಾದರೂ ಸಂಪುಟ ಸಚಿವ ಆಗ

ಬಹುದಿತ್ತು. ಮತ್ತೆ ಏನಾದರೂ ಮಾಡಿ ಇವನನ್ನು ಒಪ್ಪಿಸುಕ್ಕೆ ಆಗುಲ್ಲವೆ? ಪ್ರಯತ್ನ ಮಾಡಬೇಕು – ಎಂದುಕೊಂಡರು. ಆದರೆ, ಅವನ ಮುಖ ನೋಡಿದರೆ ಕಳೆಗೆಟ್ಟು ಹೋಗ್ಯದೆ. ಇವನನ್ನ ನೋಡಿ ಹೆಣ್ಣಿನ ಅಪ್ಪನೇ ಬ್ಯಾಡ ಅಂದ್ರೆ ನಂಗೇ ಅವಮಾನ ಎಂಬ ಅಂಜಿಕೆಯಾಯಿತು. 'ವಂಶ ಬೆಳೀಬೇಕು ಅನ್ನೊ ದರ್ದಿದ್ದೋರು ಬೇಕಾದ್ರೆ ಹೋಗಿ ಮಾತಾಡಿ. ನಂಗೇನು ತೆವ್ಲಿಲ್ಲ' – ಎಂಬ ಅವನ ಸೆಡಕಿನ ಉತ್ತರದ ನೆನಪಾಗಿ, ಬೇರೆ ಕಡೆ ಹೋಗೂದು ಬ್ಯಾಡ, ಈ ಹಾರುವಯ್ಯನ ಮಗಳನ್ನೇ ತರಬೇಕು ಎಂದುಕೊಂಡರು. ಆದರೆ ತಮ್ಮ ಮುಂದಿನ ಗತಿ? ಸುತ್ತಮುತ್ತ ರೈತ ಸಮಾಜ ಇದನ್ನು ಒಪ್ಪುತ್ತದೆಯೆ? ಅವರ ನ್ನೆಲ್ಲ ಒಪ್ಪಿಸದೆ ಮದುವೆ ಮಾಡಿದರೆ ನಾಳೆ ಚುನಾವಣೆಯಲ್ಲಿ ನನ್ನನ್ನೇ ಪಲ್ಟಿ ಹೊಡೆಸಿದರೆ? ಎಂಥ ತ್ಯಾಗ ಮಾಡಬೇಕು! ಎಂಥ ನುಕ್ಸಾನು – ಎನಿಸಿತು.

ನುಕ್ಸಾನು ನಫೆಗಳನ್ನು ತೂಕ ಮಾಡವಾಗ ಇದರಿಂದ ನಫೆಯೂ ಇರುವುದು ಕಾಣಿಸುತ್ತಿತ್ತು. ಅವಳು ಬಲೇ ಬುದ್ಧಿವಂತ ಹುಡುಗಿ. ಬ್ಯಾಸಾಯ ಗೀಸಾಯ ಎಲ್ಲಾನೂ ಮುಂದೆ ನಿಂತು ಮಾಡ್ತೀನಿ ಅನ್ನೊ ಛಾತಿ ಇದೆ. ಕೆಂಪಣ್ಣೋರ ಮಗಳು ಬಣ್ಣದ ಗೊಂಬೆ ಹಂಗೆ ಇದ್ಲು. ಆದರೆ ಇವಳ ಬುದ್ಧಿ, ಛಾತಿ ಭಾಳ. ಊರಿನ ಭಾರೀ ಜಮೀನು, ತುಮಕೂರಿನ ಬಸ್ಸು ಲಾರಿಗಳ ವ್ಯವಹಾರವೆಲ್ಲ ನೋಡ್ಕಂತಾಳೆ. ಹಿಂಗೆ ಸಿನಿಮಾ ಗಿನಿಮಾ ನೋಡಬಾರದು, ವ್ಯವಹಾರ ನೋಡ್ಕಬೇಕು ಅಂತ ಗಂಡನಿಗೆ ಜಡಿದು ಬುದ್ದಿ ಹೇಳಿ ನಿಬಾಯಿಸ್ತಾಳೆ. ಅಂಥೋಳು ಬಂದ್ರೆ ನನ್ನ ಕೆಲಸಕ್ಕೂ ಒಂದು ಸಹಾಯವೇ. ಬೇಕಾದ ಹಂಗೆ ಭಾಷಣ ಬರೆಸಿಕೋಭೌದು. ಅವಳನ್ನೇ ಕಳಿಸಿ ಭಾಷಣ ಮಾಡಿಸಿ ಹೆಂಗಸರ ಓಟು ತಗಭೌದು. ಬೆಂಗಳೂರು ಪ್ಯಾಟೇಲೆಲ್ಲ ಲೆಕ್ಚರ್ ಹೊಡಿಸಿ ಚೀಫ್ ಮಿನಿಸ್ಟರನ್ನೇ ಇಂಪ್ರೆಸ್ ಮಾಡಿಸಿ ಸಂಪುಟಸಚಿವ ಸ್ಥಾನ ಹೊಡ್ಕಾಬೇಕು. ಇಷ್ಟುದ್ದರಲ್ಲಿ ಗುಂಜಿಕಳಾದೇ ಬುದ್ಧಿವಂತಿಕೆ. ಇನ್ನು ಮೋಟಾರೇನೋ ಎಲ್ಲಾ ಲೈಸೂ ಸರ್ಕಾರಕ್ಕೇ ಸೇರ್ಭೌದು. ಇನ್ನೊಂದು ಹತ್ತುಹದಿನೈದು ಲಾರಿ ತಂದು ಬೆಂಗಳೂರಾಗೇ ಹೆಡ್ ಆಫೀಸ್ ಮಾಡಿಸಬೇಕು – ಎಂದುಕೊಂಡರು.

ಆದರೆ ತಮ್ಮ ತಾಲ್ಲೂಕಿನ ರೈತರನ್ನು ಒಪ್ಪಿಸುವುದು ಹೇಗೆ? ಮದುವೆಗೆ ಮೊದಲೇ ಅವರನ್ನೇ ಕೇಳಬೇಕು. ಬ್ರಾಂಬ್ರು ಅಂದ್ರೆ ಮ್ಯಾಲೆ ಅಂತ ಜಂಬ ಕೊಚ್ಕೊತ್ತಿದ್ರು. ಈಗ ಅವರ ಹುಡುಗೀನ, ಅದೂ ಜೋಯಿಸಯ್ಯನ ಮಗಳ್ನೇ ತಂದು ನಮ್ಮ ಮನೆ ಎಂಜಲ ಗಂಗಳ ಎತ್ತಿಸಿದರೆ ಹ್ಯಾಂಗೆ? – ಅಂತ ರೈತ ಮುಖಂಡರನ್ನೇ ಕೇಳಬೇಕು. ಖುಷಿಯಾಗಿ ಒಪ್ಕತ್ತಾರೆ. ಎಷ್ಟಾದ್ರೂ ಅವರು ಉತ್ಕಂಡಿರೋ ಪೆದ್ದನನ್ಮಕ್ಳು – ಎಂದುಕೊಂಡರು. ಆದರೆ ಕೆಲವು ಸ್ಥಳೀಯ

ವಿಷಯದಲ್ಲಿ ರೈತರ ತಿಳಿವಳಿಕೆ ತಮಗಿಂತ ಹೆಚ್ಚು ಚುರುಕೆಂಬ ನೆನಪಾಗಿ, ಇದು ನಸಿ ಕಷ್ಟವೇ ಎನಿಸಿತು. ಆಗಲಿ, ಇಷ್ಟೆಲ್ಲ ಮಾಡಿದಮ್ಯಾಲೆ ಅದ ನಿಭಾಯಿ-ಸೂದು ನಂಗೆ ಕಷ್ಟವಾ? ನಿಭಾಯಿಸದೆ ಇದ್ರೆ ನಾನು ಪಾಳೆಗಾರರ ರಕ್ತದಲ್ಲಿ ಹುಟ್ಟಿದ್ಯಾಕೆ? ಮಂತ್ರಿಯಾಗಿರೂದ್ಯಾಕೆ?–ಎಂದು ಆತ್ಮವಿಶ್ವಾಸ ತಾಳಿದರು.

ತುಮಕೂರಿನಲ್ಲಿ ನಡೆದುದನ್ನು ವಿವರವಾಗಿ ಹೆಂಡತಿಗೆ ತಿಳಿಸಿ, 'ಆ ಸತ್ಯ-ಭಾಮನ್ನೇ ಮಾಡ್ಕಳೂದು ಸೈನ ಅನ್ನುಸ್ತದೆ' ಎಂದಾಗ ಆಶ್ಚರ್ಯಗೊಂಡ ಆಕೆ –'ಹಾವನರ ಹುಡುಗಿ ಮಾಡ್ಕಂಡ್ರೆ ಮಕ್ಳಾಯ್ತದಾ?' ಎಂದಳು.

'ಯಾಕಾಗುಲ್ಲ?'

'ಆಗ ನಂಗೆ ಕನಸಿನಾಗೆ ಬಂದು ದೇವರು ಹಂಗಂತು?'

'ನಮ್ಮ ಜನದ್ದೇ ಮಾಡ್ಕಂಡ್ರೂ ಆಗಲಿಲ್ವಲಾ? ಆಗ ದೇವರು ಹಂಗಂತು. ಅದಾದಮ್ಯಾಲೇ ಒಬ್ಬಳು ಬಂದು, ಅವಳು ಸತ್ತು ಎಲ್ಲಾ ಆಗಿ ದೇವರಿಗೆ ಶಾಂತಿ ಆಗ್ಯದೆ. ಈಗ ಇವ್ಳನ್ನ ಮಾಡ್ಕಂಡ್ರೂ ನೈಟ್ಟಗಾಗುತ್ತೆ.'

ಆದರೆ ರಂಗಮ್ಮನಿಗೆ ಈ ಮಾತಿನಲ್ಲಿ ನಂಬಿಕೆ ಹುಟ್ಟಲಿಲ್ಲ. ಅವಳನ್ನು ತರದಿದ್ದರೆ ಮಗ ಹಾಳಾಗುತ್ತಾನೆಂದು ಬಿಡಿಸಿ ಬಿಡಿಸಿ ಹೇಳಿದುದರಿಂದ ಮಗನ ಭವಿಷ್ಯದ ಬಗೆಗೆ ಆಕೆಯ ಭಯ ಹೆಚ್ಚಾಯಿತೇ ವಿನಾ ಇವಳನ್ನು ಮಾಡಿಕೊಳ್ಳಲು ಒಪ್ಪಿಗೆಯಾಗಲಿಲ್ಲ. ಆಗ ಮನೆದೇವರೇ ಕನಸಿನಲ್ಲಿ ಬಂದು ಹೇಳಿದೆ. ಅವರ ಮಾತು ಮೀರುವುದುಂಟೆ? 'ಆಗ ಮನೇದೇವರು ಹೇಳಿದ ಹಂಗೆ ಕೇಳಿದೆವಲ್ಲ. ನೀನು ಅಂದ ಹಂಗೆ ಗುಡಿಗೆ ಗೋಡೇನೂ ಕಟ್ಟಿಸಿದೆವಲ್ಲ. ಅಷ್ಟೆಲ್ಲ ಮಾಡಿದರೂ ಹಿಂಗಾಗಬೇಕಾದರೆ ನಿನ್ನ ಕನಸಿನಲ್ಲೇ ತಪ್ಪಿರಬೇಕು. ಅಥವಾ ನೀನು ಅರ್ಥ ಮಾಡ್ಕಂಡಿರೂದೇ ತಪ್ಪಾಗಿತ್ತು. ನಿಂಗೆ ಬಿದ್ದ ಕನಸಿನ ಅರ್ಥ ಹಿಂಗೇಯಾ ಅಂತ ಗ್ಯಾರಂಟಿ ಹೇಳ್ತಿಯ?'

ಎರಡು ವರ್ಷದ ಹಿಂದೆ ಬಿದ್ದ ಕನಸು ಮತ್ತು ಅದರ ವ್ಯಾಖ್ಯೆಯನ್ನು ಸ್ಪಷ್ಟವಾಗಿ ನೆನೆಸಿಕೊಂಡು ಆತ್ಮವಿಶ್ವಾಸದಿಂದ ಹೇಳುವ ತಿಳಿವಳಿಕೆ ರಂಗಮ್ಮನಿಗೆ ಇಲ್ಲ. ಒಟ್ಟಿನಲ್ಲಿ ಅವಳ ಮಗ ಮತ್ತೆ ಮದುವೆಯಾಗಿ ಸುಖವಾಗಿದ್ದು ಅವನ ಹೊಟ್ಟೆಯಲ್ಲಿ ಮಕ್ಕಳು, ಅದೂ ಗಂಡು ಮಕ್ಕಳು ಆಗುವುದು ಅವಳಿಗೆ ಬೇಕು. ಕನಸಿನಲ್ಲಿ ಹೀಗೆಯೋ ಬಿದ್ದಿತ್ತು ಅನ್ನುವದು ಮುಖ್ಯವಲ್ಲ. ಯಜಮಾನರು ಅಂದರು: 'ಆಗಲೂ ನೀನು ಪಲ್ಲೆ ಅಂದೆ ಅಂತ ನಾನು ನಿನ್ನ ಮಾತು ಕೇಳಿ ಮಂಡ್ಯದ ಹೆಣ್ಣು ನೋಡಿದೆ. ಇಲ್ದೇ ಇದ್ರೆ ಇವನ್ನೇ ಆಗಲಿ ಅಂತಿದ್ದೆ.'

'ಇವಳು ಬ್ಯಾಡ ಅಂತ ನೀವೇ ಅಲ್ವಾ ಅಂದದ್ದು?'

'ನಿಂಗೆ ಗ್ಯಾನ ಎತ್ಲಾಗ್ಯೆತೆ? ಚೆನ್ನಾಗಿ ಗ್ಯಾಪಿಸ್ಕೊ'–ಎಂದು ರೇಗಿ

ದುದಕ್ಕೆ ಅವಳ ನೆನಪು ಕಲಸಿಹೋಯಿತು. ವಾದ ಮಾಡಿದರೆ ಗಂಡ ಬೈಯುತ್ತಾರೆಂಬುದು ಮಾತ್ರವಲ್ಲ. ತಪ್ಪು ತನ್ನದೇ ಇದ್ದರೂ ಇರಬಹುದು ಎಂಬ ಶಂಕೆಯೂ ಸುಳಿಯಿತು.

'ಆದ್ದಾಯ್ತು. ನಿಂದೇನೂ ತಪ್ಪಿಲ್ಲ. ಮುಂದ್ಲುದ್ದ ನೋಡು' – ಗಂಡ ಎಂದರು.

'ಹಾರುವರ ಹುಡುಗೀ ಕೈಲಿ ಎಂಜಲು ಎತ್ತಿಸ್‌ಭೌದಾ?'

'ಅವಳ್ಯಾಕೆ ಎಂಜಲು ಎತ್ತಬೇಕು? ಮನ್ಲಿ ಆಳು ಇರಾಕಿಲ್ವ? ಮುಂಡ್ಯದೋರು ಇಟ್ಟಹಂಗೆ ಮನ್ಲಿ ಹಾರುವರ ಅಡಿಗೆಯೋರನ್ನೇ ಇಡಾಣ. ಸರಿಯಾಯ್ತದೆ.'

ರಂಗಮ್ಮನ ಹೆದರಿಕೆ ನೀಗುತ್ತಿತ್ತು. ಈಗಲೇ ಅವಳ ಮನಸ್ಸಿನಲ್ಲಿ ಪೂರ್ತಿ ನಂಬಿಕೆ ಹುಟ್ಟಿಸಬಾರದು; ಸಮಯ ಬಿದ್ದರೆ ಉಪಯೋಗಕ್ಕೆ ಬರಲಿ ಎಂದು ಯೋಚಿಸಿದ ಯಜಮಾನರು, 'ನೀನು ಊರಿಗೆ ಹೋಗು. ಇವನು ಹಿಂಗೆ ಆಗ್ಯವ್ನೆ. ಅವಳುನ್ನ ತರದೆ ಇದ್‌ರೆ ಅವನು ಕೈಬಿಟ್ಟು ಹೋಗ್ತಾನೆ. ಏನ್ಮಾಡಾಣ? ನಾನು ಹಿಂಗಂದೆ ಅಂತ ಎಲ್ಲಾನೂ ಅಪ್ಪಾರ ಕುಟ್ಟಿ ಹ್ಯೇಳು. ಅವರೇ ನಂತಾರೆ ನೋಡಾಣ. ಅಷ್ಟರಲ್ಲಿ ನಾನು ಒಬ್ಬ ಶಾಸ್ತ್ರದೋರನ್ನ ಕೇಳ್ತೀನಿ. ತಿರುಪತೀಲಿ ಪಳ್ಳೀ ಭಾರೀ ಶಾಸ್ತ್ರದೋರು ಅವ್‌ರಂತೆ' ಎಂದರು.

ರಂಗಮ್ಮ ಮರುದಿನವೇ ಕಾರಿನಲ್ಲಿ ಕೂತು ಊರಿಗೆ ಹೋದಳು. ಅವಳನ್ನು ಕಳಿಸಿದ ಮೇಲೆ ಮಂತ್ರಿಗಳಿಗೆ ಒಂದು ಹೊಸ ಅಡ್ಡಿ ಕಾಣಿಸಿತು. ನಾವು ಒಪ್ಪಬಹುದು. ಆದರೆ ಯುಂಗ್‌ಟೇಶ ಒಪ್ತಾನಾ? ಪಾರ್ಕ್‌ಡಾ ಬಡ್ಡೀಮಗ ಅವನು. ಆಗ ಮದುವೆ ತಪ್ಪಿಸಬೇಕಾದರೆ ನಾನ ಏಟು ಆಟ ಮಾಡಿ ಬುದ್ಧಿ ಚಲಾಯಿಸಿದ್ರೋ ಅವನೂ ಅಷ್ಟೇ ಆಡಿದ. ಎಷ್ಟೇ ಆದರೂ ಜಾತಿ ಜಂಬ ಅವನಿಗೆ ಕಮ್ಮಿ ಇಲ್ಲ. ಹುಡುಗಿ ಒಪ್ಕಭೌದು. ಅವಳುನ್ನ ಕರ್ಕಂಡ್ ಬಂದು ಊರಲ್ಲೇ ಜಡಿದು ಧಾರೆ ಹುಯ್ಯಿಸ್‌ಭೌದು. ಆದರೆ ಅವನು ವಿರೋಧ ನಿಲ್ತಾನೆ. ನಿಂತ್ಕಂಡ್ ನನ್‌ತವ ಏನ್ ಕಿತ್ಕತ್ತಾನೆ ಆ ಹಾರುವ ಬಡ್ಡೀಮಗ ಎಂಬ ಜೋರತ್ತು ಒಂದು ನಿಮಿಷ ಹುಟ್ಟಿದರೂ, ಮರುಕ್ಷಣವೇ ಬುದ್ಧಿ ವಿವೇಕ ಹೇಳಿತು: ತಂತ್ರಗಾರ ಬಡ್ಡೀಮಗ ಅವನು. ನೇರವಾಗಿ ಎದುರುಬೀಳಾಕಿಲ್ಲ. ತಾಲ್ಲೂಕು ಮುಖಂಡರೆಲ್ಲ ಅವನಿಗೆ ಗೊತ್ತಿವ್‌ರೆ. ನಮ್ಮ ಜಾತಿಯೋನ್ನೇ ಯಾರನ್ನಾದ್ರೂ ಉಮೇದು ಮಾಡಿ ಎಲೆಕ್ಷನ್ನಿಗೆ ನಿಲ್ಲಿಸಿ, ರೈತನಾಗಿ ಹುಟ್ಟಿ ರೈತರ ಮನ್ಲಿ ಎಣ್ಣು ತರದೆ ಬ್ಯಾರೆ ಜಾತೀಲಿ ತಂದ ಮೇಲುಗಿರಿಗೌಡುಂಗೆ ಓಟು ಹಾಕಬ್ಯಾಡಿ ಅಂತ ಕ್ಯಾನ್‌ವಾಸ್ ಮಾಡ್ಸಿ ನನ್ನ ಪಲ್ಟಿ ಹೊಡಿಸಭೌದು. ನಮ್ಮ ಜಾತಿ ಜನ ಒಂದ್‌ರೆ ತಿಳಿವಳಿಕೆ ಇಲ್ಲ. ನಮ್ ನಮ್ಮೋರ ಎಗೇನೆಸ್ಟ್ ನಿಲ್ಲಬ್ಯಾಡ್‌ದು ಅನ್ನೋ

ನೀಯತ್ತಿಲ್ಲ. ಇದ್ದಿದ್ದರೆ ಯಾಕೆ ಹಿಂದುಳೀತಿದ್ವು ಮುಂಗನನ್ಮಕ್ಳು? – ಎಂದು ಕೊಂಡರು.

ಆದರೆ ಯಂಗ್‌ಟೇಶನಿಗೆ ಏನು ಮಾಡಾದು? ಮೋಟಾರು ಲೈನು ಮಡಗ ಬೇಕು ಅಂತ ಬಲೇ ಆಸೆಯಾಗಿದ್ದ. ನಾನು ಹಾಯಗೊಡಲಿಲ್ಲ. ಹಾಯಗೊಟ್ಟು ಅವನು ಬಲಿಯುಕ್ಕೆ ಬಿಟ್ಟಿದ್ರೆ ಯಾವತ್ತಾದ್ರೂ ನನ್ನ ಮ್ಯಾಲೆ ಹಾರುವಂಥ ಬೀಜ ಅದು. ಈಗ ಏನಾರಾ ಮಾಡಿ ಒಂದು ಲೈನು ಕೊಡಿಸಬೇಕು. ಅಥವಾ ನಮ್ಮದೇ ಒಂದು ಲೈನು ಬಿಟ್ಟುಕೊಡಬೇಕು. ಹ್ಯಂಗೂ ನಮ್ಮ ಬೀಗನೇ ಆಗ್ತಾನೆ. ಬದುಕ್ಕಳ್ಳಿ – ಎಂದು ಪರಿಹಾರವನ್ನೂ ಆಲೋಚಿಸಿಕೊಂಡರು.

೩

ಹುಚ್ಚುಹಿಡಿದ ಪೂಜಾರಿ ವೆಂಕಟರಮಣಯ್ಯ ಶಾಪಹಾಕಿದಂತೆ ಮೊಮ್ಮಗನ ಹೆಂಡತಿ ಸತ್ತು ಅವಳ ಬಸುರೂ ದಕ್ಕದಂತಾದುದಕ್ಕೆ ದೊಡ್ಡ ಪಟೇಲ್ ತಿರುಮಲೇಗೌಡರಿಗೆ ದುಃಖವುಂಟಾದುದು ಮಾತ್ರವಲ್ಲ, ಬ್ರಾಹ್ಮಣ ಶಾಪದ ಬಗೆಗೆ ಭಯವೂ ಆಯಿತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂದು ಹಿಂದಿನವರು ಮಾಡಿರುವುದು ಸುಳ್ಳಲ್ಲ. ದಿನಸಿ ಧಾನ್ಯಗಳನ್ನು ಕೊಟ್ಟು ಇತರರು ಬ್ರಾಹ್ಮಣರನ್ನು ಸಂತುಷ್ಟರನ್ನಾಗಿಸಬೇಕೆಂದು ಅವರು ಯೋಚಿಸಿಕೊಂಡರು. ಆದರೆ ವೆಂಕಟರಮಣಯ್ಯ ತನ್ನ ಮೊಮ್ಮಗನ ಹೆಂಡತಿಯನ್ನು ಯಾಕೆ ಶಪಿಸಿದ? ನಾವು ಅವನಿಗೆ ಮಾಡಿದ್ದ ಅನ್ಯಾಯವೇನು? ತಮಗೆ ನೆನಪಿರುವ ಮಟ್ಟಿಗೆ ತಾವು ಎಂದೂ ಆ ಪೂಜಾರಿಗೆ ಅನ್ಯಾಯ ಮಾಡಿಲ್ಲ. ತಮ್ಮ ಪೂರ್ವಿಕರ ರಾಜ್ಯಭಾರದಲ್ಲೇ ಗುಡಿಗೆ ಇನಾಮತಿ ಹಾಕಿದುದು. ಆಮೇಲೆ ಮಹಾರಾಜ ಸರ್ಕಾರವು ಅದನ್ನು ಕಮ್ಮಿ ಮಾಡಿತೇ ಹೊರತು ತಾವಾಗಲಿ ತಮ್ಮ ತಂದೆ ತಾತರಾಗಲಿ ಮಾಡಲಿಲ್ಲ. ಆದರೂ ಅವನು ತಮ್ಮ ಮೊಮ್ಮಗಳನ್ನು, ಮೊಮ್ಮಗನ ಬೀಜವನ್ನು ಹಾಗೆ ಶಪಿಸಬೇಕಾದರೆ ಏನು ಕಾರಣವಿರಬಹುದು? ತಮ್ಮ ಮಗಳನ್ನು ಮಾಡಿಕೊಳ್ಳಲಿಲ್ಲ ಅನ್ನುವ ಸಿಟ್ಟೆ? ಆದರೆ ಈ ಮದುವೆ ಆಗಕೂಡದು ಅಂತ ಆ ವಯ್ಯನೇ ಅಡ್ಡ ಹಾಕಿದನಲ್ಲ. ಅವನೇ ಮಗಳನ್ನು ಯಕ್ಕಡದಾಗೆ ಹೊಡೆದನಂತಲ್ಲ. ಹಿಂಗಾದ್ಮೇಲೆ ಯಾಕೆ ಶಾಪ ಹಾಕಿದ? ಅಥವಾ ಹುಚ್ಚಿನಲ್ಲಿ ಬುದ್ಧಿ ಸ್ವಟ್ಟಗಿಲ್ಲದೆ ಅಂದ ಮಾತೋ? ಹಂಗಿದ್ರೆ ಅದು ನಿಜವೇ ಹ್ಯಂಗೆ ಆಯಿತು?

ಈ ಜಿಜ್ಞಾಸೆ ಮನಸ್ಸಿನಲ್ಲಿ ಕೆಲವು ದಿನ ನಡೆಯಿತು. ಆದದ್ದಾಯಿತು. ಮತ್ತೊಂದು ಹೆಣ್ಣು ತಂದು ಮದುವೆ ಮಾಡಬೇಕು ಎಂದು ಮಗನಿಗೆ ಹೇಳು

ತ್ತಿದ್ದರು. ಸರಿಯಾದ ಕಡೆ ಸಂಬಂಧ ಸಿಕ್ಕಬೇಕೆಂದು ದಿವಾನಮಗ ಮುಂದು ಹಾಕುತ್ತಿದ್ದರು. ಅದೂ ನಿಜ. ದೊರೆಯ ಮನೆತನದ ತಾವು ಬೇವಾರ್ಸಿ ಮನೆಗಳ ಹೆಣ್ಣು ತರಬಾರದು ಎಂಬ ವಿಚಾರ[illegible]ಎಂದ ಅವರೂ ನಿಧಾನ ಮಾಡಿದರು. ಮೊಮ್ಮಗನೇ ಒಂದು ಥರ ಆಗುತ್ತಿ[illegible]ತ್ತಿದ್ದಾನೆಂಬ ಸುದ್ದಿ ಕಿವಿಗೆ ಬಿದ್ದಾಗ ಆತಂಕ ವಾಯಿತಾದರೂ, ಈ ಪ್ರಾ[illegible]ಯದಲ್ಲಿ ಇದ್ದ ಹೆಂಡತಿ ಸತ್ತಮ್ಯಾಗೆ ಇನ್ನೊಬ್ಬಳು ಬರೂಗಂಟ ಹಂಗಾಗುತ್ತೆ [illegible] ಎಂದುಕೊಂಡು ಸುಮ್ಮನಾದರು. ಮೊಮ್ಮಗ ಊರಿಗೆ ಬಂದೇ ಇರಲಿಲ್ಲ. [illegible] ಸ್ಥಿರಿಸಲು [illegible] ಊರಿನ ಜನಗಣತಿಯಾಗಿ ಪ್ರತಿಯೊಂದು ಮತದ ಅಂತಸ್ತನ್ನು ನೆನಪು [illegible] ತಾವು ರಾಜಪಟ್ಟದ ಮೇಲೆ ಕೂತಿದ್ದಾಗ ಅವರಿಗೆ ಮೊಮ್ಮಗನ [illegible] ಬಂತು. ತಾವು ಇಲ್ಲಿ ಆಳ್ತಿದೀವಿ, ಮಗ ಅಲ್ಲಿ ದೇಶಕ್ಕೆ ದೇಶಾನೇ ಆಳ್ತಾ [illegible]ವ್ನೆ. ಆದರೆ ತಮಗಿನ್ನೂ ಮೊಮ್ಮಗ ಆಗಿಲ್ಲ. ಈ ಬೀಜ ಮೊಳೆಯುಲ್ಲ ಅಂತ ಈ ಗುಡಿ ತಾವ್ಳೇ ಹಾರುವಯ್ಯ ಶಾಪ ಕೊಟ್ಟದ್ದು. ಮುಂದೆ ರಾಜ್ಯಾಧಿಕಾರ ಮಾಡುಕ್ಕೆ ಯಾರೂ ಹುಟ್ಟದೇ ಇದ್ದರೆ ಗತಿ ಏನು? – ಎಂಬ ಯೋಚನೆ ಹುಟ್ಟಿತು. ಬೇಗ ಅವನಿಗೆ ಮದುವೆ ಮಾಡಬೇಕು. ಮಕ್ಕಳು ಯಾಕೆ ಹುಟ್ಟಾಕಿಲ್ಲ? ಮೊದಲನೆಯೋಳಿಗೆ ಮದುವೆಯಾದ ಎರಡು ತಿಂಗಳಿಗೇ ಮೊಳಕೆ ಯಾಯ್ತು. ಬೀಜ ಸ್ವೈನಾಗಿಯೇ ಅದೆ. ಎರಡನೆಯೋಳಲ್ಲಿ ಮೊಳೀದೇ ಇದ್ರೆ ನೆಲದ್ದೇ ತಪ್ಪು. ಅವಳು ಬ್ಯಾಡ, ಇನ್ನೊಬ್ಬಳನ್ನ ತರಾದು – ಎಂದುಕೊಂಡರು.

ಇದಾದ ಎಂಟನೆಯ ದಿನ ಸೊಸೆ ಊರಿಗೆ ಬಂದಳು. ಮಗ ಈಗ ಆಗಿರುವ ರೀತಿಯನ್ನೆಲ್ಲ ವರ್ಣಿಸಿ, ತಾನು ತುಮಕೂರಿಗೆ ಹೋಗಿದ್ದುದು ಯಜಮಾನರು ಹೋಗಿದ್ದಾಗ ಅವನು ಮಾಡಿದುದು, ಎಲ್ಲವನ್ನೂ ಹೇಳಿದಳು. ಮೋಟಾರಿನ ಲೆಕ್ಕ ನೋಡಪೆ ಏರಿಯ ಸಂದಿಯಲ್ಲಿ ಸೋರಿಹೋಗುವಂತೆ ಆಗುತ್ತಿರುವುದನ್ನು ವಿವರಿಸಿದಳು. 'ಈ ಬ್ರಾಂಬ್ರ ಹುಡುಗಿ ತಲಾಕ್ ಒಪ್ಪದೇ ಇದ್ರೆ ಅವ್ನು ಮದುವೆಯೇ ಆಗಾಕಿಲ್ಲ. ಕುಡ್ದು ಹಾಳಾಯ್ತನೆ' – ಎಂಬ ತನ್ನ ಮತ್ತು ತನ್ನ ಗಂಡನ ಖಚಿತ ಅಭಿಪ್ರಾಯ ತಿಳಿಸಿದಾಗ ದೊಡ್ಡ ಗೌಡರಿಗೆ ಗಾಬರಿಯಾದದ್ದು ಮಾತ್ರವಲ್ಲ, ಭಾರೀ ಕೋಪವೂ ಬಂತು. 'ನಡಿ, ನಾನೂ ಜತೇಲಿ ಬತ್ತಿನಿ. ಈ ಬೆತ್ತದ ಕೋಲಿನಾಗೆ ಸ್ವಂಟ ಮುರಿದುಬಿಡ್ತೀನಿ' – ಎಂದು ಗರ್ಜಿಸಿದರು. ಅವನು ಯಾವುದಕ್ಕೂ ಬಗ್ಗುವುದಿಲ್ಲವೆಂದು ಅವಳು ಬಿಡಿಸಿ ಹೇಳಿದಳು.

ಬೆಂಗಳೂರಿಗೆ ವಾಪಸು ಹೋಗುವಂತೆ ಡ್ರೈವರ್‌ನನ್ನು ಕಾರಿನ ಜೊತೆ ಕಳಿಸಿ ಮಗನನ್ನು ಊರಿನಲ್ಲೇ ಉಳಿದಳು. ದೊಡ್ಡ ಯಜಮಾನರು ಇದೇ ವಿಷಯವನ್ನು ಯೋಚಿಸುತ್ತಿದ್ದರು. ಮಣಿಸರ ಹಿಡಿದು ಜಪ ಮಾಡುವಾಗ, ನಂದಾಸನದ ಮುಂದೆ ಕೂತು ಪೂಜೆ ಮಾಡುವಾಗ, ರಾತ್ರಿ ಮಲಗಿದಾಗ ಸಹ ಒಂದೇ

ಯೋಚನೆ: ಬ್ರಾಹ್ಮಣ ಹುಡುಗಿಯನ್ನು ಕ್ಷತ್ರಿಯರಾದ ತಾವು ತರಬಹುದೆ?

ಕೆಲವು ಕ್ಷತ್ರಿಯ ಕನ್ಯೆಯರನ್ನು ಬ್ರಾಹ್ಮಣರು ಮದುವೆಯಾದದ್ದುಂಟು. ದಶರಥ ಮಹಾರಾಜನ ಪುತ್ರಿ ಶಾಂತವ್ವನನ್ನು ಹಾರುವರ ಜಾತಿಯ ಋಷಿಶೃಂಗ ಮುನಿಗೆ ಕೊಟ್ಟರಲ್ಲ. ಆದರೆ ಬ್ರಾಹ್ಮಣ ಹುಡುಗಿಯನ್ನು ಕ್ಷತ್ರಿಯರು ತಂದು ಕೊಂಡದ್ದು ಎಲ್ಲಿ?–ಎಂದು ತಮ್ಮ ಪುರಾಣದ ನೆನಪನ್ನೆಲ್ಲ ಕೆದಕಿ ಕೆದಕಿ ನೋಡಿ ಕೊಂಡರು. ಹಾ, ಸಿಕ್ತು: ಯಯಾತಿ ಮಹಾರಾಜ ಶುಕ್ರಾಚಾರ್ಯರ ಮಗಳು ದೇವಯಾನೀನ ಮದುವೆಯಾದನಲ. ಅಂತೂ ಸಮಸ್ಯೆ ಬಗೆಹರಿಯಿತು. ಆದರೆ ದೇವಯಾನಿ ರಾಕ್ಷಸ ಗುರುವಿನ ಮಗಳು. ಅವಳನ್ನು ಮಾಡಿಕೊಂಡದ್ದರಿಂದ ಮಹಾರಾಜನಿಗೆ ಮುಂದೆ ಸುಖವೇನೂ ಆಗಲಿಲ್ಲ. ಕೊನೆಗೂ ಅಪ್ಪನ ಕೈಲಿ ಶಾಪವನ್ನೇ ಕೊಡಿಸಿದಳು–ಎಂಬ ಆಕ್ಷೇಪ ಬಂದರೂ, ಈಗ ಶಾಪ ಕೊಡಾಕೆ ಇವಳ ಅಪ್ಪನೇ ಇಲ್ಲವಲ. ಕೊಡೂ ಶಾಪ ಅವನು ಮೊದಲೇ ಕೊಟ್ಟೆದಾನೆ. ಆದರೆ ತನ್ನ ಮಗಳ ಮ್ಯಾಲೆ ತಾನೇ ಯಾಕೆ ಕೊಟ್ಟಾನು. ಇದೇ ಸರಿ ಎನಿಸಿತು.

ಆದರೆ ಅವತ್ತು ಅವಳು ತುಂಬಿದ ಸಭೆಗೆ ಬಂದು, ಜಾತಿ ಎಲ್ಲ ಸುಳ್ಳು, ಎಲ್ಲಾ ಬ್ರಾಂಬ್ರು, ಯಾರು ಬೇಕಾದ್ರೂ ಜನಿವಾರ ಹಾಕಿಸ್ಕಬೌದು, ನಾನೇ ಹಾಕ್ತೀನಿ ಅಂದಳಲ್ಲ. ಅವಳಿಗೆ ಬುದ್ಧಿ ಸರಿಯಾಗ್ಯದಾ? ಜಾತಿಯೇ ಸುಳ್ಳಾದರೆ ಇವಳು ಬ್ರಾಹ್ಮಣರೋಳು ಹ್ಯಂಗಾಗ್ತಳೆ? ಅವಳನ್ನ ಹ್ಯಂಗೆ ತಂದ್ಕಳಾದು? ಅದೂ ಅಲ್ಲದೆ ಇನ್ನೂ ಒಂದು ಅಂಶ ಅವರ ಮನಸ್ಸಿನಲ್ಲಿ ಅಡ್ಡ ಬಂತು. ಈಗ ಈ ಊರಲ್ಲೇ ಅವ್‌ಳಂತೆ. ತ್ವಾಟ ಗದ್ದೆಯಾಗೆ ರೈತರ ಹೆಂಗಸಿನ ಹಂಗೆ ಕೆಲಸ ಮಾಡ್ತಾಳಂತೆ. ದೊಡ್ಡ ಗೌಡರ ಮನೆಯ ಹೆಂಗಸರು ಎಂದೂ ಹೊಲ ಗದ್ದೆಗಳಲ್ಲಿ ದುಡಿಯಲು ಹೋದವರಲ್ಲ. ಇವರು ಕಳಿಸಿದವರಲ್ಲ. ತಮ್ಮ ಹೆಂಗಸರನ್ನು ಮಣ್ಣು ಮುಟ್ಟಲು ಕಳಿಸಿದರೆ ರಾಜಮನೆತನದ ಘನತೆ ಏನಾಗಬೇಕು? ಹೆಣ್ಣು ತಂದರೂ ಗೌರವ ಇರೂ ಮನೇದು ತರಬೇಕು–ಎಂದುಕೊಂಡರು. ಅಂತೂ ಅವರ ಧರ್ಮಜಿಜ್ಞಾಸೆ ಬಗೆಹರಿಯಲಿಲ್ಲ. ಸೊಸೆಯನ್ನೇ ಕರೆದು ಎಲ್ಲವನ್ನೂ ಮತ್ತೆ ಚರ್ಚಿಸಿದರು. ಶುಕ್ರಾಚಾರ್ಯರ ಮಗಳನ್ನು ಯಯಾತಿ ಮಹಾರಾಜ ಮದುವೆಯಾದುದು ಮೊದಲಾಗಿ ಅವಳಿಗೆ ತಿಳಿದಿಲ್ಲ. ಆದರೆ ಆ ಮದುವೆಯಿಂದ ಮುಂದೆ ಸುಖವಾಗಲಿಲ್ಲವೆಂದಾಗ ಭಯವಾಯಿತು. ಈಗ ಅವಳು ಬ್ಯಾಸಾಯ ಕಸುಬು ಮಾಡ್ತಾಳಂತೆ. ಅಂದ್‌ರೆ ನಮ್ಮೋಳೇ ಆದಳು. ಆದರೆ ಜನಿವಾರ ಹಾಕಂಡವ್‌ಳಂತೆ. ಎಂದರೆ ಬ್ರಾಹ್ಮಣ ಗಂಡಸರಿಗಿಂತ ಹೆಚ್ಚಿನೋಳೇ ಅವಳು?

ಯೋಚಿಸಿ ಯೋಚಿಸಿ, ತನಗೆ ಹೊಳೆದ ಒಂದು ಉಪಾಯವನ್ನು ಅವಳು ಮಾವನವರ ಮುಂದಿಟ್ಟಳು: 'ಇಂತದೆಲ್ಲ ನಮ್ಗೆ ತಿಳಿಯಾಕಿಲ್ಲ. ಗ್ರಾಮದೇವತೇನ

ಕೇಳಾಣ. ಅವಳು ಹೇಳ್ದಹಂಗೆ ಮಾಡಾಣ.'

ಗ್ರಾಮದೇವತೆ ಮಾರಮ್ಮನ ಹಬ್ಬ ಚೈತ್ರಮಾಸದಲ್ಲಿ, ಎಂದರೆ ಇದೇ ತಿಂಗಳು. ಇನ್ನು ಹತ್ತು ಹನ್ನೆರಡು ದಿನದಲ್ಲಿ ಆಗುತ್ತದೆ. ಹಬ್ಬದಲ್ಲಿ ಅವಳಿಗೆ ಸೀರೆ, ಕುಂಕುಮ, ತಾಳಿ, ಒಡವೆ ತೆಗೆದುಕೊಂಡು ಹೋಗುವುದು ಗ್ರಾಮ ಮುಖ್ಯರಾದ ತಮ್ಮ ಕೆಲಸ. ಮೊದಲು ಅವರು ಸ್ವತಃ ತೆಗೆದುಕೊಂಡು ಹೋಗುತ್ತಿದ್ದರು. ಆದರೆ ಕಥೆ ಪುರಾಣಗಳನ್ನು ಓದಿಕೊಂಡು ರಾಜರ್ಷಿಗಳಾದ ಮೇಲೆ ಕೀಳು ದೇವರ ಪೂಜೆಯನ್ನು ಕೈಬಿಟ್ಟು ಧ್ಯಾನ, ಜಪದ ಮಣಿಗಳನ್ನು ಹಿಡಿದರು. ಊರ ದೊರೆಯೇ ಮಾಡಬೇಕೆಂಬ ನಿಯಮವನ್ನು ಪೂರ್ತಿ ಉಲ್ಲಂಘಿಸದೆ ಸೀರೆಯ ಹೆಡಿಗೆಯನ್ನು ತಮ್ಮ ಅಣ್ಣನ ಮಗ ಕಾಳೇಗೌಡನ ಕೈಲಿ ಕಳಿಸುತ್ತಿದ್ದರು. ಅದೂ ಕಾಳೇಗೌಡ ಆಳಿನ ಕೈಲಿ ಹೊರಿಸಿಕೊಂಡು ತಾನು ಜೊತೆಯಲ್ಲಿ ಹೋಗುತ್ತಿದ್ದ. ಆದರೆ ಈಗ ಸೊಸೆಯ ಸೂಚನೆಯನ್ನು ಕೇಳಿ ಅವರಿಗೆ ಇದ್ದಕ್ಕಿದ್ದ ಹಾಗೆಯೇ ಮಾರಮ್ಮನ ಮೇಲೆ ಭಕ್ತಿ ಬಂದುಬಿಟ್ಟಿತು. ಮನುಷ್ಯ-ಬುದ್ಧಿಗೆ ತಿಳಿಯದಿದ್ದಾಗ ದೇವರನ್ನೇ ನೇರವಾಗಿ ಕೇಳಬೇಕು. ಪೂಜಾರಿಯ ಮೈಮೇಲೆ ಬಂದು ನೇರವಾಗಿ ಮಾತನಾಡುವ ದೇವರೆಂದರೆ ಮಾರಮ್ಮನೇ. ತಮ್ಮ ಕುಲದೇವತೆ ತಿರುಮಲ ಶ್ರೀನಿವಾಸ ಮಾರಮ್ಮನಿಗಿಂತ ಮೇಲಿನ ದಣಿಯಾದರೂ ಅವಳ ಹಾಗೆ ಭವಿಷ್ಯ ಹೇಳುವುದಿಲ್ಲ. ಹೀಗೆಯೇ ಮಾಡು ಅನ್ನುವುದಿಲ್ಲ. ತೀರ ಬಲವಂತ ಮಾಡಿ ಕೇಳಿದರೆ ತನ್ನ ಎಡಗಡೆ ಅಥವಾ ಬಲಗಡೆಯಿಂದ ಹೂವಿನ ಅರಳು ಬೀಳಿಸಿ ಸೂಚನೆ ಕೊಡುತ್ತಾನೆ. ಮೇಲಕ್ಕೆ ಏನಂತೆ ಮಾತು ಕಡಿಮೆ. ಎಲ್ಲವೂ ಸೂಚನೆಯಲ್ಲೇ ನಡೆಯುತ್ತೆ. ನನ್ನ ಮಗ ಮೇಲಗಿರಿಯೂ ಅಷ್ಟೆ. ದಿವಾನನಾದ ಮೇಲೆ ಮಾತೇ ಆಡಾದಿಲ್ಲನಂತೆ. ಕಣ್ಣಿನ ಸೂಚನೆಯಲ್ಲೇ ಅಧಿಕಾರಿಗಳಿಗೆ ಹುಕುಂ ಮಾಡ್ತಾನಂತೆ. ದಡ್ಡ ಅಧಿಕಾರಿಗಳಿಗೆ ಅದು ಸರಿಯಾಗಿ ತಿಳಿಯಾದಿಲ್ಲನಂತೆ. ಹಂಗಂತ ಸೊಸೆಯೇ ಹೇಳಿದ್ದಳು. ಸದ್ಯದ ತಮ್ಮ ಸಮಸ್ಯೆಗೆ, ಬಿಡಿಸಿ ಮಾತನಾಡುವವರು ಬೇಕು. ಆದುದರಿಂದ ಮಾರಮ್ಮನನ್ನು ಕೇಳುವುದೇ ಸರಿ – ಎಂದು ನಿಶ್ಚಯಿಸಿದರು.

ತಮ್ಮ ಕುಲದೇವತೆಯ ಜ್ಞಾಪಕದ ಜೊತೆಗೆ ವೆಂಕಟೇಶನ ನೆನಪು ಬಂತು. ಶಾಸ್ತ್ರ ಸಂಬಂಧ ಎಲ್ಲಾ ಕ್ಷಿಪ್ರವಾಗಿ ತಿಳಿದಿರೂ ಜಾಣ ಅವನು. ಅವನನ್ನೇ ಕೇಳಿದರೆ ಹ್ಯಾಗೆ? ಬ್ರಾಹ್ಮಣರ ಹುಡುಗೀನ ರಾಜಮನೆತನಕ್ಕೆ ಕೊಡಭೌದೋ ಇಲ್ಲವೋ ಅಷ್ಟೇ ಪ್ರಶ್ನೆ ಎಂದುಕೊಂಡರು. ಆದರೆ ಅವನಿಗೆ ಹೇಳಿಕಳಿಸುವಷ್ಟರಲ್ಲಿ ಮಗ ದಿವಾನರೇ ಬಂದರು. ಶ್ರೀನಿವಾಸ ಬೆಂಗಳೂರಿಗೆ ಬಂದು ಕಾರಿನಲ್ಲಿ ಇಪ್ಪತ್ತೈದು ಬೀರ್ ಸೀಸೆಗಳನ್ನು ತುಮಕೂರಿಗೆ ಒಯ್ಯುತ್ತಿದ್ದನಂತೆ. ಮಧ್ಯ

ನೆಲಮಂಗಲದ ಹತ್ತಿರ ಪೋಲೀಸಿನವರು ಹಿಡಿದರಂತೆ. ಆಮೇಲೆ ಬೆಂಗಳೂರಿನಲ್ಲಿ ತಮಗೆ ಫೋನು ಬಂದು ತಾವು ಗೃಹ ಖಾತೆಯ ಉಪಸಚಿವರಿಗೆ ಹೇಳಿ ಅವರ ಮೂಲಕ ಡಿ.ಎಸ್.ಪಿ.ಗೆ ಹೇಳಿಸಿ ಅವನ ಕಾರನ್ನು ಬಿಡಿಸಿಕಳಿಸಿದರಂತೆ. ಬೇಗ ಮದುವೆ ಮಾಡಿಬಿಡಬೇಕು. ಕಾಯುವಂತೆಯೇ ಇಲ್ಲ. ಊರಿಗೆ ಹೋದ ಇವಳೂ ಬರಲಿಲ್ಲ ಎಂಬ ತವಕದಿಂದ ಅವರು ಸ್ವತಃ ಬಂದರು. ತಮ್ಮ ತೀರ್ಥರೂಪರ ವಿಚಾರಗಳನ್ನೆಲ್ಲ ಕೇಳಿದರು. ವೆಂಕಟೇಶನನ್ನು ಈ ಮಟ್ಟದಲ್ಲಿ ಕೇಳುವುದು ಅಪಾಯ. ಅವನು ಒಳಗೇ ಡೈನಾಮೈಟ್ ಇಡಬಹುದು. ತಂಗಿಗೇ ಏನಾದರೂ ಹೇಳಿಕೊಟ್ಟು ಅವಳ ಮನಸ್ಸು ತಿರುಗಿಸಬಹುದು. ಮೊದಲ ಸಲ ಮಾಡ್ಕಳ್ಲಿಲ್ಲ ಅಂತ ಹ್ಯಾಂಗೂ ಅವಳಿಗೆ ಬೇಜಾರಿರುತ್ತೆ ಎಂದು ಯೋಚಿಸಿ, 'ಅವನಿಗೆ ಸಮಾಚಾರ ಬಿಲ್‌ಕುಲ್ ತಿಳೀಕೂಡದು. ಆಮ್ಯಾಲೆ ನಾನು ಹೇಳ್ತೀನಿ' ಎಂದರು.

'ಹಂಗಾದ್ರೆ ಮಾರಮ್ಮನ್ನ ಕೇಳಿಬಿಡಾಣ' – ಹೆಂಡತಿ ಎಂದಳು.

'ಅವಳುನ್ನೇನ್ ಕೇಳಾದು?'

'ನಮ್ಗೆ ಈಡಾಗಬೇಕೋ ಬ್ಯಾಡವೋ? ಎಲ್ಲೂ ಮಾಡದ ಕೆಲ್ಸ ನಾವು ಮಾಡಾಕ್ ಹ್ವಂಟಿದೀವಿ. ದೊಡ್ಡ ಗೌಡರೂ ಕೇಳಾಣ ಅಂತಾರೆ.'

ಮಾರಮ್ಮನನ್ನು ಕೇಳದೆ ಕೆಲಸ ಮಾಡಲು ತಂದೆ ಮತ್ತು ಹೆಂಡತಿ, ಇಬ್ಬರೂ ಸಿದ್ಧರಿಲ್ಲವೆಂಬುದನ್ನು ಅವರು ಅರ್ಥಮಾಡಿಕೊಂಡರು. ಯಾವುದೇ ಕೆಲಸದ ಪೂರ್ಣ ಜವಾಬ್ದಾರಿಯನ್ನು ತಮ್ಮ ಮೇಲೆ ತೆಗೆದುಕೊಳ್ಳಬಾರದು. ಸಮಯ ಬಂದರೆ, 'ನೀವು ಹೀಗಂದ್ರಿ. ನಾನು ಒಪ್ಪಿದೆ' ಎನ್ನಲು ಒಂದು ಅವಕಾಶ ಇಟ್ಟುಕೊಂಡೇ ಕೆಲಸ ಮಾಡುವುದು ಅವರಿಗೆ ಸಾಧಿಸಿದ ವಿಧಾನವಾಗಿತ್ತು. ಮಾರಮ್ಮ ಬ್ಯಾಡ ಅಂದ್ರೆ ಏನು ಮಾಡುವುದು ಎಂಬ ಆತಂಕವೂ ಬಂತು. ಆದರೆ ಗ್ರಾಮದೇವತೆಯ ಶಕ್ತಿಯನ್ನು ಪೂರ್ಣವಾಗಿ ಅಲ್ಲಗಳೆಯುವುದು ಅವರ ಅಂತರಂಗಕ್ಕೂ ಸಾಧ್ಯವಾಗಲಿಲ್ಲ. 'ಹಂಗೆ ಮಾಡಿ. ಡೀಲಿ ಆಗಾಕಾದು' – ಎಂದರು.

'ಇನ್ನು ಎಂಟೇ ದಿನ. ನಾನೇ ಹ್ವಾಗಿ ನಿಂತು ಕೇಳ್ತೀನಿ' – ತೀರ್ಥರೂಪರು ಆಶ್ವಾಸನೆ ಇತ್ತರು.

ಮಾರಮ್ಮನ ಹಬ್ಬ ಮುಗಿಸಿಕೊಂಡೇ ತಾನು ಬೆಂಗಳೂರಿಗೆ ಬರುವುದಾಗಿ ರಂಗಮ್ಮ ಹೇಳಿದಳು. ಮಂತ್ರಿಗಳು ಒಬ್ಬರೇ ಹಿಂತಿರುಗಿದರು.

೪

ತಿರುಮಲಾಪುರದಲ್ಲಿ ಈ ಹಿಂದೆ ನಡೆಯುತ್ತಿದ್ದಷ್ಟು ಅದ್ದೂರಿಯಿಂದ ಮಾರಮ್ಮನ ಹಬ್ಬ ಇತ್ತೀಚೆಗೆ ನಡೆಯುತ್ತಿಲ್ಲ. ದೇವರಿಗೆ ಕುರಿ ಕೋಣ ಬಲಿ ಕೊಡಕೂಡದೆಂದು ಸರ್ಕಾರ ಆಜ್ಞೆ ಮಾಡಿತು. ಅಲ್ಲದೆ ಬೆಟ್ಟಯ್ಯನವರು ಆಶ್ರಮದಿಂದ ಬಂದು ಹರಿಜನ ಮುಖಂಡರಾದ ಮೇಲೆ ಮಾರಮ್ಮನಿಗೆ ಕೂಡ ಹಣ್ಣುಕಾಯಿ ನೈವೇದ್ಯ ಸಾಕು, ರಕ್ತಬಲಿ ಬಾರದು ಎಂಬ ತತ್ವವನ್ನು ಪ್ರಾರಂಭಿಸಿದರು. ಅವರ ಜಾತಿಯಲ್ಲಿ ಎಲ್ಲರೂ ಈ ಹೊಸ ಮಾರ್ಗವನ್ನು ಒಪ್ಪಿಕೊಳ್ಳದಿದ್ದರೂ ಹಬ್ಬಕ್ಕೆ ಈ ಹಿಂದೆ ಇದ್ದ ಸಂಭ್ರಮ ಕಡಿಮೆಯಾಯಿತು. ವರ್ಷಕ್ಕೊಂದು ಸಲ ಹೇಗೂ ಊರಿನಲ್ಲಿ ಶ್ರೀನಿವಾಸ ದೇವರ ರಥೋತ್ಸವ ನಡೆಯುತ್ತದೆ. ಆಗ ಕೋಟೆಯ ಮುಂಭಾಗ ಬಸ್‌ಸ್ಟ್ಯಾಂಡ್ ಹತ್ತಿರ ಮಿಠಾಯಿ, ಬತ್ತಾಸು, ಕಾಗದದ ಹೂವು, ಪೀಪಿ, ಬೊಂಬೆಗಳ ಜಾತ್ರೆ ಸೇರುತ್ತದೆ. ಶ್ರೀನಿವಾಸ ಕಲ್ಯಾಣ, ಗರುಡ ಗರ್ವ ಭಂಗ ಮೊದಲಾದ ವಿಷ್ಣುಮಹಿಮೆಯ ಯಾವುದಾದರೂ ಒಂದು ನಾಟಕವೂ ನಡೆಯುತ್ತದೆ. ಅದು ನಡೆಯುವುದೂ ಚೈತ್ರಮಾಸದಲ್ಲಿ. ಅದೇ ತಿಂಗಳಿನಲ್ಲಿ ಕುರಿ ಕೋಣಗಳನ್ನು ಕಡಿಯದೆ ಮಾರಮ್ಮನ ಹಬ್ಬ ಮಾಡಿದರೆ ಏನು ವಿಶೇಷವಿರುತ್ತದೆ? ಜನ ಹೇಗೆ ಸೇರುತ್ತಾರೆ? ರಕ್ತಬಲಿ ಇಲ್ಲದ್ದರಿಂದ ಅಮ್ಮ ಮೈಮೇಲೆ ಬರುತ್ತಲೂ ಇಲ್ಲ. ಜನರು ತಮ್ಮ ಭವಿಷ್ಯ ಕೇಳಲು ಅವಕಾಶವೂ ಇಲ್ಲ. ಹೀಗಾಗಿ ಗ್ರಾಮದೇವತೆಯು ಹೆಚ್ಚು ಕಡಿಮೆ ಮೂಲೆಗೆ ಬೀಳುತ್ತಿದ್ದಳು.

ದೊಡ್ಡ ಪಟೇಲರು ಮಾದಿಗರ ಸತ್ತಿಗನಿಗೆ ಹೇಳಿಕಳಿಸಿದರು. ಬೆಟ್ಟಯ್ಯನವರು ಇನ್ನೂ ಬೆಟ್ಟಗನಾಗಿದ್ದು ಪ್ರವರ್ಧಮಾನಕ್ಕೆ ಬರುವ ಮುಂಚೆ ಸತ್ತಿಗನೇ ಕೇರಿಯ ಯಜಮಾನನಾಗಿದ್ದ. ಬೆಟ್ಟಯ್ಯನವರಿಗಿಂತ ವಯಸ್ಸಿನಲ್ಲಿ ಏಳೆಂಟು ವರ್ಷಕ್ಕೆ ದೊಡ್ಡವನಾಗಿದ್ದ ಆತನಿಗೂ ಮಂಗಳೂರು ಹೆಂಚಿನ ಮನೆ, ಜಮೀನು ಬಂದಿತ್ತಾದರೂ ಅವನು ಜಮೀನನ್ನು ರೂಢಿಸಿಕೊಂಡವನಲ್ಲ. ಊರಿಗೆ ಊರೇ ಮಾದಿಗನ ಕಾವಲಿನಲ್ಲಿ ಇರಬೇಕಾದರೆ ಅವನಿಗ್ಯಾಕೆ ಸ್ವಂತ ಭೂಮಿ ಎಂಬ ಪರಂಪರಾ ಮನೋಭಾವ ಅವನದು. ಈಚಲುಮರದಲ್ಲಿ ಶೇಂದಿ ಕಟ್ಟುವುದನ್ನು ಸರ್ಕಾರ ನಿಷೇಧಿಸಿದ ಮೇಲೆ ಅಕ್ಕಿ, ಬೆಲ್ಲಗಳಲ್ಲಿ ಸ್ವಂತವಾಗಿ ತಯಾರಿಸಿಕೊಂಡು ಅವನು ತನ್ನ 'ಜಾತಿಧರ್ಮ'ವನ್ನುಳಿಸಿಕೊಂಡಿದ್ದ.

ಅರಮನೆಯ ಹೊರ ಸೂರಿನ ಹತ್ತಿರವೇ ನಿಂತುಕೊಂಡ ಸತ್ತಿಗ ಒಳಕ್ಕೆ ಹೇಳಿಕಳಿಸಿದ. ದೊಡ್ಡಗೌಡರು ಬಂದು ಜಗುಲಿಯ ಮೇಲೆ ಮೆತ್ತೆ, ಅದರ ಮೇಲೆ ಕೃಷ್ಣಾಜಿನ ಹಾಕಿಸಿಕೊಂಡು ಕುಳಿತು ಕೇಳಿದರು: 'ಅಮ್ಮನ ಹಬ್ಬ ಯಾವತ್ತೋ?'

'ಮಂಗಳವಾರಕ್ಕೆಂಟು ದಿನಕ್ಕೆ ರಾಜಪ್ಪ.'

'ನಾವೊಂದು ಪ್ರಶ್ನೆ ಕೇಳಬೇಕಲ್ಲೊ.'

'ಈಗ ಅವಳು ಮೈಮೇಲೆ ಬರಾಕಿಲ್ಲವಲ್ಲಪ್ಪ.'

'ಯಾಕೋ?'

'ಕ್ವಾಣನ ನೆಣ ನೆಲಕ್ಕೆ ಬೀಳದೆ ಅವಳೆಲ್ಲಿ ಬತ್ತಾಳಪ್ಪ? ನಿನ್ನ ಮಗ ದಿವಾನಿಕೆ ಮಾಡಿ ಅಮ್ಮನಿಗೆ ಹೊಟ್ಟೆಗಿಲ್ಲದ ಹಂಗೆ ಮಾಡಿದ್ರು.'

'ಈ ಸಲ ಕಡಿಸಿ. ಕ್ವಾಣನ್ನ ನಾನು ಕೊಡುಸ್ತೀನಿ.'

'ಕಡುಸ್ರೆ ಪೋಲೀಸ್ನೋರು ಹಿಡಕಂಡು ಬೇಡಿ ಆಕ್ತರಂತೆ ಕಣ್ರಪ್ಪ.'

'ಅದ ನಾನು ನೋಡ್ಕಂತೀನಿ.'

'ಎಲ್ಡು ಕುರಿಯಾದ್ರೂ ಬೇಕು.'

'ಅದೇಟು ಖರ್ಚಾದ್ರೂ ನಂಗಿರ್‍ಲಿ. ಅನೇನೇನು ಬೇಕು ನಂಗೆ ಹೇಳು. ಗ್ರಾಮದಲ್ಲಿ ನಡೆಯಾ ಕೆಲಸ ನಡೀಬೇಕು. ರಿವಾಜು ಒಂದು ಚೂರೂ ತಪ್ಪಾಕಾದು. ಊರಲ್ಲಿ ಡಂಗುರ ಹಾಕ್ಸು. ಉಳಿದೋರು ಯಾರಾದ್ರೂ ಬಲಿ ಕೊಡೂದಿದ್ರೆ ಕೊಡ್ಲಿ.'

ಸತ್ತಿಗ ಅದೇ ದಿನ ಡಂಗುರ ಹಾಕಿಸಿದ. ದೊಡ್ಡಗೌಡರು ಸ್ಥಳದ ಪೋಲೀಸ್ ಸಬ್ ಇನ್‌ಸ್ಪೆಕ್ಟರಿಗೆ ಸ್ವತಃ ಹೇಳಿಕಳಿಸಿ, ಈ ವರ್ಷ ಬಲಿಗೆ ಅವಕಾಶ ಕೊಡುವಂತೆ ಹುಕುಂ ಮಾಡಿದರು. ಊರ ಜನರಗೆ ಉತ್ಸಾಹವೋ ಉತ್ಸಾಹ. ಕಳೆದ ಎಂಟು ವರ್ಷಗಳಿಂದ ಇಲ್ಲದ ಬಲಿ ಈ ವರ್ಷ ಅಮ್ಮನಿಗೆ ಆಗುತ್ತದೆ. ಎಂಟು ವರ್ಷದಿಂದ ಪ್ರತಿ ಸಲವೂ ಊರಿನ ಕೆರೆ ತುಂಬುತ್ತಿಲ್ಲ. ಒಂದು ವರ್ಷ ತುಂಬಿದರೆ ಇನ್ನೊಂದು ವರ್ಷ ಅರೆಗೆರೆ ನೀರೂ ಬರುತ್ತಿರಲಿಲ್ಲ. ತೆಂಗಿನ ತೋಟವಿರುವುದರಿಂದ ಈ ಸುತ್ತಮುತ್ತ ಜನ ಸುಖವಾಗಿದ್ದಾರೆ. ಅಲ್ಲದೆ ಪ್ರತಿವರ್ಷವೂ ನಿತ್ಯಬಳಕೆಯ ವಸ್ತುಗಳ ಬೆಲೆ ಏರುತ್ತಿದೆ. ಅಮ್ಮನ ಸಿಟ್ಟೇ ಇದಕ್ಕೆ ಕಾರಣವಿರಬೇಕು. ಜನದ ಉಪಕಾರಕ್ಕೆಂದೇ ದೊಡ್ಡ ಪಟೇಲರು ಈ ಸಲ ಹಬ್ಬ ಮಾಡಿಸುತ್ತಿದ್ದಾರೆ. ಎಲ್ಲ ಜಾತಿಗಳ ಅಂತಸ್ತನ್ನು ವಿಚಾರಿಸಲು ಅವರು ಸಿಂಹಾಸನ ಹತ್ತಿ ಕುಳಿತರು. ಕೊನೆಗೆ ಜಗಳವಾಗಿ ಗಲಾಟೆಯಾಯಿತು. ಖೂನಿಯೇ ಆಗಬೇಕಿತ್ತು. ಅದರೆ ಅದೃಷ್ಟಕ್ಕೆ ಅಂಥದೇನೂ ಆಗಲಿಲ್ಲ. ಅದೆಲ್ಲದರ ಶಾಂತಿಗಾಗಿ ಬಲಿ ನಡೆಯುತ್ತೆ — ಎಂದು ಒಬ್ಬೊಬ್ಬರು ಒಂದೊಂದು ವಿಧವಾಗಿ ಮಾತನಾಡಿಕೊಂಡರು. ಒಟ್ಟಿನಲ್ಲಿ ಬ್ರಾಹ್ಮಣ, ಲಿಂಗಾಯತ, ಗೌಡ, ಬೇಡ, ಮೊದಲಾಗಿ ಎಲ್ಲರೂ ಗ್ರಾಮ ಕಲ್ಯಾಣದ ದೃಷ್ಟಿಯಿಂದ ಅಮ್ಮನ ಹಬ್ಬವನ್ನು ಸ್ವಾಗತಿಸಿದರು.

ಮಾರಮ್ಮನ ಗುಡಿ ಇರುವ ಜಾಗವೂ ತಿರುಮಲಾಪುರದ ಐತಿಹಾಸಿಕ

ವಿವಾದಗಳಲ್ಲಿ ಒಂದು ಅಂಶ. ಶ್ರೀನಿವಾಸ ಗುಡಿಯ ಕೆಳಗಿನ ತೂಬಿನ ಕಾಲುವೆಯಿಂದ ಇಳಿದರೆ ದೊಡ್ಡ ಹಳ್ಳ. ಅದರಿಂದ ಗದ್ದೆಗಳು. ಅದರ ಮೇಲೆ ತೋಟ. ತೋಟದಿಂದ ಹೊಲೆಗೇರಿಗೆ ಹೋಗುವ ದಾರಿಯಲ್ಲಿ ಅಮ್ಮನ ಗುಡಿ ಇದೆ. ಎಂದರೆ ಅದು ಮೊದಲು ಹೊಲೆಗೇರಿಗೆ ಸೇರಿತ್ತೆನ್ನುವವರೂ ಇದ್ದಾರೆ. ಇಲ್ಲ, ಹಳೆಯ ತಿರುಮಲಾಪುರವು ಗುಡಿಯ ಹತ್ತಿರ ಇದ್ದಾಗ ಮಾರಮ್ಮನ ಗುಡಿ ಊರೊಳಗೇ ಇತ್ತೆಂದು ವಾದಿಸುವವರೂ ಇದ್ದಾರೆ. ಮಾದಿಗರ ದೇವತೆ ಮೇಲುಜಾತಿಯ ಭಾಗದಲ್ಲಿ ಇರುವುದು ಹೇಗೆ?–ಎಂಬ ಆಕ್ಷೇಪಕ್ಕೆ ಹೆಚ್ಚು ಮಹತ್ವವಿಲ್ಲ. ಏಕೆಂದರೆ ದೇವತೆ ಯಾವ ಜಾತಿಯಾದರೂ ಮೇಲು ಕೀಳೆಂಬ ಭೇದವಿಲ್ಲದೆ ಎಲ್ಲ ಜಾತಿಯವರೂ ಒಪ್ಪಿಕೊಳ್ಳುವುದು ತಿರುಮಲಾಪುರದ ಪರಂಪರೆಗೆ ಬಂದಿದೆ. ಹೆಚ್ಚು ತೊಂದರೆ ಮಾಡದೆ ಶ್ರೀನಿವಾಸ ಮತ್ತು ಶಾಂತೇಶ್ವರ ದೇವರುಗಳ ಬಗೆಗೆ ಭಿನ್ನ ಭಾವವಿರಬಹುದು. ಆದರೆ ಸುಂಕು, ಪ್ಲೇಗು, ವಾಂತಿಭೇದಿ, ಸಿಡುಬು, ಮೊದಲಾದ ಉಗ್ರ ಪೀಡೆಗಳ ದೇವತೆಯ ವಿಷಯದಲ್ಲಿ ಭೇದ ಮಾಡುವ ಎದೆಯಾರಿಗಿದೆ? ತಿರುಮಲಾಪುರದಲ್ಲಿ ಈಗಲೂ ಅಷ್ಟೆ. ಶ್ರೀನಿವಾಸ ದೇವರ ಮಂದಿರವನ್ನು ಅಯ್ಯನ ಗುಡಿ ಎಂದೂ, ಮಾರಮ್ಮನದನ್ನು ಅಮ್ಮನ ಗುಡಿ ಎಂದೂ ಕರೆಯುತ್ತಾರೆ. ಅಯ್ಯ ಅಮ್ಮರು ಅಣ್ಣ ತಂಗಿಯರಂತೆ. ಅಮ್ಮ ಮೆರವಣಿಗೆ ಹೊರಟಾಗ ಅಯ್ಯನ ಗುಡಿಯ ಮುಂದೆ ಬಂದು ಕೆಳಗಿಳಿದು ನಮಸ್ಕಾರ ಮಾಡಿ ಹೋಗುತ್ತಾಳೆ, ಅಣ್ಣನಿಗೆ ಭಕ್ತಿ ತೋರಿಸುವ ತಂಗಿಯಂತೆ. ಅಯ್ಯನ ತೇರಿನಲ್ಲಿ ಹಾಕುವ ಬಲಿಯ ಒಂದು ಅಂಶ ಅಮ್ಮನಿಗೆ ಸೇರುತ್ತದೆ. ಹಿಂದೆ ಅಮ್ಮನಿಗೆಂದು ಕಡಿಯಲು ಬಿಟ್ಟ ಕೋಣ ಸಾಮಾನ್ಯವಾಗಿ ಅಯ್ಯನ ಗುಡಿಯ ದಿಬ್ಬದಲ್ಲೇ ಹೆಚ್ಚಾಗಿ ಮೇಯುತ್ತಿತ್ತು. ತಂಗಿಯ ಆಹಾರವಾಗುವ ಕೋಣ, ತನ್ನ ಜಾಗದಲ್ಲಿ ಹಸೀ ಹುಲ್ಲು ತಿಂದು ಕೊಬ್ಬುವುದು ಅಯ್ಯನಿಗೂ ಇಷ್ಟವಾಗಿತ್ತು.

ಮಂಗಳವಾರ ರಾತ್ರಿ ಹಬ್ಬವಾಗಬೇಕು. ಸೋಮವಾರವೇ ಸತ್ತಿಗ ಮತ್ತು ಅವನ ಸಂಗಡಿಗರು ಸೇರಿ ಗುಡಿಯ ಪಕ್ಕದಲ್ಲಿ ಹಸುರು ಗರಿ ಚಪ್ಪರ ಹಾಕಿದರು. ದೊಡ್ಡ ಗೌಡರೇ ಮುಂದೆ ನಿಂತು ಬಲಿಕೊಡಿಸುತ್ತಾರೆಂಬುದು ತಿಳಿದಾಗ ಬೆಟ್ಟಯ್ಯನವರಿಗೆ ಮುಜುಗರವಾಯಿತು. ದೇವರ ಹೆಸರಿನಲ್ಲಿ ಕೂಡ ಹಿಂಸೆ ಮಾಡುವುದು ಪಾಪವೆಂದು ಅವರು ಆಶ್ರಮದಲ್ಲಿದ್ದಾಗಲೇ ನಂಬಿಬಂದಿದ್ದರು. ದೊಡ್ಡ ಗೌಡರ ಮನೆಗೆ ಸ್ವತಃ ಹೋಗಿ ಅವರು ಈ ವಿಷಯ ಮಾತನಾಡಿದರು. ಕೃಷ್ಣಾಜಿನದಮೇಲೆ ಕುಳಿತ ಯಜಮಾನರು ಎಂದರು: 'ನೋಡಪ್ಪಾ ಬೆಟ್ಟಯ್ಯ, ಇದೊಂದು ಸಲ ಮಾಡ್ತೀನಿ. ಯಾವ ಯಾವ ದೇವರಾಗೆ ಯಾವ ಯಾವ ಶಕ್ತಿ ಐತೋ ನೀನು ಕಂಡಿದೀಯ?'

'ದೇವರ ಶಕ್ತಿ ಕಂಡಿದ್ರೆ ನಾವ್ಯಾಕೆ ಮನುಷ್ಯರಾಗಿರ್ತಿದ್ವಿ ಗೌಡರೆ?'

'ನೋಡ್ದಾ? ಅಪ್ಪಂಗೆ ಹುಟ್ಟಿದ ಮಾತು ಇದು. ಒಟ್ಟಿನಾಗೆ ಜನಕ್ಕೆ ಒಳ್ಳೇದಾಗಲಿ ಅಂತಲೇ ಮಾಡುಸ್ತಿರೂದು.'

ಬೆಟ್ಟಯ್ಯನವರ ಮನಸ್ಸಿನಲ್ಲಿ ಅನುಮಾನ ಹುಟ್ಟಿತು. ಜಾತಿಯ ಅಂತಸ್ತು ನಿರ್ಣಯವಾಗುವ ದಿನ ಜಗಳವಾಯಿತಲ್ಲ, ಅವತ್ತು ಖೂನಿಯೇ ಆಗಬೇಕಾಗಿತ್ತು. ಆಗಲಿಲ್ಲ. ಅದರ ಶಾಂತಿಗಾಗಿಯೇ ಇದನ್ನು ನಡೆಸುತ್ತಿರಬಹುದು. ಹಾಗಂತ ಕೆಲವು ಗ್ರಾಮಪ್ರಮುಖರೇ ಮಾತನಾಡಿಕೊಂಡಿದ್ದನ್ನು ಅವರು ಕೇಳಿದ್ದರು. ಆದರೆ ಇದಕ್ಕೆ ಬಲಿ ಕೊಡಬೇಕೆ? ಹಣ್ಣು ಕಾಯಿಗಳಿಂದ ದೇವತೆಯನ್ನು ಬೇಡಿಕೊಂಡರೆ ಆಗುವುದಿಲ್ಲವೆ? ಅವರು ಹೆಚ್ಚು ವಾದ ಮಾಡಲಿಲ್ಲ. ಅವರ ಅನುಮಾನ ಪೂರ್ತಿ ಬಗೆಹರಿಯಲಿಲ್ಲ. ಅಹಿಂಸೆ ಎಂಬ ಕಲ್ಪನೆ ಅವರ ಮನಸ್ಸಿನಲ್ಲಿ ಆಳವಾಗಿ ಬೆಳೆದಿತ್ತು. ಆದರೆ ದೇವದೇವತೆಯ ಪ್ರಶ್ನೆ ಬಂದಾಗ ಅಹಿಂಸೆಯ ಅರ್ಥವು ಗಟ್ಟಿಯಾಗಿ ನಿಲ್ಲುತ್ತಿರಲಿಲ್ಲ. 'ಸತ್ಯಮ್ಮನನ್ನಾದರೂ ಕೇಳಬೇಕು' – ಎಂದುಕೊಂಡು, ಅವರು ದೊಡ್ಡ ಯಜಮಾನರೊಡನೆ ಚರ್ಚೆ ಮಾಡದೆ ಅವಳ ತೋಟಕ್ಕೆ ಹೋದರು.

ಮಂಗಳವಾರ ಬೆಳಗ್ಗೆ ಊರಿನ ಬ್ರಾಹ್ಮಣ ಲಿಂಗಾಯಿತ ಅಕ್ಕಸಾಲಿ ಸಾತಾನಿ ಮೊದಲಾಗಿ ಮಾಂಸ ಮಡ್ಡಿ ತಿನ್ನದ ಜಾತಿಯ ಹೆಂಗಸರೆಲ್ಲ ಮೊಸರನ್ನ ತಂಬಿಟ್ಟುಗಳ ತಳಿಗೆ ಮಾಡಿಕೊಂಡು, ಅರಿಶಿನ ಕುಂಕುಮ ಕೆಂಪು ಕಣಿಗಲೆ ಹೂವು ಅಥವಾ ಸಿಕ್ಕಿದವರು ಕೆಂಪು ದಾಸವಾಳದ ಹೂವುಗಳಾದಿಯಾಗಿ ಪೂಜಾದ್ರವ್ಯದೊಡನೆ ಅಮ್ಮನ ಪೂಜೆಗೆ ಹೋದರು. ತನ್ನ ತಂದೆ ಸತ್ತು, ತಂಗಿ ಬೇರೆಯಾದ ಕಾರಣದಿಂದ ಮನೆಗೆ ಒಳ್ಳೆಯದಾಗಲಿ ಎಂದು ವೆಂಕಟೇಶ ಒಂದು ಕೆಂಪು ರವಿಕೆ ಕಣ ತಂದು ಕೊಟ್ಟ. ಊರಿನಲ್ಲಿ ತನ್ನ ಅಣ್ಣ ಅಶ್ವತ್ಥನಿಗೆ ಒಳ್ಳೆಯದಾಗಿ ಅವನು ಮದುವೆಮಾಡಿಕೊಳ್ಳಲಿ ಎಂಬ ಪ್ರಾರ್ಥನೆಯೊಂದಿಗೆ ಜಯಮ್ಮ, ಬಾಣಂತನ ಮಾಡಿ ಕಳಿಸುವಾಗ ತನಗೆ ಮಡಿಲು ತುಂಬಿಕೊಟ್ಟು ತಾನು ಇದುವರೆಗೂ ಉಡದೆ ಇಟ್ಟಿದ್ದ ಹೊಸ ಸೀರೆಯನ್ನು ತೆಗೆದುಕೊಂಡು ಹೋಗಿ ದಕ್ಷಿಣೆಯೊಡನೆ ಅಮ್ಮನಿಗೆ ಒಪ್ಪಿಸಿದಳು. ಈ ಎಲ್ಲರ ಮನೆಯಲ್ಲೂ ಅವತ್ತು ಮೊಸರನ್ನ ಹಸಿ ಅಕ್ಕಿ ತಂಬಿಟ್ಟುಗಳ ಊಟವೇ. ಮಾಂಸ ತಿನ್ನುವ ಉಳಿದವರಿಗೆ ಹಬ್ಬ ನಾಳೆ.

ರಾತ್ರಿಯಾಗುತ್ತಲೇ ಅಮ್ಮನ ಹೊಸ ವಿಗ್ರಹವನ್ನು ಮೆರವಣಿಗೆಯಲ್ಲಿ ತೆಗೆದುಕೊಂಡು ಕಹಳೆಗಳೊಡನೆ ಊರೊಳಕ್ಕೆ ಹೊರಟರು. ಈ ದಿನ ಹೊಲೆಯ ಮಾದಿಗರೆಂಬ ಮೈಲಿಗೆಯಿಲ್ಲ. ದೇವರ ಜೊತೆ ಎಲ್ಲರೂ ಎಲ್ಲ ಬೀದಿಗಳಲ್ಲೂ ಸಲೀಸು ಹೋಗಬಹುದು. ಮೆರವಣಿಗೆ ಕೋಟೆ ಬಾಗಿಲಿಗೆ ಬಂದಾಗ ಊರಿನ

ಇತರರು ಸೇರಿಕೊಂಡರು. ಭಾರಿ ಮೆರವಣಿಗೆ ಮಾಡಿಕೊಂಡು ದೇವರನ್ನು ಊರಿನ ಆಚಾರಿಗಳ ಬೀದಿಗೆ ಕರೆತಂದರು. ಇಡೀ ಊರಿನಲ್ಲಿದ್ದುದು ಒಟ್ಟು ಎಂಟು ಅಕ್ಕಸಾಲಿಗರ ಮನೆಗಳು. ಅವರ ಮುಖ್ಯರಾದ ಈರಾಚಾರ್ಯರು ಮೊದಲಿನಿಂದಲೂ ಅಮ್ಮನಿಗೆ ಅಲಂಕಾರ ಮಾಡುತ್ತಿದ್ದವರು. ಎಂಟು ವರ್ಷದ ನಂತರ ಈಗ ಅವರ ರಿವಾಜು ಮತ್ತೆ ಬಂದಿದೆ. ಅವರ ಮನೆಯ ಎದುರಿಗೆ ದೇವರನ್ನು ಇಳಿಸಿ ಸುತ್ತ ತೆರೆಹಿಡಿದು ನಿಂತರು. ಆಚಾರ್ಯರು ಅದರ ಮರೆಯಲ್ಲಿ ಕುಂಚಗಳಿಂದ ಅಮ್ಮನ ಕಣ್ಣು, ಮೂಗು, ಹುಬ್ಬು ಬಾಯಿಗಳಿಗೆ ತಕ್ಕ ಉಗ್ರ ಬಣ್ಣಗಳನ್ನು ಕೊಟ್ಟು, ನೋಡಲು ಭಯಂಕರವಾಗುವಂತೆ ಮಾಡಿದರು. ಎರಡು ಆಡುಗಳನ್ನೂ ತಂದು ಆ ಭಯಂಕರ ಕಣ್ಣಿನ ದೃಷ್ಟಿಯಲ್ಲಿ ತಲೆಕಡಿದು ಬಲಿಕೊಟ್ಟ ಮೇಲೆ ತೆರೆಯನ್ನು ತೆಗೆದು, ಅಮ್ಮನನ್ನು ಹೊತ್ತುಕೊಂಡು ರಣದಮ್ಮಟೆ ಬಡಿದುಕೊಂಡು ಪಂಜಿನ ಬೆಳಕಿನಲ್ಲಿ ಹೊರಟರು. ಅಷ್ಟರಲ್ಲಿ ಮೆರವಣಿಗೆ ಜನ ಇನ್ನೂ ಜಮಾಯಿಸಿತು. ಆದರೆ ಜನವೆಲ್ಲ ದೇವರ ಹಿಂಭಾಗದಲ್ಲಿ. ಅಮ್ಮನ ಕಣ್ಣಿಗೆ ಬಿದ್ದರೆ ರಾವು ಬಡಿಯುತ್ತದೆಯಾದುದರಿಂದ ಯಾರೂ ಮುಂದೆ ಹೋಗುವಂತಿಲ್ಲ. ಬ್ರಾಹ್ಮಣ ಹುಡುಗಿಯನ್ನು ಮದುವೆಯಾದ ಮಾದಿಗ ಗಂಡನ ತಮ್ಮನಾಗಿದ್ದ ರಣಗಯ್ಯನ ವೇಷ ಹಾಕಿದವನು ಮಾತ್ರ ಅಮ್ಮನ ಎದುರಿಗೆ ಕುಣಿದುಕೊಂಡು ಅವ್ವ, ಅಪ್ಪ, ಬಟ್ಟೆ, ಬಸುರು, ಹಾಟು, ಶಿಂಗ್ರಿ ಮುಂತಾಗಿ, ಕಣ್ಣು ಮೂಗು ಮನಸ್ಸುಗಳಲ್ಲಿ ಗಬ್ಬೆನಿಸುವ ಬೈಗುಳಗಳನ್ನು ಹಾಡಿಕೊಂಡು, ಸಿಕ್ಕುಸಿಕ್ಕಿದವರ ಊರ ಮನೆಗಳ ಕಡೆಗೆ ಥೂ ಥೂ ಎಂದು ಉಗುಳಿಕೊಂಡು ಹೋಗುತ್ತಿದ್ದ. ಅವನ ಬಾಯಿಂದ ಬರುತ್ತಿದ್ದ ಬೈಗುಳದ ವರಸೆ ಕೇಳುವುದೇ ಅನೇಕರಿಗೆ ವಿಶೇಷ ಆಕರ್ಷಣೆಯಾಗಿತ್ತು.

ಊರ ಬೀದಿಗಳನ್ನೆಲ್ಲ ಸುತ್ತಿಕೊಂಡು ಮೆರವಣಿಗೆ ಕೋಟೆಯ ಬಾಗಿಲು ದಾಟಿ ಗದ್ದೆಯ ಇಳುವಿನಲ್ಲಿ ಹಾಯ್ದು ಅಯ್ಯನ ಗುಡಿಯ ಮುಂದೆ ನಿಂತು ಅಮ್ಮನ ಗುಡಿಗೆ ಹೋಯಿತು. ಅಷ್ಟರಲ್ಲಿ ನಡುರಾತ್ರಿ ಸಮೀಪಿಸುತ್ತಿತ್ತು. ಗುಡಿಯ ಪಕ್ಕದ ಹಸುರುವಾಣಿ ಚಪ್ಪರದ ಬಾಗಿಲಿನ ಹತ್ತಿರ ಪೆಟ್ರೋಮ್ಯಾಕ್ಸ್ ದೀಪಗಳನ್ನು ಕಂಬಕ್ಕೆ ಕಟ್ಟಿಸಿ ಯಜಮಾನ ದೊಡ್ಡ ಪಟೇಲರು ಸ್ವತಃ ಬಳುವಳಿಯ ಹೆಡಿಗೆ ಹಿಡಿದುಕೊಂಡು ನಿಂತಿದ್ದರು. ಮೆರವಣಿಗೆ ಬಂದ ತಕ್ಷಣ ಅವರು ಕೈ ಮುಗಿದು ಕೊಟ್ಟ ಹೆಡಿಗೆಯನ್ನು ತೆಗೆದು, ಅದರಲ್ಲಿದ್ದ ಹೊಸ ಹಳದಿ ಸೀರೆ, ಕಾಲುಂಗುರ, ತಾಳಿಗಳನ್ನು ಪೂಜಾರಿ ಅಮ್ಮನಿಗೆ ಧರಿಸಿದ. ಇತ್ತ ಈ ಮೆರವಣಿಗೆ ಗದ್ದೆಯ ಇಳುವಿನಲ್ಲಿ ಬರುವಾಗ ಅವರು ಇನ್ನೊಂದು ಜೋಡಿ ವಾಲಗ ಊದಿಸಿಕೊಂಡು ಏರಿಯ ಮೇಲಿನ ದಾರಿಯಲ್ಲಿ ಬಂದಿದ್ದರು.

ಅಮ್ಮನನ್ನು ಚಪ್ಪರದಲ್ಲಿ ಕೂರಿಸುವ ಹೊತ್ತಿಗೆ ಊರೊಳಗೆ ಇನ್ನೊಂದು ಮೆರವಣಿಗೆ ನಡೆಯುತ್ತಿತ್ತು. ಅವಳನ್ನು ಇಲ್ಲಿಗೆ ತಲುಪಿಸಿದ ತಕ್ಷಣ, ರಣಗಯ್ಯನ ವೇಷ ಹಾಕಿದ್ದವನು ಊರೊಳಗೆ ಬಂದು ಅದನ್ನು ಸೇರಿಕೊಂಡ. ಆ ದಿನ ಬಲಿ ಕೊಡಲೆಂದು ದೊಡ್ಡ ಪಟೇಲರು ಕೊಟ್ಟ ಕೋಣನ ಕೊಂಬಿಗೆ ಎಣ್ಣೆ ಸವರಿ ನೆತ್ತಿಗೂ ಸುರಿದು ತಿಕ್ಕಿದ್ದರು. ಕೊಂಬಿಗೆ ಬೇವಿನ ಎಲೆಗಳ ಸಣ್ಣ ಚಿಗುರು ಕೊಂಬೆಗಳನ್ನು ಕಟ್ಟಿ ಹಣೆಗೆ ಅರಿಶಿನ ಕುಂಕುಮಗಳನ್ನು ಬಳಿದಿದ್ದರು. ಮೆರವಣಿಗೆ ತರುತ್ತಿದ್ದವರು ಸುಮಾರು ಹತ್ತು ಹದಿನೈದು ಜನ ಮಾದಿಗ ಗಂಡಸರು. ಕೋಣದ ಮುಂಭಾಗದಲ್ಲಿ ರಣಗಯ್ಯನ ವೇಷದವನು ಕುಣಿಯುತ್ತಾ ಅಮ್ಮನ ಎದುರಿಗೆ ಮಾಡಿದಂತೆಯೇ ಹೊಸ ಹೊಸ ಬೈಗುಳಗಳನ್ನು ಕಿರುಚುತ್ತಾ ನಡೆಯುತ್ತಿದ್ದ. ಎಲ್ಲ ಮನೆಗಳ ಮುಂದೂ ಕೋಣನನ್ನು ನಿಲ್ಲಿಸುತ್ತಿದ್ದರು. ಮನೆಗಳವರು ಅದರ ಮೈಮೇಲೆ ಒಂದಿಷ್ಟು ನೀರು ಸುರಿದು, ಅದರ ಕೋಡು ಮತ್ತು ತಲೆಯ ಮೇಲೆ ಒಂದು ಸಣ್ಣ ಕುಡಿಕೆ ಹರಳೆಣ್ಣೆ ಬಿಟ್ಟು, ಹಣೆಗೆ ಅರಿಶಿನ ಕುಂಕುಮ ಬಳಿಯುತ್ತಿದ್ದರು. ಊರ ಮುಖ್ಯ ಬೀದಿಗಳನ್ನೆಲ್ಲ ಸುತ್ತಿಕೊಂಡು ಕೋಣನನ್ನು ಅಮ್ಮನ ಗುಡಿಗೆ ತರುವ ಹೊತ್ತಿಗೆ ಬೆಳಗಿನ ಜಾವವಾಗುತ್ತಿತ್ತು. ತಂದು ಬಲಿಗಂಬಕ್ಕೆ ಹಣೆಯನ್ನು ಜೋಡಿಸಿ ಕೊಂಬು ಮತ್ತು ಮೂತಿಗಳಿಗೆ ಹಗ್ಗ ಕೊಟ್ಟು ಅದನ್ನು ಕಂಬಕ್ಕೆ ಬಿಗಿದರು.

ಹೆಚ್ಚುಕಡಿಮೆ ಅರ್ಧ ಊರೇ ಸೇರಿತ್ತು. ಮಾದಿಗರ ಕೇರಿಯಲ್ಲಿ ಸತ್ತಿಗನ ಕಡೆಯ ಹೆಂಗಸರು ಗಂಡಸರಾದಿಯಾಗಿ ಬಂದಿದ್ದರು. ಅಕ್ಕಪಕ್ಕದ ಹಳ್ಳಿಗಳವರೂ ಆಡು ಕುರಿ ಕೋಳಿಗಳನ್ನು ತೆಗೆದುಕೊಂಡು ಬಂದಿದ್ದರು. ಯಜಮಾನ ಪಟೇಲರು ಒಂದು ಕಲ್ಲುಚಪ್ಪಡಿಯ ಮೇಲೆ ಕೂತು ಮುಂದಿನ ಕಲಾಪಗಳನ್ನು ಎದುರುನೋಡುತ್ತಿದ್ದರು. ಜನವೋ ಜನ. ಬ್ರಾಹ್ಮಣ, ಲಿಂಗಾಯತ ಆದಿಯಾಗಿ ಮೇಲುಜಾತಿಯವರೂ ಕೆಲವು ಗಂಡಸರು ಬಂದಿದ್ದರು. ಇಡೀ ಕಲಾಪವನ್ನು ನೋಡುವ ಉದ್ದೇಶದಿಂದ ಸತ್ಯ ಜನರ ನಡುವೆ ನಿಂತಿದ್ದಳು. ಜನದ ಗಮನವೆಲ್ಲ ಕೋಣನನ್ನು ಕಡಿಯುವ ಕಡೆಗಿತ್ತು. ಅಲ್ಲದೆ ಸತ್ಯಳು ಕೆಲವು ರೈತ ಹೆಂಗಸರಂತೆ ತಲೆಗೆ ಮುಸುಕು ಹಾಕಿ ನಿಂತಿದ್ದುದರಿಂದ ಅಷ್ಟು ಜನದಲ್ಲಿ ಯಾರೂ ಅವಳನ್ನು ಸರಿಯಾಗಿ ಗುರುತಿಸಿ ನೋಡಲಿಲ್ಲ.

ಕೈಲಿ ತಮ್ಮಟೆ ಹಿಡಿದ ಆಸಾದಿಯವನು ಬಂದು, ಕಂಬಕ್ಕೆ ಬಿಗಿಸಿಕೊಂಡು ಒರಲುತ್ತಿದ್ದ ಕೋಣದ ಹತ್ತಿರ ನಿಂತು ಒಂದು ಸಲ ಗಟ್ಟಿಯಾಗಿ ತಮ್ಮಟೆ ಬಡಿದ. ಅನಂತರ ತಮ್ಮಟೆಯ ತಾಳ ಬಾರಿಸಿಕೊಂಡು ಅಮ್ಮನ ಕಥೆಯನ್ನು ಹಾಡಲು ಆರಂಭಿಸಿದ. ತನಗೆ ತಿಳಿದ ಕಥೆಯೇ ಆದರೂ ಜನವೆಲ್ಲ ಕುತೂಹಲ

ದಿಂದ ಕೇಳಿದರು. ಮಾದಿಗನು ಹೇಗೆ ಸುಳ್ಳು ಹೇಳಿ ವೇದವಿದ್ಯೆ ಕಲಿತ, ಸುಳ್ಳಿನಿಂದ ಹೇಗೆ ಬ್ರಾಹ್ಮಣ ಹುಡುಗಿಯನ್ನು ಮದುವೆಯಾದ, ಅವನ ಪಾಪಿ ಕೈ ಹೇಗೆ ಆ ಬ್ರಾಹ್ಮಣ ಹೆಂಗಸಿನ ಮೊಲೆ ಹಿಡಿಯುತ್ತಿತ್ತು, ಅವನ ಪಾಪಿ ಶರೀರವು ಹೇಗೆ ಅವಳನ್ನು ಕೂಡುತ್ತಿತ್ತು ಎಂಬುದರ ವರ್ಣನೆಗಳಿಂದ ಕೂಡಿ ಅವರಿಗೆ ಮಕ್ಕಳಾದುದು, ಅವನ ಅಪ್ಪ ಬಂದದ್ದು, ಆವಳಿಗೆ ನಿಜವಿಷಯ ತಿಳಿದು ಮನೆಯ ಸುತ್ತ ನೆಲ್ಲುಹುಲ್ಲು ಹಾಕಿ ಬೆಂಕಿ ಹಚ್ಚಿ ಅವಳೂ ಅದರೊಳಗೆ ಸುಟ್ಟು ಹೋದುದೆಲ್ಲವನ್ನೂ ಹಾಡಿದ. ಈ ಕೋಣವೇ ಸುಳ್ಳು ಹೇಳಿದ ಅವಳ ಗಂಡ. ಈಗ ಕಡಿಯುವ ಆಡು ಕುರಿಗಳೇ ಅವಳ ಮಕ್ಕಳು.

ಅನಂತರ ತಮ್ಮಟೆಯವರು ವೀರದಲ್ಲಿ ಬಡಿದರು. ರಣಗಯ್ಯನ ವೇಷದವನು ಮತ್ತೆ ಬೈಗುಳಗಳನ್ನು ಹರಿಸುತ್ತಾ, ಸುತ್ತಲೂ ಮುಂಭಾಗದಲ್ಲಿ ನಿಂತಿದ್ದವರ ಮುಖ ಮೈಗಳಿಗೆ ಬೀಳುವಂತೆ ಜೋರಿನಿಂದ ಥೂ ಥೂ ಥೂ ಎಂದು ಉಗುಳಿದ. ಪೂಜಾರಿ ಅಮ್ಮನಿಗೆ ಮಂಗಳಾರತಿ ಮಾಡಿ ಅವಳ ತೀರ್ಥವನ್ನು ತಂದು ಕೋಣದ ಕುತ್ತಿಗೆಗೆ ಹಾಕಿದ. ಗ್ರಾಮದ ರಿವಾಜಿನಂತೆ ಬೇಡರ ಮಲ್ಲನಾಯಕನು ದೊಡ್ಡ ಭಾರವಾದ ಕಡಿಗತ್ತಿಯಿಂದ ಕೋಣನ ಕುತ್ತಿಗೆಯನ್ನು ಮೂರೇ ಏಟಿಗೆ ಕತ್ತರಿಸಿ ಹಾಕಿದ. ಅವನ ತೋಳು, ತೋಳುಬಲ ಮತ್ತು ಏಟಿನ ಜೋರನ್ನು ಜನವೆಲ್ಲ ಮೆಚ್ಚುಗೆಯಿಂದ ನೋಡುತ್ತಿತ್ತು. ಹತ್ತಿರವೇ ಹೊಸ ಮಡಿಕೆ ಹಿಡಿದು ನಿಂತಿದ್ದವನು, ಕೋಣನ ಕಡಿದ ಕೊರಳಿನಿಂದ ದಬದಬನೆ ಧುಮುಕಿದ ರಕ್ತವನ್ನು ಅದುಕೊಂಡ. ಮಲ್ಲನಾಯಕ ಅದರ ಬಲಗಾಲನ್ನು ಕಡಿದು, ನಾಲಗೆಯನ್ನು ಹೊರಕ್ಕೆಳೆದು, ಕಡಿದ ಕಾಲನ್ನು ಬಾಯಿಗೆ ಅಡ್ಡಲಾಗಿ ಕೊಟ್ಟ.

ಹೆಂಗಸರ ಕಡೆಯ ಗುಂಪಿನಲ್ಲಿದ್ದ ಸತ್ಯ, ಪಕ್ಕದಲ್ಲಿದ್ದ ಒಬ್ಬ ಮುದುಕಿಯನ್ನು ಕೇಳಿದಳು: 'ಅದರ ಕಾಲನ್ನ ಯಾಕೆ ಬಾಯಿಗೆ ಹಂಗೆ ಕೊಟ್ರು?'

ತದೇಕಚಿತ್ತಳಾಗಿ ನೋಡುತ್ತಿದ್ದ ಆ ಬೊಚ್ಚುಬಾಯಿಯ ಮುದುಕಿ ಹೇಳಿತು: 'ಕಥೆ ಕೇಳ್ಲಿಲ್ವಾ? ಯಾವ ಕಡೆಗಿತ್ತು ಗ್ಯಾನ? ಆ ಸುಳ್ಳುಗಾರ ಮಾದಿಗ ಬಲಗೈಲಿ, ಹಾದುವ ಹೆಂಡ್ತೀ ಮುಲೆ ಹಿಡಕಂತಿದ್ನಲ, ಅದ್ಕೆ ಕಡಿದು ಅವನ ಹಲ್ಲಿಗೇ ಕೊಟ್ಟವ್ರೆ.'

ಅನಂತರ ತಲೆಯ ಹಗ್ಗವನ್ನು ಬಿಚ್ಚಿ ಬಾಯಿಗೆ ಅಡ್ಡ ಕೊಟ್ಟಿದ್ದ ಬಲಗಾಲು ಕೆಳಗೆ ಬೀಳದಂತೆ ಎರಡನ್ನೂ ಅದೇ ಸ್ಥಿತಿಯಲ್ಲಿ ತೆಗೆದುಕೊಂಡು ಹೋಗಿ, ಅಮ್ಮನ ವಿಗ್ರಹದ ಎದುರಿಗೆ ಕಟ್ಟಿದ್ದ ಸಣ್ಣ ಚಪ್ಪರದ ಮಧ್ಯದ ಎತ್ತರವಾದ ಜಾಗದಲ್ಲಿ ಇಟ್ಟರು. ಸತ್ತ ಕೋಣದ ಹೊಟ್ಟೆಯನ್ನು ಬಗೆದ ನೆಣವನ್ನೂ ತಂದು ಈ ತಲೆಯ ಹಣೆ, ಮೂಗು, ಕೊಂಬುಗಳಿಗೆ ಬಳಿದರು. ಅನಂತರ

ಬಲಿಗಂಬದ ಹತ್ತಿರ ಅದೆಷ್ಟೋ ಆಡು ಕುರಿಗಳನ್ನು ಕಡಿದರು. ಅಪರೂಪಕ್ಕೆ ಆದ ಅಮ್ಮನ ಹಬ್ಬವಾದುದರಿಂದ ಈ ಊರವರೇ ಅಲ್ಲದೆ ಸುತ್ತ ಹಳ್ಳಿಗಳವರು ಸಹ ಯಥಾಶಕ್ತಿ ಬಲಿಗಳನ್ನು ತಂದಿದ್ದರು. ಅವೆಲ್ಲ ಅಮ್ಮನ ಮಕ್ಕಳಾಗಿದ್ದುವು. ಸತ್ಯಳ ಮನಸ್ಸು ಆ ಕೋಣನ ಗತಿಯನ್ನು ಕುರಿತು ಯೋಚಿಸುತ್ತಿತ್ತು. ಅವಳು ಈ ಕಥೆಯನ್ನು ಚಿಕ್ಕವಯಸ್ಸಿನಲ್ಲಿ ಕೇಳಿದ್ದಳು. ಚನ್ನಾಗಿ ಬೆಳ್ಳಗೆ ಕಾಣುವ ಮಾದಿಗ ಹುಡುಗ, ವೇದವನ್ನೆಲ್ಲ ಸುಲಭವಾಗಿ ಕಲಿಯುವಷ್ಟು ಬುದ್ಧಿವಂತ, ಸುಳ್ಳು ಹೇಳಿ ಬ್ರಾಹ್ಮಣ ಹುಡುಗಿಯನ್ನು ಮದುವೆಯಾದ. ಮಕ್ಕಳಾದುವು. ವಿಷಯ ತಿಳಿದ ಮೇಲೆ ಅವಳು ಗಂಡಮಕ್ಕಳೊಡನೆ, ತನ್ನನ್ನೂ ಸೇರಿಸಿಕೊಂಡು ಮನೆಗೆ ಬೆಂಕಿ ಹಚ್ಚಿಸಿಕೊಂಡು ಸತ್ತಳು. ಅವಳ ಧಾರ್ಮಿಕ ಶ್ರದ್ಧೆ ಹಾಗಿರಬಹುದು. ಆದರೆ ಅವನು ಮಾಡಿದುದು ಅಂತಹ ಘೋರ ದೋಷವೇ? ಬ್ರಾಹ್ಮಣನಾಗಬೇಕೆಂಬ ಬಯಕೆ ಅವನಿಗಿರಲಿಲ್ಲವೆ? ವೇದವಿದ್ಯೆಯನ್ನು ಸುಲಭವಾಗಿ ಕಲಿಯುವ ಶಕ್ತಿ ಹೇಗೂ ಇತ್ತಲ್ಲ. ಕಲಿತೂ ಇದ್ದನಲ್ಲ. ಅವಳು ಹಾಗೆ ಮಾಡಿದಳು. ಆದರೆ ಇಂದಿಗೂ ಅದರ ನೆನಪು ತರುವ ಈ ಹಬ್ಬ, ಈ ಬಲಿ, ಈ ಸಂದೇಶಗಳು ಯಾಕೆ? ಈ ಹಬ್ಬವನ್ನು ಆಚರಿಸುವ ಸೂಚನೆ ಮೊದಲು ಹುಟ್ಟಿದ್ದು ಯಾರಿಂದ? ತಮ್ಮ ಜಾತಿಯ ಶುದ್ಧಿಯನ್ನು ಉಳಿಸಿಕೊಳ್ಳಲು ಬ್ರಾಹ್ಮಣರೇ ಈ ಕಥೆಯನ್ನೂ ಹಬ್ಬದ ರೀತಿಯನ್ನೂ ಸೃಷ್ಟಿಸಿದರೇ? ಮನುಧರ್ಮಶಾಸ್ತ್ರದ ಆಲೋಚನಾಧಾಟಿಯನ್ನು ನೋಡಿದರೆ ಹಾಗೆಯೇ ಕಾಣುತ್ತದೆ. ಆದರೆ ಇಂತಹ ಪಾಪಪ್ರಜ್ಞೆಯನ್ನು ಕೀಳುಜಾತಿಯವರೆನಿಸಿಕೊಳ್ಳುವವರು ಸ್ವಯಂಪ್ರೇರಣೆಯಿಂದ ನರಳಿ ಅದರಲ್ಲಿಯೇ ತಮ್ಮ ಮತದ ಏಕತೆ ಮತ್ತು ಪ್ರತ್ಯೇಕತೆಗಳನ್ನು ಕಾಪಾಡಿಕೊಳ್ಳುವುದಿಲ್ಲವೆ? – ಎಂಬ ಹಲವಾರು ಪ್ರಶ್ನೆಗಳನ್ನು ಅವಳ ಬುದ್ಧಿ ಕೇಳುತ್ತಿತ್ತು. ತಾನು ಈಗ ಹದಿನೈದು ದಿನಗಳ ಹಿಂದೆ, ಎಲ್ಲರೂ ಬ್ರಾಹ್ಮಣರೆಂದು ಘೋಷಿಸಿದ ನೆನಪಾಯಿತು. ಆದರೆ ಉಚ್ಚಜಾತಿಗಳು ಸಹ ಈ ಕೋಣಕ್ಕೆ ಎಣ್ಣೆಬಿಟ್ಟು ಅರಿಶಿನ ಕುಂಕುಮ ಸವರಿದ್ದಾರೆ. ಅಮ್ಮನಿಗೆ ಎಡೆ ಕೊಟ್ಟಿದ್ದಾರೆ. ಪ್ರತ್ಯಕ್ಷವಾಗಿ ಬಲಿಕೊಡದಿದ್ದರೂ ಈ ಬಲಿಯಲ್ಲಿ ನೈತಿಕವಾಗಿ ಭಾಗಿಗಳಾಗಿದ್ದಾರೆ. ಬ್ರಾಹ್ಮಣ್ಯಕ್ಕೆ ಎಲ್ಲಿದೆ? ಎಲ್ಲೆಲ್ಲಿಯೂ ಶೂದ್ರತ್ವ ಆವರಿಸಿದೆ. ಈ ಇಡೀ ಊರಿನಲ್ಲಿ ಒಬ್ಬರೂ ಬ್ರಾಹ್ಮಣರಿಲ್ಲವಲ್ಲ – ಎಂದುಕೊಂಡಳು.

ಈ ಆಲೋಚನೆಗೆ ಸಿಕ್ಕಿದ ಅವಳು, ಮುಂದೆ ನಡೆದ ಕಲಾಪಗಳನ್ನು ಗಮನವಿಟ್ಟು ನೋಡಲಿಲ್ಲ.

ಇತ್ತ ತಮ್ಮಟೆಯವರು ರುಮ್ರು ರುಮ್ರು ಡುಮ್ರು ರುಮ್ರು ಎಂದು ವೀರದಿಂದ ಬಡಿಯಲು ಆರಂಭಿಸಿದರು. ವಿಗ್ರಹದ ಎದುರಿಗೆ ನಿಂತಿದ್ದ ಪೂಜಾರಿ ತೂರಾಡಲು

ಶುರುಮಾಡಿದ. ತಮ್ಮ ಪ್ರಶ್ನೆಯ ಕಾಲ ಬಂತೆಂದು ದೊಡ್ಡ ಗೌಡರು ಎದ್ದು ನಿಂತರು. ಪೂಜಾರಿ ಚಪ್ಪರದ ಬಾಗಿಲಿಗೆ ಕಟ್ಟಿದ್ದ ಬೇವಿನ ಕೊಂಬೆಯಿಂದ ಸೊಪ್ಪು ತರೆದುಕೊಂಡು ಕಚಕಚನೆ ಅಗಿದ. ವಿಶೇಷ ಪ್ರಯತ್ನದಿಂದ ಸಂಪಾದಿಸಿ ತಂದಿಟ್ಟಿದ್ದ ಒಂದು ಮೊಗೆ ಹೆಂಡವನ್ನು ಮತ್ತೊಬ್ಬ ಮಾದಿಗನು ಅವನ ಕೈಗೆ ಕೊಟ್ಟ. ಪೂಜಾರಿ ಅದನ್ನು ಎತ್ತಿ ಗಟಗಟನೆ ಕುಡಿದು ಉರಿಗಣ್ಣುಗಳನ್ನು ಅಗಲಿಸುತ್ತಾ, ಭೂತ ಭವಿಷ್ಯಗಳನ್ನು ಕಾಣುವ ದೃಷ್ಟಿಯಲ್ಲಿ ನಿಂತುಕೊಂಡ. ದೊಡ್ಡ ಯಜಮಾನರು ಹತ್ತಿರ ಹೋಗಿ, 'ನಮ್ಮ ಮನಸ್ಸಿನಾಗಿರೂ ಪ್ರಶ್ನೆಗೆ ಉತ್ತರ ಹೇಳವ್ವ, ಕೈ ಮುಗಿದಿದೀನಿ. ನೀನು ಹೇಳಲಿ ಅಂತ ನಾವು ನಿನ್ನ ಸೇವೆ ಮಾಡ್ಸಿದೀವಿ' ಎಂದರು.

ಮೈಮೇಲೆ ದೇವರು ಬಂದಿದ್ದ ಪೂಜಾರಿ ಹಲ್ಲುಗಳನ್ನು ಕಟಕಟನೆ ಕಡಿದು, 'ಅಮ್ಮನ್ನ ನೆಂಬು. ನಿಜವಾಗಿರು. ಅವಳ್ನ ಸುಕವಾಗಿ ಮಡಗು' – ಎಂದು ಕೂಗಿ ಹೇಳಿದ. ಅನಂತರ ಓಡಾಡಲು ಆರಂಭಿಸಿದ. ಈಗ ದೇವತೆಯು ಮೈಯಿಂದ ಇಳಿದು ಅವನು ಕೆಳಗೆ ಬೀಳುತ್ತಾನೆಂದು ಎಲ್ಲರಿಗೂ ಗೊತ್ತು. ಹತ್ತಿರವಿದ್ದ ನಾಲ್ವರು ಬಂದು ಹಿಡಿದುಕೊಂಡು ನಿಧಾನವಾಗಿ ಮಲಗಿಸಿ ಗಾಳಿ ಬೀಸಿದರು.

ಮತ್ತೆ ಕೈಮುಗಿದು ದೊಡ್ಡ ಪಟೇಲರು ಮನೆಯ ಕಡೆ ಹೊರಟರು. ಅಷ್ಟರಲ್ಲಿ ರಾತ್ರಿ ಕಳೆದು ಬೆಳಗಾಗುತ್ತಿತ್ತು. ಅಣ್ಣನ ಮಗ ಕಾಳೇಗೌಡ ಮತ್ತು ಮನೆಯ ಇಬ್ಬರು ಆಳುಗಳು ಯಜಮಾನರ ಸಂಗಡ ಪಹರೆಯವರಂತೆ ನಡೆದರು. ಅಮ್ಮನ ಮಾತಿನ ಅರ್ಥವೇನು ಎಂದು ಯೋಚಿಸುತ್ತಾ ಯಜಮಾನರು ಹೆಜ್ಜೆ ಹಾಕಿದರು. ದೇವರು ಎಂದೂ ನೇರವಾಗಿ ಬಾಯಿಬಿಟ್ಟು ಹೇಳುವುದಿಲ್ಲ. ನಾವು ಅರ್ಥ ಮಾಡಿಕೊಳ್ಳಬೇಕು. ಅಮ್ಮನ್ನ ನೆಂಬು. ನಾವು ನಂಬಿಯೇ ಇದ್ದೀವಲ್ಲ. ಅಮ್ಮ ಎಂದರೆ ಯಾರು? ಓಹೋ, ಈಗ ತಿಳಿಯಿತು: ಅಮ್ಮ ಅಂದರೆ ಬ್ರಾಹ್ಮಣ ಹುಡುಗಿ. ನಿಜವಾಗಿರು ಅಂದರೆ ಆ ಮಾದಿಗ ಮಾಡಿದ ಹಾಗೆ ಸುಳ್ಳು ಹೇಳಬೇಡ. ಅವಳನ್ನು ಸುಖವಾಗಿ ಮಡಗು ಅಂದರೆ, ಮದುವೆಯಾದ ಮೇಲೆ ಸೊಸೆ ಅಂತ ಹೆಚ್ಚು ಕೆಲಸ ಮಾಡಿಸದೆ, ಬೈದು ಅಂದು ಮಾಡದೆ, ಅವಳು ಕೇಳಿದ್ದಕ್ಕೆ ಇಲ್ಲ ಅನ್ನದೆ ಇಟ್ಟುಕೋಬೇಕು. ನಮ್ಮ ಮನೆಗೆ ಬಂದ ಸೊಸೆ ಯಾಕೆ ಕೆಲಸ ಮಾಡಬೇಕು? ನಮ್ಮನೇನು ಸಾಮಾನ್ಯ ರೈತರ ಮನೆಯೇ? – ಸೊಸೆಯರನ್ನು, ಹೆಣ್ಣು ಮಕ್ಕಳನ್ನು ಹೊಲ ಗದ್ದೆಗಳಲ್ಲಿ ದುಡಿಸುವುದಕ್ಕೆ? ಬೆಳ್ಳಿ, ಬಂಗಾರ, ಸಗ ನಾಣ್ಯ, ಯಾವುದಕ್ಕೆ ಕಮ್ಮಿ ಇದೆ ನಮ್ಮನೇಲಿ? ಅವಳು ಹೊರು ಕ್ಯಾಗದಷ್ಟು ಚಿನ್ನ ಹಾಕಾಣ. ಆದರೆ ಆಸಾದಿಯಿಂದ ಈ ರಾತ್ರಿ ಮತ್ತೆ ಕೇಳಿದ

ಅವಳಿಗೆ ಬಲಿಯಾದನಲ್ಲ, ಎಂಬ ಅನುಮಾನವಾಯಿತು. ಆದರೆ ತಾವು ಮಾದಿಗರಲ್ಲ, ಕ್ಷತ್ರಿಯರು. ಬ್ರಾಹ್ಮಣ ಕನ್ಯೆಯನ್ನು ಕ್ಷತ್ರಿಯರು ಮಾಡಿಕೊಂಡದ್ದುಂಟು. ಹಿಂದೆ ನಡೆದಿದೆ. ಇವತ್ತು ಅಮ್ಮನೇ ಒಪ್ಪಿಗೆ ಕೊಟ್ಟವ್ಳೆ. ಆದ್ದರಿಂದ ಪೂಜಾರಿ ವೆಂಕಟರಮಣಯ್ಯನ ಮಗಳನ್ನ ತರಾದೇ ಖಂಡಿತ – ಎಂದುಕೊಂಡು ಮನೆ ಮುಟ್ಟಿದರು.

೨೧

ಅಮ್ಮನ ಬಲಿ ನೋಡಿಕೊಂಡು ಬಂದ ಸತ್ಯ ಮಲಗಿ ನಿದ್ರಿಸುತ್ತಿದ್ದಳು. ಮಧ್ಯಾಹ್ನ ಹನ್ನೆರಡರ ಸುಮಾರಿಗೆ ಎದ್ದು ಮುಖತೊಳೆದು ಅಡಿಗೆಗೆ ಇಟ್ಟು ಕೊಳದಲ್ಲಿ ಸ್ನಾನ ಮಾಡುವಾಗ ಅವಳ ಮನಸ್ಸು ಮಾರಮ್ಮನ ಕಥೆಯನ್ನೇ ಕುರಿತು ಯೋಚಿಸುತ್ತಿತ್ತು. ಇಂತಹ ಕಥೆ ಬರೀ ನಮ್ಮ ಭಾಗದಲ್ಲಿ ಪ್ರಚಲಿತವಿದೆಯೋ ಅಥವಾ ಹಿಂದೂಸ್ಥಾನದ ಉಳಿದ ಕಡೆಗಳಲ್ಲಿಯೂ ಇದೆಯೋ ಎಂಬುದನ್ನು ವಿಚಾರಿಸಬೇಕು ಎಂದುಕೊಂಡಳು. ಮೋಹನದಾಸನ ಕೋರಿಕೆಯಂತೆ ಬರೆಯುತ್ತಿದ್ದ ಪುಸ್ತಕದ ಮೊದಲನೇ ಪ್ರತಿಯನ್ನು ಬರೆದಾಗಿತ್ತು. ಇನ್ನು ಅದನ್ನು ಬೇಗ ತಿದ್ದಿ ಮೀರಳಿಗೆ ಕೊಟ್ಟು ಉತ್ತಮ ಪ್ರತಿ ಮಾಡಿಸಬೇಕು. ಮೋಹನದಾಸ ಬರೆದಿರುವ ಭಾಗ ಬರುತ್ತದೆ. ಅದರ ಶೈಲಿಯನ್ನು ತಿದ್ದಬೇಕು. ನೆನ್ನೆ ತಾನು ಕಂಡ ಅಮ್ಮನ ಬಲಿ ಮತ್ತು ಕೇಳಿದ ಕಥೆಗಳ ಬೆಳಕಿನಲ್ಲಿ ತನ್ನ ಹಸ್ತಪ್ರತಿಯಲ್ಲಿ ಒಂದು ಕಡೆ ಸ್ವಲ್ಪ ಬದಲಾಯಿಸಬೇಕೆಂದು ಯೋಚಿಸುತ್ತಿದ್ದಳು.

ಸ್ನಾನ ಮುಗಿಸಿ ಅಡಿಗೆ ಮಾಡಿ ಸಂಧ್ಯಾವಂದನೆ ಮಾಡಿದಳು. ಇತ್ತೀಚಿಗೆ ಅವಳು ದಿನವೂ ಹವನ ಮಾಡುತ್ತಿದ್ದಾಳೆ. ಮನೆಯಿಂದ ಅಪ್ಪನ ಪುಸ್ತಕವನ್ನು ತಂದು ಹವನದ ಮಂತ್ರಗಳನ್ನು ಕಲಿತಿದ್ದಾಳೆ. ಸಮಯ ಸಾಲದಿದ್ದರೆ ಸಂಧ್ಯಾವಂದನೆಯನ್ನಾದರೂ ಮಾಡುತ್ತಾಳೆ. ಊಟ ಮಾಡಿ ತಟ್ಟೆ ತೊಳೆಯುವ ಹೊತ್ತಿಗೆ ಮೂರು ಗಂಟೆಯಾಗಿತ್ತು. ಹಸ್ತಪ್ರತಿಯನ್ನು ತಿದ್ದಲು ಕೈಲಿ ಪೆನ್ನು ಹಿಡಿದು ಕೊಳದ ದಡದಲ್ಲಿ ಕುಳಿತಿದ್ದಳು. ಅಷ್ಟರಲ್ಲಿ ವೆಂಕಟೇಶ ಬಂದ. ಯಾವುದೋ ಗಂಭೀರವಾದ ವಿಚಾರಕ್ಕೆ ಬಂದಿರುವಂತೆ ಅವನ ಮುಖಭಾವವಾಗಿತ್ತು. ಅವಳಿಗೆ ಎದುರಾಗಿ ಕೂತು ಕೇಳಿದ: 'ಎಂಟು ವರ್ಷದಿಂದ ಆಗದ ಮಾರಮ್ಮನ ಹಬ್ಬ ಯಾಕೆ ಆಯ್ತು ಗೊತ್ತಾ?'

'ಸರಿಯಾಗಿ ಮಳೆ ಬೆಳೆಯಾಗಲಿ, ಗ್ರಾಮಕ್ಕೆ ಒಳ್ಳೆಯದಾಗಲಿ ಅಂತ.'

'ಅಲ್ಲ. ಒಳವಿಷಯ ಬೇರೆ' – ಎಂದು ಅವನು ಶ್ರೀನಿವಾಸ, ಮೇಲಗಿರಿ

ಗೌಡರು, ರಂಗಮ್ಮ, ದೊಡ್ಡ ಪಟೇಲರ ವಿಷಯವನ್ನೆಲ್ಲ ಹೇಳಿ, 'ತುಂಬ ಗುಟ್ಟಿನಲ್ಲಿಟ್ಟಿದಾರೆ' ಎಂದ.

'ನಿನಗೆ ಹ್ಯಾಗೆ ಗೊತ್ತಾಯ್ತು?'

'ಹ್ಯಾಗೆ ಅಂತ ಕೇಳಬ್ಯಾಡ. ಆದರೆ ನಾನು ಹೇಳಿದ್ದು ನಿಜ.'

ಸತ್ಯಳ ಮನಸ್ಸು ವಿಚಲಿತವಾಯಿತು. ಇದುವರೆಗೆ ಅವಳು ಆ ಬಗೆಗೆ ಯೋಚಿಸದೆ, ಅಕಸ್ಮಾತ್ ಆ ಯೋಚನೆ ಬಂದರೂ ಮನಸ್ಸನ್ನು ಬೇರೆ ವಿಚಾರಗಳಲ್ಲಿ ತೊಡಗಿಸಿಕೊಂಡು ಇದ್ದುಬಿಡುತ್ತಿದ್ದಳು. ತುಮಕೂರಿನಲ್ಲಿ ವೀರಳ ಜೊತೆ ಹೋಗುವಾಗ ಶ್ರೀನಿವಾಸ ಕಣ್ಣಿಗೆ ಬಿದ್ದದ್ದು ನಿಜವಾದರೂ, ಅವಳು ಅವನನ್ನು ಸರಿಯಾಗಿ ನೋಡಿರಲಿಲ್ಲ. ಅವನು ಹೀಗೆ ಆಗಿದ್ದಾನೆ, ನನ್ನ ಗೀಳಿನಿಂದ ತನ್ನನ್ನು ತಾನು ಹಾಳುಮಾಡಿಕೊಳ್ಳುತ್ತಿದ್ದಾನೆ, ಎಂಬ ಕಲ್ಪನೆಯೂ ಅವಳಿಗೆ ಇರಲಿಲ್ಲ. ಈಗ ವೆಂಕಟೇಶ ಹೇಳುವುದನ್ನು ಕೇಳಿ ಮನಸ್ಸು ಭಾವವಿಹ್ವಲತೆಯಲ್ಲಿ ಸಿಕ್ಕಿಬಿಟ್ಟಿತು. ಗಂಭೀರಳಾಗಿ ಸುಮ್ಮನೆ ಕುಳಿತಳು. ವೆಂಕಟೇಶ ಕೇಳಿದ: 'ಸದ್ಯದಲ್ಲೇ ಅವರು ಬರಭೌದು. ನೀನು ಏನಂತಿಯ?'

ಅವಳು ಮಾತನಾಡಲಿಲ್ಲ. ಆಡಲು ತಿಳಿಯಲಿಲ್ಲ. ಸ್ವಲ್ಪ ಹೊತ್ತಾದನಂತರ ವೆಂಕಟೇಶನೇ ಎಂದ: 'ನಿನಗೆ ಜಾತಿ ಕುಲದಲ್ಲಿ ನಂಬಿಕೆ ಇಲ್ಲ. ಇಲ್ಲ ಅಂತ ನೀನು ಬೇಕಾದ್ದು ಹೇಳು, ಲೆಕ್ಚರ್ ಮಾಡು. ಆದರೆ ನೀನು ನನ್ನ ತಂಗಿಯೇ, ನಮ್ಮ ಮನೆಯೋಳೇ. ಅವರು ಕೇಳಿದರು ಅಂತ ಮದುವೆಗೆ ಒಪ್ಕಂಡಿಯೊ, ತಿಳ್ಕಂಡು ಬಿಡು, ನಂಗೂ ನಿಂಗೂ ಸಂಬಂಧವಿಲ್ಲ. ನಾನು ನಿನ್ನ ಕಡೆ ತಿರುಗಿ ನೋಡಲ್ಲ. ಅಪ್ಪನ ಮೇಲೆ ಆಣೆ ಹಾಕಿ ಹೇಳ್ತಿದೀನಿ.'

ಈ ಮಾತಿನಿಂದ ಸತ್ಯಳಿಗೆ ಕೆರಳಿತು: 'ಯಾಕೆ ಹಾಗಂತೀಯ? ನಾನು ಅವನನ್ನ ಮದುವೆಯಾದರೂ ನಿಂಗೆ ಅನುಕೂಲವೇ ಆಗುತ್ತೆ.'

'ಏನು ಅನುಕೂಲ?'

'ಒಂದು ಬಸ್ಸುಲೈಸನು ಕೊಡುಸ್ತಾರೆ.'

ವೆಂಕಟೇಶನಿಗೆ ರೇಗಿತು. 'ಏನೇ ನೀನು ಅನ್ನೋದು? ನಾನೇನು ಬಸ್ ದುಡ್ಡಿಗೆ ಬದುಕಿದೀನಿ ಅಂತ ಮಾಡ್ಕಂಡಿದೀಯ? ಆ ನನ್ನ ಎಕ್ಕಡದ ದುಡ್ಡು ಎಷ್ಟು ಸಂಪಾದನೆ ಮಾಡ್ತಿದೀನಿ ಗೊತ್ತಾ? ನೋಡು, ನೀನು ನ್ಯಟ್ಟಗೆ ನಿನ್ನ ಪಾಡಿಗೆ ನೀನಿದ್ರೆ ನಂಗೆ ಬಸ್‌ಲೈಸ್ ಸಿಕ್ಕಿದರೆ ಬಿಡುಲ್ಲ. ಅವರ ಮನೆಗೆ ಸೇರಿದೆ ಅವರೇ ಕೊಡುಸ್ತೀನಿ ಅಂದ್ರೂ ಕೈಲಿ ಮುಟ್ಟಲ್ಲ. ಆ ಸೂಳೇಮಕ್ಳನ ಮಾತೂ ಆಡ್ಸಲ್ಲ. ನಾನು ಮರ್ಯಾದೆಗೆ ಬದುಕಿರೋನು.'

ಸತ್ಯ ಸುಮ್ಮನೆ ಕುಳಿತಳು. ಸ್ವಲ್ಪ ಹೊತ್ತು ಸುಮ್ಮನಿದ್ದ ವೆಂಕಟೇಶನೇ

ಹೊದಲು ಅನುಕೂಲವಾದ ಕಡೆ ಸಿಕ್ಕಿದಾಗ ನೀನು ಬ್ಯಾಡವಾಯ್ತು. ಈಗ ಹಳೇ 'ಡುಗಿ ಪಾದವೇ ಗತಿ ಅಂತ ಬರ್ತಾರೆ. ನೀನೇನಾದ್ರೂ ಮಾನಮರ್ಯಾದೆಗೆ ಕಿದೀಯಾ ಯೋಚನೆ ಮಾಡು' ಎಂದು ಹೇಳಿ ಎದ್ದು ಹೊರಟುಹೋದ.

ಆ ದಿನ ತನ್ನ ಹಸ್ತಪ್ರತಿಯನ್ನು ನೋಡುವುದು ಅವಳಿಗೆ ಆಗಲಿಲ್ಲ. ವೆಂಕಟೇಶ ಬಂದು ಹೇಳಬೇಕಾದರೆ ನಿಜವಿರಬೇಕು. ಊರಿನಲ್ಲಿ ಏನು ನಡೆಯುತ್ತದೆಂಬುದು ತನಗೆ ತಿಳಿಯುವುದೇ ಇಲ್ಲ. ತಾನು ಇತಿಹಾಸದ ಸಮಸ್ಯೆಯಲ್ಲೇ ಮಗ್ನಳಾಗಿರುತ್ತೇನೆ. ಊರೊಳಗಿದ್ದು ಅಲ್ಲಿನ ಸಂಪರ್ಕ ಇಟ್ಟುಕೊಂಡರೆ ತಾನೇ ಅಲ್ಲಿಯ ವಿಷಯ ತಿಳಿಯುತ್ತೆ? – ಎಂದುಕೊಂಡಳು.

ಶ್ರೀನಿವಾಸ ಮೈಸೂರಿನಿಂದ ಕಾಗದ ಬರೆದಾಗಿನಿಂದ ಅವಳ ಜೀವನದಲ್ಲಿ ಅನೇಕ ತೀವ್ರಘಟನೆಗಳು ನಡೆದುಹೋಗಿವೆ. ಬೆಂಗಳೂರಿನ ಕಾಲೇಜಿನ ಕೆಲಸ ಹೋಗಿ ಅವಳು ಜವಳಿ ಅಂಗಡಿಯಲ್ಲಿ ಚಾಕರಿ ಮಾಡಬೇಕಾಯಿತು. ಅದೇ ಮದುವೆಯ ಕಾರಣದಿಂದ ತಂದೆಯ ಬುದ್ಧಿಭ್ರಮಣೆಯಾಗಿ ಅದು ಎಲ್ಲೆಲ್ಲಿಗೋ ತಿರುಗಿತು. ಅನಂತರ ಅವಳು ಈ ಊರಿಗೆ ಬಂದಳು. ತಂದೆ ತನಗೆ ಬ್ರಹ್ಮೋಪದೇಶ ಮಾಡಿದ್ದಾರೆ. ಅವರ ಸಾವು – ಅನಂತರ ತಾನು ಹಗಲು ರಾತ್ರಿ ಬೆಳಕು ಕತ್ತಲೆಗಳಿಗೆ ಹೆದರದೆ ಈ ತೋಟದಲ್ಲಿ, ತಂದೆ ಆಶ್ರಮವೆಂದುಕೊಳ್ಳು ದ್ದ ಗುಡಿಸಲಿನ ಜಾಗದಲ್ಲಿ ಮನೆ ಕಟ್ಟಿಕೊಂಡು ವಾಸಿಸುತ್ತಿರುವುದು; ಶೂದ್ರ ಕ್ತೆ ನೆಲದ ಮಣ್ಣಿಗೆ ಬೆವರು ಸುರಿಸಿ ದುಡಿಯುವುದು; ಮೋಹನದಾಸನ ಚಯ; ಅವನು ಕೇಳಿದಂತೆ ಪುಸ್ತಕ ಬರೆಯಲು ಒಪ್ಪಿ ಕಳೆದ ನಾಲ್ಕು ತಿಂಗ ಳ ಪುಸ್ತಕ ಭಂಡಾರದಲ್ಲಿ ಹೊಸ ಜಗತ್ತನ್ನೇ, ಇತಿಹಾಸದ ಹೊಸ ಮುಖ ನ್ನೇ ಹುಡುಕಿ ಕಂಡಿರುವುದು; ನೆನ್ನೆ ಅಮ್ಮನ ಹಬ್ಬ, ಬಲಿ, ಇದು ತನಗೆ ಕಾಣಿಸುತ್ತಿರುವ ಹೊಸ ಇತಿಹಾಸ; ಎಂಟು ವರ್ಷದಿಂದ ನಡೆಯದ ಹ ಬಲಿಗಳನ್ನು ಏರ್ಪಡಿಸಿದ್ದುದು ತನ್ನ ಮದುವೆಯ ಶುಭಾಶುಭಗಳನ್ನು ಚ ಬುದು ಈಗ ಗೊತ್ತಾಗಿದೆ.

ಶ್ರೀನಿವಾಸನ ಬಗೆಗೆ ತನ್ನ ಮನಸ್ಸಿನಲ್ಲಿ ಯಾವ ಭಾವವಿದೆ ಎಂಬುದು ವಳಿಗೇ ಅರ್ಥವಾಗುತ್ತಿಲ್ಲ. ತುಮಕೂರಿನಲ್ಲಿ ಅವನನ್ನು ಕಂಡಾಗ ಅವನ ಂಡತಿ ಸತ್ತು ಏಳೆಂಟು ತಿಂಗಳಾಗಿತ್ತು. ಆದರೆ ಅವನನ್ನು ತಪ್ಪಿಸಬೇಕೆಂದು ನು ಬೇಗ ಬೇಗ ನಡೆದು ಹೊರಟುಹೋಗಿದ್ದಳು. ಹಲವು ಸಲ ಅವನ ನೆನಪು ತ್ತಿತ್ತು. ಆದರೆ ಮೈಸೂರಿನಲ್ಲಿ ತಾವಿಬ್ಬರೂ ಜೊತೆಯಲ್ಲಿ ಓದುತ್ತಿದ್ದಾಗ ಲ್ಲಿರುತ್ತಿದ್ದ ಆರ್ದ್ರಭಾವವು ಈಗ ಹುಟ್ಟುತ್ತಿಲ್ಲ. ಒಂದು ದಿನ ಆಳು ಹೊಲಕ್ಕೆ ಕಟ್ಟಿದ್ದ. ತಾನು ಉಳಬೇಕೆಂದು ಅವನನ್ನು ಬಿಡಿಸಿ ತಾನು ಮೇಣಿ

ಹಿಡಿದಳು. ಅಪರಿಚಿತಳು ಮತ್ತು ಎಡಗೈಲಿ ಮೇಣಿ ಹಿಡಿದಿರುವುದರಿಂದ ಎತ್ತುಗಳು ಶಿಂಡಾಡಿದುವು. ಏನು ಮಾಡಿದರೆ ಅವು ಮಾತು ಕೇಳುತ್ತವೆಂದು ಅವಳಿಗೆ ಗೊತ್ತು. ಕೋಲಿನಿಂದ ಎರಡಕ್ಕೂ ಒಂದೊಂದು ಶಣೆದು, 'ಅರ್ರಾ' – ಎಂದು ಗದರಿದಳು. ಅವು ದಾರಿಗೆ ಬಂದುವು. ಅದು ತಾನು ಮೊದಲ ದಿನ ಹಿಡಿದ ನೇಗಿಲು. ಗುಳದ ಗೆರೆ ಒಂದೇ ಸಾಲಿಗೆ, ಆಳು ಹೊಡೆದಿದ್ದ ಸಾಲಿನ ಪಕ್ಕಕ್ಕೆ ಸಮನಾಗಿ ಬರಲಿಲ್ಲ. ಇದನ್ನು ಕಂಡ ಆಳು, 'ಅವ್ವಾರೆ, ನಿಮ್ ಕೈಲಾಗಾಕುಲ್ಲ ಬುಡಿ' ಎಂದಿದ್ದ.

'ಯಾಕಾಗಾಕುಲ್ಲ? ಇವತ್ ಮದ್ಯಾನಗಂಟ ನಾನು ಹ್ವಡೀತೀನಿ. ನೀನು ದನ ಹ್ವಡಕಂಡು ನಡಿ' – ಎಂದಿದ್ದಳು.

ಅವನು ಹೊರಟುಹೋದ. ಒಂದು ಗಂಟೆಯಲ್ಲಿ ಗುಳದ ಗೆರೆ ಸಮನಾಗುತ್ತಿತ್ತು. ಅರ್ರ, ಎಚ್ಚ, ಹೋಂ, ಎಲಾ, ಹುಯ್ ಎಂಬ, ಮತ್ತು ಮಿಶ್ರಿತಗಳ ಅವಳ ಶಬ್ದಕ್ಕೂ ಎತ್ತುಗಳ ತಿಳಿವಳಿಕೆಗೂ ಹೊಂದಾಣಿಕೆಯಾಯಿತು. ಮಧ್ಯಾಹ್ನ ಹನ್ನೆರಡಕ್ಕೆ ಊರಿನ ಇತರರು ಆರು ಬಿಟ್ಟರು. ನೇಗಿಲನ್ನು ನೊಗದ ಮಧ್ಯಕ್ಕೆ ಹಿಂದುಮುಂದಾಗಿ ಇಳಿಹಾಕಿ ಊರ ಕಡೆಗೆ ಹಿಂತಿರುಗುವಾಗ, ಉಳಿದ ರೈತರೆಲ್ಲ ಇವಳು ಗೇಯುವುದನ್ನು ನೋಡುತ್ತಿದ್ದರು. 'ಹಾರುವಮ್ಮ ಎಂಥಾ ಏಟು ಗೆಯ್ತದೆ ನೋಡಿದೆ ಏನ್ಲಾ?' – ಒಬ್ಬಿಬ್ಬ ಮುದುಕ ರೈತರು ಅಂದುಕೊಂಡದ್ದು ತನಗೂ ಕೇಳಿಸಿತು. ಮಧ್ಯಾಹ್ನ ಒಂದು ಗಂಟೆಗೆ ತಾನು ಆರು ಬಿಟ್ಟು ತೋಟದ ಮನೆಗೆ ಬಂದಾಗ ಎಡ ಅಂಗೈ ಮೇಣಿಹಾಲು ಕುಡಿದಿತ್ತು: ಎಂದರೆ ರಕ್ತಗಟ್ಟಿ ಊದಿಕೊಂಡು ನೋಯುತ್ತಿತ್ತು. ಆದರೆ ಆ ನೋವಿನಲ್ಲಿ ಒಂದು ತೆರನಾದ ಸಾಹಸದ ಸುಖ ಕಾಣುತ್ತಿತ್ತು. ಮನೆಗೆ ಬಂದು ಅಡಿಗೆ ಮಾಡಿ ಊಟ ಮಾಡುವಾಗ ಶ್ರೀನಿವಾಸನ ನೆನಪು ಬಂತು. ತಾನೂ ಅವನೂ ಹೋಟೆಲಿನಲ್ಲಿ ಜೊತೆಯಾಗಿ ಕುಳಿತು ತಿಂಡಿ ತಿನ್ನುತ್ತಿದ್ದ ಜ್ಞಾಪಕವಾಯಿತು. ಇದ್ದಕ್ಕಿದ್ದ ಹಾಗೆಯೇ ಒಂದು ಪ್ರಶ್ನೆ ಮನಸ್ಸಿನಲ್ಲಿ ಹುಟ್ಟಿತು: ಶ್ರೀನಿವಾಸ ಎಂದಾದರೂ ಮೇಣಿಹಾಲು ಕುಡಿದಿದ್ದಾನೆಯೇ? ಇಲ್ಲವೆಂಬುದು ಅವಳಿಗೆ ಗೊತ್ತು. ಅವನಾಗಲಿ ಅವನ ತಂದೆಯಾಗಲಿ, ಪ್ರಾಯಶಃ ಅವನ ಅಜ್ಜನಾಗಲಿ, ಒಂದು ದಿನವೂ ಹೆಗಲ ಮೇಲೆ ಆರು ಹೊತ್ತಿಲ್ಲ. ಕೈಲಿ ಮೇಣಿ ಹಿಡಿದಿಲ್ಲ. ಅವನ ತಾಯಿಯಂತೂ ಒಂದು ದಿನವೂ ಹೊಲದಲ್ಲಿ ಗೇಯುವವರಿಗೆ ರಾಗಿ ರೊಟ್ಟಿ ಬಡಿದು ತಲೆಯ ಮೇಲೆ ಹೊತ್ತು ಕೊಟ್ಟಿಲ್ಲ. ಸಸಿ ಹಾಕಿ ಕಳೆ ಕಿತ್ತಿಲ್ಲ – ಎನಿಸಿತು. ಶ್ರೀನಿವಾಸ ಆರು ಉಳುತ್ತಿದ್ದು ತಾನು ಹೊತ್ತು ಮೂರಾಳುದ್ದವಾಗುವ ಹೊತ್ತಿಗೆ ರೊಟ್ಟಿ ಚಟ್ನಿ ಹಿತ್ತಾಳೆ ಚೊಂಬಿನಲ್ಲಿ ನೀರುಗಳನ್ನು ಒಯ್ದು ಅವನಿಗೆ ಕೊಟ್ಟು ಬದುವಿನ

ಕೊಬ್ಬಳಿ ಮರದ ನೆರಳಿನಲ್ಲಿ ಅವನು ರೊಟ್ಟಿ ಅಗಿಯುವಾಗ ತಾನು ಎದುರು ಕುಂತು, ಅವನು ‘ಚಟ್ನಿ ಮೈನಾಗೈತೆ’ – ಎಂದರೆ ಎಷ್ಟು ಚೆನ್ನ ಎಂಬ ಕಲ್ಪನೆ ಬಂತು. ಊಟ ಮಾಡುವಾಗ ಅವಳು ಆ ಕಲ್ಪನೆಯಲ್ಲೇ ಮೈಮರೆತಳು. ಆದರೆ ಸ್ವಲ್ಪ ಹೊತ್ತಿನಲ್ಲೇ ಪ್ರಜ್ಞೆ ಬಂತು: ಅವನಿಗಾಗಲೇ ಮದುವೆಯಾಗಿದೆ. ಇದು ಅಸಾಧ್ಯ. ಅಷ್ಟು ಮಾತ್ರವಲ್ಲ, ನಾನು ಇವತ್ತಾದರೂ ಕೈಗೆ ಮೇಣಿಹಾಲು ಕುಡಿಸಿದ್ದೇನೆ. ಆದರೆ ಅವನ ಕೈ ಒಂದು ದಿನವೂ ಕುಡಿದಿಲ್ಲ; ಮುಂದೆಯೂ ಕುಡಿಯುವುದಿಲ್ಲ. ಈಗಾಗಲೇ ಅವನು ನಾಲ್ಕು ಬಸ್ಸುಗಳ ಸಾಹುಕಾರನಾಗಿದ್ದಾನೆ. ಶೆವ್ರೊರ್ಲೆ ಕಾರಿನ ಸ್ಟೀರಿಂಗ್ ತಿರುಗಿಸುತ್ತಿದ್ದಾನೆ. ಎಷ್ಟು ಅಂತರ! – ಎನಿಸಿತು. ಆ ದಿನದಿಂದ ಅವಳಿಗೆ ಅವನ ನೆನಪಿನ ಸಂಗಡ ಸಹಜವಾಗಿ ಬರುತ್ತಿದ್ದ ಆರ್ದ್ರತೆಯು ಹೊರಟುಹೋಯಿತು. ನೆನಪು ಪೂರ್ತಿಯಾಗಿ ತಪ್ಪುತ್ತಿರಲಿಲ್ಲ. ಆದರೆ ಅದು ಚಿಮ್ಮಿಸುತ್ತಿದ್ದ ಭಾವವು ಬಡವಾಗುತ್ತಿತ್ತು.

ಈಗ ಅವನು ನನ್ನ ನೆನಪಿನಿಂದ ಬುದ್ಧಿಗೆಟ್ಟವನಂತೆ ಆಗಿದ್ದಾನಂತೆ. ಅವನ ಅಪ್ಪ, ಅಮ್ಮ, ಅಜ್ಜರೆಲ್ಲ ಒಪ್ಪಿದ್ದಾರೆ. ಗ್ರಾಮದೇವತೆ ಒಳ್ಳೆಯ ಒಪ್ಪಿಗೆ ಕೊಟ್ಟಿದ್ದಾಳಂತೆ. ಈ ಸುದ್ದಿಯಿಂದ ಅವಳ ಮನಸ್ಸು ವಿಚಲಿತವಾಯಿತು. ತಾನೀಗ ಏನು ಮಾಡಬೇಕು, ಎನಿಸಿತು. ‘ಶ್ರೀನಿವಾಸ, ಇಲ್ಲಿ ಬಂದು ಆರು ಗೇಯ್ತೀಯ? ನೀನು ನಿಜವಾದ ರೈತನೇ?’ – ಎಂದು ಕೇಳಲೇ ಎನಿಸಿತು. ಇದೆಂತಹ ಸಣ್ಣ ಪ್ರಶ್ನೆ ಎಂದುಕೊಂಡ ಅವಳ ಮನಸ್ಸು ಇನ್ನೂ ಆಳ ಆಳಕ್ಕೆ ಇಳಿದು ಬೇರೆ ಏನನ್ನೋ ಹುಡುಕುತ್ತಿತ್ತು.

ಮರುದಿನ ಬೆಳಗ್ಗೆ ಒಂಬತ್ತು ಗಂಟೆಯ ಹೊತ್ತಿನಲ್ಲಿ ಅವಳು ಜೋಡಿ ಗಡಿಗೆ ಹಿಡಿದು, ಹೊಸದಾಗಿ ಕಟ್ಟಿಸಿದ ತೆಂಗಿನ ಸೊಸಿಗಳಿಗೆ ನೀರು ಹೊತ್ತು ಹುಯ್ಯುತ್ತಿದ್ದಳು. ಶ್ರೀನಿವಾಸನ ತಾಯಿ ರಂಗಮ್ಮ ಹೊಳೆಬಾಗಿಲು ತೆಗೆದುಕೊಂಡು ಬರುತ್ತಿದ್ದುದು ಕಾಣಿಸಿತು. ಹೊಳೆಬಾಗಿಲಿನ ತನಕ ಮತ್ತೆ ಯಾರೋ ಹೆಂಗಸರು ಜೊತೆಗೆ ಬಂದಿದ್ದರು. ಅವರು ಹೊರಗೇ ಉಳಿದರು. ರಂಗಮ್ಮ ಒಬ್ಬಳೇ ತೋಟದೊಳಕ್ಕೆ ಬರುತ್ತಿದ್ದಾಳೆ. ಹತ್ತಿರ ಬಂದಾಗ ತಿಳಿಯಿತು: ಅವಳ ಕೈಯಲ್ಲಿ ಬೆಳ್ಳಿಯ ತಟ್ಟೆಯಿದೆ. ತಟ್ಟೆಯೊಳಗೆ ಒಂದು ಬೆಳ್ಳಿಯ ಲೋಟ, ಅರಿಶಿನ ಕುಂಕುಮದ ಪಂಚೋಳ, ಹೂವು. ರಂಗಮ್ಮ ಪಾಳೇಗಾರರ ಮನೆತನ ಮತ್ತು ಗಂಡನ ಮಂತ್ರಿತ್ವಗಳಿಗೆ ತಕ್ಕಂತೆ ಕಲಾಪತ್ತಿನ ದೊಡ್ಡ ಸೆರಗುಗಳ ರೇಶಿಮೆ ಸೀರೆ ಉಟ್ಟಿದ್ದಾಳೆ. ಕೊರಳಿಗೆ ಚಿನ್ನದ ಸರ, ಅಡ್ಡಿಕೆ. ಒಂದೊಂದು ಕೈಗೂ ಬಂಗಾರದ ಐದಾರು ಬಳೆಗಳನ್ನು ಹಾಕಿದ್ದಾಳೆ. ಅವಳು ಹತ್ತಿರ ಬಂದು ಮಾತನಾಡಿಸುವ ತನಕ ಸತ್ಯ ಕಾಣದವಳಂತೆ ಉಪೇಕ್ಷೆಮಾಡಿ, ಗಡಿಗೆಗಳಲ್ಲಿ ನೀರು ತುಂಬಿ ಹೊರು

ತ್ತಿದ್ದಳು. ಹತ್ತಿರ ಬಂದ ರಂಗಮ್ಮನೇ ಮಾತನಾಡಿಸಿದಳು: 'ನೀನ್ಯಾಕೆ ಇವ ಮಾಡ್ತಿದೀಯ? ಆಳ ಕೈಲಿ ಮಾಡಿಸಬ್ಯಾಡ್ದಾ?'

'ರೈತರಾಗಿದ್ದುಕೊಂಡು ಆಳ ಕೈಲಿ ಮಾಡಿಸಬ್ಯಾಡ್‌ದು.'

'ಗಡಿಗೆ ಅಲ್ಲಿ ಮಡಗು. ಗುಡೀ ಪ್ರಸಾದ ತಂದಿದೀನಿ. ಕೈ ತ್ವಳ್ಕ, ಕೊಡ್ತೀನಿ.'

'ಇವೇನು ಇವತ್ತು ಗುಡಿಗೆ, ಗುರುವಾರದ ದಿನ?' – ತಕ್ಷಣ ಅರ್ಥವಾಗಿದ್ದರೂ ಸತ್ಯ ಬೇಕೆಂದೇ ಕೇಳಿದಳು.

'ಒಳ್ಳೇ ಕೆಲಸ ಮಾಡೂ ಮದ್ಲು ದೇವರ ಪೂಜೆ ಮಾಡುಸುಲ್ವಾ? ಕೈ ತೊಳ್ಕ.'

ಸತ್ಯ ಕೈ ತೊಳೆದುಕೊಂಡು ಬಂದಳು. ರಂಗಮ್ಮ ಅವಳ ಹಣೆಗೆ ಕುಂಕುಮ ಹಚ್ಚಿ, ಬಾಚದಿದ್ದ ತುರುಬಿಗೆ ಪ್ರಸಾದದ ಹೂವನ್ನು ಮುಡಿಸಿದಳು. ಅವಳ ಬಲ ಅಂಗೈ ಅನಿಸಿಸಿ ಬೆಳ್ಳಿಯ ಲೋಟದ ಪಂಚಾಮೃತವನ್ನು ಹಾಕಿ, 'ಕುಡಿ' ಎಂದಳು. ರುಚಿ ನೋಡಿದ ಸತ್ಯ, 'ಚಳ್ಳೇ ವೈನಾಗೈತೆ. ಯಾಲಕ್ಕಿ, ಬಾದಾಮಿ ಪುಡಿ, ಕಲ್ಲುಸಕ್ಕರೆ ಎಲ್ಲಾ ಬಿದ್ದವೆ' ಎಂದಳು.

'ನಮ್ಮ ದೊಡ್ಡ ಗೌಡರು ಅದೆಲ್ಲ ಹಾಕದೆ ಅಬಿಸೇಕ ಮಾಡ್ಸಾಕೇ ಇಲ್ಲ.'

ಸತ್ಯ ಸುಮ್ಮನೆ ಕುಳಿತಳು. ತಟ್ಟೆಯನ್ನು ಪಕ್ಕಕ್ಕೆ ಇಟ್ಟುಕೊಂಡ ರಂಗಮ್ಮ ಅವಳ ಎದುರಿಗೆ ಕೂತಳು. ರಂಗಮ್ಮ ಏನು ಆಡುತ್ತಾಳೆಂಬುದು ಸತ್ಯಳಿಗೆ ತಿಳಿದಿತ್ತು. ಹೇಗೆ ಶುರುಮಾಡಬೇಕೆಂಬುದು ರಂಗಮ್ಮನಿಗೆ ತಿಳಿಯದು. ಕೊನೆಗೆ ಏನೋ ಜ್ಞಾಪಿಸಿಕೊಂಡವಳಂತೆ ತಕ್ಷಣ ಎರಡು ಕೈಗಳಿಂದಲೂ ತನ್ನ ಕೊರಳಿನಲ್ಲಿದ್ದ ಐದು ಎಳೆ ಚಿನ್ನದ ಸರವನ್ನು ತೆಗೆದು ಸತ್ಯಳ ಕೊರಳಿಗೆ ಹಾಕಿಬಿಟ್ಟಳು. ಸತ್ಯಳಿಗೆ ಗಾಬರಿಯಾಯಿತು. 'ಇದೇನು ಕೆಲ್ಸ ನಿಮ್ಮದು?' – ಎಂದು ಅದನ್ನು ಹೊರಕ್ಕೆ ತೆಗೆಯಲು ಹೋದಳು. ರಂಗಮ್ಮ ಅವಳ ರಟ್ಟೆ ಹಿಡಿದು ತಡೆದಳು. 'ತೆಗೀಬ್ಯಾಡ. ತೆಗೀಬ್ಯಾಡ. ದೇವರು ಹ್ಯೇಳ್ಯಾದೆ. ನಾನನ್ನಾದ ಒಂದು ರವಷ್ಟು ಕೇಳು' – ಎಂದು ಅವಳ ಕೈಹಿಡಿದು ಅಂಗಲಾಚಿದಳು.

'ನಂಗೆ ಚಿನ್ನದ ಮ್ಯಾಲೆ ಆಶೆ ಇಲ್ಲ. ಇಲ್ಲಿ ನೋಡಿ, ಜನಿವಾರ ಇಕ್ಯಂಡಿದೀನಿ. ಆದಿದ್ವೋರಿಗೆ ಚಿನ್ನ ಯಾಕೆ ಬೇಕು? ಮಾಡುಸ್ಕಾಬೇಕು ಅಂದ್‌ರೆ ನನ್ನ ತಾವ ದುಡ್ಡೈ ಐತ್ತೆ. ನಮ್ಮಪ್ಪ ಕೊಟ್ಟು ಹೋಗ್ಯವೆ.'

ರಂಗಮ್ಮನಿಗೆ ಸಂಭ್ರಾಂತಿಯಾಯಿತು. ಜನಿವಾರದ ಮಾತು ಆಡಿದುದರಿಂದ ಅವಳ ಮನಸ್ಸಿನ ಮಾತು ಕಲಸಿಹೋಯಿತು. ಆದರೆ ಜ್ಞಾಪಿಸಿಕೊಂಡು ಅಂದು ಬಿಟ್ಟಳು: 'ನೋಡು, ಆದುದ್ದಾಯ್ತು. ದೇವರು ಹ್ಯೇಳ್ಯದೆ. ಅಮ್ಮನಿಗಿಂತ ಯಾರ

ಮಾತೂ ಪೊಡ್ಡದಲ್ಲ. ನೀನು ಹೆತ್ತು ಸಲ ಹೊತ್ತರೂ ಮುಗೀದಷ್ಟು ಬಂಗಾರ-ವೈತ್ತಿ. ಇಷ್ಟೆಲ್ಲ ಜಮೀನು, ಆಸ್ತಿ. ಇದೆಲ್ಲ ನಿಂದು. ನೀನು ಸುಕವಾಗಿರು. ಅವ್ವನ್ನ ದಾರಿಗೆ ತಂದ್ಕಂಡು ರಾಣಿ ಹಂಗಿರು. ನೀನೇ ಯಜಮಾಂತಿ. ಇವರೂ ಹಂಗಂತ ಹ್ಯೇಳಿಕಳಿಸಿಯವ್ರೆ.'

ಇಷ್ಟು ಹೇಳಿ ಅವಳು ಕಣ್ಣಿನಲ್ಲಿ ನೀರು ತುಂಬಿಕೊಂಡಳು. ಪೂರ್ತಿ ಅರ್ಥ ವಾಯಿತೇ, ಯಾವ ಹಿನ್ನೆಲೆಯೂ ಗೊತ್ತಿಲ್ಲದಿದ್ದರೆ ತಾನು ಆಡಿದ ಇಷ್ಟು ಮಾತು ಗಳು ಎಲ್ಲ ಅಭಿಪ್ರಾಯವನ್ನೂ ವ್ಯಕ್ತಪಡಿಸಿರುತ್ತವೆಯೇ ಎಂಬುದು ಅವಳಿಗೆ ತಿಳಿಯಲಿಲ್ಲ. ಆದರೆ ವೆಂಕಟೇಶನಿಂದ ಹಿನ್ನೆಲೆ ಗೊತ್ತಾಗಿದ್ದುದರಿಂದ ಸತ್ಯಳಿಗೆ ಎಲ್ಲವೂ ಅರ್ಥವಾಯಿತು. ಈ ಸರಳ ಮನಸ್ಸಿನ ಹೆಂಗಸಿನೊಡನೆ ಹೆಚ್ಚು ಮಾತ ನಾಡುವುದು ಅವಳಿಗೆ ಇಷ್ಟವಾಗಲಿಲ್ಲ. ತಾನು ಕೇಳಿದುದಕ್ಕೆ ಉತ್ತರ ಕೊಡುವ ತಿಳಿವಳಿಕೆಯೂ ಈಕೆಗೆ ಇಲ್ಲ. ಹೆಚ್ಚು ಕೇಳಿದರೆ ಇನ್ನೊಂದಿಷ್ಟು ಅಳಬಹುದು; ಆದುದರಿಂದ ಇವರೊಡನೆ ಚರ್ಚೆ ಬೇಡ ಎಂದುಕೊಂಡ ಅವಳು ಎಂದಳು: 'ಯಜ ಮಾನರು ಎಲ್ಲಿ?'

'ನಿನ್ನೆ ರಾತ್ರಿ ಬಂದ್ರು. ಮನ್ಲವ್ರೆ.'

'ಅವರುನ್ನ ಕಳಿಸಿ ಹೋಗಿ.'

'ಕಳುಸ್ತೀನಿ. ನಾನ್ಹೇಳಿದ್ದು ಡೀಲಿ ಮಾಡಬ್ಯಾಡ ಕಣವ್ವ. ನೀನೇ ನನ್ನ ಸ್ವಸೆ' – ಎಂದು ರಂಗಮ್ಮ ಮತ್ತೆ ಕೈ ಹಿಡಿದುಕೊಂಡಳು.

'ನಾನು ಅವರ ಕ್ಯೆಲಿ ಮಾತಾಡ್ತೀನಿ. ಇದ ನೀವು ಇಟ್ಕಳಿ' – ಎಂದು ಸತ್ಯ, ಕೊರಳಲ್ಲಿದ್ದ ಸರವನ್ನು ತೆಗೆಯಲು ಕೈಹಾಕಿದಳು.

'ಅದ ತೆಗೆಯಾಕಾದು ನೀನು. ನನ್ನ ಕೊರಳಾಣೆ' – ಎಂದು ಅವಳ ಕೈ ಹಿಡಿದು ತಡೆದ ರಂಗಮ್ಮ ಮತ್ತೆ ಅಳಲು ಶುರು ಮಾಡಿದಳು. 'ಆದುದ್ದಾಯ್ತು. ಊಂ. ಈ ಈ ಈಗ ನನ್ನ ಮ್ಯಾಲೆ ಶಿಟ್‌ಮಾಡ್ಕ್ಯಬ್ಯಾಡ. ನನ್ನ ತೆಪ್ಪಿಲ್ಲ. ಆಗ ದೇವರೇ ಹಹಹಂಗ್ ಮಾಡಿತ್ತು' – ಎಂದು ಬಿಕ್ಕಳಿಸಿ ಬಿಕ್ಕಳಿಸಿ ಹೇಳಿದಳು.

'ಆಗ್ಲಿ, ಅವ್ರುನ್ನ ಕಳಿಸಿ. ನೀವು ನಡೀರಿ. ಬಿಸಿಲು ಹತ್ತೂ ಮುಂಚೆ ನಾನು ನೀರು ಹಾಕಿ ಮುಗುಸ್ತೀನಿ' – ಎಂದು ಸತ್ಯ ಮೇಲೆ ಎದ್ದಳು.

'ಇವತ್ತಿಂದ ನೀನು ಕೆಲಸ ಮಾಡಾಕಾದು. ರಾಣಿ ಹಂಗಿರಬೇಕು.'

'ಆಯ್ತು. ನೀವು ನಡೀರಿ.'

'ನನ್ನ ಕೊರಳಾಣೆ.'

'ಆಗಲಿ. ನೀವು ನಡೀರಿ.'

ರಂಗಮ್ಮ ಅವಳಿಗೆ ಮತ್ತೊಮ್ಮೆ ಕುಂಕುಮವಿಟ್ಟು ಅವಳ ಎರಡು ಕೆನ್ನೆ

ಗಳನ್ನೂ ನೀವಿ, ಎಂಟು ಬೆರಳುಗಳನ್ನು ತನ್ನ ಕೆನ್ನೆಗೆ ಕೊಟ್ಟು ಅಮುಕಿ ಲಟ ಲಟನೆ ನೆಟಿಕೆ ಮುರಿದು, 'ಕೆಲಸ ಮಾಡಬ್ಯಾಡ. ನೀನು ಲಕ್ಷ್ಮಿ' ಎಂದು ಹೇಳಿ ಕಣ್ಣು ಒರೆಸಿಕೊಂಡು ತಟ್ಟೆಯನ್ನು ಕೈಲಿ ಹಿಡಿದು ಹೊರಟುಹೋದಳು. ಹತ್ತು ಮಾರು ನಡೆದು ಅವಳು ಹಿಂತಿರುಗಿ ನೋಡುವ ವೇಳೆಗೆ ಸತ್ಯ ಕೊಳದಲ್ಲಿ ಇಳಿದು ಎರಡು ಗಡಿಗೆಗಳ ಕಂಠವನ್ನೂ ಹಿಡಿದು ಕುತ್ತಿಗೆಯನ್ನು ಬಗ್ಗಿಸಿ ಮುಳುಗಿಸಿ ಬುಡು ಬುಡು ಬುಡು ಎಂದು ನೀರು ತುಂಬುತ್ತಿದ್ದಳು.

೬

ಹನ್ನೊಂದು ಗಂಟೆಯ ಸುಮಾರಿಗೆ ದೂರದಲ್ಲಿ ಕಾರು ಹಾರನ್ ಮಾಡಿದ ಶಬ್ದ ಕೇಳಿಸಿತು. ಹೊಲ ಗದ್ದೆ ತೋಟಗಳಿಗೆ ಗೊಬ್ಬರ ಅಥವಾ ತೋಟಗಳಿಂದ ಕಾಯಿ ಕಸಿ ಸೋಗೆ ಸೊಪ್ಪುಗಳನ್ನು ಹೇರಲು ಮಾಡಿದ್ದ ಗಾಡಿಯ ಜಾಡಿನಲ್ಲಿ ಮಂತ್ರಿಗಳ ಕಾರು ಬರುತ್ತಿದೆ ಎಂದು ಸತ್ಯ ಅರ್ಥ ಮಾಡಿಕೊಂಡಳು. ಅಷ್ಟರಲ್ಲಿ ಅವಳು ಸ್ನಾನ ಮಾಡಿ ಅಡಿಗೆಗೆ ಇಟ್ಟು, ಬಟ್ಟೆ ಒಗೆದು ಹಾಕಿ ಹವನಕ್ಕೆ ಸಿದ್ಧ ಮಾಡಿದ್ದಳು. ಅಡಿಗೆ ಒಲೆಯನ್ನು ಸರಿಮಾಡಿ ತನ್ನ ಪಾಡಿಗೆ ತಾನು ಹವನಕ್ಕೆ ಕುಳಿತಳು. 'ಓಂ ಭೂರಗ್ನಯೇ ಪ್ರಾಣಾಯ ಸ್ವಾಹಾ! ಇದಮಗ್ನಯೇ ಪ್ರಾಣಾಯ – ಇದಂ ನಮಮ' ಎಂದು ರಾಗವಾಗಿ ಹೇಳಿಕೊಂಡು, ಬಟ್ಟಲಿನಲ್ಲಿ ಕರಗಿಸಿದ್ದ ತುಪ್ಪವನ್ನು ಚಮಚದಾಕೃತಿಯಲ್ಲಿ ಮಾಡಿಕೊಂಡಿದ್ದ ಮುತ್ತುಗದೆಲೆಯಿಂದ ತುಂಬಿ ಅಗ್ನಿಗೆ ಹಾಕುತ್ತಿರುವಾಗ ಬಾಗಿಲಿನಲ್ಲಿ ಮಂತ್ರಿಗಳು ಒಬ್ಬರೇ ಕಾಣಿಸಿ ಕೊಂಡರು. ಸತ್ಯ ತನ್ನ ಧ್ಯಾನವನ್ನು ಕದಲಿಸಿ ಅವರ ಕಡೆ ನೋಡಲಿಲ್ಲ. ಅರ್ಧ ನಿಮಿಷ ಬಾಗಿಲಿನಲ್ಲಿ ನಿಂತಿದ್ದ ಅವರು ಒಳಗೆ ಬಂದರು. ಬಾಗಿ ದೂರದಲ್ಲೇ ಅಗ್ನಿಗೆ ನಮಸ್ಕಾರ ಮಾಡಿ, ಗೋಡೆಯ ಹತ್ತಿರ ಇದ್ದ ಮಂದಲಿಗೆಯ ಮೇಲೆ ಕೈಕಟ್ಟಿ ಕುಳಿತರು.

'ಓಂ ಆಪೋ ಜ್ಯೋತೀ ರಸೋಽಮೃತಂ ಬ್ರಹ್ಮ ಭೂರ್ಭುವಃ ಸ್ವರೋಂ ಸ್ವಾಹಾ' ಎಂದು ಹೇಳಿಕೊಂಡು, ಪ್ರಜ್ವಲಿಸುವ ಅಗ್ನಿಯ ಎದುರಿಗೆ ಬಲಗೈಲಿ ಆಜ್ಯದಲ್ಲಿ ಅದ್ದಿದ ಸಮಿತ್ತನ್ನು ಹಿಡಿದು ಸತ್ಯ ಕುಳಿತಿದ್ದಾಳೆ. ಬಿಳಿಯ ಚೀಟಿ ಸೀರೆಯುಟ್ಟ ಅವಳ ಬಿಳಿಯ ರವಿಕೆಯ ಮೇಲೆ ಮೂರೆಳೆಯ ಜನಿವಾರ ಕಾಣು ತ್ತಿದೆ. ಸ್ನಾನ ಮಾಡಿ ಒದ್ದೆಯಾಗಿದ್ದ ಉದ್ದವಾದ ಕೂದಲನ್ನು ತುದಿಗಂಟು ಹಾಕಿ ಹಿಂಭಾಗಕ್ಕೆ ಇಳಿಬಿಟ್ಟಿದ್ದಾಳೆ. ಹಣೆಯ ಕುಂಕುಮ, ಕಿವಿಯಲ್ಲಿದ್ದ ಮಾಸಲು ಬಣ್ಣದ ಒಂದು ಜೊತೆ ಕೆಂಪು ಹರಳಿನ ಓಲೆಗಳನ್ನು ಬಿಟ್ಟರೆ, ಅವಳ

ಕಪ್ಪು ಬಣ್ಣದ ಮೈಮೇಲೆ ಒಂದು ಆಭರಣವೂ ಇಲ್ಲ. ಕೈಯ ಮಣಿಕಟ್ಟುಗಳಲ್ಲಿ ಎರಡೆರಡು ಒರಟು ಸಾಣೆ ಬಳೆಗಳು.

'ಅಗ್ನೇ ನಯ ಸುಪಥಾರಾಯೇ....' – ಎನ್ನುತ್ತಾ ಸತ್ಯ ಎದ್ದು ನಿಂತಳು. ಪ್ರದಕ್ಷಿಣೆ ಮಾಡಿ ಅಗ್ನಿಗೆ ನಮಸ್ಕಾರ ಮಾಡಿದಳು. ಮಂತ್ರಿಗಳೂ ಎದ್ದುನಿಂತು ಪ್ರದಕ್ಷಿಣೆ ಮಾಡಿ ಅಗ್ನಿಗೆ ಅಡ್ಡಬಿದ್ದರು. ಸತ್ಯ ಅಗ್ನಿಯ ದಡಕ್ಕೆ ಬೆರಳು ಹಾಕಿ ಭಸ್ಮವನ್ನು ತೆಗೆದು ಭ್ರೂಮಧ್ಯಕ್ಕೆ ಇಟ್ಟುಕೊಂಡಳು. ಹವನ ಮುಗಿಯಿತೆಂಬು ದನ್ನು ಅರ್ಥಮಾಡಿಕೊಂಡ ಮಂತ್ರಿಗಳು, 'ನಂಗೊಂದಿಷ್ಟು ಕೊಡವ್ವ ಪ್ರಸಾದಾನ' ಎಂದರು.

'ನೀವೇ ತಗೊಳಿ.'

'ಮುಟ್ಟಭೌದು ತಾನೆ?'

'ಅಗ್ನಿಗೆ ಅಸ್ಪೃಶ್ಯತೆ ಇಲ್ಲ.'

ಆ ಮಾತಿನಲ್ಲಿ ಈ ಜಾಣೆ ಏನೇನು ಅರ್ಥವಿಟ್ಟಿದ್ದಾಳೆಯೋ ಎಂದು ಅನು- ಮಾನವಾದರೂ ಅವರು ಏನನ್ನೂ ತೋರ್ಪಡಿಸಿಕೊಳ್ಳದೆ, 'ಹಾ ಹಾ ಹಾ. ಹ್ಞ ಹ್ಞ ಹ್ಞ ಹ್ಞ, ಏನು ಮಾತು ಹೇಳ್ದೆಯಮ್ಮ! ಬರೆದಿಡಬೇಕು. ದೇಶದ ನಾಯಕರು ಇವನ್ನ ಅರ್ಥ ಮಾಡ್ಕ್ಯಬೇಕು' ಎಂದು ತಾವೂ ಬಲಗೈ ನೀಡಿ ಭಸ್ಮವನ್ನು ತೆಗೆದು, ತಮ್ಮ ಬಿಳೀ ಟೋಪಿ ಅರ್ಧ ಮುಚ್ಚಿದ ಹಣೆಗೆ ಇಟ್ಟು ಕೊಂಡರು. ಸತ್ಯ ತನ್ನ ಪಾಡಿಗೆ ತಾನು ಅಡಿಗೆಯ ಕೋಣೆಗೆ ಹೋದಳು. ಬಾಗಿಲು ತೆಗೆದಿದ್ದುದರಿಂದ ಆ ಸಣ್ಣ ಕೋಣೆಯ ಒಳಗೆ ಉರಿಯುತ್ತಿದ್ದ ಕೋಡಲೆ ಒಲೆ, ಪಕ್ಕದಲ್ಲೇ ಇದ್ದ ಸಣ್ಣ ಬಚ್ಚಲು, ಗೋಡೆಯ ಬದಿಯಲ್ಲಿ ಅರೆಯುವ ಕಲ್ಲುಗಳು ಮಂತ್ರಿಗಳಿಗೆ ಕಾಣಿಸುತ್ತಿದ್ದುವು. ಬೆಂದಿದ್ದ ಬೇಳೆಯನ್ನು ತೆಗೆದು ಕೋಡಲೆಗೆ ಇಟ್ಟು ಕೋಡಲೆಯಲ್ಲಿ ಆಗಿದ್ದ ಅನ್ನವನ್ನು ನೆಲಕ್ಕೆ ಇಳಿಸಿ ಸತ್ಯ ಒಲೆಯ ಮೇಲೆ ಒಟ್ಟಿನ ಪಾತ್ರೆ ಇಟ್ಟು ಕೇಳಿದಳು: 'ನೀವು ಇಲ್ಲೇ ಊಟ ಮಾಡಭೌದು ಅಲ್ವಾ?'

'ಮನೇಲಿ ಕಾಯ್ತಾರೆ. ಅದರೂ ಸ್ವಸೆ ಕೈನ ಊಟ ಇವತ್ತೇ ಮಾಡೂ ಭಾಗ್ಯ ಬಂದ್'ರೆ ಯಾಕೆ ಬ್ಯಾಡ ಅನ್'ಲಿ? ಹ ಹ ಹ ಹ ಹ್ಞ....'

ಸತ್ಯ ಒಟ್ಟು ಮೂರು ಮುದ್ದೆಗೆ ಆಗುವಷ್ಟು ನೀರು ಇಟ್ಟು ಒಲೆ ಉರಿಯನ್ನು ಜೋರು ಮಾಡಿ, ಬೆಂದ ಬೇಳೆ ಮತ್ತು ಹಲಸಿನಕಾಯಿಗೆ ಹಾಕಲು, ಬೇರೆ ಚರುಕಿನಲ್ಲಿ ನೆನೆದಿದ್ದ ಹುಣಿಸೇಹಣ್ಣನ್ನು ಕಿವುಚಲು ಪ್ರಾರಂಭಿಸಿದಳು. ಮಂತ್ರಿ ಗಳೆಂದರು: 'ಹೆಣ್ಣುಮಕ್ಕಳು ಚನ್ನಾಗಿ ಅಡಿಗೆ ಕೆಲಸ ಕಲಿತಿರಬೇಕು. ಸಮಯ ಬಂದರೆ ಯಾವ ಕೆಲಸವೂ ಬರುಲ್ಲ ಅನ್ನಬಾರದು. ಸ್ವಾವಲಂಬನೆ ಅಂದರೆ ಏನು?

ದೇಶಕ್ಕೆ ಇವತ್ತು ಬೇಕಾಗಿರೂದು ಅದು. ಆದರೆ ನಿನ್ನಂಥ ವಿದ್ಯಾವಂತೆಯರ ಬುದ್ಧಿವಂತೆಯರ ಜ್ಞಾನ ಇನ್ನೂ ವಿಶಾಲವಾದ ಕ್ಷೇತ್ರದಲ್ಲಿ ಉಪಯೋಗವಾಗಿ ಜನಕ್ಕೆ ಸಹಾಯವಾಗಬೇಕು. ತೀರ ಅರ್ಜೆಂಟ್ ದಿನ ಬಿಟ್ಟರೆ ಉಳಿದಂತೆ ನೀನು ಅಡಿಗೆ ಪಡಿಗೆ ಅಂತ ಕೂತುಕೊಬಾರದು ಅಲ್ವಾ?'

ಸತ್ಯ ಉತ್ತರ ಕೊಡಲಿಲ್ಲ. ಕಿವುಚಿ ಚರಟ ತೆಗೆದು ಹುಣಿಸೇಹುಳಿಯನ್ನು ಒಲೆಯ ಮೇಲಿನ ಬೇಳೆ ಹಲಸಿನಕಾಯಿ ಹೋಳಿನ ಪಾತ್ರೆಗೆ ಹಾಕಿ, ಮರಗಿ ಯಿಂದ ತೆಗೆದು ಉಪ್ಪು ಹಾಕಿದಳು. ಹಿಟ್ಟಿನ ಎಸರಿಗೆ ಕವರಲು ಮರೆತಿದ್ದ ಎರಡು ಚಿಟಿಕೆ ರಾಗಿಹಿಟ್ಟನ್ನು ಹಾಕಿ ಕದರಿದಳು.

ಮಂತ್ರಿಗಳು ಹೇಳಿದರು: 'ಅವೊತ್ತು ಗ್ರಾಮದಲ್ಲಿ ಪಂಚಾಯಿತಿ ಆದ ದಿನ ನೀನು ಭಾಷಣ ಮಾಡಿ ಹೇಳಿದೆಯಂತೆ: ಬ್ರಾಹ್ಮಣ, ಶೂದ್ರ, ಅನ್ನೂ ವ್ಯತ್ಯಾಸನೇ ಸುಳ್ಳು. ಬ್ರಾಹ್ಮಣರಾಗುವ ಇಚ್ಛೆಯುಳ್ಳೋರಿಗೆಲ್ಲ ಬ್ರಾಹ್ಮಣರಾಗೋ ಅಧಿಕಾರ ಇದೆ ಅಂತ. ಹಂಡ್ರೆಡ್ ಪರ್ಸೆಂಟ್ ನಿಜವಾದ ಮಾತು ಇದು. ಅಲ್ಲಿ ಮದ್ರಾಸಿ ನಲ್ಲಿ ಡಿ.ಎಂ.ಕೆ. ಬೆಳೀತಾ ಇದೆ. ರಾಜಾಜಿ ಏನು ಹೇಳಿದರು? ಆರ್ಯ, ದ್ರಾವಿಡ, ಅಂತ ಈಗ ಯಾರೂ ವ್ಯತ್ಯಾಸ ಮಾಡುಕ್ಕಾಗುಲ್ಲ. ಬ್ರಾಹ್ಮಣ, ಶೂದ್ರ, ಅನ್ನೂ ವ್ಯತ್ಯಾಸ ತಾನೇ ಎಷ್ಟಿದೆ? ಅಜ್ಞಾನದ ಕಾಲ ಮುಗಿದಿದೆ. ಈಗ ಎಲ್ಲರಿಗೂ ಜ್ಞಾನವಾಗಬೇಕು; ವೇದಜ್ಞಾನ ಉಂಟಾಗಬೇಕು. ಹೆಂಗಸು ಜನಿವಾರ ಹಾಕ್ಕಂಡಿ ದಾಳೆ ಅಂತ ಅವತ್ತು ಹಳ್ಳೀಗುಗ್ಗುಗಳು ನಕ್ಕವಂತೆ. ನಾನು ಕೇಳ್ತೀನಿ: ಯಾಕೆ ಹಾಕ್ಕಬ್ಯಾಡ್ದು? ಮೊನ್ನೆ ಬೆಂಗಳೂರು ಮಹಿಳಾ ಸಮಾಜದ ಉದ್ಘಾಟನೆ ಮಾಡ್ತಾ ನಾನು ಆ ಮಾತೇ ಅಂದೆ. ಅಂದರೆ ಸ್ತ್ರೀಯರಲ್ಲಿ ವಿದ್ಯಾಭ್ಯಾಸ ಬೆಳೀ ಬೇಕು. ಅಲ್ಲೀತನಕ ದೇಶ ಮುಂದುವರಿಯುಲ್ಲ ಅಂತ. ಪೇಪರಲ್ಲಿ ಓದಲಿಲ್ವೆ?'

ಅವಳು ಉತ್ತರ ಹೇಳಲಿಲ್ಲ. 'ಯಾಕೆ, ಇಲ್ಲಿಗೆ ಪೇಪರು ಬರುಲ್ವೆ?' – ಮಂತ್ರಿ ಗಳೇ ಕೇಳಿದರು: 'ಅರೇ, ವೆಂಕಟೇಶನೇ ಪೇಪರ್ ಏಜೆಂಟ್. ನಿಂಗೊಂದು ಕಾಪಿ ಕಳಿಸಬ್ಯಾಡವೆ? ನಂಗೂ ವೆಂಕಟೇಶಂಗೂ ತುಂಬಾ ವಿಶ್ವಾಸ. ಆದರೆ ಒಂದು ವಿಷಯದಲ್ಲಿ ನಾನು ಅವನುನ್ನ ಒಪ್ಪುಲ್ಲ. ಹೆಂಗಸರಿಗೆ ಯಾಕೆ ಉಚ್ಚ ವಿದ್ಯಾಭ್ಯಾಸ ಅಂತ ಅವನ ವಾದ. ದೇಶ ಮುಂದುವರೀಬೇಕು ಅನ್ನೋರು ಇದನ್ನ ಒಪ್ಪೂದು ಹ್ಯಾಗೆ? ಅಭಿಪ್ರಾಯಭೇದ ಪ್ರೀತಿಗೆ ಮಧ್ಯ ಬಂದಿಲ್ಲ. ಬರ ಬ್ಯಾಡ್ದು ಅಂತ ನನ್ನ ನಿಯಮ. ಅವನು ಬ್ಯಾರೆಯಲ್ಲ, ನಮ್ಮ ಶ್ರೀನಿವಾಸ ಬ್ಯಾರೆಯಲ್ಲ. ಅವನಿಗೆ ಒಂದು ಬಸ್ಸು ಲೈನಿಗೆ ಪರ್ಮಿಟ್ ಸಿಕ್ಕೂ ಹಾಗೆ ಮಾಡಿ ದೀನಿ. ನಡಸಲಿ. ನಮ್ಮ ಹುಡುಗ ಮುಂದೆ ಬರಲಿ.'

ಸತ್ಯ ಮಾತನ್ನೇ ಆಡದೆ ಸುಮ್ಮನೆ ಅಡಿಗೆಮನೆಯ ಕೆಲಸ ಮಾಡುತ್ತಿದ್ದಳು.

ಮಂತ್ರಿಗಳಿಗೆ ಕಸಿವಿಸಿ ಎನಿಸುತ್ತಿತ್ತು. ಉಂಟು, ಇಲ್ಲ, ಹೂಂ, ಉಹೂಂ, ಮೊದಲಾಗಿ ಏನಾದರೂ ಪ್ರತಿಕ್ರಿಯೆ ವ್ಯಕ್ತಪಡಿಸದೆ ಸುಮ್ಮನಿರುವ ಈ ಹುಡುಗಿಯ ಕೈಲಿ ಹೇಗೆ ಮಾತನಾಡುವುದು, ಅವಳ ಇರಾದೆಯನ್ನು ಹೇಗೆ ತಿಳಿಯುವುದು, ಎಂಬುದು ಗೊತ್ತಾಗದೆ ಮಾತಿಗೆ ಒಳಗೇ ಚಡಪಡಿಸುತ್ತಿದ್ದ ಅವರು ಹೇಳಿದರು: 'ನಿಂಗೇ ಗೊತ್ತಲ್ಲ. ವೆಂಕಟರಮಣಯ್ಯ, ನಾನು, ಯಾವತ್ತೂ ಒಬ್ಬರನ್ನೊಬ್ಬರು ಬಹುವಚನದಲ್ಲಿ ಮಾತ್ನಾಡಿಸಿದೋರಲ್ಲ. ಬಾಲ್ಯ ಸ್ನೇಹಿತರು. ವೇದವಿದ್ಯೇಲಿ ಅವನ ಜ್ಞಾನದ ಮುಂದೆ ಯಾರಿದ್ರು? ಅವನು ಸತ್ತದ್ದು ಅನ್ಯಾಯ. ಅಲ್ಪನಿಗೆ ಅಧಿಕಾರ ಬಂದ್ರೆ ಅರ್ಧರಾತ್ರೀಲಿ ಕೊಡೆ ಹಿಡಿದ ಅಂತ. ಮೋಹನದಾಸ ನಾಲ್ಕಕ್ಷರ ಕಲಿತ ಅಂತ ಅವನನ್ನ ಅವಮಾನ ಮಾಡಿದ. ಅವನಿಗೆ ಶಿಕ್ಷೆಯಾಗಬೇಕಾಗಿತ್ತು. ಆದರೆ ಏನೋ ಕ್ಷಮಿಸೂದು ದೊಡ್ಡತನ ಅಂತ ನಾನು ಪೋಲೀಸ್ ಇನ್‌ಸ್ಪೆಕ್ಟರಿಗೆ ಫೋನ್ ಮಾಡಿದೆ. ಶಿಕ್ಷೆ ಮಾಡೂದು ಬ್ಯಾಡ ಅಂತ ನೀನೂ ಹೇಳಿಕೆ ಕೊಟ್ಟೆಯಂತೆ; ಅವರವರ ಪಾಪ ಪುಣ್ಯ ಅವರವರದ್ದು.'

ಸತ್ಯ ಹಿಟ್ಟು ಹುಯ್ದು ಕೋಲು ಊರಿದಳು. ಅನಂತರ ಪಾತ್ರೆಗಳನ್ನು ತೆಗೆದುಕೊಂಡು ಹೊರಗೆ ಹೋಗಿ ಕೊಳದಿಂದ ಬಕೇಟಿನಲ್ಲಿ ನೀರು ತುಂಬಿ ತಂದು, ತೆಂಗಿನ ಮರದ ಕೆಳಗೆ ಹಾಕಿದ್ದ ಚಪ್ಪಡಿಯ ಮೇಲೆ ಕೂತು ಪಾತ್ರೆಗಳನ್ನು ತೊಳೆದಳು. ಅನಂತರ ಒಳಗೆ ಬಂದು ಅಡಿಗೆಮನೆಯ ಕಸ ಗುಡಿಸಿದಳು. ಮತ್ತೆ ಮಾತನಾಡಲು ತಿಳಿಯದೆ ಮಂತ್ರಿಗಳು ಸುಮ್ಮನೆ ಕುಳಿತಿದ್ದರು. ಹಿಟ್ಟು ಬೆಂದ ನಂತರ ತೊಳಸಿ ಮುದ್ದೆ ಕಟ್ಟಿ ಒಂದು ಅಲ್ಯೂಮಿನಿಯಂ ತಟ್ಟೆಯನ್ನು ತಂದು ಅವರ ಮುಂದಿಟ್ಟು ನೀರು ತುಂಬಿ ಒಂದು ತಂಬಿಗೆ ಮತ್ತು ಲೋಟಗಳನ್ನು ಪಕ್ಕದಲ್ಲಿಟ್ಟಳು.

'ನಾನೊಬ್ಬನೇ ಹ್ಯಾಗಮ್ಮ ಊಟ ಮಾಡಲಿ?' – ಅವರು ಕೇಳಿದರು.

'ನೀವು ಮಾಡಿ. ನಾನು ಆಮ್ಯಾಲೆ ಮಾಡ್ತೀನಿ.'

'ಹಾ ಹಾ ಹಾ. ಆದರ್ಶ ವಿದ್ಯಾವಂತ ಹೆಣ್ಣುಮಕ್ಕಳಿಗೆ ಶೋಭಿಸೂ ಮಾತು. ನಮ್ಮ ಹಳ್ಳೀ ಕಡೆ ಹೆಣ್ಣುಮಕ್ಕಳಿಗೆ ಈ ನಡಾವಳಿಕೆ ಗೊತ್ತೇ ಹೊರತು ಸಿಟಿಯೋವುಕ್ಕೆ ಎಲ್ಲಿ ಬರಬೇಕು? ನಂಗೊಂದು ಚಮ್‌ಚ ಕೊಟ್ರೆ ಸಾಕು.'

'ಚಮ್‌ಚದಾಗೆ ಮುದ್ದೆ ಹ್ಯಂಗೆ ಮುರೀತೀರಿ?'

'ಓಹೋ! ರಾಗಿಹಿಟ್ಟು ಮಾಡಿದೀಯೋ? ನಂಗೆ ಪರಮ ಪ್ರೀತಿ. ಅದ ಬಿಟ್ಟು ಸಿಟೀ ಜನ ಕೆಟ್ಟಿದಾರೆ' – ಎಂದು ಅವರು ಕೈ ತೊಳೆದು ಬರಲು ಹೊರಗೆ ಹೋದರು. ಎದುರಿಗೆ ಕಾಣುವ ಒಲೆಯ ಮೇಲೆ ಇದುವರೆಗೂ ಕೊತ ಕೊತ ಕುದಿದು ಬೇಯುತ್ತಿದ್ದ ಹಿಟ್ಟಿನ ಡಬರಿಯನ್ನು ಅವರು ನೋಡುತ್ತಲೇ ಕೂತಿದ್ದುದು ಅವಳ ನೆನಪಿಗೆ ಬಂತು. ಅವರು ಹೆಚ್ಚು ಊಟ ಮಾಡಲಿಲ್ಲ. ಎರಡೇ ಎರಡು

ಗುಳಿಗೆ ಮುದ್ದೆ, ಒಂದು ಸೌಟು ಎಸರು, ಮೇಲೆ ಒಂದು ಹಿಡಿ ಅನ್ನ, ಸ್ವಲ್ಪ ತುಪ್ಪ, ಆಮೇಲೆ ಮೊಸರು ಹಾಕಿಸಿಕೊಂಡರು. ಅವರು ತಿನ್ನುವುದೇ ಅಷ್ಟೆಯೋ ಅಥವಾ ಹಳ್ಳಿಯ ರೈತರ ಶೈಲಿಯ ಈ ಅಡುಗೆ ಅವರಿಗೆ ಪ್ರಿಯವಾಗಲಿಲ್ಲವೋ ಅವಳಿಗೆ ತಿಳಿಯಲಿಲ್ಲ. ಅವರು ಎದ್ದು ಕೈ ತೊಳೆದ ಮೇಲೆ, ಅವರು ಉಂಡ ತಟ್ಟೆಯನ್ನು ಎತ್ತಿ ತೊಳೆದು, ಜ್ಞಾಪಿಸಿಕೊಂಡವಳಂತೆ ಹೇಳಿದಳು: 'ಅಲ್ಲಿ ಡ್ರೈವರ್ ಇಷ್ಟು ಹೊತ್ತು ಕಾಯ್ತಿದಾನೆ ಅಂತ ಕಾಣುತ್ತೆ. ಅವನನ್ನ ಬಿಟ್ಟೇ ನಿಮಗೆ ಬಡಿಸಿಬಿಟ್ಟೆ. ಕರ್ಕಂಡ್ ಬರ್ತೀರಾ ಬಡುಸ್ತೀನಿ.'

'ಓ, ಡೋಂಟ್ ವರಿ. ಅವನು ಗೌರ್ನಮೆಂಟಿನಿಂದ ಡಿ.ಎ. ತಗೋತಾನೆ. ಅಂದ್ರೆ ಆಫ್‌ಕೋರ್ಸ್ ಮನೇಲಿ ಊಟ ಹಾಕ್ತೀವಿ. ಮನೇಲಿ ಮಾಡ್ತಾನೆ.'

'ಆದರೆ ಅವನನ್ನ ಅಲ್ಲಿ ಉಪವಾಸ ಕೂರಿಸಿ ನಾನು ಹ್ಯಾಗೆ ಊಟ ಮಾಡ್ಲಿ?'

'ಹಾಗಾದರೆ ಮನೆಗೆ ಹೋಗಿ ಊಟ ಮಾಡು ಅಂತ ಹೇಳಿಬಿಡಲೇನು?'

'ಹೇಳಿ. ಅವನು ಹೋಗದೆ ತೋಟದ ಬಾಗಿಲಲ್ಲಿ ಉಪವಾಸ ಇರುವಾಗ ನಂಗೆ ಊಟ ಸೇರುಲ್ಲ.'

ಇನ್ನು ಡ್ರೈವರ್ ಮನೆಗೆ ಕಾರು ತೆಗೆದುಕೊಂಡೇ ಹೋಗುತ್ತಾನೆ. ತಮ್ಮನ್ನು ಕರೆದುಕೊಂಡು ಮತ್ತೆ ಈ ಮುಳ್ಳುದಾರಿಯಲ್ಲಿ ಬಂದು ಹೋಗುವುದು ಟೈರು ಟ್ಯೂಬುಗಳಿಗೆ ಅಪಾಯ. ಅಲ್ಲದೆ ಅವನು ಹೋಗಿ ಬರುವತನಕ ತಾವು ಇಲ್ಲಿ ಏನು ಮಾಡುವುದು? ತಾವು ಇಷ್ಟು ಮಾತಾಡಿದರೂ ಅವಳು ಒಂದು ಉತ್ತರವನ್ನೂ ಕೊಡುತ್ತಿಲ್ಲ. ಸುಮ್ಮನೆ ಕೂತಿರಲು ಅವರಿಗೇ ಸಂಕೋಚವೆನಿಸಲು ಶುರುವಾಗಿತ್ತು. ಆದುದರಿಂದ ಪರಿಸಮಾಪ್ತಿಯ ಮಾತನ್ನು ಆಡಲೇಬೇಕೆಂದು ನಿರ್ಧರಿಸಿ ಎಂದರು: 'ನಂಗೂ ಅರ್ಜೆಂಟ್ ಕೆಲಸವಿದೆ. ಮಿನಿಸ್ಟ್ರಿ ಮೀಟಿಂಗ್. ಸ್ಟೇಟ್ ಆಫೀಸರ್ಸ್‌ಗೆ ಆರ್ಡರ್ ಕೊಡಬೇಕು. ನಾನು ಹೋಗ್ತೀನಿ. ಇನ್ನೇನು ಬಾಯಿಬಿಟ್ಟು ಹೇಳಬೇಕಾದ್ದೇನೂ ಇಲ್ಲ. ಈಗ ಚೈತ್ರ ಕಳೀತಾ ಬಂತಲ್ಲ. ವೈಶಾಖದಲ್ಲಿ ಒಳ್ಳೇ ಲಗ್ನ ಇದೆಯಂತೆ. ಆಯ್ತೆ? ನೀನು ಬರೀ ಸೊಸೆ ಅಂತ ಬಂದ್ರೆ ಆಗೂದಿಲ್ಲ. ಬೆಂಗಳೂರಲ್ಲಿ ಶಾನೆ ಕೆಲಸ ಇವೆ. ಮಹಿಳೆಯರನ್ನ ಮುಂದಕ್ಕೆ ತರಬೇಕು. ಆಯ್ತೆ? ಅದೆಲ್ಲ ಆಮೇಲೆ ಹೇಳ್ತೀನಿ. ಲಗ್ನ ಊರಲ್ಲಿಟ್ಕೊಳಾನೋ ಬೆಂಗಳೂರಾಗಿಟ್ಕೊಳಾನೋ ಈಗಲೇ ಹೇಳಿಬಿಡು. ಮದುವೆಗೆ ಬರುಕ್ಕೆ ಗೌರ್ನರಿಗೆ ಈಗಲೇ ಹೇಳಬೇಕು.' –

ಸತ್ಯ ಅಡಿಗೆಯ ಮನೆಯ ಬಾಗಿಲಿನ ಹತ್ತಿರಕ್ಕೆ ಹೋದಳು. ಅಲ್ಲಿ ಒಂದು ಗೂಟಕ್ಕೆ ತಗಲುಹಾಕಿದ್ದ ಐದೆಳೆಯ ಚಿನ್ನದ ಚೈನುಸರವನ್ನು ತೆಗೆದು ಅವರ ಮುಂದೆ ಹಿಡಿದು, 'ನಿಮ್ಮ ಹೆಂಡತಿ ಬೆಳಗ್ಗೆ ಬಂದಿದ್ದಾಗ ಮರೆತುಹೋದರು. ಇದ

ಅವರಿಗೆ ಕೊಡಿ' ಎಂದಳು.

ಮಂತ್ರಿಗಳಿಗೆ ಪೆಚ್ಚೆನಿಸಿತು. ಒಂದು ಕ್ಷಣ ಕಿವಿಗೆ ಗಾಳಿ ತುಂಬಿಕೊಂಡಂತೆ ಆಗಿ ಏನೂ ಕೇಳದಂತೆ ಆಯಿತು. ಆದರೆ ಮರುಕ್ಷಣವೇ ಎಂದರು: 'ಅವಳಿಗೆ ತಿಳಿವಳಿಕೆ ಇಲ್ಲ ನೋಡು. ಹಿಂದಿನ ಕಾಲದೋಳು. ಆದರೆ ಮನಸ್ಸು ಒಳ್ಳೇದು. ಸೊಸೆಯ ಕೊರಳಿಗೆ ಚಿನ್ನದ ಸರ ಹಾಕುವಾಗ ಅದಕ್ಕೆ ಯಜಮಾನಿಕೆಯ ಬೀಗದ ಕೈನೂ ಪೋಣಿಸಿರಬೇಕು ಅನ್ನೂದ ಮರೆತುಬಿಟ್ಟಿದಾಳೆ. ಅಥವಾ ಧಾರೇ ದಿನ, ಬೀಗದ ಕೈ ಇರೂ ಇನ್ನೊಂದು ಸರ ಹಾಕಬೇಕು ಅಂತ ಇಟ್ಕಂದಾಳೋ. ಹಾ ಹಾ ಹಾ ಹಾ ಹ್ಹ ಹ್ಹ ಹ್ಹ....'

'ಇಲ್ಲ. ಇದನ್ನ ಅವರಿಗೆ ತಲುಪಿಸಿಬಿಡಿ' – ಇದುವರೆಗೂ ಆಡಿದ ಯಾವ ಮಾತೂ ತನಗೆ ಸಂಬಂಧಿಸಿದುದೇ ಅಲ್ಲವೆಂಬಂತೆ ಸತ್ಯ ತೂಕವಾದ ಆ ಸರವನ್ನು ಮುಂದೆ ನೀಡಿದಳು.

ಆದರೆ ಮಂತ್ರಿಗಳು ಹಿಂದೆ ಸರಿದು ಬಾಗಿಲಿನಿಂದ ಹೊರಗೆ ಬಂದುಬಿಟ್ಟರು. 'ನೋಡಮ್ಮ, ನಾನು ಬಾಯಿಬಿಟ್ಟು ಹೇಳ್ತೀನಿ. ನಿಂಗೆ ಸಿಟ್ಟು ಬರೂದು ನ್ಯಾಯವೇ. ಆದರೆ ತಪ್ಪು ನನ್ನಿಂದ ಆಗಿಲ್ಲ. ಆಗಲೇ ಹೇಳಿದೆನಲ್ಲ. ನಿಮ್ಮತ್ತೆ ಹಿಂದಿನ ಕಾಲದೋಳು. ಮೂಢನಂಬಿಕೆ. ಆಗ ಹಟ ಮಾಡಿದಳು. ನಿಂಗೂ ಬೇಜಾರಾಯ್ತು, ನಂಗೂ ಬೇಜಾರಾಯ್ತು. ಶ್ರೀನಿವಾಸಂಗಂತೂ ಕೇಳೂ ಹಾಗೇ ಇಲ್ಲ. ಬೆಳಗ್ಗೆ ಅವಳೇ ಬಂದಿದ್ಲಲ. ಈಗ ನಾನು ಬಂದು ನಿಜವಿಷಯ ಹೇಳಿದೀನಿ. ಶ್ರೀನಿವಾಸುನ್ನೇ ಇಲ್ಲಿಗೆ ಕಳುಸ್ತೀನಿ. ನಿನ್ನ ತಾಯಿಗೆ ನೀನು ಸರಿಯಾಗಿ ಯಾಕೆ ಬುದ್ಧಿ ಹೇಳ್ಲಿಲ್ಲ ಅಂತ ತರಾಟೆಗೆ ತಗಂಡು ಬುದ್ಧಿ ಕಲಿಸು. ಚಿಕ್ಕ ವಯಸ್ಸಿನಿಂದ ಜೊತೇಲಿ ಬೆಳೆದೋರು. ಮುಂದೆ ಗಂಡಹೆಂಡಿರಾಗಿ ಬಾಳಬೇಕಾದೋರು. ಅವನಿಗೆ ನೀನಲ್ಲದೆ ಇನ್ಯಾರು ಬುದ್ಧಿ ಹೇಳಬೇಕು?' – ಇಷ್ಟು ಹೇಳುತ್ತಲೇ ಅವರು ಕಾಲಿಗೆ ಪಂಪು ಶೂ ಮೆಟ್ಟಿಕೊಳ್ಳುತ್ತಿದ್ದರು. ಮತ್ತೆ ಹಿಂತಿರುಗಿ ನೋಡದೆ ಬೇಗ ಬೇಗ ಹೊರಟುಹೋದರು. ಸರ ಅವಳ ಕೈಲೇ ಉಳಿಯಿತು. ಅದನ್ನು ಕೊಳ್ಳಿ ಎಂದು ಅವರ ಹಿಂದೆ ಓಡಿಹೋಗಲು ಸಂಕೋಚವಾಗಿ ಅವಳು ಒಳಗೇ ನಿಂತಳು.

# ಹದಿನಾಲ್ಕು

## ೧

ಬೆಂಗಳೂರನ್ನು ಬಿಟ್ಟು ಸತ್ಯ ಊರಿನಲ್ಲೇ ಉಳಿದಳೆಂಬುದನ್ನು ತಿಳಿದಾಗ ಶ್ರೀನಿವಾಸನಿಗೆ ಹೆಚ್ಚು ಆಶ್ಚರ್ಯವೆನಿಸಲಿಲ್ಲ. ಆದರೆ ಊರಿನಲ್ಲಿ ತೋಟದಲ್ಲಿ ಒಬ್ಬಳೇ ವಾಸಿಸುತ್ತಾಳೆ, ಕೂಲಿಯವಳಂತೆ ದುಡಿಯುತ್ತಾಳೆ, ಅವಳ ತಂದೆ ಅರ್ಧ ಆಸ್ತಿ ಮತ್ತು ಹದಿನೈದು ಸಾವಿರ ರೂಪಾಯಿಯನ್ನು ಅವಳಿಗೆ ಬರೆದಿದ್ದಾರೆ, ಆದರೂ ಅವಳು ಮುಖ ಮೈಗಳನ್ನು ಧೂಳು ಮಾಡಿಕೊಂಡು ಮಣ್ಣಿನಲ್ಲಿ ಕೆಲಸಮಾಡುತ್ತಾಳೆ, ಎಂಬುದನ್ನು ತಿಳಿದಾಗ ಅವನಿಗೆ ಕಸಿವಿಸಿಯಾಯಿತು. ಜೀವನದಲ್ಲಿ ಆಗಿರುವ ನಿರಾಶೆಗೆ ಹೀಗೆ ಮಾಡುತ್ತಿದ್ದಾಳೆ. ವಿಷಯ ತನಗೆ ತಿಳಿದು ತಾನು ದುಃಖಪಡಲಿ ಎಂದು ಉದ್ದೇಶಪೂರ್ವಕವಾಗಿ ತನ್ನನ್ನು ತಾನು ಈ ದಂಡನೆಗೆ ಗುರಿಮಾಡಿಕೊಂಡಿದ್ದಾಳೆ, ಎಂದು ಅವನು ಯೋಚಿಸಿದ. ಹೆಂಡತಿ ಸತ್ತ ನಂತರ ಹೋಗಿ ಅವಳನ್ನು ನೋಡುವ ಯೋಚನೆ ಹಲವು ಸಲ ಬಂತು. ಆದರೆ ಪ್ರಯತ್ನಿಸಿದರೂ ಊರುಕಡೆ ಹೋಗಲು ಮನಸ್ಸಿನಲ್ಲಿ ಏನೋ ಬಲವಾಗಿ ತಡೆಯುತ್ತಿತ್ತು.

ಯಾಕೆ ಹೀಗಾಗುತ್ತಿದೆ, ಎಂದು ತನ್ನಲ್ಲಿ ತಾನೇ ಯೋಚಿಸಿಕೊಂಡ. ತಿಳಿಯುತ್ತಿರಲಿಲ್ಲ. ತಾನು ನೋಡುತ್ತಿದ್ದ ಸಿನಿಮಾಗಳ ಹಿನ್ನೆಲೆಯಿಂದ ಆಲೋಚನೆಗೆ ನೆರವು ಪಡೆಯುತ್ತಿದ್ದ. ತಾನು ಅವಳನ್ನು ಪ್ರೀತಿಸುತ್ತಿರುವುದು ನಿಜ. ಈಗ ಹೆಂಡತಿ ಸತ್ತು ತಾನು ಸ್ವತಂತ್ರನಾಗಿರುವುದೂ ನಿಜ. ಆದರೆ ಹೋಗಿ ಅವಳನ್ನು ನೋಡಲು ಏಕೆ ಸಾಧ್ಯವಾಗುತ್ತಿಲ್ಲ? ಒಂದು ದಿನ ಊರಿಗೆ ಎರಡು ಮೈಲಿ ಹತ್ತಿರದ ತನಕ ಕಾರು ನಡೆಸಿಕೊಂಡು ಬಂದವನು ಹಿಂತಿರುಗಿ ತುಮಕೂರಿಗೆ ಹೊರಟುಹೋದ. ತನ್ನ ಮನೆಯಲ್ಲಿ ತಾನು ಇದ್ದು ಬರಬಹುದಿತ್ತು. ಅದೂ ಮಾಡಲಿಲ್ಲ. ಒಂದು ದಿನ ಹೊಳೆಯಿತು: ಅವಳನ್ನು ಕಂಡರೆ ತನಗೆ ಹೆದರಿಕೆ ಹುಟ್ಟಿದೆ. ಈ ಆಲೋಚನೆಯಿಂದ ತನ್ನ ಮೇಲೆ ತನಗೇ ಅಸಹ್ಯವೆನಿಸಿತು. ಸತ್ಯಳ ಬಗೆಗೆ ಸಿಟ್ಟು ಬಂತು. ದ್ವೇಷ ಹುಟ್ಟಿತು. ಆದರೆ ಆ ಸಿಟ್ಟು ದ್ವೇಷಗಳು ಸ್ಥಾಯೀಮನೋಭಾವವಾಗಿ ನಿಲ್ಲಲಾರದೆ ಕರಗಿಹೋದುವು. ಒಂದು ಲೋಟ ಬೀರ್ ಕುಡಿಯುವುದರಲ್ಲಿ ಅವಳ ಮೇಲೆ ಮೊದಲಿನ ಪ್ರೀತಿಯೇ ಹುಟ್ಟಿಬಿಡುತ್ತಿತ್ತು.

ಒಂದು ದಿನ ಇನ್ನೊಬ್ಬ ಹುಡುಗಿಯ ಜೊತೆಯಲ್ಲಿ ಅವಳನ್ನು ತುಮಕೂರಿನ ತನ್ನ ಆಫೀಸಿನ ಮುಂದೆ ನೋಡಿದಾಗ ಅವನು ಸಂಭ್ರಮದಿಂದ ಪುಳಕಿತನಾಗಿ ಬಿಟ್ಟ. ಮೈ ಬೆವೆತುಹೋಯಿತು. ಭಯವೂ ಬಂತು. ಹಿಂದಿನಿಂದ ಹೋಗಿ 'ಸತ್ಯ, ನಿಂತುಕೊ' ಎಂದು ಕೂಗುವ ಮನಸ್ಸು ಬಂತು. ಆದರೆ ಅವಳು ನಿಲ್ಲ ದಿದ್ದರೆ? – ಅಥವಾ ಮುಖವನ್ನು ಗಡಸುಮಾಡಿಕೊಂಡು ಹಿಂತಿರುಗಿ ದುರುಗುಟ್ಟಿ ನೋಡಿದರೆ? – ಎಂಬ ಭಯವಾಯಿತು. ತನ್ನನ್ನು ಕಂಡರೂ ನೋಡದವಳಂತೆ ಹೋದಳಲ್ಲ ಎಂದು ತಿರಸ್ಕಾರ ದ್ವೇಷಗಳು ಉಂಟಾದುವು. ಆ ದಿನ ಬೀರ್ ಕುಡಿದ ನಂತರವೂ ಆ ಭಾವವು ಇಳಿಯಲಿಲ್ಲ.

ಅವಳೇ ಆದರೆ ತಾನು ಮತ್ತೆ ಮದುವೆಯಾಗುವುದಾಗಿ ತಂದೆಯ ಕೈಲಿ ಹೇಳಿದ ಮರುದಿನ, ಊರಿನಿಂದ ಅವನ ಚಿಗಪ್ಪ ಕಾಳೇಗೌಡರು ಬಂದರು. ಸ್ವಂತ ಮಕ್ಕಳಿಲ್ಲದ್ದರಿಂದ ಇವನನ್ನೇ ಮಗನೆಂದು ಭಾವಿಸುತ್ತಿದ್ದ ಅವರಿಗೂ ಇವನಿಗೂ ಅನ್ಯೋನ್ಯವಿತ್ತು. ಅವರು ಹೇಳಿದರು: ಗುಡಿಯ ಹತ್ತಿರ ಊರಿನವರ ಸಭೆ ಸೇರಿತ್ತಂತೆ. ತುಂಬಿದ ಸಭೆಯಲ್ಲಿ ಬಂದು ಅವಳು, 'ಎಲ್ಲರೂ ಬ್ರಾಹ್ಮಣರು, ಶೂದ್ರರೆಂಬುವವರು ಯಾರೂ ಇಲ್ಲ' ಎಂದಳಂತೆ. ತನ್ನ ತಂದೆಯೇ ತನಗೆ ಬ್ರಹ್ಮೋಪದೇಶ ಮಾಡಿ ಜನಿವಾರ ಹಾಕಿದ್ದಾರೆಂದು ತೋರಿಸಿದಳಂತೆ. ಅಪ್ಪ ನಿಗೆ ಹಿಡಿದಿದ್ದ ಹಂಗೆ ಆ ಯಮ್ಮನಿಗೂ ಹುಚ್ಚು ಹಿಡಿದೈತೆ – ಎಂದು ಚಿಗಪ್ಪ ಹೇಳಿದಾಗ ಶ್ರೀನಿವಾಸನ ಮನಸ್ಸು ಮುದುಡಿ ಹೋಯಿತು. ಹುಚ್ಚು ಹಿಡಿದು ಸತ್ತ ಅಪ್ಪ ವಾಸಿಸುತ್ತಿದ್ದ ತೋಟದಲ್ಲಿ ಇವಳು ಒಬ್ಬಳೇ ಯಾಕಿದ್ದಾಳೆ, ಹುಚ್ಚು ಹಿಡಿಯದೆ ಇನ್ನೇನಾಗುತ್ತೆ, ಊರೊಳಗಿರಬಾರದೆ, ಎಂದುಕೊಂಡ. ಆದರೆ ಹುಚ್ಚಿನಲ್ಲಿ ಹೇಳಿದ್ದ ಅವಳ ಮಾತಿನಲ್ಲಿ ಒಂದು ಹೊಸ ತಿರುವು ಅವನಿಗೆ ಕಾಣು ತ್ತಿತ್ತು. ಜೊತೆಯಲ್ಲಿ ಓದುತ್ತಿದ್ದಾಗ, ಜಾತಿಗಳ ವ್ಯತ್ಯಾಸವೇ ಸುಳ್ಳು ಎಂದು ಇಬ್ಬರೂ ಮಾತನಾಡಿಕೊಳ್ಳುತ್ತಿದ್ದರು. ಎಲ್ಲರೂ ಒಂದೇ ಎಂಬ ಮಟ್ಟಿಗೆ ಅವರ ವಿಚಾರ ನಿಲ್ಲುತ್ತಿತ್ತು. ಎಲ್ಲ ಒಂದೇ ಆದರೆ ಒಂದು ಧರ್ಮ ಅಥವಾ ಆಚಾರ ಯಾವುದು, ಎಂಬ ಬಗೆಗೆ ಅವನು ಯಾವತ್ತೂ ಯೋಚಿಸಿರಲಿಲ್ಲ. ಅವಳೂ ಆಡಿರ ಲಿಲ್ಲ. ಆ ಪ್ರಶ್ನೆಯೇ ಎದ್ದಿರಲಿಲ್ಲ. ಈಗ ಅವಳು, 'ಎಲ್ಲರೂ ಬ್ರಾಹ್ಮಣರೇ' ಎನ್ನುತ್ತಿದ್ದಾಳೆ. ಅಂದರೆ ಏನು? ಅವನ ವಿಚಾರ ಮುಂದೆ ಓಡಲಿಲ್ಲ. ತಾನೇ ಸ್ವತಃ ಜನಿವಾರ ಹಾಕ್ತೀನಿ, ಹಾಕುವ ಅಧಿಕಾರ ತನಗಿದೆ ಅಂದಳಂತಲ್ಲ. ಅಂದರೆ ಅವಳೇನು ಗುರುಪಟ್ಟಕ್ಕೆ ಏರಿದಳೆ? ಚಿಗಪ್ಪ ಅನ್ನುವ ಹಾಗೆ ಅವರ ಅಪ್ಪನ ದೆವ್ವ ಗಿವ್ವ ಹಿಡಿದಿದೆಯೇ? ದೆವ್ವ ಅನ್ನುವುದು ನಿಜವೆ? ಈ ಹಲವಾರು ಪ್ರಶ್ನೆಗಳು ತಲೆಯನ್ನು ಮುತ್ತಿದುವು. ಅವುಗಳಿಂದ ಬಿಡಿಸಿಕೊಳ್ಳಲು ಬೀರ್ ಶೀಶೆ ತೆಗೆದ.

'ತಮ್ಮಯ್ಯ, ಇದೆಲ್ಲಿ ಕಲ್ತೆ ಹಾಳಾದ ಸೂಳೆಮಗಂದ?' – ಚಿಗಪ್ಪ ಬುದ್ಧಿ ಹೇಳಿದ.

'ಬೀರ್‌ನಿಂದ ಏನೂ ಆಗಾಕಿಲ್ಲ. ನೀನೊಂದಿಷ್ಟು ತಗಂಡು ನೋಡು ಬೇಕಾದ್ರೆ' – ಮಗ ಬಲವಂತ ಮಾಡಿದ.

ಚಿಗಪ್ಪನಿಗೆ ಕುಡಿಯುವಾಗ ಕಹಿ ಕಹಿ ವಗಚೆನಿಸಿದರೂ, ಗಬ್ಬುವಾಸನೆ ಬಡಿದರೂ, ಕುಡಿದ ಮೇಲೆ, ತೀರ ಕೆಟ್ಟದ್ದಲ್ಲವೆನಿಸಿತು.

ಸುಮಾರು ಇಪ್ಪತ್ತು ದಿನ ಕಳೆದಿತ್ತು. ಒಂದು ದಿನ ಬೆಳಗ್ಗೆ ಹತ್ತು ಗಂಟೆಗ ಹೊತ್ತಿನಲ್ಲಿ ತನ್ನ ಅಪ್ಪ ಅಮ್ಮ ಇಬ್ಬರೂ ಬಂದರು. ಅಪ್ಪ ಎಂದರು: 'ಅವಳು ಒಪ್ಕಂಡಿದಾಳೆ. ನೀನು ಹೋಗಿ ಮುಂದಿನ ಮಾತಾಡಪ್ಪ.'

ಅವನಿಗೆ ತಕ್ಷಣ ನಂಬುವುದಕ್ಕೇ ಆಗಲಿಲ್ಲ: 'ಅವಳಿಗೆ ಹುಚ್ಚು ಹಿಡಿದಿಲ್ವಾ ಅವರ ತಂದೆಗೆ ಆಗಿದ್ದ ಹಂಗೆ?'

'ಯಾರೋ ನಿಂಗೆ ಹೇಳ್ದೋರು?'

'ಕಾಳ ಚಿಗಪ್ಪ.'

'ಸುಳ್ಳು ಸುಳ್ಳು. ನಾನು ಹೋಗಿ ಮಾತಾಡ್ಕಂಡು ಊಟ ಮಾಡ್ಕಂಡು ಬಂದಿದೀನಿ.'

ಅವಳು ಒಪ್ಪಿಕೊಂಡಿರುವಾಗ ತಾನು ಹೋಗಿ ಮಾತನಾಡುವುದೇನಿದೆ, ಎಂದು ಯೋಚಿಸಿದ ಶ್ರೀನಿವಾಸ ಎಂದ: 'ನಾನು ಹೋಗಾದೇನೂ ಬ್ಯಾಡ. ನೀವು ಮದುವೆ ಗೊತ್ತುಮಾಡಿ.'

'ನೀನು ಹೋಗಿ ಗೊತ್ತಾಗೂ ತಂಕ ಮದುವೆ ಗೊತ್ತಾಗುಲ್ಲ.'

'ಒಪ್ಕಂಡಿದಾಳೆ ಅಂತೀರಿ?'

'ಒಂದ್ ಸಲ ಬಿಟ್ಟು ಬ್ಯಾರೆ ಮದುವೆಯಾಗಿ, ಈಗ ಮತ್ತೆ ಕೇಳಾಕ್ ಹ್ವಾದ್‌ರೆ ಅವಳಿಗೂ ಬೇಜಾರಾಗಿರುಲ್ವ? ನೀನು ಹೋಗೂತು ಒಂದಿಷ್ಟ ಬೈಯ್ತಾಳೆ ಅಂತ ಕಾಣ್ಸುತ್ತೆ. ಸಮಾದಾನ ಕೇಳು. ಅದು ನಿಮ್ಮ ನಿಮ್ಮ ಗಂಡ ಹೆಂಡಿರ ಪ್ರೀತಿ ಜಗಳ.'

ಅವರೆ ಧಾರೆಯಾಗಿ ಅವಳು ತನ್ನ ಹೆಂಡತಿಯಾಗುವತನಕ, ಹೋಗಿ ಅವಳೊಡನೆ ಮಾತನಾಡಲು ಶ್ರೀನಿವಾಸನಿಗೆ ಅಂಜಿಕೆ ಕಡಿಮೆಯಾಗಲಿಲ್ಲ. ಅವನ ತಂದೆ ತಾಯಿ ಬೆಂಗಳೂರಿಗೆ ಹೋದರು. ಅವನು ಮೂರು ದಿನ ತೊಳಲಿದ. ಅವಳು ಮದುವೆಗೆ ಒಪ್ಪಿದ್ದಾಳೆ ಎಂಬ ತಂದೆಯ ಮಾತು ಅವನಲ್ಲಿ ಉತ್ಸಾಹವನ್ನೂ ಆಶಾಭಾವನೆಯನ್ನೂ ಹುಟ್ಟಿಸಿತ್ತು. ಅಂತೂ ತಾನು ಹೋಗಿ ಅವಳನ್ನು ಕಾಣಬೇಕು. ಬೈದರೆ ಬೈಸಿಕೊಳ್ಳಬೇಕು, ತಪ್ಪು ತನ್ನಿಂದಲೇ ಆಗಿದೆ –

ಎಂದುಕೊಂಡ. ದೇವರ ಮುಂದೆ ನಿಂತು ಮಂಗಳಾರತಿ ಮಾಡಿಸುವಾಗ ಅನಿಸಿ
ದ್ದಂತೆ ತಾನು ನಡೆದೆ. ತನ್ನದು ಪೂರ್ತಿ ತಪ್ಪು ಹೇಗಾಯಿತು? – ಎಂಬ ಸಮ
ರ್ಥನಾಭೀಪ್ಸೆಯೂ ಹುಟ್ಟಿತು. ಹಾಗಾದರೆ ಅವಳನ್ನು ಈಗ ಮಾಡಿಕೊಳ್ಳುವುದೂ
ತಪ್ಪಲ್ಲವೇ ಎಂಬ ಅನುಮಾನ ಬಂತು. ಇದು ತಪ್ಪಲ್ಲವೆಂದು ಈಗ ಅಂತ-
ರಂಗವು ಖಂಡಿತವಾಗಿ ಹೇಳುತ್ತಿದೆ. ಬುದ್ಧಿ ಮಾತ್ರ ಅನುಮಾನವನ್ನು ಅಡ್ಡ
ನಿಲ್ಲಿಸುತ್ತಿದೆ. 'ನನಗೆ ಆಗ ಹೀಗಾಯಿತು. ತಿಳಿಯಲಿಲ್ಲ. ನಿನ್ನಲ್ಲಿ ಮುಚ್ಚು
ಮಾಡಲಿಲ್ಲ, ಈಗ ನೀನೇ ತಿಳಿವಳಿಕೆ ಹೇಳು' – ಎಂದು ಎಲ್ಲವನ್ನೂ ಅವಳ
ಮೇಲೆಯೇ ಹಾಕಬೇಕು. ಅವಳು ಹೇಳಿದಂತೆಯೇ ಕೇಳಬೇಕು. ಬುದ್ಧಿಯಲ್ಲಿ,
ಧೈರ್ಯದಲ್ಲಿ, ಹಿಡಿದದ್ದನ್ನು ಬಿಡದೆ ಮಾಡುವ ತಾಳ್ಮೆ ಮತ್ತು ಸಾಹಸದಲ್ಲಿ
ಅವಳು ನನಗಿಂತ ಮೇಲಿನವಳು. ಅವಳಿಗೆ ಎಲ್ಲವನ್ನೂ ಒಪ್ಪಿಸಿಕೊಂಡುಬಿಡ
ಬೇಕು, ಪ್ರತಿಮಾತಿಲ್ಲದೆ ನಡೆಯಬೇಕು – ಎಂಬ ಸಂಪೂರ್ಣ ಆತ್ಮಸಮರ್ಪಣ
ಭಾವದಲ್ಲಿ ಅವನು ಮೈಮರೆತುಬಿಟ್ಟ.

೨

ಊರೊಳಕ್ಕೆ ಹೋಗಿ ಅಜ್ಜನನ್ನೂ ನೋಡದೆ ಗಾಡಿಯ ಜಾಡಿನಲ್ಲಿ ಕಾರು
ನಡೆಸಿಕೊಂಡು ಹೊಳೆಬಾಗಿಲ ಹತ್ತಿರ ನಿಲ್ಲಿಸಿ ಬೆಳಗ್ಗೆ ಹತ್ತೂವರೆ ಗಂಟೆಯ
ಹೊತ್ತಿನಲ್ಲಿ ಅವನು ತೋಟದೊಳಗೆ ಬಂದಾಗ ಎಲ್ಲವೂ ಹೊಸದಾಗಿ ಕಾಣಿಸಿತು.
ಈ ತೋಟವನ್ನು ಬಹಳ ಹಿಂದೆ ನೋಡಿದ್ದ ನೆನಪು. ಈಗ ಎರಡು ಸಣ್ಣ ಮನೆ
ಗಳು ಎದ್ದಿವೆ. ಅವುಗಳಲ್ಲಿ ವಾಸದ್ದು ಯಾವುದೆಂಬುದನ್ನು ಅಂದಾಜಿನಿಂದ
ಗುರುತಿಸಿ ಬಾಗಿಲ ಮುಂದೆ ಬಂದು ನಿಂತಾಗ ಒಳಗೆ ಹವನದ ಅಗ್ನಿ ಆಗತಾನೇ
ನಂದುತ್ತಿದ್ದುದು ಕಾಣಿಸಿತು. ಒಂದು ಮಂದಲಿಗೆಯ ಮೇಲೆ ಕೂತು ಗೋಡೆ
ಒರಗಿಕೊಂಡು ಒಬ್ಬ ಹುಡುಗಿ ಬಿಳಿ ಕಾಗದದ ಮೇಲೆ ಏನೋ ಬರೆಯುತ್ತಿದ್ದಳು.
ತಿಳಿ ಹಳದಿಯ ಸೀರೆಯುಟ್ಟು ಅದೇ ಬಣ್ಣದ ಬ್ಲೌಸ್ ತೊಟ್ಟು ಎಡಕ್ಕೆ ಬೈತಲೆ
ತೆಗೆದು ಬಾಚಿದ ತಲೆಗೆ ಮಲ್ಲಿಗೆಯ ಹೂವು ಮುಡಿದಿದ್ದ ಅವಳು ಹಣೆಗೆ
ಗುಲಾಬಿ ಕುಂಕುಮವಿಟ್ಟು ಅದರ ಕೆಳಗೆ ವಿಭೂತಿಯಂತಹ ಬೂದಿಯನ್ನು
ಹಚ್ಚಿಕೊಂಡಿದ್ದಳು. ಇವನನ್ನು ತಾನು ಎಲ್ಲಿಯೋ ನೋಡಿರುವಂತೆ ಅವನಿಗೆ
ಎನಿಸುವದರೊಳಗೆ ಅವಳೇ ಇವನ ಗುರುತು ಹಿಡಿದವಳಂತೆ ಎದ್ದು ನಿಂತಳು.
'ಸತ್ಯಕಾಮರು ಅವರು ಇರೂದು ಇಲ್ಲೇನಾ?' – ಅವನು ಕೇಳಿದ.

'ಸಾಮಾನು ತರುಕ್ಕೆ ಅಂತ ಅರ್ಧಗಂಟೇಲಿ ಊರೊಳಕ್ಕೆ ಹೋದರು.

ಹತ್ತು ಹದಿನೈದು ನಿಮಿಷದಲ್ಲಿ ಬರ್ತಾರೆ. ಕೂತ್ಕಳಿ.'

ಅವನು ಒಳಗೆ ಬಂದು ಚಾಪೆಯ ಮೇಲೆ ಕುಳಿತ. ಆ ಹುಡುಗಿ ಅಡಿಗೆಯ ಕೋಣೆಗೆ ಹೋಗಿ, ಒಲೆಯ ಮೇಲೆ ಬೇಯುತ್ತಿದ್ದ ಪಾತ್ರೆಯ ಬಾಯಿ ತೆಗೆದು ಏನೋ ನೋಡಿದಳು. ಅನಂತರ ಸಂಕೋಚದಿಂದಲೆಂಬಂತೆ ಅಡಿಗೆಯ ಕೋಣೆಯ ಬಾಗಿಲು ಹಾಕಿಕೊಂಡಳು. ಇವಳನ್ನು ಎಲ್ಲಿ ನೋಡಿದ್ದೇನೆ, ಎಂದು ನೆನಪು ಕೆದಕಿಕೊಳ್ಳುತ್ತಾ ಅವನು ಮನೆಯನ್ನೊಮ್ಮೆ ನೋಡಿದ. ಎದುರು ಭಾಗ ದಲ್ಲಿ ಒಂದು ಕೋಣೆ ಇತ್ತು. ಅಡಿಗೆಮನೆ ಸಣ್ಣದು. ಅದಕ್ಕೆ ಹೊಂದಿದಂತೆ ಒಳಭಾಗದಲ್ಲಿ ಒಂದು ಉಗ್ರಾಣವಿರುವಂತಿತ್ತು. ನೆನಪಾಯಿತು: ಅವೊತ್ತು ತುಮಕೂರಿನಲ್ಲಿ ಇವಳ ಜೊತೆ ಹೋಗುತ್ತಿದ್ದವಳು ಈ ಹುಡುಗಿಯೇ ಇರಬೇಕು, ಎಂದುಕೊಂಡ.

ಅವಳು ಒಂದು ಬಿಂದಿಗೆ ಹಿಡಿದು, ಇವನು ಕೂತಿದ್ದ ಅಂಗಳದ ಮೂಲಕ ಹೊರಗೆ ಹೋದಳು. ಒಂದು ನಿಮಿಷದಲ್ಲಿ ಕೊಳದಿಂದ ನೀರು ತುಂಬಿಕೊಂಡು ಮತ್ತೆ ಒಳಗೆ ಹೋಗುವಾಗ ಅವನು ಕೇಳಿದ: 'ನೀವ್ಯಾರು ಗೊತ್ತಾಗಲಿಲ್ಲ.'

ಅಡಿಗೆಕೋಣೆಯ ಒಳಗಿನಿಂದ ಅವಳು ಉತ್ತರ ಕೊಟ್ಟಳು: 'ಬೆಟ್ಟಯ್ಯ ನೋರ ಡಾಟರ್.'

ತಿಳಿಯಿತು. ಈ ಹುಡುಗಿ ಈಗ ಬೆಂಗಳೂರಿನಲ್ಲಿ ಕಾಲೇಜ್ ಓದುತ್ತಿದ್ದಾ ಳಂತೆ. ಮೀರಾ ಎಂದು ಹೆಸರು. ಮತ್ತೆ ಏನೂ ಕೇಳುವ ಮನಸ್ಸಾಗಲಿಲ್ಲ. ಅವಳು, ತಾನು ಬರೆಯುತ್ತಿದ್ದ ಕಾಗದ ಪೆನ್ನನ್ನು ಅಲ್ಲೇ ಬಿಟ್ಟು ಒಳಗೆ ಹೋಗಿದ್ದಳು. ಅವನು ಕಾಗದವನ್ನು ಕೈಗೆ ತೆಗೆದುಕೊಂಡು ನೋಡಿದ. ಸತ್ಯಳ ಅಕ್ಷರದ ಹಾಳೆಗಳನ್ನು ಅವಳು ದುಂಡಾದ ಅಕ್ಷರದಲ್ಲಿ ಬರೆಯುತ್ತಿದ್ದಳು. ೧೧೬ ಎಂದು ಪುಟಸಂಖ್ಯೆ ಹಾಕಿತ್ತು. ಬಲಪ್ರಯೋಗವಿಲ್ಲದೆ, ಸಂಘಟಿತ ಶಕ್ತಿಯಿಲ್ಲದೆ ನಿಮ್ನವರ್ಗದವರು ಉಳಿದವರ ಸರಿಸಮನಾಗಲು ಸಾಧ್ಯವೇ ಇಲ್ಲ. ಆದರೆ ಬಲಪ್ರಯೋಗವು ಪುಂಡತನವಾಗಬಾರದು. ಸಂಘಟಿತ ಚಟುವಟಿಕೆಯಾಗಬೇಕು. ಅಸೆಂಬ್ಲಿಯಲ್ಲಿ, ಚುನಾವಣೆಯಲ್ಲಿ, ವ್ಯಾಪಾರೋದ್ಯಮದಲ್ಲಿ, ದೇವಾಲಯ ಮೊದಲಾದ ಧಾರ್ಮಿಕ ಸಂಸ್ಥೆಗಳಲ್ಲಿ ತಮ್ಮ ಪಾಲನ್ನು ದೊರಕಿಸಲು ಸತತವಾಗಿ ಚಳವಳಿ ಹೂಡಬೇಕು. ಚಳವಳಿಯ ಪರಿಕ್ರಮದಲ್ಲಿ ಇತರ ಜಾತಿಯವರು ಗುಂಡಾಗಿರಿ ಮಾಡಬಹುದು. ಅದನ್ನು ತಡೆದು ಪ್ರತಿರೋಧಿಸುವ ಗುಂಡಾಗಿರಿಯೂ ನಿಮ್ನವರ್ಗದವರಲ್ಲಿರಬೇಕು. ಶಕ್ತಿ, ಶಕ್ತಿ ಸಂಚಯ, ಮತ್ತು ಅವನ್ನು ವಿವೇಚನೆ ಯಿಂದ ಉಪಯೋಗಿಸುವ ಗುಣಗಳಿದ್ದರೆ ನಮ್ಮ ತಲೆಮಾರಿನಲ್ಲೇ ನಾವು ಗೌರವದಿಂದ ಬಾಳಬಹುದು....'

ಏನು, ಪುಸ್ತಕ ಬರೆಯುತ್ತಿದ್ದಾಳೆಯೋ ಇವಳು, ಅಥವಾ ಯಾರಿಗಾದರೂ ಭಾಷಣ ಬರೆದು ಕೊಡುತ್ತಿದ್ದಾಳೆಯೋ? – ಎನಿಸಿತು. ತಕ್ಷಣ ಮೋಹನದಾಸನ ನೆನಪಾಯಿತು. ಅವನ ವಿಚಾರ, ಚಟುವಟಿಕೆಗಳು ತನಗೂ ತಿಳಿದಿದ್ದುವು. ಅವನಿಗೂ ಇವಳಿಗೂ ಪರಿಚಯವಾಗಿ ಅವನಿಗೋಸ್ಕರ ಇವಳು ಬರೆಯುತ್ತಿದ್ದಾಳೆಯೇ, ಎಂಬ ಅನುಮಾನ ಬಂತು. ಅಷ್ಟರಲ್ಲಿ ಸತ್ಯ ಹಿಂತಿರುಗಿದಳು. ತಲೆಯ ಮೇಲೆ ಸಿಂಬಿ ಇಟ್ಟುಕೊಂಡು ಸುಮಾರು ಅರ್ಧ ಗೋಣಿಚೀಲದ ಹೊರೆ ಹೊತ್ತಿದ್ದಾಳೆ. ಕೈಯಲ್ಲಿ ಒಂದು ಸಣ್ಣ ಚೀಲ. ಮುಖ ಬೆವೆತಿದೆ. ಭುಜವೆಲ್ಲ ಬೆವರಿನಿಂದ ಒದ್ದೆಯಾಗಿ ರವಿಕೆಯ ತೋಳು ನೆನೆದಿದೆ. ರೈತಹೆಂಗಸಿನಂತೆ ಕಾಣುತ್ತಿದ್ದಾಳೆ. 'ಮೀರಾ, ಇದನ್ನ ಇಳಿಕ್ಕೊ ಬಾ' – ಎಂದಳು ಅವಳು. ಅಡಿಗೆಯ ಮನೆಯಿಂದ ಓಡಿಬಂದು ಮೀರಾ ಎರಡು ಕೈಗಳನ್ನೂ ಎತ್ತಿಕೊಟ್ಟು ಹೊರೆಯನ್ನು ಇಳುಕಿದಳು. ಇವನನ್ನು ಕಂಡು ಮನಸ್ಸು ವಿಚಲಿತವಾಗಿದ್ದರೂ ಸತ್ಯ ಒಂದು ನಿಮಿಷದಲ್ಲಿ ತನ್ನನ್ನು ತಾನು ಸುಧಾರಿಸಿಕೊಂಡು ಕೇಳಿದಳು: 'ಬಾಗಿಲು ಹತ್ತಿರ ಕಾರು ಕಾಣಿಸಿತು. ನಿಮ್ಮ ತಂದೇದಿರಭೌದು ಅಂತಿದ್ದೆ. ಎಷ್ಟು ಹೊತ್ತಾಯ್ತು ಬಂದು?'

ಅವನು 'ಹೂಂ' ಎಂದ. ತನ್ನ ಉತ್ತರ ಅಸಂಬದ್ಧವೆಂದು ಅವನಿಗೆ ತಿಳಿಯಲಿಲ್ಲ. ಸತ್ಯ ಮತ್ತೆ ಕೇಳಲಿಲ್ಲ.

ಮೀರಾ ಒಳಗೆ ಹೋದಳು. ಒಂದು ನಿಮಿಷದನಂತರ ಸತ್ಯಳನ್ನು ಒಳಗೆ ಕರೆದು ಹೇಳಿದಳು: 'ನಂಗೆ ಹೊತ್ತಾಗುತ್ತೆ. ಮನೆಗೆ ಹೋಗ್ತೀನಿ.'

'ಇಲ್ಲೇ ಊಟ ಮಾಡ್ತೀನಿ ಅಂದಿದ್ದೆ. ಈಗ ಹಾಗೇ ಹೋಗ್ತೀನಿ ಅಂತೀಯಲ್ಲ?'

'ಇಲ್ಲ, ಮನೇಲಿ ಕೆಲಸವಿದೆ.'

'ಅವನು ಬಂದಿದಾನೆ ಅಂತ ಸಂಕೋಚವೇನು? ನಡಿ. ಹೊರಗೆ ಬಂದು ಕೂತುಕೊ.'

ಮೀರಾ ಹೊರಗೆ ಬರಲಿಲ್ಲ. ತಾನು ಹೋಗುವುದಾಗಿ ಸಣ್ಣ ಧ್ವನಿಯಲ್ಲೇ ಹಟ ಹಿಡಿದಳು. ಸತ್ಯ ಮತ್ತು ಶ್ರೀನಿವಾಸರ ಸಂಬಂಧ ಅವಳಿಗೆ ಗೊತ್ತು. ಇವರಿಬ್ಬರಿಗೂ ಮದುವೆ ಮಾಡಿಸಲು ಮಂತ್ರಿಗಳೂ ದೊಡ್ಡ ಪಟೇಲರೂ ಪ್ರಯತ್ನಿಸುತ್ತಿರುವುದು, ಅದಕ್ಕಾಗಿಯೇ ಅಮ್ಮನ ಹಬ್ಬ ಮಾಡಿಸಿದುದು, ಎಲ್ಲವೂ ಅವಳಿಗೆ ಗೊತ್ತು. ಸತ್ಯ ಎಷ್ಟು ಹೇಳಿದರೂ ಅವಳು ನಿಲ್ಲಲಿಲ್ಲ. ಮನೆಯಲ್ಲಿ ಈ ದಿನ ಬರೆದು ಮುಗಿಸುವುದಾಗಿ ಕಾಗದ ದಿಂಡುಗಳನ್ನು ಜೋಡಿಸಿ ಒಂದು ಕೈಚೀಲಕ್ಕೆ ಹಾಕಿಕೊಂಡು, ಶ್ರೀನಿವಾಸನಿಗೆ ನಮಸ್ತೆ ಹೇಳಿ ಹೊರಟು ಹೋದಳು.

ಶ್ರೀನಿವಾಸ ಮುಂಕು ಹಿಡಿದವನಂತೆ ಗೋಡೆ ನೋಡುತ್ತಾ ಕುಳಿತಿದ್ದ. ಮುಖ ಮತ್ತು ಕೈಗಳನ್ನು ಸೆರಗಿನಿಂದ ಒರಸಿಕೊಂಡು ಸತ್ಯ ಕೇಳಿದಳು: 'ತುಂಬ ಸಿನಿಮಾ ನೋಡ್ತಿಯಂತೆ. ಬೀರ್ ಕುಡೀತೀಯಂತೆ. ಈ ಮಟ್ಟಕ್ಕೆ ಇಳೀಬೇಕೇ ನೀನು?'

ಅವನು ಉತ್ತರ ಹೇಳಲಿಲ್ಲ. ಸುಮ್ಮನೆ 'ಹೂಂ' ಎಂದ.

'ನಾನು ದೇವದಾಸ ಸಿನಿಮಾ ನೋಡಿಲ್ಲ. ನಿಂಗೇ ಗೊತ್ತಲ್ಲ, ನಂಗೆ ಸಿನಿಮಾ ಕಂಡ್ರೆ ಆಗುಲ್ಲ. ಆ ಕಾದಂಬರಿ ಓದಿದೀನಿ. ಶ್ರೀಮಂತರ ಮಗ. ಕುಡಿದು ಬೇಕಾದ್ದು ಮಾಡಿದ. ಕಷ್ಟಪಟ್ಟು ದುಡಿದು ತಿನ್ನಬೇಕಾದ ಪರಿಸ್ಥಿತಿ ಇದ್ದಿದ್ದರೆ ಕೂಲಿಗೋ ಆಫೀಸಿಗೋ ಹೋಗ್ತಿದ್ದ. ಆರು ತಿಂಗಳಿನಲ್ಲಿ ಮನಸ್ಸು ಹದಕ್ಕೆ ಬರ್ತಿತ್ತು.'

ಅವನು ಈಗಲೂ ಮಾತನಾಡಲಿಲ್ಲ. ಅವಳೇ ಎಂದಳು: 'ಈ ವಯಸ್ಸಿನಲ್ಲಿ ನೀನು ಹೀಗೆ ಕಾಣಬಾರದು. ಮುಖದ ಮೇಲೆ ರೋಗಕಳೆ ಇದ್ದಹಾಗಿದೆ. ನನ್ನ ನೋಡು, ಸಸಿಗೆ ನೀರು ಹುಯ್ತೀನಿ. ಕೆರೇಲಿ ಗಾಡಿಗೆ ಗೋಡು ತುಂಬ್ತೀನಿ. ಬಿಸಲಿನಲ್ಲಿ ತಿರುಗ್ತೀನಿ. ಬಣ್ಣ ಮೊದಲಿಗಿಂತ ಕಪ್ಪಾಗಿದೆ. ಆದರೆ ಶರೀರ ಆರೋಗ್ಯವಾಗಿದೆ. ನೀನ್ಯಾಕೆ ಹಾಗೆ ಇರಬಾರದು?' ಅವನು ಸುಮ್ಮನೆ ಕುಳಿತಿದ್ದ. 'ಯಾಕೆ ಮೌನವ್ರತ ಮಾಡ್ತಿಯ? ಮಾತಾಡು. ಯಾರೂ ಮಾಡದ ತಪ್ಪು ನೀನು ಮಾಡಿಲ್ಲ.'

ಕೊನೆಯ ಮಾತನ್ನು ಕೇಳಿ ಅವನಿಗೆ ಧೈರ್ಯ ಹುಟ್ಟಿತು. ಏನು ಹೇಳ ಬೇಕೆಂಬುದು ತಿಳಿಯದಿದ್ದರೂ ಮಾತನಾಡುವ ಸಾಹಸವು ಫಲಪ್ರದವಾಯಿತು. 'ಸತ್ಯ, ಏನು ಬೇಕಾದರೂ ಬೈಯಿ. ಬೈಯ್ಯುವ ಅಧಿಕಾರ ನಿನಗಿದೆ. ನಾನು ಪಾಪಿ; ಅಪರಾಧಿ, ದೋಷಿ' – ಎಂದು ಎದ್ದು ಹತ್ತಿರ ಬಂದು ಕೈಹಿಡಿದುಕೊಂಡು ನೆಲಕ್ಕೆ ಮಂಡಿಯೂರಿ ಕುಳಿತ. ಅವಳು ತನ್ನ ಕೈಯನ್ನು ಬಿಡಿಸಿಕೊಳ್ಳಲಿಲ್ಲ. ಹಿಂದೆ ಸರಿಯಲಿಲ್ಲ. ಒಂದು ಸಲ ಅವನ ಕೈಯನ್ನು ಹಿಸುಕಿದಳು. ಅದರಲ್ಲಿ ಅವನಿಗೆ ಅಭಯ ಮತ್ತು ಸ್ವೀಕಾರದ ಅರ್ಥ ಕಾಣಿಸಿತು.

ಅವಳು ಎಂದಳು: 'ನಿನ್ನ ಕೈ ನೋಡು, ಎಷ್ಟು ಮೃದುವಾಗಿದೆ?'

'ನಿಂಗೆ ಗೊತ್ತಿಲ್ಲವೆ, ನನ್ನ ಹೃದಯ ಯಾವತ್ತೂ ಕಠಿಣವಾಗಿಲ್ಲ. ಅದಕ್ಕೇ ಎಷ್ಟು ನೋವು ಅನುಭವಿಸಿದೀನಿ ಅಂತ. ಅದ ವರ್ಣಿಸುಕ್ಕೆ ಯಾವ ಕವಿಗೂ....' ಎಂಬ ಅವನ ಮಾತನ್ನು ಅರ್ಧಕ್ಕೆ ತಡೆದು ಹೇಳಿದಳು: 'ನಾನು ಹೇಳ್ತಿರೂದು ಅದಲ್ಲ. ನಿನ್ನ ಕೈ ಎಷ್ಟು ಮೃದುವಾಗಿದೆ ಅಂದ್ರೆ ಬರೀ ಕಾರಿನ ಚಕ್ರ ತಿರುಗು ಸ್ತೀಯ. ಗುದ್ದಲಿ ಹಾರೆ ಹಿಡಿದು ಕೆಲಸ ಮಾಡಿದ್ದರೆ ಕೈ ಒರಟಾಗಿರ್ತಿತ್ತು

ಅಂತ. ತುಂಬ ಸಿನಿಮಾ ನೋಡ್ತೀಯ. ಹೃದಯ, ಕರುಣ, ಕವಿ, ವರ್ಣನೆ ಅಂತ ಮಾತಾಡ್ತೀಯ. ನಂಗೆ ಅದೆಲ್ಲ ತಿಳಿಯೂದೂ ಇಲ್ಲ. ನಾನು ಹಾಗೆ ಯೋಚನೇನೂ ಮಾಡುಲ್ಲ.'

ಶ್ರೀನಿವಾಸನಿಗೆ ಚೈತನ್ಯಭಂಗವಾಯಿತು. ಅವಳ ತೋಳುಗಳನ್ನು ಹಿಡಿದು ತನ್ನ ಮುಖವನ್ನೆತ್ತಿ ಅವಳನ್ನು ನೋಡುತ್ತಾ, 'ನನ್ನ ಎಷ್ಟು ಅಂತ ಚುಚ್ತೀಯ ನೀನು?' ಎನ್ನುವಾಗ ಅವನ ಕಣ್ಣಿನಲ್ಲಿ ನೀರು ತುಂಬಿಕೊಂಡಿತು. ಅರ್ಧ ನಿಮಿಷ ದಲ್ಲಿ ಹೆಂಗಸಿನಂತೆ ಬಿಕ್ಕಿಬಿಕ್ಕಿ ಅಳಲು ಪ್ರಾರಂಭಿಸಿದ.

ಸತ್ಯಳಿಗೂ ಕಸಿವಿಸಿಯಾಯಿತು. ಅವಳ ಕಣ್ಣು ಒದ್ದೆಯಾಯಿತು. ಕೈ ಹಿಡಿದು, 'ಏಳು. ಎದ್ದು ಸರಿಯಾಗಿ ಕೂತುಕೊ. ನಿನ್ನ ಚುಚ್ಚಬೇಕು ಅಂತ ನಾನು ಅನ್ನಲಿಲ್ಲ' ಎಂದು ಅವನನ್ನು ಎಬ್ಬಿಸಿ ಗೋಡೆಯ ಹತ್ತಿರ ಕೂರಿಸಿ ತಾನು ಅಡಿಗೆಯ ಮನೆಗೆ ಹೋದಳು. ಒಲೆಯ ಮೇಲೆ ಆಗುತ್ತಿದ್ದ ಅಡಿಗೆಯ ಪಾತ್ರೆಯ ಮುಚ್ಚಳ ತೆಗೆದು ನೋಡಿದಳು. ಅನ್ನ ಆಗಿತ್ತು. ಸಾರು ಕುದಿಯು ತ್ತಿತ್ತು. ಒಳಗಿನಿಂದ ಹೇಳಿದಳು: 'ಕೊಳದ ದಡದಲ್ಲಿ ಬಕೀಟ್ ಇಟ್ಟಿದೆ. ಅದರಲ್ಲಿ ನೀರು ತಗಂಡು ತೆಂಗಿನ ಮರದ ಕೆಳಗೆ ಹಾಕಿರೂ ಕಲ್ಲುಚಪ್ಪಡಿ ಹತ್ತಿರ ಕೈ ಕಾಲು ತೊಳಕೊಂಡು ಬಾ. ಊಟಕ್ಕೆ ಬಡಿಸ್ತೀನಿ.'

ಶ್ರೀನಿವಾಸ ಹೋಗಿ ಕೈ ಕಾಲು ತೊಳೆದು ಬಂದ. ಅವಳು ಅವನಿಗೆ ತಟ್ಟೆ ಹಾಕಿದಳು. 'ನೀನು?' – ಅವನು ಕೇಳಿದ.

'ನೀನು ಮೊದಲು ಮಾಡು. ಆಮೇಲೆ ನನ್ನದು.'

'ಜೊತೇಲೇ ಮಾಡಾಣ.'

ಅಡಿಗೆಮನೆಯ ಹೊರಬಾಗಿಲಿನಲ್ಲಿ ಅನ್ನ ಸಾರು ಮೊಸರುಗಳ ಪಾತ್ರೆ, ತುಪ್ಪದ ಜಾಡಿ, ನೀರಿನ ಚೊಂಬುಗಳನ್ನು ಇಟ್ಟುಕೊಂಡು ಇಬ್ಬರೂ ಕುಳಿತರು. ಸತ್ಯ ಬಡಿಸಿದಳು. ಒಂದು ತುತ್ತು ಅನ್ನವನ್ನು ಬಾಯಿಗೆ ಇಟ್ಟುಕೊಂಡು ಅವನು ಕೇಳಿದ: 'ದಿನಾ ಹೋಮ ಮಾಡ್ತೀಯ?'

'ಮೊದಲು ಮಾಡ್ತಿರಲಿಲ್ಲ. ಈಗ ಇಪ್ಪತ್ತು ದಿನದಿಂದ ದಿನಾ ಮಾಡ್ತೀನಿ.'

'ಜನಿವಾರ ಹಾಕ್ಕಂಡಿದೀಯಂತೆ?'

'ನನ್ನ ವಿಷಯ ಯಾರ ಕೈಲಿ ವಿಚಾರಿಸ್ತಿದ್ದೆ?'

'ಮೊದಲು ಇದರಲ್ಲೆಲ್ಲ ನಂಬಿಕೆಯೂ ಇಲ್ಲ ಅಂತಿದ್ದೆ?'

'ಹಾಗಂತ ಎಲ್ಲಿ ಅಂದಿದ್ದೆ? ಜಾತೀಲಿ ನಂಬಿಕೆ ಇಲ್ಲ ಅಂದಿದ್ದೆ. ಈಗಲೂ ನಂಬಿಕೆ ಇಲ್ಲ. ಹೇಳು, ಅಡಿಗೆ ರುಚಿಯಾಗಿದೆಯೆ?'

'ಇಷ್ಟು ರುಚಿಯಾದ ಸಾರು ನಾನು ಯಾವತ್ತೂ ತಿಂದೇ ಇರಲಿಲ್ಲ ಅನ್ಸುತ್ತೆ.'

'ಕುಮುದಿನಿಯ ಕೈಯ ಅಡುಗೆಯೂ ರುಚಿಯಾಗಿರಲಿಲ್ಲವೆ?'

ಅವನು ಮ್ಲಾನನಾದ. 'ಸತ್ಯ, ನನ್ನ ಬೈದದ್ದು ಸಾಲದೆ?' – ಎನ್ನುವಾಗ ನೆತ್ತಿ ಹತ್ತಿತು. ಬಾಯಲ್ಲಿದ್ದ ಅನ್ನದ ಅಗುಳು ಕೆಳಗೆ ಬಿದ್ದು, ಕೆಮ್ಮಿ ಕೆಮ್ಮಿ ಗಂಟಲು ಉರಿ ಹತ್ತಿ ಕಣ್ಣಿನಲ್ಲಿ ನೀರು ಕೂಡಿಕೊಂಡಿತು.

'ನೆತ್ತಿ ಮೇಲಕ್ಕೆ ಎತ್ತಿಕೊ, ನಿಲ್ಲುತ್ತೆ.'

ಅವನು ಎರಡು ನಿಮಿಷ ಮುಖವನ್ನು ಮೇಲ್ಛಾವಣಿಯ ಕಡೆಗೆ ಮಾಡಿಕೊಂಡು ಕೂತುಕೊಂಡ. ಸ್ವಲ್ಪ ಹೊತ್ತಿನಲ್ಲಿ ಸರಿಯಾಯಿತು.

ಸತ್ಯ ಎಂದಳು: 'ನಾನು ಲೋಕಾರೂಢಿ ಮಾತು ಕೇಳಿದರೆ ಅದನ್ನು ಛೇಡಿಸಿದ್ದು ಅಂತ ಯಾಕೆ ತಿಳ್ಕೊತ್ತೀ? ಆಗೂದು ಆಯ್ತು. ಮದುವೆಯಾದೆ. ಸುಖವಾಗಿ ಎಲ್ಲ ಆಗಿದ್ದರೆ ಒಂದು ಮುದ್ದಾದ ಮಗು ಆಗಬೇಕಾಗಿತ್ತು. ಅವಳು ತುಂಬ ಒಳ್ಳೇ ಹುಡುಗಿಯಂತೆ. ವೀಣೆ ಬಾರಿಸ್ತಿದ್ಳಂತೆ. ಯಾರಿಗೂ ನೋವಾಗೂ ಹಾಗೆ ಮಾತಾಡ್ತಿರಲಿಲ್ಲವಂತೆ. ಒಂದು ದಿನವೂ ಕೊಳೆ ಬಟ್ಟೆ ಹಾಕ್ಕೊಂಡು ತಲೆ ಕೆದರಿಕೊಂಡು ತಿರುಗಿದೋಳಲ್ಲವಂತೆ. ಆ ಮಾತು ಹೋಗಲಿ. ಈ ಅಡಿಗೆ ರುಚಿಯಾಗಿದೆಯೆ?'

'ಆಗಲೇ ಹೇಳಿದೆನಲ್ಲ.'

'ಅಂದ್ರೆ ನೀನು ಮೀರಾನ ಮೆಚ್ಚಿದೆ ಅಂದ ಹಾಗಾಯ್ತು.'

ಅವನ ಮುಖ ಕೆಂಪಗಾಯಿತು. ಸಿಟ್ಟು ಬಂತು: 'ಇನ್ನೊಬ್ಬ ಹುಡುಗೀ ವಿಷಯವಾಗಿ ಯಾಕೆ ಸಣ್ಣ ಮಾತಾಡ್ತಿ?'

'ಸಣ್ಣ ಮಾತು ಹ್ಯಾಗಾಗುತ್ತೆ? ಏನಿದೆ ಈ ಸಾರಿನಲ್ಲಿ ವಿಶೇಷ? ಸಾಮಾನ್ಯ ಅಡಿಗೆ ಅಂತ ನಂಗೇ ಗೊತ್ತಿದೆ. ನಿನ್ನ ಮನಸ್ಸು ಮೆಚ್ಚಿದೆ. ಊಟ ರುಚಿಯಾಗಿದೆ. ಅದನ್ನ ಮಾಡಿದೋಳು ಅವಳು ಅನ್ನೋದನ್ನ ನೀನೇ ಕಣ್ಣಾರೆ ಕಂಡಿದೀಯ. ಅಂದರೆ ನೀನು ಅವಳನ್ನ ಮೆಚ್ಚಿದೀಯ ಅಂತ ಅಲ್ಲವೆ ಅರ್ಥ?' – ಎಂದು ಸತ್ಯ ಗಟ್ಟಿಯಾಗಿ ನಕ್ಕಳು.

'ಸತ್ಯ, ಒಂದು ಸಲ ಬೇರೆ ಹುಡುಗೀನ ಮದುವೆಯಾದದ್ದಕ್ಕೆ ನಾನು ಯಾವಾಗಲೂ ಕಂಡ ಕಂಡ ಹುಡುಗೀರ ಬೆನ್ನು ಹತ್ತೋನು ಅಂತ ತಿಳ್ಕಂಡೆಯಾ? ನನ್ನ ಹೃದಯ ಹ್ಯಾಗೆ ಬಿಚ್ಚಿ ತೋರಿಸಲಿ?' – ಎಂದು ಅವನು ಉದ್ವಿಗ್ನನಾಗಿ ಹೇಳಿದ.

ಸತ್ಯ ಮಾತನಾಡಲಿಲ್ಲ, ಗಂಭೀರಳಾದಳು. ಒಂದು ನಿಮಿಷದ ನಂತರ, 'ಈಗ ಆ ಮಾತು ಬ್ಯಾಡ. ಸರಿಯಾಗಿ ಊಟಮಾಡು' ಎಂದು, ಅವನು ಸಾಕೆಂದರೂ ಬಿಡದೆ ಮತ್ತೆ ಅನ್ನ ಬಡಿಸಿ, ಮೇಲೆ ತುಪ್ಪ ಹಾಕಿ ಸಾರು ಬಡಿಸಿ

ದಳು. ಅನಂತರ ಹೇಳಿದಳು: 'ವಾಸ್ತವವಾಗಿ ಅವಳೂ ಇಲ್ಲೇ ಊಟ ಮಾಡ ಬೇಕು ಅಂತ ಇಬ್ಬರಿಗೆ ಆಗುವಷ್ಟು ಅಡಿಗೆ ಮಾಡಿದೆವು. ಸಂಕೋಚ ಮಾಡ್ಕಂಡು ಅವಳು ಹೊರಟುಹೋದಳು. ಅವಳ ಅನ್ನ ನೀನು ಊಟ ಮಾಡ್ತಿ ದೀಯ.' ಅವನ ಮುಖ ನೋಡಿ, 'ಸಿಟ್ಟು ಮಾಡ್ಕಬ್ಯಾಡ. ಇರೂ ವಿಷಯ ನಾನು ಅಂದದ್ದು. ಅನ್ನ ಕಂಟಕತನದ ಪಾಪವೇನೂ ನಿನಗೆ ಬರುಲ್ಲ; ಊಟ ಮಾಡಿದ ಸಾರ್ಥಕತೆಯಾಗುತ್ತೆ' ಎಂದಳು.

'ಊಟ ಮಾಡುಕ್ಕೆ ಸಾರ್ಥಕತೆ ಏನು ಬೇಕು?'

'ನಿಂಗೆ ತಿಳೀಲಿಲ್ಲ. ಆಮೇಲೆ ಹೇಳ್ತೀನಿ. ಇನ್ನೊಂದಿಷ್ಟು ತುಪ್ಪ ಹಾಕಲೆ? ಗಮಗಮ ಅಂತಿದೆ ಅಲ್ಲವೆ?'

'ಹೊಂ.'

ಎರಡು ಮಿಳ್ಳೆ ತುಪ್ಪ ಬಡಿಸಿ ಅವಳು ಎಂದಳು: 'ಬೆಟ್ಟಯ್ನೋರ ಮನೇಲಿ ಕರಾವು ಚನ್ನಾಗಿದೆ. ಮೀರಾನೇ ಮನೇಲಿ ಕಾಯಿಸಿದ ತುಪ್ಪ ತಂದು ಕೊಟ್ಟಿ ದ್ದಳು.'

ಇವಳ್ಯಾಕೆ ತನ್ನೊಡನೆ ಹೀಗೆ ಮಾತನಾಡುತ್ತಿದ್ದಾಳೆಂದು ಅವನಿಗೆ ಸೋಜಿಗ ವಾಯಿತು. ತನ್ನ ಸಿಟ್ಟು ಇಳಿಯುವ ತನಕ ಛೇಡಿಸುತ್ತಾಳೆಂದು ಸುಮ್ಮನಾದ. ನೇರವಾಗಿ ಎದುರು ನಿಂತು, 'ನೀನು ಚಾಂಡಾಲ, ಘಾತಕ, ಪಾಪಿ' ಎಂದು ಪರಪರನೆ ಬೈದು ಚಂಡಿಯ ಅವತಾರ ತಾಳಿದ್ದರೆ ಅವನು ಸಹಿಸುತ್ತಿದ್ದ. ಕ್ಷಮೆ ಕೇಳಲೆಂದೇ ನಾನು ಬಂದಿದ್ದೇನೆ, ಆದರೆ ಹೀಗೆ ನಗುನಗುತ್ತಾ ಇರಿಯುವುದು ಇವಳ ಸ್ವಭಾವಕ್ಕೆ ಹೊಂದದ ಕ್ರೌರ್ಯ – ಎಂದುಕೊಂಡ.

ಊಟವಾದ ಮೇಲೆ ಅವಳು ತಟ್ಟೆ ತೊಳೆದಿಟ್ಟು, ಗಾರೆಯ ನೆಲ ತೊಳೆದು ಒರೆಸಿದಳು. ಅವನು ಗೋಡೆಯೊರಗಿ ಮಂದಲಿಗೆಯ ಮೇಲೆ ಕುಳಿತ. ಅವಳು ಹತ್ತಿರ ಬಂದು ಅವನ ಬಲಗೈಯನ್ನು ತನ್ನ ಕೈಲಿ ಹಿಡಿದು ಕೇಳಿದಳು: 'ಇನ್ನು ಬೀರ್ ಕುಡಿಯುಲ್ಲ, ಸಿಗರೇಟು ಸೇದುಲ್ಲ ಅಂತ ಭಾಷೆ ಕೊಡು.'

ಅವನಿಗೆ ಸಂತೋಷವಾಯಿತು. ಅವಳ ಕೈಯನ್ನು ಬಿಗಿಯಾಗಿ ಹಿಡಿದು ಹೇಳಿದ: 'ಭಾಷೆ ಕೊಡು ಅಂತ ನೀನು ಕೇಳಬೇಕಾಗಿಯೇ ಇಲ್ಲ. ಯಾವುದೋ ಒಂದು ಕಾರಣದಿಂದ ಇಂಥ ಕೆಟ್ಟ ಅಭ್ಯಾಸ ಬೇಕಾಗುತ್ತೆ. ಆ ಕಾರಣ ಯಾವಾಗ ಇಲ್ಲವಾಗುತ್ತೋ ಆಗ ಇದರ ಅಗತ್ಯವೇ ಇರುಲ್ಲ.'

'ನೀನು ತುಂಬ ಜಾಣನ ಹಾಗೆ ಮಾತಾಡ್ತೀಯ. ಹೋಗಲಿ. ಭಾಷೆಕೊಡು.'

'ನಿನ್ನಾಣೆಗೂ ನಾನು ಇವೆರಡನ್ನ ಕೈಲಿ ಮುಟ್ಟುಲ್ಲ.'

'ನನ್ನ ಮೇಲೆ ಆಣೆ ಇಟ್ಟರೆ ಸಾಲದು.'

'ನಿನಗಿಂತ ಇನ್ಯಾರು ನನಗೆ ಹೆಚ್ಚು? ನನ್ನ ಹೃದಯಾನೇ ಬಿಚ್ಚಿ.....'

'ಹೃದಯ, ಅದನ್ನು ಹಲಸಿನ ಹಣ್ಣು ಬಿಚ್ಚಿದ ಹಾಗೆ ಬಿಚ್ಚೋದು ಅನ್ನೋ ರೂಪಕದ ಮಾತು ಬ್ಯಾಡ. ನಿನ್ನ ಸಂಕಲ್ಪಶಕ್ತಿ, ಅಂದರೆ ವಿಲ್‌ಪವರ್‌ನ ಮೇಲೆ ಆಣೆ ಇಡು. ಅಂದರೆ ಎಂಥಾ ಸಂದರ್ಭದಲ್ಲೂ ಇವನ್ನ ಮುಟ್ಟದೇ ಇರೂ ವಿಲ್‌ಪವರ್ ಇದೆಯೇ ನಿನಗೆ?'

'ಇನ್ನು ಮುಂದೆ ಅದರ ಅಗತ್ಯವೇ ಇಲ್ಲ.'

'ಅಗತ್ಯ ಯಾವತ್ತೂ ಇಲ್ಲ, ಯಾರಿಗೂ ಇರುಲ್ಲ. ನಿನಗೆ ವಿಲ್‌ಪವರ್ ಇದೆಯೇ ಅಷ್ಟು ಹೇಳು. ಯೋಚನೆ ಮಾಡಿ ಹೇಳು. ಉಂಟು, ಇಲ್ಲ, ಅಂತ ನೇರವಾಗಿ ಉತ್ತರ ಹೇಳು.'

ಅವನು ಅವಳ ಒರಟು ಚರ್ಮದ ಬಲ ಅಂಗೈಯನ್ನು ಹಿಡಿದು ಸುಮ್ಮನೆ ಕುಳಿತ. ಅಂಗೈ ತುಂಬ ಸಣ್ಣ ಸಣ್ಣ ಜಡ್ಡುಗಳಾಗಿದ್ದುವು. ಅವಳು ಅವನ ಮುಖವನ್ನೇ ದಿಟ್ಟಿಸುತ್ತಾ ಕುಳಿತಳು. ಐದು ನಿಮಿಷ ಯಾರೂ ಮಾತನಾಡಲಿಲ್ಲ. ಅನಂತರ ಅವಳೇ ಎಂದಳು: 'ನಮ್ಮ ನಮ್ಮ ವಿಷಯ ಬಿಟ್ಟು ಬೇರೆ ಮಾತು ಆಡ್ತಿದೀನಿ ಅಂತ ತಿಳ್ಕಬ್ಯಾಡ. ಬುದ್ಧನ ಶಕ್ತಿ ಅಂದರೆ ಏನಂತೀಯ? ರಾಜ್ಯ ಬಿಟ್ಟು, ಪ್ರಾಯದಲ್ಲಿ ಹೆಂಡತಿ ಬಿಟ್ಟು ಹೋದದ್ದು ಮಹಾ ದೊಡ್ಡ ಕೆಲಸವೇನಲ್ಲ: ವಿಲ್‌ಪವರ್. ನನ್ನ ಕೈಯನ್ನ ನೀನು ಹಿಂದೆ ಎಷ್ಟು ಸಲ ಹಿಡಿದು ನೋಡಿರಲಿಲ್ಲ. ಎಷ್ಟು ಮೃದುವಾಗಿತ್ತು! ಈಗ ನೋಡು, ಹ್ಯಾಗೆ ಮಾಡಿದೀನಿ?'

ಅವನು ಮತ್ತೆ ಪ್ರಜ್ಞಾಪೂರ್ವಕವಾಗಿ ಅವಳ ಕೈಯಿಯ ಜಡ್ಡುತನವನ್ನು ಅನುಭವಿಸಿದ: 'ವಿಲ್‌ಪವರ್ ನಿಂಗೆ ಮೊದಲಿನಿಂದ ಇದೆ.'

'ನಿನಗ್ಯಾಕೆ ಇರಬಾರದು? ಈಗಲೂ ಯಾಕೆ ರೂಢಿಸಿಕೊಬಾರದು? ಯಾವು ದಾದರೂ ವಿಷಯವನ್ನ ತದೇಕಚಿತ್ತದಿಂದ ಧ್ಯಾನಿಸುತ್ತಿದ್ದರೆ, ಯಾವುದಾದರೂ ನಂಬಿಕೆಯಲ್ಲಿ ಸದಾ ಮಗ್ನವಾಗಿದ್ದರೆ ಅದರ ಸಾಧನೆಯಲ್ಲಿ ಸಂಕಲ್ಪಶಕ್ತಿ ಬೆಳೆದೇ ಬೆಳೆಯುತ್ತೆ. ಅಂಥ ಶಕ್ತಿಯೇ ಇಲ್ಲದೋನಿಗೆ ಯಾವ ವ್ಯಕ್ತಿತ್ವ ಇರುತ್ತೆ?'

'ನಿನ್ನ ಮಾತು ನಂಗೆ ತಿಳೀತು.' ಒಂದು ನಿಮಿಷದ ನಂತರ ಅವನು ದೃಢ ವಾಗಿ ಹೇಳಿದ: 'ಇನ್ನು ಮೇಲೆ ನಾನು ಕುಡಿಯುಲ್ಲ. ಸಿಗರೇಟು ಸೇದುಲ್ಲ. ನಿನ್ನಾಣೆ. ಅದೂ ಅಲ್ಲ, ನನ್ನ ಸಂಕಲ್ಪದ ಆಣೆ.'

'ನಂಗೆ ತುಂಬ ಸಂತೋಷವಾಯ್ತು. ಆದರೆ ಬೀರ್ ಕುಡಿಯುಲ್ಲ ಅನ್ನುವಷ್ಟ ರಲ್ಲೇ ನಿನ್ನ ಸಂಕಲ್ಪಶಕ್ತಿ ನಿಂತುಹೋಗಬೇಕೇನು? ಇದು ನೆಗೆಟಿವ್ ಪಿಚ್ಚರ್. ನಿಜವಾದದ್ದು ಮಾಡಬೇಕು. ಗಟ್ಟಿಯಾದದ್ದು ಸಾಧಿಸಬೇಕು.'

'ಸತ್ಯ, ನೀನು ಒಗಟು ಆಡಿದ ಹಾಗೆ ಆಡ್ತಿದೀಯ. ಅದೇನು ಸ್ಪಷ್ಟವಾಗಿ

ಹೇಳು.'

'ಹೇಳ್ತೀನಿ. ವಿಲ್‌ಪವರ್ ಮೇಲೆ ಆಣೆ ಇಟ್ಟಿದೀಯಲ್ವಾ?'

'ಹೂಂ.'

'ನೀನು ಜಾತಿಕುಲ ನಂಬೂದಿಲ್ಲ ಅಲ್ವಾ?'

'ನಾನು ಬಾಯಿಬಿಟ್ಟು ಹೇಳ್ತೀನಿ. ಆಗ ದೇವರ ಎದುರಿಗೆ ನಿಂತುಕೊಂಡಾಗ ಹಾಗನ್ನಿಸ್ತು. ಅದು ಸರಿ ಇರಭೌದು, ತಪ್ಪಿರಭೌದು. ದೇವರ ಎದುರಿಗೆ ಅನ್ನಿಸಿದ್ದೇ ಸತ್ಯವಲ್ಲ. ಯಾಕೆ ಅಂದ್ರೆ ನಮ್ಮ ಮನಸ್ಸಿನಲ್ಲಿರೂದ್ದೇ ದೇವರ ಎದುರು ನಿಂತಾಗ ನಮಗೆ ಗಟ್ಟಿಯಾಗಿ ಕೇಳುತ್ತೆ. ಅಂದ್ರೆ ಆಗ ನನಗೆ ಅನ್ನಿಸಿದ್ದು ತಪ್ಪು ಅಂತ ಈಗ ಅರ್ಥವಾಗಿದೆ. ನಾನು ಸತ್ಯವಾಗಿಯೂ ಜಾತಿಭೇದ ನಂಬುಲ್ಲ. ಈಗ ನಿನಗೆ ಈ ಹವನ, ಜನಿವಾರದ ಮೇಲೆ ನಂಬಿಕೆ ಬಂದಿದೆ. ಅದು ಹ್ಯಾಗೆ ಬಂತೋ ಕಾಣೆ. ನೀನು ಇದನ್ನ ಹಾಕ್ಕಂಡೇ ಇರು. ಆದರೆ ನಾನು ಎಂದೂ ಜಾತಿಭೇದ ನಂಬುಲ್ಲ. ನಾನು ಕೀಳು ಅಂತ ತಿಳ್ಕಳುಲ್ಲ.'

'ಬ್ರಾಹ್ಮಣ ಆಗುಕ್ಕೆ ಅಷ್ಟು ಸಾಕು. ಹಾಗೆಯೇ, ಬೇರೆ ಯಾರೂ ಕೀಳು ಅಂತ ತಿಳ್ಕಬಾರದು.'

'ನಾನು ನಿನ್ನನ್ನ ಯಾವತ್ತು ಕೀಳು ಅಂತ ತಿಳ್ಕಂಡಿದ್ದೆ ಹೇಳು?'

'ನನ್ನನ್ನ ಹಾಗೆ ತಿಳ್ಕಂಡಿಲ್ಲ.'

'ಮತ್ತೆ ಏನು ನಿನ್ನ ಅಭಿಪ್ರಾಯ?'

'ನಿನಗೆ ಜಾತಿಭೇದದಲ್ಲಿ ನಂಬಿಕೆ ಇಲ್ಲ ತಾನೆ?'

'ಎಷ್ಟು ಸಲ ಕೇಳ್ತಿಯ?'

'ನಿನ್ನ ಸಂಕಲ್ಪಶಕ್ತಿ ಜ್ಞಾಪಿಸಿಕೊಂಡು ಹೇಳು.'

'ನಂಬಿಕೆ ಇಲ್ಲ.'

'ಹಾಗಾದರೆ ಮೀರಾನ ಮದುವೆಯಾಗು.'

ಆವನಿಗೆ ತಲೆತಿರುಗು ಬಂದಂತೆ ಆಯಿತು. ಕಿವಿಯ ಹತ್ತಿರ ಬೆಚ್ಚಗಾಗಿ ಒಳಗೆ ಘುಂಯ್ ಎಂಬ ನಿಶ್ಶಬ್ದ ಹೆಪ್ಪುಗಟ್ಟುತ್ತಿತ್ತು. ಏನು ಹೇಳ್ತಿದಾಳೆ? ಊಟಕ್ಕೆ ಕೂತಾಗಿನಿಂದ ಇವಳು ಆಡುತ್ತಿದ್ದ ಮಾತಿನ ಉದ್ದೇಶ ಇದೇ ಆಗಿತ್ತೆ? —ಎಂಬ ಅರ್ಥವು ಬುದ್ಧಿಯ ಆಳದ ಒಂದು ಮೂಲೆಯಲ್ಲಿ ಸ್ಫುರಿಸಿತು. ಸತ್ಯ ಎಂದಳು: 'ನನ್ನ ವಿಷಯ ಮರೆತುಬಿಡು. ನಾನು ಪ್ರಾಯಶಃ ಮದುವೆಯಾಗುಲ್ಲ. ಆದರೂ ನಿನ್ನನ್ನ ಆಗುವ ಕಾಲ ಆಗಿಹೋಯಿತು. ಅಂದರೆ ನಿನ್ನ ಮೇಲೆ ನನಗೆ ಸ್ನೇಹವಿಲ್ಲದೆ ಇಲ್ಲ. ಮದುವೆಯಾಗಬೇಕು ಅಂತ ನಮ್ಮ ಮನಸ್ಸಿನಲ್ಲಿ ಬರುವ ಮುಂಚೆ ನಮ್ಮಿಬ್ಬರಲ್ಲೂ ಸ್ನೇಹ ಇರಲಿಲ್ಲವೆ? ಒಂದೆರಡು ದಿನ ನೋಡದೆ ಇದ್ದರೆ

ಒಬ್ಬರನ್ನೊಬ್ಬರು ಹುಡುಕಿಕೊಂಡು ಹಾಸ್ಟೆಲಿಗೆ ಬರ್ತಿರಲಿಲ್ಲವೆ? ಆ ಸ್ನೇಹ ಹ್ಯಾಗೆ ಹೋಗುತ್ತೆ? ಯಾಕೆ ಹೋಗಬೇಕು? ಕುಮುದಿನಿ ಬದುಕಿದ್ದಾಗಲೂ ನೀನು ಬಂದು ನನ್ನನ್ನ ಕಂಡಿದ್ರೆ ನಾನು ಖಂಡಿತ ಮಾತಾಡುತ್ತಿದ್ದೆ. ಅವಳನ್ನೂ ಕರ ಕೊಂಡು ಬರಬೇಕಾಗಿತ್ತು. ಅದು ಹೋಗಲಿ. ಈಗ ಹ್ಯಾಗೂ ನಿನ್ನ ಕೈ ಹಿಡ ಕೊಂಡಿದೀನಿ. ಅಂದ್ರೆ ಭಾಷೆ ಅಂತಲೇ ಹೇಳ್ತೀನಿ. ನಾನು ಯಾವತ್ತೂ ನಿನ್ನ ಸ್ನೇಹ ಬಿಡುಲ್ಲ. ನಿಂಗೆ ಕಷ್ಟ ಸುಖ ಅಂದ್ರೆ ನನ್ನ ವಾಂಛಲ್ಯ ಹೋಗುಲ್ಲ. ಆದರೆ ನಾವಿಬ್ಬರೂ ಮದುವೆಯಾಗುವ ಕಲ್ಪನೆ ಸಹ ಸಾಧ್ಯವಿಲ್ಲ.'

'ಸತ್ಯ, ನೀನು ಕೋಪದ ಮಾತೇ ಆಡ್ತಿದೀಯ.'

'ಇಲ್ಲ. ಕೋಪ ಮಾಡ್ಕಬ್ಯಾಡ ಅಂತ ನಾನೇ ನಿಂಗೆ ಆಗಾಗೆ ಬುದ್ಧಿ ಹೇಳ್ತಿದ್ದೆ. ನಾನು ಕೋಪದಲ್ಲಿಲ್ಲ. ಆಗ ಇದ್ದ ಮದುವೆಯ ಭಾವನೆ ಈಗ ಯಾಕೆ ಇಲ್ಲ? ಕೋಪದಿಂದ ಅದು ನಾಶವಾಗಿದೆ ಅಂತ ನೀನು ಅನ್ನಬೌದು. ಆದರೆ ನನ್ನೊಳಗೆ ಏನೇನು ನಡೆದಿದೆ ಅನ್ನುವುದು ನಿನಗೆ ಪೂರ್ಣ ಕಲ್ಪನೆ ಇಲ್ಲ. ನಡೆದಿರೂ ಘಟನೆಗಳನ್ನ ಕಥೆ ಹೇಳಿದ ಹಾಗೆ ಹೇಳಬಹುದು. ಆದರೆ ನನ್ನ ಮನಸ್ಸಿನಲ್ಲಿ, ಬುದ್ಧಿಯಲ್ಲಿ, ಭಾವನೆಯಲ್ಲಿ, ಎಂತೆಂತಹ ಇತಿಹಾಸವೇ ನಡೆದುಹೋಯಿತು ಅನ್ನೂದನ್ನ ಪೂರ್ತಿಯಾಗಿ ಬಿಡಿಸಿಹೇಳುಕ್ಕೆ ನನಗೇ ತಿಳಿಯುಲ್ಲ. ಹೇಳಿದ್ರೂ ನಿನಗೆ ಸದ್ಯದಲ್ಲಿ ಅರ್ಥವಾಗುಲ್ಲ. ನಾವು ಮದುವೆಯಾಗೂದು ಬ್ಯಾಡ ಅಂತ ನೀನು ಬರೆದ ಕಾಗದ ಬಂದದ್ದು ಮೊದಲ ಘಟನೆ. ಅದು ತುಂಬ ಜೋರಿನ ಘಟನೆ ನಿಜ. ಆದರೆ ಆಮೇಲೆ ಅದಕ್ಕಿಂತ ಹೆಚ್ಚು ಜೋರಿನ ಘಟನೆಗಳೇ ಒಂದಾದ ಮೇಲೆ ಒಂದರಂತೆ ನಡೆದುವು.'

'ಕೆಲಸ ಕಳ್ಕಂಡು ನೀನು ಜವಳಿ ಅಂಗ್ಡೀಲಿ ಸೇರಿದ್ದೆ. ಆಗ ನಿನಗೆ ಸಹಾಯ ಮಾಡಬೇಕು ಅಂತ ನನ್ನ ಮನಸ್ಸು ಕುದಿಯಿತು. ಆದರೆ ನಿನ್ನನ್ನ ಕಾಣುಕ್ಕೆ ಧೈರ್ಯವಿಲ್ಲದೆ ಬರಲಿಲ್ಲ.'

'ನೀನು ಬಂದಿದ್ರೂ ನಾನು ಸಹಾಯ ತಗೋತಿರಲಿಲ್ಲ. ಅದೂ ಒಂದು ಮುಖ್ಯ ಘಟನೆ ನಿಜ. ಆದರೆ ಅದಕ್ಕಿಂತ ಹೆಚ್ಚು ಜೋರಿನದು, ಹೆಚ್ಚು ಚನ್ನಾಗಿ ಕಣ್ಣು ತೆರಿಸುವಂಥದು ಆಯ್ತು. ನಮ್ಮ ತಂದೇವೇ ಒಂದು ದೊಡ್ಡ ಪ್ರಪಂಚ ತೋರಿಸಿತು. ಶೂದ್ರ ಹೆಂಗಸಿನ ಹಾಗೆ ನಾನು ಹೊಲಗದ್ದೇಲಿ ಕೆಲಸ ಮಾಡ್ತಿದೀನಲ್ಲ, ಅದನ್ನ ಶುರು ಮಾಡಿ ಅನುಭವವಾದಾಗ ಹೊಸ ಸತ್ಯ ತಿಳೀತು. ಈಗ ನಾನು ಅರ್ಥ ಮಾಡ್ಕಂಡಿರೂದ್ರಲ್ಲಿ ಪ್ರೀತಿ, ಮದುವೆ, ಮಕ್ಕಳು, ಅನ್ನೂದಕ್ಕೆ ಹೆಚ್ಚು ಮಹತ್ವವೇ ಕಾಣ್ತಿಲ್ಲ. ಅದ್ದರಿಂದ ನಾನು ಈಗ ನಿನ್ನ ಮದುವೆಯಾದರೂ ನೀನು ಸುಖವಾಗಿರುಲ್ಲ.'

ಶ್ರೀನಿವಾಸ ದಂಗುಬಡಿದವನಂತೆ ಅವಳ ಮುಖವನ್ನೇ ನೋಡುತ್ತಾ ಕುಳಿತ. ಅವಳು ಮುಂದುವರಿದಳು: 'ಆದರೆ ನಿನ್ನ ಸ್ವಭಾವ ನನಗೆ ಗೊತ್ತಿದೆ. ನಿನಗೆ ಮನೆ ಬೇಕು; ಹೆಂಡತಿ ಬೇಕು; ಮಕ್ಕಳು ಬೇಕು. ಇವೆಲ್ಲ ತಪ್ಪು ಅಂತ ನಾನು ಹೇಳುಲ್ಲ. ಇವೇ ಇಲ್ಲದಿದ್ದರೆ ಪ್ರಪಂಚ ಹ್ಯಾಗೆ ನಡೆಯುತ್ತೆ? ಆದ್ದರಿಂದ ನೀನು ಮದುವೆಯಾಗಬೇಕು. ಮೀರಾನ ನೀನೇ ನೋಡಿದೀಯಲ: ಅವಳ ಮುಖಕಟ್ಟು ಮೈಕಟ್ಟುಗಳ ಮುಂದೆ ನಾನು ಏನೇನೂ ಅಲ್ಲ. ನನ್ನಷ್ಟು ಕಪ್ಪೂ ಅಲ್ಲ. ವೇಷ ಭೂಷಣಗಳಲ್ಲಿ ಆಶೆ ಅಕರಾಸ್ಥೆ ಇವೆ. ನಯ, ವಿನಯ, ಸೂಕ್ಷ್ಮ ಎಲ್ಲ ಇವೆ. ಹವಳ ಪೋಣಿಸಿದ ಹಾಗೆ ಗುಂಡಗೆ ಕನ್ನಡ ಇಂಗ್ಲಿಷ್ ಎರಡನ್ನೂ ಬರೀತಾಳೆ. ತುಂಬ ಚುರುಕಾದ ಬುದ್ಧಿಶಕ್ತಿ. ತುಂಬ ಓದ್ತಾ ಇರ್ತಾಳೆ. ಒಂದು ಥರಕ್ಕೆ ನನ್ನ ವಿದ್ಯಾರ್ಥಿನಿ. ಓದಿಸಿದರೆ ಫಸ್ಟ್‌ಕ್ಲಾಸಿನಲ್ಲಿ ಎಂ.ಎ. ಓದಿಯಾಳು. ಇಷ್ಟೆಲ್ಲ ಇದ್ದರೂ ಮೃದು ಗುಣ. ಗಂಡನೇ ಆಗಲಿ ಯಾರೇ ಆಗಲಿ ಹೇಳಿದ್ದಕ್ಕೆ ಪ್ರತಿ ಹೇಳಿ ಜಗಳ ಕಾಯುವ ಸ್ವಭಾವವಲ್ಲ. ನಿನಗೆ ತಕ್ಕ ಹೆಂಡತಿಯಾಗ್ತಾಳೆ. ನಾನು ಬರೀ ತಮಾಷೆಗೆ ಅನ್ನಲಿಲ್ಲ.'

ಅವನು ಮೌನವಾಗಿ ಕುಳಿತಿದ್ದ. ಅವಳ ಕೈ ಇನ್ನೂ ಅವನ ಕೈಯಲ್ಲೇ ಇತ್ತು. 'ನಾನು ಬರೀ ಮಾತಾಡ್ತಾ ಇದೀನಿ ನೋಡು. ಬಾಯಾರುತ್ತೆ. ನೀರು ಕುಡೀಬೇಕು. ಸ್ವಲ್ಪ ಕೈಬಿಡು' – ಎಂದು, ಸಡಿಲವಾಗಿದ್ದ ಅವನ ಕೈಯಿಂದ ತನ್ನ ಕೈಯನ್ನು ತೆಗೆದುಕೊಂಡು ಅಡಿಗೆಮನೆಗೆ ಹೋಗಿ ಚೊಂಬಿನ ಮೇಲೆ ದಬ್ಬ ಇಟ್ಟಿದ್ದ ಲೋಟಕ್ಕೆ ನೀರು ಬಗ್ಗಿಸಿಕೊಂಡು 'ನಿನಗೆ ಬೇಕೆ?' ಎಂದು ಕೇಳಿದಳು. ಅವನು ಬೇಡವೆಂದು ತಲೆಯಾಡಿಸಿದ. ತಾನು ಲೋಟವನ್ನು ಪೂರ್ತಿಯಾಗಿ ಕುಡಿದು, ಅದನ್ನು ಗಲಬರಿಸಿ ಒಲೆಯ ಪಕ್ಕದ ಬಚ್ಚಲಿಗೆ ಚೆಲ್ಲಿ, ಚೊಂಬಿನ ಮೇಲೆ ದಬ್ಬ ಇಟ್ಟು ಹೊರಗೆ ಬಂದು, ಅವನು ಕೂತಿದ್ದ ಗೋಡೆಯ ಎದುರಿನ ಗೋಡೆಯ ಪಡಕ್ಕೆ ಒಂದು ಸಣ್ಣ ಮಂದಲಿಗೆ ಹಾಕಿಕೊಂಡು ಕುಳಿತಳು. ಅವನು ಒಂದು ಸಲ ನಿಧಾನವಾಗಿ ನಿಟ್ಟುಸಿರಿಟ್ಟ. ಅವಳು ಹೇಳಿದಳು: 'ಅವತ್ತು ಬಂದಿದ್ದಾಗ ನಿಮ್ಮ ತಂದೆಯೂ ಜಾತಿ ಗೀತಿ ಸುಳ್ಳು ಅಂದ್ರು. ಅಂದ್ರೆ ಈ ಮದುವೆಗೆ ಅವರು ಒಪ್ಪೋದು ಕಷ್ಟವಿಲ್ಲ. ಯಾಕೆ ಒಪ್ಪಬಾರ್ದು? ಚೆಟ್ಟಿಯ್ಯನವರೇನು ಕಡಿಮೆಯಿಲ್ಲ. ಎಂ.ಎಲ್.ಎ. ಆಗಿದಾರೆ. ಸ್ವಂತ ಜಮೀನು ಸಂಪಾದಿಸಿದಾರೆ. ಅವರ ಮಗನಿಗೆ ಒಳ್ಳೇ ವ್ಯಾಪಾರವಿದೆ. ಒಂದು ಪಕ್ಷ ಒಪ್ಪಲಿಲ್ಲ: ಇಂಥ ಮದುವೆಯಲ್ಲಿ ನಿನಗೆ ವಿಶ್ವಾಸವಿದ್ದರೆ, ಈಗ ಹೇಳಿದೆಯಲ್ಲ ವಿಲ್‌ಪವರ್ ಇದೆ ಅಂತ, ಅದು ಇದ್ದರೆ ನಿನ್ನ ಪಾಡಿಗೆ ನೀನು ಅವಳನ್ನು ಮದುವೆ ಮಾಡಿಕೊ. ಸುಧಾರಣೆ ಯಾವತ್ತೂ ಹಿರಿಯರಿಂದ ತಾನಾಗಿಯೇ ಆಗುಲ್ಲ. ಕಿರಿಯರಿಂದಲೇ

ಏನಾದರೂ ಸಾಧ್ಯ. ಅದರಲ್ಲೂ ಸ್ವತಂತ್ರವಾಗಿ, ಪ್ರೇಮವಿವಾಹ ಪದ್ಧತಿ ಬೆಳೆಯದೆ ಜಾತಿರೂಢಿ ಒಡೆಯುಲ್ಲ.'

ಇಷ್ಟು ಹೇಳಿ ಅವಳು ಸುಮ್ಮನೆ ಕುಳಿತಳು. ಶ್ರೀನಿವಾಸ ಹೊರ ಬಾಗಿಲಿನ ಕಡೆ ನೋಡುತ್ತಿದ್ದ. ಅವನಿಂದ ಅವಳು ತಕ್ಷಣ ಯಾವ ಉತ್ತರವನ್ನೂ ನಿರೀಕ್ಷಿಸುತ್ತಿರಲಿಲ್ಲ. ಹತ್ತು ನಿಮಿಷದ ನಂತರ, 'ಕಾಫಿ ಮಾಡ್ತೀನಿ' ಎಂದು ಹೇಳಿ ಅಡಿಗೆಮನೆ ಹೊಕ್ಕಳು. ಎರಡು ಬಟ್ಟಲು ಮಾಡಿ ಒಂದು ಬಟ್ಟಲನ್ನು ಅವನ ಮುಂದೆ ಇಟ್ಟು ಇನ್ನೊಂದನ್ನು ತಾನು ಹಿಡಿದುಕೊಂಡು, ತಾನು ಮೊದಲು ಕೂತಿದ್ದ ಸಣ್ಣ ಮುಂದಲಿಗೆಯ ಮೇಲೆ ಕುಳಿತಳು. ಕಾಫಿ ಕುಡಿದ ಮೇಲೆ ಶ್ರೀನಿವಾಸ, 'ನಾನು ಹೋಗ್ತೀನಿ' ಎಂದು ಎದ್ದ. 'ಇರು. ಹೋಗುವಂತೆ' – ಅವಳೆಂದಳು. 'ಇಲ್ಲ, ಈಗ ಹೋಗ್ತೀನಿ' – ಎಂದು ಅವನು ನಿಂತೇಬಿಟ್ಟ. ಕಳಿಸಿ ಬರಲು ಅವಳೂ ಅವನ ಸಂಗಡ ಹೊರಟಳು. ಬಾಗಿಲಿನಿಂದ ಹೊರಗೆ ಬಂದಿದ್ದವಳು ಜ್ಞಾಪಿಸಿಕೊಂಡು, 'ಒಂದು ನಿಮಿಷ ಇರು' ಎಂದು ಒಳಗೆ ಬಂದಳು. ಕೋಣೆಗೆ ಹೋಗಿ, ರಂಗಮ್ಮ ತನಗೆ ಹಾಕಿದ್ದ ಚಿನ್ನದ ಸರವನ್ನು ಬಲಗೈಲಿ ಹಿಡಿದು ಬಂದು ಅವನ ಮುಂದೆ ಹಿಡಿದು, 'ಇದ ತಗ. ನಿಮ್ಮ ತಾಯಿ ಇಲ್ಲಿ ಮರೆತುಹೋಗಿದ್ದರು' ಎಂದಳು.

'ಇಲ್ಯಾಕೆ ಮರೆತರು?' – ಅವನು ಕೇಳಿದ.

'ಇದ ಜೇಬಿನಲ್ಲಿಟ್ಟುಕೊ, ಕ್ವಾ. ಆಮೇಲೆ ಹೇಳ್ತೀನಿ' – ಎಂದು ಅವನ ಕೈ ಹಿಡಿದು ಸರವನ್ನು ಇಟ್ಟು ಹೇಳಿದಳು: 'ಸೊಸೆಗೆ ಅಂತ ನಿಮ್ಮಮ್ಮ ನನ್ನ ಕೊರಳಿಗೆ ಹಾಕಿದರು. ನಾನು ನಿನ್ನ ಕೈಲಿ ಅಂದ ವಿಷಯಾನೆಲ್ಲ ಹೇಳಿದರೆ ಅವರಿಗೆ ತಿಳಿಯೂದೂ ಇಲ್ಲ; ಪ್ರಯೋಜನವೂ ಇಲ್ಲ. ವಾಪಸು ಕೊಡುಕ್ಕೆ ಹೋದರೆ ಕೇಳಲಿಲ್ಲ. ಎಷ್ಟಾದರೂ ಸೊಸೆಗೆ ಹಾಕುವ ಸರ. ಇದನ್ನ ನೀನೇ ಮೀರಾಳಿಗೆ ಹಾಕು.'

'ನಿನ್ನ ಮಾತೇ ನೀನು ಆಡ್ತಿದೀಯ.'

'ನೋಡು, ಒಂದು ಮಾತು' – ಸತ್ಯ ಗಂಭೀರಳಾಗಿ ಆತ್ಮಮಗ್ನಳಾದವಳಂತೆ ಹೇಳಿದಳು: 'ಪ್ರೀತಿ, ಪ್ರೇಮ, ಅನ್ನೂದು ಇನ್ನೊಬ್ಬರ ಸಲಹೆ ಸೂಚನೆಯ ಪ್ರಕಾರ ಹುಟ್ಟುಲ್ಲ. ಈಗ ನಾನು ಹೇಳಿದೆ ಅಂತ ನಿನಗೆ ಅವಳ ಮೇಲೆ ಪ್ರೀತಿ ಹುಟ್ಟುಲ್ಲ ಅಂತ ನನಗೆ ಗೊತ್ತಿದೆ. ಆದರೆ ನಮ್ಮ ದೇಶದಲ್ಲಿ ಪ್ರೀತಿ ಮಾಡಿ ಮದುವೆಯಾಗೂ ಅವಕಾಶ, ಪದ್ಧತಿ ಎಲ್ಲಿದೆ, ಎಲ್ಲಿ ಬೆಳೆದಿದೆ? ಪ್ರೇಮವಿವಾಹ ಪದ್ಧತಿ ಬೆಳೆದರೆ ನಮ್ಮ ಜಾತಿ ಹೋಗುತ್ತೆ, ವರದಕ್ಷಿಣೆ ಅಥವಾ ಇನ್ನೊಂದು ಅನುಕೂಲ ಹೋಗುತ್ತೆ ಅಂತ ತಾನೇ ಜನ ಹೆದರೂದು? ಈಗ ನೀನು ಹ್ಯಾಗೂ

ಬೇರೆಯೋರು ನಿಶ್ಚಯ ಮಾಡಿದ ಮದುವೆ ಮಾಡ್ಕಳೋನು. ಮೀರಾಳನ್ನ ಮಾಡ್ಕ. ಅವಳು ತಕ್ಕ ಕನ್ಯೆ ಅಂತ ನಾನು ಅಂತಃಕರಣಪೂರ್ವಕ ಹೇಳ್ತಿದೀನಿ. ಇದರ ಮೇಲೆ ನಿನ್ನಿಷ್ಟ.'

ಹೊಳೆಬಾಗಿಲಿನ ದಡದಲ್ಲಿ ಬಿಸಿಲಿನಲ್ಲಿ ನಿಂತಿದ್ದ ಕಾರಿನ ಬಾಗಿಲಿನ ಹ್ಯಾಂಡಲ್ ಕೂಡ ಕಾದುಹೋಗಿತ್ತು. ಅದನ್ನು ತೆಗೆದು ಸ್ಟೀರಿಂಗ್ ಜಾಗದಲ್ಲಿ ಕುಳಿತು ಶ್ರೀನಿವಾಸ ಕೇಳಿದ: 'ಸತ್ಯ, ನಿನ್ನ ಮದುವೆ ವಿಷಯದಲ್ಲಿ ಯಾವಾಗಲೂ ಬದಲಾವಣೆ ಇಲ್ಲವೇನು?'

'ಎಲ್ಲಾನೂ ಆಗಲೇ ಹೇಳಿದೆನಲ್ಲ. ಆದರೆ ಒಂದು ವಿಷಯ ನಂಬು, ನನಗೆ ನಿನ್ನ ಮೇಲೆ ತುಂಬ ಸ್ನೇಹವಿದೆ. ತುಂಬ ಅಂತಃಕರಣವಿದೆ. ನನ್ನನ್ನ ದೂರ ಮಾಡಿ ಇರಬೇಡ. ಆಗಾಗ್ಗೆ ಬರ್ತಾ ಇರು. ನಿನಗೆ ಯಾವ ವಿಷಯದಲ್ಲಿ ಕಷ್ಟ ಬಂದರೂ ನನ್ನ ಕೈಲಾದ್ದು ಮಾಡ್ತೀನಿ, ಪ್ರೀತಿಯಿಂದ ಮಾಡ್ತೀನಿ' – ಎಂದು ಕೈನೀಡಿ ಅವನ ಬಲಗೈಯನ್ನು ಬಿಗಿಯಾಗಿ ಹಿಡಿದು ಹೇಳಿದಳು. ಅವಳ ಮುಖವನ್ನೇ ನೋಡುತ್ತಿದ್ದ ಅವನಿಗೆ ಅವಳ ಕಣ್ಣು ಹನಿಗೂಡುತ್ತಿರುವುದು ಕಾಣಿಸಿತು. ಅವನ ಕಣ್ಣುಗಳೂ ಹಾಗೆಯೇ ಆದುವು. ಅವನು, 'ನಾನು ಹೊರಡ್ತೀನಿ' – ಎಂದು ಸ್ಟಾರ್ಟ್ ಮಾಡಿದ.

ಗಾಡಿಯ ಜಾಡಿನಲ್ಲಿ ಹಿಂದು ಮುಂದೆ ಮಾಡಿ ಕಾರನ್ನು ವಾಪಸು ತಿರುಗಿಸುವ ತನಕ ಅವನನ್ನೇ ನೋಡುತ್ತ ಸತ್ಯ ನಿಂತಿದ್ದಳು. ಸರಿಯಾಗಿ ತಿರುಗಿ, ನಂತರ ಅದನ್ನು ವೇಗಗೊಳಿಸಿದಾಗ ಕೈ ಎತ್ತಿ ಆಡಿಸಿದಳು.

## ೩

ಶ್ರೀನಿವಾಸ ಊರೊಳಕ್ಕೆ ಹೋಗಲೇ ಇಲ್ಲ. ಬಸ್‌ಸ್ಟ್ಯಾಂಡಿನ ಹತ್ತಿರ ದೊಡ್ಡ ರಸ್ತೆಗೆ ಬಂದವನು ಗಾಡಿಯನ್ನು ನೇರವಾಗಿ ತುಮಕೂರಿಗೆ ಓಡಿಸಿದ. ಅಷ್ಟರಲ್ಲಿ ತಲೆ ಶೂನ್ಯವಾಗಿತ್ತು. ನಿರುತ್ಸಾಹ ನಿರ್ವೇದಗಳು ತುಂಬಿಹೋಗಿದ್ದುವು. ಕೋಣೆಯ ಬಾಗಿಲು ಹಾಕಿಕೊಂಡು ಮಲಗಿದ. ತಂದೆ ಬಂದು ಹೇಳಿ ಹೋದನಂತರ ತನ್ನಲ್ಲುಂಟಾಗಿದ್ದ ನಿರೀಕ್ಷೆಯನ್ನು ಸತ್ಯ ಮಣ್ಣುಗೂಡಿಸಿದ್ದಳು. ಇದೆಂತಹ ಕ್ರೌರ್ಯ ಅವಳದು! – ಎಂದುಕೊಂಡ. ಮಂಚದ ಮೇಲೆ ಮಲಗಿದ್ದವನು ಬಲ ಪಕ್ಕಕ್ಕೆ ಹೊರಳಿದಾಗ ಪ್ಯಾಂಟಿನ ಜೇಬಿನಲ್ಲಿದ್ದ ಚಿನ್ನದ ಸರ ಒತ್ತಿತು. ಅದನ್ನು ತೆಗೆದು ಒಂದು ನಿಮಿಷ ಕೈಯಲ್ಲಿ ಹಿಡಿದುಕೊಂಡು ನೋಡಿದ. ಅವಳು ಇದನ್ನು ಹ್ಯಾಗೆ ಬ್ಯಾಡ ಅಂದಳು! – ಎಂದು ಹುಸಿನಕ್ಕು, ಮಂಚದ ಕೆಳಗಿದ್ದ

ಟ್ರಂಕಿನ ಬೀಗ ತೆಗೆದು ಅದರೊಳಕ್ಕೆ ಹಾಕಿ ಮುಚ್ಚಿ ಮತ್ತೆ ಬೀಗ ಹಾಕಿದ.

ಅವನು ರಾತ್ರಿ ಊಟ ಮಾಡಲಿಲ್ಲ. ಎಷ್ಟು ಹೊತ್ತಾದರೂ ನಿದ್ರೆ ಬರಲಿಲ್ಲ. ಬೇಸರ – ಪ್ರಚಂಡ ಬೇಸರ. ಎಲ್ಲವೂ ಅರ್ಥಶೂನ್ಯವಾಗಿತ್ತು. ಎದ್ದು ದೀಪ ಹಾಕಿ ಬೀರಿನ ಶೀಶೆ ಮತ್ತು ಲೋಟಗಳನ್ನು ತೆಗೆದುಕೊಂಡು ಮಂಚದ ಮೇಲೆ ಕುಳಿತ. ಲೋಟಕ್ಕೆ ಬಗ್ಗಿಸಿ ಒಂದು ಹೀರು ಕುಡಿಯುವಷ್ಟರಲ್ಲಿ ಸಂಕಲ್ಪಶಕ್ತಿಯ ಬಗೆಗೆ ಸತ್ಯ ಹೇಳಿದ ಮಾತಿನ ನೆನಪಾಯಿತು. ತಾನಿನ್ನು ಕುಡಿಯುವುದಿಲ್ಲ, ಸಿಗರೇಟು ಸೇದುವುದಿಲ್ಲ ಎಂದು ಅವಳಿಗೆ ಭಾಷೆ ಇತ್ತಿದ್ದುದೂ ಜ್ಞಾಪಕಕ್ಕೆ ಬಂತು. ಹಾಗಂತ ತಾನು ಭಾಷೆ ಕೊಟ್ಟೆನೋ ಅಥವಾ ಅವಳು ತೆಗೆದುಕೊಂಡಳೋ ಎಂಬ ಜಿಜ್ಞಾಸೆ ಮೂಡಿತು. ಇಬ್ಬರೂ ಕೈಹಿಡಿದುಕೊಂಡಿದ್ದೆವು. ಅವಳು ಹಾಗಂದಳು. ನಾನು ಒಪ್ಪಿಕೊಂಡೆ. ಆದರೆ ಯಾಕೆ ಒಪ್ಪಿಕೊಂಡೆ? ಅವಳು ನನ್ನ ಹೆಂಡತಿಯಾಗ್ತಾಳೆ ಅಂತ. ಅವಳಿಲ್ಲ ಅಂತ ತಾನೆ ನಾನು ಇದನ್ನ ಕುಡೀತಿರೂದು? ಅವಳು ಬರ್ತಾಳೆ ಅನ್ನುವಾಗ ಇದು ಬ್ಯಾಡವೇ ಬ್ಯಾಡ. ಈಗ, ತಾನೇ ಬರದೆ ಇರುವಾಗ, ಕುಡೀಬ್ಯಾಡ ಅನ್ನೊಕ್ಕೆ ಭಾಷೆ ಕೇಳುಕ್ಕೆ ಅವಳಿಗೇನು ಅಧಿಕಾರ? ಅದ್ದರಿಂದ ಕುಡಿಯೂದು ಬಿಡೂದು ನನ್ನಿಷ್ಟ. ನಾನು ಸ್ವತಂತ್ರ – ಎಂದು ಮತ್ತೆ ಎರಡು ಹೀರು ಎಳೆದ. ಆದರೆ ನೆನಪು ಬಂತು: ಇನ್ನು ಕುಡಿಯುಲ್ಲ ಅಂತ ಅವಳ ಮೇಲೆ ತಾನು ಆಣೆ ಹಾಕಿದೆ. ಅವಳು, 'ನನ್ನ ಮೇಲೆ ಆಣೆ ಇಟ್ಟರೆ ಸಾಲದು; ನಿನಗೆ ವಿಲ್‌ಪವರ್ ಇದೆಯೆ? ಅದರ ಮೇಲೆ ಆಣೆ ಇಟ್ಟುಕೊ. ವಿಲ್‌ಪವರ್ ಅಂದರೆ ತಾನೆ ಏನು? ಯಾವುದಾವರೂ ನಂಬಿಕೆಯಲ್ಲಿ ಸದಾ ಮಗ್ನನಾಗಿದ್ದರೆ ಅದರ ಸಾಧನೆಯಲ್ಲಿ ಸಂಕಲ್ಪಶಕ್ತಿ ಬೆಳೆದೇ ಬೆಳೆಯುತ್ತೆ' ಅಂದಳು. ಅವಳ ಮೇಲೆ ನಾನು ಆಣೆ ಇಡಲಿಲ್ಲ, ಇಡುಲ್ಲ. ಅವಳು ನನಗೆ ಏನೆನ್ನಿಸಿಕೊಳ್ಳಬಲ್ಲಳು? ಸ್ನೇಹಿತೆಯಂತೆ. ದೂರವೇ ಇರಲಿ, ಅಹಂಕಾರಿ. ನಾನ್‌ಸೆನ್ಸ್. ನನಗೂ ವಿಲ್‌ಪವರ್ ಯಾಕಿಲ್ಲ? – ಎಂದುಕೊಂಡು ಶೀಶೆಯ ಮುಚ್ಚಳ ಹಾಕಿ ಲೋಟವನ್ನು ಕಿಟಕಿಯಿಂದ ಹೊರಗೆ ಚಲ್ಲಿ ತೆಗೆದಿಟ್ಟುಬಿಟ್ಟ.

ಬೆಳಗಿನ ಜಾವದ ತನಕ ನಿದ್ರೆ ಬರಲಿಲ್ಲ. ಆದರೆ ಸಿಗರೇಟನ್ನೂ ಸೇದದೆ ಹೊರಳಾಡುತ್ತಲೇ ಇದ್ದ. ಬೆಳಗ್ಗೆ ಒಂಬತ್ತೂವರೆಗೆ ಎಚ್ಚರವಾದಾಗ ಎದ್ದು ಮುಖ ತೊಳೆದು ಹೋಟಲಿಗೆ ಹೋಗಿ ತಿಂಡಿ ತಿಂದು ಬಂದ. ಅವಳು ನನ್ನನ್ನ ಮದುವೆಯಾಗುಲ್ಲ. ಆದರೆ ಬೆಟ್ಟಯ್ಯನೋರ ಮಗಳನ್ನ ಮಾಡ್ಕೊ ಅಂತ ಹೇಳುಕ್ಕೆ ಅವಳಿಗೇನು ಅಧಿಕಾರ? ಇವಳೇನನ್ನಿಸ್ಕಬೇಕು ನನಗೆ? ರಾಸ್ಕಲ್. ಮದುವೆ ಯಾಗೂದು ಬಿಡೂದು ನನ್ನಿಷ್ಟ. 'ನಿನ್ನ ಸ್ವಭಾವ ನನಗೆ ಗೊತ್ತಿದೆ. ನಿನಗೆ ಮನೆ ಬೇಕು. ಹೆಂಡತಿ ಬೇಕು. ಮಕ್ಕಳು ಬೇಕು' – ಅಂದಳಲ್ಲ. ಅಷ್ಟು ಗೊತ್ತಿದ್ದವರೆ

ಅವಳೇ ನನ್ನ ಹೆಂಡತಿಯಾಗಬೇಕಾಗಿತ್ತು. ತಾನು ಇಕ್ಕದ ಜೇನ, ಜಗತಿಮನೆ ತೋರಿಸಿದನಂತೆ. ಒದೀಬೇಕು ಇಂಥೋರನ್ನ – ಎಂದುಕೊಂಡ.

ಅವನು ಸಿನಿಮಾಕ್ಕಾ ಹೋಗಲಿಲ್ಲ, ಬೀರೂ ಕುಡಿಯಲಿಲ್ಲ; ಸಿಗರೇಟೂ ಮುಟ್ಟಲಿಲ್ಲ. ಊರಿನಿಂದ ಹೊರಗೆ ಏಳೆಂಟು ಮೈಲಿ ಹೋಗಿ ರಸ್ತೆಯ ಪಕ್ಕದಲ್ಲಿ ಕಾರು ನಿಲ್ಲಿಸಿ ಬಯಲಿನಲ್ಲಿ ಅರ್ಧ ಫರ್ಲಾಂಗ್ ನಡೆದು ಹೋಗಿ ಸುಮ್ಮನೆ ಕುಳಿತು ಬಿಡುತ್ತಿದ್ದ. ಒಂದೊಂದು ದಿನ ಸಿದ್ಧಗಂಗೆಯ ಹತ್ತಿರಕ್ಕೆ ಹೋಗಿ ಕಾರು ನಿಲ್ಲಿಸಿ, ಮಠದ ಭಾಗವನ್ನು ಬಿಟ್ಟು ಬೆಟ್ಟದ ಎಡಭಾಗದಲ್ಲಿ ಹತ್ತಿ ಒಂದು ಬಂಡೆಯ ಮೇಲೆ ಕೂತುಬಿಡುತ್ತಿದ್ದ. ನಿರಾಶೆಗೊಂಡ ನಾಯಕನು ಇಂಥದೇ ಬೆಟ್ಟ, ಇಂಥದೇ ಬಯಲುಗಳಲ್ಲಿ ಒಂಟಿಯಾಗಿ ತಿರುಗುತ್ತಿದ್ದುದನ್ನು ಸಿನಿಮಾಗಳಲ್ಲಿ ನೋಡಿದ ನೆನಪಾಗುತ್ತಿತ್ತು. ಯಾವುವು ಅವು ಎಂದು ಜ್ಞಾಪಿಸಿಕೊಳ್ಳುವನು. ಸಿನಿಮಾಗಳಲ್ಲಿ ತೋರಿಸುವಂಥ ಸೀನರಿ ಈ ನಮ್ಮ ಬಯಲು ನಾಡಿನಲ್ಲೂ ಇಲ್ಲ; ಈ ಬೆಟ್ಟದಲ್ಲೂ ಇಲ್ಲವಲ್ಲ. ಸೀನರಿ ಇರುವುದೆಲ್ಲ ಕಾಶ್ಮೀರದಲ್ಲೇ. ಒಂದು ಸಲ ಅಲ್ಲಿಗೆ ಹೋಗಿ ನೋಡಿಕೊಂಡು ಬರಬೇಕು ಎಂಬ ಬಯಕೆ ಬರುವುದು. ಕಾಶ್ಮೀರಕ್ಕೆ ಹೋದರೆ ಸತ್ಯಳ ಜೊತೆ ಹೋಗಬೇಕು. ಒಬ್ಬನೇ ಏನು ಹೋಗುವುದು? – ಎಂಬ ಕಲ್ಪನೆ ಒಂದು ನಡುವೆಯೇ, 'ಅವಳ ಯೋಚನೆ ಬ್ಯಾಡ. ರಾಸ್ಕಲ್ ತಂದು' ಎಂದು ಮನಸ್ಸನ್ನು ಬೇರೆ ಕಡೆ ತಿರುಗಿಸಿಕೊಳ್ಳುವನು. ಕಾಶ್ಮೀರ ಎಂದರೆ ಕುಮುದಿನಿ ಸರಿ. ಇದ್ದಕ್ಕಿದ್ದಂತೆಯೇ ಕುಮುದಿನಿಯ ನೆನಪಾಯಿತು. ಇವಳ ಯೋಚನೆಯಲ್ಲಿ ಅವಳನ್ನು ಅಲಕ್ಷ್ಯಮಾಡಿದೆ. ಇಲ್ಲದಿದ್ದರೆ ಅವಳು ಸಾಯುತ್ತಿರಲಿಲ್ಲವೇನೊ! ಯಾಕೆ ಸತ್ತಳು? ಅವಳ ಶರೀರವೇ ದುರ್ಬಲ, ಬಸುರಿನ ಭಾರ ತಡಿಯುವ ಶಕ್ತಿಯೇ ಸಾಲದು ಅಂತ ಡಾಕ್ಟರು ಅದೇನೋ ಹೇಳಿದರಂತೆ. ದುರ್ಬಲಳು ಅನ್ನೋದು ನಿಜ. ಆದರೆ ಅವಳ ರೂಪ, ಮಾತು, ಬೆಡಗು ಯಾರಿಗಿದೆ? ಹುಡುಗಿ ಅಂದರೆ, ಹೆಂಗಸು ಅಂದರೆ ಹಾಗಿರಬೇಕು. ಈ ಸತ್ಯ ಯಾಕೆ ಮಾದಿಗಿತ್ತಿ ಹಾಗಿದಾಳೆ, ಕೆಲಸ ಮಾಡಿ ಕೈಯನ್ನು ಒರಟು ಮಾಡ್ಕಂಡಿದಾಳೆ? ಅದೇ ಒಂದು ಜಂಬವೇನೋ! ಆದರೆ ಹೆಂಗಸಿನ ಕೈ ಮೃದುವಾಗಿರಬೇಕು. ಹಿಡಿದರೆ ಅರಳಿದ ಮಲ್ಲಿಗೆಯ ದಂಡೆಯ ಹಾಗೆ ಸಿಕ್ಕಬೇಕು. ಇಲ್ಲದಿದ್ರೆ ಅದೆಂತಹ ಕೋಮಲಾಂಗಿ!

ಏಳೆಂಟು ದಿನ ಅವನ ಮನಸ್ಸನ್ನು ಕುಮುದಿನಿಯ ನೆನಪು ತುಂಬಿಕೊಂಡಿತ್ತು. ಆದರೆ ಮತ್ತೆ ಎರಡು ದಿನದಲ್ಲಿ ಅದು ಮರೆಯಾಯಿತು. ಈಗ ಸತ್ಯಳ ನೆನಪು ಕಾಡುತ್ತಿದೆ. ಮನಸ್ಸು ಭಣಗುಟ್ಟುತ್ತಿದೆ. ಅವಳನ್ನು ನೋಡಬೇಕೆಂಬ ಆಶೆಯಾಗುತ್ತಿದೆ. ಅವಳು ತನ್ನ ಹೆಂಡತಿಯಾಗುವುದಿಲ್ಲವೆಂದು ಅಂತರಂಗಕ್ಕೆ ಖಚಿತವಾದರೂ ಅವಳನ್ನು ಕಾಣುವ, ಅವಳೊಡನೆ ಮಾತನಾಡುವ ಬಯಕೆ ಮಾತ್ರ

ಹೆಚ್ಚು ಹೆಚ್ಚು ಜೀವಗೊಳ್ಳುತ್ತಿದೆ. ಇನ್ನು ಅವಳನ್ನು ಕಾಣಕೂಡದು ಅಲ್ಲಿಗೆ ಹೋಗಕೂಡದು ಎಂದು ನಿರ್ಧರಿಸಿದ. ಆದರೆ ಮೂರು ದಿನದಲ್ಲಿ ಅದು ಕುಸಿದು ಹೋಯಿತು. ಹೆಂಡತಿಯಾಗದಿದ್ದರೂ ಸರಿ, ಎಂದೆಂದಿಗೂ ಸ್ನೇಹಿತೆಯಾಗಿರ್ತೀನಿ ಅಂದಳಲ್ಲ; ಹೋಗಿ ನೋಡಿಕೊಂಡು ಬರಬೇಕೆನಿಸಿತು. ಬೆಳಗ್ಗೆ ತಿಂಡಿ ತಿಂದು ಬಂದು ಕೋಣೆಯಲ್ಲಿ ಮಲಗಿದ. ಈ ದಿನವೇ ಯಾಕೆ ಹೋಗಬಾರದು ಎನಿಸಿತು. ಹಾಗೆಯೇ ಹೊರಳುತ್ತಾ ಎರಡು ಗಂಟೆಯ ಕಾಲ ಮಲಗಿದ್ದ. ಅನಂತರ ಎದ್ದು ಕೋಣೆಗೆ ಬೀಗ ಹಾಕಿ ಕಾರನ್ನು ನಡೆಸಿಕೊಂಡು, ದಾರಿಯಲ್ಲಿ ಸಿಕ್ಕಿದ ಬಂಕಿನಲ್ಲಿ ಪೆಟ್ರೋಲ್ ತುಂಬಿಸಿ ವೇಗವಾಗಿ ಹೊರಟ.

ಹೊಳೆಬಾಗಿಲಿನಲ್ಲಿ ಕಾರು ನಿಲ್ಲಿಸಿ ತೋಟದ ಒಳಗೆ ಬಂದಾಗ ಹನ್ನೆರಡೂವರೆಯ ಹೊತ್ತಾಗಿತ್ತು. ಸತ್ಯಳ ಮನೆಯ ಹತ್ತಿರ ಹೋದಾಗ ಸಿಹಿ ಅಡಿಗೆಯ ವಾಸನೆ ಬರುತ್ತಿತ್ತು. ಒಳಗೆ ಹೋಗುತ್ತಾನೆ: ಅಂಗಳದಲ್ಲಿ ಹವನದ ಬೆಂಕಿ ಇನ್ನೂ ಕೆಂಪಗಿತ್ತು. ಸತ್ಯ ಒಳಕೋಣೆಯಲ್ಲಿ ಏನೋ ಮಾಡುತ್ತಾ ಮಾತನಾಡುತ್ತಿದ್ದಾಳೆ. ಮೀರಾ ಅಡಿಗೆಯ ಮನೆಯಲ್ಲಿದ್ದಾಳೆ. ಹೊರಗೆ ನೆರಳಾದುದನ್ನು ಕಂಡ ಮೀರಾ ಅಡಿಗೆಯ ಬಾಗಿಲಿನಿಂದ ಬಗ್ಗಿ ನೋಡಿದಳು. ಈ ದಿನ ಅವಳು ವಿಶೇಷವಾಗಿ ಅಲಂಕಾರ ಮಾಡಿಕೊಂಡಿದ್ದಳು. ಮಧ್ಯಕ್ಕೆ ಬೈತಲೆ ತೆಗೆದು ಹೆರಳು ಹಾಕಿ ದಪ್ಪ ಮಲ್ಲಿಗೆಯ ದಂಡೆ ಮುಡಿದಿದ್ದಳು. ತೆಳು ನೀಲಿಯ ಬಣ್ಣದ ನೈಲಾನ್ ಸೀರೆಯುಟ್ಟು ಅದಕ್ಕೆ ತಕ್ಕ ರವಿಕೆ ತೊಟ್ಟಿದ್ದಳು. ಇವನನ್ನು ನೋಡಿದ ತಕ್ಷಣ ಅವಳು ಒಳಗೆ ಹೋದಳು. 'ಯಾಕೆ ಮಾತಾಡ್ತಿಲ್ಲ? ಮೀರಾ, ಕೊಳದ ಹತ್ತಿರ ಹೋಗಿದೀ ಏನು?' – ಎಂದು ಸತ್ಯ ಕೋಣೆಯಿಂದ ಕೂಗಿದಳು. 'ಇಲ್ಲ. ನೋಡಿ ಇವರು ಬಂದಿದಾರೆ' – ಮೀರಾ ಎಂದಳು.

ಸತ್ಯ ಹೊರಗೆ ಬಂದು ನೋಡಿ, 'ಅದೃಷ್ಟ ಅಂದರೆ ಹೀಗಿರಬೇಕು' ಎಂದಳು. ಶ್ರೀನಿವಾಸ ಮಾತನಾಡದೆ ಕುಳಿತುಕೊಳ್ಳುತ್ತಿದ್ದ. 'ಕೂತುಕೊಬ್ಯಾಡ. ಹೋಗಿ ಕೊಳದ ಹತ್ತಿರ ಇರುವ ಬಕೇಟಿನಲ್ಲಿ ಕೈಕಾಲು ತೊಳೆದುಕೊಂಡು ಬಾ.'

ಅವನು ಹೋಗಿ ಕೈಕಾಲು ತೊಳೆದು ಬಂದ. ಅಷ್ಟರಲ್ಲಿ ಸತ್ಯ ಅಂಗಳದಲ್ಲಿ ಮೂರು ತಟ್ಟೆ ಹಾಕಿದ್ದಳು. ಮೀರಾ, 'ಎರಡು ಸಾಕು. ನಾನು ಆಮೇಲೆ ಮಾಡ್ತೀನಿ' ಎನ್ನುತ್ತಿದ್ದಳು. ಒಳಗೆ ಹೋಗಿ, ಮೀರಾ ಬೇಡವೆಂದರೂ ಸತ್ಯ ಅನ್ನ ಸಾರು ಸಿಂಜಿಕಾಯಿಯ ಅನ್ನ ಮತ್ತು ಒಲೆಯ ಮೇಲೆ ಕುದಿಯುತ್ತಿದ್ದ ಪಾಯಸದ ಪಾತ್ರೆಗಳನ್ನು ತಂದು ತಟ್ಟೆಯ ಮಧ್ಯದಲ್ಲಿ ಇಟ್ಟಳು. ಒಳಗೆ ಅರೆಯುವ ಕಲ್ಲಿನ ಮೇಲೆ ಅರೆದು ಪುಡಿ ಮಾಡಿದ ಏಲಕ್ಕಿಯನ್ನು ತಂದು ಮೀರಾ ಪಾಯಸಕ್ಕೆ ಹಾಕಿದಳು. ಸತ್ಯ ನೀರಿನ ಚೊಂಬು ಮತ್ತು ಲೋಟಗಳನ್ನು ಇಟ್ಟು

ಶ್ರೀನಿವಾಸನನ್ನು ಒಂದು ತಟ್ಟೆಯ ಮುಂದೆ ಕೂರಿಸಿದಳು. ಎದುರಿನ ಒಂದರ ಮುಂದೆ ತಾನು ಕೂತು, 'ಬಾ ಮೀರಾ' ಎಂದು ಕರೆದರೆ ಅವಳು ಸಂಕೋಚ ಪಟ್ಟು ಒಳಗೇ ನಿಂತಿದ್ದಳು. ಸತ್ಯ ಹೋಗಿ ರಟ್ಟೆ ಹಿಡಿದು ಕರೆತಂದು ಕೂರಿ ಬೇಕಾಯಿತು.

'ಅದೇನಿವತ್ತು ಪಾಯಸ?' – ಶ್ರೀನಿವಾಸ ಕೇಳಿದ.

'ನೀನೂ ಮೀರಾ ಜೊತೇಲಿ ಊಟ ಮಾಡಲಿ ಅಂತ' – ಎಂದ ಸತ್ಯ ತತ್ ಕ್ಷಣವಲ್ಲಿ ತನ್ನ ಮಾತನ್ನು ತಾನೇ ನುಂಗಿಕೊಂಡಳು. ಆದರೆ ಪೆಚ್ಚು ತಿಳಿಯದಂತೆ, 'ಒಬ್ಬ ಮಂತ್ರಿಯ ಮಗ. ಇನ್ನೊಬ್ಬಳು ಎಂ.ಎಲ್.ಎ. ಮಗಳು. ಪಾಯಸ ಇಲ್ಲದೆ ರಾಗಿ ಮುದ್ದೆ ತಿಂತೀರಾ?' – ಎಂದಳು.

ಮೀರಾ ಮಾತನ್ನೇ ಆಡಲಿಲ್ಲ. ಎಡಮುಂಡಿಯ ಕೆಳಕ್ಕೆ ಬರುವಂತೆ ಮುಖ ವನ್ನು ಬಗ್ಗಿಸಿಕೊಂಡೇ ಊಟ ಮಾಡುತ್ತಿದ್ದಳು. ತುಂಬು-ಕೂದಲಿನ ಮಧ್ಯದಲ್ಲಿ ತೆಗೆದ ಸ್ಪಷ್ಟವಾದ ಬೈತಲೆ ಮತ್ತು ಅದರ ಹಿಂದೆ ಹೆರಳಿನ ಮೇಲೆ ವೃತ್ತಾಕಾರ ದಲ್ಲಿ ಕೂತಿದ್ದ ದಪ್ಪ ಮಲ್ಲಿಗೆಯ ದಂಡೆಗಳು ಮಾತ್ರ ಕಾಣುತ್ತಿದ್ದುವು. ಅವಳು ಸರಿಯಾಗಿ ಊಟವನ್ನೂ ಮಾಡುತ್ತಿರಲಿಲ್ಲ. ಸತ್ಯಳೇ ಬಲವಂತ ಮಾಡಿ ಬಡಿಸಿ ದಾಗ, ಬೇಡವೆಂದು ಗಟ್ಟಿಯಾಗಿ ಹೇಳುವುದಕ್ಕೂ ಸಂಕೋಚಪಟ್ಟುಕೊಳ್ಳುತ್ತಿ ದ್ದಳು.

ಶ್ರೀನಿವಾಸನಿಗೆ ಸತ್ಯ ಹೇಳಿದಳು: 'ಮೀರಾ ನಾಳೆ ಬೆಂಗಳೂರಿಗೆ ಹೋಗ್ತಾಳೆ ಬೇಸಿಗೆ ರಜ ಕಳೀತಲ್ಲ. ಅದಕ್ಕೆ ಜೊತೇಲಿ ಊಟ ಮಾಡಾಣ ಅಂತ ಪಾಯಸ ಮಾಡಿದೆವು. ಯಾಕೆ ನೀನು ಸರಿಯಾಗಿ ಊಟ ಮಾಡ್ತಿಲ್ಲ?'

'ನಿಮ್ಮಿಬ್ಬರಿಗೆ ಅಂತ ಮಾಡಿದ್ದ ಅಡಿಗೆ. ಜೊತೆಗೆ ನಾನೂ ಬಂದೆ.'

'ಏನೂ ಯೋಚನೆ ಮಾಡಬ್ಯಾಡ. ಚಿತ್ರಾನ್ನ ಅಮುಕಿ ಅಮುಕಿ ತುಂಬಿದೆ ಇನ್ನಿಬ್ಬರಿಗಾದರೂ ಸಾಕಾಗುತ್ತೆ. ಅಡಿಗೆ ಹ್ಯಾಗಿದೆ ಹೇಳು.'

'ತುಂಬ ಚನ್ನಾಗಿದೆ.'

'ಮಾಡಿದೋಳು ಮೀರಾ' – ಎಂದು ಅವನ ಮುಖ ನೋಡಿ ನಕ್ಕಳು. ಅವನಿಗೆ ಕಸಿವಿಸಿಯಾಯಿತು.

ಊಟವಾದ ಮೇಲೆ ಮೀರಾ, ಸತ್ಯ, ಇಬ್ಬರೂ ಸೇರಿ ಪಾತ್ರೆಗಳನ್ನು ತೆಗೆದಿಟ್ಟು ತಟ್ಟೆ ತೊಳೆದು ನೆಲ ತೊಳೆದು ಒರೆಸಿದರು. ಮೀರಾ ಮನೆಗೆ ಹೋಗಲು ಹೊರಟಳು. ವಾಸು ಬಂದದ್ದರಿಂದ ಅವಳು ಸಂಕೋಚಪಟ್ಟುಕೊಂಡು, ಊಟವಾದ ತಕ್ಷಣ ಹೊರಟಿದ್ದಾಳೆಂದು ಶ್ರೀನಿವಾಸ ಅರ್ಥ ಮಾಡಿಕೊಂಡ. ಆದರೆ ಬಂದದ್ದಾಗಿದೆ ಎಂದು ಸುಮ್ಮನಾದ. ಹೊರಗೆ ಬಿಸಿಲು ಸುಡುತ್ತಿತ್ತು. ಮೀರಾ ತಾನು ಹೊರಡು

ವುದಾಗಿ ಸತ್ಯಳಿಗೆ ನಮಸ್ಕರಿಸಲು ಬಾಗಿದಳು.

'ಇದೆಲ್ಲ ಏನು ಮಾಡ್ತೀಯ?' – ಎಂದು ಸತ್ಯ ಅವಳ ಭುಜ ಹಿಡಿದು ತಡೆದಳು. ಅನಂತರ ಮೀರಾ ಒಂದು ಚಿಟಕೆ ಹವನದ ಭಸ್ಮವನ್ನು ತೆಗೆದು ಭ್ರೂಮಧ್ಯಕ್ಕೆ ಇಟ್ಟುಕೊಂಡು ಅವನ ಕಡೆ ತಿರುಗಿ, 'ನಮಸ್ತೆ' ಎಂದು ಹೇಳಿ ಹೊರಟಳು. 'ಹೊರಗೆ ಕಾರಿದೆ, ಮನೆಗೆ ಮುಟ್ಟಿಸಿ ಬರಲೆ?' – ಶ್ರೀನಿವಾಸ ಕೇಳಿದ. 'ಬ್ಯಾಡಿ. ಗದ್ದೆ ಬದೂನಲ್ಲಿ ಹತ್ತಿರವಾಗುತ್ತೆ' – ಎಂದು ಹೇಳಿ ಅವಳು ಹೊರಗೆ ಹೋದಳು. ಸ್ವಲ್ಪ ದೂರ ಕಳಿಸಿ ಬರಲು ಸತ್ಯಳು ಜೊತೆಯಲ್ಲಿ ಹೋದಳು.

ಶ್ರೀನಿವಾಸ ಸುಮ್ಮನೆ ಜಂತೆಯನ್ನು ನೋಡುತ್ತಾ ಕುಳಿತಿದ್ದ. ಇಲ್ಲಿಗೆ ಬಂದೆ. ಊಟ ಮಾಡಿದೆ. ಸತ್ಯಳ ಕೈಲಿ ಏನು ಮಾತನಾಡುವುದು? ಆಡಬೇಕಾದ್ದನ್ನೆಲ್ಲ ಆಡಿಯಾಗಿದೆ. ಅಲ್ಲ, ಅವಳೇ ಆಡಿದ್ದಾಳೆ. ಇನ್ನು ಕೇಳುವುದು ಹೇಳುವುದು ಯಾವುದೂ ಉಳಿದಿಲ್ಲ. ಆದರೆ ನಾನ್ಯಾಕೆ ಬಂದೆ? ಬರಬೇಕು ಅನ್ನುವ ಆಶೆ ಯಾಕೆ ಹೀಗೆ ನೂಕಿಕೊಂಡು ಬಂತು? – ಎಂದು ಯೋಚಿಸುತ್ತಾ ಕುಳಿತ. ಹತ್ತು ನಿಮಿಷದಲ್ಲಿ ಸತ್ಯ ವಾಪಸು ಬಂದಳು. ಹೊರಗಿನ ಬಿಸಿಲಿಗೆ ಅವಳ ಮುಖ ಬೆವೆತಿತ್ತು. ಒಳಗೆ ಬಂದು ಅವನ ಎದುರಿನ ಗೋಡೆಯ ಹತ್ತಿರ ಕೂತು ನಕ್ಕು ಹೇಳಿದಳು: 'ಅಂತೂ ನೀನು ಮೀರಾನ ಒಪ್ಪಿದೀಯ ಅಂದ ಹಾಗಾಯ್ತು.'

ಶ್ರೀನಿವಾಸನಿಗೆ ವಿಪರೀತ ಸಿಟ್ಟು ಬಂತು. 'ನೀನು ವಿಪರೀತ ಎಗ್ಗುಸಿಗ್ಗಿಲ್ಲದೆ ಮಾತಾಡ್ತಿದೀಯ' – ಎಂದ.

'ಸಿಟ್ಟಿಗೆ ಎರಡರ್ಥ. ಮನಸ್ಸಿನೊಳಗೆ ಇರೂದ ಯಾರಾದರೂ ಬಿಡಿಸಿ ಹೇಳಿದರೂ ಸಿಟ್ಟು ಬರುತ್ತೆ. ಸುಳ್ಳು ಮಾತಾಡಿದರೂ ಬರುತ್ತೆ. ನಂದು ಸುಳ್ಳು ನಾಲಿಗೆ ಅನ್ನೂದಿದ್ರೆ ಅನ್ನು. ಸ್ನೇಹಿತ ಬೈದರೆ ನಂಗೇನೂ ಸಿಟ್ಟಿಲ್ಲ. ಅವಳನ್ನ ಕಾರಿನಲ್ಲಿ ಕೂರಿಸ್ಕಂಡು ಮನೆಗೆ ಕರಕಂಡು ಹೋಗಿ ಬಿಡ್ತೀನಿ ಅಂದೆಯಲ್ಲ, ಅದಕ್ಕೆ ನಾನು ಹಾಗಂದೆ. ಬರೀ ಶಿಷ್ಟಾಚಾರ್ಯನೋ ಅಥವಾ ಇಂಥಾ ಸುಕುಮಾರ ಹುಡುಗಿ ಬಿಸಿಲಲ್ಲಿ ಹೋಗ್ತಾಳಲ್ಲ ಅನ್ನೂ ಅನುಕಂಪವೊ?'

ಅವನ ಮುಖ ಸಿಟ್ಟಿನಿಂದ ಉರಿಯುತ್ತಿತ್ತು. ಅದನ್ನು ಅವಳು ಗಮನಿಸಿದಳು. ಐದು ನಿಮಿಷ ಅವಳೂ ಗಂಭೀರಳಾಗಿ ಕುಳಿತಿದ್ದಳು. ಅನಂತರ ನಿಧಾನವಾಗಿ ಹೇಳಿದಳು: 'ನಾನು ತಮಾಷೆ ಮಾಡಿದ್ದು ತಪ್ಪು ಅನಿಸುತ್ತೆ. ಕ್ಷಮಿಸು.'

ಅವನು ಅವಳ ಮುಖವನ್ನು ದಿಟ್ಟಿಸಿ ನೋಡಿದ. ಅವಳು ಗಂಭೀರಳಾಗಿ ಅಂತರಂಗದಿಂದ ಆ ಮಾತನ್ನು ಆಡುತ್ತಿದ್ದಳು. ಅವನಲ್ಲಿ ಹೊಸ ಆಶೆಯೊಂದು ಮಿಂಚಿತು. 'ಸತ್ಯ, ಹೀಗೆ ತಮಾಷೆ ಮಾಡಬ್ಯಾಡ' – ಎಂದ.

'ಮಾಡಬಾರದಾಗಿತ್ತು. ಆದರೆ ನಾನು ಅವಳ ಕೈಲಿ ಒಂದು ಮಾತೂ ಆಡಿಲ್ಲ.

ಎಲ್ಲ ಜವಾಬ್ದಾರಿಯೂ ನಿನ್ನದೇ. ನೀನು ನನ್ನ ಸ್ನೇಹಿತ. ನಿನಗೆ ತಕ್ಕ ಹೆಂಡತಿ ಸಿಕ್ಕಬೇಕು ಅಂತ ನನ್ನ ಆಶೆ. ನೀನು ಹ್ಯಾಗೂ ಜಾತಿಭೇದ ನಂಬುಲ್ಲ ಅಂತ ಭಾಷೆ ಕೊಟ್ಟೆ. ಅದಕ್ಕೆ ಹೀಗೆ ಹೇಳಿದೆ. ನಿಮ್ಮ ತಂದೆ ತಾಯಿ ಒಪ್ಪದೇ ಇರಬಹುದು. ಇರಬಹುದೇನು, ಖಂಡಿತ ಒಪ್ಪುಲ್ಲ. ನಿಮ್ಮ ಅಜ್ಜ ಒಪ್ಪುಲ್ಲ. ಇವರ ವಿರೋಧ ಕಟ್ಟಿಕೊಂಡು ನೀನು ಅವಳನ್ನ ಮದುವೆಯಾಗುಲ್ಲ. ರೂಢಿ ಯಾವಾಗಲೂ ಸುಲಭದ ದಾರಿ. ಆ ದಾರೀಲೇ ಹೋಗಿ ಯಾರಾದರೂ ಮಂತ್ರಿಗಳ ಮಗಳನ್ನೋ ಎಂ.ಎಲ್.ಎ. ಮಗಳನ್ನೋ ಮದುವೆಯಾಗಿ ಸುಖವಾಗಿರು.'

ಅವಳ ಈ ಮಾತಿನಿಂದ ಅವನ ನಿರೀಕ್ಷೆ ಮತ್ತು ಆಶೆ ತಲೆಕೆಳಗಾದುವು. ಯಾವ ಮಾತಿಗೆ ಅವಳು ತಮಾಷೆ ಮಾಡಿದ್ದು ತಪ್ಪು ಎಂದಳು? – ಎಂಬ ಗಲಿವಿಲಿಯಲ್ಲಿ ಬಿದ್ದು ತಡಕಾಡಿದ. ಸತ್ಯ ಎಂದಳು: 'ಈ ಮದುವೆಗೆ ಬೆಟ್ಟಯ್ಯನೋರು ಸುಲಭವಾಗಿ ಒಪ್ಪದೇ ಇರಬಹುದು. ಆದರೆ ತೀರ ಹಟ ಹಿಡಿಯುಲ್ಲ. ಯಾಕೆಂದರೆ ಅವರು ಎಷ್ಟಾದರೂ ಕೀಳುಜಾತಿ ಅನ್ನಿಸ್ಕಂಡಿರೋರು. ಆದರೆ ನಿಮ್ಮ ತಂದೆ ತಾಯಿ ಖಂಡಿತ ಒಪ್ಪುಲ್ಲ. ಅವರಿಗೆ ವಿರೋಧವಾಗಿ ನೀನ್ಯಾಕೆ ನಿಲ್ಲಬೇಕು? ಪ್ರೀತಿ ಇದ್ದರೆ ಅದು ಬೇರೆ ವಿಷಯ. ಇಷ್ಟಕ್ಕೂ ನಿನಗೆ ಅವಳ ಮೇಲೆ ಪ್ರೀತಿ ಏನೂ ಇಲ್ಲ. ಪರಸ್ಪರ ತಿಳಿವಳಿಕೆಯೇ ಇಲ್ಲದಿರುವಾಗ ಪ್ರೀತಿ ಹ್ಯಾಗೆ ಹುಟ್ಟುತ್ತೆ? ಪ್ರೀತಿ ಇದ್ದರೂ ಜಾತಿಯ ಕಟ್ಟಳೆ ಕಿತ್ತುಹಾಕೂದು ಅಷ್ಟು ಸುಲಭವಲ್ಲ.' ಈ ಕೊನೆಯ ವಾಕ್ಯದಿಂದ, ತಾನು ಹಿಂದೆ ಅವಳಿಗೆ ಮಾಡಿದ ಅನ್ಯಾಯವನ್ನು ನಿಂದಿಸುತ್ತಿದ್ದಾಳೆಂದು ಅವನು ಅರ್ಥ ಮಾಡಿಕೊಂಡ. ಇಲ್ಲಿಂದ ಎದ್ದು ಹೊರಟುಹೋಗಬೇಕೆನಿಸಿತು. ಆದರೆ ಎದ್ದು ಹೊರಡುವ ಶಕ್ತಿಯನ್ನೇ ಅವಳು ಕಿತ್ತುಕೊಂಡಿರುವಂತೆ ಆಗಿ ಸುಮ್ಮನೆ ಕುಳಿತಿದ್ದ.

ಸತ್ಯಳೂ ಸುಮ್ಮನೆ ಕುಳಿತಿದ್ದಳು. ಸ್ವಲ್ಪ ಹೊತ್ತಿನ ನಂತರ ಎದ್ದು ಒಳಗೆ ಹೋಗಿ ಕಾಫಿ ಮಾಡಿ ಅವನ ಮುಂದೆ ಒಂದು ಲೋಟ ಇಟ್ಟು ತಾನು ಇನ್ನೊಂದು ಲೋಟ ಹಿಡಿದುಕೊಂಡು ಕುಳಿತಳು. ಅವನು ಕುಡಿಯುತ್ತಿರುವಾಗ ಅವಳು, 'ನೀನು ಇಲ್ಲಿಗೆ ಬಂದು ಎಂಟು ಹತ್ತು ದಿನದ ಮೇಲಾಯಿತಲ್ಲವೆ? ನಿನ್ನ ಆರೋಗ್ಯ ಸ್ವಲ್ಪ ಸುಧಾರಿಸಿರುವ ಹಾಗೆ ಕಾಣುತ್ತೆ' ಎಂದಳು.

'ಹೌದಾ?'

'ನನಗೆ ಹಾಗನಿಸುತ್ತೆ.'

'ಸತ್ಯ, ನಾನು ಬೀರು ಸಿಗರೇಟು ಬಿಟ್ಟುಬಿಟ್ಟೆ. ಸಿನಿಮಾಗೆ ಕೂಡ ಹೋಗಿಲ್ಲ.'

'ಹೌದಾ!' ಎಂದು, ಆಶ್ಚರ್ಯ ಮತ್ತು ಮೆಚ್ಚುಗೆಯನ್ನು ವ್ಯಕ್ತಪಡಿಸಿ ಎಂದಳು: 'ನೋಡು, ಮನುಷ್ಯನ ಸಂಕಲ್ಪಶಕ್ತಿಗಿಂತ ಯಾವುದೂ ದೊಡ್ಡದಲ್ಲ.'

'ಅವತ್ತು ಆ ಹುಡುಗಿ ಬರೀತಾ ಇತ್ತಲ ಅದೇನು?'

'ಹರಿಜನರು ಏನು ಮಾಡಬೇಕು ಅಂತ ಒಂದು ಪುಸ್ತಕ. ಅವಳ ಅಣ್ಣನ ಐಡಿಯ. ಐತಿಹಾಸಿಕವಾಗಿ ವಿಷಯ ಸಂಗ್ರಹಿಸಿ ಬರೆದೋಳು ನಾನು. ಅದಕ್ಕೆ ಅಂತ ಮೂರೂವರೆ ತಿಂಗಳು ಮೈಸೂರಿನಲ್ಲಿ ಹಾಸ್ಟೆಲಿನಲ್ಲಿದ್ದು ಲೈಬ್ರೇರಿ ಕೂತು ಓದಿ ತಯಾರು ಮಾಡ್ಕಂಡು ಬಂದೆ. ಈಗ ಅದು ಅಚ್ಚಿಗೆ ಹೋಗಿದೆ.'

ಶ್ರೀನಿವಾಸ ಸಂಜೆ ಐದು ಗಂಟೆಯ ತನಕ ಅಲ್ಲಿಯೇ ಕೂತು ಮಾತನಾಡುತ್ತಿದ್ದ. ಅವನು ಹೊರಡುವಾಗ ಸತ್ಯ, ಮಧ್ಯಾಹ್ನ ಊಟವಾಗಿ ಉಳಿದಿದ್ದ ಪಾಯಸ ಮತ್ತು ಚಿತ್ರಾನ್ನಗಳನ್ನು ಕೊಟ್ಟು ತಿನ್ನಿಸಿದಳು. ಅವನು ಅವಳೊಡನೆ ಮುಕ್ತವಾಗಿ ಹೆಚ್ಚಿನ ಆಶೆ ನಿರಾಶೆಗಳಿಲ್ಲದೆ ಮಾತನಾಡುತ್ತಿದ್ದ. ಕಾರು ಸ್ಟಾರ್ಟ್ ಮಾಡುವಾಗ ಕೇಳಿದ: 'ಸತ್ಯ, ನೀನು ಹೇಳಿದ್ದೇ ಕೊನೇ ಮಾತೇ?'

'ಯಾವ ವಿಷಯದಲ್ಲಿ?'

'ನನ್ನ ವಿಷಯದಲ್ಲಿ.'

'ನಿನ್ನ ವಿಷಯದಲ್ಲಿ ಕೊನೇ ತೀರ್ಮಾನ ನೀನು ಮಾಡ್ಕಬೇಕು. ನಾನು ನಿನ್ನನ್ನ ಮದುವೆಯಾಗುವ ಪ್ರಶ್ನೆಯಂತೂ ಎಂದಿಗೂ ಇಲ್ಲ. ನೀನು ಮೀರಾಳನ್ನ ಆಗು ಅಂತ ಬರೀ ಸೂಚನೆ ಕೊಟ್ಟೆ. ಆದರೆ ಅದು ಸುಲಭವಲ್ಲ. ಸಾಧಕ ಬಾಧಕ ಯೋಚನೆ ಮಾಡು. ನಿನ್ನಿಷ್ಟ ಬಂದ ಹಾಗೆ ಮಾಡು.'

'ನನಗೊಂದು ಅನುಮಾನ ಬರ್ತಿದೆ. ಹೇಳಲಾ?'

'ಏನು?'

'ನಿನಗೆ ಆ ಮೋಹನದಾಸನ ಮೇಲೆ ಮನಸ್ಸಾಗಿದೆ.'

'ಶ್ರೀನಿವಾಸ, ಬೇಕಾದರೆ ನಿನ್ನ ಕೈಹಿಡಿದು ಹೇಳ್ತೀನಿ. ಅದು ಸುಳ್ಳು. ನಾನು ಕಾಲೇಜಿನಲ್ಲಿ ಓದ್ತಿದ್ದಾಗ, ಸರಿಯಾಗಿ ಓದೂ ಶಕ್ತಿ ಇಲ್ಲದೋರಿಗೆ ನೋಟ್ಸ್‌ಗೀಟ್ಸ್ ಕೊಟ್ಟು ಸಹಾಯಮಾಡ್ತಿರಲಿಲ್ವೆ, ಹಾಗೆ ಮೋಹನದಾಸನಿಗೆ ಪುಸ್ತಕ ಬರೆದು ಕೊಟ್ಟಿದೀನಿ. ಅವರ ಜಾತಿಯ ಸ್ಥಿತಿಗತಿ ನನಗೆ ನಿಜವಾಗಿ ಹೆಚ್ಚು ಗೊತ್ತಿರಲಿಲ್ಲ. ಅವನಿಂದ ಗೊತ್ತಾಗ್ತಿದೆ. ಇವನ್ನ ಬಿಟ್ಟು ಇನ್ನೇನೂ ಇಲ್ಲ. ಒಂದು ಪಕ್ಷ ಏನಾದರೂ ಇದ್ದರೆ ನಿನಗೆ ಹೊಟ್ಟೆಕಿಚ್ಚೇನು?'

ಅವನು ಮಾತನಾಡಲಿಲ್ಲ. ಯಂತ್ರವನ್ನು ಸ್ಟಾರ್ಟ್ ಮಾಡಿದ. ಅವಳೇ ಹೇಳಿದಳು: 'ಇಲ್ಲದ ಸಂಶಯ ಇಟ್ಟುಕೊಂಡು ನರಳಬೇಡ. ನನಗೆ ಮದುವೆಯ ವಿಚಾರವೇ ಇಲ್ಲ.'

೪

ಜ್ಯೇಷ್ಠ ಮಾಸದ ಜಿಡಿ ಹಿಡಿಯುವ ಸೂಚನೆ ಕಾಣುತ್ತಿತ್ತು. ಹಿಂದಿನ ದಿನ ಮಳೆಯಾಗಿತ್ತು. ಈ ದಿನ ಬೆಳಗ್ಗೆ ಬಿಸಿಲು ಬಂದಿದ್ದರೂ ಪಶ್ಚಿಮ ದಿಕ್ಕಿನಿಂದ ಥಂಡಿಗಾಳಿ ಹೊಡೆಯುತ್ತಿತ್ತು. ಕೆರೆಯ ಮೇಲೆ ಕಾಣುತ್ತಿದ್ದ ಮೋಡಗಳು ತಲೆಯ ಮೇಲಕ್ಕೆ ತೇಲುತ್ತಿದ್ದುವು. ಜ್ಯೇಷ್ಠ ಆಷಾಢದ ಮಳೆಗಾಲಕ್ಕೆ ಆಗುವಷ್ಟು ಸೌದೆಯನ್ನು ಕೂಡಿಸಿಟ್ಟುಕೊಳ್ಳಬೇಕೆಂದು ಸತ್ಯ ಯೋಚಿಸಿದಳು. ಅಡಿಗೆಗೆ ಹೆಡೆಮೊಟ್ಟೆ ಕುರುಂಬಾಳೆಗಳಾದುವು. ಆದರೆ ಹವನಕ್ಕೆ ಒಳ್ಳೆಯ ಸೌದೆ ಬೇಕು. ಹವನದ ಅಗ್ನಿ ಪ್ರಜ್ವಲಿಸುತ್ತಿರಬೇಕು ಎಂದುಕೊಂಡಳು. ಹೊಸದಾಗಿ ತೆಂಗಿನ ಸೊಸಿ ಕಟ್ಟಿಸಿದಾಗ ಕೆಡವಿಸಿದ ಗೊಬ್ಬಳಿಯ ತುಂಡುಗಳಿದ್ದುವು. ಅಡಿಗೆಗೂ ಅನುಕೂಲ, ಹವನಕ್ಕೂ ಆಗುತ್ತದೆ. ಒಡೆದು ಹಾಕಬೇಕೆನಿಸಿತು. ಕಾಯಿ ಕೊಬ್ಬರಿ ತುಂಬಲು ಮತ್ತು ದನ ಕಟ್ಟಲು ಹಿಂಭಾಗದಲ್ಲಿ ಕಟ್ಟಿದ್ದ ಮನೆಯ ಮುಂದೆ ಗೊಬ್ಬಳಿಯ ತುಂಡುಗಳನ್ನು ಹಾಕಿಕೊಂಡು, ಕೊಡಲಿಯಿಂದ ಒಡೆಯಲು ಶುರುಮಾಡಿದಳು. ಸೌದೆ ಒಡೆಯುವ ಉಪಾಯ ಅವಳಿಗೆ ಗೊತ್ತು. ಮರದ ಕಾಂಡದಲ್ಲಿ ಕೆಲವು ಸ್ವಾಭಾವಿಕ ಬಿರುಕಿನ ಗೆರೆಗಳಿರುತ್ತವೆ. ಅವುಗಳನ್ನು ಗುರುತಿಸಿ ಒಂದು ಮೂಲೆಯಿಂದ ಏಟು ಹಾಕಿಕೊಂಡು ಬಂದರೆ ಪಕ್ಕಳಿಗೆ ಬಿಡುತ್ತದೆ. ಎಪರಾತೊಪರಾ ಅಡ್ಡ ಏಟು ಕುಟ್ಟಿದರೆ ಎರಡು ಹೋಳಕೆಯೂ ಬಿಡುವುದಿಲ್ಲ. ಆದರೆ ಇವು ಒಣಗಿದ ಗೊಬ್ಬಳಿಯ ತುಂಡು. ಒಡೆಯುವುದು ಕಷ್ಟವೆನಿಸಿತು. ಅದಕ್ಕೆ ಬೇಕಾದ ಜೋರು ಕೊಟ್ಟು ಕೊಡಲಿಯನ್ನು ಒಂದೇಸಮ ಹೊಡೆಯುವುದು ಆಯಾಸವೆನಿಸಿತು. ಅಲ್ಲದೆ ಮೇಲಿನಿಂದ ಕೆಳಕ್ಕೆ ಏಟು ಬೀಳುವಾಗ ಬಲಗೈಯ ಅಲಗಿನ ತಾವಿನಿಂದ ಎಡಗೈಯಿಯ ತನಕ ಕಾವನ್ನು ಸವರಿಕೊಂಡು ಬರಬೇಕು. ಈ ಪರಿಕ್ರಮದಲ್ಲಿ ಬಲ ಅಂಗೈಯ ಮೇಲೆ ಎರಡು ಗುಳ್ಳೆ ಬಂದುವು. ಒಂದು ವರ್ಷ ಈ ತೋಟದಲ್ಲಿ ವಾಸಿಸುತ್ತಿದ್ದು ಅವಳು ಮಾಡುತ್ತಿರುವ ಅಗೆತ, ಉಕ್ಕೆ, ಗೊಬ್ಬರ ತುಂಬುವುದು, ಮೊದಲಾದ ಕೆಲಸಗಳಲ್ಲಿ ಸಾಕಷ್ಟು ಸಲ ಗುಳ್ಳೆಗಳು ಬಂದು ಮಾಯ್ದು ಮತ್ತೆ ಬಂದು ಮತ್ತೆ ಮಾಯ್ದು ಅವಳ ಎರಡು ಕೈಗಳೂ ಜಡ್ಡುಗಟ್ಟಿವೆ. ಆದರೆ ಸೌದೆ ಒಡೆಯುವ ಈ ಹೊಸ ಕೆಲಸದಲ್ಲಿ ಮತ್ತೆ ಗುಳ್ಳೆಗಳು ಎದ್ದಿವೆ. ಕೈ ಪೂರ್ತಿ ಜಡ್ಡುಕಟ್ಟುವುದು ಇನ್ನೂ ಎಷ್ಟು ದಿನಕ್ಕೆ ಎಂದುಕೊಂಡು ಅವಳು, ಹಿಡಿದ ಕೆಲಸವನ್ನು ಮಾಡುತ್ತಲೇ ಇದ್ದಳು. ಒಂದು ಗಂಟೆಯಲ್ಲಿ ಸುಮಾರು ಐದು ತಬ್ಬಿನಷ್ಟು ಒಡೆದಿದ್ದಳು.

ಅಷ್ಟರಲ್ಲಿ ಮೋಹನದಾಸ ಬಂದ. ಕರೀ ಬೂಟು, ಬಿಳಿ ಪ್ಯಾಂಟು, ಬಿಳಿ ಬುಶ್‌ಶರಟು ಹಾಕಿಕೊಂಡು ಅವನು ದೂರದಲ್ಲಿ ನಡೆದು ಬರುತ್ತಿರುವಾಗಲೇ ಗುರುತು ಸಿಕ್ಕಿತು. ಹತ್ತಿರ ಬಂದವನೇ ಕೇಳಿದ: 'ಗೊಬ್ಬಳಿ ಅಲ್ಲವೆ?'

'ಹೂಂ.'

'ಏಟುಬಿದ್ದಾಗ ಬರೂ ಸದ್ದೇ ಹೇಳುತ್ತೆ. ನಿಮ್ಮ ಕೈಲಾಗುತ್ತಾ?'

'ಇಲ್ಲಿ ಒಡೆದು ಹಾಕಿದೀನಿ ನೋಡಿ' – ಎಂದು ಅವಳು ಸೊಂಟವನ್ನು ನೆಟ್ಟಗೆ ಮಾಡಿಕೊಂಡು ಕೊಡಲಿಕಾವಿನ ತುದಿಯನ್ನು ಬಲಗೈಲಿ ಹಿಡಿದು ನಿಂತು ಉಸಿರು ಎಳೆದುಕೊಂಡಳು. ಉಸಿರು ಬಿಟ್ಟು ಕೇಳಿದಳು: 'ನೆನ್ನೆ ಬಂದಿರಾ ಊರಿಗೆ?'

'ಹೂಂ. ಪುಸ್ತಕದ ಅಚ್ಚು ಅರ್ಧ ಆಗಿದೆ. ಬೆಂಗಳೂರಲ್ಲಿ ನಡೀತಿದೆ. ನನ್ನ ಸ್ನೇಹಿತರು ತುಂಬ ಮೆಚ್ಚಿದ್ದಾರೆ ಅದನ್ನ. ಕೀರ್ತಿ ಎಲ್ಲ ನಿಮ್ಮದು.'

'ಕೀರ್ತಿಗೋಸ್ಕರ ನಾನು ಬರೀಲಿಲ್ಲ. ನಿಮ್ಮ ಪ್ಲಾನು ನನಗೆ ಇಷ್ಟವಾಯಿತು. ಬರೆದೆ.'

'ಪುಸ್ತಕ ಅಂದ ಮೇಲೆ ಲೇಖಕರ ಹೆಸರು ಹಾಕಬೇಕಲ್ಲ. ನಿಮ್ಮ ಹೆಸರೇ ಹಾಕಬೇಕು ಅಂತ ತೀರ್ಮಾನವಾಗಿದೆ.'

'ಅಂದರೆ ಯಾರು ತೀರ್ಮಾನ ಮಾಡಿರೂದು?'

'ನಿಮಗೆ ಪೂರ್ತಿ ವಿಷಯ ಗೊತ್ತಿಲ್ಲ ಹಾಗಾದರೆ. ನಾನು ಬಾಯಿಬಿಟ್ಟು ಹೇಳೂದೂ ಇಲ್ಲ. ನೀವು ನಮ್ಮೋರೇ ಆದದ್ದರಿಂದ ಹೇಳ್ತೀನಿ. ಪುಸ್ತಕ ಬೇರೆ ಬರೆದುಕೊಟ್ಟಿದೀರ.'

'ಪುಸ್ತಕ ಬರೆದುಕೊಟ್ಟ ಮಾತ್ರಕ್ಕೆ ನನ್ನನ್ನ ನಿಮ್ಮೋಳು ಅಂತ ಹ್ಯಾಗೆ ಹೇಳ್ತೀರಿ?'

'ನಾನು ನಿಮ್ಮಷ್ಟು ಹಿಸ್ಟರಿ ಓದಿಲ್ಲ. ಆದರೆ ನಾನು ಓದಿರುವಷ್ಟು ಮಟ್ಟಿಗೆ ಹೇಳ್ತೀನಿ. ಕೆಳಜಾತಿಯೋರ, ತುಳಿಯಲ್ಪಟ್ಟೋರ, ಅಲಕ್ಷ್ಯಸಲ್ಪಟ್ಟೋರ ಉದ್ಧಾರವಾಗಬೇಕು ಅನ್ನೂ ವಿಚಾರ, ಚಳವಳಿ, ಶುರುಮಾಡೋರು ಸಾಮಾನ್ಯವಾಗಿ ಮೇಲುಜಾತಿಯೋರೇ. ಬುದ್ಧನನ್ನ ನೋಡಿ, ಎಂಗೆಲ್ಸ್ ನೋಡಿ, ಲೆನಿನ್ ನೋಡಿ. ಬಸವಣ್ಣ ಹುಟ್ಟಿದ್ದು ಬ್ರಾಹ್ಮಣ ಜಾತಿಯಂತೆ. ಗಾಂಧಿ ಕ್ಯಾಪಿಟಲಿಸ್ಟ ಗರೋನು. ಇವರೆಲ್ಲ ಹುಟ್ಟಿದ ಗುಂಪಿನಿಂದ ತಾವಾಗಿಯೇ ಹೊರಗೆ ಬಂದು, ತಾವು ಆರಂಭ ಮಾಡಿದ ಗುಂಪಿನ ಭಾಗವಾಗಿ ಹೋದರು.'

'ಅಂದ್ರೆ ನಾನು ಈ ತೋಟದ ಮನೆ ಬಿಟ್ಟು ನಿಮ್ಮ ಕೇರೀಲಿ ಮನೆ ಕಟ್ಟಿಸ್ಕೊಳುಕ್ಕೆ ಜಾಗ ಕೇಳ್ತೀನಿ ಅಂತೀರಾ?' – ಎಂದು ಅವಳು ನಕ್ಕಳು.

'ಹಾಗೆ ನೀವು ಬಂದ್ರೆ ನಮ್ಮ ಕೇರಿಯೋರ ಅದೃಷ್ಟ. ಆದರೆ ಅವಕ್ಕೆ ಅವರೇ

ಒಪ್ಪೊಲ್ಲ. ಬ್ರಾಹ್ಮಣರು ಕೇರಿಗೆ ಬಂದ್ರೆ ಲಕ್ಷ್ಮಿ ಹೊರಟುಹೋಗ್ತಾಳೆ ಅಂತ ಈಗಲೂ ನಂಬ್ತಾರೆ ಅವರು. ಇಂಥದೆಲ್ಲ ನಂಬಿಕೆ ಹೋಗೂತನಕ ಇವರು ಹ್ಯಾಗೆ ಮರ್ಯಾದಸ್ಥರಾಗಿ ಬದುಕುತ್ತಾರೆ?'

'ಈಗ ಪುಸ್ತಕದ ವಿಷಯ ಏನು ಮಾಡ್ತೀರಿ?'

"ಅದೇ. ನಮ್ಮ ಸ್ನೇಹಿತರೆಲ್ಲ ಯೋಚನೆ ಮಾಡಿದೀವಿ. 'ಬಲವೇ ಗೌರವ' ಅಂತ ಅದಕ್ಕೆ ಹೆಸರಿಡೂದು. ಲೇಖಕಿ: ಕು. ಟಿ. ವಿ. ಸತ್ಯಭಾಮಾ. ಪ್ರಕಾಶನ: ಬಲಸಂವರ್ಧನ ಸಂಘ ಅಂತ ಹಾಕೂದು."

'ಬಲಸಂವರ್ಧನ ಸಂಘ ಅಂದ್ರೆ ಯಾವ್ದು?'

'ನಿಮಗೆ ಹೇಳಿರಲಿಲ್ಲ. ನನ್ನ ಕೆಲವು ಸ್ನೇಹಿತರಿದಾರೆ. ತುಮಕೂರಲ್ಲೇ ಒಬ್ಬ ಇದಾನೆ. ಬೆಂಗಳೂರಲ್ಲಿ ಕೆಲವರಿದಾರೆ. ಕೆಲವರು ಜಮೀನು ಮಾಡ್ತಿದಾರೆ. ಅವರಲ್ಲಿ ಕೆಲವರು ಅನುಕೂಲಸ್ಥರು. ಎಲ್ಲ ತಕ್ಕಮಟ್ಟಿಗೆ ಓದಿರೋರು. ಅಂದ್ರೆ ನನ್ನ ಹಾಗೆ ಕಾಲೇಜಿಗೆ ಹೋಗಿ ಫೇಲಾಗಿರೋರು. ಇನ್ನು ಕೆಲವರು ಪಾಸು ಮಾಡಿದಾರೆ. ನಾವೆಲ್ಲ ಕೂಡಿ ಒಂದು ಪ್ರೋಗ್ರಾಂ ಹಾಕಿದೀವಿ. ಈ ಪುಸ್ತಕದಲ್ಲಿ ಬರೆದಿದೆಯಲ್ಲ, ಹಾಗೆ ಊರಿನ ಪ್ರತಿ ದೇವಸ್ಥಾನಕ್ಕೂ ನಿತ್ಯಪ್ರವೇಶ, [illegible] ಬಿಡು[illegible]ಟಿಲಿಗೆ ನುಗ್ಗೂದು, ಮೇಲುಜಾತಿ ಮನೆಗಳ ಮಧ್ಯ ಮನೆ ಕಟ್ಟಿ [illegible] ನಿಮ್ಮ ಪ್ರಗಳನ್ನ ಊರು ಊರುಗಳಲ್ಲೂ ಮಾಡಬೇಕು ಅಂತ ಉದ್ದೇಶ. ಈ [illegible] ಫಲಕಾರಿಯಾಗುಲ್ಲ ಅಂತ ನಮಗೆ ಗೊತ್ತಿದೆ. ಇದೆಲ್ಲ ಆಗದ ಮಾತು, ಏಕ್‌ದಂ ಕ್ರಾಂತಿಕಾರಿಯಾಗಬೇಕು, ಡೈನಾಮೈಟ್ ಕೆಲಸ ಮಾಡಬೇಕು ಅಂತ ಕೆಲವರು ಹೇಳ್ತಾರೆ.'

ಸತ್ಯ ಉದ್ವಿಗ್ನಳಾದಳು. ಅದರಲ್ಲಿ ಒಂದು ಥರ ಹಿತ ಕಾಣಿಸಿತು. ಇಂಥದು ನಡೆಯಬೇಕು. ಇಲ್ಲದಿದ್ದರೆ ಮೂರು ನಾಲ್ಕು ಸಾವಿರ ವರ್ಷದ ರೂಢಿಯನ್ನು ಕಿತ್ತುವುದು ಸಾಧ್ಯವಿಲ್ಲ ಎಂದುಕೊಂಡಳು. 'ನಿಮ್ಮ ಜನದಲ್ಲಿ ಇತ್ತೀಚೆಗೆ ಸಾಕಷ್ಟು ಜನ ಓದ್ತಾ ಇದಾರೆ. ಅವರನ್ನೆಲ್ಲ ಸೇರಿಸ್ಕಳಿ. ಸಂಘ ಬೆಳೆಯುತ್ತೆ.'

'ಟ್ರಾಜಿಡಿ ಏನು ಗೊತ್ತೆ? ನಮ್ಮ ಜನಕ್ಕೆ ನೌಕರೀನ ಕಾದಿಡ್ತಾರಲ್ಲ ಸರ್ಕಾರದೋರು, ಅದೇ ಮುಳುವಾಗಿದೆ. ಓದಿದೋರಿಗೆಲ್ಲ ಸುಖವಾಗಿ ನೌಕರಿ ಸಿಕ್ಕುತ್ತೆ. ಸರ್ಕಾರಿ ನೌಕರರು ಇಂಥ ಸಂಘ ಸಂಸ್ಥೆಯಲ್ಲಿ ಕೆಲಸ ಮಾಡೂ ಹಾಗಿಲ್ಲ. ಸಾರ್ವಜನಿಕರಿಂದ ಪುಕಾರು ಬರುವಂಥ ಕೆಲಸಾನ ಸರ್ಕಾರದ ಗುಲಾಮ ಮಾಡೂಕೂಡದಲ್ಲ. ಸಾರ್ವಜನಿಕರು ಅಂದ್ರೆ ಯಾರು? ಮೇಲುಜಾತಿಯೋರು. ನಾವು ನಾಲ್ಕು ಸಾವಿರ ವರ್ಷದಿಂದ ಗುಲಾಮರಾಗಿದೀವಿ. ಈ ಗುಲಾಮಗಿರೀನ ಇನ್ನೂ ಹಾಗೇ ಇಡ್ತಾ ಇದೆ ಸರ್ಕಾರ.'

ಸತ್ಯ ಗಂಭೀರಳಾಗಿ ಯೋಚಿಸುತ್ತಾ ನಿಂತಳು. ಬಲಗೈಲಿದ್ದ ಕೊಡಲಿ ಹಾಗೆಯೇ ಇತ್ತು. ಮೋಹನದಾಸ ಹೆಜ್ಜೆಯನ್ನು ಅತ್ತಿತ್ತ ಚಲಿಸದೆ ಶಿಸ್ತಿನಿಂದಲೆಂಬಂತೆ ನಿಂತಿದ್ದ. ಅವಳು ಹೇಳಿದಳು: 'ಆದರೆ ನೋಡಿ, ಪುಸ್ತಕಕ್ಕೆ ನನ್ನ ಹೆಸರು ಹಾಕಬೇಡಿ.'

'ಯಾಕೆ, ಮುಂದೆ ಈ ಸಂಘದಮೇಲೆ ಪೋಲೀಸ್ನೋರ ಕಣ್ಣು ಬೀಳುತ್ತೆ, ಅದರ ಸಂಪರ್ಕವಿರೂ ಪುಸ್ತಕದ ಮೇಲೆ ಹೆಸರಿದ್ದರೆ ಅಪಾಯ ಅಂತಲೆ?'

ಸತ್ಯ ಈ ರೀತಿ ಯೋಚಿಸಿರಲಿಲ್ಲ. ಆದರೆ ಇವನು ತನ್ನನ್ನು ಛೇಡಿಸುತ್ತಿರುವುದನ್ನು ಕೇಳಿ ಅವಳಿಗೆ ಕೋಪ ಬಂತು. 'ನೀವೊಬ್ಬರೇ ಧೈರ್ಯಶಾಲಿಗಳು ಅಂತ ತಿಳ್ಕೊಂಡಿದೀರಾ? ಗಟ್ಟಿಯಾಗಿ ಕೂಗೂದು ಕೆಳಗಿನೋನ ಅಗತ್ಯ. ಅದಕ್ಕೆ ಆತ್ಮಪ್ರೇರಣೆ, ಪೌರುಷ ಬೇಕಿಲ್ಲ. ಆದರೆ ಮೇಲಿನೋನಾಗಿದ್ದುಕೊಂಡು ಸ್ವಯಂಪ್ರೇರಣೆಯಿಂದ ಕೆಳಗಿನೋನ ಮಟ್ಟಕ್ಕೆ ಇಳಿದು ಬರುಕ್ಕೆ ಹೆಚ್ಚು ಧೈರ್ಯ ಬೇಕು. ಎಷ್ಟೇ ಎದುರುಬಿದ್ದರೂ ಅವನು, ತನ್ನ, ಮೇಲಿನ ಸಮಾಜದ ಒಂದು ಭಾಗ. ಆದರ ವಿರೋಧ ಅವನ ವ್ಯಕ್ತಿತ್ವದಲ್ಲೇ ಇರುತ್ತೆ. ಅದನ್ನ ಗೆದ್ದು ಬರೋದು ಕಡಿಮೆ ಸಾಹಸದ ಕೆಲಸವಲ್ಲ. ನಾನು ಹೇಳಿದ್ದು ಅರ್ಥವಾಯ್ತೆ?'

'ಕೆಳಗಿನೋನ ಕೂಗಿನಲ್ಲಿ ಒಂದಾಗುವ ಮಟ್ಟಕ್ಕೆ ಬರ[illegible]ಾಯಿ[illegible] ನೀವು ಮೇಲಿನ ವಿರೋಧಾನ ಗೆದ್ದಿದೀರ ಅಂತ ನಂಬಿಕೆ ಏನು?'

ಸತ್ಯಳಿಗೆ ಇದು ಸವಾಲೆನಿಸಿತು; ಅಪಮಾನವೂ ಎನಿಸಿತು. ಪುಸ್ತಕ ಸಿಟ್ಟು ಬಂದರೂ ಅದು ದೌರ್ಬಲ್ಯದ ಲಕ್ಷಣವೆಂಬ ಅರಿವಾಗಿ ನಿಯಂತ್ರಿಸಿಕೊಂಡಳು. ಒಂದು ನಿಮಿಷ ಸುಮ್ಮನಿದ್ದು ಕೇಳಿದಳು: 'ನಿಮ್ಮ ಸಂಘದ ಧ್ಯೇಯೋದ್ದೇಶ ಇನ್ನೂ ಸ್ಪಷ್ಟವಾಗಿಲ್ಲ. ಈ ಪುಸ್ತಕದಲ್ಲಿ ಬರೆದಿರೂ ಕಾರ್ಯಕ್ರಮಗಳನ್ನೆಲ್ಲ ನಾನು ಒಪ್ತೀನಿ. ಡೈನಾಮೈಟ್ ಉಪಯೋಗದ ಕ್ರಾಂತಿ ಈ ಪುಸ್ತಕದಲ್ಲಿಲ್ಲ; ಆದರೆ ನಿಮ್ಮ ಸಂಘದ ಧ್ಯೇಯೋದ್ದೇಶದಲ್ಲಿದೆ. ಅದನ್ನ ನಾನು ಒಪ್ಪೊದೂ ಇಲ್ಲ. ಹಾಗಿರುವಾಗ ನನ್ನ ಹೆಸರನ್ನ ಯಾಕೆ ಸೇರಿಸಲಿ?'

'ಡೈನಾಮೈಟ್ ಇಲ್ಲದೆ ಕೆಲಸ ಆಗುತ್ತೇನು? ನಾಲ್ಕು ಸಾವಿರ ವರ್ಷದಿಂದ ಕೂಡಿಬಂದ ಕಸಾನ ಸುಟ್ಟು ಬೂದಿ ಮಾಡದೆ, ಹೊಸದು ಏನು ಬೆಳೆಯುಕ್ಕೆ ಸಾಧ್ಯ? ನಾಲ್ಕು ಸಾವಿರ ವರ್ಷ ಅಂದ್ರೆ ನಾಲ್ಕು ಯುಗ ಕಳೀತು ಅಂತ ನನ್ನ ಕಲ್ಪನೆ. ಈಗ ಆಗಬೇಕಾಗಿರೂದು ಪ್ರಳಯ. ಅದಾದಮೇಲೆ ನಿಜವಾದ ಧರ್ಮವಿರೂ ಹೊಸ ಯುಗ ಶುರುವಾಗಬೇಕು.'

ಈ ಮಾತು ಅವಳಿಗೆ ಆಕರ್ಷಕವೆನಿಸಿತು. ಯುಗ, ಯುಗಚಕ್ರ, ಧರ್ಮ ಎಂಬ ಮಾತುಗಳು ತಕ್ಷಣ ಅವಳಿಗೆ ತಂದೆಯ ನೆನಪನ್ನು ತಂದಿತು. ವಸಿಷ್ಠ,

ಸತ್ಯಯುಗ, ಎಂದು ಮುಂತಾಗಿ ಅವರು ಹೇಳುತ್ತಿದ್ದರು. ಕೊನೆಯ ದಿನಗಳಲ್ಲಿ ಅದೇ ಯುಗದಲ್ಲಿ ಜೀವಿಸುತ್ತಿದ್ದರು. ಈಗ ಈ ಮೋಹನದಾಸ ಅದೇ ಮಾತ ನಾಡುತ್ತಿದ್ದಾನೆ. ಆದರೆ ಬುದ್ಧಿಪೂರ್ವಕವಾಗಿ ಯುಗಗಳನ್ನು ಬದಲಾಯಿಸಲು ಬರುತ್ತದೆಯೆ, ಎಂಬ ಪ್ರಶ್ನೆ ಹುಟ್ಟಿತು. ಯುಗವೆಂದರೇನು? ಮನುಷ್ಯ-ಪ್ರಯತ್ನದ ಪ್ರಭಾವವನ್ನು ಮೀರಿ ತನಗೆ ತಾನೇ ಪ್ರಪಂಚವನ್ನು ನಿಯಂತ್ರಿಸುವ ಧರ್ಮನಿಯಮವೇನು ಅದು? ಅಲ್ಲವೆನಿಸಿತು. ಅದೆಲ್ಲ ಮನುಷ್ಯ ಮಾಡಿಕೊಂಡಂತೆ, ಜೀವಿಸಿದಂತೆ. ಅದಕ್ಕೊಂದು ಹೆಸರು, ಕೃತ, ತ್ರೇತ, ಅಂತ. ಪುರಾಣದ ಅರ್ಥವೇ ಇಷ್ಟು. ಒಂದು ಆಶ್ಚರ್ಯದ ಅಂಶ ಮನಸ್ಸಿನಲ್ಲಿ ಹೊಳೆಯಿತು. ಏನು ಪುರಾಣದ ಜಾದು! ಅದರಿಂದ ಬಿಡುಗಡೆಯಾಗದೆ ಹೊಸ ಸಮಾಜ, ಹೊಸ ಜೀವನ ಕಟ್ಟುವುದು ಸಾಧ್ಯವಿಲ್ಲ. ಆದರೆ ಹೊಸತರ ಸಮರ್ಥನೆ ಮಾಡು ವಾಗಲೂ ಪುರಾಣದ ಅವಲಂಬನೆ ತಪ್ಪುವುದಿಲ್ಲ. ಮೋಹನದಾಸನೂ ಯುಗ, ಪ್ರಳಯ, ಅನ್ನುವ ಮಾತನ್ನೇ ಆಡುತ್ತಿದ್ದಾನೆ. ಏನು ವಿಚಿತ್ರ! – ಎಂದು ಕೊಂಡಳು.

'ಏನೋ ಯೋಚನೆ ಮಾಡ್ತಾ ನಿಂತಿರಿ. ಪುಸ್ತಕಕ್ಕೆ ನಿಮ್ಮ ಹೆಸರು ಹಾಕುವ ಅಥವಾ ಬಿಡುವ ವಿಷಯ ಆಮೇಲೆ ಮಾತಾಡೋಣ. ನನಗೆ ಇನತ್ತು ಬಿಡು ವಿದೆ. ನಿಮ್ಮ ತಿಂಡಿ ಗಿಂಡಿ ಆಯಿತೇನು?' – ಮೋಹನದಾಸ ಕೇಳಿದ.

ಸತ್ಯಳ ಹೊಟ್ಟೆ ಚುರುಗುಟ್ಟುತ್ತಿತ್ತು. ಈಗ ಅದು ಮನಸ್ಸಿಗೆ ಗೊತ್ತಾ ಯಿತು. 'ಮಳೆ ಬಂದರೆ ಕಷ್ಟವಾಗುತ್ತೆ. ಇದನ್ನ ಮುಗಿಸಿ ತಿಂಡಿ ಗಿಂಡಿ ಏನಿ ದ್ದರೂ' – ಎಂದಳು.

'ಇವತ್ತೇ ಮುಗಿಸಬೇಕು ಅಂತ ಮುಹೂರ್ತವೇನು?'

'ಯಾವ ಕೆಲಸಾನೂ ಅರ್ಧದಲ್ಲಿ ಬಿಟ್ಟರೆ ನನಗೆ ನೆಮ್ಮದಿ ಇರುಲ್ಲ. ನೀವು ಅಲ್ಲಿ ಕೂತ್ಕಳಿ. ನಾನು ಮಾತಾಡ್ತಾ ಒಡೀತೀನಿ.'

'ಕೊಡಲಿ ನನ್ನ ಕೈಗೆ ಕೊಡಿ. ನಾನು ಸೀಳಿ ಹಾಕ್ತೀನಿ. ನೀವು ಹೋಗಿ ತಿಂಡಿ ಸಂಡಿ ಮಾಡಿ. ಮೀರಾ ಅಂದಿದ್ದಳು ನೀವು ಚನ್ನಾಗಿ ಮಾಡ್ತೀರಂತೆ. ನನಗೆ ಒಂದು ದಿನವೂ ಕೊಟ್ಟಿಲ್ಲ.'

'ಸೌದೆ ಒಡೆಯುಕ್ಕೆ ಬರುತ್ತೇನು?'

'ನಾನು ಮಾದಿಗನ ಮಗ. ಬರದೆ ಇದ್ದರೆ ಹುಟ್ಟಿಗೇ ಅವಮಾನ.'

'ಆದರೆ ನಿಮ್ಮ ತಂದೆ ಎಂ.ಎಲ್.ಎ. ಅಲ್ಲ!'

'ಅದೇ ಟ್ರಾಜಿಡಿ. ಸೌದೆ ಕಡಿಯೂ ಅಭ್ಯಾಸವಿದ್ದರೆ ಕೊಡಲಿ ತಗಂಡು ನಾಲ್ಕು ಜನದ ತಲೆ ಕಡಿದು ಹಾಕೂದು ಸುಲಭವಾಗ್ತಿತ್ತು' – ಎಂದ ಅವನು

ಸರಸರನೆ ತನ್ನ ಬಿಳಿಯ ಬುಶ್‌ಶರಟು ಬಿಚ್ಚಿ ಮಡಿಸಿ ಬದುವಿನ ಮೇಲಿಟ್ಟ. ಅದರ ಮೇಲೆ ಕೈಗಡಿಯಾರವನ್ನು ತೆಗೆದಿಟ್ಟ. ಇನ್ನೂ ಅವಳ ಬಲಗೈಯಲ್ಲೇ ಇದ್ದ ಕೊಡಲಿಯನ್ನು ತೆಗೆದುಕೊಂಡು, ಎತ್ತಿ ಶಕ್ತಿಯಿಂದ ಅರ್ಧ ಒಡೆದಿದ್ದ ತುಂಡಿಗೆ ಹಾಕಿದ ಏಟಿಗೆ ಒಂದು ಹೋಳಕೆ ಬಿಟ್ಟುಕೊಂಡಿತು. 'ನೋಡಿ, ಎಲ್ಲಾ ದೊಡ್ಡ ಹೋಳಕೆಯಾಗೂಕೂಡದು. ಈಗ ಬಿಟ್ಟಿತಲ್ಲ, ಅದು ಅಡಿಗೆಗೆ ಸರಿ. ಸಣ್ಣ ಚೂರುಗಳೂ ಬೇಕು ನನಗೆ, ಹವನದ ಅಗ್ನಿಗೆ. ಇಂಥದು ನೋಡಿ' – ಎಂದು ಅವಳು, ತಾನು ಒಡೆದುಹಾಕಿದ್ದ ಗುಡ್ಡೆಯಿಂದ ಒಂದು ಚೂರನ್ನು ತೆಗೆದು ತೋರಿಸಿದಳು.

ಕೊಡಲಿಯನ್ನು ಎತ್ತಿದ್ದ ಅವನು ಇನ್ನೊಂದು ಏಟು ಹಾಕಿ, 'ನೀವು ಅದೂ ಏನೇನೋ ಮಾಡ್ತೀರಂತೆ. ಇದೆಲ್ಲ ಯಾಕೆ ಮೂಢ ನಂಬಿಕೆ?' ಎಂದ.

'ಚರ್ಚೆ ಮಾಡುಕ್ಕೆ ಶುರುವಾದರೆ ಕೆಲಸ ಆಗುಲ್ಲ. ನಂಗೆ ಹಸಿವಾಗಿದೆ' – ಎಂದು ಹೇಳಿ ಅವಳು ವಾಸದ ಮನೆಗೆ ಹೋದಳು. ಸ್ನಾನವಾಗಿರಲಿಲ್ಲ. ಈಗ ತಿಂಡಿ ಮಾಡುವುದೋ ಅಡಿಗೆ ಮಾಡುವುದೋ ಎಂದು ಒಂದು ಕ್ಷಣ ಯೋಚಿಸಿದಳು. ಅಡಿಗೆಯೇ ಸರಿ ಎಂದು ನಿರ್ಧರಿಸಿದಳು. ಕೊಳದ ಹತ್ತಿರ ಹೋಗಿ ಸ್ನಾನ ಮಾಡಲು ಅವನು ಅದರ ಆಚೆ ಕಡೆಯಲ್ಲೇ ಸೌದೆ ಒಡೆಯುತ್ತಿದ್ದಾನೆ; ಸಂಕೋಚವಾಯಿತು. ಎರಡು ಬಕೆಟುಗಳಲ್ಲಿ ನೀರು ತಂದು, ವಾಸದ ಮನೆಯ ಮುಂಭಾಗದ ಬದುವಿನ ಮೇಲೆ ಕೂತು ಸ್ನಾನ ಮಾಡಿ ಒಳಗೆ ಬಂದು, ಒಗೆದ ಸೀರೆಯುಟ್ಟು ರವಿಕೆ ತೊಟ್ಟು, ನೆನೆಸಿದ ಬಟ್ಟೆಗಳನ್ನು ಕೊಳದ ದಡದ ಕಲ್ಲಿನ ಮೇಲೆ ಒಗೆದು ಬದುವಿನ ಮೇಲೆ ಒಣಗಹಾಕಿ, ಗಾಳಿಗೆ ಹಾರದಂತೆ ಕಲ್ಲು ಹೇರಿದಳು. ಒಳಗೆ ಬಂದು ಒಲೆ ಹೊತ್ತಿಸಿದಳು. ಅಂಗಳದಲ್ಲಿ ಅಗ್ನಿಯನ್ನು ಕದರು ಹಾಕಿ, ಅಡಿಗೆಯ ಒಲೆಯ ಮೇಲೆ ಬೇಳೆ ಮತ್ತು ಅಕ್ಕಿಗಳನ್ನು ಇಟ್ಟು ಉರಿಯನ್ನು ಸರಿಮಾಡಿದಳು. ಅಂಗಳಕ್ಕೆ ಬಂದು ಕೂತು ಸಂಧ್ಯಾವಂದನೆ ಮಾಡಿ ಸಣ್ಣ ಪಾತ್ರೆಯಲ್ಲಿ ತುಪ್ಪ ಇಟ್ಟುಕೊಂಡು ಹವನವನ್ನು ಆರಂಭಿಸಿದಳು.

ಛಕ್ ಛಕ್, ಕಟ್ ಎಂದು ಹೊರಗೆ ಕೊಡಲಿಯ ಶಬ್ದ ಕೇಳಿಸುತ್ತಲೇ ಇತ್ತು. ಅವಳು ಅದನ್ನು ಅಲಕ್ಷ್ಯಿಸಿ ಹವನದಲ್ಲಿ ಮಗ್ನಳಾದಳು. ಅರ್ಧ ಗಂಟೆಯಲ್ಲಿ ಅದನ್ನು ಮುಗಿಸಿ ಅಡಿಗೆಯ ಮನೆಗೆ ಹೋದಳು. ಅನ್ನವಾಗಿತ್ತು. ಬೇಳೆ ದಡ ಒಡೆದಿತ್ತು. ಅನ್ನವನ್ನು ತೆಗೆದಿಟ್ಟು ಬೇಳೆಗೆ ಮೆಣಸಿನ ಪುಡಿ ಹಾಕಿ ಒಲೆಯನ್ನು ಸರಿಮಾಡಿ ಹುಣಿಸೇಹಣ್ಣನ್ನು ನೆನೆಯ ಹಾಕಿ, ಅವನು ಸೌದೆ ಒಡೆಯುತ್ತಿದ್ದ ಜಾಗಕ್ಕೆ ಹೋದಳು. ಆಶ್ಚರ್ಯವಾಯಿತು. ಅವಳು ಒಟ್ಟು ಎರಡು ತುಂಡನ್ನು ಒಡೆದಿದ್ದಳು. ಅಷ್ಟಕ್ಕೆ ಸುಮಾರು ಒಂದು ಗಂಟೆ ಹಿಡಿದಿತ್ತು. ಈಗ ಅವನು

ಕೊಡಲಿ ಹಿಡಿದು ಒಂದು ಅಥವಾ ಒಂದೂಕಾಲು ಗಂಟೆಯಾಗಿರಬಹುದು. ಅಷ್ಟರಲ್ಲಿ ಐದು ತುಂಡುಗಳನ್ನು ಚಚ್ಚಿಹಾಕಿದ್ದಾನೆ. ಇನ್ನು ಒಂದು ಮಾತ್ರ ಉಳಿದಿದೆ. ತಾನೊಬ್ಬಳೇ ಆಗಿದ್ದರೆ ಇವತ್ತೆಲ್ಲ ಒಡೆದಿದ್ದರೂ ಆಗುತ್ತಿರಲಿಲ್ಲ. ದಿನವೆಲ್ಲ ಒಡೆಯುಕ್ಕೆ ತನ್ನಿಂದ ಸಾಧ್ಯವೂ ಆಗುತ್ತಿರಲಿಲ್ಲವೇನೋ! ಅವನ ಮುಖ ಕುತ್ತಿಗೆಗಳೆಲ್ಲ ಬೆವೆತು ಹರಿಯುತ್ತಿತ್ತು. ಮೈಮೇಲಿನ ಬನಿಯನ್ ಒದ್ದೆಯಾಗಿತ್ತು.

'ನಿಮ್ಮ ಕೈಲೇ ಎಲ್ಲ ಒಡೆಸಿದ ಹಾಗಾಯ್ತು. ನಿಮಗೆ ಸಾಕಾಗಿದೆ. ಅದನ್ನ ನಾನು ಒಡೀತೀನಿ. ಇಲ್ಲ, ಆಮೇಲೆ ಒಡೆದರೂ ಆಗುತ್ತೆ.'

'ಮೇಲೆ ನೋಡಿ, ಮಳೆ ಬರುತ್ತೆ. ಒಡೆದಿರೂದ ಬೇಗ ಒಳಕ್ಕೆ ತೆಗೆದಿಡಿ' – ಎನ್ನುತ್ತಾ ಅವನು ಕೊಡಲಿಯ ಏಟು ಹಾಕುತ್ತಿದ್ದ.

ಅವಳು ತಲೆ ಎತ್ತಿ ನೋಡಿದಳು. ಮೋಡ ಕಪ್ಪಗಾಗುತ್ತಿತ್ತು. ಗಾಳಿ ನಿಂತಿತ್ತು. ಕೊಟ್ಟಿಗೆಮನೆಯ ಬಾಗಿಲು ತೆಗೆದು ಬೇಗ ಬೇಗ ಸೌದೆಯನ್ನು ಕೈಮೇಲೆ ಜೋಡಿಸಿಟ್ಟುಕೊಂಡು ಒಂದು ಕೋಣೆಯ ಗೋಡೆಯ ದಡಕ್ಕೆ ಗುಡ್ಡೆ ಹಾಕಿದಳು. ಒಂದೆರಡು ಹನಿ ಬಿತ್ತು. ಇನ್ನೇನು ಮಳೆ ಬರುತ್ತದೆ. ಎಷ್ಟು ಬೇಗ ಎತ್ತಿಹಾಕಿದರೂ ಸೌದೆ ಮುಗಿಯದು. ಏನಿಲ್ಲೆಂದರೂ ತನ್ನ ಅಡಿಗೆ ಮತ್ತು ಹವನಗಳಿಗೆ ನಾಲ್ಕೈದು ತಿಂಗಳಾದರೂ ಆಗಬಹುದು. ಅವಳು ಮುಕ್ಕಾಲು ಭಾಗ ತೆಗೆಯುವುದರಲ್ಲಿ ಅವನು ಕೊನೆಯ ತುಂಡನ್ನೂ ಚಚ್ಚಿಹಾಕಿ, ತಾನೂ ಕೈಜೋಡಿಸಿದ. ಇಬ್ಬರೂ ಕೂಡಿ ಎಲ್ಲವನ್ನೂ ಒಳಕ್ಕೆ ಸಾಗಿಸಿದರು. ನೆಲದ ಮೇಲೆ ಚದುರಿ ಉಳಿದಿದ್ದ ಚಕ್ಕೆಗಳನ್ನು ಸರಸರನೆ ಆಯ್ದು, ಅವಳು ಒಂದು ಮಂಕರಿಗೆ ತುಂಬಿ ತಂದಿಟ್ಟಳು. ಮಳೆ ಬೀಳಲು ಶುರುವೇ ಆಯಿತು. ಓಡಿ ಬಂದು, ಬಾವಿಯ ದಡದಲ್ಲಿ ಬಡುವಿನ ಮೇಲೆ ಒಣಗಹಾಕಿದ್ದ ತನ್ನ ಸೀರೆ ಲಂಗ, ಬಾಡಿ ರವಿಕೆಗಳನ್ನು ಎಳೆದುಕೊಂಡು, ಅವನನ್ನೂ ಕೂಗಿ ಮನೆಯನ್ನು ಹೊಕ್ಕಳು. ತನ್ನ ಗಡಿಯಾರ ಬುಶ್‌ಶರಟುಗಳನ್ನು ಕೈಲಿ ಹಿಡಿದ ಅವನು ಒಳಗೆ ಬಂದು, ಅವಳು ಹಾಕಿಕೊಟ್ಟ ಮಂದಲಿಗೆಯ ಮೇಲೆ ಕುಳಿತ. ಹೊರಗೆ ದಡದಡನೆ ಮಳೆ ಬರಲು ಶುರುವಾಯಿತು. ಅಂತಹ ಜೋರು ಮಳೆಯನ್ನು ಕಂಡು ಎಷ್ಟೋ ವರ್ಷವಾಯಿತೆಂಬಷ್ಟು ಸುರಿಯುತ್ತಿತ್ತು.

ಹುಣಿಸೇಹಣ್ಣು ಕಿವುಚಿ ಬಗ್ಗಿಸಿ ಉಪ್ಪು ಹಾಕಿದಮೇಲೆ ಅವಳು ಎಂದಳು: 'ತಿಂಡಿ ಮಾಡಲಿಲ್ಲ. ಅಡಿಗೆಯೇ ಆಯಿತು. ನೀವು ಕೈ ತೊಳಕೊಳ್ಳಿ.'

ಅವನು ಹೊಸಲಿನಿಂದ ಹೊರಗೆ ಬಂದು ಕಲ್ಲುಚಪ್ಪಡಿಯ ಸಣ್ಣ ಅಟ್ಟಣೆಯ ಮೇಲೆ ನಿಂತು, ಸೂರಿನಿಂದ ಸುರಿಯುತ್ತಿದ್ದ ಜೋರು ನೀರಿಗೆ ಎರಡು ಕೈಯನ್ನೂ

ಹಿಡಿದು ತೊಳೆದುಕೊಂಡ. 'ಸೋಪು ಕೊಡಲೆ?' – ಎಂದು ಅವಳು ಕೇಳಿದಳು. ಅವನು ಬೇಡವೆಂದ. ಅಡಿಗೆಮನೆಯ ಬಾಗಿಲಿನಲ್ಲಿ ಅವಳು ಇಬ್ಬರಿಗೂ ತಟ್ಟೆ ಹಾಕಿ, ಅನ್ನ ಸಾರು ಮೊಸರಿನ ಪಾತ್ರೆಗಳು ಮತ್ತು ತುಪ್ಪದ ಜಾಡಿಯನ್ನು ಮಧ್ಯದಲ್ಲಿಟ್ಟು, ನೀರಿನ ಚೊಂಬು ಲೋಟಗಳನ್ನಿಟ್ಟಳು. ಕಾಲಿನ ಬೂಟು ಕಾಲು-ಚೀಲಗಳನ್ನು ಬಿಚ್ಚಿಟ್ಟು ಮತ್ತೆ ಕೈ ತೊಳೆದು, ಅವಳು ಕೊಟ್ಟ ಚೌಕದಿಂದ ಕೈ ಮುಖಗಳನ್ನು ಒರೆಸಿಕೊಂಡು ಅವನು ಕೇಳಿದ: 'ನನಗೊಂದು ಚಮ್ಚ ಬೇಕು.'

'ಯಾಕೆ, ಇಂಗ್ಲಿಷ್ ಸ್ಟೈಲ್ ಏನು?'

'ಅಲ್ಲ. ಇಂಡಿಯನ್ ಸ್ಟೈಲ್. ಅಭ್ಯಾಸ ತಪ್ಪಿದ್ದರಿಂದ ಹೀಗಾಗಿದೆ' – ಎಂದು ತನ್ನ ಎರಡು ಅಂಗೈಗಳನ್ನೂ ಮುಂದೆ ಹಿಡಿದ. ಎಡ ಅಂಗೈಯ ಉಬ್ಬುಗಳಲ್ಲಿ ಗುಳ್ಳೆ ಕಾಣುತ್ತಿತ್ತು. ಬಲಗೈಯ ಉಬ್ಬುಗಳ ತುಂಬ ಗುಳ್ಳೆಯಾಗಿದ್ದುದು ಮಾತ್ರವಲ್ಲದೆ ನಾಲ್ಕು ಕಡೆಗಳಲ್ಲಿ ಕಿತ್ತು ರಕ್ತ ಹೆಪ್ಪುಗಟ್ಟುತ್ತಿತ್ತು. 'ಸಾರು ಮುಟ್ಟಿದರೆ ಕೈ ಉರಿಯುತ್ತಲ' – ಎಂದ.

'ಸಾರಿ. ನೀವು ಒಡೀತೀನಿ ಅಂದಿರಿ. ನಾನು ನಿಮ್ಮ ಮೇಲೆ ಬಿಟ್ಟು ಇಲ್ಲಿಗೆ ಬಂದುಬಿಟ್ಟೆ. ರಿಯಲಿ ಸಾರಿ' – ಎಂದು ಅವಳು ಖಿನ್ನಳಾದಳು.

'ಇದ್ಯಾಕೆ ನೀವು ಸಾರಿ ಅನ್ನಬೇಕು? ಸೌದೆ ಒಡೀತಿರುವಾಗ ನನಗೆ ಏನು ಅನ್ನಿಸ್ತು ಗೊತ್ತೆ? ಚಿಕ್ಕವಯಸ್ಸಿನಲ್ಲಿ, ಅಂದರೆ ನಮ್ಮಪ್ಪ ಗಾಂಧೀ ಆಶ್ರಮದಿಂದ ಬಂದು ನಮಗೆ ಸರ್ಕಾರದಿಂದ ಬಿಟ್ಟಿ ಅನುಕೂಲ ಸಿಕ್ಕಿ ನಾನು ಅಂಗಡಿ ಇಡುಕ್ಕೆ ಮುಂಚೆ, ತುಂಬ ಕೆಲಸ ಮಾಡ್ತಿದ್ದೆ. ಇಲ್ಲಿ ಮನೇಲೂ ಅಷ್ಟೆ. ಅಲ್ಲಿ ಸೋದರ ಮಾವನ ಊರಿನಲ್ಲಿ ಓದ್ತಾ ಇದ್ದಾಗಲೂ ಕೆಲಸ ಮಾಡ್ತಿದ್ದೆ. ಈಗ ಅಂಗಡಿ ಇಟ್ಟ ಮೇಲೆ ಇದೆಲ್ಲ ಮಾಡುವ ಅವಕಾಶವೇ ಇಲ್ಲ. ಕೈಗೆ ಅಭ್ಯಾಸ ತಪ್ಪಿ ಹೀಗಾಗಿದೆ. ಈಗ ಸೌದೆ ಒಡೆಯುವಾಗ ಮೊದಲ ಗುಳ್ಳೆ ಬಂತಲ್ಲ. ಆಗ ನಿಲ್ಲಿಸಿ ಬಿಡಲೇ ಅನ್ನಿಸ್ತು. ಆದರೆ ತಕ್ಷಣ ನಾಚಿಕೆಯಾಯ್ತು. ಕೈಲಿ ಒಂದು ಗುಳ್ಳೆ ಬಂದದ್ದಕ್ಕೆ ಕೊಡಲಿ ಬಿಸಾಕುವ ಮನುಷ್ಯ ಕ್ರಾಂತಿ ಏನು ಮಾಡಬಲ್ಲ ಅನ್ನಿಸ್ತು. ಒಡೆದುಹಾಕಿದೆ. ಮನಸ್ಸಿಗೆ ತೃಪ್ತಿಯಾಯಿತು. ಐ ಮಸ್ಟ್ ಥ್ಯಾಂಕ್ ಯು.'

ಮನೆಯಲ್ಲಿ ಎರಡು ಚಮ್ಚಗಳಿದ್ದುವು. ಅವುಗಳನ್ನು ಮುಂದಿಟ್ಟು ಅವಳು ಹೇಳಿದಳು: 'ಹಾಗಾದರೆ ನಾನು ಸಾರಿನ ಅನ್ನ, ಮೊಸರನ್ನ, ಬೇರೆ ಬೇರೆ ಕಲಸಿ ಬಡುಸ್ತೀನಿ. ಊಟ ಮಾಡುಕ್ಕೆ ಸರಿಯಾಗುತ್ತೆ.'

'ಗುಡ್ ಐಡಿಯ.'

ಅವನಿಗೆ ಕಲಸಿ ಎರಡು ತಟ್ಟೆಗಳಲ್ಲಿ ಇಟ್ಟು, 'ಊಟ ಮಾಡಿ. ಆಮೇಲೆ ಮತ್ತೆ ಕಲಸಿ ಹಾಕ್ತೀನಿ' – ಎಂದಳು.

'ನೀವೂ ಮಾಡಿ. ಎಡಗೈಲಿ ಇಕ್ಕಭೌದು. ಚಮ್ಚದಲ್ಲೇ ಕಲುಸ್ಕಭೌದು' – ಎಂದು ಅವನು ಬಲವಂತ ಮಾಡಿದ.

ಇಬ್ಬರೂ ಊಟಕ್ಕೆ ಕುಳಿತರು. ಅನ್ನವನ್ನು ಬಾಯಿಗೆ ಇಟ್ಟುಕೊಂಡು ಅವನು ಕೇಳಿದ: 'ರಾಗಿ ಮುದ್ದೆ ತಿನ್ನುಲ್ಲವೇನು ನೀವು?'

'ಇವತ್ತು ಹುಳಿ ಮಾಡುಕ್ಕೆ ತರಕಾರಿ ಇರಲಿಲ್ಲ.'

'ಹುಳಿ ಅಂದರೇನು?'

'ಸಾಂಬಾರ್.'

'ಓ, ಅದು ಬ್ರಾಹ್ಮಣರ ಭಾಷೆ. ನಾವು ಬ್ರಾಹ್ಮಣಿಕೆ ಕಲಿತಿರೂದೆಲ್ಲ ಹೋಟೆಲಿನ ಮೂಲಕ. ಯಾಕಂದ್ರೆ ಬ್ರಾಹ್ಮಣರು ಮನೆಗೆ ಸೇರಿಸಿ ನಮಗೆ ಏನೂ ಕಲಿಸಿಲ್ಲ.'

'ನಿಮಗೆ ಮುದ್ದೆ ಇಷ್ಟವೇನು?'

'ಬರೀ ಅನ್ನ ಹೊಟ್ಟೆ ತುಂಬುಲ್ಲ. ಶಕ್ತಿಯೂ ಇರುಲ್ಲ. ಊರಿಗೆ ಬಂದಾಗ ಎರಡು ಹೊತ್ತೂ ಉಂಟು. ತುಮಕೂರಿನಲ್ಲಿ ಮಾಂಸ ತಗೋತೀನಿ. ಸರಿಯಾಗುತ್ತೆ.'

ಈ ಮಾತನ್ನು ಕೇಳಿದ ಸತ್ಯಳ ಮುಖದ ಮೇಲೆ ಒಂದು ಗೆರೆ ಅಪ್ರಿಯತೆ ಕಾಣಿಸಿತು. ಅದನ್ನು ಅವನು ನಿರೀಕ್ಷಿಸಿದಂತಿತ್ತು. ತಕ್ಷಣ ಹೇಳಿದ: 'ಮಾದಿಗರೊಬ್ಬರೇ ಅಲ್ಲ ಮಾಂಸ ತಿನ್ನೋದು. ಉಳಿದೋರೂ ತಿಂತಾರೆ. ಈಗ ಬ್ರಾಹ್ಮಣರು ಹೊಡಿಯುಕ್ಕೆ ಶುರುವಾಗಿ ಅದರ ಧಾರಣೆ ಏರಿದೆ. ವೇದಕಾಲದಲ್ಲಿ ನೀವು ಮಾಂಸಾಹಾರಿಗಳಾಗಿರಲಿಲ್ಲವೆ?'

'ಸುಮ್ಮನೆ ಊಟ ಮಾಡಿ. ಇದ್ದಕ್ಕಿದ್ದಹಾಗೆಯೇ ಖಾರವಾಗಿ ಮಾತನಾಡುವ ನಿಮ್ಮ ಅಭ್ಯಾಸ ಯಾಕೆ ತಿದ್ದಿಕೋಬಾರದು?'

ಅವನು ಸುಮ್ಮನಾದ. ಒಂದು ನಿಮಿಷ ತಲೆ ತಗ್ಗಿಸಿಕೊಂಡಿದ್ದು ಅನಂತರ 'ಸಾರಿ' – ಎಂದ. ಅವನ ಖಿನ್ನತೆಯನ್ನು ಹೋಗಲಾಡಿಸಲು ಅವಳು ಕೇಳಿದಳು: 'ನೀವು ದೇವರನ್ನ ನಂಬ್ತೀರಾ?'

'ಈಗ ಯಾಕೆ ಆ ಪ್ರಶ್ನೆ?'

'ಹವನದ ವಿಚಾರ ಏನೋ ಅಂದಿರಿ. ಅದನ್ನ ಆಮೇಲೆ ಮಾತಾಡಾಣ ಅಂದಿದ್ದೆನಲ್ಲ.'

'ಮಾತು ಮತ್ತೆ ಖಾರವಾಗುತ್ತೆ, ಬ್ಯಾಡಿ.'

'ಪರವಾಗಿಲ್ಲ ಹೇಳಿ.'

ಬಾಯಲ್ಲಿದ್ದ ಅನ್ನವನ್ನು ಅಗಿದು ನುಂಗಿ ಲೋಟಕ್ಕೆ ನೀರು ಬಗ್ಗಿಸಿಕೊಂಡು

ಕುಡಿದು ಅವನು ಕೇಳಿದ: 'ನೀವು ದಿನಾ ಬೆಂಕಿಗೆ ತುಪ್ಪ ಸುರಿದು ಪೂಜೆ ಮಾಡ್ತೀರಂತೆ. ಮೀರಾಗೆ ಅದರ ಮೇಲೆ ಭಕ್ತಿ ಬೆಳೆದಿದೆ. ಅವ್ಳನ್ನ ನಿಮ್ಮ ಜಾತಿಗೆ ಕನ್ವರ್ಟ್ ಮಾಡ್ತಿದೀರಾ? ನನಗೆ ಇಂಥ ದೇವರಲ್ಲಿ ನಂಬಿಕೆ ಇಲ್ಲ.'

'ಹವನ ಅಂದ್ರೆ ದೇವರ ಪೂಜೆಯಲ್ಲವೇ ಅಲ್ಲ. ವಿಗ್ರಹಾರಾಧನೆಯಿಂದಲೇ, ಅಥವಾ ಆ ಕಾಲದಿಂದಲೇ, ನಮ್ಮ ಸಮಾಜದ ಪತನ ಶುರುವಾಯಿತು ಅಂತ ನನ್ನ ಅಭಿಪ್ರಾಯ.'

'ಅದು ನಿಜ. ಬರೀ ಹಿಂದೂ ದೇವರು ಮಾತ್ರವಲ್ಲ, ಯಾವ ದೇವರೂ ಅಷ್ಟೆ. ಜನದಲ್ಲಿ ಒಡಕು, ಭೇದ ಹುಟ್ಟಿಸಿರುವ ಅತಿ ಕೆಟ್ಟ ಶಕ್ತಿ ಅಂದ್ರೆ ದೇವರೇ. ಅಲ್ಲಾ ದೊಡ್ಡೋನೋ ಕ್ರಿಸ್ತನ ಅಪ್ಪ ದೊಡ್ಡೋನೋ ಅಂತ ಎಷ್ಟು ಯುದ್ಧ ವಾಯಿತು! ಅಲ್ಲಾ ದೊಡ್ಡೋನೋ ರಾಮ ದೊಡ್ಡೋನೋ ಅಂತ ಹಿಂದೂ ಸ್ಥಾನದಲ್ಲಿ ಎಷ್ಟು ಜನ ಸತ್ತರು! ಮತಾಂತರವಾಯ್ತು. ಇವರೊಳಗೇ ವಿಷ್ಣು ಶಿವ ಅಂತ ಕಮ್ಮಿ ನಡೆದಿದೆಯೇ? ಇದು ದೇವರ ತಪ್ಪಲ್ಲ, ದೇವರ ಹೆಸರಿನಲ್ಲಿ ಜನ ಮಾಡ್ತಿರೂ ತಪ್ಪು ಅಂತ ಮುದುಕರು ಅನ್ನಬಹುದು. ತನ್ನ ಹೆಸರನ್ನ ನಾಲ್ಕೈದು ಸಾವಿರ ವರ್ಷದಿಂದ ದುರುಪಯೋಗ ಮಾಡ್ತಿದಾರೆ ಜನ ಅನ್ನೋದು ನಿಜವಾದ ದೇವರಿಗೆ ಗೊತ್ತಿರಬ್ಯಾಡವೆ? ಮತ ಧರ್ಮ, ದೇವರು, ಅನ್ನೋದು ಶುದ್ಧ ಮೌಢ್ಯ.'

'ಈ ಹವನ ವಿಗ್ರಹಪೂಜೆಯಲ್ಲವಲ್ಲ.'

'ಅಗ್ನಿ ಅಂದರೆ ದೇವರಲ್ಲವೆ? ಇಲ್ಲಿ ಬೆಂಕಿಗೆ ತುಪ್ಪ ಸುರಿದು ಹಾಳು ಮಾಡಿದರೆ ಅಲ್ಲಿ ಅವನಿಗೆ ಸೇರುತ್ತೆ ಅನ್ನೋ ನಂಬಿಕೆಗಲ್ಲವೇ ನೀವು ಮಾಡ್ತಿರೂದು?'

ಸತ್ಯಳ ಬುದ್ಧಿಗೆ ಶಾಕ್ ಹೊಡೆದಂತಾಯಿತು. ಮೈ ಜುಮ್ಮೆಂದಿತು. ಇದೂ ಒಂದು ತರಹದ ವಿಗ್ರಹಾರಾಧನೆಯೇ? ಇರಬಹುದು. ಆದರೆ ಬ್ರಾಹ್ಮಣೋಸ್ಯ ಮುಖಮಾಸೀತ್ ಎಂದು ಜಾತಿವಿಂಗಡಣೆಗೆ ಆಧಾರರೂಪವಾದ ವಿಗ್ರಹಕಲ್ಪನೆ ಯಂತೂ ಅಲ್ಲ. ಅವಳು ಹೇಳಿದಳು: 'ಮನುಷ್ಯನ ಆಧ್ಯಾತ್ಮಿಕ ತೃಪ್ತಿಗೆ ಅಥವಾ ಬೆಳವಣಿಗೆಗೆ ಒಂದಲ್ಲ ಒಂದು ಪ್ರತೀಕ ಬೇಕು. ನನಗೆ ಇದು ಅತ್ಯುತ್ತಮ ಅನಿಸುತ್ತೆ. ಎಲ್ಲವನ್ನೂ ಸುಟ್ಟು ಭಸ್ಮ ಮಾಡಿ ಶುಚಿ ಮಾಡುವ ಅಗ್ನಿಯ ಸಾಂಕೇತಿಕ ಅರ್ಥ ಸಹ ದೊಡ್ಡದು.'

'ನನಗೆ ಅದೆಲ್ಲ ಗೊತ್ತಿಲ್ಲ. ಆದರೆ ಮೂರು ನಾಲ್ಕು ಸಾವಿರ ವರ್ಷಗಳಿಂದ ಈ ಅಗ್ನಿಪೂಜೆಯನ್ನು ನಮ್ಮಿಂದ ದೂರ ಇಟ್ಟಿದಾರಲ್ಲ ಮೇಲಿನ ಮೂರು ಜಾತಿ ಯೋರು! ಇಷ್ಟು ದಿನ ಭೇದವನ್ನ ಬೆಳೆಸಿಕೊಂಡು ನಡೆದ ಈ ಪ್ರತೀಕಕ್ಕೆ ಯಾವ ನೀತಿ ಇದೆ? ಅಷ್ಟು ಸಾಕು ನನಗೆ ಅದನ್ನ ಒದೆದು ನೂಕುಕ್ಕೆ.'

'ಆದರೆ ಒಂದು ಮಾತು ನೋಡಿ. ಮತಧರ್ಮದ ಪ್ರತೀಕಕ್ಕೆ ರೂಢಿ

ಯಾವಾಗಲೂ ಮೈಲಿಗೆ ಮಾಡಿಕೊಂಡೇ ಬರುತ್ತೆ. ಉಳಿದ ಎಲ್ಲ ಪ್ರತೀಕಗಳಿಗಿಂತ ಇದು ಅತ್ಯಂತ ಕಡಿಮೆ ಮೈಲಿಗೆಯಾಗಿರೂ ಪ್ರತೀಕ ಅಂತ ಬೇಕಾದರೆ ಭಾವನೆ ಮಾಡಿ. ಒಂದಲ್ಲ ಒಂದು ಪ್ರತೀಕ ಮನುಷ್ಯನಿಗೆ ಬೇಕು. ಇದನ್ನೂ ತೆಗೆದು ಒಗೆದರೆ ನಮಗೆ ಉಳಿಯೋದು ಏನು? ನಾವೂ ಒಂದು ಧರ್ಮಕ್ಕೆ ಸೇರಿದೋರು ಅನ್ನೂ ಐಕ್ಯತೆ ಕೊಡೂದು ಯಾವುದು?'

'ಆ ಐಕ್ಯತೆ ಯಾಕೆ ಬೇಕು? ಮನುಷ್ಯ, ಮನುಷ್ಯನ ಹಾಗಿದ್ದರೆ ಸಾಲದೆ?'

'ಹಾಗಂತ ನೀವು ಅಂತೀರ. ಬಹುತೇಕ ಜನಕ್ಕೆ ಅಷ್ಟು ಸಾಲುಲ್ಲ. ಯಾವ ಪ್ರತೀಕವೂ ಬೇಡ ಅಂತ ಒಂದು ಗುಂಪು ನಿರ್ಧಾರ ಮಾಡಿ ಕೈಬಿಟ್ಟರೆ, ಉಳಿದ ಧರ್ಮದ ಗುಂಪುಗಳು ಸುಮ್ಮನಿರುಲ್ಲ. ಆ ಖಾಲಿ ಜಾಗದಲ್ಲಿ ತಮ್ಮ ಪ್ರತೀಕಾನ, ಅರ್ಥಾತ್ ತಮ್ಮ ನಂಬಿಕೇನ ಊರಿ ಬೇರು ಬೆಳೆಸುಕ್ಕೆ ಪ್ರಯತ್ನಪಡ್ತಾವೆ. ಹಿಂದೂಗಳಾದ ನಮಗೆ ಒಂದು ಸಮಾನ ಪ್ರತೀಕ ಬೇಕಲ್ಲವೆ? ತಡೀರಿ, ಇನ್ನೊಂದು ಸ್ವಲ್ಪ ಅನ್ನ ಸಾರು ಬಡುಸ್ತೀನಿ' – ಎಂದು ಅವಳು ಎಡಗೈಯಿಂದ ಅನ್ನ ಬಡಿಸುವ ಕೈ ಹಿಡಿದು ಬಡಿಸಿ, ಮೇಲೆ ಸಾರು ಹಾಕಿದಳು. ಅವನು ಸಾಕೆಂದ. ಮೊಸರನ್ನಕ್ಕೆ ಇಟ್ಟಿದ್ದ ಮತ್ತೊಂದು ತಟ್ಟೆಗೆ ಅನ್ನ ಬಡಿಸಹೋದಾಗ ಬೇಡವೆಂದ. ಅನ್ನಸಾರುಗಳನ್ನು ಚಮಚದಲ್ಲೇ ಕೂಡಿಸಿಕೊಂಡು ತಿನ್ನುತ್ತಾ ಹೇಳಿದ: 'ಹಿಂದೂ ಅನ್ನುವ ಮಾತು ಬಂದರೆ ನನಗೆ ಒಂದು ಥರಾ ವಿಚಿತ್ರ ಭಾವನೆ ಬರುತ್ತೆ. ಇಷ್ಟು ಸಾವಿರ ವರ್ಷ ಕಾಲ ನಮ್ಮನ್ನ ಹೀಗೆ ತಿರಸ್ಕಾರದಿಂದ ತುಳಿದಿರೂದಕ್ಕೆ ಅದನ್ನ ನಾನೆಷ್ಟು ದ್ವೇಷಿಸ್ತೀನಿ ಗೊತ್ತೆ? ಅದರ ಬೇರು ಬೇರುಗಳನ್ನ ನಾಶ ಮಾಡಿದರೂ ನನಗೆ ತೃಪ್ತಿಯಾಗುಲ್ಲ. ಖಾರವಾಗಿ ಮಾತಾಡ್ತಿದೀನಿ ಅನ್ನಬೇಡಿ. ನಿಜ ಹೇಳ್ತಿದೀನಿ.'

'ನನಗೆ ಅರ್ಥವಾಗುತ್ತೆ. ಆದರೆ ನಿಮ್ಮ ದ್ವೇಷ ಯಾವ ಮಟ್ಟ ಮುಟ್ಟಿದೆ ಗೊತ್ತಾ? ಅದರೊಳಗಿಂದ ಹೊರಗೆ ಬರುಕ್ಕೆ ನಿಮಗೆ ಸಾಧ್ಯವಿಲ್ಲ. ಅಷ್ಟು ಮಾತ್ರವಲ್ಲ. ನಿಮ್ಮ ದೇವರು, ನಂಬಿಕೆ ಆಚಾರಗಳನ್ನ ಮೇಲುಜಾತಿಯ ಹಿಂದುಗಳು ಎಷ್ಟು ಅನುಸರಿಸ್ತಾರೆ ಗೊತ್ತಿಲ್ಲವೆ? ಪ್ಲೇಗು ಕಾಲರಾ ಬಂದರೆ, ಹಸು ಕರು ಹಾಕದೆ ಇದ್ದರೆ, ಭೂಮಿ ಬಂಜರಾದರೆ, ಹರಕೆ ಹೊರೂದು ನಿಮ್ಮ ದೇವರಿಗೆ.'

'ಮೌಢ್ಯ ಮೌಢ್ಯಗಳ ಮಿಶ್ರಣದಿಂದ ಏಕತೆ ಸಾಧಿಸಿದೆ ನಿಜ. ಆದರೆ ಅವರು ನಮ್ಮನ್ನ ತುಳಿದಿರೂದು, ನಮ್ಮ ಜೊತೆ ಅನಾಚಾರ ಮಾಡಿರೂದು, ನಮ್ಮನ್ನ ಊರ ಹೊರಗೇ ಇಟ್ಟಿರೂದು, ನಮ್ಮ ನೆರಳು ತಾಕಿದರೂ ಮೈಲಿಗೆಯಾಗುತ್ತೆ ಅಂತ ದೂರ ನೆಗೆದಿರೂದು ಕಮ್ಮಿಯೆ?'

'ಚರಿತ್ರೆಯಲ್ಲಿ ಎಲ್ಲೀ ನೋಡಿ. ಪರಸ್ಪರ ಅನ್ಯಾಯ ಮಾಡಿರಲಿ, ಅನಾಚಾರ

ಮಾಡಿರಲಿ. ಕೆಲವು ಶತಮಾನಗಳಲ್ಲಿ ಅವರವರಲ್ಲೇ ಒಂದು ಥರ ಆಕರ್ಷಣೆ ಹುಟ್ಟಿಬಿಡುತ್ತೆ. ಅವರು ಒಂದೇ ಜನಾಂಗದ ಭಾಗವಾಗಿಬಿಡ್ತಾರೆ. ಹೊರಗೆ ಹೋಗುಕ್ಕೆ ಎಷ್ಟೇ ಪ್ರಯತ್ನಮಾಡಿ. ಸಾಧ್ಯವಾಗುಲ್ಲ. ಕೊನೆಗೆ ವೈದಿಕರನ್ನು ಮೀರಿಸುವ ವೈದಿಕರಾಗೂದೇ ನಿಮ್ಮ ಒಳಮನಸ್ಸಿನ ಆಶೆ. ಯಾಕೆಂದರೆ ನೀವೆಲ್ಲ ಒಂದಲ್ಲ ಒಂದು ಥರದಲ್ಲಿ ಒಂದಲ್ಲ ಒಂದು ನಂಬಿಕೆಯಲ್ಲಿ ವೈದಿಕ ಸಂತಾನವಾಗಿ ಬಿಟ್ಟಿದೀರ. ಅಲ್ಲದೆ....'

ಅಷ್ಟರಲ್ಲಿ ಬಾಗಿಲಿನಲ್ಲಿ ಯಾರೋ ಬಂದು ನಿಂತದ್ದು ಕಾಣಿಸಿತು. ಹೊರಗೆ ಭರೋ ಎಂದು ಮಳೆ ಜಡಿಯುತ್ತಿತ್ತು. ಇದುವರೆಗೂ ಮಾತಿನಲ್ಲಿದ್ದ ಅವರ ಗಮನ ಆ ಕಡೆಗೆ ಹೋಗಿರಲಿಲ್ಲ. ಹೊರಗೆ ಬಂದವನು ಹದಿನಾಲ್ಕು ಹದಿನೈದು ವರ್ಷದ ಹುಡುಗ. ಖಾಕಿ ನಿಕ್ಕರು ಖಾಕಿ ಶರಟು ಹಾಕಿದ್ದಾನೆ. ಬರಿಗಾಲು. ಮಳೆಯಿಂದ ರಕ್ಷಣೆಗೆಂದು ತಲೆಯ ಮೇಲೆ ಜೊಂಡಿನ ಗೊಂಗಡಿಯನ್ನು ಕವಿಚಿ ಕೊಂಡಿದ್ದಾನೆ. ಅವನನ್ನು ಎಲ್ಲಿಯೋ ಎಂದೋ ನೋಡಿರುವಂತೆ ಸತ್ಯಳಿಗೆ ಎನಿಸಿತು.

ಮೋಹನದಾಸ ಅವನನ್ನು ಮಾತನಾಡಿಸಿದ: 'ಇದೇನು ಹೊನ್ನೇಶ, ಹುಡಿಕ್ಕಂಡು ಬಂದ್ಯಾ?'

'ಹೂಂ. ನರಸಯ್ಯಾರು ಬೆಂಗಳೂರಿಂದ ಬಂದ್ರು. ನೀವು ಊರಿಗೆ ಹೋಗಿ-ದೀರ ಅಂದ್‌ರಂತೆ. ಅರ್ಜೆಂಟ್ ಅವರ ತಾವ ಹ್ವಾಗ್‌ಬೇಕು ಅಂದ್‌ರಂತೆ. ನಿಮ್ಮ ಗುಮಾಸ್ತರು ನಮ್ಮ ಹಾಸ್ಟೆಲಿಗೆ ಕರ್ಕಂಡ್ ಬಂದು, ನನ್ನ ಇವರಿಗೆ ದಾರಿ ತೋರಿಸು ಹ್ವಾಗು ಅಂದ್ರು. ನರಸಯ್ಯಾರ ಮೋಟಾರ್ ಸೈಕಲ್‌ನಲ್ಲಿ ಬಂದೆವು. ಊರಿಗೆ ಬಂದ್‌ಪಟೇಗೆ ಮಳೆ ಬಂತು. ಇವರ ತ್ವಾಟದ ತಾವುಕ್ಕೆ ಹ್ವಾಗಿವ ಭೌದು ಅಂತ ನಿಮ್ಮವ್ವಾರು ಅಂದ್ರು. ಅವರಿಗೆ ಅರ್ಜೆಂಟ್ ಐತಂತೆ. ಈಗಲೇ ಕರ್ಕಂಡ್ ಬಾ ಅಂದ್ರು. ಬಂದೆ.'

ಇವನನ್ನು ಎಲ್ಲಿ ನೋಡಿದ್ದೇನೆ, ಎಂದು ಆಶ್ಚರ್ಯಪಡುತ್ತಾ ಸತ್ಯ ಎಂದಳು: 'ಒಳಕ್ಕೆ ಬಾರಪ್ಪ, ಹೊರಗೆ ಯಾಕೆ ನಿಂತಿದೀಯ?'

'ಒಳಗೆ ಬಾ. ಗೊಂಗ್‌ಡೀನ ಬಾಗಿಲಲ್ಲಿ ನಿಲ್ಸು' – ಎಂದ ಮೋಹನದಾಸ ಸತ್ಯಳಿಗೆ ಹೇಳಿದ: 'ಇವನನ್ನ ನೀವು ನೋಡಿಲ್ಲ ಅಂತ ಕಾಣುತ್ತೆ. ತುಮಕೂರು ಹರಿಜನ ಬೋರ್ಡಿಂಗ್‌ನಲ್ಲಿ ಈಗ ಓದ್‌ತಿದಾನೆ. ನಮ್ಮೂರೋನೇ. ನಮ್ಮ ಮಾತಂಗಮ್ಮ ಅಂತ ಇದಾರಲ್ಲ, ಅವರ ಮಗ.'

ಹುಡುಗನಲ್ಲಿ ಯಾವ ವಿಶೇಷ ಪ್ರತಿಕ್ರಿಯೆಯೂ ಕಾಣಲಿಲ್ಲ. ಆದರೆ ಸತ್ಯಳ ತೆರೆದ ಬಾಯಿ ಹಾಗೆಯೇ ನಿಂತಿತು. ತಕ್ಷಣ ನೆನಪು ನೆಲೆ ಹಿಡಿಯಿತು. ತಾನು

ಹತ್ತು ಹನ್ನೆರಡರ ಹುಡುಗಿಯಾಗಿದ್ದಾಗ ವೆಂಕಟೇಶ ಹೀಗೆಯೇ ಕಾಣುತ್ತಿದ್ದ. ಅವಳ ಮೈ ಜುಂ ಎಂದಿತು. ಕೊನೆಯ ತುತ್ತು ಮೊಸರನ್ನ ಹಿಡಿದುಕೊಂಡಿದ್ದ ಅವಳ ಬಲಗೈ ನಡುಗಲು ಮೊದಲಾಯಿತು. ಮೋಹನದಾಸನಿಗೆ ಅದ್ಯಾವುದೂ ಗಮನಕ್ಕೆ ಬರಲಿಲ್ಲ. 'ಒಂದು ಕೊಡೆ ಇದೆಯೇ?' – ಎಂದು ಕೇಳಿದ.

'ಇಲ್ಲ'ವೆಂದು ಹೇಳುವಾಗ ಅವಳ ಧ್ವನಿ ಕೂತುಹೋಗಿತ್ತು.

'ಹೊನ್ನೇಶ, ಒಂದು ಕೆಲಸ ಮಾಡು. ಈ ಗೊಂಗಡಿ ನಾನು ತಗೊಂಡು ಹೋಗ್ತೀನಿ. ನೀನು ಇಲ್ಲೇ ಕಾದಿದ್ದು ಮಳೆ ನಿಂತ ಮ್ಯಾಲೆ ಬಾ.'

'ನಾನು ವಾಪಸ್ ಟುಮ್‌ಕೂರಿಗೆ ಹ್ವಾಗ್‌ಬೇಕು. ನಾಳೆ ಸ್ಕೂಲು ಹ್ವಾಗುತ್ತೆ' – ಅವನೆಂದ.

'ನರಸಯ್ಯನೋರು ಇವತ್ತೇ ಹೋದ್‌ರೆ ನಾನು ಬಂದು ನಿನ್ನ ಕರ್‌ಕಂಡು ಹೋಗ್ತೀನಿ. ಈ ಮಳೇಲಿ ಅವರು ತಾನೆ ಹ್ಯಾಗೆ ಹೋದಾರು ಮೋಟರ್‌ಸೈಕಲಿನಲ್ಲಿ? ನಾಳೆ ಬೆಳಗ್ಗೆ ಫಸ್ಟ್ ಬಸ್ಸಿನಲ್ಲಿ ಹ್ವರ್‌ಟ್‌ರೆ ಹತ್ತು ಗಂಟೆಗೆ ಅಲ್ಲಿರ್ತಿ. ನಾನೂ ಬತ್ತೀನಿ' – ಎಂದ ಅವನು, ತಟ್ಟೆಯಲ್ಲಿದ್ದ ಅನ್ನವನ್ನು ಬೇಗ ಬೇಗ ಚಮ್‌ಚದಲ್ಲಿ ತೆಗೆದು ಬಾಯಿಗೆ ಹಾಕಿಕೊಂಡು ಹೊರಳಿಸಿ ನುಂಗಿ, ಚಮ್‌ಚವನ್ನು ತಟ್ಟೆಯಲ್ಲಿ ಬಿಟ್ಟು ಬಟ್ಟಲಿನಿಂದ ನೀರು ಕುಡಿದು ಅದನ್ನೇ ಬಾಯಿ ಮುಕ್ಕುಳಿಸಿ ನುಂಗಿ, 'ನನ್ನ ಪ್ಲಾನಿನ ಸ್ನೇಹಿತರೇ ಅವರು' ಎಂದು ಸತ್ಯಳಿಗೆ ಹೇಳಿ, ಎದ್ದು ಪ್ಯಾಂಟಿನ ತೋಳುಗಳನ್ನು ಮಡಿಸಿ ಮೇಲಕ್ಕೆ ಮಾಡಿಕೊಂಡು ಬುಶ್‌ಶರಟು ತೊಟ್ಟು ಗೊಂಗಡಿಯನ್ನು ತಲೆಗೆ ಕವಿಚಿಕೊಂಡು ಬೂಟನ್ನು ಅಲ್ಲಿಯೇ ಬಿಟ್ಟು ಮಳೆಯಲ್ಲಿ ಹೊರಟುಹೋದ.

೫೫

ಹೊನ್ನೇಶನ ಕಾಲು ಮುಂಡಿಯವರೆಗೂ ನೆನೆದಿತ್ತು. ಮೇಲೆ ಸುರಿಯುತ್ತಿದ್ದ ಪ್ರಚಂಡ ಮಳೆಯನ್ನು ತಡೆಯದ ಗೊಂಗಡಿಯಿಂದ ನೀರು ಸೋರಿ, ಶರಟು ಮತ್ತು ನಿಕ್ಕರು ಅಲ್ಲಲ್ಲಿ ನೆನೆದಿದ್ದುವು. ಚಳಿಯಿಂದ ಅವನು ನಡುಗುತ್ತಿದ್ದ. ಕುಳಿತಲ್ಲಿಂದ ಮೇಲೆ ಎದ್ದು ಕೋಣೆಗೆ ಹೋಗಿ ಎಡಗೈಲಿ ಒಂದು ಟವೆಲು ಹಿಡಿದುಕೊಂಡು ಬಂದು ಅವನ ಮುಂದೆ ಹಿಡಿದು ಸತ್ಯ, 'ಕಾಲು ಒರೆಸಿಕೊಳಪ್ಪ' ಎಂದಳು.

'ಏನೂ ಬ್ಯಾಡ್ರಿ' – ಅವಳಿಗೆ ಮುಖ ಕೊಟ್ಟು ಮಾತಾಡದೆ ಅವನು ಎಂದ.

'ಚಳಿಯಾಗುತ್ತೆ ಒರೆಸ್ಕ' – ಎಂದು ಟವೆಲನ್ನು ಅವನ ಹೆಗಲ ಮೇಲೆ ಇಳಿ

ಬಿಟ್ಟು ಅವಳು, ತಾನು ಮತ್ತು ಮೋಹನದಾಸ ಊಟ ಮಾಡಿದ ತಟ್ಟೆ ಕುಡಿದ ಲೋಟಗಳನ್ನು ಹೊರಗೆ ತಂದು ಸೂರಿನ ನೀರಿಗೆ ಹಿಡಿದು ತೊಳೆದಳು. ಅನಂತರ, ಊಟ ಮಾಡಿದ ನೆಲವನ್ನು ತೊಳೆದು ಒರೆಸಿದಳು.

ಹೊನ್ನೇಶ ಹೆಗಲ ಮೇಲಿದ್ದ ಟವೆಲನ್ನು ಕೈಲಿ ಮುಟ್ಟದೆ ಬೀದಿಯ ಬಾಗಿಲಿನ ಕಡೆಗೆ ನೋಡುತ್ತಾ ನಿಂತಿದ್ದ. ಸತ್ಯ ಕೇಳಿದಳು: 'ತುಮಕೂರಿನಿಂದ ಎಷ್ಟು ಹೊತ್ತಿಗೆ ಹೊರಟೆ ಮಗು?'

ಅವನು ಮಾತನಾಡಲಿಲ್ಲ. ಅವಳು ಮತ್ತೆ ಅದೇ ಪ್ರಶ್ನೆ ಕೇಳಿದನಂತರ ಅವಳ ಕಡೆಗೆ ತಿರುಗದೆ ಹೇಳಿದ: 'ಹತ್ತು ಹತ್ತೂ ಕಾಲಿಗೆ.'

'ಅಂದ್ರೆ ನಿನ್ನ ಊಟವಾಗಿಲ್ಲ. ಮಾಡಿದ ಅಡಿಗೆಯೇ ಮಿಕ್ಕಿದೆ. ಇಕ್ತೀನಿ. ಊಟ ಮಾಡು ಏಳು. ಕೈ ತೊಳ್ಕ.'

ಅವನು ಮಾತನಾಡಲಿಲ್ಲ. ತನಗೆ ಹೊಂದದ ಸನ್ನಿವೇಶದಲ್ಲಿ ಒಳಗೇ ಹಿಂಸೆ ಪಡುತ್ತಿರುವಂತೆ ಮುಖ ಮಾಡಿಕೊಂಡು ಸೂರಿನ ನೀರನ್ನು ನೋಡುತ್ತಿದ್ದ.

'ಊಟ ಮಾಡು, ಇಕ್ತೀನಿ' – ಸತ್ಯ ಮತ್ತೆ ಕೇಳಿದಳು.

ಅವನು ಸರ‍್ರನೆ ಅವಳ ಕಡೆ ಮುಖ ತಿರುಗಿಸಿ ಹೇಳಿದ: 'ಎಂಜಲು ತಿನ್ನೋಕ್ ನಾನೇನು ಗತಿಗೆಟ್ಟಿಲ್ಲ ಕಣ್ರೀ.' ಅವನ ಕಣ್ಣಿನ ಛಾಯೆ, ಹುಬ್ಬುಗಳ ವಿನ್ಯಾಸ, ಮತ್ತು ಹಣೆ ಕೆನ್ನೆಗಳ ಗೆರೆಗಳು, ಸಿಟ್ಟಿನಿಂದ ಇರಿಯಲು ಬರುವ ಹೋರಿಯ ಮುಖದಂತೆ ಕಂಡುವು. ಸತ್ಯಳಿಗೆ ದಿಗ್ಭ್ರಮೆಯಾದಂತಾಯಿತು. ಇವನ್ಯಾಕೆ ಹೀಗೆ ಆಡುತ್ತಾನೆ? ಇದು, ತಿಂದು ಬಿಟ್ಟ ಎಂಜಲಲ್ಲ. ಬೇರೆ ತಟ್ಟೆಗಳಿಗೆ ಬಡಿಸಿಕೊಂಡ ಮೇಲೆ ಉಳಿದಿರುವ ಅಡಿಗೆ ಅಂತ ಯಾರಿಗಾದರೂ ಸ್ಪಷ್ಟವಾಗಿ ಕಾಣುತ್ತೆ – ಎಂದು ಅವಳು ಯೋಚಿಸುವಷ್ಟರಲ್ಲಿಯೇ ಅವನು ಹೆಗಲಮೇಲಿದ್ದ ಟವೆಲನ್ನು ತೆಗೆದು ಮುಂದಲಿಗೆಯ ಮೇಲೆ ಹಾಕಿ ಹೊರಗೆ ಹೋದ. ದಢದಢನೆ ಹೆಜ್ಜೆ ಹಾಕಿ ಸೂರುಕಟ್ಟಿನಿಂದ ಆಚೆಗೆ ನಡೆದು ಮಳೆಯಲ್ಲಿ ಸರಸರನೆ ಎಡಭಾಗದ ಬದುವಿನಲ್ಲಿ ತಿರುಗಿದ. ಸತ್ಯಳಿಗೆ ಅರ್ಥವೇ ಆಗಲಿಲ್ಲ. ಎದುರಿನ ಕೋಣೆಗೆ ಹೋಗಿ ಅದರ ಕಿಟಕಿಯನ್ನು ತೆರೆದು ನೋಡಿದಳು. ತಲೆ ಮೈ ಕೈ ಬಟ್ಟೆಗಳನ್ನೆಲ್ಲ ಒದ್ದೆ ಮಾಡಿಕೊಂಡು, ಭರ‍್ರೋ ಎಂದು ಸುರಿಯುತ್ತಿದ್ದ ಮಳೆಯಲ್ಲಿ ಹೊಳೆಬಾಗಿಲಿನ ಕಡೆಗೆ ಹೋಗುತ್ತಿದ್ದ. ಕೂಗಿದರೂ ಅವನಿಗೆ ಕೇಳುತ್ತಿರಲಿಲ್ಲ. ಕೇಳಿದರೂ ಅವನು ಹಿಂತಿರುಗುವುದಿಲ್ಲವೆಂದು ಅರ್ಥಮಾಡಿಕೊಂಡು ಅವಳು ಕೂಗಲಿಲ್ಲ. ಎರಡು ನಿಮಿಷದಲ್ಲಿ ಅವನು ಮಳೆಯಲ್ಲಿ ಮರೆಯಾದ.

ತಂದೆ ಸತ್ತು, ಅವರು ಇದೇ ಜಾಗದಲ್ಲಿ ಗುಡಿಸಲಿನಲ್ಲಿ ತಂದಿಟ್ಟಿದ್ದ ಹಣವನ್ನು ಮಾತಂಗಿಗೆ ಕೊಟ್ಟಮೇಲೆ, ಅವಳ ಮಗನನ್ನು ನೋಡಬೇಕೆಂಬ ಕುತೂ

ಹಲ ಸತ್ಯಳಿಗೆ ಹಲವು ಸಲ ಉಂಟಾಗಿತ್ತು. ತುಮಕೂರಿನಲ್ಲಿ ಓದುತ್ತಿದ್ದಾನೆ, ಅವನಿಗೆ ಸ್ಕಾಲರ್‌ಶಿಪ್ ಕೊಡುತ್ತಿದೆ ಎಂಬುದನ್ನು ಬಿಟ್ಟರೆ ಅವಳಿಗೆ ಅವನ ಬಗೆಗೆ ಮತ್ತೇನೂ ತಿಳಿದಿರಲಿಲ್ಲ. ಆ ದಿನದ ನಂತರ ಅವಳು ಮಾತಂಗಿಯನ್ನೂ ನೋಡಿರಲಿಲ್ಲ. ಒಟ್ಟು ಐದಾರು ಸಲ ಬೆಟ್ಟಯ್ಯನವರ ಮನೆಗೆ ಹೋಗಿದ್ದಳಾದರೂ ಅವಳ ಭೇಟಿಯಾಗಿರಲಿಲ್ಲ. ಅವಳ ಮನೆಯೂ ಬೆಟ್ಟಯ್ಯನವರ ಮನೆಯ ಸಾಲಿನಲ್ಲೇ ಎಲ್ಲೋ ಕೊನೆಯಲ್ಲಿದೆಯಂತೆ ಎಂದು ಕೇಳಿದುದಷ್ಟೆ. ತನ್ನ ತೋಟ ಹೊಲಗದ್ದೆಗಳನ್ನು ಬಿಟ್ಟರೆ ಹೊರಗೆ ಎಲ್ಲೂ ಹೋಗದ ಅವಳಿಗೆ ಊರಿನ ಜನರ ಸಂಪರ್ಕವೂ ಇರುತ್ತಿರಲಿಲ್ಲ. ತಾನು ಸ್ವಂತ ಬೇಸಾಯಕ್ಕೆ ನಿಂತಮೇಲೆ ಮಾತಂಗಿಯ ಬಗೆಗಿನ ಕುತೂಹಲವೇ ಉಳಿದಿರಲಿಲ್ಲ. ಅವಳ ಮಗನ ನೆನಪೂ ಪ್ರಜ್ಞೆಯಲ್ಲಿ ಬಂದಿರಲಿಲ್ಲ. ಆದರೆ ಅವನು ಈಗ ಇದ್ದಕ್ಕಿದ್ದಹಾಗೆಯೇ ಇಲ್ಲಿಗೆ ಬಂದದ್ದು ಮಾತ್ರವಲ್ಲ, ಅನಾವಶ್ಯಕ ಕೋಪ ತಿರಸ್ಕಾರಗಳನ್ನು ತೋರಿಸಿ ಇಂತಹ ಮಳೆಯಲ್ಲಿ ಒಂದು ಕೊಡೆ, ಗೊಂಗಡಿ, ಅಥವಾ ಗೊಮ್ಮಟೆ, ಯಾವುದೂ ಇಲ್ಲದೆ ಓಡಿಹೋದ. ಹೋದರೆ ಹೋಗಲಿ ಎಂದು ಅವಳು ಇರಚಲು ಹೊಡೆಯುವುದನ್ನು ತಪ್ಪಿಸಲು ಕಿಟಕಿಯನ್ನು ಮುಚ್ಚಿ ಅಡಿಗೆಮನೆಗೆ ಹೋಗಿ, ಉಳಿದ ಅನ್ನ ಸಾರುಗಳನ್ನು ತೆರವು ಮಾಡಿ ಅಡಿಗೆಯ ಪಾತ್ರೆಗಳನ್ನು ತೊಳೆಯಲು ಒಲೆಯ ಪಕ್ಕದ ಬಚ್ಚಲು ಮುಂದೆ ಕೂತಳು. ಆದರೆ ಉಪೇಕ್ಷೆಮಾಡಲು ಪ್ರಯತ್ನಿಸಿದರೂ ಅವನ ನೆನಪು ಮರೆಯಲಾಗಲಿಲ್ಲ. ಚಿಕ್ಕ ಹುಡುಗಿಯಾಗಿದ್ದಾಗ ತಾನು ವೆಂಕಟೇಶನನ್ನು ನೋಡಿದ ನೆನಪೇ ಎದ್ದು ಎದ್ದು ತೇಲುತ್ತಿತ್ತು. ವೆಂಕಟೇಶ ಇವನಿಗಿಂತ ಬಣ್ಣದಲ್ಲಿ ಬಿಳುಪು. ಇವನದು ತನ್ನದೇ ಬಣ್ಣ. ಯಾಕೆ ಈ ತಿರಸ್ಕಾರ, ಈ ದ್ವೇಷ ಅವನಿಗೆ? ಎಂಜಲು ತಿನ್ನಕ್ಕೆ ಗತಿಕೆಟ್ಟಿಲ್ಲ ಕಣ್ರೀ ಅಂದನಲ್ಲ, ಸಿರ್ರನೆ ತಿವಿಯುವ ಎತ್ತಿನ ಹಾಗೆ ಮುಖ ಕಣ್ಣುಗಳನ್ನು ಮಾಡಿಕೊಂಡು?

ಅವಳು ಪಾತ್ರೆ ತೊಳೆದು ಮುಗಿಸುವ ಹೊತ್ತಿಗೆ ಮಳೆಯ ಹೊಡೆತ ಸ್ವಲ್ಪ ಕಡಿಮೆಯಾಯಿತು. ಮತ್ತೆ ಅರ್ಧ ಗಂಟೆಯಲ್ಲಿ ಸಂಪೂರ್ಣವಾಗಿ ನಿಂತಿತು. ಒಂದು ಕೊಡೆ ತರಬೇಕು ಎಂದುಕೊಂಡಳು. ಇದ್ದಕ್ಕಿದ್ದಹಾಗೆಯೇ ಗೊಂಗಡಿಯ ಮೇಲೆ ಆಸೆ ಹುಟ್ಟಿತು. ಕುರಿ ಕಾಯುವವರು, ಬೆಸ್ತರು, ಹೊಲೆಯರು ಅದನ್ನು ಹಾಕಿಕೊಳ್ಳುವುದನ್ನು ಅವಳು ನೋಡಿದ್ದಳು. ಆದರೆ ಒಂದು ದಿನವೂ ತಾನು ಹಾಕಿಕೊಂಡಿರಲಿಲ್ಲ. ಜೋಂಡಿನದಾದುದರಿಂದ ಹಗುರವಾಗಿರುತ್ತೆ. ಕೊಡೆಗಿಂತ ಹೆಚ್ಚು ರಕ್ಷಣೆ. ಮೊಣಕಾಲಿನ ತನಕ ಬರುವ ಗುಡಿಸಲನ್ನು ಹೊತ್ತು ನಡೆಯುವ ಹಾಗಿರುತ್ತೆ. ಖಂಡಿತ ಮಾಡಿಸಬೇಕು. ಎಲ್ಲಿ ಸಿಕ್ಕುತ್ತೆ?—ಎಂದು ಯೋಚಿಸುತ್ತಾ ಮನೆಯಿಂದ ಹೊರಗೆ ಬಂದು ಬದುವಿನ ಮೇಲೆ ಹೆಜ್ಜೆ ಹಾಕಿ ನೋಡಿ

ದಳು. ತೋಟದ ನೆಲ ಬದುಗಳೆಲ್ಲ ಒಂದೇ ಆಗಿ, ನೀರು ಕೆಂದುತಗಡು ಜೋಡಿದಂತೆ ಒಂದು ಮಟ್ಟಕ್ಕೆ ನಿಂತಿತ್ತು. ಇಂತಹ ಮಳೆಯನ್ನು ಚಿಕ್ಕ ವಯಸ್ಸಿನಲ್ಲಿ ನೋಡಿದುದಷ್ಟೆ. ಕಳೆದ ಆರು ಮಳೆಗಾಲಗಳನ್ನು ಮೈಸೂರಿನಲ್ಲಿ ಕಳೆದಿದ್ದಳು. ಒಂದು ಮಳೆಗಾಲ ಬೆಂಗಳೂರಿನಲ್ಲಿ ಹೋಯಿತು. ಹೋದ ವರ್ಷ ಇಷ್ಟೊಂದು ಗಟ್ಟಿ ಮಳೆ ಬೀಳಲೇ ಇಲ್ಲ. ಬೇಲಿಯ ದಡಕ್ಕೆ ಬಂದು ಹಳ್ಳದ ಕಡೆಯ ಗದ್ದೆಗಳನ್ನು ನೋಡುತ್ತಾಳೆ: ಮೆಟ್ಟಲು ಮೆಟ್ಟಲುಗಳಂತೆ ಕಾಣುವ ಒಂದೊಂದು ಮಡಿಗಳ ತುಂಬ ನೀರು ತುಂಬಿದೆ. ಎಷ್ಟೋ ಬದುಗಳು ಕೊಚ್ಚಿ ಹುಂದಿವೆ. ತಾನು ಹೊಸದಾಗಿ ಹಾಕಿದ್ದ ತೆಂಗಿನ ಸೊಸಿಗಳ ನೆನಪಾಯಿತು. ಒಳಭಾಗಕ್ಕೆ ತಿರುಗಿ ಹೋಗಿ ಪರೀಕ್ಷಿಸಿದಳು. ಅದೃಷ್ಟಕ್ಕೆ ಯಾವುವೂ ಕೊಚ್ಚಿರಲಿಲ್ಲ; ಗರಿ ಅಥವಾ ಸುಳಿ ತಿರುಚಿಹೋಗಿರಲಿಲ್ಲ. ಆದರೆ ಹಳ್ಳದ ಜಾಗದಲ್ಲಿದ್ದವುಗಳ ಭರ್ತಿ ನೀರು ನಿಂತಿತ್ತು. ಹಾಗೆಯೇ ಬಿಟ್ಟರೆ ಸೊಸಿಗಳು ಕರಗಿಹೋಗುತ್ತಿದ್ದುವು. ಹಿಂಭಾಗದ ಮನೆಗೆ ಹೋಗಿ ಗುದ್ದಲಿ ತಂದು ಸೀರೆಯನ್ನು ಮಂಡಿಯ ತನಕ ಬರುವಂತೆ ಕಸೆ ಕಟ್ಟಿ ಸೆರಗನ್ನು ಸುತ್ತಿ ಸೊಂಟಕ್ಕೆ ಬಿಗಿದು, ಒಂದೊಂದು ಮಡಿಯ ತಗ್ಗಿನ ಜಾಗದ ಬದುವಿನಲ್ಲೂ ಗೇಣಗಲ ಅಗೆದು ನೀರು ಹರಿಯಲು ದಾರಿ ಮಾಡಿದಳು.

ಎಲ್ಲವನ್ನೂ ಮಾಡಿ, ನೀರು ಸರಿಯಾಗಿ ಹರಿಯುತ್ತಿದೆಯೇ ಎಂದು ಪರೀಕ್ಷಿಸುತ್ತಿರುವಷ್ಟರಲ್ಲಿ ಅಲ್ಲಿಗೆ ಮೋಹನದಾಸ ಬಂದ. ಈಗ ಅವನು ಲುಂಗಿ ಪಂಚೆ ಉಟ್ಟಿದ್ದ. ಬರಿಕಾಲು. ಕೈಲಿ ಕೊಡೆಯಿತ್ತು. ಅವನ ಹಿಂದೆಯೇ ಮತ್ತೊಬ್ಬರು. ಸುಮಾರು ಅವನಷ್ಟೇ ವಯಸ್ಸು. ಟೆರಿಲಿನ್ ಶರಟು ಹಾಕಿದ್ದರು. ಪ್ಯಾಂಟನ್ನು ಮೇಲಕ್ಕೆ ಮಡಿಸಿದ್ದರು. ಕಾಲಿನ ಬೂಟುಗಳಿಗೆ ಕೆಸರು ಮೆತ್ತಿಕೊಂಡಿತ್ತು. ಮೋಹನದಾಸ ಹೇಳಿದ: 'ಇವರು ವಾಪಸ್ ಹೋಗಬೇಕು. ಮೋಟರ್ ಸೈಕಲ್ ನೋಡ್ಕಳೂ ಹಾಗೆ ಹೇಳಿ ಪೊನ್ನೇಶನನ್ನ ನಿಲ್ಲಿಸಿ ಬಂದಿದೀನಿ. ನಿಮ್ಮನ್ನ ನೋಡಿ ಹೋಗಬೇಕು, ಕೊಚ್ಚೆಯಾದರೂ ಪರವಾಗಿಲ್ಲ ಅಂದರು. ನರಸಯ್ಯನೋರು ಅಂತ. ನಮ್ಮ ಜೊತೆ ಸದಸ್ಯರು.'

"ಪುಸ್ತಕ 'ಎ' ಕ್ಲಾಸಾಗಿ ಬರೆದಿದೀರ. ನಮ್ಮ ಇಡಿ ಕಮ್ಯೂನಿಟಿಯೇ ನಿಮಗೆ ಗ್ರೇಟ್‌ಫುಲ್ ಆಗಿರಬೇಕು" – ಎಂದು ನರಸಯ್ಯನವರು ಕೈಮುಗಿದರು. ಪರಸ್ಪರ ಅಭಿವಾದನೆಗಳಾದಮೇಲೆ, ಮನೆಯ ಒಳಗೆ ಬಂದು ಕೂರುವಂತೆ ಸತ್ಯ ಹೇಳಿದಳು.

'ಇಲ್ಲ. ನಾನು ಈಗ ತುಮಕೂರಿಗೆ ಹೋಗಿ ಅಲ್ಲಿಂದ ಬೆಂಗಳೂರು ಮುಟ್ಟಬೇಕು. ಇನ್ನೊಂದು ಸಲ ಬತ್ತೀನಿ. ನಾವೆಲ್ಲ ಒಂದೇಯಲ' – ಎಂದ ಅವರು

ಕೈಮುಗಿದು ಹೊರಟೇಬಿಟ್ಟರು.

'ಇವರುನ್ನ ರಸ್ತೆಗಂಟ ಕಳಿಸಿ ಬತ್ತೀನಿ. ನನ್ನ ಬೂಟು ಇಲ್ಲೇ ಅವೆ' – ಎಂದು ಹೇಳಿ ಮೋಹನದಾಸ ಅವರನ್ನನುಸರಿಸಿದ.

ಅರ್ಧ ಗಂಟೆಯ ನಂತರ ಅವನು ಹಿಂತಿರುಗಿದಾಗ ಸತ್ಯ ಮನೆಯ ಒಳಗೆ ಇದ್ದಳು. 'ಬೆಳಗ್ಗೆ ಕೊಡಲಿ ಹಿಡಿದಿದ್ದಿರಿ. ಈಗ ಗುದ್ದಲಿ ಹಿಡಕಂಡಿದ್ದೀರಿ. ಇನ್ನು ಕತ್ತಿ ಹಿಡಿದಿರುವಾಗ ನಿಮ್ಮನ್ನ ನೋಡಿಲ್ಲ' – ಎನ್ನುತ್ತಾ ಅವನು ಬಾಗಿಲಲ್ಲೇ ನಿಂತು ಕೇಳಿದ: 'ಒಂದು ಚೊಂಬು ನೀರು ಕೊಡಿ. ಕಾಲಿನ ಕೆಸರು ತೊಳ ಕೊಂಡು ಒಳಗೆ ಬತ್ತೀನಿ.'

ಅಂಗಾಲನ್ನು ಕಲ್ಲುಚಪ್ಪಡಿಗೆ ಉಜ್ಜಿ ಉಜ್ಜಿ ತೊಳೆದನಂತರ, ಅವಳು ಕೊಟ್ಟ ಟವೆಲಿನಲ್ಲಿ ಕಾಲು ಒರೆಸಿಕೊಂಡು ಒಳಗೆ ಬಂದು ಮುಂದಲಿಗೆಯ ಮೇಲೆ ಕುಳಿತ. ಅವನಿಂದ ಟವೆಲನ್ನು ಇಸಿದುಕೊಳ್ಳುವಾಗ ಅವಳಿಗೆ ಹೊನ್ನೇಶನ ನೆನಪು ಬಂತು. ಕೇಳಿದಳು: 'ಹೊನ್ನೇಶ ಅನ್ನೂ ಹೆಸರು ಯಾರಿಟ್ಟದ್ದು?'

'ಅವರಪ್ಪ ಇಟ್ಟಿದ್ದನಂತೆ ಹೊನ್ನೂರ ಅಂತ. ಅವರಪ್ಪ ಅಂದ್ರೆ....' – ಎಂದು ಅವನು ಅನುಮಾನಿಸುತ್ತಿರುವಾಗ ಸತ್ಯ, 'ವ್ಯಂಗ್ಯ ಬ್ಯಾಡ. ಮುಂದೆ ಹೇಳಿ' ಎಂದಳು.

'ವ್ಯಂಗ್ಯಕ್ಕಲ್ಲ. ಗ್ಯಾಪಕಕ್ಕೆ ಬಂತು ಅಷ್ಟೆ. ಹಂಗಂದೆ. ಆಮ್ಯಾಲೆ ತುಮ- ಕೂರಿನ ಎ. ಕೆ. ಬೋರ್ಡಿಂಗಿಗೆ ಸೇರಿದಮ್ಯಾಲೆ, ಹೊನ್ನೇಶ ಅಂತ ಇವನೇ ಮಾಡುಸ್ಕಂಡಿದಾನೆ.'

'ಜಾಣ ಅಂತ ಕಾಣುತ್ತೆ. ಆದರೆ ಒಂದು ಥರ ಒರಟು. ನೀವು ಹೋದ ಮೇಲೆ ನೋಡಿ' – ಎಂದು ಅವಳು, ಅವನು ಅಂದ ಮಾತು ಮತ್ತು ನುಳಿಯಲ್ಲೇ ಹೊರಟುಹೋದದ್ದನ್ನು ವಿವರವಾಗಿ ತಿಳಿಸಿ, ಅನಂತರ ಕೇಳಿದಳು: 'ನಮ್ಮ ತಂದೆಯ ವಿಷಯ ಅವನಿಗೇನಾದರೂ ಗೊತ್ತೆ?'

'ಊಂಗೂಂಗೇ ಗೊತ್ತು. ಅವನಿಗೂ ಗೊತ್ತಿರಬೌದು.'

ಅವಳು ಅಂತರ್ಮುಖಿಯಾದಳು. ಅದೆಲ್ಲ ಗೊತ್ತಿದ್ದರೆ ಅವನಲ್ಲಿ ಹೀಗೆ ತಿರಸ್ಕಾರ ಬೆಳೆದಿರುವುದು ಸಹಜವೇ. ಆದರೆ ಇಷ್ಟೆಲ್ಲ ತಿಳಿವಳಿಕೆ, ಇಂತಹ ಮಾತು, ಈ ವಯಸ್ಸಿನಲ್ಲಿಯೇ ಬರಲು ಸಾಧ್ಯವೇ ಎನಿಸಿತು. ಶತಭಾಗ ಅಸಾಧ್ಯ ವೆನ್ನಿಸಿದ್ದರೂ ಸಾಮಾನ್ಯವಾಗಿ ಸಾಧ್ಯವಿದ್ದೀತೆಂದುಕೊಂಡು ಕೇಳಿದಳು: 'ಅವನು ಈ ವಿಷಯಾನ ನಿಮ್ಮ ಕೈಲಿ ಎಂದಾದರೂ ಮಾತಾಡಿದಾನೆಯೆ?'

'ಇಲ್ಲವಲ್ಲ. ಅವನ್ನ ನಾನು ತಾನೆ ಹ್ಯಾಗೆ ಆದಲಿ?'

ಸತ್ಯ ಅಲ್ಲಿಗೆ ಸುಮ್ಮನಾದಳು. ಕಾಫಿ ಮಾಡುವುದಕ್ಕೆಂದು ಎದ್ದು ಅಡಿಗೆ

ಮನೆಗೆ ಹೋದಳು. ಮೋಹನದಾಸ ಕೇಳಿದ: 'ನರಸಯ್ಯನೋರು ಯಾಕೆ ಬಂದಿದ್ರು ಗೊತ್ತಾ?'

'ನೀವು ಹೇಳಿದರೆ ಗೊತ್ತಾಗುತ್ತೆ.'

'ಪುಸ್ತಕದ ಮೂವತ್ತೆರಡು ಪುಟ ಕಂಪೋಸ್ ಆಗಿದೆಯಂತೆ. ಎಷ್ಟು ಕಾಪಿ ಅಚ್ಚು ಮಾಡಿಸಬೇಕು ಅಂತ ಅವರವರಲ್ಲೇ ಚರ್ಚೆ ನಡೀತಂತೆ. ಕೊನೆಗೆ ನನ್ನ ಕೇಳುಕ್ಕೆ ಇವರನ್ನ ಕಳಿಸಿದರು. ಇಪ್ಪತ್ತು ಸಾವಿರ ಕಾಪಿ ಹಾಕಿಸೂದು ಅಂತ ತೀರ್ಮಾನ ಮಾಡಿದೆವು. ದುಡ್ಡು ಪಡ್ಡು ಇಲ್ಲ. ನಮ್ಮ ಜಾತಿಯ ಪ್ರತಿಯೊಬ್ಬ ವಿದ್ಯಾವಂತನಿಗೂ ಒಂದೊಂದು ಕಾಪಿ, ಹೈಸ್ಕೂಲು ಕಾಲೇಜು ಮಟ್ಟದಲ್ಲಿ ಓದುವ ಹುಡುಗರಿಗೆಲ್ಲ ಒಂದೊಂದು ಕಾಪಿ, ನಮ್ಮ ಹಾಸ್ಟೆಲುಗಳಿಗೆಲ್ಲ ಎರಡೆರಡು ಕಾಪಿ ಕೊಡಬೇಕು ಅಂತ ತೀರ್ಮಾನ ಮಾಡಿದೆವು. ಇದೇ ವಿಷಯ ತಗಂಡು ನಾನು ನಮ್ಮೋರ ಸಭೆ ಸೇರಿಸಿ ಲೆಕ್ಚರ್ ಟೂರ್ ಮಾಡಬೇಕು ಅಂತ ತೀರ್ಮಾನ ಮಾಡಿದಾರಂತೆ. ಯಾಕೆ ಅಂದ್ರೆ ನಂಗೆ ಚನ್ನಾಗಿ ಮಾತಾಡುಕ್ಕೆ ಬರುತ್ತೆ.'

'ಅಂದ್ರೆ ಮುಂದೆ ಎಂ.ಎಲ್.ಎ.ನೋ ಮಂತ್ರಿಯೋ ಆಗ್ತೀರ' – ಉರಿಯುತ್ತಿದ್ದ ಸೋಗೆಗೆ ಇನ್ನೂ ಒಂದು ತುಂಡು ಕೊಡುತ್ತಾ ಹೇಳಿದಳು.

'ಮಂತ್ರಿಯಾಗೋದು ಮುಖ್ಯವಲ್ಲ. ಎಂ.ಎಲ್.ಎ.ಗಳಾಗಬೇಕು. ನಮ್ಮಪ್ಪನಂಥೋರು ನಮ್ಮ ಜನದ ಪ್ರತಿನಿಧಿಗಳಾಗಿರಕೂಡದು. ನಮ್ಮಂಥೋರ ಕೈಗೆ ಮುಂದಾಳುತ್ವ ಬಂದ್ರೆ ನಿಮ್ಮ ಮೇಲಗಿರಿಗೌಡರಂಥೋರನ್ನ ನಡುಗಿಸಿ ಹಾಕ್ತೀವಿ.'

'ನಮ್ಮ ಮೇಲಗಿರಿಗೌಡರು ಅಂತ ಯಾಕಂತೀರ?'

'ನೀವು ಅವರ ಸೊಸೆ ಆಗುಲ್ವೇನು? ಆಗ್ತೀರ ಅಂತ ಕೇಳಿದೆ. ಊರೋರಿಗೆಲ್ಲ, ನಮ್ಮ ಕೇರೀಲೆಲ್ಲ ಅದೇ ಮಾತು ನಡೀತಿದೆ. ಈಗ ನೀವು ನಮ್ಮ ಮೇಲೆ ವಿಶ್ವಾಸ ಇಟ್ಟಿದೀರ. ಅಂದರೆ ನಿಮ್ಮ ಜಾತಿಯ ತಪ್ಪು ನಿಮಗೆ ಕಾಣ್ತಿದೆ. ಅವರ ಸೊಸೆಯಾದ ಮೇಲೆ ಪುಸ್ತಕ ಬರೆದು ಕೊಡಿ ಅಂತ ನಾನು ಹತ್ತಿರ ಬರೂ ಹಂಗಿಲ್ಲ ಅಲ್ಲವೆ?'

ಸತ್ಯ ಮಾತನಾಡಲಿಲ್ಲ. ಹಿತ್ತಾಳೆಯ ಪುಟ್ಟ ಕೊಳದಪ್ಪಲೆಯಲ್ಲಿ ಹಾಕಿದ್ದ ಕಾಫಿಪುಡಿಯ ಮೇಲೆ ಕುದಿಯುವ ನೀರನ್ನು ಬಗ್ಗಿಸಿ ಮುಚ್ಚಿ ಬಿಸಿ ಪಾತ್ರೆಗೆ ಹಾಲು ಹಾಕಿ ಮತ್ತೆ ಒಲೆಯ ಮೇಲಿಟ್ಟಳು.

'ಯಾಕೆ ಸುಮ್ಮನಾದಿರಿ?' – ಮೋಹನದಾಸ ಕೇಳಿದ.

'ಅದು ಎಂದಿಗೂ ಸಾಧ್ಯವಿಲ್ಲ ಅಂತ ಹೇಳಕಳಿಸಿದೆ.'

'ನಿಜವಾಗ್ಲೂ?'

'ಯಾಕೆ ಹಾಗೆ ಕೇಳ್ತೀರಿ?' – ಎಂದು ಅವಳು ತಿರುಗಿ ನೋಡಿದಳು. ಅವನು

ಆಶ್ಚರ್ಯದಿಂದಲೆಂಬಂತೆ ತೆರೆದ ಬಾಯನ್ನು ಹಾಗೆಯೇ ಬಿಟ್ಟುಕೊಂಡು ಕುಳಿತಿದ್ದ.

ಅವಳು ಕಾಫಿ ಸೋಸಿ ತಂದುಕೊಟ್ಟು ತಾನೂ ಒಂದು ಲೋಟ ಹಿಡಿದು ಎದುರಿಗೆ ಕುಳಿತಮೇಲೆ ಕೇಳಿದ: 'ಹಾಗಾದರೆ ನಿಮ್ಮ ಮುಂದಿನ ಪ್ಲಾನು ಏನು?'

'ಏನಿಲ್ಲ. ಸ್ವಂತ ಬೇಸಾಯ. ಯಾವಾಗಲಾದರೂ ಒಂದು ಸಲ ಮೈಸೂರಿಗೋ ಬೆಂಗಳೂರಿಗೋ ಹೋಗಿ ಒಂದಿಷ್ಟು ಪುಸ್ತಕ ಕೊಂಡು ತಂದು ಓದೂದು.'

'ಅದರ ಜೊತೆಗೆ ನಮ್ಮ ಗುಂಪಿಗೆ ಸೇರಿಬಿಡಿ.'

'ಅಂದ್ರೆ?'

'ಕ್ರಾಂತಿ.'

'ನಿಮ್ಮ ದಾರಿ ನನಗೆ ಪೂರ್ತಿ ಅರ್ಥವಾಗಿಲ್ಲ. ನನಗೆ ನ್ಯಾಯ ಅಂತ ತಿಳಿದ ದಾರೀಲಿ ನನ್ನ ಪಾಡಿಗೆ ನಾನು ಇದ್ದರೆ ಸಾಕು.'

ಸ್ವಲ್ಪ ಹೊತ್ತು ಇದ್ದು ಮೋಹನದಾಸ ಹೊರಟ. ಜ್ಞಾಪಿಸಿಕೊಂಡು ಅವಳು ಕೇಳಿದಳು: 'ನಂಗೆ ಎರಡು ಗೊಂಗಡಿ ಬೇಕು. ಯಾರಿಗಾದರೂ ತಂದುಕೊಡುವ ಹಾಗೆ ಹೇಳಿ. ಅದೆಷ್ಟು ದುಡ್ಡು ಕೇಳ್ತಾರೋ ಕೊಡ್ತೀನಿ.'

'ನಮ್ಮ ಕೇರೀಲಿ ಬೇಕಾದಷ್ಟು ಜನ ಹೆಣೀತಾರೆ. ಹುಡುಗನಾಗಿದ್ದಾಗ ನಾನೂ ಹೆಣೀತಿದ್ದೆ. ಕಳಿಸಿಕೊಡ್ತೀನಿ' – ಎಂದು ಹೇಳಿ ಅವನು ಪಂಚೆಯನ್ನು ಮಂಡಿಯ ತನಕ ಮುದುರಿ ಸುತ್ತುಕಟ್ಟಿ, ಬೂಟುಗಳನ್ನು ಜೋಡಿಸಿ ಎಡಗೈಲಿ ಹಿಡಿದು, ಮಡಿಸಿದ ಕೊಡೆಯನ್ನು ಬಲಗೈಲಿ ಹಿಡಿದುಕೊಂಡು, ದೊಡ್ಡ ಬದುಗಳ ಮೇಲೆ ಹೆಜ್ಜೆ ಹಾಕುತ್ತಾ ಹೊರಬಾಗಿಲ ಕಡೆಗೆ ನಡೆದ.

# ಹದಿನೈದು

## ೧

ಸತ್ಯಳ ಬಗೆಗೆ ಶ್ರೀನಿವಾಸನಲ್ಲಿ ಅಸಮಾಧಾನ ಹುಟ್ಟಿತು. ಆದರೆ ಅದು ತನ್ನ ನಿಜವಾದ ಕಾರಣವನ್ನು ಕಂಡುಕೊಳ್ಳಲಾರದೆ ಎತ್ತೆತ್ತಲೋ ತಿರುಗುತ್ತಿತ್ತು. ತಾನು ಮದುವೆಯಾಗುವ ಕಾಲ ಆಗಿಹೋಯಿತು. ಪ್ರೀತಿ, ಪ್ರೇಮ, ಸಂಸಾರ, ಇವುಗಳ ವಿಷಯದಲ್ಲಿ ತನಗೆ ಯಾವ ಆಕರ್ಷಣೆಯೂ ಉಳಿದಿಲ್ಲ ಅಂದಳಲ್ಲ. ನನ್ನ ಅವಳ ಮದುವೆ ತಪ್ಪಿದಾಗಿನಿಂದ ಅವಳ ಜೀವನದಲ್ಲಿ ನಡೆದಿರುವ ಘಟನೆಗಳು ಹೊಸ ಪ್ರಪಂಚವನ್ನೇ ತೋರಿಸಿವೆಯಂತೆ. ಅವುಗಳ ಮುಂದೆ ಸ್ವಂತ ಪ್ರೀತಿ ಪ್ರೇಮಗಳು ತೀರ ಸಣ್ಣವಂತೆ. ನಿನಗಾದರೆ ಹೆಂಡತಿ ಮಕ್ಕಳು, ಸಂಸಾರ ಬೇಕು. ಆದ್ದರಿಂದ ನೀನು ಮದುವೆ ಮಾಡಿಕೊ ಎಂದಳು. ಅಂದರೆ ನೀನು ಆದರ್ಶದಲ್ಲಿ ನನ್ನ ಎತ್ತರಕ್ಕೆ ಎಂದೂ ಬರಲಾರೆ ಎಂದೇ ಅವಳ ಅರ್ಥ? ಈ ಯೋಚನೆಯಿಂದ ಅವನಿಗೆ ರೇಗಿತು. ಆದರೆ ಅವಳು ಎಂದೂ ಯಾರನ್ನೂ ಕೀಳಾಗಿ ಕಂಡವಳಲ್ಲ. ನನ್ನನ್ನು ಹೀಯಾಳಿಸುವುದು ಅವಳ ಉದ್ದೇಶವಾಗಿರಲಾರದು – ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡ.

ಮೊದಲಿನಿಂದಲೂ ಅಷ್ಟೇ ಅವಳ ಸ್ವಭಾವ. ಯಾವುದಾದರೂ ಒಂದು ಆದರ್ಶವು ಮನಸ್ಸಿಗೆ ಖಚಿತವಾದರೆ ಅದರಂತೆಯೇ ನಡೆಯುತ್ತಾಳೆ. ಯಾರು ಏನೆಂದಾರೆಂಬ ಸಂಕೋಚವನ್ನೇ ಪಡುವುದಿಲ್ಲ. ನನ್ನ ಅವಳ ಮದುವೆಗೆ ತೀರ್ಮಾನ ಮಾಡಿಕೊಂಡ ಮೇಲೆ ಸ್ವಲ್ಪವೂ ಅಂಜದೆ ಅಳುಕದೆ ಅವಳ ಅಪ್ಪಾಜಿಗೆ ಕಾಗದ ಬರೆದಳು. ಈಗ ಯಾರಿಗೂ ಹೆದರದೆ ಮಾದಿಗರನ್ನು ತನ್ನ ತೋಟದ ಮನೆಗೆ ಸೇರಿಸುತ್ತಾಳೆ. ಅವರ ಕೈಲೇ ಅಡಿಗೆಯನ್ನೂ ಮಾಡಿಸಿ ಜೊತೆಯಲ್ಲಿ ಊಟ ಮಾಡುತ್ತಾಳೆ. ಅವರ ಜಾತಿಯವರಿಗೆ ಅಂತ ಪುಸ್ತಕ ಬರೆದಿದ್ದಾಳೆ.

ಶ್ರೀನಿವಾಸನಿಗೆ ತನ್ನ ಕಾಲೇಜು ದಿನಗಳ ನೆನಪಾಗುವುದು. ತಾನೂ ಹಾಗೆಯೇ ಇದ್ದೆ. ಜಾತಿ ಜಾತಿಗಳ ವ್ಯತ್ಯಾಸವನ್ನು ತೊಡೆಯಬೇಕು, ಎಲ್ಲರೂ ಒಂದಾಗಬೇಕು ಎಂಬ ಕನಸು ಕಾಣುವುದರಲ್ಲಿ ಸತ್ಯಳಿಗಿಂತ ಹಿಂದೆ ಇರಲಿಲ್ಲ. ಅವಳು ಹರಿಜನರು ಮುಟ್ಟಿದ ಊಟಮಾಡುತ್ತಿರುವುದು ಇತ್ತೀಚೆಗಿರಬಹುದು. ಆದರೆ ತಾನು ಕಾಲೇಜು ಓದುವಾಗಲೇ ಒಂದು ದಿನ ಒಬ್ಬ ಹರಿಜನ ಸಹಪಾಠಿ

ಯೊಡನೆ ಅವನ ಹಾಸ್ಟೆಲಿಗೆ ಹೋಗಿ ಊಟ ಮಾಡಿ ಬಂದಿದ್ದೆ. ಹಾಗೆಂದು ಸತ್ಯಳಿಗೆ ಹೇಳಿದಾಗ, 'ಅದರಿಂದ ಏನು ಸಾಧಿಸಿದ ಹಾಗಾಯ್ತು?' ಎಂದು ಕೇಳಿದ್ದಳು.

'ಯಾವ್ದಕ್ಕೂ ನೀನು, ಏನು ಸಾಧಿಸಿದ ಹಾಗಾಯ್ತು ಅಂತೀಯ. ಜಾತಿ ಭೇದ ಬಿಟ್ಟಿರುವ ಗುರುತಲ್ಲವೆ ಇದು?' – ಎಂದು ತಾನು ಕೇಳಿದ್ದೆ.

'ಬರೀ ಊಟ ಮಾಡಿದರೆ ಜಾತಿಭೇದ ಹೋಗುತ್ತೆಯೆ? ಇಂಗ್ಲೆಂಡಿಗೆ ಹೋದವರು ಅಲ್ಲಿಯ ಕ್ರೈಸ್ತರ ಮನೇಲಿ ಅಥವಾ ಹೋಟೆಲಿನಲ್ಲಿ ಊಟಮಾಡಿ ಬರ್ತಾರೆ. ಹಾಗಂತ ಅವರಿಗೂ ಇವರಿಗೂ ಇರುವ ಜಾತಿಭೇದ ಇಲ್ಲವಾಗುತ್ತೆಯೇ?'

'ಹಾಗಾದ್ರೆ ಇನ್ನೇನು ಮಾಡಬೇಕು ಅಂತೀಯ?'

'ಅವಳ ಜಾತೀಲಿ ಮದುವೆಯಾಗಬೇಕು' – ಎಂದು ನಕ್ಕಿದ್ದಳು.

ಅಷ್ಟರಲ್ಲಿ ಇವರು ಹೀಗೆ ಮಾತನಾಡುತ್ತಿದ್ದ ಜಾಗಕ್ಕೆ ಮತ್ತೆ ಯಾರೋ ಬಂದರು. ಈ ಮಾತನ್ನು ಮುಂದುವರಿಸಲಾಗಲಿಲ್ಲ. ಆಮೇಲೆ ಅದು ಮರೆತೇ ಹೋಯಿತು. ವೀರಾಳನ್ನು ಮದುವೆಯಾಗು ಎಂದು ಅವಳು ಈಗ ತನಗೆ ಹೇಳಿದಮೇಲೆ ಆ ಮಾತು ಈಗ ಮತ್ತೆ ಜ್ಞಾಪಕಕ್ಕೆ ಬರುತ್ತಿದೆ.

ಕೆಲವು ದಿನ ಅವನ ಮನಸ್ಸು ಸತ್ಯಳ ಬಗೆಗೆ ಕೋಪದಿಂದ ತುಂಬಿ ಹೋಗುವುದು. ತನ್ನಲ್ಲಿ ಈಗ ಪ್ರೀತಿ ಪ್ರೇಮಗಳೇ ಇಲ್ಲವೆಂದಳಲ್ಲ. ಹೆಂಗಸಿನ ಸಹಜ ಗುಣವನ್ನೇ ಕಳೆದುಕೊಳ್ಳುತ್ತಿದ್ದಾಳೆ ಅವಳು – ಎಂದುಕೊಳ್ಳುವನು. 'ನನ್ನ ಕೈ ಎಷ್ಟು ಜಡ್ಡುಕಟ್ಟಿದೆ ನೋಡು, ನಿನ್ನ ಕೈ ಮೃದುವಾಗಿದೆ' – ಎಂಬ ಮಾತನ್ನು, ನನ್ನನ್ನು ಹಳಿಯುವುದಕ್ಕೇ ಆಡಿದಳೇ ಎಂದು ಸಿಡಿಮಿಡಿಗುಟ್ಟಿಕೊಳ್ಳುವನು. ಇಂಥವಳು ನನ್ನ ಹೆಂಡತಿಯಾಗುಕ್ಕೆ ಲಾಯಕ್ ಅಲ್ಲದೋಳು. ಅವಳು ಹೇಳಿದ್ದೇ ಸರಿ. ಇಲ್ಲದೆ ಅವಳನ್ನು ಕಟ್ಟಿಕೊಂಡು ಆಮೇಲೆ ಅವಳ ಸ್ವಭಾವ ಹೀಗೆಯೇ ಮುಂದುವರಿದಿದ್ದರೆ ಒದ್ದಾಡಬೇಕಾಗುತ್ತಿತ್ತು – ಎಂದು ಒಂದು ಸಲ ತನಗೆ ತಾನೇ ಸಮಾಧಾನ ಹೇಳಿಕೊಂಡ.

ತಕ್ಷಣ ಕುಮುದಿನಿಯ ನೆನಪಾಯಿತು. ಅವಳ ಕೈ ಎಷ್ಟು ಮೃದು! ತೋಳುಗಳು ಬಳ್ಳಿಯಷ್ಟು ಸುಕುಮಾರವಾಗಿದ್ದುವು. ಹೀಗಿರಬೇಕು ಹೆಂಗಸು ಅಂದರೆ. ಅವಳ ಗಾತ್ರ ಸ್ವಲ್ಪ ಸಣ್ಣದೇ. ಒಂದಿಷ್ಟು ಹೆಚ್ಚು ದಪ್ಪನಾಗಿರಬೇಕಾಗಿತ್ತು. ಅದೊಂದನ್ನು ಬಿಟ್ಟರೆ ಅವಳ ಗುಣ ಸ್ವಭಾವಗಳ ಮುಂದೆ ಯಾವ ಹೆಣ್ಣೂ ಇಲ್ಲ. ಅವಳನ್ನು ಕಳೆದುಕೊಂಡದ್ದು ನನ್ನ ದುರಾದೃಷ್ಟ ಎಂದುಕೊಂಡ. ಆದದ್ದಾಯಿತು. ಕಳೆದದ್ದನ್ನು ನೆನಸಿಕೊಂಡು ಏನು ಪ್ರಯೋಜನ? ಮತ್ತೆ ಸಿಕ್ಕುವು

ದನ್ನು ಹುಡುಕಿಕೊಳ್ಳಬೇಕು. ಅದೇ ವಿವೇಕ, ಎಂದು ಸಮಾಧಾನ ತಂದು ಕೊಳ್ಳಲು ಯತ್ನಿಸಿದ.

ಆದರೆ ಮತ್ತೆ ಸಿಕ್ಕುವುದಾದರೂ ಏನು? ಸತ್ಯ ಒಪ್ಪಿಕೊಂಡಿದ್ದರೆ ಇಷ್ಟೆಲ್ಲ ಯೋಚನೆಗೆ ಕಾರಣವಿರುತ್ತಿರಲಿಲ್ಲ. ಆದರೆ ಅವಳೊಬ್ಬ ಚಂಡಿ....ಎಂದು ಮನಸ್ಸಿನಲ್ಲಿ ಕೋಪ ತುಂಬಿಕೊಂಡಿತು.

ಹೀಗೆ ಸುತ್ತಿಸುತ್ತಿ ಬರುವ ಆಲೋಚನೆಗಳು ಬೇಸರವನ್ನು ಹುಟ್ಟಿಸುತ್ತಿದ್ದುವ. ಅದನ್ನು ತಡೆಯಲಾಗಲಿಲ್ಲ. ಒಂದು ದಿನ ಸಿನಿಮಾಕ್ಕೆ ಹೋದ. ಯಾವುದೋ ಸಮುದ್ರ ದಡದ ದೃಶ್ಯ. ನಾಯಕ ನಾಯಕಿಯರು ಮರಳುದಂಡೆಯಲ್ಲಿ ಕೈ ಹಿಡಿದು ನಿಂತು, ಮಂಡಿಯ ತನಕ ಬಡಿಯುವ ಅಲೆಯ ಬುರು ಬುರು ನೀರನ್ನು ನೋಡಿ ನಗುತ್ತಾರೆ. ನೀಲಗಿರಿಯ ಕಾಡಿನಲ್ಲಿ ವಿಹರಿಸುತ್ತಾರೆ. ಇದೆಲ್ಲವೂ ಸುಳ್ಳು ಎನಿಸಿತು. ಮನಸ್ಸು ಯೋಚಿಸಲು ಆರಂಭಿಸಿತು. ಚಿತ್ರ ತನ್ನ ಪಾಡಿಗೆ ತಾನು ಓಡುತ್ತಿತ್ತು. ಅದನ್ನು ನೋಡಿ ಮಗ್ನನಾಗುವ ಶಕ್ತಿಯೇ ಅವನಲ್ಲಿ ಕಳೆದು ಹೋಗಿತ್ತು. ಅದ್ಯಾಕೆ ಹೀಗೆ, ಎಂದುಕೊಂಡ. ಕೋಣೆಗೆ ಬಂದು ಮಲಗಿದ ಮೇಲೆ ಹೊಳೆಯಿತು: ಸತ್ಯಳನ್ನು ತಾನು ಕಂಡಮೇಲೆ, ತಾನು ನೋಡುತ್ತಿದ್ದ ಸಿನಿಮಾ ಕುಡಿಯುತ್ತಿದ್ದ ಬೀರುಗಳ ಮೇಲೆ ಅವಳು ಕಟುವಾಗಿ ವಿಮರ್ಶೆ ಮಾಡಿದಮೇಲೆ, ತನಗೆ ಹೀಗೆ ಆಗಿದೆ. ಸತ್ಯಳ ಮನೋಧರ್ಮ ನನ್ನಲ್ಲಿಯೂ ಬೆಳೆಯುತ್ತಿದೆ – ಎಂದುಕೊಂಡ. ಎಂದರೆ ಜೀವನವಿಡೀ ಬೇಸರದಲ್ಲಿ ಕಳೆಯುವುದೇ? – ಅವಳು ಆ ಹಳ್ಳಿಯ ತೋಟದಲ್ಲಿ ಕಳೆಯುತ್ತಿರುವ ಹಾಗೆ! – ಎಂಬ ಆಲೋಚನೆ ಬಂತು. ಆ ಆಲೋಚನೆಯಿಂದಲೇ ಬೇಸರವು ಅಸಹನೀಯವಾಯಿತು.

ಬೀರನ್ನಾದರೂ ಕುಡಿಯುವ ಯೋಚನೆ ಬಂತು. ಆದರೆ ತಕ್ಷಣ ಹೀನಾಯ ವೆನಿಸಿತು. ತನ್ನ ಸಂಕಲ್ಪಶಕ್ತಿಯ ಮೇಲೆ ಆಣೆ ಹಾಕಿಕೊಂಡಿದ್ದ ನೆನಪಾಯಿತು. ಈ ಬೇಸರವನ್ನು ಕಳೆಯುವುದು ಹೇಗೆ, ಎಂಬ ಪ್ರಶ್ನೆ ಒಂದೇಸಮನೆ ಕೊರೆಯು ತ್ತಿತ್ತು. ಉತ್ತರ ಕಾಣದೆ ಕೊರೆಯುತ್ತಿದ್ದ ಪ್ರಶ್ನೆಯು ಬೇಸರದ ತೀವ್ರತೆಯನ್ನು ಹೆಚ್ಚುಮಾಡುತ್ತಿತ್ತು. ಇದಕ್ಕೇನು ಉಪಾಯ, ಎಂದು ಯೋಚಿಸುವನು. ಆದರೆ ಈ ಬೇಸರವನ್ನು ಕಳೆಯುವುದು ಹೇಗೆ, ಇದಕ್ಕೇನು ಉಪಾಯ, ಎಂಬ ಎರಡು ಪ್ರಶ್ನೆಗಳೂ ಮೂಲತಃ ಒಂದೇ ಅಲ್ಲವೇ ಎಂಬ ನೆನಪಾಗಿ ಮನಸ್ಸು ಮತ್ತೆ ಮೊದಲಿನಿಂದ ಸುತ್ತಲು ಸುರುವಾಗುವುದು.

ಒಂದು ದಿನ ಹೊಳೆದುಬಿಟ್ಟಿತು: ತಾನು ಮದುವೆಯಾಗಬೇಕು. ಸತ್ಯ ಹೇಳಿದ್ದು ಸರಿ. ತನಗೆ ಮದುವೆ, ಹೆಂಡತಿ, ಮಕ್ಕಳು, ಪ್ರೀತಿ ಎಲ್ಲವೂ ಬೇಕು. ಇಷ್ಟು ದಿನ ಬೇಸರದಿಂದ ನರಳಿ ಇಷ್ಟೆಲ್ಲ ಯೋಚಿಸಿದ ಮೇಲೆ ತನಗೆ ಹೊಳೆದ

ಉಪಾಯವನ್ನು ಅವಳು ಮೊದಲೇ ಹೇಳಿಬಿಟ್ಟಿಳಲ್ಲ. ಅಂದರೆ ನನಗೆ ಏನು ಬೇಕೆಂಬುದು ನನಗಿಂತ ಅವಳಿಗೇ ಹೆಚ್ಚು ಗೊತ್ತೇ ಹಾಗಾದರೆ, ಎಂಬ ಆಶ್ಚರ್ಯದಿಂದ ಮನಸ್ಸು ಮುಗ್ಧವಾಗುವುದು. ಅವಳ ಬಗೆಗೆ ಮೆಚ್ಚುಗೆಯೂ ಆಗುವುದು.

ಆದರೆ ಅವಳೇ ಒಪ್ಪದ ಮೇಲೆ ತಾನು ಮದುವೆಯಾಗುವುದು ಯಾರನ್ನು ಎಂಬ ಪ್ರಶ್ನೆ ಹುಟ್ಟಿತು. ಮೀರಾಳನ್ನು ಆಗು ಎಂದು ಸತ್ಯಳೇ ಹೇಳಿದಳಲ್ಲ ಎಂಬ ಉತ್ತರವು, ಸಿದ್ಧವಾಗಿ ನಿಂತಿದ್ದಂತೆ ಹಿಂಬಾಲಿಸಿತು. ಆದರೆ ಅವಳು ಹೇಳಿದಳು ಅಂತ ಆ ಹುಡುಗಿಯನ್ನೇ ಯಾಕೆ ಆಗಬೇಕು, ಬೇರೆ ಯಾವ ಹೆಣ್ಣು ಸಿಕ್ಕುವುದಿಲ್ಲವೇ ಕುಮುದಿನಿಯಂಥೋಳು, ಎಂಬ ವಿರೋಧ ವಿಚಾರವೂ ಬಂತು.

೨

ಆ ಸಲ ಬಲು ಜೋರಿನಿಂದ ಆದ ಮುಂಗಾರು ಮಳೆಗೇ ಕೆರೆ ಕಟ್ಟೆಗಳು ಕೋಡಿಬಿದ್ದುವು. ಊರಿನ ಕೆರೆ ತುಂಬಿ ಎರಡೂ ಕಡೆಯ ಕೋಡಿ ಹರಿದ ಮೊರೆತ ಸತ್ಯಳಿಗೆ ಮೂರು ಹಗಲು ಮೂರು ರಾತ್ರಿ ಕೇಳಿಸಿತು.

ಒಂದು ದಿನ ಅವಳಿಗೆ ಒಂದು ಕಾಗದ ಬಂತು. ಅಂಚೆಯ ಲಕೋಟೆಯ ಮೇಲೆ ಬರೆದಿದ್ದ ಟಿ. ವಿ. ಸತ್ಯಭಾಮನ್ನು, ತೋಟದ ಮನೆ ವಾಸ, ತಿರುಮಲಾಪುರ ಎಂಬ ವಿಳಾಸದ ಅಕ್ಷರವನ್ನು ನೋಡಿಯೇ ಮೀರಾಳದ್ದೆಂದು ತಿಳಿಯಿತು. ತನ್ನ ಓದು, ಹಾಸ್ಟೆಲು ಕಾಲೇಜಿನ ಬಗೆಗೆ ಮೊದಲ ಪ್ಯಾರಾದಲ್ಲಿ ನಾಲ್ಕು ವಾಕ್ಯಗಳನ್ನು ತಿಳಿಸಿದನಂತರ ಬರೆದಿದ್ದಳು: "ಮೇಲುಗಿರಿಗೌಡರ ಮಗ ಶ್ರೀನಿವಾಸರು ನನ್ನ ಹಾಸ್ಟೆಲಿಗೆ ಬರುತ್ತಿದ್ದಾರೆ. ನಿಮ್ಮ ತೋಟದ ಮನೆಯಲ್ಲಿ ಎರಡನೆಯ ಸಲ ನಾನು ನೀವು ಅವರು ಕೂತು ಊಟ ಮಾಡಿದೆವಲ್ಲ, ಆದಾದ ಸುಮಾರು ಇಪ್ಪತ್ತು ದಿನದಲ್ಲಿ ಮೊದಲ ಸಲ ಬಂದರು. ಲೋಕಾಭಿರಾಮವಾಗಿ ಮಾತನಾಡಿದರು. ನಾನು ಹಾಸ್ಟಲ್ ವಿಸಿಟರ್ಸ್ ರೂಮಿನಲ್ಲಿ ಕೂರಿಸಿ ಮಾತನಾಡಿಸಿದೆ. ಕಾಫಿ ತಗಂಡು ಬರೋಣ ಬನ್ನಿ ಅಂತ ಬಲವಂತ ಮಾಡಿದರು. ಮತ್ತೆ ನಾಲ್ಕು ದಿನಕ್ಕೆ ಬಂದರು. ಬಲವಂತ ಮಾಡಿ ಕಾರಿನಲ್ಲಿ ಕೂರಿಸಿಕೊಂಡು ಲಾಲ್‌ಬಾಗಿಗೆ ಕರೆದುಕೊಂಡು ಹೋಗಿ ಕೂರಿಸಿಕೊಂಡು ಮಾತನಾಡಿದರು. ನಿಮ್ಮ ಅವರ ಹಿಂದಿನ ಸಂಬಂಧ, ಮದುವೆ ತಪ್ಪಿದುದು, ಈಗ ನೀವು ಅವರಿಗೆ ಹೇಳಿದ ಮಾತುಗಳನ್ನೆಲ್ಲ ಹೇಳಿದರು. ನೀವು ನನ್ನ ವಿಷಯವಾಗಿ ಏನೋ ಹೇಳಿದಿರಂತೆ. ಅವನ್ನು

ಶ್ರೀನಿವಾಸರು ಹೇಳಿದಾಗ ನಾನು ತಗ್ಗಿಸಿದ ತಲೆಯನ್ನು ಮೇಲೆ ಎತ್ತಲಿಲ್ಲ. ನೀವ್ಯಾಕೆ ಇಂಥ ಮಾತು ಆಡಿದಿರಿ? ಮತ್ತೆ ನಾಲ್ಕು ದಿನಕ್ಕೆ ಅವರು ಬಂದರು. ಪದೇ ಪದೇ ಒಬ್ಬ ಗಂಡಸು ಹೀಗೆ ಬಂದು ಕರೆದರೆ, ನಾನು ಅವರ ಜೊತೆ ಕೂತು ಮಾತನಾಡಿದರೆ, ಅಥವಾ ಹೊರಗೆ ಹೋದರೆ ಹಾಸ್ಟೆಲಿನಲ್ಲಿ ಉಳಿದ ಹುಡುಗಿಯರು ಏನು ತಿಳಿದುಕೊಳ್ಳುತ್ತಾರೆ? ನಾನು, 'ಬೇರೆ ಕೆಲಸವಿದೆ. ಸಾರಿ' ಎಂದೆ. ಆದರೂ ಬಲವಂತ ಮಾಡಿದರು. ಲಾಲ್‌ಬಾಗಿಗೆ ಕರೆದುಕೊಂಡು ಹೋಗಿ, 'ಮೀರಾ, ಸತ್ಯ ಹೇಳಿದ ಮಾತು ಸರಿ. ನನಗೆ ನೀನೇ ತಕ್ಕೋಳು. ನಿನ್ನ ರೂಪ, ನಿನ್ನ ಸ್ವಭಾವ, ನಿನ್ನ ಗುಣಗಳೇ ನನಗೆ ಹೊಂದುತ್ತೆ. ನಾನು ಜಾತಿಗೀತಿಗೆ ಹೆದರುಲ್ಲ. ಯಾರು ವಿರೋಧಿಸಿದರೂ ಹಿಂತೆಗೆಯುಲ್ಲ. ನನ್ನ ಕೈ ಬಿಡಬೇಡ' ಅಂತ ನನ್ನ ಬಲಗೈ ಹಿಡಿದುಕೊಂಡರು. ನಾನು ಸಿಟ್ಟಿನಿಂದ ಎದ್ದು ಕೈ ಕೊಡವಿಕೊಂಡು ಹೊರಟು ಬಂದೆ. ಪಾರ್ಕಿನಲ್ಲಿ ಹೆಚ್ಚು ಜನ ಇರಲಿಲ್ಲ. ಆದರೆ ಯಾರೂ ಇಲ್ಲದೆಯೂ ಇರಲಿಲ್ಲ. ಅವರು ನನ್ನ ಹಿಂದೆಯೇ ಬಂದು ಮತ್ತೆ ಕೈ ಹಿಡಿದು, 'ನೀನು ಹೀಗೆ ಹೊರಟುಹೋದರೆ ನಾನು ಉಳಿಯುಲ್ಲ. ನಿನ್ನ ಕೈ ಮುಟ್ಟಿ ಒಂದು ಔನ್ಸ್ ವಿಷ ಕೊಟ್ಟು ಹೋಗು' ಎಂದರು.

"ಇದು ಆಗಿ ನಾಲ್ಕು ದಿನವಾಯಿತು. ನನಗೆ ಊಟ ತಿಂಡಿ ಬೇಡವಾಗಿದೆ. ನಿದ್ರೆ ಬರುತ್ತಿಲ್ಲ. ಓದುವುದನ್ನೂ ಬಿಟ್ಟು ಊರಿಗೆ ಬಂದುಬಿಡಬೇಕು ಅಂತ ತೀರ್ಮಾನ ಮಾಡ್ತಿದೀನಿ. ನೀವೇ ನನಗೆ ತಿಳಿವಳಿಕೆ ಹೇಳಬೇಕು. ಅವರ ಕೈಲಿ ನೀವು ಇಂಥ ಮಾತು ಯಾಕೆ ಆಡಿದಿರಿ?'

ಕಾಗದ ಓದಿದ ಸತ್ಯ ಗಂಭೀರಳಾದಳು. ಒಂದು ತರದ ಸಂಕಟವಾಯಿತು. ಶ್ರೀನಿವಾಸ ಹೀಗೆ ಮಾಡಿದನೆ, ಎನಿಸಿತು. ಆದರೆ ಅವನ ತಲೆಯಲ್ಲಿ ಈ ಯೋಜನೆಯನ್ನು ಬಿತ್ತಿದವಳು ತಾನೇ ಎಂಬ ನೆನಪು ಬಂತು. ತಾನು ಯಾಕೆ ಹಾಗೆ ಹೇಳಿದೆ, ಎಂದು ಜ್ಞಾಪಿಸಿಕೊಳ್ಳಲು ಯತ್ನಿಸಿದಳು. ಅವನಿಗೆ ಒಳ್ಳೆಯ ಹೆಂಡತಿ ಸಿಕ್ಕಬೇಕೆಂಬ ಒಂದು ಉದ್ದೇಶವೇನೋ ನಿಜ. ಆದರೆ ಮೀರಾನ್ನ ಬಿಟ್ಟರೆ ಬೇರೆ ಒಳ್ಳೇ ಹುಡುಗಿ ಇರಲಿಲ್ಲವೆ? ತನ್ನನ್ನು ಮದುವೆಯಾಗುವುದು ಸಾಧ್ಯವಿಲ್ಲ ಎಂದು ಹೇಳಿ ಸುಮ್ಮನಾಗಬೇಕಾಗಿತ್ತು. ಮುಂದಿನ ಜವಾಬ್ದಾರಿ ತನಗೇಕೆ ಬೇಕಿತ್ತು, ಎಂದುಕೊಂಡಳು. ಆದರೆ ಮರುದಿನ ಬೇರೆ ವಿಚಾರ ಬಂತು. ಉಭಯತಾಪಿ ಒಪ್ಪಿದರೆ ಮಾಡಿಕೊಳ್ಳಲಿ. ಮೀರಾಳ ತಂದೆ ತಾಯಿ, ಅಣ್ಣ ಒಪ್ಪಬಹುದು. ಒಪ್ಪುತ್ತಾರೆ. ಆದರೆ ಮಂತ್ರಿಗಳು, ಅವರ ತಂದೆ ಒಪ್ಪುತ್ತಾರೆಯೆ? ಇಲ್ಲವೆಂದು ಸ್ಪಷ್ಟವಾಗಿ ಎನಿಸಿತು.

ಹತ್ತು ಗಂಟೆಯ ಬಸ್ಸಿಗೆ ಅವಳು ತುಮಕೂರಿಗೆ ಹೊರಟಳು. ಬಸ್ಸು

ಮಧ್ಯಾಹ್ನ ಒಂದೂವರೆಗೆ ತುಮಕೂರು ತಲುಪಿತು. ಬೋರ್ಡ್ ಇರುವ ಆಫೀಸು ಕಟ್ಟಡದ ಒಳಭಾಗದಲ್ಲಿ ಶ್ರೀನಿವಾಸನ ಕೋಣೆ ಇರುವುದು ಅವಳಿಗೆ ಗೊತ್ತಿತ್ತು. ಅವನು ಆಗತಾನೇ ಊಟ ಮುಗಿಸಿ ಬಂದು ಮಂಚದ ಮೇಲೆ ಅಡ್ಡಾಗಿದ್ದ. ಅನಿರೀಕ್ಷಿತವಾಗಿ ಬಂದ ಸತ್ಯಳನ್ನು ಕಂಡು ಸಂಭ್ರಮ ಸಂತೋಷ ಆತಂಕಗಳಿಂದ ಎದ್ದು ಕೂತ. ಅವಳೇ ಹೇಳಿದಳು: 'ನೀನು ಸಿಕ್ತೀಯೋ ಇಲ್ಲವೋ ಅಂತ ಅನುಮಾನದಲ್ಲೇ ಬಂದೆ.'

'ಏನು ಅರ್ಜೆಂಟ್?'

'ಅರ್ಜೆಂಟೇನಿಲ್ಲ. ನಿನ್ನ ನೋಡಬೇಕು ಅನ್ನಿಸ್ತು.'

ಒಂದು ಕ್ಷಣ ಅವನು ಅಪನಂಬಿಕೆಯ ಭಾವದಲ್ಲಿ ಅವಳನ್ನು ನೋಡಿದ: 'ನನ್ನ ನೋಡಬೇಕು ಅಂತ ನಿನಗೆ ನಿಜವಾಗಿಯೂ ಅನ್ನಿಸ್ತೇ?'

'ಅನ್ನಿಸಬಾರದೇನು? ನಿನ್ನ ಕಷ್ಟ ಸುಖದಲ್ಲಿ ನನಗೆ ಆಸ್ಥೆ ಇದೆ. ಇದು ನೋಡು' – ಎಂದು ಮೀರಾಳ ಕಾಗದವನ್ನು ತೆಗೆದು ಅವನ ಕೈಗೆ ಕೊಟ್ಟಳು. ಓದಿಕೊಂಡಂತೆ ಅವನ ಮುಖದಲ್ಲಿ ಸಂಕೋಚ ಮತ್ತು ಸಂಕಟದ ಭಾವ ಮೂಡುತ್ತಿತ್ತು. ಪೂರ್ತಿ ಓದುವ ತನಕ ಸುಮ್ಮನಿದ್ದು ಅವಳು ಹೇಳಿದಳು: 'ನನಗೆ ಇದರಿಂದ ನಿಜವಾಗಿಯೂ ಸಂತೋಷವಾಗಿದೆ. ಮೀರಾಗೂ ಇಷ್ಟವಿದೆ ಅಂತ ಕಾಗದ ಓದಿದರೇ ತಿಳಿಯುತ್ತೆ....'

'ಕಂಪ್ಲೀಂಟ್ ಮಾಡಿ ಬರೆದಿದಾಳೆ. ಇಷ್ಟವಿದೆ ಅಂತ ಹ್ಯಾಗೆ ಹೇಳ್ತೀಯ?' – ಅವನು ಮಧ್ಯದಲ್ಲಿ ಕೇಳಿದ.

'ಸರಿಯಾಗಿ ಕಾಗದ ಓದಿದರೆ ಹಾಗನಿಸುತ್ತೆ.'

ಅವನು ತಲೆ ತಗ್ಗಿಸಿ ಸುಮ್ಮನೆ ಕುಳಿತಿದ್ದ. ಮೀರಾಳನ್ನು ಮಾಡಿಕೊಳ್ಳುವಂತೆ ಸೂಚಿಸಿದ್ದವಳು ಸತ್ಯಳೇ ನಿಜ. ಆದರೆ ತಾನು ಇಷ್ಟು ಬೇಗ ಮೀರಾಳೊಡನೆ ಆ ಬಗೆಗೆ ಪ್ರಸ್ತಾಪಿಸಿರುವುದು ಇವಳಿಗೆ ತಿಳಿದು ಇವಳ ಎದುರಿಗೆ ಆ ಮಾತನಾಡಲು ಅವನಿಗೆ ಬಹಳ ಮುಜುಗರವಾಯಿತು. ಅದನ್ನು ಗಮನಿಸಿದ ಸತ್ಯ ಹೇಳಿದಳು: 'ನಿಮ್ಮ ತಂದೇನ ಟೀಕೆ ಮಾಡ್ತೀನಿ ಅಂತ ತಿಳ್ಕೋಬ್ಯಾಡ. ಬ್ರಾಹ್ಮಣಳಾದ ನನ್ನನ್ನ ಮಾಡಿಕಳುಕ್ಕೆ ಅವರು ಆಗ ಅಡ್ಡಬಂದಿದ್ದರು. ಈಗ ಹರಿಜನರ ಹುಡುಗೀನ ಮಾಡಿಕೊತ್ತೀನಿ ಅಂದ್ರೆ ಸುಮ್ಮನಿರುಲ್ಲ. ನನ್ನ ನಿನ್ನ ವಿಷಯ ಬೇರೆ. ನೀನು ಇಷ್ಟಪಟ್ಟಂತೆ ನಾನೂ ಪಟ್ಟಿದ್ದೆ. ನಿನ್ನ ಜೊತೆ ನನ್ನ ಮದುವೆ ತಪ್ಪಿಹೋದಮೇಲೆ ನನಗೆ ಮದುವೆಯ ಇಚ್ಛೆಯೂ ಇಲ್ಲ. ಈಗಿರೂ ರೀತೀಲೇ ಜೀವನ ಮಾಡ್ತಿರೂದ್‌ರಲ್ಲಿ ನನಗೆ ಸಂತೋಷವಿದೆ. ಅಕಸ್ಮಾತ್ ಮದುವೆಯಾಗಬೇಕು ಅಂತ ಆಸೆ ಇದ್ದರೆ ಎಷ್ಟು ಕಷ್ಟವಾಗ್ತಿತ್ತು ಗೊತ್ತೆ? ಜಾತಿ

ಕಟ್ಟಿನ ಸ್ಥಿತಿ ಹಾಗಿದೆ. ಈಗ ಮೀರಾಳ ಕೈಲಿ ನೀನು ಪ್ರಸ್ತಾಪ ಮಾಡಿದೀಯೇ ಹೊರತು ಅವಳು ನಿನ್ನ ಉತ್ಸಾಹಕ್ಕೆ ಸಮಸಮನಾಗಿ ಮುಂದೆ ಬಂದಿಲ್ಲ. ಈಗ ಇನ್ನೂ ಮುಂದುವರಿದು ಆಮೇಲೆ ನಿನ್ನ ತಂದೆ ಅವಕಾಶ ಕೊಡದಿದ್ದರೆ ಅವಳ ಜೀವನ ಹಾಳಾಗಬಾರದು. ನಿನ್ನ ಧೈರ್ಯ ಮೊದಲು ಪರೀಕ್ಷೆ ಮಾಡಿಕೊ.'

ಇನ್ನೊಬ್ಬಳನ್ನು ಮದುವೆಯಾಗುವ ವಿಷಯವನ್ನು ಅವಳೆದುರಿಗೇ ಕುಳಿತು ಮಾತನಾಡಲು ಅವನಿಗೆ ಇನ್ನೂ ಸಂಕೋಚವಾಗುತ್ತಿತ್ತು. 'ನನ್ನ ಮಾತಿಗೆ ಉತ್ತರ ಕೊಡು. ನೀನು ಹೂಂ ಅಂದ್ರೆ ನಾನು ಇಲ್ಲಿಂದ ಬೆಂಗಳೂರಿಗೆ ಹೋಗಿ ಮೀರಾಳ ಕೈಲಿ ಮುಂದಿನ ಮಾತು ಆಡ್ತೀನಿ' – ಸತ್ಯ ಎಂದಳು.

'ಅವತ್ತು ನೀನು ಹೇಳಿದೆಯಲ್ಲ, ಆ ನನ್ನ ಸಂಕಲ್ಪಶಕ್ತಿಯ ಮೇಲೆ ನನಗೆ ನಂಬಿಕೆ ಇದೆ.'

'ಅಷ್ಟಾದರೆ ಸಾಕು. ನೀನೂ ಒಬ್ಬ ಮನುಷ್ಯನಾಗ್ತಿ. ಶ್ರೀನಿವಾಸ, ಆದಿದ್ದರೆ ನಾನು ನಿನ್ನನ್ನ ಗೌರವಿಸ್ತೀನಿ. ಗೌರವವಿಲ್ಲದೆ ಸ್ನೇಹ ಇರೂಕ್ಕೆ ಸಾಧ್ಯವಿಲ್ಲ' – ಎಂದು ಕೊನೆಯ ಎಚ್ಚರ ಹೇಳಿದಳು.

ಹಸಿವಾಗುತ್ತಿತ್ತು. ಅವಳೇ ಮಾತು ಬದಲಾಯಿಸಿ, 'ಹತ್ತಿರ ಹೋಟಲಿದೆಯೆ? ನನ್ನ ಊಟವಾಗಿಲ್ಲ' ಎಂದಳು.

'ಹೌದಾ? ನನಗೆ ಆ ಕಡೆ ಗ್ಯಾನವೇ ಹೋಗಲಿಲ್ಲ' – ಎಂದು ಅವನು ಮೇಲೆ ಎದ್ದ.

'ಗ್ಯಾನವೆಲ್ಲ ಮೀರಾ ಮೇಲಿರುವಾಗ ಆ ಕಡೆ ಎಲ್ಲಿ ಹೋಗುತ್ತೆ?' – ಎಂದು ಅವಳು ನಕ್ಕಳು. ಅವನಿಗೆ ಮತ್ತಷ್ಟು ಸಂಕೋಚವಾಯಿತು.

ಊಟವಾದ ಮೇಲೆ ಅವಳು ಬೆಂಗಳೂರಿಗೆ ಹೊರಟಳು. ಕಾರಿನಲ್ಲಿ ಕರೆದುಕೊಂಡು ಹೋಗಿ ತಲುಪಿಸುವುದಾಗಿ ಅವನು ಬಲವಂತ ಮಾಡಿದ. 'ಬಸ್ಸು ಸಾಕು ನನಗೆ' – ಎಂದು, ಹಟ ಹಿಡಿದವಳಂತೆ ಅವಳು ಅದನ್ನು ಬೇಡವೆಂದಳು. ಅವನು ಜೊತೆಗೆ ಬಂದು ಸ್ಟ್ಯಾಂಡಿನಲ್ಲಿ ಬಸ್ ಹತ್ತಿಸಿದ. ಮೀರಳ ಹಾಸ್ಟೆಲಿರುವ ಸ್ಥಳ, ರೂಮಿನ ನಂಬರನ್ನು ಅವನೇ ಹೇಳಿದ.

ಐದೂವರೆಗೆ ಬೆಂಗಳೂರು ತಲುಪಿ ಆಟೋರಿಕ್ಷಾದಲ್ಲಿ ಕುಳಿತು ಹಾಸ್ಟೆಲಿಗೆ ಹೋದಾಗ ಮೀರಾ ಕೋಣೆಯಲ್ಲೇ ಇದ್ದಳು; ಹೆರಳು ಹಾಕಿಕೊಂಡು ಗಮಗಮಿಸುವ ಮಲ್ಲಿಗೆಯ ದಂಡೆ ಮುಡಿದು ಜರಿ ಅಂಚಿನ ಆಕಾಶ ಬಣ್ಣದ ಸೀರೆ ಉಟ್ಟಿದ್ದಳು. ಸತ್ಯಳನ್ನು ಕಂಡು ಅವಳಿಗೂ ಆಶ್ಚರ್ಯ, ಸಂತೋಷ.

'ನಿನ್ನ ಕಾಗದ ಬಂತು' – ಸತ್ಯ ಎಂದಳು. ಮೀರಳ ಮುಖ ಗಂಭೀರವಾಯಿತು. ಸಂಕೋಚವೂ ಆಗಿ ಅವಳು ಮುಖವನ್ನು ನೇರವಾಗಿ ಸತ್ಯಳ

ಮುಖದ ಕಡೆಗೆ ತಿರುಗಿಸಲಿಲ್ಲ. ಸತ್ಯಳೇ, 'ನೋಡು ನಿನಗೂ ಅವನಿಗೂ ಮದುವೆಯಾದರೆ ನನಗೆ ತುಂಬ ಸಂತೋಷ. ಅವನ ಸ್ವಭಾವ ಒಳ್ಳೆಯದು. ಆದರೆ ನೀನು ಒಂದು ವಿಷಯ ಯೋಚನೆ ಮಾಡು: ನಿನ್ನ ತಂದೆ, ತಾಯಿ, ಒಪ್ಪುತ್ತಾರೆಯೆ?'

ಮೀರಾ ಮಾತನಾಡಲು ಕಷ್ಟಪಡುತ್ತಿದ್ದಳು. ತಕ್ಷಣ ಮಾತನಾಡುವಂತೆ ಬಲವಂತ ಮಾಡಬಾರದು, ಹ್ಯಾಗೂ ರಾತ್ರಿ ಇರ್ತೀನಿ ಎಂದುಕೊಂಡ ಸತ್ಯ ಸುಮ್ಮನಾದಳು. ಹಾಸ್ಟೆಲಿನಲ್ಲಿ ಒಂದೊಂದು ಕೋಣೆಗೆ ಇಬ್ಬರು ಹುಡುಗಿಯರಂತೆ ಹಾಕಿದ್ದರು. ಆದರೆ ಮೀರಳ ರೂಮ್‌ಮೇಟ್ ಊರಿಗೆ ಹೋಗಿದ್ದುದರಿಂದ ಅವರಿಬ್ಬರೂ ರಾತ್ರಿ ಮಾತನಾಡಲು ಅನುಕೂಲವಾಯಿತು. ರಾತ್ರಿ ಊಟವಾದ ಮೇಲೆ ಸತ್ಯ ಅದೇ ಮಾತನ್ನು ಮತ್ತೆ ಕೇಳಿದಾಗ ಮೀರಾ ಎಂದಳು: 'ಅಣ್ಣ ವಿರೋಧಿಸಬಹುದು. ಆದರೆ ಅವರನ್ನ ಒಪ್ಪಿಸಬಹುದು. ಆದರೆ ಅಪ್ಪಾಪ್ರ ದೃಷ್ಟಿ ಬೇರೆ. ಏನೋ ಹಿಂದಿನಿಂದ ಬಂದಿದೆ, ಆ ಪದ್ಧತಿ ನಡಕೊಂಡು ಹೋಗಲಿ. ಮುಂದಿನೋರು ಏನು ಬೇಕಾದರೂ ಮಾಡಿಕೊಳ್ಳಲಿ ಅನ್ನೊ ಥರ ಅವರು.'

'ನಾನು ಮಾತಾಡಿ ಬೇಕಾದರೆ ಅವರನ್ನ ಒಪ್ಪುಸ್ತೀನಿ. ಒಂದು ಒಳ್ಳೇ ಕೆಲಸ ಆಗಬೇಕಾದರೆ, ಅದನ್ನ, ಇನ್ನೂ ಹುಟ್ಟದೇ ಇರುವ ಮುಂದಿನ ತಲೆಮಾರಿಗೆ ಯಾಕೆ ನೂಕಬೇಕು? ನಾವು ಮಾಡದ್ದನ್ನ ಅವರು ಮಾಡ್ತಾರೆ ಅನ್ನೊ ಗ್ಯಾರಂಟಿ ಏನು? ನಾವು ಏನೇನು ಬಯಸ್ತೀವಿಯೋ ಅದನ್ನ ನಾವೇ ಮಾಡಿ ಸಾಧಿಸುವ ಛಲ ಇರಬೇಕು.'

ಮೀರ ಸುಮ್ಮನಿದ್ದಳು. ಸತ್ಯಳೇ, 'ಈ ಮದುವೆಗೆ ಶ್ರೀನಿವಾಸನ ತಂದೆ ತಾಯಿಯಿಂದ ದೊಡ್ಡ ವಿರೋಧ ಬರುತ್ತೆ. ಆದರೆ ಯಾವುದಕ್ಕೂ ಹೆದರಲ್ಲ ಅಂತ ಅವನು ಹೇಳಿದಾನೆ. ಹುಡುಗಿಗೆ ಹದಿನೆಂಟು, ಹುಡುಗನಿಗೆ ಇಪ್ಪತ್ತೊಂದು ಕಳೆದಿದ್ದರೆ ಸಾಕು. ಯಾರನ್ನೂ ಕೇಳದೆ ರಿಜಿಸ್ಟರ್ ಮದುವೆ ಮಾಡಿಕೋಬಹುದು. ಹುಡುಗರು ಸ್ವತಂತ್ರ ತಗೊಳ್ಳದೆ ಯಾವುದನ್ನೂ ಮುರಿಯೋಕೂ ಸಾಧ್ಯವಿಲ್ಲ.'

ರಾತ್ರಿ ಮಲಗಿದಾಗ ಇಬ್ಬರೂ ಜಾತಿ ಮತಗಳ ವಿಚಾರವಾಗಿಯೇ ಮಾತನಾಡುತ್ತಿದ್ದರು. ಸತ್ಯಳಿಗೆ ಹೊನ್ನೇಶನ ಜ್ಞಾಪಕ ಬಂತು. ಅವನು ತನ್ನ ಮನೆಗೆ ಬಂದದ್ದರಿಂದ ಹಿಡಿದು, 'ಎಂಜಲು ತಿನ್ನುಕ್ಕೆ ನಾನೇನು ಗತಿ ಕೆಟ್ಟಿಲ್ಲ ಕಣ್ರೀ' ಎಂದು ಮಳೆಯಲ್ಲೇ ಹೊರಟುಹೋದ ತನಕ ವಿವರವಾಗಿ ತಿಳಿಸಿ ಎಂದಳು: 'ಈ ಚಿಕ್ಕ ವಯಸ್ಸಿಗೆ ಅವನಲ್ಲಿ ಈ ಕಹಿ, ಈ ದ್ವೇಷಭಾವ ಹ್ಯಾಗೆ ಬೆಳೀತು? ನನಗೆ ಅರ್ಥನೇ ಆಗುಲ್ಲ.'

ಮೀರಾ ಎರಡು ನಿಮಿಷ ಸುಮ್ಮನಿದ್ದಳು. 'ನಿಂಗೇನಾದರೂ ತಿಳಿಯುತ್ತೆಯೇ?' – ಎಂದು ಸತ್ಯ ಕೇಳಿದ ನಂತರ ನಿಧಾನವಾಗಿ ಹೇಳಿದಳು: 'ನೀವು ಯಾವತ್ತೂ ನಮ್ಮಣ್ಣನ ಕೈಲಿ ಹೇಳುಲ್ಲ ಅಂದ್ರೆ ಹೇಳ್ತೀನಿ.'

'ನಿನ್ನಾಣೆಗೂ ಹೇಳುಲ್ಲ.'

'ನಿಮ್ಮ ತಂದೆಯೋರು ಪ್ರಾಣ ಕಳಕಳೂ ಮೊದಲು ನಮ್ಮಣ್ಣ ದೇವಸ್ಥಾನದ ಹತ್ತಿರ ಜಗಳಕಾದಿದನಲ, ಆಮ್ಯಾಲೆ ಮಾತಂಗಮ್ಮನ ವಿಷಯ ಎಲ್ಲರಿಗೂ ಗೊತ್ತಾಯ್ತು. ಆದರೆ ಹೊನ್ನೂರ ನಿಮ್ಮ ತಂದೆಗೇ ಆದೋನು ಅಂತ ಯಾರಿಗೂ ಗೊತ್ತಿರಲಿಲ್ಲ. ಮಾತಂಗಮ್ಮ ನಮ್ಮ ತಾಯೀ ಕೈಲಿ ಹೇಳಿದ್ಲು. ನಮ್ಮ ತಾಯಿಯ ಬಾಯಿ ಭದ್ರವಿಲ್ಲ. ಮಗ ಅಂತ ಅಣ್ಣನ ಕೈಲಿ ಅವರು ಹೇಳಿದರು. ಹೊನ್ನೂರನಿಗೆ ಹೇಳಿರೋನು ಅಣ್ಣನೇ.'

'ಹೌದಾ?' – ಸತ್ಯ ಆಶ್ಚರ್ಯದಿಂದ ಕೇಳಿದಳು. ತಾನು ಆ ಮಾತನ್ನು ಕೇಳಿದಾಗ ಮೋಹನದಾಸ ತನಗೆ ಏನೂ ಗೊತ್ತಿಲ್ಲವೆಂಬಂತೆ ಹೇಳಿದುದು ನೆನಪಿಗೆ ಬಂತು. ಆದರೆ ಆ ಮಾತನ್ನು ಮೀರಾಳಿಗೆ ಹೇಳಲಿಲ್ಲ. 'ಸುಮ್ಮಸುಮ್ಮನೆ ಯಾಕೆ ಅದೆಲ್ಲ ಹೇಳಿದರು? ತನ್ನ ಹುಟ್ಟಿನ ಇಂಥ ವಿಷಯ ಕೇಳಿದರೆ ಯಾರಿಗಾದರೂ ಸಂಕಟ, ಬೇಜಾರು, ಆಗೇ ಆಗುತ್ತೆ. ಈ ಚಿಕ್ಕ ಹುಡುಗನ ಮನಸ್ಸಿನಲ್ಲಿ ಯಾಕೆ ಇದೆಲ್ಲ ಬರಬೇಕು?'

'ಅಣ್ಣನ ಅಭಿಪ್ರಾಯ ನಿಮಗೆ ಪೂರ್ತಿ ಗೊತ್ತಿಲ್ಲ ಹಾಗಾದರೆ. ದ್ವೇಷ ಬಲಿಯದೆ ಕ್ರಾಂತಿಯಾಗುಲ್ಲ. ಅದ್ದರಿಂದ ಅದನ್ನ ಬಲಿಸಲೇ ಬೇಕು, ಎಲ್ಲೆಲ್ಲಿ ಸಾಧ್ಯವೋ ಅಲ್ಲಲ್ಲಿ ಕೆಣಕಿ ಕೆಣಕಿ ಕನಲಿಸಬೇಕು. ಇದು ಅವನ ನಂಬಿಕೆ. ಅದರ ಹಾಗೇ ಮಾಡ್ತಾನೆ. ನಮ್ಮ ಕೇರೀಲಿ ಎಷ್ಟು ಜನಕ್ಕೆ ಹೀಗೆ ಹೇಳಿ ಅವರ ನಡೆ ನುಡಿ ಬದಲಾಯಿಸಿದಾನೆ ಗೊತ್ತೇ? ಇವನ್ನ ಹೇಳಿದ ಮೇಲೆ ಹೊನ್ನೂರ ಮೇಲು ಜಾತಿಯೋರ್ನ ಕಂಡ್ರೆ ಕಿಡಿಕಿಡಿಯಾಗಿದಾನೆ. ಅವನ ಹಾಸ್ಟೆಲಿನಲ್ಲಿರೂ ಇತರ ಹುಡುಗರ ಮನಸ್ಸಿನಲ್ಲಿ ಕೂಡ ದ್ವೇಷ ಬಿತ್ತುತಾ ಇದಾನೆ. ನಮ್ಮ ಮುಂದಿನ ಕ್ರಾಂತಿಯ ಪ್ರತಿನಿಧಿ ನೀನು ಅಂತ ಅಣ್ಣ ಅವನನ್ನ ಹುರಿದುಂಬಿಸಿದಾನಂತೆ.'

'ಇದು ಮಾತಂಗಿಗೆ ಗೊತ್ತೆ?'

'ಮಾತಂಗಿಯ ಮನಸ್ಸಿನಲ್ಲೂ ದ್ವೇಷ ಬಿತ್ತೋಕ್ಕೆ ಅಣ್ಣ ಪ್ರಯತ್ನಪಟ್ಟ. ಆದರೆ ಅವಳು ಹಿಂದಿನ ಕಾಲದೋಳು. ನಿಮ್ಮ ತಂದೆಯೋರು ಅಂದ್ರೆ ಈಗಲೂ ತುಂಬ ಭಕ್ತಿ ಇಟ್ಕೊಂಡಿದಾಳೆ. ತನ್ನಿಂದಲೇ ಸತ್ತರೇನೋ ಅವರು ಅಂತ ಒಂದೊಂದು ಸಲ ಗ್ಯಾಪಿಸ್ಕೊಂಡು ನಮ್ಮ ತಾಯಿ ಕೈಲಿ ಹೇಳ್ಕೊಂಡು ಅತ್ತಾಳಂತೆ. ಅದು ನಮ್ಮಣ್ಣನಿಗೆ ತಿಳಿಯುತ್ತೆ. ಅವನು ಅದನ್ನ ಹೊನ್ನೂರನಿಗೆ ಹೇಳ್ತಾನೆ.

ತನ್ನ ತಾಯಿಯು ಯಾವನಿಂದ ಕದ್ದು ಬಸುರಿಯಾಗಿ ತನ್ನನ್ನು ಹೆತ್ತಳೋ, ಅವನನ್ನ ಇನ್ನೂ ನೆನಸಿಕೊತ್ತಿರೂದನ್ನ ಕೇಳಿದ ಹೊನ್ನೂರ ಇನ್ನೂ ಕೆರಳ್ತಾನೆ. ಈಗ ಅವನು ಊರಿಗೂ ಹೆಚ್ಚಾಗಿ ಬರುಲ್ಲ. ಬಂದಾಗ ತಾಯಿಯ ಕೈಲಿ ಮಾತೂ ಆಡುಲ್ಲ. ಸರ್ಕಾರ್‌ದೋರು ಹ್ಯಾಗೂ ಸ್ಕಾಲರ್‌ಶಿಪ್ ಕೊಡ್ತಾರೆ. ತುಮಕೂರಲ್ಲೇ ಇರ್ತಾನೆ.'

'ಮಗನಿಗೆ ಅಂತ ಮಾತಂಗಿ ದುಡ್ಡು ಪಡ್ಡು ಇಟ್ಕಂಡಿದ್ಲಲ?'

'ನಿಮ್ಮ ತಂದೆ ಸಾಯುಕ್ಕೆ ಮುಂಚೆ ಎರಡು ಸಾವಿರ ರೂಪಾಯಿ ಇಟ್ಟಿದ್ರು. ನೀವು ಅವಳಿಗೆ ಕೊಟ್ರಲ, ಅದನ್ನ ಮನೇಲಿ ಇಟ್ಟಿದ್ಲು. ತನಗೆ ಫೀಜು ಪುಸ್ತಕ ಬಟ್ಟೆಗೆ ಬೇಕು ಅಂತ ಹೇಳಿ ಬಲವಂತವಾಗಿ ಅವನು ಇಸ್ಕೊಂಡು ಹೋದ. ಇವರ ಕ್ರಾಂತಿಯ ಫಂಡಿಗೆ ಎಲ್ಲಾನೂ ಕೊಟ್ನಂತೆ.'

ಸತ್ಯಳ ನೆನಪಿಗೆ, ದ್ವೇಷ ತಿರಸ್ಕಾರಗಳು ತುಂಬಿದ ಹೊನ್ನೇಶನ ಕಣ್ಣುಗಳೇ ಬರುತ್ತಿದ್ದುವು. ಆಶ್ಚರ್ಯವಾದುದು ಮೋಹನದಾಸನ ಬಗೆಗೆ. ಕ್ರಾಂತಿಯಲ್ಲಿ ತನ್ನ ಶ್ರದ್ಧೆಯನ್ನು ಅವನೆಂದೂ ಬಚ್ಚಿಟ್ಟಿರಲಿಲ್ಲ. ಆದರೆ ದ್ವೇಷದ ಉತ್ಪಾದನೆಯು ಕ್ರಾಂತಿಯ ಚಾಲನೆಗೆ ಅಗತ್ಯವಾಗಿದೆ. ಅದಕ್ಕಾಗಿ ಯಾವ ಮಾರ್ಗವಾದರೂ ಸರಿ. ಅವನ್ನು ಸಾಧಿಸಲು ಅವನು ನಿಂತಿದ್ದಾನೆ. ಇಷ್ಟು ಮಾತ್ರವಲ್ಲ. ತಾನೇ ಇಷ್ಟೆಲ್ಲವನ್ನೂ ಮಾಡಿ, ಹೊನ್ನೇಶನಿಗೆ ತನ್ನ ತಂದೆಯ ವಿಷಯ ಗೊತ್ತೇ ಎಂದು ಕೇಳಿದಾಗ 'ಊರಿಗೂರಿಗೇ ಗೊತ್ತು. ಅವನಿಗೂ ಗೊತ್ತಿರಬಹುದು' ಎಂದು ತನಗೆ ಗೊತ್ತಿಲ್ಲದವನಂತೆ ಹೇಳಿದ. 'ಅವನು ಈ ವಿಷಯಾನ ನಿಮ್ಮ ಕೈಲಿ ಎಂದಾದರೂ ಮಾತಾಡಿದಾನೆಯೆ?' – ಎಂದು ಮತ್ತೆ ಕೇಳಿದುದಕ್ಕೆ, 'ಇಲ್ಲವಲ್ಲ, ಅವನ್ನ ನಾನು ಹ್ಯಾಗೆ ಆಡ್ಲಿ?' – ಎಂದು ಸುಳ್ಳು ಹೇಳಿದ. ಸತ್ಯಳಿಗೆ ಮೋಹನದಾಸನ ಬಗೆಗೆ ಒಂದು ತೆರನಾದ ಗೌರವವಿತ್ತು. ಅವನು ಒರಟ ನಿಜ. ಒರಟುತನಕ್ಕೆ ಒಂದು ಕಾರಣವಿದೆ. ಮೂರು ನಾಲ್ಕು ಸಾವಿರ ವರ್ಷದ ಇತಿಹಾಸವೇ ಇದೆ. ಆದರೆ ಆ ಇತಿಹಾಸದ ಅನ್ಯಾಯವನ್ನು ಮನಃಪೂರ್ವಕವಾಗಿ ಒಪ್ಪಿ, ಅದರ ಪರಿಹಾರಕ್ಕೆ ಅಷ್ಟೇ ಮನಃಪೂರ್ವಕವಾಗಿ ಕೆಲಸ ಮಾಡಿಕೊಟ್ಟು, ಅವನೊಡನೆ ಆಚಾರ ವಿಚಾರಗಳಲ್ಲಿ ಊಟ ತಿಂಡಿಗಳಲ್ಲಿ, ಅವನು ಊಟ ಮಾಡಿದ ಎಂಜಲು ತಟ್ಟೆ ಬಟ್ಟಲುಗಳನ್ನು ತೊಳೆಯುವುದರಲ್ಲಿ ಭೇದ ಮಾಡದೆ ನಡೆದಿರುವ ನನ್ನ ಸಂಗಡ ಕೂಡ ಸುಳ್ಳು ಹೇಳಬೇಕಾದರೆ ಅವನೊಬ್ಬ ಸಣ್ಣ ಮನುಷ್ಯನೆನಿಸಿತು. ಅಂಥವನೊಡನೆ ಇಷ್ಟು ವಿಶ್ವಾಸಪೂರ್ವಕವಾಗಿ ವರ್ತಿಸಿದ ತಾನೇ ಮೂರ್ಖಳು ಎನಿಸಿತು.

ಬೆಳಗ್ಗೆ ಎದ್ದು ಅವಳು ಹೊರಟಾಗ ಮೀರಾ, 'ಒಂದು ದಿನ ಇರಿ' ಎಂದಳು.

ಬೆಂಗಳೂರಿನಲ್ಲಿ ಕೆಲಸವೂ ಇರಲಿಲ್ಲ. ಅಲ್ಲದೆ ಊರಿನಲ್ಲಿ ಬೇಸಾಯದ ಕಾಲ. ಆದುದರಿಂದ ಅವಳು ಹೊರಟೇಬಿಟ್ಟಳು.

ಕಳಿಸಲು ಬಸ್‌ಸ್ಟ್ಯಾಂಡಿಗೆ ಬಂದ ಮೀರಾ ಎಂದಳು: 'ನೆನ್ನೆ ರಾತ್ರಿ ಅಣ್ಣನ ವಿಷಯ ಹೇಳಿದೆನಲ. ನಾನು ಹೇಳಿದೆ ಅನ್ನೂದ ಯಾರ ಕೈಲೂ ಆಡಬೇಡಿ. ಇನ್ನೊಂದು ವಿಷಯ. ಅಕಸ್ಮಾತ್ ಈ ಮದುವೆಯಾದರೆ ನಮ್ಮ ಅಣ್ಣ ಒಪ್ತಾನೆ, ಅಪ್ಪನದೇ ಕಷ್ಟ ಅಂತ ನಿನ್ನೆ ಅಂದೆನಲ್ಲ. ಈಗ ಅನ್ನಿಸ್ತಿದೆ: ಅಪ್ಪನ್ನ ಒಪ್ಪಿಸೂದು ಸುಲಭ. ಆದರೆ ಅಣ್ಣಂದೇ ಕಷ್ಟ. ಅವನು ಯಾವ ವಿಷಯಕ್ಕೆ ಹ್ಯಾಗೆ ಯೋಚನೆ ಮಾಡ್ತಾನೆಯೋ ನನಗೆ ತಿಳಿಯೂದೇ ಇಲ್ಲ. ಅವನಿಗೆ ನೀವೇ ಹೇಳಬೇಕು.'

'ನಾನು ಹ್ಯಾಗೆ ಹೇಳ್ಲಿ?'

'ನೀವು ಹೇಳದೆ ಇದ್ದರೆ ಯಾರು ಹೇಳೂರು? ನಿಮ್ಮಿಷ್ಟ' – ಎಂದು ಅವಳು ಸುಮ್ಮನಾದಳು.

ಸತ್ಯ ಯೋಚಿಸಿದಳು: 'ಅವನ ದೃಷ್ಟಿಯಲ್ಲೇ ದೋಷವಿದೆ. ಅದನ್ನ ತಿದ್ದಬೇಕು. ಅವನ ಕೈಲಿ ಮಾತೇ ಬಿಟ್ಟು ಸುಮ್ಮನಾದರೆ ಏನೂ ಆಗುಲ್ಲ. ಈ ಮದುವೆಯಾದರೆ ಅವನು ತಾನಾಗಿಯೇ ಬದಲಾಗಬಹುದು.' ಅವಳು ನೇರವಾಗಿ ಊರಿಗೆ ಹೋಗುವ ಬಸ್ಸು ಹತ್ತಲಿಲ್ಲ. ತುಮಕೂರಿಗೆ ಹೋದಳು.

ಬೆಳಗಿನ ಹನ್ನೊಂದು ಗಂಟೆಯ ಹೊತ್ತಿನಲ್ಲಿ ಮೋಹನದಾಸ ಅಂಗಡಿಯಲ್ಲೇ ಇದ್ದ. ಗಲ್ಲಾದ ಹತ್ತಿರ ಕೂತು ಲೆಕ್ಕದ ಪುಸ್ತಕ ನೋಡುತ್ತಿದ್ದ. ಅವನು ಎದ್ದು ನಿಂತು ಇವಳನ್ನು ಸ್ವಾಗತಿಸಿದ. ಕಾಫಿ ತರುವಂತೆ ಆಳಿಗೆ ಹೇಳಿ ಮೇಲೆ ಕರೆದುಕೊಂಡು ಹೋದ. ಸತ್ಯ ತಾನಾಗಿಯೇ ಶ್ರೀನಿವಾಸನ ವಿಷಯ ವಿವರಿಸಿದನಂತರ ಹೇಳಿದಳು: 'ಮೀರಾನ ಮದುವೆಯಾಗಬೇಕು ಅಂತ ಅವನ ಮನಸ್ಸಿನಲ್ಲಿದೆ. ನನ್ನ ಕೈಲಿ ಹೇಳಿದ. ನೀವೇ ಕೊಟ್ಟು ಮದುವೆ ಮಾಡೂದು ಚನ್ನ.'

ಮೋಹನದಾಸನ ಮುಖ ಕೆಂಪು ಬಣ್ಣಕ್ಕೆ ತಿರುಗಿತು. 'ಈ ಮಾತು ನಿಮ್ಮ ಬಾಯಿಂದ ಬರಬಾರದು' – ಎಂದ.

'ಏನು ತಪ್ಪು?'

'ಅವನ್ಯಾರು ಗೊತ್ತೆ? ನಮ್ಮಪ್ಪನ್ನ ಮೀಸೆ ಬಿಟ್ಟ ಅಂತ ಕಂಬಕ್ಕೆ ಕಟ್ಟಿ ಹೊಡೆಸಿದೋನ ಮೊಮ್ಮಗ. ನಾನು ನಿಮ್ಮಣ್ಣನ ಹೋಟೆಲಿಗೆ ಹೋದೆ ಅಂತ ನನ್ನ ಜುಟ್ಟು ಹಿಡಿದು ಹಾಗೆ ಗಾಂವಿನ [illegible]ದಲ್ಲಿ ಹೊಡೆದೋನು ಅವನ ಜಾತಿಯೋನೇ ಇನ್ನೊಬ್ಬ. ಇನ್ನೂ ನೂರು ನೂರು ವರ್ಷಕಾಲ ನಮ್ಮ ಜನದಿಂದ ನಮ್ಮ ಹೊಲ ಗದ್ದೆಗಳಲ್ಲಿ ಜೀತ ಮಾಡಿಸಿಕೊಂಡಿರೋರು ಅವರೇ. ಈಗ ನಮಗೆ

ಒಂದಿಷ್ಟು ಬಂಜರು ಹೊಲ, ನಾಲ್ಕಂಕಣದ ಮನೆ, ಸರ್ಕಾರಿ ನೌಕರಿ, ಹುಡುಗರಿಗೆ ಸ್ಕಾಲರ್‌ಶಿಪ್ ತೋರಿಸಿ ಇಟ್ಟು ನಮ್ಮ ಮೇಲೆ ಆಳ್ತಾ ಇರೋನು ಅವರಪ್ಪ. ಅವನಿಗೆ, ಅವರ ಜಾತಿಗೆ ನನ್ನ ತಂಗೀನ ಕೊಡುಕ್ಕೆ ಹೇಳ್ತೀರಲ. ಅವರಿಂಗೆ ಕಡಿಮೆ ಏನು ನಾವು?'

ಅವನ ಉತ್ತರ ಹೀಗಿರುತ್ತದೆಂಬುದು ಅವಳಿಗೆ ಅನಿರೀಕ್ಷಿತವಾಗಿರಲಿಲ್ಲ. ಅವಳು ಒಂದು ನಿಮಿಷ ಸುಮ್ಮನೆ ಕುಳಿತಳು. ಅನಂತರ ಹೇಳಿದಳು: 'ಅನ್ಯಾಯವಾಗಿದೆ ನಿಜ. ಅದನ್ನ ಪರಿಹರಿಸುಕ್ಕೆ ಏನು ಮಾಡಬೇಕು?'

'ಕ್ರಾಂತಿ. ಬಡಿದಾಟ. ಅವರಿಗೆ ಬುದ್ಧಿ ಕಲಿಸಬೇಕು.'

'ಯಾತಕ್ಕೋಸ್ಕರ ಕ್ರಾಂತಿ? ಅವರಿಗೆ ಸಮನಾಗಬೇಕು ಅಂತ ಅಲ್ಲವೇ? ಒಂದಾದರೆ ಸಮವಾದ ಹಾಗೆ ತಾನೆ? ಸಮನಾಗುಕ್ಕಿಂತ ಒಂದಾಗೂದು ದೊಡ್ಡದಲ್ಲವೆ? ಒಂದಾಗುಕ್ಕೆ ಹೆಣ್ಣು ಕೊಟ್ಟು ತರುಕ್ಕಿಂತ ಬೇರೆ ಉತ್ತಮ ದಾರಿ ಯಾವುದಿದೆ? ಅದಕ್ಕೇ ನಾನು ಹೇಳ್ತೀನಿ: ನಿಮ್ಮ ಕ್ರಾಂತಿಗೆ ಬರೀ ನಿಮ್ಮ ಜನದ ಹಾಸ್ಟೆಲನ್ನು ಹಿಡೀಬ್ಯಾಡಿ. ಸ್ಕೂಲು ಕಾಲೇಜು, ಉಳಿದ ಜನದ ಹಾಸ್ಟೆಲುಗಳನ್ನೆಲ್ಲ ಹಿಡೀರಿ. ಮದುವೆ ವಿಷಯ ದೊಡ್ಡೋರಿಗೆ ಬಿಡಬ್ಯಾಡಿ. ನಿಮಗೆ ಒಪ್ಪಿಗೆಯಾದೋರನ್ನ, ನಿಮ್ಮ ಸಹಪಾಠಿಗಳಲ್ಲಿ ಸಹೋದ್ಯೋಗಿಗಳಲ್ಲಿ ನೀವೇ ಆರಿಸಿಕೊಂಡು ಮದುವೆಯಾಗಿ. ನಿಮಗೆ ಒಪ್ಪಿಗೆಯಾಗೂದು ಮುಖ್ಯ, ಜಾತಿ ಮುಖ್ಯವಲ್ಲ ಅಂತ ಪ್ರಚಾರ ಶುರು ಮಾಡಿ. ಇನ್ನು ಇಪ್ಪತ್ತು ಮೂವತ್ತು ವರ್ಷದಲ್ಲಿ ನೂರಕ್ಕೆ ಹತ್ತು ಭಾಗ ಮದುವೆ ಹೀಗೆ ಆದರೆ ಜಾತಿಯ ತಳಹದಿಯೇ ಕುಸಿಯುತ್ತೆ. ಈಗ ಶ್ರೀನಿವಾಸ ಹ್ಯಾಗೂ ಆಗುಕ್ಕೆ ಮುಂದೆಬಂದಿದಾನೆ. ಸುಮ್ಮನೆ ಒಪ್ಪಿ.'

ಮೋಹನದಾಸ ಒಂದು ನಿಮಿಷ ನಿರುತ್ತರನಾದ. ಆದರೆ ಅನಂತರ ಉತ್ತರ ಕೊಟ್ಟ: 'ಕೊಟ್ಟು ತರೂದು ಅಂದರೇನು? ಕೆಳಜಾತಿಯಿಂದ ಮೇಲುಜಾತಿಯೋರು ತಂದುಕೊಳೂದು ಮೊದಲಿನಿಂದಲೂ ಇತ್ತು. ಆದರೆ ಕೆಳಜಾತಿಯೋರಿಗೆ ಕೊಡ್ತಿರಲಿಲ್ಲ. ಈಗ ಶ್ರೀನಿವಾಸಗೌಡ ನಮ್ಮ ಹೆಣ್ಣು ತಂದ್ಯಾಕಭೌದು. ಆದರೆ ನಮಗೆ ಕೊಡ್ತಾನೇನು?'

'ಅವನ ಮನೇಲಿ ಹೆಣ್ಣೇ ಇಲ್ವಲ ನಿಮಗೆ ಕೊಡುಕ್ಕೆ! ಇದ್ದರೆ ಆ ಮಾತು ಕೇಳಬಹುದಾಗಿತ್ತು.'

'ನಾನು ಹೇಳಿದ್ದು ಮೇಲುಜಾತಿಯೋರು ಯಾವತ್ತೂ ತಮ್ಮ ಹೆಣ್ಣು ಕೊಡುಕ್ಕೆ ಒಪ್ಪಲ್ಲ.'

'ಹೆಣ್ಣನ್ನ ಕೊಡೂ ಪದ್ಧತಿ ಇರೂತನಕ ಅಸಾಧ್ಯವೇ. ಹೆಣ್ಣೇ ಒಪ್ಪಿ

ಮಾಡ್ಕಳೂ ಪದ್ಧತಿ ಬರಬೇಕು ಇದಕ್ಕೆ.'

'ನಿಮ್ಮ ಹಾಗೆ ಧೈರ್ಯವಾಗಿರೂ ಹುಡುಗೀರು ಈಗ ಎಲ್ಲಿದಾರೆ? ನಾನು ಹೇಳಿದ್ದು....' – ಎಂದು ಅವನು ವಾಕ್ಯವನ್ನು ಅರ್ಧಕ್ಕೇ ನುಂಗಿಕೊಂಡ.

ಅವಳಿಗೆ ಅವನ ಅರ್ಥದ ಅರಿವಾಯಿತು. ಆದರೆ ತಕ್ಷಣ ಬೇರೆ ಮಾತು ಕೇಳಿದಳು: 'ಹೊನ್ನೇಶ ನಿಮ್ಮ ಮಾತು ಕೇಳ್ತಾನೆ. ದ್ವೇಷ ಒಳ್ಳೇದಲ್ಲ ಅಂತ ಅವನಿಗೆ ಹೇಳಿ. ನಾನು ನಿಮ್ಮ ಜಾತಿಯ ವಿಷಯದಲ್ಲಿ ಎಷ್ಟು ವಿಶ್ವಾಸ ಇಟ್ಕಂಡಿ ದೀನಿ ಅಂತ ನೀವು ಅವನಿಗೆ ಬಿಡಿಸಿ ಯಾಕೆ ಹೇಳಲಿಲ್ಲ?'

ಅವನು ಕಕ್ಕಾವಿಕ್ಕಿಯಲ್ಲಿ ಬಿದ್ದುಬಿಟ್ಟ. ಇದ್ದಕ್ಕಿದ್ದಹಾಗೆಯೇ ಹೀಗೆ ಆಡಿದ ಇವಳ ಅರ್ಥವೇನೆಂದು ಹೊಳೆಯಲಿಲ್ಲ. ಆದರೆ ತನ್ನ ಹಿಂದಿನ ಮಾತನ್ನು ಆಡಿದ: 'ನಿಮ್ಮ ವಾದ ಏನೇ ಇರಲಿ. ನನಗೆ ಈ ಮದುವೆ ಇಷ್ಟವಿಲ್ಲ.'

'ನಿಧಾನವಾಗಿ ಯೋಚನೆ ಮಾಡಿ. ಆದರೆ ನನಗೆ ಹೇಳದೆ ನಿಮ್ಮ ತೀರ್ಮಾನ ವನ್ನು ಮತ್ತೆ ಯಾರ ಕೈಲೂ ಆಡಬೇಡಿ. ನೀವು ನನ್ನ ಕೈಲಿ ಸುಳ್ಳು ಹೇಳಲ್ಲ ಅಂತ ತಿಳಿದಿದೀನಿ. ನನ್ನ ತಿಳಿವಳಿಕೆ ಸರಿಯೋ ತಪ್ಪೋ ನೀವೇ ಹೇಳಿ.'

ಅವನು ಮತ್ತೆ ಕಕ್ಕಾವಿಕ್ಕಿಯಾದ.

೨

ಒಂದು ಬೆಳಗ್ಗೆ ಎಂಟು ಗಂಟೆಯ ಹೊತ್ತಿಗೆ ಹಾಸ್ಟೆಲಿನ ಹೆಣ್ಣಾಳು ಮೀರಳ ರೂಮಿಗೆ ಬಂದು, 'ಯಾರೋ ಗಂಡಸರು ಕರೀತಾರೆ' ಎಂದಳು. ಮೀರಾ ಹೊರಗೆ ಬಂದು ವಿಸಿಟರ್ಸ್ ರೂಮಿನಲ್ಲಿ ನೋಡುತ್ತಾಳೆ – ಅವಳ ನಿರೀಕ್ಷೆ ನಿಜವಾಗಿತ್ತು: ಶ್ರೀನಿವಾಸ. 'ಇಲ್ಲಿ ಕೂರೂದು ಬ್ಯಾಡ. ನಂಗೆ ಹಸಿವಾಗಿದೆ. ತಿಂಡಿ ತಿನ್ನಬೇಕು ನಡಿ' – ಅವನು ಎದ್ದು ನಿಂತು ಹೇಳಿದ.

'ಒಂದು ನಿಮಿಷ. ಬಟ್ಟೆ ಬದಲಾಯಿಸಿ ಬರ್ತೀನಿ' – ಎಂದು ಅವಳು, ಆ ಕೋಣೆಯಿಂದ ಹೊರಗೆ ಬಂದು ಮೆಟ್ಟಿಲು ಹತ್ತಿ ತನ್ನ ಕೋಣೆಗೆ ಹೋದಳು. ಅವಳ ರೂಮ್‌ಮೇಟ್ ಸ್ನಾನಕ್ಕೆ ಹೋಗಿದ್ದಳು. ಮೀರಾ ತನ್ನ ಕಪಾಟಿನ ಬೀಗ ತೆಗೆದಳು. ಯಾವ ಸೀರೆ ಉಡಬೇಕೆಂದು ನಿರ್ಧರಿಸಲು ಎರಡು ನಿಮಿಷ ಬೇಕಾಯಿತು. ಹೊಸದಾಗಿ ತೆಗೆದುಕೊಂಡಿದ್ದ ಕ್ರೀಮ್ ಬಣ್ಣದ, ನಡುವೆ ಕಸ್ತೂರಿ ಮಾರ್ಕಿನ ಜರಿಯ ಸೀರೆ ಉಟ್ಟು ಅದೇ ಬಣ್ಣದ ರವಿಕೆ ತೊಟ್ಟಳು. ಬೇಗ ಜಡೆ ಬಿಚ್ಚಿ ಬಾಚಿಕೊಂಡು ಹೆರಳು ಹಾಕಿ ಬಾತ್‌ರೂಮಿಗೆ ಹೋಗಿ ಮುಖ ತೊಳೆದು ಬಂದು ಸ್ನೋ ಹಚ್ಚಿ ಪೌಡರ್ ಹಾಕಿ ಹಣೆಗೆ ತಿಲಕದಾಕಾರದ ಕುಂಕುಮ

ಇಟ್ಟು ಕಾಲಿಗೆ ಕೆಂದು ಬಣ್ಣದ ಸಾಂಡಲ್ ಕಟ್ಟಿಕೊಂಡು ಸ್ನಾನದ ಮನೆಗೆ ಹೋಗಿ, ತಾನು ಹೊರಗೆ ಹೋಗುವುದಾಗಿ ಬಾಗಿಲಿನಿಂದ ಕೂಗಿ ತನ್ನ ರೂಮ್ ಮೇಟಿಗೆ ಹೇಳಿ ಮೆಟ್ಟಿಲಿಳಿದು ಕೆಳಗೆ ಬಂದಾಗ, ಇಷ್ಟು ಹೊತ್ತು ಕಾಯಿಸಿದ್ದಕ್ಕೆ ಶ್ರೀನಿವಾಸ ಚಡಪಡಿಸುತ್ತಿದ್ದ. ಆದರೆ ಅವಳು ಮಾಡಿಕೊಂಡು ಬಂದಿರುವ ಅಲಂಕಾರವನ್ನು ಕಂಡು ಬೆರಗಾದ. ಅವಳನ್ನು ತನ್ನ ಎಡ ಪಕ್ಕದಲ್ಲಿ ಕೂರಿಸಿ ಕೊಂಡು ಕಾರನ್ನು ನಡೆಸಿ ಕೆಂಪೇಗೌಡ ರಸ್ತೆಯ ಒಂದು ನವೀನ ಹೋಟೆಲಿಗೆ ಬಂದ. ಮಹಡಿ ಹತ್ತಿ ಫ್ಯಾಮಿಲಿ ರೂಮಿನಲ್ಲಿ ಇಬ್ಬರೂ ಜೊತೆಯಲ್ಲಿ ಕೂತರು. ವೇಟರಿಗೆ ತಿಂಡಿಗೆ ಹೇಳಿದ ಮೇಲೆ ಕೇಳಿದ: 'ನಾನು ಇಷ್ಟು ಕಾಗದ ಬರೀತೀನಿ. ನೀವ್ಯಾಕೆ ಒಂದು ಬರೀಬಾರದು?'

'ಏನಂತ ಬರೀಲಿ?'

'ಏನೂ ಬರೀಬೇಕು ಅನಿಸುಲ್ಲವೆ?' – ಎಂದು ಅವಳ ಮುಖವನ್ನು ದಿಟ್ಟಿ ಸಿದ. ಅವಳು ತಲೆ ತಗ್ಗಿಸಿದಳು. ತನ್ನ ಪ್ಯಾಂಟಿನ ಜೇಬಿಗೆ ಕೈ ಹಾಕಿ ಅವನು ಕರ್ಚೀಫಿನ ಗಂಟನ್ನು ತೆಗೆದು ಬಿಚ್ಚಿದ. ತೂಕವಾದ ಐದೆಳೆ ಒಂದು ಚಿನ್ನದ ಸರ. 'ಸ್ವಲ್ಪ ಈ ಕಡೆಗೆ ತಿರುಗು' – ಎಂದು, ಅದನ್ನು ತನ್ನ ಎರಡು ಕೈಗಳಿಂದಲೂ ಹಿಡಿದು ಅವಳ ಬಾಗಿದ ತಲೆಯ ಮೇಲಿಂದ ಸರಿಸಿ ಕೊರಳಿಗೆ ಹಾಕಿದ. 'ಇದೇನು?' – ಅವಳು ಕೇಳಿದಳು. ತಾನೇ ಸರವನ್ನು ಕುತ್ತಿಗೆಯ ಮೇಲೆ ಕೂರಿಸಿ ಸೆರಗನ್ನು ಸರಿ ಮಾಡಿ ಎಂದ: 'ನಿನಗೆ ಚನ್ನಾಗಿ ಕಾಣುತ್ತೆ.'

'ಇಂಥದೆಲ್ಲ ಯಾಕೆ ಮಾಡಿಸ್ಕಂಡು ಬಂದಿರಿ?'

'ನಮ್ಮ ಮನೆತನದಲ್ಲಿ ಸೊಸೆ ಹಾಕ್ಕಳೊ ಸರ ಇದು. ಹೊಸದಾಗಿ ಮಾಡಿಸಿ ದ್ದಲ್ಲ.'

'ಅಂದ್ರೆ ನಿಮ್ಮ ತಂದೆ ತಾಯಿ ಕೈಲಿ ಮಾತಾಡಿದಿರಾ? ಅವರು ಒಪ್ಪಿದರೇ?'

'ಒಪ್ಪದಿದ್ರೆ ಒಪ್ಪಿಸೂದು. ಒಪ್ಪಿಸುಕ್ಕೆ ಆಗದಿದ್ರೆ ನಮ್ಮ ದಾರಿ ನಮಗೆ ಗೊತ್ತಿದೆ. ಮೀರಾ, ಸ್ವಲ್ಪ ನನ್ನ ಕಡೆ ತಿರುಗಿ ನೋಡು.'

ಅವಳು ಅವನ ಕಡೆಗೆ ತನ್ನ ಮುಖವನ್ನು ತಿರುಗಿಸಿದಳು. ಅವನು ಒಂದು ನಿಮಿಷ ದಿಟ್ಟಿಸಿ ನೋಡಿ ಹೇಳಿದ: 'ನಿನ್ನ ಕಿವಿಗೆ ಎರಡು ಬಿಳೀ ವಜ್ರದ ಓಲೆ ಇಡಬೇಕು. ಆಗ ಹ್ಯಾಗೆ ಕಾಣ್ತೀಯ ಗೊತ್ತಾ?'

'ಹ್ಯಾಗೆ?'

'ವೈಜಯಂತಿಮಾಲಾ ಕಂಡ ಹಾಗೆ. ಈಗ ನಾನು ದಿನಾ ಹೊತ್ತಿಗೆ ಮುಂಚೆ ಏಳ್ತೀನಲ. ಇವತ್ತು ಎದ್ದ ತಕ್ಷಣ ಮನಸ್ಸಿನಲ್ಲಿ ಬಂತು. ನಿನಗೂ ಈ ಸರ ಹಾಕಿ ನೋಡಬೇಕು ಅನ್ನಿಸ್ತು. ಬೇಗ ಶೇವ್ ಸ್ನಾನ ಮುಗಿಸಿ ಹೊರಟು ಬಂದೆ.'

ಅಷ್ಟರಲ್ಲಿ ತಿಂಡಿ ಬಂತು. ಮಾತನಾಡುತ್ತಾ ಇಬ್ಬರೂ ತಿಂದರು. ಕಾಫಿ ಕುಡಿದು, ತಟ್ಟೆಯಲ್ಲಿ ಬಿಲ್ ತಂದ ವೇಟರನಿಗೆ ದುಡ್ಡು ಭಕ್ಷೀಸುಗಳನ್ನು ಕೊಟ್ಟು ಕಳಿಸಿದ ಮೇಲೆ ಶ್ರೀನಿವಾಸ ಎಂದ: 'ಮೀರಾ, ಇವತ್ತೆಲ್ಲ ಬರೀ ನಿನ್ನ ಜೊತೆ ಇರಬೇಕು ಅನ್ಸತ್ತೆ.'

'ನನ್ನ ಕಾಲೇಜು?'

'ಹಾಗಾದರೆ ನನ್ನ ಜೊತೆ ಇರೂದು ನಿಂಗೆ ಇಷ್ಟವಿಲ್ಲವೆ?' – ಎಂದು ಅವಳ ಮೃದುವಾದ ಬಲಗೈ ಹಿಡಿದು ಕೇಳಿದ.

ಅವಳು ಮಾತನಾಡಲಿಲ್ಲ. 'ನಡಿ, ಕಾರಿನಲ್ಲಿ ಕೂತು ಬೆಂಗಳೂರಿನಿಂದ ಹೊರಗೆ ಎಲ್ಲಾದರೂ ಮಧ್ಯಾಹ್ನದ ತನಕ ಹೋಗಿಬರಾಣ.'

ಹೊರಗೆ ರಸ್ತೆಯ ಅಂಚಿನಲ್ಲಿ ಮಾರುತ್ತಿದ್ದ, ಕನಕಾಂಬರಿ ಹೂವುಗಳನ್ನು ಸೇರಿಸಿ ಕಟ್ಟಿದ ಬಿಳಿಮಲ್ಲಿಗೆಯ ಉದ್ದನೆಯ ದಂಡೆಯನ್ನು ತೆಗೆದು ಕೊಟ್ಟ. ಅವಳು ಕಾರಿನಲ್ಲಿ ಕುಳಿತೇ ಹೆರಳಿನ ಮೇಲೆ ಕಮಾನು ಆಕೃತಿಯಲ್ಲಿ ಕೂರುವಂತೆ ಮುಡಿದುಕೊಂಡಳು. ಕಾರನ್ನು ಬಲಭಾಗಕ್ಕೆ ತಿರುಗಿಸಿ ಮಲ್ಲೇಶ್ವರದ ಕಡೆಗೆ ನಡೆಸಿ, ದಾರಿಯಲ್ಲಿ ಸಿಕ್ಕಿದ ಒಂದು ಬಂಕಿನಲ್ಲಿ ಪೆಟ್ರೋಲ್ ತುಂಬಿಸಿಕೊಂಡು ಅವನು ಮುಂದೆ ನಡೆಸಿದ. ನಗರದ ರಸ್ತೆಗಳನ್ನು ದಾಟಿದ ಮೇಲೆ ತನ್ನ ಎಡಗೈಯನ್ನು ಅವಳ ಹೆಗಲಮೇಲೆ ಇಟ್ಟು ಕೇಳಿದ: 'ಏನು ಯೋಚನೆ ಮಾಡ್ತಿದೀಯ?'

'ನಮ್ಮ ಮದುವೆ ಸುಲಭವಾಗಿ ಆಗುತ್ತೆಯೇ ಅಂತ.'

'ನೋಡು. ಕಷ್ಟ ಸುಲಭ ಅನ್ನೂದು ನಾವು ಹ್ಯಾಗೆ ಭಾವಿಸಿದರೆ ಹಾಗೆ. ದೊಡ್ಡೋರು ಕೊಂಬು ಕಾಳೆ ಊದಿಸಿ ಮಾಡಿಸಿದರೆ ಮಾತ್ರ ಸುಲಭ ಅಂತ ಯಾಕೆ ತಿಳಕೋಬೇಕು? ನನ್ನ ಅಭಿಪ್ರಾಯ ಹೀಗೆ ಅಂತ ನಮ್ಮಪ್ಪನಿಗೆ ನೆನ್ನೆಯೇ ಕಾಗದ ಬರೆದು ಹಾಕಿದೀನಿ. ಇಂಥ ವಿಷಯ ನೇರವಾಗಿ ಹೇಳುಕ್ಕಿಂತ, ಮೊದಲು ಬರೆದು ತಿಳಿಸೂದು ಸುಲಭ ಅಲ್ಲವೆ?'

'ಹೂಂ.'

'ನನ್ನ ಅಂದಾಜಿನಲ್ಲಿ ಅವರು ತಕ್ಷಣ ಒಪ್ಪಲ್ಲ. ನಾನು ತಾಳ್ಮೆಯಿಂದ ಅವರ, ನನ್ನ ತಾಯಿಯ ಮನಸ್ಸು ಒಲಿಸುಕ್ಕೆ ಪ್ರಯತ್ನ ಮಾಡ್ತೀನಿ. ಅವರು ಒಪ್ಪಲಿಲ್ಲ ಅನ್ನು. ಸಬ್‌ರಿಜಿಸ್ಟ್ರಾರರ ರೂಬು ರೂಬು ಕುಮಾರಿ ಮೀರಾಗೂ ಶ್ರೀಮಾನ್ ಶ್ರೀನಿವಾಸನಿಗೂ ವಿವಾಹವಾಗಿ, ಎರಡು ಹೆಸರು ಒಟ್ಟಿಗಾಗಿ ನೀನು ಮೀರಾ ಶ್ರೀನಿವಾಸ ಆಗ್ತೀಯ.'

ರಸ್ತೆಯ ಕಡೆ ನೋಡುತ್ತಿದ್ದ ಅವಳು ಅವನ ಕಡೆಗೆ ಮುಖ ತಿರುಗಿಸಿ ಹೇಳಿದಳು: 'ನನಗೆ ಒಂದು ಅನಿಸುತ್ತೆ, ಹೇಳ್ಲಾ?'

'ಹುಕುಂ ಮಾಡು.'

'ರಿಜಿಸ್ಟರ್ ಮದುವೆಗೆ ನನಗೆ ಇಷ್ಟವಾಗುಲ್ಲ. ಶಾಸ್ತ್ರದ ರೀತಿ ಮಾಡ್ಕಬೇಕು. ಅಗ್ನಿ ಉರೀತಿರಬೇಕು. ರಾಗವಾಗಿ ಮಂತ್ರವನ್ನ ಹೇಳ್ತಿರಬೇಕು. ಎಲ್ಲರೂ ಮಂತ್ರಾಕ್ಷತೆ ಸೂಸ್‌ತಾ ಇರುವಾಗ ಮಾಂಗಲ್ಯಧಾರಣೆಯಾಗಬೇಕು. ಆಮೇಲೆ ನಾವಿಬ್ಬರೂ ಜೋತೇಲಿ ಕೂತು, ಎತ್ತರವಾಗಿ ಅಗ್ನಿ ಉರಿಯೂ ಹಾಗೆ ತುಂಬ ತುಪ್ಪ ಹಾಕಿ ಹವನ ಮಾಡಬೇಕು.'

ಅವನಿಗೆ ತನ್ನ ಮದುವೆಯು ನೆನಪಾಯಿತು. ಬೆಂಗಳೂರಿನಿಂದ ಬಂದಿದ್ದ ತನ್ನ ಕಡೆಯ ಪುರೋಹಿತರು ಮತ್ತು ಮಂಡ್ಯದ ಪುರೋಹಿತರು ಕೂಡಿ ಹಾಗೆಯೇ ಮಾಡಿಸಿದ್ದರು. ನೆನಪಿನಿಂದಲೇ ಅಂಥ ವಿಧಿಯ ಬಗೆಗೆ ಅವನಲ್ಲಿ ಆಕರ್ಷಣೆ ಹುಟ್ಟಿತು. ಕೇಳಿದ: 'ಇಂಥ ಮದುವೇನ ನೀನು ನೋಡಿದೀಯ?'

ಅವಳ ಮನಸ್ಸು ಖಿನ್ನವಾಯಿತು. ಮ್ಲಾನಮುಖದಿಂದ ಎಂದಳು: 'ಎಲ್ಲಿ ನೋಡಬೇಕು! ಸಿನಿಮಾಗಳಲ್ಲಿ ನೋಡಿದೀನಿ. ಹವನವನ್ನಂತೂ ಸತ್ಯಮ್‌ನೋರು ಮಾಡೂದ ನೋಡಿದೀನಿ.'

'ನೀನು ಅದಕ್ಕೆ ತುಪ್ಪ ಹಾಕಿದೀಯ?'

"ಹಾಕಬೇಕು ಅಂತ ಆಶೆಯಾಗಿ ಒಂದು ದಿನ ಅವರನ್ನು ಕೇಳಿದೆ. ಹೇಳಿದರು: 'ಸುಮ್ಸುಮ್ನೆ ಹಾಕಬಾರದು. ನಿಜವಾಗಿ ಶ್ರದ್ಧೆ ಇದ್ರೆ ಹೇಳು. ನಿನಗೆ ಯಜ್ಞೋಪವೀತ ಧಾರಣೆ ಮಾಡುಸ್ತೀನಿ. ಆಮೇಲೆ ಅಧಿಕಾರಿಯಾಗ್ತೀಯ. ಆಮೇಲೆ ನೀನು ದಿನಾ ಮಾಡಭೌದು.' 'ದಿನಾ ಹವನ ಮಾಡದೆ ಇದ್‌ರೆ ಯಜ್ಞೋಪವೀತ ಹಾಕ್ಕೋಬಾರದೆ?'– ಅಂತ ನಾನು ಕೇಳಿದೆ. 'ಅನುಕೂಲವಿಲ್ಲದ ದಿನ ಮಾಡದೆ ಬಿಟ್ಟರೂ ಪರವಾಗಿಲ್ಲ. ಆದರೆ ಯಜ್ಞೋಪವೀತಾನ ಕೊರಳಿನಿಂದ ತೆಗೀದೇ, ಶ್ರದ್ಧೆಯಿಂದ ಇಟ್ಟುಕೊಂಡಿರಬೇಕು. ದಿನಾ ಗಾಯಿತ್ರಿನಾದ್ರೂ ಮಾಡಬೇಕು' ಅಂದರು."

'ಅಷ್ಟು ಆಶೆ ಇದ್ದೋಳು ನೀನು ಯಾಕೆ ಹಾಕಿಸ್ಕಳ್ಳಿಲ್ಲ?'

ಅವಳು ಸುಮ್ಮನೆ ನಿಟ್ಟುಸಿರಿಟ್ಟಳು. ಉಸಿರಿನ ಶಬ್ದವು, ನಡೆಯುತ್ತಿದ್ದ ಕಾರಿನ ಸದ್ದಿನಲ್ಲೂ ಅವನಿಗೆ ಕೇಳಿಸಿತು.

'ಯಾಕೆ ಹಾಕಿಸ್ಕಳ್ಳಿಲ್ಲ, ಮೀರಾ?' – ಎಂದು ಅವಳ ಕೊರಳನ್ನು ತನ್ನ ತೋಳಿನಿಂದ ಬಳಸಿ ತನ್ನ ಕಡೆಗೆ ತಿರುಗಿಸಿ ಕೇಳಿದ.

'ಎರಡು ದಿನ ಯೋಚನೆ ಮಾಡಿದೆ. ನಾನೊಬ್ಬಳು ಹೀಗೆ ಜನಿವಾರ ಹಾಕ್ಕಂಡಿದೀನಿ ಅಂತ ತಿಳಿದರೆ ನಮ್ಮ ಜಾತಿಯೋರು ಏನಂತಾರೆ? ಕಾಲೇಜು ಓದ್‌ತಿರುಕ್ಕೆ ಮುಂದೆ ಗಂಡು ಸಿಕ್ಕುಲ್ಲ ಅನ್ನೂ ಭಯವಿತ್ತು. ಇಂಥದೆಲ್ಲ

ಮಾಡ್ತಾಳೆ ಅಂತ ಗೊತ್ತಾದರೆ ಯಾರು ತಂದ್‌ಕೊಡ್ತಿದ್ರು? ಈಗ ನೀವು ಹೇಳಿ. ನಿಮಗೆ ನಂಬಿಕೆ ಇದ್ದರೆ ನೀವೂ ಜನಿವಾರ ಹಾಕಿಸ್ಕಳಿ. ಇಬ್ಬರೂ ದಿನಾ ಹವನ ಮಾಡಾಣ.'

'ಅಂದರೆ ನಾವಿಬ್ಬರೂ ಬ್ರಾಹ್ಮಣರಾಗೋಣ ಅಂತಲೆ?'

'ಹೂಂ.'

'ನಮ್ಮನ್ನ ಬ್ರಾಹ್ಮಣರು ಅಂತ ಸತ್ಯ ಒಬ್ಬಳು ಒಪ್ತಾಳೆ. ಮತ್ತೆ ಯಾರೂ ಒಪ್ಪಲ್ಲ.'

'ಒಪ್ಪದಿದ್ದರೆ ಬ್ಯಾಡ. ನಮ್ಮ ನಂಬಿಕೆ ನಮಗೆ.'

ಶ್ರೀನಿವಾಸ ಯೋಚಿಸಿದ. ಇವರಲ್ಲಿ ಅವನಿಗೆ ಶ್ರದ್ಧೆ ಇಲ್ಲ. ಜಾತಿ ಮತಗಳಲ್ಲಿ ನಂಬಿಕೆ ಇಟ್ಟುಕೊಳ್ಳಬಾರದು ನಿಜ. ಎಲ್ಲರೂ ಹೀಗೆ ಜನಿವಾರ ಧರಿಸಿಕೊಳ್ಳುವ ವಿಚಾರ ಮಾತ್ರ ಅವನಿಗೆ ನಗು ಬರಿಸಿತು. ಆದರೆ ಮುಖ್ಯ ಪ್ರಶ್ನೆ ಮನಸ್ಸಿಗೆ ಬಂದು ಹೇಳಿದ: 'ಮದುವೇಲಿ ಹವನ ಮಾಡುಕ್ಕೆ ಜನಿವಾರಾನೇ ಹಾಕ್ಕೋಬೇಕಾಗಿಲ್ಲ. ಈಗ ನಮ್ಮೋರೂ ಅಂಥ ಮದುವೆ ಮಾಡುಸ್ತಿದಾರೆ. ಆದರೆ ನಾವು ಹಾಗೆ ಮಾಡ್ಕಳುಕ್ಕೆ ಆಗುತ್ತೆಯೋ ಅಂತ ಅನುಮಾನ. ನನ್ನ ಕೇಳಿದರೆ ರಿಜಿಸ್ಟರ್ ಮದುವೆ ಅನುಕೂಲ.'

'ಅಗ್ನಿಸಾಕ್ಷಿಯ ಮದುವೆಯೇ ಬೇಕು ಅಂತ ನನ್ನ ಆಶೆ' – ಎಂದು ಅವಳು ಮುಖವೆತ್ತಿ ಅವನನ್ನು ನೋಡಿ ಹೇಳಿದಳು.

'ಅಷ್ಟರಲ್ಲಿ ಕಾರು ಇಪ್ಪತ್ತು ಮೈಲಿಗೂ ದೂರ ಬಂದಿತ್ತು. ಎಲ್ಲಿಗೆ ಹೋಗ್ತಿದೀವಿ?' – ಎಂದು ಅವಳು ಕೇಳಿದಳು.

'ನಂದಿಗೆ ಹೋಗಾಣ. ನೀನು ನೋಡಿಲ್ಲ ಅಲ್ಲವೆ?'

ಹನ್ನೊಂದೂವರೆಯ ಹೊತ್ತಿಗೆ ಕಾರು ಬೆಟ್ಟದ ಸುತ್ತುರಸ್ತೆಯನ್ನು ಏರಲು ಶುರುಮಾಡಿತು. ಮೀರಾಳಿಗೆ ಅದೊಂದು ಹೊಸ ಅನುಭವ. ಒಂದು ಸಲ ಚಾಮುಂಡಿ ಬೆಟ್ಟಕ್ಕೆ ಹೋದದ್ದನ್ನು ಬಿಟ್ಟರೆ ಅವಳು ಮತ್ತೆ ಯಾವ ಬೆಟ್ಟವನ್ನೂ ಹತ್ತಿರಲಿಲ್ಲ. ಈಗ ಕಾರು ಸುತ್ತುದಾರಿಯಲ್ಲಿ ತಿರುಗುವಾಗ ಅವಳ ಮೈ ಅವನಿಗೆ ಒರಗುತ್ತದೆ. ಮನಸ್ಸಿನಲ್ಲಿ ತರಂಗಗಳೆದ್ದಂತೆ ಆಗುತ್ತದೆ. ಏರುತ್ತ ಏರುತ್ತ ಕೆಳಭಾಗದಲ್ಲಿ ಕಾಣುವ ಬಯಲನ್ನು ನೋಡುವ ಆಕರ್ಷಣೆ. ಮಧ್ಯದಲ್ಲಿ ಒಂದು ಸಲ ತಿರುಗಿ ಅವನ ಮುಖವನ್ನು ನೋಡುವ ಆಶೆ.

ಕಾರು ಬಂದದ್ದನ್ನು ಕಂಡು ಪ್ರವಾಸಿಮಂದಿರದ ಜವಾನ ಓಡಿಬಂದ. ಈ ಮಳೆಗಾಲದ ಚಳಿಯಲ್ಲಿ ಬೆಟ್ಟದ ಮೇಲಕ್ಕೆ ಬರುವ ಪ್ರವಾಸಿಗರೇ ಇಲ್ಲ. ಅಂಥವರಲ್ಲಿ ಕಾರು ಬಂದಿದೆ. ಇವರು ನಿಲ್ಲಿಸಿ ಬಾಗಿಲು ತೆಗೆದ ಮೇಲೆ,

'ಸಾಮಾನಿದೆಯೆ ಸಾರ್?' ಎಂದು ಜವಾನ ಕೇಳಿದ. ಶ್ರೀನಿವಾಸನಿಗೆ ಆಶ್ಚರ್ಯ. ಆದರೆ ತಕ್ಷಣ ಎಂದ: 'ಸಾಮಾನೇನಿಲ್ಲ. ನಾವು ಸಾಯಂಕಾಲದ ತನಕ ಇರ್ತೀವಿ. ವಿಶ್ರಾಂತಿಗೆ ಒಂದು ಒಳ್ಳೆ ರೂಮು ಕೊಡು.'

ಪೂರ್ವದಿಕ್ಕಿನ ಪ್ರಪಾತದ ಕಡೆಗೆ ಕಿಟಕಿ ಇರುವ ಒಂದು ಕೋಣೆಯ ಬೀಗ ತೆಗೆದು ಕೊಟ್ಟ ಜವಾನ, ಅಲ್ಲಿ ಇಳಿದವರ ಲೆಕ್ಕದ ರಿಜಿಸ್ಟರ್ ತಂದ. 'ಶ್ರೀ ಮತ್ತು ಶ್ರೀಮತಿ ಟಿ. ಎಂ. ಶ್ರೀನಿವಾಸ. ಬಸ್ ಮಾಲೀಕರು, ತುಮಕೂರು' –ಎಂದು ವಿಳಾಸ ಬರೆದು ಶ್ರೀನಿವಾಸ, ತಾವು ಬಂದ ವೇಳೆಯನ್ನು ಹಾಕಿದ. ಜವಾನನೇ ಊಟ ತಂದು ಕೊಟ್ಟ. ಇಬ್ಬರೂ ಉದ್ಯಾನದಲ್ಲಿ ತಿರುಗಿದರು. ಮೀರಾಳಿಗೆ ಅದು ಲಾಲ್‌ಬಾಗಿಗಿಂತ ಚನ್ನಾಗಿ ಕಾಣಿಸಿತು. ಆ ಎತ್ತರ, ಅಲ್ಲದೆ ಬೆಟ್ಟದ ಉಬ್ಬು ತಗ್ಗುಗಳಲ್ಲಿ ಕಾಡಿನಂತೆ ಕಾಣುವ ಮರಗಿಡಗಳ ಸಂದಿನಲ್ಲಿ ಅವರು ಕೈ ಕೈ ಹಿಡಿದು ತಿರುಗಿದರು. ಶ್ರೀನಿವಾಸ ಎಂದ: 'ಮದುವೆಯಾದ ಮೇಲೆ ಇಬ್ಬರೂ ಕಾಶ್ಮೀರಕ್ಕೆ ಹೋಗಬೇಕು. ಎಷ್ಟು ಚನ್ನಾಗಿರುತ್ತೆ ಗೊತ್ತಾ?'

'ನೀವು ನೋಡಿದೀರಾ?'

'ಸಿನಿಮಾದಲ್ಲಿ.'

'ಅಷ್ಟೇನಾ? ಹಾಗೆ ನಾನೂ ನೋಡಿದೀನಿ.'

'ನನ್ನ ವೈಜಯಂತಿಮಾಲಾ ಜೊತೆಗಿಲ್ಲದೆ ಒಬ್ಬನೇ ಹ್ಯಾಗೆ ನೋಡಲಿ?' –ಎಂದು ಅವಳ ಮುಖವನ್ನು ತನ್ನ ಕೈಗಳಲ್ಲಿ ಹಿಡಿದು ಕೇಳಿದಾಗ ಅವಳು ಮೂಕಳಾಗಿದ್ದಳು. 'ತಿರುಗಾಡಿ ನಿನಗೆ ಕಾಲು ನೋವು ಬಂದಿದೆ. ರೂಮಿಗೆ ಹೋಗಾಣ ಬಾ' –ಎಂದು ಕೈ ಹಿಡಿದು ಮರಗಳ ಗುಂಪಿನಿಂದ ಮುಂದೆ ನಡೆಸಿದ.

ರೂಮಿಗೆ ಬರುವ ಹೊತ್ತಿಗೆ ಅವಳ ಉಸಿರು ಕ್ರಮ ತಪ್ಪಿ ಆಡುತ್ತಿತ್ತು. ಮುಖದಲ್ಲಿ ಬೆವರಿನ ತುಂತುರು ಕಾಣಿಸಿಕೊಂಡು, ಈಗಾಗಲೇ ಮಾಸಿಹೋಗಿದ್ದ ಪೌಡರು ಕಲಸಿದಂತೆ ಆಗಿತ್ತು. ಹೆರಳಿನ ಮೇಲೆ ಮುಡಿದಿದ್ದ ಹೂವು ಬಳಲುತ್ತಿತ್ತು. ಇಡೀ ನಂದಿಬೆಟ್ಟದಲ್ಲಿ ಜನವೇ ಇಲ್ಲದಷ್ಟು ಏಕಾಂತವಾಗಿತ್ತು ಪ್ರವಾಸಿ ಮಂದಿರ. ಇಬ್ಬರೂ ಒಳಗೆ ಬಂದ ಮೇಲೆ ಶ್ರೀನಿವಾಸ ಬಾಗಿಲು ಮುಚ್ಚಿ ಬೋಲ್ಟು ಹಾಕಿದ.

'ಯಾಕೆ?' –ಅವಳು ಕೇಳಿದಳು. ಉಸುರಿನ ಕ್ರಮ ತಪ್ಪಿ, ಈ ಎರಡಕ್ಷರದ ಪ್ರಶ್ನೆಯನ್ನೂ ಹಿಡಿದು ಹಿಡಿದು ಉಚ್ಚರಿಸಿದಳು.

ಅವನು ಮಾತನಾಡಲಿಲ್ಲ. ಸುಮ್ಮನೆ ಅವಳ ಭುಜಗಳನ್ನು ಹಿಡಿದು ಕರೆದೊಯ್ದು ಕಿಟಕಿಯನ್ನು ಮುಚ್ಚಿದ.

‘ನಂಗೆ ಹೆದರಿಕೆಯಾಗುತ್ತೆ’ – ಆವಳು ಉಸುರಿದಳು.

‘ಹೆದರಿಕೊಬ್ಯಾಡ. ಪ್ಲೀಸ್ ಮೀರಾ. ನೋಡ್ದ್ಯಾ, ಪ್ಲೀಸ್’ – ಅವನು ಬೇಡಿಕೊಂಡ.

# ಹದಿನಾರು

## ೧

ಮಗ ಎರಡು ಮೂರು ಸಲ ಊರಿಗೆ ಹೋಗಿ ಆ ಹುಡುಗಿ ವಾಸವಾಗಿರುವ ತೋಟದ ಹೊಳೆಬಾಗಿಲಿನಲ್ಲಿ ಸಂಜೆಯತನಕ ಕಾರು ನಿಲ್ಲಿಸಿದ್ದು, ಸಂಜೆಯಾದ ಮೇಲೆ ಮನೆಗೂ ಹೋಗದೆ ನೇರವಾಗಿ ತುಮಕೂರಿಗೆ ಹೋಗುತ್ತಿದ್ದ ಸಂಗತಿ ಮಂತ್ರಿಗಳಿಗೆ ಕ್ರಮವಾಗಿ ತಿಳಿಯುತ್ತಿತ್ತು. ಇದು ಗಂಡ ಹೆಂಡಿರ ಜಗಳ ಇದ್ದ ಹಂಗೆ. ಅವರವರೇ ರಾಜಿಯಾಗಬೇಕು. ಮಧ್ಯ ನಾವು ಶಾನೆ ಹೋಗಾಕಾದು. ಲವ್ ಅನ್ನಾದು ಗೋಂದು ಇದ್ದ ಹಂಗೆ. ಎರಡನೇ ಸಲ ತಗುಲ್‌ಕಣ್ತು, ಮತ್ತೆ ಬಿಡುಲ್ಲ. ಸಂಜೇಗಂಟ ಅವಳು ಅವ್ನನ್ನ ಯಾಕೆ ಒಬ್ಬೊಬ್ಬುನ್ನೇ ಕುಂಡ್ರಿಸ್ಕಂಡಿರ್ತಾಳೆ? – ಎಂದು ತಾಳ್ಮೆ ಸಮಾಧಾನಗಳಿಂದ ಸುಮ್ಮನಿದ್ದರು. ಆತುರ ತೋರಿಸಿದ ಹೆಂಡತಿಗೇ ಸಮಾಧಾನ ಹೇಳಿದರು. ಊರಿನಲ್ಲಿ ಕಾತರರಾಗಿದ್ದ ದೊಡ್ಡ ಯಜಮಾನರಿಗೂ ತಿಳಿವಳಿಕೆ ಹೇಳಿ, ಅವನ ಮತ್ತು ಅವಳ ತೋಟದ ಮೇಲೆ ಕಣ್ಣಿಡಿರಬೇಕೆಂದು ಸೂಚನೆ ಕೊಟ್ಟಿದ್ದರು.

ಇನ್ನು ನಾಲ್ಕು ತಿಂಗಳಿಗೆ ಮಹಾಚುನಾವಣೆ ನಡೆಯುತ್ತದೆ. ತಮ್ಮ ಭವಿಷ್ಯದ ಬಗೆಗೆ ಅವರು ಹೆಚ್ಚು ಆಶಾವಾದಿಗಳಾಗಿಲ್ಲ: ಎಂದರೆ ಈ ಸಲ ಚುನಾವಣೆಗೆ ನಿಲ್ಲಬೇಕೆಂದು, ಅವರ ಮತಸ್ಥರೇ ಆದ ಬೂದಿಹಳ್ಳಿ ತಿಮ್ಮೇಗೌಡರು ಉಮೇದಿನಿಂದ ಅವ್ರಂತೆ. ಓಟು ಕೊಡುವ ಜನದ ತಿಕಲು ಹೇಳುಕ್ಕಾಗುಲ್ಲ. ಅಕಸ್ಮಾತ್ ತಮಗೆ ಎಪ್ಸೆಟ್ಟಾದರೆ! ಆದರೂ ಈಗಲೇ ಮಂತ್ರಿಯಾಗಿರುವ ತಾವು ಆರಿಸಿ ಬರುವುದು ಹೆಚ್ಚು ಕಷ್ಟವಲ್ಲ. ಈಗಿರುವ ಬೆಂಬಲವೇ ಮುಂದುವರಿದರೆ ಉಪ ಮಂತ್ರಿಯಾಗುವುದೂ ಕಷ್ಟವಿಲ್ಲ. ಆದರೆ ಈ ಐದು ವರ್ಷದ ಅನುಭವ ಮತ್ತು ಸೇವೆಯನ್ನು ಗಮನಿಸಿ ಸಂಪುಟ-ಸಚಿವರನ್ನಾಗಿ ಮಾಡುತ್ತಾರೆಯೆ? ಮುಂದಿನ ಸಲ ಯಾರು ಚೀಫ್ ಆಗ್ತಾರೋ! ಈಗಿರೋರನ್ನ ಪಲ್ಟಿ ಹೊಡೆಸಿ ತಾವು ಆಗಬೇಕು ಅಂತ ಪಾರ್ಟಿ ಅಧ್ಯಕ್ಷರು ಕೆಲಸ ಮಾಡುತ್ತಿದ್ದಾರೆ. ನಂಗೂ ಅವರಿಗೂ ಚನ್ನಾಗೇನೋ ಇದೆ. ಸೊಸೆ ಸಾಯದಿದ್ದರೆ, ಅಥವಾ ಹಾಸನದ ಪುಟ್ಟೇಗೌಡರ ಜೊತೆ ಸಂಬಂಧ ಬೆಳೆದಿದ್ದರೆ ಮಾಡುತ್ತಿದ್ದರೇನೋ! ಆದರೆ ಮಗನ ಹುಚ್ಚು ತಮಗೆ ವಿರುದ್ಧವಾಗಿದೆ. ಹ್ಯಾಗಾದರೂ ಸರಿ. ಅವನು ಮತ್ತೆ ಮದುವೆಯಾಗಿ ತಮ್ಮ ವಂಶ ಬೆಳೆಯಬೇಕು. ಕುಡಿಯುವುದು ಸಿನಿಮಾ ನೋಡುವುದು ಬಿಟ್ಟು

ವ್ಯವಹಾರದಲ್ಲಿ ನಿಗ ವಹಿಸುವ ಹಾಗಾಗಬೇಕು. ಚಿಕ್ಕೋರ ಖುಷಿಗಾಗಿ ನಾನೂ ಎಷ್ಟು ತ್ಯಾಗ ಮಾಡ್ತಿದೀನಿ! – ಎಂಬ ಉನ್ನತಭಾವವೂ ಒಂದೊಂದು ಸಲ ಬರುತ್ತಿತ್ತು.

ಆದರೆ ಅವನ ಕಾಗದ ನೋಡಿ ಅವರು ಕಿಡಿಕಿಡಿಯಾದರು. ರೂಪ, ಗುಣ, ವಿದ್ಯೆ, ಎಲ್ಲದರಲ್ಲೂ ತಕ್ಕವಳಾದ, ನಿಮ್ಮ ಸ್ನೇಹಿತರೂ ಅಸೆಂಬ್ಲಿ ಸದಸ್ಯರೂ ಆದ ಬೆಟ್ಟಯ್ಯನವರ ಮಗಳನ್ನು ಮದುವೆಯಾಗುವುದಾಗಿ ನಿಶ್ಚಯಿಸಿರುವುದಾಗಿಯೂ ಈ ನಿಶ್ಚಯ ಯಾವ ಕಾರಣಕ್ಕೂ ಬದಲಾಗುವುದಿಲ್ಲವೆಂದೂ ಬರೆದು, ಮಂಡ್ಯದಲ್ಲಿ ಅದಂತೆ ಈ ಮದುವೆಯನ್ನೂ ಮಂತ್ರಸಹಿತ ಮಾಡಿಸಿಕೊಡಬೇಕೆಂದು ಮಗನು ತಂದೆಯನ್ನು ಸಾಷ್ಟಾಂಗ ನಮಸ್ಕಾರಪೂರ್ವಕ ಕೇಳಿಕೊಂಡಿದ್ದ. ಎಲ್ಲಿಂದ ಎಲ್ಲಿಗ್ ಮುಟ್ಟೈದೆ ಕನೆಕ್ಷನ್ನು, ಎಂದುಕೊಂಡರು. ಪಾಳೇಗಾರರ ವಂಶದವರಾಗಿ ಜನನಾಯಕರಾದ ತಾವು ಮಾದಿಗನ ಮಗಳನ್ನು ತರುವ ಸಲಹೆಯೇ ಅವರ ಮೈಮೇಲೆ ಮುಳ್ಳುಗಳನ್ನು ಎಬ್ಬಿಸಿತು. ಎರಡನೆಯದಾಗಿ, ಹೀಗೆ ಮಾಡಿದರೆ ಜಾತ್ಯಸ್ಥರು ಸುಮ್ಮನಿರ್ತಾರಾ? ಹದ್ದಿನ ಹಂಗೆ ಕಾಯ್ಕಂಡಿದಾನೆ ಬೂದಿಹಳ್ಳಿ ತಿಮ್ಮೇಗೌಡ. ನಮ್ಮ ಜಾತಿ ಓಟೆಲ್ಲ ಬಾಚಿಕಂಡ್ ಬಿಡ್ತಾನೆ. ನನ್ನ ಬೀಜಕ್ಕೇ ಹುಟ್ಟಿ ನಂಗೇ ಹಿಂಗ್ ಮಾಡಾಕ್ ಹ್ವಂಟವ್ ನಲ ಈ ನನ್ ಮಗ, ಎಂದು ತಮ್ಮಲ್ಲಿಯೇ ರೇಗಿಬಿಟ್ಟರು. ಆದರೆ ಉಪಾಯವಾಗಿ ಬಿಡಿಸಿಕೋಬೇಕು, ದಬಾಯ್ಸಿ ಎಳೆದರೆ ನಮ್ಮ ಸೆರಗೇ ಹರಿಯುತ್ತೆ ಎಂಬ ತಿಳಿವಳಿಕೆಯಿಂದ ಸುಮ್ಮನಾದರು. ವಿಷಯವನ್ನು ಹೆಂಡತಿಗೂ ಹೇಳಲಿಲ್ಲ. ಹೇಳಿ ಅವಳು ಅತ್ತು ಗೋಳು ಗುಟ್ಟಿ ತಮ್ಮ ತಲೆ ಕೆಟ್ಟು ಕೆಲಸ ಕೆಡಬಾರದು.

ಊರಿಗೆ ಹೋಗಿ ಬೆಟ್ಟಯ್ಯನವರನ್ನು ಕರೆತರುವಂತೆ ಕಾರಿನೊಡನೆ ಡ್ರೈವರ್‌ನನ್ನು ಕಳಿಸಿದರು. ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಹಿಂತಿರುಗಿದ ಡ್ರೈವರ್, ಅವರು ಬಂದಿದ್ದಾರೆಂದು ಮನೆಯಿಂದ ಫೋನು ಮಾಡಿದ. ಶಿಪೋರ್ಲೆಯನ್ನು ತಾವೇ ನಡೆಸಿಕೊಂಡು ಅವರು ವಿಧಾನಸೌಧದಿಂದ ಮನೆಗೆ ಬಂದರು. ಒಳಗೆ ಕೂತು ಮಾತನಾಡಿದರೆ ವಿಷಯ ತಮ್ಮ ಹೆಂಡತಿಗೆ ತಿಳಿಯುತ್ತದೆಂದು ಕಾಂಪೌಂಡಿನ ದೊಡ್ಡ ಮಾವಿನ ಮರದ ಕೆಳಗೆ ಎರಡು ಬೆತ್ತದ ಕುರ್ಚಿ ಹಾಕಿಸಿಕೊಂಡು ಕುಳಿತು, ಅವರಿಗೆ ಉಪಾಹಾರ ಕಾಫಿ ಕೊಟ್ಟು, ತಾವೂ ಕಾಫಿ ಕುಡಿಯುತ್ತಾ ಲೋಕಾಭಿರಾಮ ಮುಗಿಸಿ ಮಾತನಾಡಿದರು: 'ನಮ್ಮ ಹುಡುಗ ಹಿಂಗಂತ ಕಾಗದ ಬರೆದಿದಾನೆ. ಈಗಿನೋರು ಒಂದೊಂದಲ್ಲ ತಲೆನೋವು ಮಾಡಾದು. ನಾವು ನೀವು ಒಬ್ಬ ತಾಯಿ ಮಕ್ಕಳಿದ್ದ ಹಂಗೆ ಇದೀವಿ. ಜಾತಿ ಬ್ಯಾರೆ ಆಗಿರಭೌದು. ಹೃದಯ ಅನ್ನೋದು ಒಂದೇ. ಹೌದೋ ಅಲ್ವೋ ನಾನ್

ಹೇಳಾದು? ಹೂಂ. ಆದರೆ ಹಿಂದಿನಿಂದ ನಡೀದೇ ಇರೂದ ಮಾಡಿದರೆ ಇತ್ಲಾಗೆ ನಮಗೂ ಕೆಟ್ಟದಾಗಭೌದು, ಅತ್ಲಾಗೆ ನಿಮಗೂ ಆಗಭೌದು. ಏನಂತೀರ?'

'ಓ. ನಂಗೂ ಶಾನೆ ಇಷ್ಟವಿಲ್ಲ. ಆದರೆ ಆಶ್ರಮದಾಗೆ ನೀವೇ ನೋಡಿದ್ರಲ್ಲ. ಲಕ್ಷ್ಮಿ, ಇಶಯ....' –ಎಂಬ ಉತ್ತರದ ಧಾಟಿಯನ್ನು ಗಮನಿಸಿಯೇ, ಈ ಸೂಳೇಮಗ್ನೂ ಒಳಗೇ ಬತ್ತಿ ಮಡುಗ್ತಾ ಅವ್ನೆ ಎಂದು ಅರ್ಥ ಮಾಡಿಕೊಂಡು ಹೇಳಿದರು: 'ಅದೆಲ್ಲ ಆಶ್ರಮದ ಮಾತು ಬಿಡಿ. ಅಲ್ಲಿ ಏನು ಮಾಡಿದ್ರೂ ನೈನವೇ. ನವಿಲು ಕುಣೀತದೆ ಅಂತ ಕೆಂಬೂತ ಪುಕ್ಕ ತರ್‌ಕಂಡ್ರೆ ಆಯ್ತದ? ನಮ್ಮ ಹಳ್ಳೀ ವಿಷಯ ಗೊತ್ತಿಲ. ನಿಮ್ಮ ಜನವೇ ನಿಮ್ಮುನ್ನ ಒಪ್ಪಲ್ಲ. ನೀವು ಕೀಳು, ನಾವು ಮೇಲು. ಅಂಥದು ನಾನು ಒಪ್ಪಲ್ಲ. ಆದರೆ ನಿಮ್ಮ ಜಾತಿ ಘನತೆ ನಿಮಗೆ ಇದ್ದೇ ಇದೆ. ಬ್ಯಾರೆ ಜಾತಿಗೆ ಹೆಣ್ಣು ಕೊಡಾದು ಅಂದ್ರೆ ನಿಮ್ಮ ಘನತೆಯೂ ಉಳೀಬೇಕಲ. ನಿಮಗೆ ಇದೆಲ್ಲ ಗೊತ್ತದೆ. ಆದರೆ ಹುಡುಗರಿಂಗೆ ಹ್ಯಂಗೆ ಬುದ್ಧಿ ಕಲ್ಸಾದು?'

ಸಂಜೆಯತನಕ ಮಾತನಾಡಿದರೂ ಅವರಿಗೆ ಸಂದು ಸಿಕ್ಕಲಿಲ್ಲ. ಒಟ್ಟಿನಲ್ಲಿ ಈ ಮಾದಿಗನಿಗೆ ವಿಷಯ ಗೊತ್ತಿದೆ. ಅಥವಾ ಇವನೇ ಒಳಗೆ ಸೇರಿ ಏನೋ ಕೆಲಸ ಮಾಡಿದಾನೆ ಎಂಬ ಅನುಮಾನ ಬಂತು. ಆದರೆ ಸಿಟ್ಟು ಮಾಡಿ ಪ್ರಯೋಜನವಿಲ್ಲವೆಂಬ ಎಚ್ಚರ ಮಾತ್ರ ಮರೆಯಲಾಗಲಿಲ್ಲ. 'ಯೋಚನೆಮಾಡಿ. ಮದುವೆ ಅಂದ್ರೆ ಸುಮ್‌ಸುಮ್ನೆ ಮಾತಾ? ನಾವು ನಮ್ಮ ಮನೆದೇವರ ಕೇಳಬೇಕು. ನೀವು ನಿಮ್ಮ ಮನೆದೇವರ ಕೇಳಲೇ ಬೇಕಲ್ಲ. ಈ ಮಳೆಗಾಲದಾಗೆ ದೇವರು ಹ್ವಂಡ್‌ಸಿ ಅದೆಲ್ಲ ಮಾಡೂಹಂಗೂ ಇಲ್ಲ. ಅಂದ್ರೆ ನಾನು ಇದ ಬಿಲ್‌ಕುಲ್ ಬ್ಯಾಡ ಅನ್ನೋ ಮನುಷ್ಯ ಅಲ್ಲ. ಆಗಬೇಕು ಅಂತ ದೈವ ನಿಯಾಮಕ ಇದ್ರೆ ಆಗ್ಲಿ. ಅದಕ್ಕೇ ದೇವರ ಕೇಳಬೇಕು ಅಂದದ್ದು.'

ಬೆಟ್ಟಯ್ಯನವರಿಗೆ ಇದು ಸ್ವಲ್ಪ ಮಟ್ಟಿಗೆ ತಟ್ಟಿತೆಂದು ಅವರಿಗೆ ಅರ್ಥವಾಯಿತು. ಬಲವಂತ ಮಾಡಿ ರಾತ್ರಿ ತಮ್ಮಲ್ಲಿಯೇ ಊಟ ಮಾಡಿಸಿ ಕಾರು ಕೊಟ್ಟು ಅವರನ್ನು ಎಂ.ಎಲ್.ಎ. ಹಾಸ್ಟೆಲಿಗೆ ಕಳಿಸುವಾಗ, 'ದೇವರು ಗೀವರು ಹ್ವಂಡ್‌ಸಾಕ್ಕೆ ಮಳೆಗಾಲ ಕಳೀಬೇಕು. ಅಲ್ಲೀತಂಕ ಇವನೂ ನಿಮ್ಮ ಹುಡುಗಿಯೂ ಮೀಟ್ ಆಗದ ಹಂಗೆ ಸ್ವಲ್ಪ ನೋಡ್ಕಳಿ' ಎಂದು ಅವರ ಕಿವಿಯ ಹತ್ತಿರಕ್ಕೆ ಬಾಯಿ ತಂದು ಹೇಳಿದರು: 'ಇವನು ಹೆಂಡತಿ ಸತ್ತೋನು. ರುಚಿ ಬಿದ್ದಮ್ಯಾಲೆ ಗ್ಯಾನ ಆ ಕಡೆಗೇ ಎಳೀತಿರ್ತದೆ. ಈ ಕಾಲದ ಹುಡುಗರು ನಿಮ್ಮ ಹಂಗೆ ನಮ್ಮ ಹಂಗೆ ಆಶ್ರಮದಾಗಿದ್ದು ಬ್ರಹ್ಮಚರ್ಯ ಕಲಿತಿರ್ತಾರಾ? ನಿಮ್ಮ ಹುಡುಗಿಗೂ ತಿಳಿವಳಿಕೆ ಇಲ್ಲ. ಲವ್ ಅಂತ ಇವರು ಏನಾದರೂ ಹೆಚ್ಚು ಕಮ್ಮಿ ಮಾಡ್ಕಂಡ್ರೆ ನಿಮ್ಮ

ಮರ್ಯಾದೆಗೂ ಕಮ್ಮಿ. ದೇವರ ಕೇಳೂತಂಕ ಇವರು ಒಬ್ಬರಿಗೊಬ್ರು ಮೀಟ್ ಮಾಡಾಕಾದು ಅಂತ ಸ್ವಲ್ಪ ಬಂದೂಬಸ್ತು ಮಾಡಿ.'

ಈ ಎಚ್ಚರ ಬೆಟ್ಟಯ್ಯನವರಿಗೂ ಹಿಡಿಯಿತು. ಅವರ ಮುಖದಲ್ಲಿ ಗಾಬರಿ ಕಾಣಿಸಿಕೊಂಡಿತು. ಅವರ ಕೈಕುಲುಕಿ ಭುಜ ತಟ್ಟಿ ಕಾರಿನಲ್ಲಿ ಕೂರಿಸುವಾಗ, 'ಊರಿಗೆ ಹೋಗೂವಾಗ ಫೋನ್ ಮಾಡಿ. ಕಾರು ಕಳುಸ್ತೀನಿ. ಸ್ವಂತಕ್ಕೆ ಹ್ಯಂಗೂ ಒಂದಿದೆ. ಸರ್ಕಾರ ಕೊಟ್ಟಿರೂದ ನಿಮ್ದು ಅಂತಲೇ ತಿಳ್ಕಳಿ' ಎಂದರು.

ಇದರಿಂದ ಸ್ವಲ್ಪ ಬೀಜ ಬಿದ್ದಿದೆ. ಆದರೆ ಪೂರ್ತಿ ಕೆಲಸವಾಗುಲ್ಲ. ಈ ಪೆದ್ದನ ಸ್ವಭಾವ ಒಳ್ಳೇದು. ಆದರೆ ಇವನ ಮಗ ತಲೆಹೋಕನಂತೆ. ಒಂದು ದಿನವೂ ಅವನನ್ನು ನೋಡಿಲ್ಲ. ಅವನು ಅಪ್ಪ ತಂಗಿಗೆ ಹೇಳಿ ಸಪೋರ್ಟ್ ಮಾಡಿರ ಬಹುದು. ಅವರನ್ನ ನಂಬಾಕಾಗುಲ್ಲ. ನಮ್ಮ ಚಿನ್ನಕ್ಕೆ ಹದಕೊಡದೆ ಆಚಾರೀನೇ ನೆಚ್‌ಕಾಬಾರ್ದು ಎಂದು ಯೋಚಿಸಿದ ಮಂತ್ರಿಗಳು, ಮೂರು ದಿನದ ನಂತರ ಹೊತ್ತಿಗೆ ಮುಂಚೆ ಎದ್ದು ತುಮಕೂರಿಗೆ ಹೊರಟರು. ಅವನ ಕೈಲಿ ಹೇಗೆ ಮಾತ ನಾಡಬೇಕೆಂಬ ಬಗೆಗೆ ಎಷ್ಟು ಯೋಚಿಸಿದರೂ ಹೊಳೆಯುತ್ತಿರಲಿಲ್ಲ. ಆದರೆ ಸಿಟ್ಟು ಮಾಡಿಕೊಂಡರೆ ಕೆಲಸ ಕೆಡುತ್ತದೆಂಬ ಜ್ಞಾನ ಮಾತ್ರ ಸದಾ ಜಾಗ್ರತವಾಗಿತ್ತು.

ಏಳು ಗಂಟೆಯ ಹೊತ್ತಿಗೆ ಆಫೀಸು ಕಟ್ಟಡದ ಹಿಂಭಾಗದಲ್ಲಿದ್ದ ಬಸ್ಸುಗಳು ಒಂದೊಂದಾಗಿ ಸ್ಟ್ಯಾಂಡಿಗೆ ಹೊರಡುತ್ತಿದ್ದುವು. ಇಷ್ಟು ಬೇಗ ಇವರು ಬಂದ ದ್ದನ್ನು ಕಂಡ ಡ್ರೈವರ್ ಮತ್ತು ಕಂಡಕ್ಟರುಗಳು, ತಮ್ಮನ್ನು ಪರೀಕ್ಷಿಸಲು ಬಂದಿದ್ದಾರೆಂದು ತಿಳಿದರು. ಐದು ನಿಮಿಷ ಒಬ್ಬೊಬ್ಬರನ್ನೂ ವಿಚಾರಿಸಿದ ನಂತರ ಮಗನ ಕೋಣೆಗೆ ಬಂದರು. ಅವನು ಎದ್ದು ಮುಖ ತೊಳೆದು ಬಟ್ಟೆ ಹಾಕಿ ಕೊಳ್ಳುತ್ತಿದ್ದ. ಈಗ ದಿನವೂ ಹೊತ್ತಿಗೆ ಮುಂಚೆ ಸ್ಟ್ಯಾಂಡಿಗೆ ಹೋಗಿ ಕಲೆಕ್ಷನ್ ನೋಡುತ್ತಾನೆಂದು ಅವರಿಗೆ ವರದಿ ಬಂದಿತ್ತು. ರೂಮು ಶುಭ್ರವಾಗಿತ್ತು. ಸಿಗರೇಟಿನ ವಾಸನೆ ಸಹ ಇರಲಿಲ್ಲ. ಎಲ್ಲಾ ತರಲ್ಲೂ ಸರಿಯಾಗ್ತಿದಾನೆ. ಇದೊಂದ ಸರಿಮಾಡಬೇಕು ಎಂದುಕೊಂಡರು. ಅಪ್ಪನನ್ನು ಕಂಡ ಅವನು ಚನ್ನಾಗಿ ಮಾತ ನಾಡಿಸಿದ.

'ಕಲೆಕ್ಷನ್ ಗುಮಾಸ್ತರು ನೋಡ್ಕಂತಾರೆ. ಕೂತ್ಕ. ಒಂದು ರವಷ್ಟು ಮಾತಾಡಬೇಕು' – ಎಂದು ಕೂರಿಸಿಕೊಂಡು, 'ಊರಿಗೆ ಯಾಕ್ ಬರಾದಿಲ್ಲ ನೀನು? ಹೆತ್ತ ಮಗುಂಗೆ ಒಂದಿಷ್ಟು ತುಪ್ಪಗಿಪ್ಪ ಬಿಡುಕ್ಕೂ ಅವಕಾಶ ಬ್ಯಾಡವೇ ನಿಮ್ಮಮ್ಮಂಗೆ?' ಎಂದರು. ಶ್ರೀನಿವಾಸನ ಮುಖದಲ್ಲಿ ಸಂತೋಷ ಕಾಣಿಸಿತು. ಅನಂತರ ಅವರು ಮುಖ್ಯವಾದ ಮಾತಿಗೆ ಬಂದರು: 'ನಿನ್ನ ಕಾಗದ ಬಂತು. ನಾನು ನೋಡಪ್ಪಾ, ಗಾಂಧೀ ಮನುಷ್ಯ. ಆಶ್ರಮಕ್ಕೆ ಹೋಗಿದ್ದೋನು.

ಹರಿಜನರನ್ನೇ ಮಾಡ್ಕ. ಆದ್ರೆ ಅಹಿಂಸೆ ಇರಬೇಕು. ಮೊದಲಿನಿಂದ ನಡೀದೇ ಇರೂದ ಮಾಡಾಕ್ ಹ್ವಾಗಿ, ನಿಮ್ಮಜ್ಜ ಕೊರಗು ಹತ್ತಿ ಸತ್ರೆ ನಿಮ್ಮಪ್ಪ ನೇಣು ಗೀಣು ಕಟ್ಕಂಡ್ರೆ ಯಾರಿಗೆ ತಟ್ಟಬೇಕು ಪಾಪ?'

ಶ್ರೀನಿವಾಸ ಒಂದು ಕ್ಷಣ ಮ್ಲಾನನಾದ. ಆದರೆ ತಕ್ಷಣ ಸಿಟ್ಟು ಬಂತು: 'ಸಾಯೋರು ಸಾಯ್ಲಿ. ಹಂಗಂತ ನಾವು ಇರೋರು ಎಷ್ಟು ದಿನ ಕಾಯ್ತಿರ ಬೇಕು?'

'ಏನಪ್ಪಾ ನೀನನ್ನಾದು?'

'ಅಂದ್ರೆ ಅವರಿಬ್ರೂ ಸಾಯೂಗಂಟ ನನ್ನ ಮದುವೆಯೇ ಮಾಡ್ಕಬ್ಯಾಡ ಅಂತೀರೇನು?'

'ನೀನು ಒಪ್ಪಿದ ಹುಡುಗೀನ ಅವರೂ ಒಪ್ಕಂಡಿದ್ರಲ್ಲಪ್ಪ. ನೀವು ಒಂದೊಂದು ಸಲೀಗೆ ಒಬ್ಬೊಬ್ಬ ಹುಡುಗೀನ ಮಾಡ್ಕಬೇಕು ಅಂದ್ರೆ ಯಾವ ನ್ಯಾಯ? ಲವ್ ಅಂದ್ರೆ ನಿಷ್ಠೆ ಬೇಕು: ರಾಷ್ಟ್ರನಿಷ್ಠೆ, ತತ್ವನಿಷ್ಠೆ ಇದ್ದ ಹಂಗೆ. ನೆಹರೂ ಏನು ಹೇಳ್ತಾರೆ? ನಮ್ಮ ವೆಂಕಟರಮಣ ಜೋಯಿಸರ ಮಗಳುನ್ನ ಯಾಕೆ ಬಿಟ್ಟುಬಿಟ್ಟೆ?'

'ನಾನೇನು ಬಿಡ್ಲಿಲ್ಲ' – ಎಂದ ಶ್ರೀನಿವಾಸ ಮಾತನ್ನು ಅಲ್ಲಿಗೇ ನಿಲ್ಲಿಸಿ, ಮತ್ತೆ ಎರಡು ನಿಮಿಷದ ನಂತರ ಹೇಳಿದ: 'ಅವಳು ಮದುವೆ ಮಾಡ್ಕಳುಲ್ಲ. ನಿಮಗೆ ಆ ವಿಷಯ ಬ್ಯಾಡ. ನಾನು ಬೆಟ್ಟಯ್ಯಾರ ಮಗುಳುನ್ನೇ ಮಾಡ್ಕಳೂದು. ಹೋದ ಸಲ ಸಬ್‌ರಿಜಿಸ್ಟ್ರಾರರ ಆಫೀಸಿಗೆ ಹೇಳಿ ತೊಂದ್ರೆ ಮಾಡಿದ್ರಲ, ಹಂಗೇ ನಾದ್ರೂ ಮಾಡುಕ್ ಪ್ರವರ್ಟ್ರೆ ನಾನು ಸುಮ್ನಿರುಲ್ಲ. ನಿಮಗೆ ಖುಷಿ ಇತ್ತೇ, ಬಂದು ಶಾಸ್ತ್ರ ಮಾಡ್ಸಿ. ಇಲ್ದೆ ಇದ್ರೆ ನಾನು ಮಾಡ್ಕಂತೀನಿ.'

ಏನು ಹೇಳುವುದಕ್ಕೂ ಅವರಿಗೆ ತಿಳಿಯಲಿಲ್ಲ. ಎದ್ದು ಹತ್ತಿರ ಹೋಗಿ ಕಪಾಳಕ್ಕೆ ಹೊಡೆಯಬೇಕೆನಿಸಿತು. ಆದರೆ ಸಿಟ್ಟಿನಿಂದ ಕೆಲಸ ಕೆಡುತ್ತದೆ ಅನ್ನುವ ನೆನಪಾಯಿತು. ಕೆಟ್ಟರೆ ಏನು ಕೆಡುತ್ತೆ? ಪಾಳೇಗಾರರ ವಂಶದೋನಾಗಿ, ನಾನು ಹುಟ್ಟಿಸಿದ ಮಗನಿಗೇ ಹೆದರಿ ನಡೀಬೇಕೇನು? – ಎಂಬ ಜೂರತ್ತೂ ಬಂತು. ಆದರೆ ಅವನದೂ ಅದೇ ರಕ್ತ. ಜೂರತ್ತು ಮಾಡಿದರೆ ಕೆಲಸ ಕೆಡುತ್ತೆ ಎಂದು ಮತ್ತೆ ನೆನಪು ಮಾಡಿಕೊಂಡು, 'ಯೋಚನೆ ಮಾಡಪ್ಪ. ನಾನು ಹೇಳಿಬಿಟ್ನಿಲ. ನಿನ್ನ ಸುಖವೇ ನನ್ನ ಸುಖ. ನಾನು ಜಾತಿಗೀತಿ ಯಾವುದಕ್ಕೂ ಕೇರ್ ಮಾಡುಲ್ಲ. ನೀನು ಜೋಯಿಸರ ಹುಡುಗಿ ಮಾಡ್ಕಳೂದು ನಮಗೆಲ್ಲ ಸಮ್ಮತ. ಅವಳನ್ನ ಯಾಕೆ ಬಿಟ್ಟೆ? ಈ ಮಾದಿಗಿತ್ತಿ ಮಾಡ್ಕಂಡ್ರೆ ನಮ್ಮ ವಂಶದ ಬೆಲೆ ಉಳಿಯುಲ್ಲ. ದುಡುಕಬ್ಯಾಡ. ರಿಜಿಸ್ಟರ್ ಗಿಜಿಸ್ಟರ್ ಆಗಬಾರ್ದು. ಹಿರೀಕರು ಎಮ್ಮಿಗೆ

ನಿಂತ್ಕಂಡೇ ಯಾವತ್ತೂ ಧಾರೆಯಾಗಬೇಕು' – ಎಂದು ಹೇಳಿ, ಬೆಂಗಳೂರಿಗೆ ಬರುವಂತೆ ಮತ್ತೆ ಅವನ ಹೆಗಲು ಮುಟ್ಟಿ ಕರೆದು ಹೊರಟರು. ಅವನು ಮಾತ್ರ ಸೆಟೆದುಕೊಂಡೇ ನಿಂತಿದ್ದ.

೨

ಮೋಹನದಾಸನಿಗೆಂದು ಪುಸ್ತಕ ಬರೆದು, ನಂತರ ಸತ್ಯ ಕೆಲವು ದಿನ ಏನೂ ಓದಲಿಲ್ಲ. ತೋಟ ಮತ್ತು ಹೊಲಗಳ ಕೆಲಸಕ್ಕೆ ನಿಂತಳು. ಈ ಸಲ ತಾನೇ ಉತ್ತು, ದಾರ ಹಿಡಿದು ಎಳೆದಂತೆ ನೇಗಿಲುಗೆರೆ ಬರುವ ಹಾಗೆ ಕೈ ತಿದ್ದಿಕೊಳ್ಳ ಬೇಕೆಂದು ನಿಂತಳು. ನಸುಕಿನಲ್ಲೇ ಎದ್ದು ಆರು ಹೂಡಿ, ಮಧ್ಯಾಹ್ನ ಹೊತ್ತು ನೆತ್ತಿಗೆ ಬರುವತನಕ ಗೇಯುವಳು. ಮನೆಗೆ ಬಂದು ಸ್ನಾನ ಮಾಡಿ ಅಡುಗೆಗೆ ಇಟ್ಟು ಹವನ ಮಾಡಿ ಊಟ ಮಾಡುವ ವೇಳೆಗೆ ಆಯಾಸವೆನಿಸುವುದು. ಸಂಜೆಯ ಆರಿಗೆ ಹೋಗುತ್ತಿರಲಿಲ್ಲ. ವೆಂಕಟೇಶನ ಆಳು ಕಟ್ಟುತ್ತಿದ್ದ. ಅವಳು ಆರು ಗೇಯುವುದು ಈಗ ಊರಿನವರಿಗೆ ಸಾಮಾನ್ಯ ಸಂಗತಿಯಾಗಿದೆ. ಅವಳು ನೇಗಿಲು ಹಿಡಿದು ಎತ್ತುಗಳನ್ನು ಮಪ್ಪಿರಿಯುತ್ತಾ ತಿರುಗುವುದನ್ನು ಈಗ ಮೊದಲಿನಂತೆ ಯಾರೂ ಆಶ್ಚರ್ಯದಿಂದ ನಿಂತು ನೋಡುವವರಿಲ್ಲ.

ಕೆಲವು ದಿನಗಳಲ್ಲಿ ಅವಳಿಗೆ ಆ ಕೆಲಸದಲ್ಲಿ ಆಸ್ಥೆ ಕಡಿಮೆಯಾಯಿತು. ಒಂದು ಸಂಜೆ ತಿರುಗಾಡಿಕೊಂಡು ದೇವಸ್ಥಾನದ ದಿಬ್ಬದ ಕಡೆಗೆ ಹೋದಳು. ಅಪ್ಪ ಇದೇ ಜಾಗದಲ್ಲಿ ರಾತ್ರಿ ಮಲಗುತ್ತಿದ್ದುದು, ಶ್ರೀನಿವಾಸನ ಹೆಂಡತಿಗೆ ಶಾಪ ಹಾಕಿದುದು, ಮೋಹನದಾಸ ಅಪ್ಪನನ್ನು ಅವಮಾನಗೊಳಿಸಿ ಜಗಳ ಕಾದುದು, ಇತ್ತೀಚೆಗೆ ಸೆನ್ಸಸ್ ಆದನಂತರ ಊರ ಸಭೆಯಲ್ಲಿ ತಾನು ಮಾತನಾಡಲು ಬಂದು ತಲೆ ತಿರುಗಿ ಬಿದ್ದುದು ನೆನಪಾಯಿತು. ಊರಿಗಿಂತ ಈ ಗುಡಿ ಹಿಂದಿನದು ಎಂಬ ನೆನಪಾಯಿತು. ಇದ್ದಕ್ಕಿದ್ದ ಹಾಗೆಯೇ ಒಂದು ಯೋಚನೆ ಬಂತು: ಫ್ಲೀಟ್ ಅವರು ಬರೆದಿರುವ ಜಿಲ್ಲೆಯ ಇತಿಹಾಸವನ್ನು ಬಿಟ್ಟರೆ ಈ ಊರಿನ ಅಥವಾ ದೇವಸ್ಥಾನದ ಬಗೆಗೆ ಮತ್ತೆ ಎಲ್ಲಿಯೂ ಏನೂ ಬರೆದಿಲ್ಲ. ಈ ದೇವಸ್ಥಾನ ಮತ್ತು ಗ್ರಾಮದ ಮೇಲೆ ಒಂದು ಸಣ್ಣ ಪುಸ್ತಕವನ್ನೇಕೆ ಬರೆಯಬಾರದು? ಮೈಸೂರಿನಲ್ಲಿ ಪ್ರೊಫೆಸರರ ಮಾರ್ಗದರ್ಶನ ಪಡೆದು, ಈ ಗುಡಿಯನ್ನು ಕಟ್ಟಿರಬಹುದಾದ ಕಾಲ, ಇದು ಮೂಲತಃ ಶೈವವೇ, ವೈಷ್ಣವವೇ, ಊರಿನ ಕೋಟೆಯನ್ನು ಕಟ್ಟಿದ ಖಚಿತವಾದ ಐತಿಹಾಸಿಕ ಅವಧಿ ಮತ್ತು ಸಂದರ್ಭಗಳಾವುವು, ಮೊದಲಾದ ಅಂಶಗಳನ್ನು ವಿವರವಾಗಿ ಚರ್ಚಿಸಿ ದೃಢಪಡಿಸಬೇಕು ಎಂದು

ೊಂಡಳು. ಪ್ರೊಫೆಸರರನ್ನು ಕೇಳುವ ಮುನ್ನ ಕೆಲವು ಮುಖ್ಯ ಅಂಶಗಳ ಟಿಪ್ಪಣಿ ಮಾಡಿಕೊಳ್ಳುವುದು ಅಗತ್ಯ ಎಂದು ಯೋಚಿಸಿ, ಮರುದಿನವೇ ತಾವರೆಕೆರೆಗೆ ಹೋಗಿ ಒಂದು ದೊಡ್ಡ ಅಳೆಯುವ ಟೇಪು ತಂದಳು. ದೇವಾಲಯದ ಉದ್ದ, ಅಗಲ, ವಿಸ್ತೀರ್ಣ, ಮೊದಲಾದ ವಿವರಗಳನ್ನು ಅಳೆದು ಗುರುತು ಹಚ್ಚಿಕೊಂಡಳು. ಈ ಕೆರೆಯ ಇತಿಹಾಸವೂ ಮುಖ್ಯವಾಗಿ ಕಾಣಿಸಿತು. ಅದನ್ನೂ ಗುರುತು ಹಾಕಿಕೊಂಡಳು. ಒಂದು ದಿನ ಬೆಳಗ್ಗೆ ಇಷ್ಟು ಮಾಡಿಕೊಂಡು, ಮೈಸೂರಿಗೆ ವಾಪತ್ತು ಹೋಗಬೇಕೆಂದು ಯೋಚಿಸುತ್ತಾ ಹನ್ನೊಂದು ಗಂಟೆಯ ಹೊತ್ತಿಗೆ ಹೋಟೆಕ್ಕೆ ಬಂದಳು.

ಅವಳು ಬರುವ ಹೊತ್ತಿಗೆ ವೆಂಕಟೇಶ ಕಾಯುತ್ತಿದ್ದ. ಇತ್ತೀಚೆಗೆ ಅವನು ಅವನನ್ನು ನೋಡಲು ಬರುವುದೇ ಅಪರೂಪ. ತನ್ನ ಮೇಲೆ ಸಿಟ್ಟಾಗಿದ್ದಾನೆ ಎಂದು ಅವಳಿಗೆ ಅನಿಸುತ್ತಿತ್ತು. ಆದರೆ ತಾನಾಗಿಯೇ ಹೊಸೆದುಕೊಂಡು ಮಾತನಾಡಲು ಹೋಗಿರಲಿಲ್ಲ. ಈಗ ಅವನೇ ಬಂದಿರುವಾಗ, 'ಎಷ್ಟು ಹೊತ್ತಾಯ್ತು ಬಂದು?' ಎಂದಳು.

'ದೇವಸ್ಥಾನದ ಸುತ್ತಮುತ್ತ ಅಳೀತಿದ್ದೆ ನೀನು. ನಾನು ನೋಡಿದೆ.'

'ಅದರ ಬಗ್ಗೆ ಒಂದು ಪುಸ್ತಕ ಬರಿಯಾಣ ಅಂತ.'

'ಬರಿ, ಬರಿ. ನಮ್ಮ ಊರಿನ ಗುಡಿಯ ಚರಿತ್ರೆ ಬರೀಬೇಕು. ಹೊರಗಿನೋರಿಗೆ ಗೊತ್ತಾಗೋದು ಹ್ಯಾಗೆ?'

ಈ ದಿನ ಅವನು ತುಂಬ ಖುಷಿಯಲ್ಲಿದ್ದಂತೆ ಕಾಣುತ್ತಿದ್ದ. ಐದು ನಿಮಿಷ ಅದೂ ಇದೂ ಮಾತನಾಡಿದ ಮೇಲೆ, ತಡೆಯಲಾರದವನಂತೆ ಅವನೇ ತೆಗೆದ: ನೋಡು, ನಾನು ಸುಮ್ಮನೆ ತಪ್ಪು ತಿಳ್ಕಂಡಿದ್ದೆ. ಶಾಭಾಸ್ ಕೆಲಸ ಮಾಡ್ದೆ ನೀನು.'

'ಯಾವ ವಿಷಯ?'

'ಶ್ರೀನಿವಾಸನ ಮದುವೆ ವಿಷಯ.'

'ಯಾಕೆ?'

'ಅವರಪ್ಪ ಬೋಳೀಮಗ ಬ್ರಾಹ್ಮಣರ ಹುಡುಗೀನ ಮಗನಿಗೆ ತಂದು ನಮ್ಮ ಜಾತಿಗೇ ಅವಮಾನ ಮಾಡಬೇಕು ಅಂತಿದ್ದ. ಈಗ ಅವನು ಮಾದಿಗರೋಳುನ್ನ ಮಾಡ್ಕತ್ತೀನಿ ಅಂತ ಕೂತಿದಾನೆ. ಊರಿಗೂರಿಗೇ ಗೊತ್ತಾಗಿದೆ. ಈಗ ಅವನಿಗೆ ಎಂಥ ಪೇಚಾಗಿದೆ ಗೊತ್ತಾ?'

'ಎಂಥ ಪೇಚಾಗಿದೆ?'

'ಅವನು ಚಿಟ್ಟಯ್ಯನ ಮಗಳುನ್ನ ತಂದ್ಕಳುಕ್ಕೆ ಒಪ್ಪಿದನೇ, ಈ ಸಲ ಎಲೆಕ್ಷನ್ನಲ್ಲಿ ರೈತರು ಓಟು ಕೊಡುಲ್ಲ. ತಂದ್ಕಲ್ಲಿಲ್ಲವೇ, ಹೊಲೇರು ಮಾದಿಗರು

ಕೊಡುಲ್ಲ. ಹ್ಯಾಗಿದ್ರೂ ಪಲ್ಟಿ ಹೊಡೀತಾನೆ' – ಎಂದು ಖುಷಿಯಿಂದ ನಕ್ಕ.

ಆದರೆ ಸತ್ಯಳಿಗೆ ಈ ಮಾತಿನಿಂದ ಅಪಮಾನವೆನಿಸಿತು. ತಿರಸ್ಕಾರವೂ ಆಯಿತು. ಎಂದಳು: 'ವೆಂಕಟೇಶ, ಅಣ್ಣ ತಂಗಿ ಅಂತ ನಗುನಗ್ತಾ ಮಾತಾಡಿ-ಕಂಡಿರ್ಬೇಕು. ನಂಗೆ ಬೇಜಾರಾಗೂ ಮಾತೇ ಆಡ್ತೀಯ ನೀನು.'

'ಯಾಕವ್ವ?'

'ಅವರು ಮದುವೆಯಾಗ್ತೀನಿ ಅಂದ್ರೆ, ಆಗಿ ಅಂತ ನಾವು ಹರಸಬೇಕು. ಅದರಿಂದ ಅವರಪ್ಪನಿಗೆ ಕೇಡಾಗುತ್ತೆ ಅಂತ ಸಂತೋಷಪಡೂದು ಒಳ್ಳೇದಲ್ಲ.'

'ಹಾಗಾದ್ರೆ ನೀನೇ ಮದುವೆಯಾಗದೆ, ಅವನು ಅವಳನ್ನ ಮಾಡ್ಕಳೂ ಹಾಗೆ ಯಾಕೆ ಮಾಡ್ದೆ?'

'ನನಗೆ ಮದುವೆಯಾಗೂ ಇಷ್ಟವಿಲ್ಲ. ವೆಂಕಟೇಶ, ನಿಂಗೆ ಬುದ್ಧಿಶಕ್ತಿ ಬಹಳ. ಆದರೆ ನಾನು ಹೇಳೂದು ನಿನ್ನ ತಲೆಗೆ ಹೋಗೋದೇ ಇಲ್ಲ' – ಎಂದು ಅವಳು ಸ್ನಾನಕ್ಕೆ ಎದ್ದಳು. ಅವಳು ಸ್ನಾನ ಮಾಡಿಕೊಂಡು ಬರುವ ತನಕ ಕೂತಿದ್ದನಂತರ ಅವನು ಮನೆಗೆ ಹೊರಟ. 'ಇಲ್ಲೇ ಊಟ ಮಾಡು' – ಎಂದರೆ, 'ಮನೇಲಿ ಹೇಳಿಲ್ಲ. ನಾನು ಹೋಗದೆ ಅವಳು ಊಟ ಮಾಡುಲ್ಲ' ಎಂದು ಹೇಳಿ ಹೊರಟುಹೋದ.

ಅವಳು ಅಡಿಗೆಗೆ ಇಟ್ಟು ಹವನಕ್ಕೆ ಕುಳಿತಳು. ಮಂತ್ರ ಹೇಳಿಕೊಂಡು ನಿಧಾನವಾಗಿ ಆಜ್ಯವನ್ನು ಅರ್ಪಿಸಿ ಮುಗಿಸುವ ಹೊತ್ತಿಗೆ ಕಾರಿನ ಧ್ವನಿ ಕೇಳಿಸಿತು. ಶ್ರೀನಿವಾಸ ಬಂದಿರಬಹುದು ಎನಿಸಿತು. ಅಡಿಗೆಯ ಕೋಣೆಗೆ ಹೋಗಿ ಉರಿ ಸರಿ ಮಾಡಿ, ಒಲೆಯ ಮೇಲಿನದನ್ನು ನೋಡಿ ಕೋಡಲೆಯ ಅನ್ನವನ್ನು ತೆಗೆದಿಟ್ಟು ಹಿಟ್ಟಿಗೆ ನೀರಿಡುವುದರಲ್ಲಿ ಮನೆಯ ಪಕ್ಕದಲ್ಲಿ ಪಂಪ್ ಶೂಸಿನ ಜರ್ ಜರ್ ಎಂಬ ಶಬ್ದವಾಯಿತು. ಬಂದವರು ಮುತ್ತಿಗಳು. 'ಕೂತ್ಕಳಿ' – ಎಂದು ಅವಳು ಮುಂದಲಿಗೆ ಹಾಕಿಕೊಟ್ಟಳು. ಅವರು ನಗುಮುಖ ಮಾಡಿಕೊಂಡಿದ್ದರೂ ಒಳಗಿನ ಸಿಟ್ಟನ್ನು ಅದುಮಿಕೊಂಡಿದ್ದಾರೆಂದು ಅವಳಿಗೆ ಅರ್ಥವಾಗುತ್ತಿತ್ತು. ಇನ್ನೂ ಉರಿಯುತ್ತಿದ್ದ ಹವನದ ಬೆಂಕಿಯನ್ನು ನೋಡಿ ಅವರಿಗೆ ಕೆರಳಿದಂತಾಯಿತು. ನೇರವಾಗಿ ಮಾತನಾಡಿದರು: 'ಅಮ್ಮ, ನಿಂಗೆ ಆವಾಗ ನಿರಾಶೆಯಾಗಿರಬಹುದು. ಅದಕ್ಕೆ ನಾನು ಕಾರಣವೆ? ನಿಜವಿಷಯ ನಿಂಗೆ ಗೊತ್ತಿಲ್ಲ. ಆದರೆ ನೀನು ಹೀಗೆ ದ್ವೇಷ ಸಾಧಿಸಬ್ಯಾಡ್ದು.'

'ನಾನೇನು ಮಾಡಿದೆ?'

'ನಿನ್ನ ಮನೇಲೇ ಅಲ್ವೇ, ಅವನಿಗೂ ಬೆಟ್ಟಯ್ಯಾರ ಮಗಳಿಗೂ ಸಂಧಿಯಾದದ್ದು?'

‘ಇರಬಹುದು.’

‘ಅವನು ಅವಳುನ್ನ ಮಾಡ್ಕೃತ್ತೀನಿ ಅನ್‌ಬೇಕಾದ್‌ರೆ ನೀನೇ ಕಾರಣ.’

‘ಅಂದ್ರೆ ನಿಮ್ಮ ಮಗ ಎಳೇ ಮಗುವೇನು?’

‘ನನ್ನ ಮೂಗು ಕುಯಿಸ್ಕಂಡ್‌ರೂ ಚಿಂತಿಲ್ಲ, ಇನ್ನೊಬ್‌ರಿಗೆ ಅಪಶಕುನ ಆಗಬೇಕು ಅನ್ನೊ ಮಾತು ನಿಂದು. ದ್ವೇಷ ಸಾಧಿಸಬೇಕು. ಇದಕ್ಕೆ ನೀನು ನಿನ್ನ ಸುಖಾನ್ನೂ ಕಳ್ಕತ್ತಿದೀಯ. ಇದು ಒಳ್ಳೇದಲ್ಲ. ನಾನು ನಿನ್ನ ತಂದೆ ಅಂತ ತಿಳ್ಕಂಡು ನನ್ನ ಮಾತು ಕೇಳು. ಸುಮ್ನೆ ಅವನುನ್ನ ಮಾಡ್ಕ.’

ಅವಳು ಯೋಚಿಸಿದಳು. ತನ್ನ ಅಂತರಂಗವನ್ನೇ ತಾನು ತಡಕಿಕೊಳ್ಳು ವಂತಾಯಿತು. ಹಿಂದೆ ತನಗಾದ ನಿರಾಶೆಯ ಪ್ರತೀಕಾರವಾಗಿ ತಾನು ಹಾಗೆ ಮಾಡಿದೇನೆಯೇ! ಒಂದು ನಿಮಿಷ ಅವಳಿಗೇ ಭಯವಾಯಿತು. ತನಗೆ ತಿಳಿದ ಮಟ್ಟಿಗೆ ತಾನು ಆ ಉದ್ದೇಶದಿಂದ ಏನೂ ಮಾಡಿಲ್ಲ. ಶ್ರೀನಿವಾಸನನ್ನು ಮದುವೆ ಯಾಗುವ ಮನಸ್ಸು ಎಂದೋ ಹೊರಟುಹೋಯಿತು. ಆದರೆ ಅವನ ಬಗೆಗೆ ಅನುಕಂಪವಿದೆ. ಅವನು ಸುಖವಾಗಿರಬೇಕೆಂಬ ಬಯಕೆ ಇದೆ. ಅವನ ಜಾತಿ ಯಲ್ಲಿ ಒಳ್ಳೆಯ ಹುಡುಗಿ ಸಿಕ್ತುತ್ತಿರಲಿಲ್ಲವೆ? ‘ನಿಮ್ಮ ಜಾತೀಲೇ ಒಳ್ಳೇ ಒಂದು ಹುಡುಗಿ ಮಾಡ್ಕ’ –ಎಂದೇಕೆ ತಾನು ಬುದ್ಧಿ ಹೇಳಲಿಲ್ಲ, ಮೀರಾಳನ್ನು ಏಕೆ ಸೂಚಿಸಿದೆ, ಅವಳ ಹೆಸರನ್ನು ಸೇರಿಸಿ ಯಾಕೆ ಅಷ್ಟೊಂದು ಸೂಚ್ಯವಾಗಿ ತಮಾಷೆ ಮಾಡಿದೆ, ಎಂದು ತನ್ನನ್ನು ತಾನು ಪ್ರಶ್ನಿಸಿಕೊಂಡಳು. ಇವರು ಹೇಳುವ ಹಾಗೆ ಇವರಿಗೆ ಅಪಶಕುನ ಮಾಡುಕ್ಕೆ ಅಂತಲೇ ನನ್ನ ಮೂಗನ್ನ ನಾನು ಕುಯ್ಕುತ್ತಿದೀನೆಯೆ? ಎಂದರೆ ನಾನು ಈಗಲೂ ನಿಜವಾಗಿಯೂ ಶ್ರೀನಿವಾಸ ನನ್ನೇ ಪ್ರೀತಿಸುತ್ತಿದೀನೆಯೇ? ಈಗ ಯಾವುದೋ ಛಲದಿಂದ ಹೀಗೆ ಮಾಡಿಸಿ, ಅವನೂ ಮೀರಾ ಮದುವೆಯಾದ ಮೇಲೆ ನಾನು ದುಃಖಿಯಾಗುತ್ತೇನೆಯೇ? ಇದಾವುದೂ ಇದುವರೆಗೆ ನಿಜವಾಗಿರಲಿಲ್ಲ. ಈಗ ಇದೇ ನಿಜವೆಂಬಷ್ಟು ಸಮಂಜಸ ವಾಗಿ ಕಾಣುತ್ತಿದೆ. ಆದರೆ ಅವನನ್ನು ಮದುವೆಯಾಗುವುದು ಸಾಧ್ಯವಿಲ್ಲವೆಂದು ಒಳಮನಸ್ಸು ಆಗಲೂ ಹೇಳುತ್ತಿತ್ತು, ಈಗಲೂ ಹೇಳುತ್ತಿದೆ. ಯಾವುದನ್ನು ನಂಬುವುದು?

ಯಾವ ಮಾತನಾಡುವುದೂ ತಿಳಿಯದೆ ಅವಳು ಸುಮ್ಮನೆ ಕುಳಿತಳು. ಅದುವರೆಗೂ ಕಾಯ್ದು ಸುಮ್ಮನೆ ಕುಳಿತಿದ್ದ ಮಂತ್ರಿಗಳು, ‘ಈಗಲೂ ಯೋಚ್ನೆ ಮಾಡು. ನೀನು ನನ್ನ ಮಗಳೇ ಆಗಿದ್‌ರೆ ಹ್ಯಾಗೆ ಬುದ್ಧಿ ಹೇಳ್ತಿದ್ದೆನೋ ಹಾಗೆ ಈಗಲೂ ಹೇಳ್ತೀನಿ. ಸೊಸೆ ಅಂದ್‌ರೂ ಮಗಳ ಸಮಾನ. ನೀನು ಬೇರೆ ಮಗ ಳಲ್ಲ. ಮುಂದೆ ನಮ್ಮ ಮನೆಗೆ ಯಜಮಾಂತಿಯಾಗಿ, ನಿನ್ನ ಗಂಡನಿಗೇ ಅಲ್ಲದೆ

ನಂಗೂ ಬುದ್ಧಿ ಹೇಳಬೇಕಾದೋಳು' ಎಂದು ಹೇಳಿ ಎದ್ದು ಹೊರಟುಹೋದರು.

ಅವರೊಡನೆ ಮತ್ತೆ ಏನಾದರೂ ಆಡುವ, ಅಥವಾ ಊಟ ಮಾಡಿ, ಕಾಫಿ ಕುಡಿಯಿರಿ ಎಂದಾದರೂ ಹೇಳಲೂ ತೋರದೆ, ತನ್ನನ್ನು ತಾನೇ ಬಿಡಿಸಿ ನೋಡಿ ಕೊಳ್ಳುತ್ತಿದ್ದ ಸತ್ಯ ಸುಮ್ಮನೆ ಕುಳಿತಿದ್ದಳು.

ಹೊಳೆಬಾಗಿಲಿನ ಹೊರಗೆ ಬಂದು ಕಾರಿನಲ್ಲಿ ಕೂತುಕೊಳ್ಳುವಾಗ ಮಂತ್ರಿಗಳಿಗೆ ಇದ್ದಕ್ಕಿದ್ದಹಾಗೆಯೇ ಒಂದು ಹೊಸ ವಿಚಾರ ಹೊಳೆದುಬಿಟ್ಟಿತು. ಇದೇ ಸರಿ, ಹೀಗೆಯೇ ಆಗಿದೆ ಎಂದು ನಿರ್ಧರಿಸಿದರು: ವೆಂಕಟೇಶ ತಂಗಿ ಹತ್ರಕ್ಕೆ ಹೋಗಿ ಬರ್ತಾನೆ. ಅಣ್ಣ ತಂಗಿಗೆ ಚನ್ನಾಗೇ ಇದೆ. ಆಗ ಹಂಗಾದ್ದುಕ್ಕೆ ಹಿಂಗೆ ಮಾಡಿ ಕೂರಿಸಿದರೆ ಸರಿಯಾಗುತ್ತೆ ಅಂತ ಅವನೇ ತಂಗಿಗೆ ಹೇಳಿ ಕೆಲಸ ಮಾಡಿಸಿದಾನೆ. ಗುರುಮಘಾತಕ ನನ್ಮಗ ವೆಂಕಟೇಶ ಅಂದ್ರೆ. ಆದರೆ ತಂಗಿ ನನ್ನ ಮಗುನ್ನ ಮಾಡ್ಕಣಾದು ಅವನಿಗೂ ಬ್ಯಾಡವಾಗಿತ್ತಲ. ಅವನೇ ನನ್ನ ಸಮುಕ್ಮಾನಿಂತು ಶ್ರೀನಿವಾಸಂಗೆ ಬುದ್ಧಿ ಹೇಳಿ ತಪ್ಪಿಸಿದನಲ, ಎಂಬ ಆಕ್ಷೇಪ ಸುಳಿದಾಗ ಇದು ವೆಂಕಟೇಶನ ಕೆಲಸವಲ್ಲ ಎನಿಸಿತು. ಆದರೆ ತಕ್ಷಣ ಬಸ್‌ಲೈನು ಕೊಡಿಸಲಿಲ್ಲವೆಂಬ ಜಿದ್ದಿಗೆ ಈ ಬತ್ತಿ ಮಡಗಿದಾನೆ ಅವನು, ಎನಿಸಿತು. ಅದೇ ನಿಜವೆಂದು ಬುದ್ಧಿ ಖಚಿತ ಹೇಳಿತು. ಅವನಿಟ್ಟ ಬತ್ತಿ ಅವನೇ ಆರಿಸಬೇಕು. ಈಗ ಅವನನ್ನೇ ಹಿಡಿದು ಕೆಲಸ ಮಾಡಿಸಬೇಕು ಎಂದು ನಿಶ್ಚಯಿಸಿದರು. ಅಷ್ಟರಲ್ಲಿ ಕಾರು ಮುಖ್ಯ ರಸ್ತೆಗೆ ಬಂದು ಕೋಟೆಯ ಬಾಗಿಲನ್ನು ಪ್ರವೇಶಿಸುತ್ತಿತ್ತು. ಡ್ರೈವರ್ ತನ್ನ ಮನೆಯ ದಾರಿಯನ್ನು ಹಿಡಿದಿದ್ದ. 'ಹಂಗೆ ಬ್ಯಾಡ, ಇಲ್ಲಿ ಬಲಗಡೆ ತಿರುಕ್ಕ' – ಎಂದು ಹೇಳಿ, ವೆಂಕಟೇಶನ ಮನೆಯ ಮುಂದೆ ಬಂದು ನಿಂತರು.

ಕದ ಹಾಕಿತ್ತು. ಇವರು ಬಡಿದಾಗ ವೆಂಕಟೇಶನೇ ಬಂದು ತೆಗೆದ. ಶರಟು ಕಳಚಿ ಬರೀ ಒಳಗಿನ ಬನೀನಿನಲ್ಲಿದ್ದ ಅವನು, ಎಡಗೈಲಿ ಸಾದಿನ ಕಟಟ ಹಿಡಿದು ಕೊಂಡು ಬಲ ತರ್ಜನಿಯಲ್ಲಿ ಅದನ್ನು ತೀಯುತ್ತಿದ್ದ ಗುರುತು ಕಾಣಿಸುತ್ತಿತ್ತು. 'ಟೈಮಿಗೆ ಸರಿಯಾಗಿ ಬಂದಿದೀನಿ. ನಂಗೂ ಎಲೆ ಹಾಕುಕ್ಕೆ ಹೇಳಪ್ಪ' – ಎನ್ನುತ್ತಾ ಅವರು ಒಳಗೆ ಬಂದರು.

ಅವರು ಬಂದದ್ದು ಅನಿರೀಕ್ಷಿತವಾಗಿದ್ದರೂ ಯಾಕೆ ಬಂದಿದ್ದಾರೆಂಬುದು ಅವನಿಗೆ ತಕ್ಷಣ ಹೊಳೆಯಿತು. 'ಬನ್ನಿ, ಬನ್ನಿ. ಹಾರುವರ ಮನೆ ಸಪ್ಪೆಸಾರು ನಿಮ್ಮ ನಾಲಿಗೇಲಿ ರಸ ಹೊರಡಿಸುಲ್ಲ. ರಣಗಾರವೇ ಬೇಕು ನಿಮಗೆ' – ಎನ್ನುತ್ತಾ, ಅವನು ಮರದ ಕುರ್ಚಿಯನ್ನು ತೋರಿಸಿದ.

'ಅಂದ್ರೆ ಊಟಕ್ಕೆ ಇಕ್ಕುಲ್ಲ ಅನ್ನಪ್ಪ.'

‘ನಾವು ಇಕ್ತೀವಿ. ನೀವು ಉಣ್ತೀರಾ? ರಾಜದೃಷ್ಟಿ ಬೀಳೂದು ಅಂದ್ರೆ ಏನೋ ಕೇಡಾಗುತ್ತಂತೆ. ನೀವು ದಿವಾನರು ನಮ್ಮ ಮನೆಗೇ ಬಂದು ದೃಷ್ಟಿ ಹಾಕಿರೂವಾಗ ಅನ್ನಶಾಂತಿ ಮಾಡುಸ್ದೆ ಇದ್ರೆ ನಮಗೇ ಒಳ್ಳೇದಲ್ಲ. ನಿಜವಾಗ್ಲೂ ಊಟ ಮಾಡ್ತೀರಾ?’

ಕುತ್ತಿಗೆ ಸೆಟ್ಟಗಿದ್ದರೂ ಮಂತ್ರಿಗಳು ಮನಸ್ಸಿನಲ್ಲೇ ತಲೆದೂಗಿದರು: ಅದೇನು ಬುದ್ಧಿ ಇವಂದು? ಒಂದೇ ಮಾತಿನಲ್ಲಿ ಯಾವ ಯಾವ ಥರ ಬೇಕಾದರೂ ಅರ್ಥ ಮಾಡ್ಕಳೂ ಹಾಗೆ ಅಂತಾನೆ ಎಂದುಕೊಂಡರು. ‘ಎಲೆ ಹಾಕ್ಸಪ್ಪ’ – ಎಂದು ಅವರು ಮತ್ತೆ ಹೇಳಿದ ಮೇಲೆ ಅವನು ಒಳಗೆ ಹೋದ. ಎಲ್ಲಿ ಬಡಿಸುವುದು ಎಂದು ಜಯಮ್ಮ ಯೋಚಿಸಿದಳು. ತನಗೆ ತಿಳಿಯದೆ ಗಂಡನನ್ನೇ ಕೇಳಿದಳು.

‘ಹೊರಗೇ ಕುರ್ಚಿ ಕೆಳಗೆ ಹಾಕೇ. ನಾನು ಅವರು ಕೂತ್ಕತ್ತೀವಿ. ನರಸಿಂಹ ಜೋಯಿಸರು ಒಳಗೆ ಮಾಡ್ಲಿ.’

‘ಅವರು ಅಷ್ಟು ದೊಡ್ಡೋರು. ಅಲ್ಲಿ ಕೂರಿಸಿದರೆ ಏನು ತಿಳ್ಕತ್ತಾರೆ? ಈ ಅಡಿಗೆಮನೆ ಎದುರಿನ ನಡುಮನೆ ಕಂಬದ ಹತ್ತಿರ ಹಾಕಿದರೆ ಏನು?’ – ಅವಳು ಕೇಳಿದಳು.

‘ಏನು ತಿಳ್ಕತ್ತಾನೆ? ಈಗ ದರ್ದು ಬೀಳೂ ಹೊತ್ತಿಗೆ ನನ್ನ ಹುಡಿಕ್ಕಂಡು ಬಂದಿದಾನೆ. ಊಟ ಮಾಡ್ತೀನಿ ಅಂತ, ತಾನೇ ವಿಶ್ವಾಸ ತೋರುಸ್ತಿದಾನೆ. ಇಷ್ಟು ದಿನ ಬಂದಿದ್ನೇನು? ತನ್ನ ಅರಮನೇಲಿ ಕೂತ್ಕಂಡು ನಂಗೆ ಹೇಳಿ ಕಳುಸ್ತಿದ್ದ!’

ಅವನು ಹೊರ ಅಂಗಳಕ್ಕೆ ಬರುವ ಹೊತ್ತಿಗೆ ಮಂತ್ರಿಗಳು ಡ್ರೈವರ್ನನ್ನು ತಮ್ಮ ಮನೆಗೆ ಹೋಗಿ ಊಟ ಮಾಡುವಂತೆ ಕಳಿಸಿದ್ದರು. ಬಾಗಿಲನ್ನು ಮುಂದೆ ಮಾಡಿ, ಕುರ್ಚಿಯ ಹತ್ತಿರ ನೆಲದ ಮೇಲೆ ಎದುರುಬದುರಾಗಿ, ಹಚ್ಚಿಸಿದ ಎರಡು ಮುತ್ತುಗದೆಲೆ ಹಾಕಿ ಪುಟ್ಟ ಮಂದಲಿಗೆ ಹಾಕಿ ವೆಂಕಟೇಶನೇ ನೀರಿನ ಎರಡು ಚೊಂಬು ಮತ್ತು ಲೋಟಗಳನ್ನಿಟ್ಟ. ಅವರನ್ನು ಹಿತ್ತಲ ಕಡೆಗೆ ಕರೆದೊಯ್ದು, ನೀರಿನ ಚೊಂಬನ್ನು ಮುಟ್ಟಲು ಕೊಡದೆ, ಕೈ ತೊಳೆಯಲು ನೀರು ಬಿಟ್ಟ. ತಮ್ಮ ಖಾದಿ ಕೋಟಿನ ಜೇಬಿನಿಂದ ಕರವಸ್ತ್ರ ತೆಗೆದು ಕೈ ಒರೆಸಿಕೊಂಡು ಬಂದು ಒಂದು ಚಾಪೆಯ ಮೇಲೆ ಕುಳಿತು ಅವರು ತಲೆಯ ಟೋಪಿಯನ್ನು ತೆಗೆದು, ಗರಿಮುರಿಯದಂತೆ ಪಕ್ಕದ ಕುರ್ಚಿಯ ಮೇಲಿಟ್ಟರು. ಗಂಡ ಹಿತ್ತಾಳೆಯ ಚೊಂಬು ಲೋಟಗಳನ್ನೇ ಇಟ್ಟಿದ್ದುದನ್ನು ಕಂಡ ಜಯಮ್ಮ ಮನಸ್ಸಿನಲ್ಲೇ ಸಿಡಿಮಿಡಿಗೊಂಡಳು. ಅನ್ನ ಬಡಿಸಿ ಒಳಗೆ ಹೋದವಳು ತನ್ನ ಪೆಟ್ಟಿಗೆ ತೆಗೆದು ಒಂದು ಬೆಳ್ಳಿಯ ಲೋಟದಲ್ಲಿ ತಿಳಿಸಾರು ಹಾಕಿ ಎರಡು ಮಿಳ್ಳೆ ತುಪ್ಪ ಹಾಕಿ

ತಂದು ಅವರ ಮುಂದಿಟ್ಟಳು. ವೆಂಕಟೇಶ ನಸುನಕ್ಕ. ಮಂತ್ರಿಗಳಿಗೂ ನಸುನಗೆ ಬಂತು. ಒಂದು ಗುಟುಕು ಸಾರು ಕುಡಿದು ಎಂದರು: 'ನೀನು ಏನೇ ಹೇಳು ಯಂಗ್‌ಟೇಶು, ನಿಮ್ಮ ಜನ ಮಾಡಿದ ಹಾಗೆ ತಿಳಿಸಾರು ಮಾಡಾಕೆ ನಮ್ಮೋರಿಗೆ ಬರುಲ್ಲ.'

ಅನ್ನಕ್ಕೆ ತುಪ್ಪ ಬಡಿಸಲು ಬಂದ ಜಯಮ್ಮನಿಗೆ ಈ ಮೆಚ್ಚುಗೆಯನ್ನು ಕೇಳಿ ಸಂತೋಷವಾಯಿತು. ಆದರೆ ವೆಂಕಟೇಶ, 'ಈ ಪುಳಿಚಾರು ತಿಂದೇ ನಾವು ಹಾಳಾದ್ದು ಕಂಡ್ರೀ' ಎಂದ.

ಕಲಸಿ ನಾಲ್ಕು ತುತ್ತು ಸುರುಕೊಂಡು ಉಂಡಮೇಲೆ ಅವರು ಕೇಳಿದರು: 'ಮುಖ್ಯವಾದ ವಿಷಯ ಮಾತಾಡಬೇಕು. ಈಗಲೇ ಆಡಾಣೋ, ಆಮ್ಯಾಲೆ ನಮ್ಮನೆಗೆ ಹೋಗಾಣೋ?'

'ಈಗಲೇ ಹೇಳಿ, ಅದಕ್ಕೇನು?'

ಅವರು ಒಳಭಾಗಕ್ಕೆ ದೃಷ್ಟಿ ತೋರಿಸಿದರು. ವೆಂಕಟೇಶ, 'ಮುಂದೆ ಬಂದರೆ ಹಾಯಬೇಡ, ಹಿಂದೆ ಬಂದರೆ ಒದೆಯಬೇಡ; ಹಾಗಿಟ್ಟಿದೀನಿ. ಹಾಗೆಲ್ಲ ಹೊರಗಡೆ ಮಾತಾಡುಲ್ಲ. ಹೇಳಿ, ಪರವಾಗಿಲ್ಲ' ಎಂದ.

'ನೋಡಪ್ಪ, ವಿಷಯ ನಿಂಗೆ ಗೊತ್ತು. ನಿನ್ನ ತಂಗೀನ ಇವನು ಮಾಡ್ಕ್ಯಳ್ಲಿ ಅಂತ ನಂದೇನು ಇರಾದೆ ಇರಲಿಲ್ಲ. ಅವರವರೇ ಅದೇನೋ ಮಾಡ್ಕ್ಯಂಡಿದ್‌ರು. ನಿಂಗೆ ಇಷ್ಟವಿಲ್ಲದೆ ಇದ್ದರೆ ಬ್ಯಾಡ. ನಮ್ಮ ಜಾತಿ ಮನೆ ಹೆಣ್ಣು ತರಾದೇ ನಂಗೆ ಇವತ್ತೂ ಬೇಕು. ಆದರೆ ಅವನಿಗೆ ಇಂಥಾ ಬುದ್ಧಿ ಬರೂಹಂಗೆ ಮಾಡಬ್ಯಾಡದಾಗಿತ್ತು.'

'ಯಾವ ವಿಷಯ ನೀವು ಹೇಳ್ತಿರೂದು?'

'ಬೆಟ್ಟಯ್ಯಾರ ಮಗಳ ಮಾಡ್ಕಂತೀನಿ ಅಂತ ಇವನು ಕೂತಿರಾದು ನಿಂಗೆ ಗೊತ್ತಿಲ್ವ?'

'ಹೌದಾ?'

'ನೋಡು, ಗೊತ್ತಿಲ್ಲದೋನ ಹಾಗೆ ಮಾತಾಡಬ್ಯಾಡ. ನೀನು ಎಷ್ಟಾದರೂ ಚಾಣಕ್ಯ ಮಹರ್ಷಿ. ನಾನು ನಿಂಗೆ ಕೆಟ್ಟದೇನೂ ಮಾಡಿಲ್ಲ. ಬಸ್ಸು ಕೊಡುಸ್ತೀನಿ ಅಂತ ಹೇಳಿದ್ದು ನಿಜ. ಆಗ ಆಗ್ಲಿಲ್ಲ. ಅದರ ಕಷ್ಟ ನಿಂಗೇನು ಗೊತ್ತು? ಬೇಕಾದ್ರೆ ಈಗಲೂ ಒಂದು ಲೈಸನು ಕೊಡುಸ್ತೀನಿ. ಇಲ್ಲಾ, ನಮ್ಮದೇ ಒಂದು ಲೈಸು ಬರದುಕೊಡ್ತೀನಿ.'

'ಪಬ್ಲೀ ಲೈಸೆಲ್ಲ ಈಗ ಸರ್ಕಾರದೋರು ತಗಾತಿದಾರೆ. ಇನ್ನು ಆರು ತಿಂಗಳಿರುತ್ತೋ ವರ್ಷವಿರುತ್ತೊ, ನಂಗ್ಯಾಕ್‌ರಿ ಬಸ್ಸು?'

'ಬಸ್ಸು ಬ್ಯಾಡ್‌ದೆ ಇದ್‌ರೆ ಇನ್ನೊಂದು ಮಾಡು. ಲಾರಿ ಬೇಕಾ? ದರ್‌ಖಾಸ್ತಿನಲ್ಲಿ ಜಮೀನು ಬೇಕಾ? ನೀನು ಮುಂದುವರಿದರೆ ನಂಗೇನು ಹೊಟ್ಟೆಕಿಚ್ಚಾ?'

'ಆದರೆ ಏನು ಸಮಾಚಾರವೇ ನಂಗೆ ಗೊತ್ತಿಲ್ಲವಲ್ರಿ? ಅದೇನು ಹೇಳಿ.'

'ನೋಡು, ನಾನು ಬೈಯುಕ್ಕೆ ಹೇಳ್ತಿಲ್ಲ. ನಿನ್ನ ಬುದ್ಧಿಶಕ್ತಿ ಹೊಗಳುಕ್ಕೇ ಹೇಳ್ತಿದೀನಿ. ನನ್ನ ಮಗ ಬೆಟ್ಟಯ್ಯಾರ ಮಗಳುನ್ನ ಮಾಡ್ಕತ್ತೀನಿ ಅನ್ನಬೇಕಾದ್‌ರೆ ನಿನ್ನ ತಂಗೀದೇ ಏನೋ ತಂತ್ರ ನಡೆದಿದೆ. ಈಗ ಅವನಿಗೆ ಬುದ್ಧಿ ಹೇಳಿ ತಪ್ಪಿಸಬೇಕಾದರೆ ನಿನ್ನ ಕೈಲೇ ಸರಿ. ನನ್ನ ಮಾತಿಗೆ ಇಲ್ಲ ಅನ್ನಬ್ಯಾಡ.'

ವೆಂಕಟೇಶ ಯೋಚಿಸಿದ: ಸರಿಯಾಗಿ ಸಂದು ಹಿಡಿದು ಮೀಟಿದರೆ ಇದೇನೂ ದೊಡ್ಡ ಕೆಲಸವಲ್ಲ. ಆದರೆ ಇವರಿಗೆ ಯಾಕೆ ಸಹಾಯ ಮಾಡಬೇಕು? ನನಗೆ ಕೊಡಿಸುಕ್ಕೆ ಆಗಲಿಲ್ಲ. ತಾವು ಮಾತ್ರ ನಾಲ್ಕು ಬಸ್ ಲೈನುಗಳನ್ನು ಮಾಡ್ಕಂಡ್ರು. ಇವರಿಗೆ ಇಷ್ಟು ಸಾಲದು. ಮುಂದಿನ ಎಲೆಕ್ಷನ್ನಿಗೆ ಬೂದಿಹಳ್ಳಿ ತಿಮ್ಮೇಗೌಡರ ಕಡೆಯೋರು ನಂಗೆ ಹ್ಯಾಗೂ ಈಗಲೇ ಹೇಳಿಕಳಿಸಿದಾರೆ. ಇವನ ಮಗ ಮಾದಿಗಿತ್ತಿ ಮಾಡ್ಕಂಡ್‌ರೆ ಸಾಕು. ತಿಮ್ಮೇಗೌಡರ ಕಡೆ ನಿಂತು ಇವರುನ್ನ ಪಲ್ಟಿ ಹೊಡೆಸಬಹುದು. ಅಲ್ಲಿಗೆ ಸರಿಯಾಗುತ್ತೆ.

ಆದರೆ ಇನ್ನೂ ವಿವೇಕ ಹುಟ್ಟಿತು: ಇವರು ಎಷ್ಟಾದ್ರೂ ಮಂತ್ರಿಗಳು. ಬೇಕಾದಷ್ಟು ದುಡ್ಡು ಸುರಿದು ಗೆದ್ದೇ ಗೆಲ್ಲಬಹುದು. ಒಂದು ಪಕ್ಷ ಸೋತರೂ, ಒಂದೇ ಊರಿನಲ್ಲಿ ಇದ್ದು ಇವರ ದ್ವೇಷ ಕಟ್ಟಿಕೊಳ್ಳೂದು ಚನ್ನಲ್ಲ. ಜಿದ್ದು ಹುಟ್ಟಿ ದೇವಸ್ಥಾನದ ಪೂಜೆಗೇ ಸಂಚಕಾರ ತರಬಹುದು. ಸಿಕ್ಕಿದಷ್ಟು ಗುಂಜಿಕೊಂಡು ವಾರಿಯಾಗೂದೇ ಸರಿ.

ಅವನು ಕೇಳಿದ: 'ಅಲ್ಲ ಕಣ್ರೀ, ನಿಮಗೆ ತಿಳೀದ್ದು ನಂಗೆ ತಿಳಿಯುತ್ತಾ?'

'ನೀನು ಚಾಣಕ್ಯ ಋಷಿ ಅಂತ ಹೇಳ್‌ಲಿಲ್ವೇನಪ್ಪಾ? ನಾವು ಚಂದ್ರಗುಪ್ತರು. ಸಿಂಹಾಸನದ ಮ್ಯಾಲೆ ಕೂತುಕೊಬಲ್ಲೆವು. ಬುದ್ಧಿ ನಿಂದೇ.'

ಅವನಿಗೂ ಖುಷಿಯಾಯಿತು. ಕೆಲಸವಿದ್ದಾಗ ಮಾತ್ರ ಹೀಗೆ ಬಂದು ಆಡುತ್ತಾರೆ; ಇಲ್ಲದಿದ್ದರೆ ತಿರುಗಿ ನೋಡುವುದಿಲ್ಲ ಎಂಬ ನೆನಪಾಯಿತು. 'ಹೊಳೆ ದಾಟಿದ ಮೇಲೆ....' – ಎಂದು ರಾಗ ತೆಗೆದ.

'ನಿಂಗೇನು ಬೇಕು ಹೇಳಯ್ಯ, ಸುಮ್ನೆ ಮಾತೇ ಆಡ್ತೀಯಲ' – ಎಂದು ಸಿಟ್ಟುಕೊಂಡವರಂತೆ ಅವರು ಕೇಳಿದರು.

'ಹೊಲೇರು ಮಾದಿಗರಿಗೆಲ್ಲ ಭೂಮಿ ಕೊಡುಸ್ತೀರ. ನಂಗೊಂದು ಹತ್ತೆಕ್ರೆ ತೆಂಗಿನ ಸಸಿ ಆಗುವಂಥದು ಕೊಡ್ಸಿ, ಊರಾಚೆ ಹಳ್ಳದಲ್ಲಿ.'

'ನೋಡು, ಕೈಲಿ ಅನ್ನ ಹಿಡಕಂಡಿದೀನಿ. ಅರ್ಜಿ ಹಾಕು. ಕಿಸ್ಮತ್ತಿನಲ್ಲಿ

ಮಾಡುಸ್‌ಕೊಡ್ತೀನಿ. ಸ್ವಂತ ಜಮೀನಿರೂರ್‌ರಿಂದ ಹಂಗೇ ಕೊಡ್‌ಸೂಹಂಗಿಲ್ಲ. ಸರ್ಕಾರಕ್ಕೆ ಒಂದು ಸಾವಿರ ರೂಪಾಯಿ ಕಟ್ತೀಯ? ಇನ್ನು ಒಂದು ತಿಂಗಳಿನಲ್ಲಿ ನೀನು ಗುದ್ದಲಿ ತಗಂಡು ಜಮೀನಿಗೆ ಕಾಲಿಕ್ಕಭೌದು.'

'ಕಟ್ತೀನಿ.'

'ನಿನ್ನ ಕೆಲ್ಸ ಆಯ್ತು. ಇನ್ನು ನಂದ ಏನು ಮಾಡ್ತಿ ಹೇಳು. ಅವನು ಈ ಮಾದಿಗಿತ್ತಿ ಮಾಡ್ಕಳೂದ ಬಿಡಬೇಕು. ನಮ್ಮ ಜಾತೀಲಿ ನಾನು ಗೊತ್ತು ಮಾಡಿದ ಕಡೆ ಅಪ್ಪಂತೋರ ಮನೆ ಹೆಣ್ಣು ಮಾಡ್ಕಬೇಕು.'

ಅವನ ಮನಸ್ಸಿನಲ್ಲಿ ಆಗಲೇ ಉಪಾಯ ಹೊಳೆದಿತ್ತು. ಹೇಳಿದ: 'ಮೊದಲ್ನೇದ ಗ್ಯಾರಂಟಿ ಮಾಡ್ತೀನಿ. ಎರಡ್ನೇದು ಕಷ್ಟ. ನಾನು ಗ್ಯಾರಂಟಿ ಕೊಡುಲ್ಲ.'

'ಅಷ್ಟೇ ಮಾಡು. ಬೀಸೂ ದೊಣ್ಣೆ ತಪ್ಪಿಸ್ಕಂಡ್ರೆ ಸಾವಿರ ವರ್ಷ ಆಯಸ್ಸು' -ಎಂದು ಅವರು ತೃಪ್ತಿಯಿಂದ ಊಟ ಮಾಡಿದರು.

೩

ಮನೆಗೆ ಬೇಕಾದ ಸಾಮಾನುಗಳನ್ನು ಒಟ್ಟಿಗೆ ತಾವರೆಕೆರೆಯಿಂದಲೋ ತಿಪಟೂರಿನಿಂದಲೋ ತರುವುದು ವೆಂಕಟೇಶನ ಪದ್ಧತಿ. ರಾತ್ರಿಯೇ ಕುಳಿತು ಸೋಪು, ಸೀಗೆಪುಡಿ, ಕಡಲೆಕಾಯಿ ಎಣ್ಣೆಯ ಡಬ್ಬ, ತೊಗರಿಬೇಳೆ ಮೊದಲಾಗಿ ಒಂದು ಪಟ್ಟಿ ಹಾಕಿಕೊಂಡು, ಎರಡು ಗೋಣೀಚೀಲ ಮತ್ತು ಕಟ್ಟಲು ನಾಲ್ಕು ಹಳೆ ಪಂಚೆಗಳೊಡನೆ ಬೆಳಗಿನ ಬಸ್ಸಿಗೆ ತುಮಕೂರಿಗೆ ಹೋದ. ಹತ್ತು ಗಂಟೆಗೇ ಬಸ್ಸು ಇಳಿದು ಶ್ರೀನಿವಾಸನ ಕೋಣೆಗೆ ಹೋದಾಗ ಅವನು ಕೈಲಿ ಒಂದು ಕಾಗದವನ್ನು ಹಿಡಿದು ಓದುತ್ತಿದ್ದ. ಪಕ್ಕದಲ್ಲೇ, ಒಡೆದ ಅಂಚೆಯ ಲಕೋಟೆ ಇತ್ತು. ಗುಲಾಬಿ ಬಣ್ಣದ ಕಾಗದದ ದಡಗಳಲ್ಲಿ ಹೂವು ಬಳ್ಳಿಗಳ ಹಸುರು ಚಿತ್ರಗಳನ್ನು ಅಚ್ಚುಮಾಡಿತ್ತು. ಬರೆದಿದ್ದ ಗುಂಡಗಿನ ಅಕ್ಷರ ಮತ್ತು ಸಮನಾದ ಸಾಲುಗಳು ಬಾಗಿಲಿನಿಂದಲೇ ಕಂಡುವು. ಎರಡು ಮೂರು ಪುಟಗಳ ಕಾಗದ. ತಕ್ಷಣ ಅದನ್ನು ಮಡಿಸಿ ಹಿಡಿದುಕೊಂಡು ಶ್ರೀನಿವಾಸ ಸ್ವಾಗತಿಸಿದ: 'ಬನ್ನಿ ಬನ್ನಿ ವೆಂಕಟೇಶಯ್ಯನೋರೇ. ಯಾವತ್ತೂ ಬಂದಿರಲಿಲ್ಲ ನೀವು ಇಲ್ಲಿಗೆ.'

ಶ್ರೀನಿವಾಸ ವೆಂಕಟೇಶ ಹೆಚ್ಚುಕಮ್ಮಿ ಒಂದೇ ವಯಸ್ಸಿನವರು. ಮೊದಲು ಪರಸ್ಪರ ಏಕವಚನದಲ್ಲೇ ಮಾತನಾಡಿಸುತ್ತಿದ್ದರು. ಈಗ ಏಕವಚನ ಉಪಯೋಗಿಸಲು ಶ್ರೀನಿವಾಸನಿಗೇ ಸಂಕೋಚವಾಯಿತು.

'ಇನ್ನೇನು ಮಾಡೂದಪ್ಪ, ದಿವಾನರ ಮಗ, ಮೋಟಾರ್ ಮಾಲೀಕ, ಪಾಳೆ

ಗಾರರ ಮೊಮ್ಮಗ. ನಿನ್ನ ಹುಡಿಕ್ಕಂಡು ಬರಲೇ ಬೇಕಲ್ಲ ಬಡವರು' – ಎಂದು ವೆಂಕಟೇಶ ಕುರ್ಚಿಯ ಮೇಲೆ ಕುಳಿತುಕೊಂಡ. ಒಂದೆರಡು ಉಭಯ ಕುಶಲೋಪರಿಗಳನ್ನು ಆಡಿದ ನಂತರ ಕೇಳಿದ: 'ತಾವರೆಕೆರೆ ಅಂಗಡಿ ಶೆಟ್ಟರಿಗೆ ಬಂದಿರೂ ದುರಾಶೆ ಯಾರಿಗೂ ಇಲ್ಲ. ಅದಕ್ಕೆ ಈ ಸಲ ತುಮಕೂರಿನಿಂದಲೇ ಸಾಮಾನು ತಗಂಡು ಹೋಗಬೇಕು ಅಂತ ಬಂದೆ. ಒಂದು ಇಪ್ಪತ್ತು ಬಾರು ಸೋಪು, ಒಂದು ಡಬ್ಬ ಎಣ್ಣೆ, ಐವತ್ತು ಸೇರು ತೊಗರಿಬೇಳೆ. ಇನ್ನೂ ಏನೇನೋ ಚೀಟೀಲಿದೆ. ನೀನು ಮೋಟಾರ್ ಮಾಲೀಕ. ಯಾವ್ದಾದರೂ ಅಂಗಡಿಗೆ ಹೇಳಿ ಚೀಪ್ ರೇಟ್ ಹಾಕಿಸ್ಕೊಡ್ತೀಯ?'

'ನಂಗೆ ಅಂಗಡಿಗಳ ಗುರ್ತೇ ಇಲ್ವಲಾ?'

'ನೀನೆಂಥ ಬಿಸಿನೆಸ್ ಮಾಡ್ತೀಯಯ್ಯ? ನಾನು ನಿನ್ನೇ ನೆಚ್ಕಂಡು ಬಂದೆ.'

'ನಂಗೆ ಸಂಬಂಧವಿಲ್ಲದ್ದಕ್ಕೆ ನಾನ್ಯಾಕೆ ಹೋಗ್ಲಿ? ಬೇಕಾದ್ರೆ ನಮ್ಮ ಗುಮಾಸ್ತರನ್ನ ಕಳುಸ್ತೀನಿ. ಇನ್ನೊಂದು ಸ್ವಲ್ಪ ಹೊತ್ತಿಗೆ ಬರ್ತಾರೆ. ಒಳ್ಳೇ ಅಂಗ್ಡಿಗೆ ಕರ್ಕಂಡು ಹೋಗ್ತಾರೆ.'

'ಇನ್ನೇನಪ್ಪ ಸಮಾಚಾರ?'

'ನೀವೇ ಹೇಳಿ.'

'ಊರಲ್ಲೆಲ್ಲ ನಿಂದೇ ಮಾತು. ಧೈರ್ಯ ಅಂದ್ರೆ ಧೈರ್ಯ ಕಣಯ್ಯ ನಿಂದು.'

'ಯಾಕೆ?'

'ಯಾರೂ ಮಾಡದೆ ಇರೂ ಕೆಲಸ ಮಾಡ್ತಿದೀಯ. ಅಪ್ಪ ದಿವಾನುಂಗೂ ಕೇರ್ ಮಾಡ್ಲಿಲ್ಲ. ಪಾಳೇಗಾರರ ರಕ್ತ ಅಂದ್ರೆ ಹಾಗಿರಬೇಕು. ಸಿಂಹ ಅದು, ಸಿಂಹ ಅಂತಾರೆ ಊರಲ್ಲಿ.'

ಶ್ರೀನಿವಾಸನಿಗೆ ಹೆಮ್ಮೆ ಎನಿಸಿತು: 'ತಪ್ಪೇನ್ರೀ ಅದರಲ್ಲಿ?'

'ತಪ್ಪೇನು? ನೀನು ಮಾಡ್ಕಳೂದ್ರಲ್ಲಿ ತಪ್ಪಿಲ್ಲ. ಆದ್ರೆ ನಂಗೆ ಸಂಕಟ.'

'ಯಾಕೆ?'

'ನೋಡಪ್ಪ, ನೀವು ಕಾಲೇಜು ಪಾಸು ಮಾಡಿದೋರು. ನಾನು ಇಂಟರ್ಮೀಡಿಯೆಟ್ಟಿಗೇ ಫೇಲಾದೋನು. ನಿಮ್ಮಷ್ಟು ಮುಂದುವರಿದಿಲ್ಲ. ಮೊದಲ ಸಲ ನೀನು ಸತ್ಯನ್ನ ಮಾಡ್ಕಳೂದು ನಂಗೂ ಇಷ್ಟವಿರಲಿಲ್ಲ. ಈಗ ಏನೇನೋ ಆಗಿ ಹೋಯ್ತು. ನಿನ್ನ ಹೆಂಡತಿ ಸತ್ತಳು. ನಿಮ್ಮಪ್ಪ ಸತ್ತರು. ಆದದ್ದಾಯ್ತು. ನೀನು ಅವಳು ಮಾಡ್ಕಂಡ್ರೂ ಮಾಡ್ಕಳ್ಳಿ. ಬೆಂಗಳೂರಲ್ಲೋ ತುಮಕೂರಲ್ಲೋ ಬಂಗ್ಲೆ ಮಾಡ್ಕಂಡಿರ್ಲೀರ. ಹಳ್ಳೀಲಿ ನಮ್ಮ ಜೊತೆ ಇಲ್ಲದೆ ಇದ್ರೆ ಸಾಕು ಅಂತ ಒಂದು ಥರಕ್ಕೆ ಒಪ್ಕಂಡಿದ್ವಿ. ನಾನು ಸುಳ್ಳು ಹೇಳುಲ್ಲ. ರೂಪಾಯಿಗೆ ಹದಿನಾರಾಣೆ

ಒಪ್ಕಂಡಿರಲಿಲ್ಲ. ಈಗಲೂ ಒಪ್ಕಳುಲ್ಲ. ಹನ್ನೆರಡಾಣೆ ಒಪ್ಕಂಡಿದ್ದೆ. ಯಾಕೆ? ನೀನು ಪಾಳೇಗಾರರ ಹುಡುಗ. ಅಂದ್ರೆ ಕ್ಷತ್ರಿಯ ವೃತ್ತಿ. ನಿಮ್ಮಜ್ಜ ಅದೇ ಹೇಳೂದು. ಅಂದ್ರೆ ಕ್ಷತ್ರಿಯರಿಗೂ ಬ್ರಾಹ್ಮಣರಿಗೂ ಹೆಚ್ಚು ವ್ಯತ್ಯಾಸವಿಲ್ಲ. ಆದರೆ ಇವಳು ಬುದ್ಧಿ ಕೆಟ್ಟು ಕ್ಷತ್ರಿಯ ಹುಡುಗನ್ನ ಬಿಟ್ಟು ಆ ಮಾದಿಗರೋನ್ನ ಕಟ್ಕತ್ತೀನಿ ಅಂದ್ರೆ ನಾನು ಹ್ಯಾಗಯ್ಯ ತಡೀಬೇಕು?'

'ಏನ್ರೀ ನೀವನ್ನೋದು? ನಿಜವಾ?' – ಶ್ರೀನಿವಾಸ ಉದ್ವಿಗ್ನನಾದ.

'ನಾನು ನಿಜ ಹೇಳ್ತೀನಿ. ನಿನ್ನೇ ಪೂರ್ತಿ ಒಪ್ಕಂಡಿರಲಿಲ್ಲ ನಾನು. ಅಂಥಾದ್ರಲ್ಲಿ ಅವನ್ನ ಒಪ್ಕತ್ತೀನಾ? ನೀನು ಕ್ಷತ್ರಿಯ. ಬ್ಯಾಡ, ಪಾಳೆಗಾರರ ಮನೆತನದೋನು. ಬ್ಯಾಡ, ಮಾದಿಗನಂತೂ ಅಲ್ಲ. ನಿನ್ನ ಬಣ್ಣವೇನು, ಅವನ ಬಣ್ಣವೇನು? ನಿನ್ನ ವಿದ್ಯ ಏನು, ಅವನ ವಿದ್ಯ ಏನು? ನಿನ್ನ ರೂಪ ಲಕ್ಷಣ ಸಂಸ್ಕಾರ ಏನು, ಅವನ ರೂಪ ಲಕ್ಷಣ ಸಂಸ್ಕಾರ ಏನು? ಬಸ್ ಮಾಲೀಕನಾಗಿರೂ ನಿನ್ನ ಅಂತಸ್ತೇನು, ಯಕ್ಕಡದ ಅಂಗಡಿ ಇಟ್ಕಂಡು, ಬಂದೋರ ಕಾಲು ಮುಟ್ಟಿ ವ್ಯಾಪಾರ ಮಾಡೂ ಅವನ ಅಂತಸ್ತೇನು? ನಾನು ನಿನ್ನೇ ಪೂರ್ತಿ ಒಪ್ಕಳ್ಳದೇ ಇದ್ದೋನು ಅವನುನ್ನ ಭಾವ ಅಂತ ಒಪ್ಕತ್ತೀನಾ?'

'ನಾನು ಮದುವೆಯೇ ಆಗುಲ್ಲ ಅಂದ್ಲು?'

'ಮೊದಲು ನಿನ್ನ ಒಂದು ದಡ ಕಾಣುಸ್ದೆ ಅವನುನ್ನ ಮಾಡ್ಕಂಡ್ರೆ ನೀನು ಸುಮ್ನಿರುಲ್ಲ ಅಂತ ಅವಳಿಗೆ ಗೊತ್ತು. ಹಾಗಂದ್ಳು. ಅವನಿಗಿಂತ ನೀನು ಕೀಳು ಅಂತ ತೋರಿಸುಕ್ಕೆ ಅವಳು ಹಿಂಗೆ ಮಾಡಭೌದು. ನಂಗೆ ಅದು ಬ್ಯಾಡ. ಅದು ನಿನ್ನ, ಅವಳ, ಆ ಮಾದಿಗನ ಹಣೆಬರಹ. ಆದರೆ ನನ್ನ ಅಂತಸ್ತೇನು, ನನ್ನ ಗೌರವವೇನು?'

ಶ್ರೀನಿವಾಸ ಸ್ತಂಭೀಭೂತನಾಗಿಬಿಟ್ಟ. ಚೇತರಿಸಿಕೊಳ್ಳಲು ಎರಡು ನಿಮಿಷ ಹಿಡಿಯಿತು. 'ಇದು ನಿಜವೇನ್ರಿ?' – ಎಂದು ತೊದಲಿದ.

'ಊರಲ್ಲಿರೋರು ನಾವು. ಆ ಮಾದಿಗ ಎಷ್ಟು ಸಲ ಅವಳ ತ್ವಾಟಕ್ಕೆ ಹೋಗ್ತಾನೆ. ಏನೇನಾಗುತ್ತೆ ಅಂತ ಎಲ್ಲರಿಗೂ ಗೊತ್ತಿದೆ. ನಾನು ಬೀದೀಲಿ ತಲೆ ಎತ್ಕಂಡು ತಿರುಗೂ ಹಾಗಿಲ್ಲ. ಅದು ಹೋಗ್ಲಿ ಬಿಡಪ್ಪ, ನನಗ್ಯಾಕೆ ಸಂಬಂಧವಿಲ್ಲದ ಮಾತು! ಅವಳಿಗೆ ಒಂದು ಪಾಲು ನಮ್ಮಪ್ಪನೇ ಬರೆದಿದಾನೆ. ಬೇಲಿ ಒಂದು ಕಟ್ಟಿಲ್ಲ. ಅದೊಂದು ಕಟ್ಟಿಬಿಡ್ತೀನಿ. ನನ್ನ ಪಾಲಿನ ತ್ವಾಟದಲ್ಲಿ ತುಳಸಿ ಗಿಡ ಇದೆ. ಆ ಮಾದಿಗ ಅಲ್ಲಿ ತಿರುಗಾಡಿ ಅವನ ನೆರಳು ಬಿದ್ದು, ದೇವರ ಪೂಜೆಯ ದಳಕ್ಕೆ ಮೈಲಿಗೆಯಾಗಬಾರ್ದು. ನಿನ್ನ ಗುಮಾಸ್ತರು ಎಷ್ಟು ಹೊತ್ತಿಗೆ ಬರ್ತಾರೆ? ನಂಗೆ ಹೊತ್ತಾಯ್ತು' – ಎಂದು ಮೇಲೆ ಎದ್ದ.

'ಕೂತ್ಕಳ್ರಿ. ಹೋಗೋರಂತೆ' – ಶ್ರೀನಿವಾಸ ತೊದಲುತ್ತಲೇ ಹೇಳಿದ.

'ಊರಿಗೆ ಹೋಗಬೇಕಪ್ಪ. ಒಬ್ಬೊಂಟಿಗ ನಾನು. ಬ್ಯಾಸಾಯದ ನಿಗ ನೋಡಬೇಕು.'

'ಕೂತ್ಕಳಿ. ಕೂತ್ಕಳಿ' – ಎಂದು ಎದ್ದು ರೂಮಿನ ಬಾಗಿಲು ಮುಚ್ಚಿ ಬೋಲ್ಟು ಹಾಕಿ, ವೆಂಕಟೇಶನ ಪಕ್ಕದ ಕುರ್ಚಿಯ ಮೇಲೆ ಕೂತು ಶ್ರೀನಿವಾಸ ಕೇಳಿದ: 'ಈ ಬುದ್ಧಿ ಅವಳಿಗ್ಯಾಕೆ ಬಂತು?'

'ಲವ್ ಅನ್ನೋದೇ ಹಾಗೆ. ನೇರವಾಗಿ ಹೋಯ್ತು: ಪ್ರೇಮವಾಗುತ್ತೆ. ಅಡ್ಡ ತಿರುಗ್ತು: ದ್ವೇಷವಾಗುತ್ತೆ. ಅದೇನು ಅಂತ ನಾನು ಕಂಡಿದೀನಿ ನಮ್ಮ ಹಳ್ಳೀ ಲೆವಲ್ನಲ್ಲಿ. ಮಾದಿಗಿತ್ತೀನ ಯಾರು ಮಾಡ್ಕಂಡಿದಾರೆ ನೀನೇ ಹೇಳಪ್ಪ? ಹಿಂದೆ ವಸಿಷ್ಠರು ಮಾಡ್ಕಂಡಿರ್‍ಲಿಲ್ವೇ ಅಂತ ಸತ್ಯ ಹೇಳ್ತಾಳೆ. ಅವಳು ಹಿಸ್ಟರಿ ಓದಿರ್‍ಬೌದು. ಆದರೆ ಅವರು ಬ್ರಹ್ಮರ್ಷಿಗಳು. ಎಂಥ ಚಾಂಡಾಲರು ಹತ್ತಿರ ಬಂದರೂ ಅವರನ್ನ ಪರಿಶುದ್ಧರನ್ನಾಗಿ ಮಾಡುವಂಥ ಬ್ರಹ್ಮಶಕ್ತಿ ಇದ್ದೋರು. ಹಾಗಂತ ನೀವೂ ಮಾಡುಕ್ಕೆ ಹೋದ್ರೆ ಆಗುತ್ಯೇ?'

'ಅಲ್ಲ, ಈ ಸತ್ಯನಿಗೆ ಏನು ಮಾಡಬೇಕ್ರೀ?'

"ಅಣ್ಣನ ಮಾತು ಆವಳು ಕೇಳ್ತಿದ್ರೆ, 'ಅವನು ಬ್ಯಾಡ ದಿವಾನ್ರ ಮಗನ್ನ ಮಾಡ್ಕ' ಅಂತಿದ್ದೆ. ನನ್ನ ಮಾತು ಯಾರು ಕೇಳ್ತಾರೆ? ನೀನು ಕೇಳ್ತಿಯ?"

'ಕೇಳಿದ್ರೆ ಏನು ಮಾಡ್ತೀರಿ?'

'ಈಗ ಕೇಳಿದರೆ ಏನೂ ಆಗುಲ್ಲ. ಮೊದಲೇ, ಅಂದ್ರೆ ಆ ಬೆಟ್ಟಯ್ಯನ ಹುಡುಗಿ ನಿಂಗೆ ಗಂಟು ಬೀಳುಕ್ಕೆ ಮೊದಲೇ ನನ್ನ ಕೇಳಿದ್ರೆ ಏನಾದರೂ ಮಾಡ ಭೌದಾಗಿತ್ತು. ಲವ್ ಅಂದ್ರೇ ಹಾಗೆ, ಮನಸ್ಸು ಬಿದ್ದಮೇಲೆ ಬ್ಲೈಂಡ್ ಅಂತ ತಾನೆ ಹೇಳೂದು! ನೀನು ಬೆಟ್ಟಯ್ಯನ ಹುಡುಗಿ ಮಾಡ್ಕ. ಅವಳು ಅವನ ಮಗನ್ನ ಮಾಡ್ಕಳ್ಲಿ. ಒಬ್ರುನ್ನ ಒಬ್ರು ಭಾವ ಭಾವ ಅಂತ ತೋಳಲ್ಲಿ ತೋಳು ಹಾಕ್ಕಂಡು ವಾಕಿಂಗ್ ಹೊರಡಿ. ನಿಂದು ಫ್ಯಾಗ್ಟೂ ಲಾರಿಗಳಿವೆ. ಅವನ ಅಂಗಡಿ ಎಕ್ಕಡ ತುಂಬಿಕೊಂಡು ಸರ್ವೀಸ್ ಮಾಡು.'

ಶ್ರೀನಿವಾಸ ಮಾತನಾಡಲು ತಿಳಿಯದೆ ಸುಮ್ಮನೆ ಕುಳಿತುಬಿಟ್ಟ.

'ನಂಗೆ ಹೊತ್ತಾಗುತ್ತೆ. ನಿನ್ನ ಗುಮಾಸ್ತರು ಬಂದಿದಾರಾ ನೋಡ್ತೀನಿ ತಡಿ' – ಎಂದು ವೆಂಕಟೇಶ ಎದ್ದು ಬಾಗಿಲು ತೆಗೆದು ಹೊರಗಿನ ಆಫೀಸಿನಲ್ಲಿ ನೋಡಿದ. ಬಾಗಿಲು ಹಾಕಿತ್ತು. ವಾಪಸ್ಸು ಬಂದು, 'ಇನ್ನೂ ಬಂದಿಲ್ಲ. ನೀನೇ ಬರ್ತಿ ಏನಪ್ಪ ನನ್ನ ಜೊತೆ?' ಎಂದು ಕೇಳಿದ. ಶ್ರೀನಿವಾಸ ಮಾತನಾಡಲಿಲ್ಲ. ತಲೆ ತಗ್ಗಿಸಿ ಕೂತಿದ್ದ. 'ಫ್ಯಾಟೇಲಿ ಹುಡಿಕ್ಕಂಡು ನಾನೇ ಹೋಗ್ತೀನಿ. ನಿನ್ನಂಥ

ದೊರೆಮಗುನ್ನ ನೆಚ್ಕಂಡ್‌ರೆ ಬಡವರ ಕೆಲಸ ಆಗುಲ್ಲ' – ಎಂದು, ಮಡಿಸಿ ಕಟ್ಟಿ ತಂದಿದ್ದ ಗೋಣೀಚೀಲ ಮೊದಲಾದುವನ್ನು ತೆಗೆದುಕೊಂಡು ಹೊರಟುಹೋದ. ಅಷ್ಟು ದೂರ ಹೋದ ಮೇಲೆ, 'ಮನೇಲಿ ಇನ್ನೂ ನಾಲ್ಕೈದು ತಿಂಗಳಿಗೆ ಆಗೂ ಸಾಮಾನು ಇಟ್ಕಂಡು ಈಗಲೇ ಯಾಕೆ ಮತ್ತೆ ತಗಂಡು ಹೋಗಿ ತುಂಬ್ಕಾ ಬೇಕು' ಎಂಬ ಯೋಚನೆ ಬಂತು. ಆದರೆ ಹೀಗೆ ಚೀಲ ತಗಂಡು ಪಟ್ಟೆ ಹಾಕಿಸ್ಕಂಡು ಬಂದು ಬರೀ ಕೈಲಿ ಹೋಗಿ ಯಾರಿಗಾದ್ರೂ ಅನುಮಾನ ಬರಬಾರದು ಎಂದು ಯೋಚಿಸಿ ಮಂಡಿಪೇಟೆಯಲ್ಲೇ ಒಂದು ಅಂಗಡಿಯನ್ನು ಹೊಕ್ಕ.

೪

ಶ್ರೀನಿವಾಸನ ಮನಸ್ಸಿನಲ್ಲಿ ಹೋಲಿಕೆ ಶುರುವಾಯಿತು. ಆ ಮಾದಿಗನಿಗಿಂತ ತಾನು ಕೀಳೆ? ತನಗೂ ಅವನಿಗೂ ಮೊದಲಿನಿಂದ ಸಂಪರ್ಕವೇ ಇರಲಿಲ್ಲ. ಒಂದೇ ಬೀದಿಯಲ್ಲಿ ಆ ಕಡೆ ಅವನ ಅಂಗಡಿ ಇದೆ; ಈ ಕಡೆ ನನ್ನ ಆಫೀಸ್. ಒಂದೊಂದು ದಿನ ಅವನು ಹೀಗೆ ರಸ್ತೆಯಲ್ಲಿ ಹೋಗುತ್ತಿರುತ್ತಾನೆ. ಒಂದು ದಿನವೂ ಒಬ್ಬರನ್ನೊಬ್ಬರು ಮಾತನಾಡಿಸಿಲ್ಲ. ಅಪ್ಪನ ಹಾಗಲ್ಲ ಅವನು. ಮಹಾ ಅಹಂಕಾರ. ಮುಖಕ್ಕೆ ಹೊರೆಯಾಗುವಷ್ಟು ದಪ್ಪದ ಮೀಸೆ ಬಿಟ್ಟಿದಾನೆ.

ತಾನೂ ಇತಿಹಾಸ ಓದಿದೀನಿ. ಈ ಹೊಲೆಯರು ಮಾದಿಗರೆಲ್ಲ ಯಾರು? ಯಾವಾಗಲೂ ಊರ ಹೊರಗೆ ಗುಡಿಸಲು ಕಟ್ಟಿಕೊಂಡು, ಸತ್ತ ದನಗಳ ಮಾಂಸ ತಿಂದುಕೊಂಡು ಹೆಂಡ ಕುಡಿಯುತ್ತಾ ಬಿದ್ದಿರುತ್ತಿದ್ದವರು. ಈಗ ಸರ್ಕಾರ ಅವರಿಗೆ ಮನೆ ಕಟ್ಟಿಸಿ ಕೊಟ್ಟಿದೆ. ಸ್ಕಾಲರ್‌ಶಿಪ್ ಕೊಡುತ್ತದೆ. ಮೋಹನದಾಸನಂಥವರು ಪುಲಪುಲ ಅನ್ನುತ್ತಿದ್ದಾರೆ. ಆದರೆ ಅವನು ನನ್ನ ಸಮನಾಗುತ್ತಾನೆಯೆ? ಸಮನಲ್ಲ, ನನಗಿಂತ ಹೆಚ್ಚಾಗುತ್ತಾನೆಯೆ?

ಬೆಳಗ್ಗೆ ಎದ್ದು ಶ್ರೀನಿವಾಸ ಮುಖಕ್ಷೌರಕ್ಕೆ ಕುಳಿತುಕೊಂಡ. ಶೇವಿಂಗ್ ಕ್ರೀಮನ್ನು ಮುಖಕ್ಕೆ ಸವರಿಕೊಂಡು ಬ್ರಷ್ಷಿನಿಂದ ಚನ್ನಾಗಿ ತಿಕ್ಕಿ, ಹೊಸ ಬ್ಲೇಡು ಹಾಕಿದ ರೇಜರಿನಿಂದ ಮಾಡಿಕೊಂಡ. ತನ್ನ ಮುಖವು ಕನ್ನಡಿಯಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿದೆ. ತಕ್ಷಣವೇ ಮೋಹನದಾಸನ ಮುಖ ನೆನಪಿಗೆ ಬಂದು ಹೋಲಿಕೆ ಶುರುವಾಯಿತು. ತನ್ನ ಉದ್ದನೆಯ ಮೂಗು, ತೆಳುವಾದ ಹುಬ್ಬು, ಕಣ್ಣು, ಕೆನ್ನೆ, ಕಿವಿ ಬಣ್ಣಗಳೇನು, ಆ ಮಾದಿಗನ ಮುಖದ ಅವಲಕ್ಷಣವೇನು? ಅವನ ಕೆನ್ನೆಯೂ ತುಂಬಿಕೊಂಡಿದೆ. ಆದರೆ ಕರಿಬಣ್ಣ. ಕೋಣನ ಕಣ್ಣಿನಂತಹ ಕಣ್ಣುಗಳು. ಎತ್ತರಕ್ಕೆ ಮೈತುಂಬಿಕೊಂಡಿರಬಹುದು; ಆದರೆ ಕೋಣನ ಮೈ-

ಕಟ್ಟಿ. ಅಡ್ಡಾದಿಡ್ಡಿ ಸುತ್ತಿಸುತ್ತಿಕೊಂಡು ಹಿಂದಕ್ಕೆ ಬಾಗಿ ಬೆಳೆದ ಒಂದು ಜೊತೆ ಕೋಡುಗಳು ಮಾತ್ರ ಇಲ್ಲ. ಅವನ ಕಿವಿ ಹ್ಯಾಗಿವೆಯೋ ತಾನು ಸರಿಯಾಗಿ ನೋಡಿಲ್ಲ. ಅವನಿಗೆ ತಕ್ಕ ಹಾಗಿರಬೇಕು. ಕ್ವಾಣನ ಹಾಗೆ ಜೋಲುಗಿವಿ ಇರಬೇಕು. ಅಥವಾ ಹಿಂದಕ್ಕೆ ಎಳೆದು ಹರಚಿಕೊಂಡಿರಬೇಕು. ಹೀಗಿದ್ದೂ ಅವಳು ಅವನನ್ನೇಕೆ ಒಪ್ಪಿಕೊಂಡಳು? ನನ್ನ ಮೇಲೆ ಸಿಟ್ಟಿದ್ದರೆ ನನ್ನನ್ನು ಬಯ್ಯಲಿ. 'ಶ್ರೀನಿವಾಸ, ನೀನು ಮಾಡಿದ್ದು ನೀಚ ಕೆಲಸ' ಅನ್ನಲಿ. ಬೇಕಾದ ಶಿಕ್ಷೆ ಕೊಡಲಿ. ಆದರೆ ನನಗಿಂತ ಕೀಳು ಜಾತಿಯ, ಎಲ್ಲದರಲ್ಲೂ ಕೀಳಾದ ಅವನನ್ನು ಮಾಡಿಕೊಳ್ಳುವಂತಹ ಹೀನ ಕೆಲಸ ಮಾಡಬಹುದೆ! ಕ್ಷೌರ ಮುಗಿದು ಕೆನ್ನೆ ಗದ್ದಗಳ ಮೇಲೆ ಉಳಿದ ಬಿಳಿಯ ನೊರೆ ಒಣಗಿಹೋದರೂ, ಎದ್ದು ಮುಖ ತೊಳೆಯದೆ ಅವನು ಕನ್ನಡಿಯನ್ನೇ ದಿಟ್ಟಿಸುತ್ತಾ ಕುಳಿತುಬಿಟ್ಟ.

ಮಾಡಿದರೆ ಮಾಡಿಕೊಳ್ಳಲಿ ಹೊಲತಿ ಎಂದು ಉಪೇಕ್ಷೆ ತಾಳಿ ಮನಸ್ಸನ್ನು ಸಮಾಧಾನಕ್ಕೆ ತಂದುಕೊಂಡ. ಎದ್ದು ರೇಜರು ಬ್ರಶ್ಶುಗಳನ್ನು ತೊಳೆದು ಒರೆಸಿ ಇಟ್ಟು ಹೋಗಿ ಮುಖ ತೊಳೆದು ಸ್ನಾನ ಮಾಡಿದ. ಬಟ್ಟೆ ಬದಲಾಯಿಸಿ ಹೋಟೆಲಿನಲ್ಲಿ ತಿಂಡಿ ತಿಂದು ಬಸ್‌ಸ್ಟ್ಯಾಂಡಿಗೆ ಹೋದ. ಏಜೆಂಟರು ಟಿಕೇಟ್ ಕೊಡುತ್ತಿದ್ದರು. ಕ್ಲೀನರುಗಳು ಲೈನಿನ ಉದ್ದಕ್ಕೂ ಬರುವ ಸಣ್ಣ ಪುಟ್ಟ ಊರುಗಳನ್ನೆಲ್ಲ ಸೇರಿಸಿ ಗಟ್ಟಿಯಾಗಿ ಕೂಗುತ್ತಿದ್ದರು. ಅರ್ಧ ಗಂಟೆ ಅಲ್ಲಿರುವುದರಲ್ಲಿ ಬೇಸರವಾಯಿತು. ಮತ್ತೆ ಕಾಫಿಯನ್ನಾದರೂ ಕುಡಿಯಬೇಕೆಂದು ಸ್ಟ್ಯಾಂಡ್ ಹೋಟೆಲಿಗೆ ಹೋದ. ಬಸ್ ಮಾಲೀಕ, ಮಂತ್ರಿಗಳ ಮಗ ಅಪರೂಪಕ್ಕೆ ಬಂದಿದ್ದಾರೆಂದು ಹೋಟೆಲಿನ ಉಡುಪಿ ಭಟ್ಟರು, ಎದ್ದು ನಿಂತು ಸ್ವಾಗತಿಸಿದರು. ಕುರ್ಚಿಯ ಮೇಲೆ ಕೂರುವ ಮೊದಲು, ಎದುರು ಗೋಡೆಯ ಮೇಲೆ ಬಡಿದಿದ್ದ ದೊಡ್ಡ ಕನ್ನಡಿ ಕಾಣಿಸಿತು. ಲಕ್ಷಣವಾದ ಕಣ್ಣು, ಮೂಗು, ಹುಬ್ಬು, ಕೆನ್ನೆ, ಗದ್ದಗಳ ತನ್ನ ಮುಖ. ಪಕ್ಕದಲ್ಲಿಯೇ ಕರಿಬಣ್ಣದ, ಹೊರಜಿ ಮೀಸೆಯ, ಕೋಣನ ಕಣ್ಣು ದಡಿ ಮೂಗಿನ ಮೋಹನದಾಸ. ಕೋಡು ಮತ್ತು ಜೋಲುಗಿವಿಗಳು ಮಾತ್ರ ಸ್ಪಷ್ಟವಾಗಿ ಕಾಣುತ್ತಿಲ್ಲ. ಆದರೆ ದಿಟ್ಟಿಸಿ ನೋಡಿದರೆ ಅವೂ ಕಾಣುತ್ತವೆ. ಕ್ವಾಣನೇ ಅವನು. ಇಲ್ಲದಿದ್ದರೆ ಅವರ ಜಾತಿಯ ಮಾರೀ ಹಬ್ಬದಲ್ಲಿ ಕ್ವಾಣನನ್ನ ಯಾಕೆ ಕಡೀತಾರೆ? ಕ್ವಾಣ ಅಂದ್ರೆ ಮಾದಿಗ ಅಂತ. ನನಗೆ ಗೊತ್ತಿದೆ ಕಥೆ – ಎಂದುಕೊಂಡು ಕುರ್ಚಿಯ ಮೇಲೆ ಕೂತು ಕಾಫಿ ಕುಡಿದ.

ಅಷ್ಟರಲ್ಲಿ ಎರಡು ಬಸ್ಸು ಹೋಗಿದ್ದುವು. ಇನ್ನು ಉಳಿದುವುಗಳ ಸೀಟುಗಳು ತುಂಬಿ ನಡುವಣ ತೊಟ್ಟಿಯಲ್ಲಿ ಜನರು ನಿಂತಿದ್ದರು. ಖಾಸಗಿ ಬಸ್ಸುಗಳು

ನಿಲ್ಲುತ್ತಿದ್ದುದು ಒಂದು ಮೂಲೆಯಲ್ಲಿ. ಸರ್ಕಾರಿ ಬಸ್ಸುಗಳು ನಿಲ್ಲುವ ಮಧ್ಯದ ಭಾಗದ ಮೂಲಕ ಹಾಯ್ದು ಶ್ರೀನಿವಾಸ ತನ್ನ ಕೋಣೆಯ ಕಡೆಗೆ ಬಂದ. ಹೋಗಿ ಸತ್ಯಳನ್ನೇ ಕೇಳಿಬಿಡಬೇಕೆಂಬ ಯೋಚನೆ ಬಂತು. ತಕ್ಷಣ ಪೆಟ್ಟಿಗೆಯ ಬಾಗಿಲು ತೆಗೆದು ತಿಳಿ ಹಳದಿ ಸಿಲ್ಕು ಶರಟು, ಟೆರಿ ಉಲ್ ಪ್ಯಾಂಟುಗಳನ್ನು ಹಾಕಿ ಕಪ್ಪು ಡಿಸೈನ್ ಇರುವ ಗುಲಾಬಿ ಬಣ್ಣದ ಟೈ ಕಟ್ಟಿದ. ಕಾಲುಚೀಲ ಬೂಟುಗಳನ್ನು ಧರಿಸಿ ಕೋಣೆಗೆ ಬೀಗ ಹಾಕಿ ಕಾರು ನಡೆಸಿಕೊಂಡು ಹೊರಟ.

ಹನ್ನೆರಡು ಗಂಟೆಯ ಹೊತ್ತಿಗೆ ಕಾರನ್ನು ತೋಟದ ಹೊಳೆಬಾಗಿಲಿನಲ್ಲಿ ನಿಲ್ಲಿಸಿ ಅವಳ ಮನೆಯ ಹತ್ತಿರ ಹೋದಾಗ ತುಪ್ಪದ ವಾಸನೆ ತುಂಬಿಕೊಂಡಿತ್ತು. ಇನ್ನೂ ಹತ್ತಿರ ಹೋದಾಗ ಅವಳ ಧ್ವನಿಯಲ್ಲಿ ಮಂತ್ರ ಕೇಳಿಸುತ್ತಿತ್ತು. ಹೋಗಿ ಬಾಗಿಲಿನಲ್ಲಿ ನಿಂತ. ಅವಳು ಮಂತ್ರ ಹೇಳಿಕೊಂಡು ಒಂದು ಮರದ ಚಮಚ ವನ್ನು ಎತ್ತಿ ಹಿಡಿದು, ಅದರಿಂದ ಹವನದ ಅಗ್ನಿಗೆ ತುಪ್ಪವನ್ನು ಬಿಡುತ್ತಿದ್ದಳು. ಬಾಚಿಲ್ಲದ ತಲೆಯನ್ನು ಗಂಟು ಹಾಕಿಕೊಂಡಿದ್ದ ಅವಳು ಹಣೆಗೆ ಕುಂಕುಮ ಇಟ್ಟುಕೊಂಡಿದ್ದುದಷ್ಟೆ. ಸುಕ್ಕುಸುಕ್ಕಾದ ಒಂದು ಚೀಟಿ ಸೀರೆ, ತೋಳುಗಳಲ್ಲಿ ಸುಕ್ಕು ಕಾಣಿಸುತ್ತಿದ್ದ ರವಿಕೆ, ಅದರ ಮೇಲೆ ಜನಿವಾರ ಕಾಣಿಸುತ್ತಿತ್ತು. ನೆರ ಳನ್ನು ಕಂಡು ಬಾಗಿಲು ಕಡೆ ತಿರುಗಿದ ಅವಳು, ಒಳಗೆ ಬಂದು ಕೂರುವಂತೆ ಸನ್ನೆ ಮಾಡಿದಳು. ಬೂಟುಗಳನ್ನು ಬಿಚ್ಚಿ ಹೊಸಲಿನ ಹೊರಗೆ ಬಿಟ್ಟು, ಕಾಲುಚೀಲ ವನ್ನು ಕಳಚದೆ ಒಳಗೆ ಬಂದು, ಮೂಲೆಯಲ್ಲಿ ಸುತ್ತಿ ಇಟ್ಟಿದ್ದ ಮಂದಲಿಗೆಯನ್ನು ಉರುಳಿಸಿಕೊಂಡು ಅವನು ಗೋಡೆಯೊರಗಿ ಕುಳಿತ. ಅವಳ ಮಂತ್ರ ತಂತ್ರಗಳು ಸಾಗಿದ್ದುವು. ಇದೆಲ್ಲ ಮಾಡೋಳು ಮಾದಿಗನ್ನ ಮದುವೆಯಾಗ್ತಾಳೆಯೆ, ಎಂಬ ಸಂಶಯ ಅವನ ಮನಸ್ಸಿನಲ್ಲೇ ಹುಟ್ಟಿತು.

ಅಗ್ನಿಪ್ರದಕ್ಷಿಣೆಯನ್ನು ಮುಗಿಸಿ ಭಸ್ಮವನ್ನು ಭ್ರೂಮಧ್ಯಕ್ಕೆ ಇಟ್ಟುಕೊಂಡು ಸತ್ಯ ಎಂದಳು: 'ನೀನೂ ಭಸ್ಮ ತಗೊ. ಏನು ಕಾಣಲೇ ಇಲ್ವಲಾ?'

'ಸತ್ಯ, ನೋಡು, ನಾನು ಖಡಾಖಂಡಿತವಾಗಿ ಒಂದು ಮಾತು ಕೇಳಬೇಕು ಅಂತ ಬಂದಿದೀನಿ' – ಅವನು ತಕ್ಷಣ ಎಂದ.

'ಏನಪ್ಪಾ ರಾಜಕಾರಣ? ಮೀರಾ ಮುನಿಸ್ಕೊಂಡಿದಾಳೇನು?'

'ತಮಾಷೆ ಬ್ಯಾಡ. ನೀನು ಮೋಹನದಾಸನ್ನ ಮದುವೆಯಾಗ್ತೀಯೋ ಇಲ್ವೋ ಸರಿಯಾಗಿ ಹೇಳಿಬಿಡು.'

'ಯಾಕೆ?'

'ನಂಗೆ ಅನುಮಾನ ಬಂದಿದೆ.'

ಸತ್ಯ ಗಂಭೀರಳಾದಳು. ಇವನ ಮನಸ್ಸಿನಲ್ಲಿ ಈ ಸಂಶಯ ಯಾಕೆ ಕಾಡು

ತ್ತಿದೆ ಎಂಬ ಪ್ರಶ್ನೆ ಹುಟ್ಟಿ ಯೋಚಿಸುತ್ತಾ ಕುಳಿತಳು. ಶ್ರೀನಿವಾಸ ಎಂದ: 'ನೀನು ಉತ್ತರ ಕೊಡುಲ್ಲ. ಅಂದ್ರೆ ಆಗ್ತೀಯ ಅಂತ ಅರ್ಥ.'

'ನೋಡು, ಆ ವಿಚಾರ ನನ್ನ ಮನಸ್ಸಿನಲ್ಲಿ ಬಂದಿಲ್ಲ. ನಿನ್ನ ಮೇಲೆ ಆಣೆ ಇಟ್ಟು ಹೇಳ್ತೀನಿ ಬೇಕಾದ್ರೆ. ಅಕಸ್ಮಾತ್ ಆ ವಿಚಾರ ಬಂದು ಆದರೆ ತಪ್ಪೇನು?'

'ಅಂತೂ ನೀನು ಆಗ್ತೀಯ!'

'ಅಕಸ್ಮಾತ್ ಅಂತ ನಾನು ಹೇಳಿದ್ದು. ಆದರೆ ಏನು ತಪ್ಪು? ನಾನು ನೀನು ಆಗೂದಂತು ಸಾಧ್ಯವಿಲ್ಲ. ನಿನಗೆ ಹ್ಯಾಗೂ ಒಳ್ಳೇ ಹೆಣ್ಣು ಗೊತ್ತಾಗಿದೆ. ಸುಖ ವಾಗಿರು. ನನಗೆ ಮದುವೆಯಾಗೂ ಮನಸ್ಸೇ ಇಲ್ಲ.'

'ನಿನ್ನ ಯೋಗ್ಯತೆ ಗೊತ್ತಾಯ್ತು' – ಎಂದವನೇ ಶ್ರೀನಿವಾಸ ಎದ್ದು ಬಾಗಿಲಿಗೆ ಬಂದು ಕಾಲಿಗೆ ಬೂಟು ಮೆಟ್ಟಿಕೊಂಡ.

'ಹೀಗೆ ಬಂದೆ. ಇಷ್ಟು ಮಾತಾಡಿ ಹೊರಟೆ. ಏನಾಗಿದೆ ನಿಂಗೆ? ತಡಿ' – ಎಂದು ಅವಳು ಮೇಲೆ ಎದ್ದಳು.

'ಸೂಳೆಗಾರ ಮುಂಡೆ ನೀನು' – ಎಂದು ಬೂಟುಗಳನ್ನು ಬೇಗ ಕಟ್ಟಿಕೊಂಡು ಅವನು ಸರಸರನೆ ಹೆಜ್ಜೆ ಹಾಕಿದ. ಗರ ಬಡಿದವಳಂತೆ ಅವಳು ನಿಂತುಬಿಟ್ಟಳು.

ಶ್ರೀನಿವಾಸ ಹೊಳೆಬಾಗಿಲಿಗೆ ಬರುವ ಹೊತ್ತಿಗೆ ಎದುರಿಗೆ ಮೋಹನದಾಸ ಸಿಕ್ಕಿದ. ಅವನು ಸತ್ಯಳ ಮನೆಗೇ ಬರುತ್ತಿದ್ದ. ಅವನೇ ಮಾತನಾಡಿಸಿದ: 'ನಮಸ್ಕಾರ. ಎರಡು ಸಲ ನಿಮ್ಮ ಆಫೀಸಿಗೆ ಬಂದಿದ್ದೆ. ನೀವಿರಲಿಲ್ಲ. ಯಾವಾಗ ಬಂದಿರಿ?'

ಶ್ರೀನಿವಾಸ ಮಾತನಾಡಲಿಲ್ಲ. ಮೋಹನದಾಸನೇ, 'ಬನ್ನಿ, ಒಂದರ್ಧ ಗಂಟೆ ಒಳಗೆ ಹೋಗಿ ಕೂತ್ಕಂಡ್ ಮಾತಾಡಾಣ' ಎಂದದ್ದಕ್ಕೂ ಉತ್ತರ ಕೊಡದೆ, ಹೊರಗೆ ಹೋಗಿ ಕಾರಿನ ಬಾಗಿಲು ತೆಗೆದು ಕುಳಿತು ಸ್ಟಾರ್ಟ್ ಮಾಡಿದ. ಕಕ್ಕಾ-ಬಿಕ್ಕಿಯಾಗಿ, ಅವನನ್ನೇ ಒಂದು ನಿಮಿಷ ನೋಡುತ್ತಿದ್ದ ಮೋಹನದಾಸ ಒಳಗೆ ನಡೆದ.

ಕಾರು ನಡೆಸಿಕೊಂಡು ಮತ್ತೆ ತುಮಕೂರು ಕಡೆಗೆ ಹೋಗುವಾಗ ಶ್ರೀನಿವಾಸನ ಮನಸ್ಸಿಗೆ ಖಚಿತವಾಯಿತು: ನನ್ನ ಮಾತಿಗೆ ಅವಳು ಖಡಾಖಂಡಿತ ವಾಗಿ ಇಲ್ಲ ಅನ್ನಲಿಲ್ಲ. ಆದರೆ ತಪ್ಪೇನು ಅಂದಳು. ಇವನು ಇಲ್ಲಿಗೆ ಬರ್ತಲೇ ಇರ್ತಾನೆ. ಇಷ್ಟರಲ್ಲಿ ಇಬ್ಬರಿಗೂ ಚನ್ನಾಗಿ ಲವ್ ಬೆಳೆದಿದೆ. ನಾನು ಅವಳಿಗೆ ಆಗ ನಿರಾಶೆ ಮಾಡಿರಬಹುದು, ನಿಜ. ಆದರೆ ಈ ಮಾದಿಗನಿಗಿಂತ ಕಡೆಯಾದೆನೆ?

ತಲೆಯನ್ನು ಹೊಕ್ಕ, 'ಮಾದಿಗನಿಗಿಂತ ನಾನು ಕಡಿಮೆಯೆ?' ಎಂಬ ಪ್ರಶ್ನೆ ಇವನಿಗೆ ರಾತ್ರಿ ನಿದ್ರೆ ಕೊಡಲಿಲ್ಲ. ಎರಡು ದಿನದಲ್ಲಿ ಹುಚ್ಚು ಹಿಡಿದಂತೆ ಆಗು

ತ್ತಿತ್ತು. ಊಟ ತಿಂಡಿ ಸೇರುತ್ತಿರಲಿಲ್ಲ. ಮೂರನೆಯ ದಿನ ಮೀರಾಳಿಂದ ಇನ್ನೊಂದು ಕಾಗದ ಬಂತು. ಈ ಸಲ ಕೆಂಪು ಹೂಗಳ ಚಿತ್ರವಿದ್ದ ಹಸುರು ಕಾಗದದ ಮೇಲೆ ಬರೆದಿದ್ದಳು. ಮೂರು ಪುಟಗಳ ಅದರ ಮಧ್ಯದಲ್ಲಿ ಒಂದು ಫೋಟೋ, ತಾವಿಬ್ಬರೂ ಒಂದು ವಾರದ ಹಿಂದೆ ಬೆಂಗಳೂರಿನಲ್ಲಿ ತೆಗೆಸಿಕೊಂಡ ಫೋಟೋ ಪ್ರತಿಯನ್ನು ಸ್ಟುಡಿಯೋವಿನಿಂದ ತಂದು ಕಳಿಸಿದ್ದಾಳೆ. ಸೂಟು ಹಾಕಿರುವ ತನ್ನ ಪಕ್ಕದಲ್ಲಿ ಕುಳಿತಿರುವ ಅವಳ ಎರಡು ಕಿವಿಗಳಲ್ಲಿಯೂ ಬಿಳಿಯ ಓಲೆ ಎದ್ದು ಕಾಣುತ್ತಿವೆ. ತಾನೇ ಎರಡು ಸಾವಿರ ರೂಪಾಯಿ ಖರ್ಚು ಮಾಡಿ ಬಿಳೀ ವಜ್ರದ ಓಲೆ ಮಾಡಿಸಿ ಅವಳಿಗೆ ಇಟ್ಟಿದ್ದ. ಅವನ್ನು ಮಾಡಿಸಿದ ಸಂತೋಷ ಕ್ಕಾಗಿಯೇ ಸ್ಟುಡಿಯೋಗೆ ಕರೆದುಕೊಂಡು ಹೋಗಿದ್ದ. ಎರಡು ಓಲೆಗಳೂ ಸರಿ ಯಾಗಿ ಕಾಣುವಂತೆ ತೆಗೆಯಬೇಕೆಂದು ಫೋಟೋಗ್ರಾಫರ್‌ನಿಗೆ ಹೇಳಿ, ಗಂಡ ಹೆಂಡಿರಂತೆ ಜೊತೆಯಲ್ಲಿ ತೆಗೆಸಿದ್ದ. ತಾನು ಅವಳ ಕೊರಳಿಗೆ ಹಾಕಿದ್ದ ಚಿನ್ನದ ಸರವೂ ಸ್ಪಷ್ಟವಾಗಿ ಕಾಣುತ್ತಿತ್ತು.

ಫೋಟೋವನ್ನು ನೋಡಿದ ತಕ್ಷಣ ಸತ್ಯಳ ನೆನಪಾಯಿತು. ಮನಸ್ಸು ಇಬ್ಬ-ರನ್ನೂ ಹೋಲಿಸಲು ಮೊದಲುಮಾಡಿತು. ಶೂದ್ರ ಹೆಂಗಸಿನಂತೆ ಕೆಲಸ ಮಾಡಿ ಅವಳ ಕೈ ಒರಟಾಗಿದೆ. ಹೆಂಗಸಿಗಿರಬೇಕಾದ ಕೋಮಲತೆಯೇ ಇಲ್ಲ. ಅವಳ ಮುಖ ಮೊದಲೇ ಕಪ್ಪು. ಬಿಸಿಲಿನಲ್ಲಿ ತಿರುಗಿ ಇನ್ನೂ ಕರಿಯಾಗಿದೆ. ಕೆನ್ನೆ ಚಕ್ಕಳದಂತಿದೆ. ಆದರೆ ಮೀರಳ ಕೈ ಎಷ್ಟು ಮೃದು! ತುಂಬಿದ ಕೆನ್ನೆಗಳೇ ಒಂದು ಆಕರ್ಷಣೆ. ಅವಳ ತುಂಬಿದ ಕೂದಲು, ಹೆರಳು, ಎಲ್ಲ ಚನ್ನ. ಆದರೆ ತನ್ನ ಮನಸ್ಸು ಮಾತ್ರ ಸತ್ಯಳನ್ನೇ ಬಯಸುತ್ತದೆ. ಏನಿದೆ ಅವಳಲ್ಲಿ? ಓದೇ, ಬುದ್ಧಿ ವಂತಿಕೆಯೆ? ಮೀರಳೂ ಬುದ್ಧಿವಂತೆಯೇ. ಇನ್ನು ನಾಲ್ಕು ವರ್ಷದಲ್ಲಿ ಸತ್ಯ ಳಷ್ಟೇ ಓದುತ್ತಾಳೆ. ಆದರೆ ತನಗೆ ಅಷ್ಟು ಓದು ಮುಖ್ಯವಲ್ಲವೇ ಅಲ್ಲ. ಸತ್ಯಳಲ್ಲಿಲ್ಲದ ಹೆಣ್ಣುತನ, ಕೋಮಲತೆ ಇವಳಲ್ಲಿದೆ. ಕುಮುದಿನಿಯ ಥರದವಳು ಇವಳು. ಆದರೆ ನನ್ನ ಮನಸ್ಸು ಯಾಕೆ ಅವಳನ್ನೇ ನೆನಸಿಕೊಳ್ಳುತ್ತಿದೆ? ಅವಳನ್ನು ಮರೆತರೆ ಮೋಹನದಾಸನನ್ನು ಮರೆಯಬಹುದು. ಆದರೆ ಅವಳನ್ನು ಮರೆಯು ವುದೇ ಸಾಧ್ಯವಾಗದೆ ಅವನು ಹಗಲು ರಾತ್ರಿ ನಿದ್ರೆ ಕಾಣದೆ ಕೊರಗುತ್ತಿದ್ದ.

೫

ಎದುರಿಗೆ ಸಿಕ್ಕಿ, ತಾನು ಮಾತನಾಡಿಸಿದರೂ ಸುಮ್ಮನೆ ಹೋದ ಶ್ರೀನಿವಾಸನ ಬಗೆಗೆ ಮೋಹನದಾಸನಿಗೆ ವಿಸ್ಮಯವಾದುದು ಮಾತ್ರವಲ್ಲ, ಬೇಸರವೂ ಆಯಿತು.

ಅವನು ಇದುವರೆಗೂ ಶ್ರೀನಿವಾಸನೊಡನೆ ಮಾತನಾಡಿರಲಿಲ್ಲ. ಸತ್ಯ ಹೇಳಿ ವಾದಿಸಿದಳೆಂದು ತನ್ನ ತಂಗಿ ಅವನನ್ನು ಮದುವೆಯಾಗಲು ಅವನು ಒಪ್ಪಿದ್ದ. ತಾನಾಗಿಯೇ ಎರಡು ಸಲ ಅವನ ಮೋಟಾರ್ ಆಫೀಸಿಗೆ ಹೋಗಿಯೂ ಇದ್ದ. ಆದರೆ ಅವನು ಇರಲಿಲ್ಲ.

ಮನೆಗೆ ಬಂದು ನೋಡಿದರೆ ಸತ್ಯ ಮಂಕಾಗಿದ್ದಳು. ಅವನಿಗೂ ಇವಳಿಗೂ ಏನೋ ಮಾತು ನಡೆದಿದೆ ಎಂದು ಊಹಿಸಿಕೊಳ್ಳುವುದು ಕಷ್ಟವಾಗಲಿಲ್ಲ. ಏನು ಸಮಾಚಾರವೆಂದು ತಾನಾಗಿಯೇ ಕೇಳಲು ಮನಸ್ಸಾಗದೆ ಅವನು ಸುಮ್ಮನೆ ಕೂತುಕೊಂಡ. 'ಒಂದು ನಿಮಿಷ' – ಎಂದು ಹೇಳಿದ ಅವಳು ಅಡುಗೆಯ ಕೋಣೆಗೆ ಹೋಗಿ, ಒಲೆಯ ಮೇಲಿದ್ದ ಅಡುಗೆಯನ್ನು ನೋಡತೊಡಗಿದಳು.

ಮೋಹನದಾಸ ಕುಳಿತಲ್ಲಿಂದ ಹೇಳಿದ: 'ನಿಮ್ಮ ಪುಸ್ತಕ ಭಾಳ ಕೆಲಸ ಮಾಡಿದೆ. ತುಂಬ ಚೆನ್ನಾಗಿದೆ, ಜೋರಾಗಿದೆ, ಹಾಗೆಯೇ ಮಾಡಬೇಕು ಅಂತ ನಮ್ಮ ಜಾತಿಯ ಎಷ್ಟೋ ಜನ ಕಾಗದ ಬರೀತಿದಾರೆ. ಇನ್ನೂ ಎಷ್ಟೋ ಜನ ನಮ್ಮ ಸಂಘಕ್ಕೆ ಮೆಂಬರಾಗಿದಾರೆ. ಈಗ ನಮ್ಮ ಪ್ಲಾನಿಗೆ ಒಂದು ಸ್ಪಷ್ಟರೂಪ ಕೊಟ್ಟಿದೀವಿ.'

'ಏನು?' – ಅವಳು ಒಳಗಿನಿಂದ ಕೇಳಿದಳು.

'ಇನ್ನು ಒಂದು ತಿಂಗಳಿಗೆ ದಸರಾ ರಜ ಬರುತ್ತಲ. ಆಗ ನಮ್ಮ ಜಾತಿ ವಿದ್ಯಾರ್ಥಿಗಳನ್ನ ಪ್ರತಿಯೊಂದು ಮುಖ್ಯ ದೇವಸ್ಥಾನಕ್ಕೂ ಗುಂಪು ಮಾಡಿ ಕರ್ಕೊಂಡು ಹೋಗೂದು. ಇಪ್ಪತ್ತು ದಿನ ರಜ ಇರುತ್ತೆ. ಪ್ರತಿದಿನ ಅವರಿಗೆ ಬೇರೆ ಕೆಲಸ ಇಲ್ಲ: ಬೆಳಗ್ಗೆ ಸಾಯಂಕಾಲ ಪೂಜೆ ಕಾಲದಲ್ಲಿ ಗುಡಿಗೆ ಹೋಗೂದು. ಊದುಗಡ್ಡಿ ಹಣ್ಣು ಕಾಯಿ ಮಾಡಿಸಿ, ಪೂಜೆ ಮುಗಿಯೂತಂಕ ಅಲ್ಲೇ ನಿಂತಿರೂದು. ಅಂದ್ರೆ ಮೇಲಿನ ಜಾತಿಯೋರು ಬೇಕಾದ್ರೆ ನಮ್ಮ ಜೊತೆ ಗುಡಿಗೆ ಬರಬಹುದು. ಇಲ್ಲದಿದ್ದರೆ ಹೊರಗೇ ಇರಬಹುದು.'

'ಪ್ಲಾನು ಚನ್ನಾಗಿದೆ. ಊರಿನೋರು ಗಲಾಟೆ ಮಾಡುಲ್ಲವೆ? ಹೊಡೆದಾಟ ಬಡಿದಾಟ ಆದರೆ ನೀವು ಹೆಚ್ಚು ಸಂಖ್ಯೆಯಲ್ಲಿಲ್ಲ.'

'ಅದೇ ಯೋಚನೆ ಮಾಡಿದೀವಿ. ನಾವು ಹೀಗೆ ಮಾಡೋದು. ಅವಕ್ಕೆ ಸರ್ಕಾರದೋರು, ಮುಂದುವರಿದ ಮನೋಭಾವದ ಜನ ಅಂದುಕೊಳ್ಳೊ ಅಸೆಂಬ್ಲಿ ಮೆಂಬರುಗಳು ಏನು ಸಹಕಾರ ಕೊಡ್ತಾರೆ ಅಂತ ಚಳವಳಿ ಶುರು ಮಾಡ್ತೀವಿ. ನಾಳೆ ಪೇಪರಿನಲ್ಲಿ ಅದು ಬರುತ್ತೆ. ಎರಡು ಪೇಪರಿನೋರು ಇದಕ್ಕೆ ಬೇಕಾದ ಪ್ರಚಾರ ಕೊಡ್ತೀವಿ ಅಂತ ಒಪ್ಕಂಡಿದಾರೆ. ನಾಳೆ ಒಂದು ಪ್ರತಿನಿಧಿ ಮಂಡಲ ಮಾಡಿಕೊಂಡು ಮುಖ್ಯಮಂತ್ರಿಗಳನ್ನ ಕಾಣ್ತೀವಿ. ಅವತ್ತು ಬಂದಿದ್

ರಲ, ನರಸಯ್ಯನೋರು, ಅವರೇ ಅದರ ಮುಂದಾಳು. ನಾನು ಇವತ್ತು ರಾತ್ರಿ ತುಮಕೂರು ತಲುಪಿ ನಾಳೆ ಬೆಳಗ್ಗೆ ಒಂಬತ್ತು ಗಂಟೆಗೆ ಅವರನ್ನ ಬೆಂಗಳೂರಿನಲ್ಲಿ ಸೇರ್ಕತ್ತೀನಿ.'

'ನಿಮ್ಮ ತಂದೆ ಏನಂತಾರೆ?'

"ನಮ್ಮಪ್ಪ ಸಾಯದೆ ನಾವು ಮುಂದುವರಿಯುಲ್ಲ. ನೋಡಿ, ನಮ್ಮ ಜನ ಅವನ ಮಾತು ಕೇಳ್ತಾರೆಯೇ ಹೊರತು ನನ್ನಂಥೋನ ಮಾತು ಕೇಳುಲ್ಲ. ಅವನು, 'ಇದರಿಂದ ಸುಮ್ಮನೆ ಗಲಾಟೆಯಾಗುತ್ತೆ, ಶಾಂತಿಯಿಂದ ಇರಬೇಕು' ಅಂತಾನೆ. ನಮಗೆ ಬೆಂಬಲ ಕೊಡು ಅಂತ ನೀವಾದ್ರೂ ಅವನಿಗೆ ಹೇಳ್ತೀರಾ?"

'ನನ್ನ ಮಾತು ಕೇಳ್ತಾರೇನು?'

'ಮಜ್ವೆ ವಿಷಯಕ್ಕೆ ಕೇಳ್ಲಿಲ್ವೆ? ನೀವು ಅಂದ್ರೆ ಗುರುಸಮಾನ ಅವನಿಗೆ.'

'ಯಾಕೆ, ಬ್ರಾಹ್ಮಣರೋಳು ಅಂತಲೆ?'

'ಇರಬಹುದು. ಆದರೆ ನಂಗೂ ನೀವು ಗುರುಗಳೇ.'

'ಸುಳ್ಳುಪಟ್ಟ ನಂಗೆ ಬ್ಯಾಡ. ನಿಮ್ಮ ಕೆಲಸ ನೀವು ಮಾಡಿ' – ಎಂದು ಅವಳು ಉರಿಯನ್ನು ಸಣ್ಣಗೆ ಮಾಡಿದಳು.

'ಸತ್ಯ, ನಿಜ ಹೇಳ್ತಿದೀನಿ....' – ಎಂದು ಅವನು ಮುಂದೆ ಹೇಳುತ್ತಿರುವಂತೆ ಅವಳಿಗೆ ಆಶ್ಚರ್ಯವಾಯಿತು. ಅವನು ಇದುವರೆಗೆ ಎಂದೂ ತನ್ನನ್ನು ಹೀಗೆ 'ಸತ್ಯ' ಎಂದು ಕೂಗಿರಲಿಲ್ಲ. ಈ ಅನಾವಶ್ಯಕ ಸಂಬೋಧನೆಯ ಭಾವ ಅವಳಿಗೆ ಅರ್ಥವಾಯಿತು. ಆದರೆ ತನ್ನ ಪಾಡಿಗೆ ತಾನು ಸುಮ್ಮನಿದ್ದಳು. ಈಗ ಸ್ವಲ್ಪ ಹೊತ್ತಿನಲ್ಲಿ ತಾನೇ ಬಂದು ಹೋದ ಶ್ರೀನಿವಾಸನ ನೆನಪಾಯಿತು ಅವಳಿಗೆ.

ಮೋಹನದಾಸ ಹೇಳಿದ: '....ನಿಜ ಹೇಳ್ತಿದೀನಿ. ನಾಳೆಯಿಂದ ನಾನು ಖಚಿತವಾದ ಕೆಲಸಮಾಡ್ತೀನಿ. ನಿಜವಾದ ಕ್ರಾಂತಿಯ ಆರಂಭ. ನಮಗೆ ಪ್ರತಿ ದೇವಸ್ಥಾನಕ್ಕೂ ಪೋಲೀಸ್ ಕಾವಲು ಕೊಡಬೇಕು ಅಂತ ಮುಖ್ಯ ಮಂತ್ರಿಗಳನ್ನ ಕೇಳ್ತೀವಿ. ಕೊಡುಲ್ಲ ಅನ್ನೂ ಹಾಗಿಲ್ಲ. ಎಲ್ಲಾನೂ ಪತ್ರಿಕೇಲಿ ಪ್ರಚಾರ ಮಾಡ್ತೀವಿ. ದಸರಾ ಕಳೆಯೂ ತನಕ ದಿನಾ ಪ್ರವೇಶ ಮಾಡಿಸಿ ಆಮೇಲೆ ನಿಲ್ಲಿಸೂದಲ್ಲ. ಊರಿನಲ್ಲಿ ಪ್ರತಿದಿನ ಒಂದೊಂದು ಹರಿಜನ ಸಂಸಾರದೋರೂ ಆಮೇಲೆ ಸರದಿ ಮಾಡ್ಕಂಡು, ದಿನಾ ಬೆಳಗ್ಗೆ ಸಂಜೆ ಗುಡಿಗೆ ಹೋಗಿ ಎರಡೆರಡು ಗಂಟೆ ಒಳಗೆ ನಿಂತಿದ್ದು ಊದುಬತ್ತಿ ಹಚ್ಚಿಸಿ ಬರಬೇಕು ಅಂತ ತೀರ್ಮಾನ ಮಾಡ್ತೀವಿ. ಅಂದ್ರೆ ನಮ್ಮ ಜನದಲ್ಲಿ ನಿಜವಾದ ಬದಲಾವಣೆಯ ಮನೋಭಾವ ಹುಟ್ಟುಕ್ಕೆ ಇದು ಪ್ರಾರಂಭ. ಮೇಲುಜಾತಿಯೋರು ಸುಮ್ಮನೆ ಒಪ್ಪಿಕೊಂಡ್ರೋ, ಸರಿ. ಆದರೆ ಒಪ್ಪಿಕೊಳ್ಳೂದಿಲ್ಲ. ಕ್ರಾಂತಿ, ನಿಜವಾದ ಕ್ರಾಂತಿಮಾರ್ಗವನ್ನೇ

ನಾವು ಹಿಡೀತೀವಿ. ನಮ್ಮ ಜನಾನ ರೊಚ್ಚಿಗೇಳಿಸುವುದು ಮೊದಲ ಕೆಲಸ. ಇದರಲ್ಲಿ ನಾವು ಖೂನಿ ಮಾಡಬಹುದು, ಬೆಂಕಿ ಹೊತ್ತಿಸಬಹುದು, ಬೇಕಾದ್ದು ಮಾಡಬಹುದು. ನಾಳೆ ಆರಂಭ ದಿನ. ಅದಕ್ಕೆ ಮೊದಲು ಇವತ್ತು ನಿಮ್ಮನ್ನ ನೋಡಿ ಹೋಗಬೇಕು ಅನ್ನಿಸ್ತು. ನಾಳೆ ಬೆಂಗಳೂರಿಗೆ ಹೋಗೂ ಕೆಲಸ ಇಟ್ಕಂಡು ಇವತ್ತು ಊರಿಗೆ ಬರುಕ್ಕೆ ಟೈಂ ಎಲ್ಲಿದೆ? ಆದರೂ ಬಂದೆ ಸತ್ಯ, ನಿಮ್ಮನ್ನ ನೋಡುಕ್ಕೆ ಅಂತ.'

ಸತ್ಯ ಯಾವ ಮಾತೂ ಆಡಲಿಲ್ಲ. ಅಡಿಗೆ ಮುಗಿದಿದ್ದರೂ ಒಳಗೇ ಕೂತು ಯಾವುದೋ ಎರಡು ಪಾತ್ರೆಗಳನ್ನು ತೊಳೆಯಲು ಆರಂಭಿಸಿದಳು. ಮೋಹನದಾಸ ಹತ್ತು ನಿಮಿಷ ಸುಮ್ಮನೆ ಕುಳಿತಿದ್ದ. ಅನಂತರ, 'ನಾಳೆ ಮುಖ್ಯಮಂತ್ರಿಗಳನ್ನ ಕಾಣುಕ್ಕೆ ಬಾ ಅಂತ ಅಪ್ಪನಿಗೆ ಒಂದು ವಾರದ ಹಿಂದೆಯೇ ಹೇಳಿದೆ. ಈ ಮಾರ್ಗ ಜ್ಯಾಡ ಅಂದನೇ ಹೊರತು ಒಪ್ಕಳ್ಳಿಲ್ಲ. ಅವನಿಗೆ ನೀವು ಹೇಳಿ ಒಪ್ಪಿಸ್ತೀರಾ? ನಮ್ಮ ಜಾತಿ ಅಸೆಂಬ್ಲಿ ಮೆಂಬರ ಪೈಕಿ ಇಬ್ಬರು ಇದಕ್ಕೆ ಸೇರಿದಾರೆ. ಇನ್ನೊಂದು ನಾಲ್ಕು ಜನ ಸೇರಿದರೆ ಬಲ ಜಾಸ್ತಿ. ಇವನೊಬ್ಬನಾದರೂ ಸೇರಿದರೆ ಎಷ್ಟೋ ಚನ್ನ.'

'ನಾನು ಬೇಕಾದರೆ ನಿಮ್ಮ ಮನೆಗೆ ಹೋಗಿ ಮಾತಾಡ್ತೀನಿ. ಆದರೆ ನಿಮ್ಮ ಖೂನಿ, ಬೆಂಕಿಯ ಕ್ರಾಂತಿ ನನಗೆ ಒಪ್ಪಿಗೆಯಿಲ್ಲ. ನಿಮ್ಮ ತಂದೆಯ ಸ್ವಭಾವ ನಂಗೆ ಗೊತ್ತಿದೆ. ಯಾವ ಮಟ್ಟಕ್ಕೆ ನೀವು ನಿಲ್ತೀರ ಅಂತ ಗೊತ್ತಾದ್ರೆ ಅವರ ಕೈಲಿ ಚರ್ಚೆ ಮಾಡೂದು ಸುಲಭ.'

'ನಾಳೆ ಅವನು ಬಂದು, ದಿನಾ ಗುಡಿಗೆ ಹೋಗೂಕ್ಕೆ ಪೋಲೀಸಿನೋರ ಸಹಾಯ ಕೊಡಿಸೂ ಹಾಗೆ ಮಾತಾಡಿದರೆ ಸಾಕು. ಇಲ್ಲದೆ ಇದ್ದರೆ ಸಾರ್ವಜನಿಕ ಶಾಂತಿಗೆ ಭಂಗ ಬರುತ್ತೆ ಅಂತ ಕಾರಣ ಹಾಕಿ ಮಂತ್ರಿಗಳು ತಪ್ಪಿಸಿಕೊಬಹುದು.'

'ಇಷ್ಟೇ ಆದರೆ ನಾನು ಮಾಡ್ತೀನಿ' – ಎಂದು ಅವಳು ಒಪ್ಪಿಕೊಂಡಳು.

ಅಡಿಗೆಯಾಗಿತ್ತು. ಆದರೆ 'ಊಟ ಮಾಡಿ' ಎನ್ನಲು ಅವಳಿಗೆ ಮನಸ್ಸಾಗಲಿಲ್ಲ. ಈ ದಿನ ಅವನು ಎರಡು ಸಲ ಸೂಚ್ಯವಾಗಿ ವ್ಯಕ್ತಮಾಡಿದ ಭಾವನೆಯನ್ನು ಪ್ರೋತ್ಸಾಹಿಸುವುದು ಬೇಡ ಎಂದುಕೊಂಡಳು. ಮಧ್ಯಾಹ್ನ ಊಟದ ಸಮಯದಲ್ಲಿ ಬಂದವರನ್ನು ಕೈ ತೊಳೆದುಕೊಳ್ಳಿ ಎನ್ನುವುದಕ್ಕೆ ವಿಶೇಷ ಅರ್ಥ ಏನೂ ಇಲ್ಲ. ಆದರೆ ಇವನ ಮನಸ್ಸಿನಲ್ಲಿ ಆ ಅರ್ಥವೇ ಬೆಳೆಯುತ್ತೆ ಎಂಬ ಎಚ್ಚರವಾಯಿತು. ಸುಮ್ಮನೆ ಹೊರಗೆ ಬಂದು ಹೇಳಿದಳು: 'ಈಗ ಒಂದು ಗಂಟೇ ಸಮಯ. ಮೂರು ಗಂಟೇ ಹೊತ್ತಿಗೆ ನಿಮ್ಮ ಮನೆಗೆ ಬಂದರೆ ಆಯಿತೆ?'

'ಐದು ಗಂಟೆಗೆ ಇಲ್ಲಿಂದ ತುಮಕೂರಿಗೆ ಕೊನೆಯ ಬಸ್ಸಿದೆ. ಅದರೊಳಗೆ ಅವನು ಒಪ್ಪಿದರೆ ತುಮಕೂರಿನಿಂದ ರಾತ್ರಿಯೇ ಟ್ಯಾಕ್ಸಿ ಸಿಕ್ಕುತ್ತೆ. ಅಥವಾ ರಾತ್ರಿ ಅಲ್ಲಿ ಮಲಗಿದ್ದು ಬೆಳಗ್ಗೆ ಆರು ಗಂಟೇ ಬಸ್ಸಿನಲ್ಲಿ ಹೋಗಬಹುದು.'

'ಆಗಲಿ. ಇನ್ನು ಅರ್ಧ ಗಂಟೆಯಲ್ಲಿ ಹೊರಡ್ತೀನಿ.'

'ಸರಿ' – ಎಂದು ಹೇಳಿ ಅವನು ಹೊರಟುಹೋದ.

೬

ನಾಲ್ಕು ಕಾಗದ ಬರೆದರೂ ಶ್ರೀನಿವಾಸನಿಂದ ಉತ್ತರವಿಲ್ಲ. ಮೊದಲು ಮೂರು ನಾಲ್ಕು ದಿನಕ್ಕೊಂದು ಸಲದಂತೆ ತನ್ನನ್ನು ನೋಡಲು ಬರುತ್ತಿದ್ದವನು ಹದಿನೈದು ದಿನವಾದರೂ ಈ ಕಡೆ ತಿರುಗಿಲ್ಲ. ಮೀರಳಿಗೆ ಆತಂಕವಾಯಿತು. ಅವರು ಕಾಹಿಲೆ ಬಿದ್ದಿರಬಹುದೆಂದು ಅನುಮಾನಿಸಿದಳು. ಅವನನ್ನು ಕಾಣದೆ ದಿನಗಳನ್ನು ಮಾತ್ರವಲ್ಲ, ಗಂಟೆಗಳನ್ನು ಕಳೆಯುವುದೂ ಕಷ್ಟವಾಯಿತು. ಇಬ್ಬರೂ ಜೊತೆಯಲ್ಲಿ ತೆಗೆಸಿದ ಫೋಟೋವನ್ನು ಪುಸ್ತಕದ ಹಾಳೆಗಳ ಮಧ್ಯ ಇಟ್ಟುಕೊಂಡು ನಿರುಕಿಸುತ್ತಾ ಹೊತ್ತು ಕಳೆಯುವಳು. ಕಾಹಿಲೆ ಬಿದ್ದಿದ್ದಾರೆ. ಇಲ್ಲದಿದ್ದರೆ ಇಷ್ಟು ದಿನ ಅವರು ತಾನೆ ಹ್ಯಾಗೆ ಸುಮ್ಮನಿದ್ದಾರು? ತಾನೇ ತುಮಕೂರಿಗೆ ಹೋಗಿ ಬರುವುದೇ ಸರಿ ಎಂದು ನಿರ್ಧರಿಸಿದಳು. ನಾಳೆ ಬೆಳಗ್ಗೆ ಸ್ನಾನ ತಿಂಡಿ ಊಟ ಮಾಡಿ ಕಾಲೇಜಿಗೆ ಹೋಗುವ ಹೊತ್ತಿಗೆ ಬಸ್‌ಸ್ಟ್ಯಾಂಡಿಗೆ ಹೊರಡಬೇಕೆಂದು ತೀರ್ಮಾನಿಸಿ ಮಲಗಿಕೊಂಡಳು.

ಹೊರಡಲು ಸಿದ್ಧಳಾದಳು. ರೇಶ್ಮೆಯ ಸೀರೆಯುಟ್ಟು, ಅವನು ಮೆಚ್ಚುವಂತೆ ಹೆರಳು ಹಾಕಿಕೊಂಡಳು. ಅವಳ ರೂಮ್‌ಮೇಟ್ ಮೊದಲೇ ಹೊರಟು ಹೋಗಿದ್ದಳು. ತಾನು ಕಳಿಸಿದ ಫೋಟೋ ತಲುಪಿದೆಯೋ ಇಲ್ಲವೋ ಎಂದು ಅನುಮಾನಿಸಿ ಇನ್ನೊಂದು ಪ್ರತಿಯನ್ನು ತನ್ನ ವ್ಯಾನಿಟಿ ಚೀಲದಲ್ಲಿ ಇಟ್ಟುಕೊಂಡಳು. ಅಷ್ಟರಲ್ಲಿ ಬೆಳಗಿನ ಟಪಾಲು ಬಂತು. ಅವಳಿಗೊಂದು ಕವರು. ಶ್ರೀನಿವಾಸನದ್ದು. ವಿಶ್ವಾಸದ ಅತ್ಯಂತ ಪರಿಚಿತ ಅಕ್ಷರ. ಸಂಭ್ರಮದಿಂದ ಒಡೆದು ಓದಿದಳು. ಆದರೆ ತಲೆ ತಿರುಗಿದಂತಾಯಿತು. ಮೂರೇ ವಾಕ್ಯ ಬರೆದಿದ್ದ: 'ನನ್ನನ್ನು ಮರೆತುಬಿಡು. ನಾನು ನಿನ್ನನ್ನು ಮದುವೆಯಾಗುವುದು ಸಾಧ್ಯವಿಲ್ಲ. ಸಾಯುವತನಕ ನಾನು ಒಂಟಿಯಾಗಿರುತ್ತೇನೆ.' ಇದನ್ನು ಅವನು ಬರೆದಿಲ್ಲ ಎಂಬ ಅನುಮಾನವನ್ನು ತಂದುಕೊಂಡು ಅವಳು ಖಾತರಿಸಿಕೊಂಡಳು. ಆದರೆ ಅಕ್ಷರ ಅವನದೇ. ಸ್ವಲ್ಪ ಗೀಚಿದಂತಿದೆ. ಹಿಂದೆ ಅವನು ಬರೆದಿದ್ದ ಕಾಗದಗಳ ಕಟ್ಟಿನಿಂದ ಎರಡನ್ನು

ತೆಗೆದು ಹಿಡಿದುಕೊಂಡು ಇದರೊಡನೆ ಹೋಲಿಸಿದಳು. ಅವನದೇ ಅಕ್ಷರ.

ದಿಗ್ಭ್ರಮೆಯಾದಂತಾಗಿ ಅವಳಿಗೆ ಏನೂ ತಿಳಿಯಲಿಲ್ಲ. ಐದು ನಿಮಿಷ ಗರ ಬಡಿದವಳಂತೆ ಮಂಚದ ಮೇಲೆ ಕುಳಿತಳು. ಅನಂತರ ಒಳಗಿನಿಂದ ಅಳು ತಳ್ಳಿಕೊಂಡು ಬಂತು. ದಿಂಬಿಗೆ ಮುಖಕೊಟ್ಟು ಬಿಕ್ಕಿ ಬಿಕ್ಕಿ ಅತ್ತಳು. ದಿಂಬಿನ ಮೇಲ್ಭಾಗವೆಲ್ಲ ತೋಯ್ದು ಒದ್ದೆಯಾಯಿತು. ಯಾಕೆ ಹೀಗೆ ಬರೆದಿದ್ದಾರೆ ಎಂದು ಯೋಚಿಸುವುದಕ್ಕೂ ಬುದ್ಧಿಗೆ ತ್ರಾಣವಿಲ್ಲದಂತೆ ಆಗಿತ್ತು. ಅಳು ಮತ್ತೆ ಮತ್ತೆ ಒತ್ತಿಕೊಂಡು ಬರುತ್ತಿತ್ತು. ಗಟ್ಟಿಯಾಗಿ ಶಬ್ದ ಮಾಡಬಾರದೆಂದು ಕೋಣೆಯ ಬಾಗಿಲಿಗೆ ಬೋಲ್ಟು ಹಾಕಿಕೊಂಡು, ಹಿಡಿದು ಹಿಡಿದು ಅಳುತ್ತಿದ್ದಳು. ಹತ್ತು ನಿಮಿಷದಲ್ಲಿ ಒಂದು ಪೂರ ಕಳೆಯುತ್ತಿತ್ತು. ಮತ್ತೆ ಕಾಲು ಗಂಟೆ ಅರ್ಧ ಗಂಟೆ ಏನೂ ತಿಳಿಯದ ಅರೆಸ್ಮೃತಿಯ ಸ್ಥಿತಿ. ಅನಂತರ ಹಿಂದಿನ ಸಲಕ್ಕಿಂತ ಹೆಚ್ಚು ಬಿಸಿಯ ಕಣ್ಣೀರು ನುಗ್ಗಿಬರುತ್ತಿತ್ತು. ಮತ್ತೆ ದಿಂಬಿಗೆ ಮುಖ ಕೊಡುತ್ತಿದ್ದಳು.

ಸಂಜೆ ಐದು ಗಂಟೆಗೆ ರೂಮ್‌ಮೇಟ್ ಬಂದು ಬಾಗಿಲು ಬಡಿದಾಗ ಎದ್ದು ಬೋಲ್ಟು ತೆಗೆದಳು. ಮಾಂಸದ ಒಂದು ಮುದ್ದೆಯಂತಾಗಿ ಜಿನುಗುತ್ತಿದ್ದ ಅವಳ ಮುಖವನ್ನು ಕಂಡೇ ರೂಮ್‌ಮೇಟ್ ಪಾರ್ವತಿಗೆ ಗಾಬರಿಯಾಯಿತು. 'ಮೀರಾ, ಏನು ಸಮಾಚಾರ?' ಎಂದು ಅವಳ ಕೈ ಹಿಡಿದಳು. ಮಂಚದ ಮೇಲೆ ಬಿಚ್ಚಿ ಹಾಕಿದ್ದ ಶ್ರೀನಿವಾಸನ ಕಾಗದದ ಕಡೆಗೆ ಕೈ ತೋರಿಸಿ, ಮೀರಾ ಇನ್ನೊಂದು ಸಲ ಕಣ್ಣಿನಲ್ಲಿ ನೀರು ತುಂಬಿಕೊಂಡು ಬಿಕ್ಕಿದಳು. ಅವಳ ವಿಷಯವೆಲ್ಲ ಪಾರ್ವತಿಗೆ ಗೊತ್ತು. ಬಿ.ಎಸ್‌ಸಿ.ಯಲ್ಲಿ ಓದುತ್ತಿದ್ದ ಪಾರ್ವತಿ ಗೌಡರವಳು. ತಮ್ಮ ಜಾತಿಯ ಒಬ್ಬರೇ, ಅದರಲ್ಲೂ ಮಂತ್ರಿಗಳ ಮಗ, ಮೀರಾಳನ್ನು ಮದುವೆಯಾಗುವ ಸುದ್ದಿ ತಿಳಿದು ಅವಳು ಸಂತೋಷಪಟ್ಟಿದ್ದಳು. ಉಳಿದ ಹುಡುಗಿಯರು ಮೀರಾಳೊಡನೆ ವರ್ತಿಸುವಾಗ ಅವಳು ಹರಿಜನದವಳೆಂದು ಒಳಗೊಳಗೇ ಹಿಡಿತ ಮಾಡುತ್ತಿದ್ದರೂ, ಪಾರ್ವತಿ ಎಂದೂ ಹಾಗೆ ಮಾಡಿರಲಿಲ್ಲ. ತಾನೇ ಅವಳನ್ನು ಕೇಳಿ ತನ್ನ ರೂಮಿನ ಜೊತೆಗಾತಿಯಾಗಿ ಹಾಕಿಸಿಕೊಂಡಿದ್ದಳು. ಶ್ರೀನಿವಾಸನ ಕಾಗದವನ್ನು ಓದಿದ ಅವಳೂ ತಬ್ಬಿಬ್ಬಾದಳು. ಯಾಕೆ ಹೀಗೆ ಬರೆದಿದ್ದಾರೆ, ಮನೆಯಲ್ಲಿ ಒಪ್ಪಲಿಲ್ಲವೇ, ಎಂದು ಮುಂತಾಗಿ ಮೀರಾಳನ್ನೇ ಕೇಳಲು ಆರಂಭಿಸಿದಳು. ಮೀರಳ ಬುದ್ಧಿ ಸ್ವಲ್ಪ ಪ್ರಚೋದಿತವಾಯಿತು. ಯೋಚಿಸತೊಡಗಿದಳು.

"ತಂದೆ ತಾಯಿ ಒಪ್ಪೂದು ಸಾಧ್ಯವಿರಲಿಲ್ಲ. ರಿಜಿಸ್ಟರ್ ಮ್ಯಾರೇಜ್ ಮಾಡ್ಕಳಾಣ ಅಂತ ಅವರೇ ಅಂದಿದ್ದರು. ನಾನೇ ಮಂತ್ರೋಕ್ತ ಮಾಡ್ಕಬೇಕು ಅಂತಿದ್ದೆ. 'ತಂದೆಗೆ ಕಾಗದ ಬರೆದು ತಿಳುಸ್ತೀನಿ. ಮೊದಲು ಬೈಯ್ತಾರೆ. ಆ ಮೇಲೆ ದಾರಿಗೆ ಬಂದರೆ ಸರಿ. ಇಲ್ಲದಿದ್ದರೆ ರಿಜಿಸ್ಟರೇ ಮಾಡ್ಕಳಾದು. ಮಂತ್ರ

ಗಿಂತ್ರ ಬೇಕಾದರೆ ಆಮೇಲೆ ಶಾಸ್ತ್ರ ಮಾಡ್ಕಳಾಣ' ಅಂದಿದ್ರು."

'ಹಾಗಾದರೆ ತಂದೆ ಬಲಾತ್ಕಾರ ಮಾಡಿರಬಹುದು. ಅವರ ಮನಸ್ಸು ಬದಲಾಯಿಸಿರಬಹುದು.'

'ತಂದೆ ಬಲಾತ್ಕಾರ ಮಾಡಿರ್ತಾರೆ ಅನ್ನೂದು ನಿಜ. ಅವರ ಮನಸ್ಸು ಬದಲಾಯಿಸ್ತಾರೆ ಅಂತ ನಂಬೂದು ಸಾಧ್ಯವೇ ಇಲ್ಲ.'

'ಸಾಧ್ಯವೇ ಇಲ್ಲ ಅಂತ ಹ್ಯಾಗೆ ಹೇಳ್ತೀಯ?'

'ನನ್ನ ಮನಸ್ಸಿಗಿಂತ ಬೇರೆ ಸಾಕ್ಷಿ ಬೇಡ' – ಎನ್ನುತ್ತಾ ಅವಳು ಮತ್ತೆ ದಿಂಬಿಗೆ ಮುಖ ಕೊಟ್ಟಳು.

'ಅಳಬೇಡ. ಇದಕ್ಕೆ ಏನಾದರೂ ಉಪಾಯವಿದೆ' – ಎಂದು ಪಾರ್ವತಿ ಅವಳ ಬೆನ್ನನ್ನು ಸವರುತ್ತಾ ಸಮಾಧಾನ ಹೇಳಿದಳು.

ಮೀರಾ ರಾತ್ರಿ ಊಟ ಮಾಡಲಿಲ್ಲ. ಪಾರ್ವತಿ ಎಷ್ಟು ಬಲವಂತ ಮಾಡಿದರೂ ಕೇಳಲಿಲ್ಲ. ರಾತ್ರಿ ಮಲಗಿದ ಮೇಲೆ ಪಾರ್ವತಿ ಎಂದಳು: 'ನನ್ನ ಕೇಳಿದರೆ ನೀನು ನಾಳೆ ಬೆಳಗ್ಗೆ ತುಮಕೂರಿಗೆ ಹೋಗು. ಯಾಕೆ ಹೀಗೆ ಬರೆದಿರಿ ಅಂತ ಕೇಳು. ಯಾವುದೋ ಬೇಜಾರಿನಲ್ಲಿ, ಏನೋ ನಿರಾಶೆಯ ಮೂಡ್‌ನಲ್ಲಿ ಬರೆದಿರೂ ಹಾಗಿದೆ. ನಿನ್ನ ಮುಖ ಕಂಡ್ರೆ ಆ ಮೂಡ್ ಹೋಗುತ್ತೆ. ಬೇಕಿದ್ರೆ ಅವರನ್ನ ಇಲ್ಲಿಗೇ ಕರ್ಕಂಡು ಬಾ.'

ಈ ಸಲಹೆ ಮೀರಾಳಿಗೂ ಹಿಡಿಯಿತು. ಬೆಳಗ್ಗೆ ಮೊದಲ ಬಸ್ಸಿಗೆ ಹೊರಡುವುದಾಗಿ ನಿಶ್ಚಯಿಸಿಕೊಂಡಳು. ರಾತ್ರಿ ಇಡೀ ನಿದ್ರೆ ಹೊತ್ತಲಿಲ್ಲ. ಬೆಳಗ್ಗೆ ಐದು ಗಂಟೆಗೆ ಎದ್ದು ಮುಖ ತೊಳೆದು, ನೆನ್ನೆ ಉಟ್ಟ ಬಟ್ಟೆಯಲ್ಲೇ ಅವಳು ಹೊರಟು ನಿಂತಾಗ ಪಾರ್ವತಿ, 'ಹೀಗೆ ಹೋಗಬಾರದು. ಸರಿಯಾಗಿ ಬೇರೆ ಸೀರೆ ಉಟ್ಟು ತಲೆ ಬಾಚಿಕೊಂಡು ಹಣೆಗೆ ಕುಂಕುಮ ಇಟ್ಕೊ' ಎಂದಳು.

'ನನಗೆ ಎಂಥದೂ ಬ್ಯಾಡ.'

'ಚಿಲಿ. ನಿನಗೆ ದುಃಖ, ಆತಂಕ ಇದೆ. ಹಾಗಂತ ಗಂಡನ ಎದುರಿಗೆ ಒಡ್ಡೊಡ್ಡಾಗಿ ಬಟ್ಟೆ ಹಾಕ್ಕಂಡು ಹೋಗಬಾರದು. ನಾನು ಹೇಳಿದ ಹಾಗೆ ಕೇಳು' – ಎಂದು ತಾನೇ ಮೀರಾಳ ಪೆಟ್ಟಿಗೆ ತೆಗೆದು, ಶ್ರೀನಿವಾಸನೇ ತೆಗೆದು ಕೊಟ್ಟಿದ್ದ ಹಾಲ್ಗೆನೆ ಬಣ್ಣದ ಸೀರೆ, ಅದಕ್ಕೆ ಹೊಂದುವ ರವಿಕೆಗಳನ್ನು ತೆಗೆದು ಕೊಟ್ಟು, ತಾನೇ ಅವಳ ತಲೆ ಬಾಚಿ ಜಡೆ ಹಾಕಿದಳು. ಬಸ್‌ಸ್ಟ್ಯಾಂಡಿಗೆ ಜೊತೆಯಲ್ಲಿ ಬಂದು, ಅಲ್ಲಿ ಸಿಕ್ಕಿದ ಹೂವಿನ ದಂಡೆ ಕೊಂಡು ಅವಳ ತಲೆಗೆ ಮುಡಿಸಿ ಹೇಳಿದಳು: "ನಾನೇ ಜೊತೆಗೆ ಬರ್ತಿದ್ದೆ. ಆದರೆ ನಾನು ಬಂದ್ರೆ ಕೆಲಸಕ್ಕೆ ಸಹಾಯವಾಗುಲ್ಲ. ವೈಜಯಂತಿಮಾಲಳ್ಹಾಗೆ ಆಗಿದೀಯ ಈ ಸೀರೆ ಉಟ್ಕಂಡು.

ಜೊತೇಲಿ ಬೇರೆಯೋರಿರಬಾರದು. ನೋಡಿದ ತಕ್ಷಣ ನಿನ್ನ ಗಂಡು, 'ಆ ಕಾಗದ ಬರೆದದ್ದು ತಪ್ಪಾಯ್ತು. ಸಾರಿ. ಮುಂದೆ ನೀನು ಹೇಳಿದ ಹಾಗೆ ಕೇಳ್ತೀನಿ' ಅನ್ನುತ್ತೆ. ಹೋಗಿ ಬಾ" – ಎಂದು ಬಸ್ಸಿನಲ್ಲಿ ಕೂರಿಸಿದಳು.

ರಿಸರ್ವೇಶನ್ ಇಲ್ಲದೆಯೂ ಮೊದಲ ಎಕ್ಸ್‌ಪ್ರೆಸ್ ಬಸ್ಸಿನಲ್ಲಿ ಜಾಗ ಸಿಕ್ಕಿತು. ಹೋದ ಕೆಲಸ ಆಗಿಯೇ ಆಗುತ್ತೆ. ಯಾವುದೋ ಬೇಜಾರಿನಲ್ಲಿ ಅವರು ಬರೆದಿದಾರೆ. ಪಾರ್ವತಿಯ ಮಾತು ನಿಜ ಎಂದು ಭರವಸೆಯನ್ನೇ ಗಟ್ಟಿಯಾಗಿ ಹಿಡಿದುಕೊಂಡು ಮೀರಾ ನಿಮಿಷ ನಿಮಿಷಕ್ಕೂ ಗೆಲುವನ್ನು ರೂಢಿಸಿಕೊಳ್ಳುತ್ತಾ, ಇನ್ನು ತುಮಕೂರು ಎಷ್ಟು ಮೈಲಿ ಹತ್ತಿರ ಬರುತ್ತಿದೆ, ತಲುಪಲು ಎಷ್ಟು ನಿಮಿಷ ಕಡಿಮೆಯಾಗುತ್ತಿದೆ ಎಂಬುದನ್ನು ಲೆಕ್ಕ ಹಾಕುತ್ತಿದ್ದಳು. ಬೆಳಗಿನ ಹೊತ್ತು ತಾನು ಬಸ್‌ಸ್ಟ್ಯಾಂಡಿನಲ್ಲಿ ಇರುವುದಾಗಿ ಅವರು ಹೇಳಿದ್ದುದು ನೆನಪಿಗೆ ಬಂತು. ಎಂಟೂವರೆ ಗಂಟೆಗೆ ತುಮಕೂರು ಮುಟ್ಟಿದಾಗ, ಖಾಸಗಿ ಬಸ್ಸುಗಳು ನಿಲ್ಲುವ ಜಾಗಕ್ಕೆ ಹೋಗಿ ಸುತ್ತಲೂ ನೋಡಿದಳು. ಎಸ್. ಎಸ್. ಎಂ. ಎಸ್. ಎಂಬ ಬೋರ್ಡಿನ ಒಂದು ಬಸ್ಸಿನ ಹತ್ತಿರ ಹೋಗಿ, 'ಶ್ರೀನಿವಾಸಗೌಡರು ಎಲ್ಲಿದಾರೆ?' – ಎಂದು ಕಂಡಕ್ಟರನ್ನು ಕೇಳಿದಳು.

'ರೂಮಲ್ಲಿ ಮಲಗಿರ್ತಾರೆ' – ಎಂದು ಉತ್ತರ ಕೊಟ್ಟ ಅವನು ಇವಳನ್ನು ಕುತೂಹಲದಿಂದ ನೋಡಿದ. ಆದರೆ ಅವಳು ಅದನ್ನು ಗಮನಿಸಲಿಲ್ಲ. ಅವನ ಆಫೀಸು ಬಸ್‌ಸ್ಟ್ಯಾಂಡಿಗೆ ಹತ್ತಿರದಲ್ಲೇ ಇತ್ತು. ಅದನ್ನು ಅವಳು ನೋಡಿದ್ದಳು. ಆ ಕೋಣೆಗೆ ಹೊಂದಿಕೊಂಡು ಒಳಭಾಗದಲ್ಲಿ ಅವರ ಕೋಣೆ. ಹಸಿರು ಬಣ್ಣದ ಬಾಗಿಲು, ಮಧ್ಯಕ್ಕೆ ಹಾಕುವ ಬಿಳೀ ಅಗಳಿಯ ಬೀಗದ ಕೊಂಡಿ, ಎಂಬ ವಿವರಗಳನ್ನು ಅವನೇ ಹೇಳಿದ್ದ. ನಡೆದುಕೊಂಡು ನೇರವಾಗಿ ಕೋಣೆಯ ಬಾಗಿಲಿಗೆ ಹೋದಳು. ಒಳಗಿನಿಂದ ಬೋಲ್ಟ್ ಹಾಕಿಕೊಂಡಿತ್ತು. ಒಂದು ಸಲ ತಟ್ಟಿದಳು. ಉತ್ತರ ಬರಲಿಲ್ಲ. ಮತ್ತೊಂದು ಸಲ ತಟ್ಟಿದಳು. ಒಂದು ನಿಮಿಷದ ನಂತರ ಜೋರಾಗಿ ಆರೇಳು ಸಲ ಬಡಿದಳು. 'ಯಾರು?' – ಎಂದದ್ದು ಕೇಳಿಸಿತು. 'ನಾನು' – ಎಂದಳು. ಒಂದು ನಿಮಿಷದ ನಂತರ ಅವನು ಬಾಗಿಲು ತೆಗೆದ. ಅವಳು ತಕ್ಷಣ ಒಳಗೆ ಹೋದಳು. ಕಿಟಕಿಗಳನ್ನೆಲ್ಲ ಹಾಕಿತ್ತು. ಹೊರಗಿನಿಂದ ತಕ್ಷಣ ಬಂದದ್ದರಿಂದ ಒಳಗೆ ಏನೂ ಕಾಣಲಿಲ್ಲ. ಗಬ್ಬು ವಾಸನೆ ಮಾತ್ರ ಮೂಗಿಗೆ ಬಡಿಯುತ್ತಿತ್ತು. ಅರ್ಧ ನಿಮಿಷದಲ್ಲಿ ದೃಷ್ಟಿ ತಿಳಿಯಾಯಿತು. ಬಾಗಿಲಿನಿಂದ ಬರುತ್ತಿದ್ದ ಬೆಳಕಿನಲ್ಲಿ, ಮುಚ್ಚಿದ್ದ ಕಿಟಕಿಗಳು ಕಾಣಿಸಿದುವು. ಹೋಗಿ ಎರಡು ಕಿಟಕಿಗಳನ್ನೂ ತೆಗೆದಳು. ಮಂಚದ ಮೇಲೆ ಕುಳಿತಿದ್ದ ಶ್ರೀನಿವಾಸ ಬೆಳಕಿಗೆ ಕಣ್ಣನ್ನು ಸಂಕುಚಿಸಿಕೊಂಡ. ಅವನ ಮಂಚದ ಹತ್ತಿರವೇ ಒಂದು ಮೇಜ.

ಅದರ ಮೇಲೆ ಒಂದು ದೊಡ್ಡ ಬಾಟಲು. ಒಂದು ಗ್ಲಾಸು. ಇನ್ನೊಂದು ನೀರಿನ ಚೊಂಬು. ಬಾಟಲಿಯ ಮೇಲೆ ಚಿನ್ನದ ಅಕ್ಷರಗಳಲ್ಲಿ ಮುದ್ರಿತ ಅಕ್ಷರಗಳು ಸರಿಯಾಗಿ ಓದಲು ತಿಳಿಯಲಿಲ್ಲ. ಹತ್ತಿರ ಹೋಗಿ ಕೂಡಿಸಿಕೊಂಡು ಓದಿದಳು. ವಿಸ್ಕಿ ಎಂಬ ಅಕ್ಷರಗಳು ಗೊತ್ತಾದುವು. ಅವನು ಅಮಲಿನಲ್ಲಿದ್ದಾನೆಂದು ಮುಖವೇ ಹೇಳುತ್ತಿತ್ತು. ಶೇವ್ ಮಾಡಿಕೊಂಡು ಎರಡು ಮೂರು ದಿನಗಳಾಗಿರಬಹುದು. ಕಣ್ಣು ಜ್ವರ ಬಂದವರ ಕಣ್ಣಿನಂತೆ ಕೆಂಪಗೆ ಜಿಡ್ಡು ಜಿಡ್ಡಾಗಿ ತುಂಬಿಕೊಂಡಿತ್ತು. ಅವನ ಸುತ್ತ ಗಬ್ಬು ಹೊಡೆಯುತ್ತಿತ್ತು. ಕಂಬದಂತೆ ಅವಳು ನಿಂತುಬಿಟ್ಟಳು. ಅವನೇ ಮಾತನಾಡಿಸಿದ: 'ನೀನೇ ಬಂದುಬಿಟ್ಯಾ?'

ಅವನ ಉಚ್ಚಾರದಲ್ಲಿ ಪೂರ್ತಿ ಹಿಡಿತವಿಲ್ಲದಿದ್ದರೂ ಅತಿಯಾದ ತೊದಲೂ ಇರಲಿಲ್ಲ. ಹರಿಜನ ಕೇರಿಯಲ್ಲೇ ಹುಟ್ಟಿ ಬೆಳೆದ ಅವಳಿಗೆ ಕುಡಿತ, ಅದರ ಅಮಲು, ಅವರ ಮಾತುಕತೆಗಳು ಚನ್ನಾಗಿ ಗೊತ್ತಿದ್ದುವು. ಕುಡಿಯುವವರೆಂದರೆ ಅವಳಲ್ಲಿ ಬೇಸರ ಜುಗುಪ್ಸೆಗಳಿದ್ದುವೇ ಹೊರತು, ಇತರ ಮೇಲು ಜಾತಿಯ ಮಧ್ಯಮ ವರ್ಗದ ಹೆಂಗಸರಲ್ಲಿ ಇರುವ ಭಯವಿರಲಿಲ್ಲ. ತನ್ನ ತಂದೆ ಅದನ್ನು ಕೈಲಿ ಮುಟ್ಟಿದವರಲ್ಲ. ಆದರೆ ಅಣ್ಣ ಆಗಾಗ್ಗೆ ಕುಡಿಯುತ್ತಾನೆಂದು ಕೇಳಿ ಬಲ್ಲಳು: ಎಂದೂ ನೋಡಿರಲಿಲ್ಲ. ಬೀರ್, ವಿಸ್ಕಿ, ಮೊದಲಾದ ಹೆಸರುಗಳನ್ನು ಬೆಂಗಳೂರಿನಲ್ಲಿ ಹಾಸ್ಟೆಲ್ಲಿನ ಹುಡುಗಿಯರು ಮಾತನಾಡಿಕೊಳ್ಳುವುದನ್ನು ಕೇಳಿದ್ದಳು. ಬೀರ್ ತುಂಬ ಲಘು. ವಿಸ್ಕಿ ಮಹಾ ಜೋರು; ಒದೆದು ಎಬ್ಬಿಸುತ್ತೆ – ಎಂಬಂತಹ ಮಾತುಗಳು ಕಿವಿಯ ಮೇಲೆ ಬೀಳುತ್ತಿದ್ದುವು. ಸ್ವತಃ ಕುಡಿಯದ ಕೆಲವು ಹುಡುಗಿಯರು, ತಾವು ಧೈರ್ಯವಂತೆಯರೆಂದು ತೋರಿಸಿಕೊಳ್ಳಲು ಹಾಗೆ ಮಾತನಾಡಿಕೊಳ್ಳುವುದು ಅವಳಿಗೆ ಗೊತ್ತಿತ್ತು. ಅಪರೂಪಕ್ಕೆ ಕೆಲವರು ಒಂದೊಂದು ದಿನ ಬಾರಿಗೆ ಹೋಗಿ ಬರುತ್ತಾರೆಂದೂ ಕೇಳಿ ತಿಳಿದಿದ್ದಳು.

'ಬಾ. ಕೂತ್ಕ' – ಶ್ರೀನಿವಾಸ ಎರಡು ಕೈಯನ್ನೂ ನೀಡಿ ಕರೆದ.

ಅವಳು ಹೋಗಿ ಬಾಗಿಲು ಮುಚ್ಚಿ ಬೋಲ್ಟ್ ಹಾಕಿ ಬಂದು ಅವನ ಮಂಚದ ತುದಿಗೆ ಕುಳಿತಳು. ವಾಸನೆ ಹೊಡೆಯುತ್ತಿದ್ದರೂ ಸಹಿಸಿಕೊಂಡು ಅವನ ಕೈ ಹಿಡಿದು ಕೇಳಿದಳು: 'ಯಾಕೆ ಹೀಗೆ ಮಾಡಿದಿಂ?'

'ಏನ್ ಮಾಡ್ದೆ?'

ತಕ್ಷಣ ಅವನ ಕಾಗದದ ವಿಷಯ ಆಡಬೇಕೋ ಬೇಡವೋ ಎಂಬ ಬಗೆಗೆ ಅನುಮಾನಿಸಿದಳು. 'ಅದೇನು ಬೇಗ ಅಡಿ ಮುಗಿಸೇ' – ಎಂದು ಅವನು, ಹುಕುಂ ಮಾಡುವವನಂತೆ ಅವಳ ಮುಖ ನೋಡಿದ. ತನ್ನ ಎಡ ಮೊಣಕೈಗೆ ತಗಲು ಹಾಕಿಕೊಂಡಿದ್ದ ವ್ಯಾನಿಟಿ ಚೀಲದಲ್ಲಿದ್ದ ಕವರ್ ತೆಗೆದು ಅವನ ಕಾಗದವನ್ನು

ಮುಂದೆ ನೀಡಿದಳು. ಅವನು 'ಅದೇನು ಹೇಳು' ಎಂದ.

'ನೀವೇ ಓದಿ.'

'ನೀನು ಓದಿ ಹೇಳು. ಪ್ರೊಪ್ರೈಟರ್ ಯಾವತ್ತೂ ಅವರೇ ಓದುಲ್ಲ.'

ಅವಳೇ ಕಾಗದವನ್ನು ಕೈಲಿ ಹಿಡಿದು, 'ನನ್ನನ್ನು ಮರೆತುಬಿಡು. ನಾನು ನಿನ್ನನ್ನು ಮದುವೆಯಾಗುವುದು ಸಾಧ್ಯವಿಲ್ಲ. ಸಾಯುವತನಕ ಒಂಟಿಯಾಗಿರುತ್ತೇನೆ – ಅಂತ ಯಾಕೆ ಬರೆದಿದೀರ?' ಎಂದು ಕೇಳಿದಳು.

'ಯಾರಿಗೆ ಬರೆದಿದೀನಿ?'

'ನನಗೆ.'

'ನೀನ್ಯಾರು?'

ಅವನಿಗೆ ಬುದ್ಧಿ ಸ್ವಲ್ಪವೂ ಸ್ತಿಮಿತದಲ್ಲಿಲ್ಲವೆಂದು ಅವಳಿಗೆ ಅನುಮಾನವಾಯಿತು. ಆದರೂ ಹೇಳಿದಳು: 'ಮೀರಾ.'

'ಅಂದರೆ?'

'ಇಲ್ಲಿ ನೋಡಿ. ಇವಳು' – ಎಂದು ಚೀಲದಲ್ಲಿದ್ದ ಫೋಟೋವಿನ ಪ್ರತಿಯನ್ನು ತೆಗೆದು ಮುಂದೆ ಹಿಡಿದಳು. ಅವನು ಅದನ್ನು ಕೈಗೆ ತೆಗೆದುಕೊಂಡು ನೋಡಿದ 'ವಾ. ಹಾ. ಹಾ. ಬ್ಯೂಟಿಫುಲ್. ವಜ್ರದ ವಾಲೆ ಹ್ಯಂಗೆ ಕಾಣುತ್ತೆ! ಒಂದಲ್ಲ, ನಿನಗೆ ನಾಲ್ಕು ಸರ ಹಾಕಬೇಕು. ತಲೆಮೇಲೆ ಆರು ನೂರು ಹೂವು ಏರಿಸಿ ಅದರದೇ ತಲೆದಿಂಬು ಮಾಡಬೇಕು.'

ಅವಳಿಗೆ ಸಂತೋಷವಾಯಿತು. ತನ್ನ ಮೇಲಿನ ಅವನ ಪ್ರೀತಿ ಎಂದಿನಂತೆ ಇದೆ ಎಂದುಕೊಂಡಳು. ಫೋಟೊವನ್ನು ಅತ್ತ ಹಾಕಿ ಬಾಗಿ ಅವಳ ತೋಳು ಹಿಡಿದು ಅವನು, 'ಬಾ. ಮಜಾ ಮಾಡಾಣ ಬಾ. ಅದ್ಯಾಕೆ ಮಂಚದ ತುದೀಲೇ ಕೂತ್ಕಂಡಿದೀಯ? ಕಿಟಕಿ ಬಾಗಿಲು ಹಾಕ್ತೀನಿ ತಡಿ' – ಎಂದು ಮೇಲೆ ಎದ್ದ.

ಈ ಮಾತನ್ನು ಕೇಳಿ ಅವಳಿಗೆ ಅಸಹ್ಯವಾಯಿತು. 'ನಿಮಗೆ ಬುದ್ಧಿ ಸರಿಯಾಗಿಲ್ಲ. ಏನು ಮಾತಾಡ್ತಾ ಇದೀರಿ?' – ಎಂದಳು. 'ಸರಿಯಾಗಿದೆ. ನೀನಿ-ರೂಪೇ ಮಜಾ ಮಾಡುಕ್ಕೆ. ಬೇಕಾದಷ್ಟು ಚಿನ್ನ ಮಾಡಿಸ್‌ಕೊಡ್ತೀನಿ. ಆ ಹಾರುವಯ್ಯ ಮಾತಂಗಿಗೆ ಎರಡು ಸಾವಿರ ರೂಪಾಯಿ ಕೊಟ್ಕಂತೆ. ನಾನು ಎರಡು ಸಾವಿರಕ್ಕೆ ವಾಲೇನೇ ಮಾಡ್ಸಿದೀನಿ. ಎಸ್.ಎಸ್.ಎಂ.ಎಸ್. ಪ್ರೊಪ್ರೈಟರ್, ಪಾಳೇಗಾರರ ಮಗ, ಪಾಳೇಗಾರ್ರ ಮಗ. ಹೆರಳು ಹದ್ದಿ ಸಿರೂ ಬಳೆ ಮಾಡುಸ್ತೀನಿ ಬಾಚೇ' – ಎಂದು ಅವಳ ಬೆನ್ನಿಗೆ ಕೈಹಾಕಿ ಎಳೆದ. ಅವನನ್ನು ತಕ್ಷಣ ಹಿಂದಕ್ಕೆ ತಳ್ಳಿ ಮಲಗಿಸಿ ಅವಳು ಎದ್ದು ಕಿಟಕಿಯ ಹತ್ತಿರಕ್ಕೆ ಹೋಗಿ ನಿಂತಳು. ಅವಳ ಅಂತರಂಗದ ಆಳ ಆಳ ಆಳವನ್ನು ಇರಿದಂತಾಯಿತು. ಇಂತಹ ಮಾತು ಇವರ

ಬಾಯಲ್ಲಿ ಬರಬಹುದೇ, ಎನಿಸಿತು. ಹಿಂತಿರುಗಿ ಬಂದು ಮೇಜದ ಮೇಲಿದ್ದ ಚೊಂಬನ್ನು ಕೈಗೆ ತೆಗೆದು ಬಲಗೈಯನ್ನು ಶಾರೆ ಮಾಡಿ ನೀರು ಬಗ್ಗಿಸಿಕೊಂಡು ಅವನ ನೆತ್ತಿಯ ಮೇಲೆ ಹಾಕಿ, ಎಂಟು ಹತ್ತು ಸಲ ತಟ್ಟಿದಳು. ಮತ್ತೆ ಒಂದು ಶಾರೆ ನೀರು ಹಾಕಿದಳು. ಅವನು ಸುಮ್ಮನೆ ತಟ್ಟಿಸಿಕೊಂಡ. ಮೂರನೆಯ ಸಲ ನೀರು ಹಾಕಿದಾಗ ಕೇಳಿದ: 'ನಂಗೆ ತಲೆತಿರುಗು ಬಂದಿದೆ ಅಂತ ತಣ್ಣೀರು ತಟ್ತಿದಿ ಏನೇ?'

'ಈ ಕೆಟ್ಟ ಚಟ ಹ್ಯಾಗೆ ಕಲಿತಿರಿ? ಸುಮ್ಮನೆ ಮಲಕ್ಕಂಡು ನಿದ್ದೆ ಮಾಡಿ. ಕೆಟ್ಟ ಕೆಟ್ಟ ಮಾತಾಡಬ್ಯಾಡಿ. ಏನಾಡ್ತಿದೀರ ಅಂತ ನಿಮಗೇ ಗೊತ್ತಿಲ್ಲ.'

'ಗೊತ್ತಿದೆ. ಕೂತ್ಕ ಬಾ ಇಲ್ಲಿ' – ಎಂದು ಅವಳ ತೋಳು ಹಿಡಿದುಕೊಂಡ. ಅವಳು ಅವನ ಪಕ್ಕದಲ್ಲಿ ಕುಳಿತು, ಮಂಚದ ಕಟ್ಟಿನ ಮೇಲೆ ಹಾಕಿದ್ದ ಟವೆಲನ್ನು ಚೊಂಬಿನೊಳಗೆ ಅದ್ದಿ, ಅವನ ಮುಖ ಕುತ್ತಿಗೆಗಳನ್ನು ಒರೆಸಲು ಶುರು ಮಾಡಿದಳು. ಅವನು ಏನೋ ಮಾತನಾಡಲು ಪ್ರಯತ್ನಿಸಿದ. ಆದರೆ ತಲೆಯಲ್ಲಿ ಏನೂ ಸುಳಿಯದೆ ಖಾಲಿಯಾದಂತಾಗಿ, ಮೇಲಿನ ಜಂತೆಯನ್ನು ಸುಮ್ಮನೆ ಖಾಲಿ ದೃಷ್ಟಿಯಿಂದ ನೋಡಲು ಶುರು ಮಾಡಿದ. ಅವಳು ಅವನ ಮುಖವನ್ನೇ ದಿಟ್ಟಿಸುತ್ತಿದ್ದಳು. ಎರಡು ನಿಮಿಷದಲ್ಲಿ ಅವನು ನಿಧಾನವಾಗಿ ಕಣ್ಣು ಮುಚ್ಚಿಕೊಂಡ. ನಿದ್ರೆ ಬಂದಂತೆ ಮಲಗಿಬಿಟ್ಟ. ಮೀರಾ ಅವನ ಮುಖವನ್ನೇ ನೋಡುತ್ತಿದ್ದಳು. ಗಡಿಯಾರ ನೋಡಿಕೊಂಡಳು. ಒಂಬತ್ತೂವರೆ ತೋರಿಸುತ್ತಿತ್ತು. ಮತ್ತೆ ಮದ್ಯ ಕುಡಿಯದಿದ್ದರೆ ಮಧ್ಯಾಹ್ನ ಎರಡು ಮೂರು ಗಂಟೆಯ ಹೊತ್ತಿಗೆ ಪೂರ್ತಿ ಜ್ಞಾನ ಬರಬಹುದು ಎಂದು ಲೆಕ್ಕ ಹಾಕಿದಳು. ಆದರೆ ಇದ್ದಕ್ಕಿದ್ದ ಹಾಗೆಯೇ ಬೇರೆ ಒಂದು ವಿಚಾರ ಬಂತು. ತಾನು ಇಲ್ಲಿ ಕೂತಿರಬಾರದೆನಿಸಿತು. ಒಂದು ನಿಮಿಷವೂ ಇಲ್ಲಿರಕೂಡದೆಂದು ನಿಶ್ಚಯಿಸಿದಳು. ಒತ್ತಿಕೊಂಡು ಅಳು ಬಂತು. ಸದ್ದು ಮಾಡಿ ಅವನಿಗೆ ಎಚ್ಚರ ಮಾಡಕೂಡದೆಂದು, ಸೆರಗನ್ನು ಉಂಡೆ ಮಾಡಿ ಬಾಯಿಗೆ ಕೊಟ್ಟುಕೊಂಡಳು. ಆದರೂ ತಡೆಯಲಾರದ ಬುಗ್ಗೆಯಂತೆ ಅದು ಹೊರ ಹೊಮ್ಮಿತು. ಅರೆಜಾಗ್ರತಾವಸ್ಥೆಗೆ ಬಂದ ಶ್ರೀನಿವಾಸ ಕಣ್ಣು ಮುಚ್ಚಿಕೊಂಡೇ, 'ಯಾಕೆ ಅಳ್ತೀಯ ಅರುಂಧತಿ? ಹೊಸ ಆಶ್ರಮ ಕಟ್ತೀನಿ. ನಿನ್ನ ಕೈಬಿಡುಲ್ಲ' ಎಂದು ಅಸ್ಪಷ್ಟವಾಗಿ ಹೇಳಿದ.

ಮನಸ್ಸನ್ನು ಗಟ್ಟಿಮಾಡಿ ಅವಳು ಅಳುವನ್ನು ತಡೆದುಕೊಂಡಳು. ಸೆರಗಿನಿಂದ ಕಣ್ಣುಗಳನ್ನು ಒರೆಸಿಕೊಂಡು ತನ್ನ ವ್ಯಾನಿಟಿ ಚೀಲವನ್ನು ಕೈಗೆ ತೆಗೆದುಕೊಂಡಳು. ಅವನ ಕಾಲಿನ ಕಡೆಗೆ ಮಂಚದ ತುದಿಯಲ್ಲಿದ್ದ ಅವನ ಕಾಗದ ಮತ್ತು ಫೋಟೋ ಕಣ್ಣಿಗೆ ಬಿದ್ದುವು. ಅವನ್ನು ತೆಗೆದು ಚೀಲಕ್ಕೆ ಹಾಕಿಕೊಂಡು ಬಾಗಿಲಿನ ಬೋಲ್ಟ

ತೆಗೆದಳು. 'ಎಲ್ಲಿಗೆ ಹೋಗ್ತೀಯ, ಬಾರೆ' – ಎಂದು ಅವನು ಕಣ್ಣು ಮುಚ್ಚಿಕೊಂಡೇ ಕೂಗಿದ. ಕೋಣೆಯಿಂದ ಹೊರಗೆ ಬಂದು ಬರೀ ಬಾಗಿಲು ಮುಚ್ಚಿ ರಸ್ತೆಗೆ ನಡೆದಳು. ಅದೇ ರಸ್ತೆಯ ಇನ್ನೊಂದು ಕಡೆಯಲ್ಲಿ ಅಣ್ಣನ ಅಂಗಡಿ ಇರುವ ನೆನಪಾಯಿತು. ಆದರೆ ಅಲ್ಲಿಗೆ ಹೋಗುವ ಮನಸ್ಸಾಗಲಿಲ್ಲ. ನಿಧಾನವಾಗಿ ಹೆಜ್ಜೆ ಹಾಕಿ ಬಸ್‌ಸ್ಟ್ಯಾಂಡಿಗೆ ಬಂದಳು. ಸರ್ಕಾರೀ ಬಸ್ಸುಗಳು ನಿಲ್ಲುವ ಜಾಗಕ್ಕೆ ಹೋಗಿ ಕೇಳಿದಾಗ ತಿಳಿಯಿತು: ಹನ್ನೊಂದೂವರೆಯ ತನಕ ಬೆಂಗಳೂರಿನ ಯಾವ ಬಸ್ಸೂ ಇಲ್ಲ. ಕಾಯುತ್ತಾ ಒಂದು ಕಲ್ಲುಬೆಂಚಿನ ಮೇಲೆ ಕುಳಿತಳು. ಅಷ್ಟರಲ್ಲಿ ಸ್ಟ್ಯಾಂಡಿನ ಎಡ ಭಾಗದ ಖಾಸಗಿ ಬಸ್ಸುಗಳ ಕಡೆಯಿಂದ ಒಬ್ಬ ಏಜೆಂಟ್ ಕೂಗುತ್ತಿದ್ದುದು ಕೇಳಿಸಿತು: 'ಯಾರ್ರೀ, ಗುಬ್ಬಿ, ಯಡೇನಹಳ್ಳಿ, ತಿಮ್ಮಸಂದ್ರ, ನಾಗನೂರು, ರಕ್ಕಸನಹಳ್ಳಿ, ತಾವರೆಕೆರೆ, ತಿರುಮಲಾಪುರ, ಶಿವಗೆರೆ, ತಿಪ್ಟೂರ್.' ತಿರುಮಲಾಪುರ ಎಂಬ ಹೆಸರು ಕಿವಿಗೆ ಬೀಳುತ್ತಲೇ ಅವಳಿಗೆ ಸತ್ಯಳ ನೆನಪಾಯಿತು. ಎದ್ದು ನಡೆದು ಆ ಬಸ್ಸಿನಲ್ಲಿ ಕುಳಿತಳು.

ಕಾಲು ಗಂಟೆಯಲ್ಲಿ ಹೊರಟ ಬಸ್ಸಿನಲ್ಲಿ ತಿರುಮಲಾಪುರದ ಏಳೆಂಟು ಜನ ಪ್ರಯಾಣಿಕರಿದ್ದರು. ಮಿಡ್ಲ್‌ಸ್ಕೂಲ್ ಮೇಡಂ ಆಗಿ ಕೆಲಸ ಮಾಡುವಾಗ ಅವಳಿಗೆ ಊರಿನ ಎಷ್ಟೋ ಜನರ ಮುಖದ ಗುರುತಾಗಿತ್ತು. ಮಾತನಾಡಿಸುವಷ್ಟು ಪರಿಚಯವೇನೂ ಇರಲಿಲ್ಲ. ಅವಳ ಪಾಡಿಗೆ ಅವಳು ಸುಮ್ಮನೆ ಹೆಂಗಸರ ಜಾಗದಲ್ಲಿ ಕುಳಿತಳು. ಆದರೆ ಅವರೆಲ್ಲ ಅವಳ ಮುಖ ಮುಖ ನೋಡುತ್ತಿದ್ದರು. ತನ್ನ ಮತ್ತು ಶ್ರೀನಿವಾಸನ ಮದುವೆಯ ವಿಷಯ ಊರಿಗೆಲ್ಲ ತಿಳಿದಿದೆ. ಅದಕ್ಕೇ ಇವರು ಹೀಗೆ ನೋಡುತ್ತಾರೆ ಎಂದು ಅರ್ಥಮಾಡಿಕೊಂಡಳು. ಹಳ್ಳಿಯ ಜನಕ್ಕೆ ತಮ್ಮ ಕುತೂಹಲವನ್ನು ಸೂಕ್ಷ್ಮವಾಗಿ ತೃಪ್ತಿಪಡಿಸಿಕೊಳ್ಳುವುದು ಗೊತ್ತೂ ಇಲ್ಲ ಸಾಧ್ಯವೂ ಇಲ್ಲ ಎಂದುಕೊಂಡು, ತನ್ನ ಪಾಡಿಗೆ ತಾನು ಕಿಟಕಿಯ ಕಡೆಗೆ ಮುಖ ತಿರುಗಿಸಿದಳು. ಬಸ್ಸು ಹೊರಟ ಮೇಲೆ ನಿದ್ರೆ ತೂಗುವಂತಾಯಿತು. ನೆನ್ನೆ ರಾತ್ರಿ ಇಡೀ ತನಗೆ ನಿದ್ರೆ ಬರಲಿಲ್ಲವೆಂಬ ನೆನಪಾಯಿತು. ಸಂಗಡವೇ ಅದರ ಕಾರಣವೂ ಮನಸ್ಸಿಗೆ ಬಂತು. ಅಳು ಬರುವಂತಾಯಿತು. ಊರಿನ ಇಷ್ಟು ಜನವೂ ತನ್ನನ್ನೇ ನೋಡುತ್ತಿದ್ದಾರೆಂಬ ಅರಿವಾಗಿ ಅಳುವನ್ನು ತಡೆದುಕೊಂಡು, ಬಿದ್ದ ಧೂಳನ್ನು ಒರೆಸಿಕೊಳ್ಳುವವಳಂತೆ ತೇವಗೊಂಡ ಕಣ್ಣನ್ನು ಸೆರಗಿನಿಂದ ಒತ್ತಿಕೊಂಡು, ರಸ್ತೆಯ ಬದಿಯಲ್ಲಿ ಬಂದು ಹೋಗುವ ಮರಗಳನ್ನೇ ನೋಡುತ್ತಾ ಕುಳಿತಳು.

೭

ಮಧ್ಯಾಹ್ನ ಎರಡು ಗಂಟೆಗೆ ಬಸ್ ಸ್ಟ್ಯಾಂಡಿನಲ್ಲಿ ಇಳಿದ ಅವಳು ತನ್ನ ಮನೆಗೆ ಹೋಗಲಿಲ್ಲ. ನೇರವಾಗಿ ಸತ್ಯಳ ತೋಟಕ್ಕೆ ನಡೆದಳು. ಆಯಾಸವೆನಿಸಿ ಕೈ ಕಾಲು ನೈಗಳು ಸೋಲುತ್ತಿದ್ದುವು. ಬಲವಂತವಾಗಿ ಶರೀರವನ್ನು ಎಳೆದುಕೊಂಡು ಮನೆಯನ್ನು ಸೇರಿದಾಗ ಸತ್ಯ ಆವೇ ತಾನೇ ಊಟ ಮುಗಿಸಿ, ಮಿಕ್ಕಿದುದನ್ನು ಮುಚ್ಚಿಡುತ್ತಿದ್ದಳು. ಹವನದ ಅಗ್ನಿ ಬೂದಿಗೆಂಡವಾಗಿತ್ತು. ಇವಳನ್ನು ಕಂಡ ಸತ್ಯಳಿಗೆ ಆಶ್ಚರ್ಯ. ದುಗುಡ ಎದ್ದು ಕಾಣುತ್ತಿದ್ದ ಅವಳ ಮುಖವನ್ನು ಗಮನಿಸಿದ ತಕ್ಷಣ ಗಾಬರಿಯಾಯಿತು.

'ಯಾಕೆ ಮೀರಾ ಹೀಗಿದೀಯ?' – ಎಂದು ಹೊರಗೆ ಬಂದು ಕೇಳಿದಳು.

ಅವಳು ತನ್ನ ವ್ಯಾನಿಟಿ ಚೀಲಕ್ಕೆ ಕೈಹಾಕಿ ಶ್ರೀನಿವಾಸನ ಕಾಗದವನ್ನು ತೆಗೆದು ಮುಂದೆ ಹಿಡಿದಳು.

ಓದಿಕೊಂಡ ಸತ್ಯಳಿಗೂ ದಿಗ್ಭ್ರಮೆ: 'ಯಾವಾಗ ಬಂತು ಈ ಕಾಗದ?'

'ನೆನ್ನೆ ಬೆಳಗ್ಗೆ.'

'ಅವನನ್ನು ನೋಡಿದೆಯಾ?'

'ಈಗ ತುಮಕೂರಿಂದಲೇ ಬರ್ತಿದೀನಿ.'

'ಏನಂದ? ಯಾಕೆ ಹೀಗೆ ಬರೆದನಂತೆ?'

ನಡೆದುದನ್ನೆಲ್ಲ ಹೇಳಲು ಮೀರಾ ಜ್ಞಾಪಿಸಿಕೊಂಡಳು. ಆದರೆ ತನ್ನ ತಲೆ ಶೂನ್ಯವಾಯಿತು. ಏನು ಹೇಳಬೇಕೆಂಬುದೇ ತಿಳಿಯಲಿಲ್ಲ. ಒಂದು ನಿಮಿಷ ಕಷ್ಟ ಪಟ್ಟನಂತರ ಅಂದಳು: 'ನಾನೊಂದಿಷ್ಟು ಮಲಗಿ ನಿದ್ದೆ ಮಾಡಬೇಕು. ಆಮೇಲೆ ಹೇಳ್ತೀನಿ.'

'ಅಡಿಗೆ ಮಿಕ್ಕಿದೆ. ಊಟ ಮಾಡು. ನೀನು ನೆನ್ನೆ ಬೆಳಗ್ಗೆಯಿಂದ ಏನೂ ತಿಂದಿಲ್ಲ ಅಂತ ನನಗೆ ಗೊತ್ತು.'

'ನಾನು ಏನೂ ತಿನ್ನೊಲ್ಲ. ಒಂದು ಚಾಪೆ ಕೊಡಿ.'

ಆದರೆ ಸತ್ಯ ಬಿಡಲಿಲ್ಲ. ಮೀರಾಳಿಗೆ ಮಲಗುವುದು ಬೇಕಾಗಿತ್ತು. ಹೆಚ್ಚು ವಾದ ಮಾಡಲಿಲ್ಲ. ಅವಳು ಕಲಸಿ ತಂದ ಅನ್ನದಲ್ಲಿ ಅರ್ಧವನ್ನು ಬಾಯಿಗೆ ಹಾಕಿಕೊಂಡು, ಸರಿಯಾಗಿ ಅಗಿಯದೆ ನುಂಗಿದಳು. ಕೋಣೆಯಲ್ಲಿ ಹಾಸಿಗೆ ಎಳೆದು ದಿಂಬು ಮೇಲುಹಾಸಿಗೆಗಳನ್ನು ಸರಿ ಮಾಡಿ, ಸತ್ಯ ಅವಳನ್ನು ಕರೆದು ಹೋಗಿ ಮಲಗಿಸಿದಳು. ಒಂದು ನಿಮಿಷದಲ್ಲಿ ಗಾಢ ನಿದ್ದೆ ಬಂತು. ಬಲಮಗ್ಗುಲಾಗಿ ಮಲಗಿದ್ದ ಅವಳ ತಲೆಯ ಹಿಂಭಾಗದ ದಪ್ಪ ಹೆರಳು, ಅದರ ಮೇಲೆ ಅರ್ಧವೃತ್ತಾ

ಕಾರದಲ್ಲಿ ಮುಡಿದುಕೊಂಡಿದ್ದ ಮಲ್ಲಿಗೆಯ ದಂಡೆ, ಕಳಚದೆ ಭದ್ರವಾಗಿದ್ದುವು. ನಿದ್ದೆಗಣ್ಣಿನಲ್ಲಿ ಅಂಗಾತವಾದರೆ ಹೆರಳಿಗೆ ಸಿಕ್ಕಿಸಿರುವ ಪಿನ್ನುಗಳು ತಲೆಗೆ ಚುಚ್ಚಿ ನೋವಾಗಿ ಎಚ್ಚರವಾಗುತ್ತದೆಂದು ಸತ್ಯ ಒಂದೊಂದಾಗಿ ಪಿನ್ನುಗಳನ್ನು ಹುಡುಕಿ ತೆಗೆದಳು. ಹೆರಳಿಗಾಗಿ ಹೆಣೆದಿದ್ದ ಎರಡು ಜಡೆಗಳ ಸುತ್ತುಗಳನ್ನು ಮೆಲ್ಲನೆ ಬಿಚ್ಚಿ ಹೂವಿನ ದಂಡೆಯನ್ನೂ ತೆಗೆದಿಟ್ಟಳು. ಅವಳ ಕೊರಳಿನಲ್ಲಿದ್ದ ಸರದ ಗುರುತು ಸಿಕ್ಕಿತು. ಕಿವಿಯಲ್ಲಿ ಪ್ರಕಾಶಿಸುತ್ತಿದ್ದ ವಜ್ರದ ಓಲೆಗಳನ್ನು ಯಾರು ಮಾಡಿಸಿರ ಬಹುದೆಂಬ ಕುತೂಹಲವುಂಟಾಯಿತು. ಮೀರಳ ವ್ಯಾನಿಟಿ ಚೀಲ ಹೊರಗಿನ ಅಂಗಳದಲ್ಲಿದ್ದ ನೆನಪಾಯಿತು. ಕೋಣೆಯಿಂದ ಹೊರಗೆ ಬಂದು ಅದನ್ನು ಹಿಡಿದು ಒಳಗೆ ತಂದಳು. ಅದರ ಬಾಯಿ ತೆರೆದಿತ್ತು. ಒಳಗಿದ್ದ ಫೋಟೋ ಕಾಣಿಸಿತು. ತೆಗೆದು ಕೈಲಿ ಹಿಡಿದು ನೋಡಿದಳು. ಮೀರಾ ಈಗ ಇಟ್ಟುಕೊಂಡಿರುವ ಎರಡು ಓಲೆಗಳೂ ಫೋಟೋವಿನಲ್ಲಿ ಸ್ಪಷ್ಟವಾಗಿ ಗುರುತಿಸುವ ಮಟ್ಟಿಗೆ ಕಾಣುತ್ತಿದ್ದುವು. ಫೋಟೋವಿನ ಹಿಂಭಾಗದಲ್ಲಿ ಬೆಂಗಳೂರಿನ ಸ್ಟುಡಿಯೋವಿನ ಮುದ್ರೆ ಇದೆ. ಓಲೆ ಯನ್ನು ಶ್ರೀನಿವಾಸನೇ ಮಾಡಿಸಿಕೊಟ್ಟಿದಾನೆ ಎಂದು ಊಹೆ ಮಾಡಿದಳು. ಆದರೆ ಹೀಗೆ ಯಾಕೆ ಬರೆದ? ಮೀರಾ ತುಮಕೂರಿನಲ್ಲಿ ಅವನನ್ನು ಕಂಡೇ ಬಂದಿ ದ್ದಾಳೆ. ಎಂದರೆ ಅವನ ಕೈಲಿ ಮಾತನಾಡಿದರೂ ಏನೂ ಪ್ರಯೋಜನವಾಗಿಲ್ಲ. ಇವಳ ಕೈಲಿ ಅವನು ಏನು ಹೇಳಿರಬಹುದು? ಏನು ಕಾರಣ ಕೊಟ್ಟಿರಬಹುದು? ವಿಷಯ ಪೂರ್ತಿ ಹೇಳುಕ್ಕೆ ಮೊದಲೇ ಇವಳು ಮಲಗಿದಾಳೆ, ಎದ್ದಮೇಲೆ ಕೇಳ ಬೇಕು ಎಂದುಕೊಂಡರೂ, ಅವಳ ಕಲ್ಪನೆ ಕೆಲಸ ಮಾಡುತ್ತಲೇ ಇತ್ತು. ಅವನ ಅಪ್ಪನದೇ ಕೆಲಸ. ಹಿಂದೆ ನನ್ನ ಮದುವೆಗೆ ಮಾಡಿದ ಹಾಗೆ ಈಗಲೂ ಏನೋ ಮಾಡಿದಾನೆ. ಏನೇ ಇರಲಿ. ನಾನು ಹಿಡಿದು ಕೆಲಸ ಮಾಡಬೇಕು. ಈ ಹುಡುಗಿ ಯನ್ನ ಹೀಗೆ ಕೈಬಿಡುಕ್ಕೆ ಅವಕಾಶ ಕೊಡಕೂಡದು – ಎಂದು ನಿಶ್ಚಯಿಸಿದಳು.

ಮೀರಾ ಗಾಢವಾಗಿ ನಿದ್ರಿಸುತ್ತಿದ್ದಳು. ಸತ್ಯ ಎದ್ದು ಆ ಕೋಣೆಯಿಂದ ಹೊರಗೆ ಬಂದು ಬಾಗಿಲು ಮುಚ್ಚಿ ಅಡಿಗೆಮನೆಗೆ ಹೋದಳು. ಪಾತ್ರೆಗಳನ್ನು ತೆರವು ಮಾಡಿ, ಕೊಳದ ದಂಡೆಗೆ ಹೋಗಿ ತೆಂಗಿನ ಮರದ ಕೆಳಗೆ ಕುಳಿತು ತೊಳೆದಳು. ಒಲೆಯ ಬೂದಿ ತೆಗೆದು, ರಾತ್ರಿಗೆ ಮತ್ತೆ ಅಡಿಗೆ ಮಾಡಲು ಅಣಿಮಾಡಿದಳು. ಅಂಗಳಕ್ಕೆ ಬಂದು ಸುಮ್ಮನೆ ಕುಳಿತಳು. ಶ್ರೀನಿವಾಸ ಯಾಕೆ ಹೀಗೆ ಮಾಡಿದ? – ಎಂಬ ಪ್ರಶ್ನೆಯೇ ತಲೆಯನ್ನು ತಿನ್ನುತ್ತಿತ್ತು. ಎದ್ದು, ಶಬ್ದವಾಗದಂತೆ ಕೋಣೆಯ ಬಾಗಿಲು ತೆಗೆದು ಒಳಗೆ ಹೋಗಿ, ಹಾಸಿಗೆಯ ಬದಿಗೆ ಕುಳಿತಳು. ಮೀರಾ ಮೊದಲಿನಂತೆ ಬಲಮಗ್ಗುಲಾಗಿ, ಸಡುವೆ ಸ್ವಲ್ಪವೂ ಹೊರಳದೆ ಮಲಗಿದ್ದಳು. ಚೆನ್ನಾಗಿ ನಿದ್ರೆ ಮಾಡಲಿ ಎಂದು ಸತ್ಯ ಮೇಲೆ ಎದ್ದಳು. ತಾನು ಈ ಊರಿನ

ಗುಡಿ, ಅದರ ದಿಬ್ಬ, ಊರಿನ ಕೋಟೆ, ಕೆರೆಗಳ ಮೇಲೆ ಮಾಡಿದ್ದ ಟಿಪ್ಪಣಿಗಳ ಹಾಳೆಗಳನ್ನು ಕೈಗೆ ತೆಗೆದುಕೊಂಡಳು. ಈ ಕೆರೆಯನ್ನು ಯಾರು ಕಟ್ಟಿಸಿದರೆಂದು, ಊರಿನಲ್ಲಿ ತಾನು ಚಿಕ್ಕ ವಯಸ್ಸಿನಲ್ಲಿ ಕೇಳಿದ್ದ ಮೂರು ಬೇರೆ ಬೇರೆ ಕಥೆಗಳನ್ನು ಬರೆದಿಟ್ಟಿದ್ದಳು. ಮುಂದೆ ಏನು ಮಾಡಬೇಕೆಂಬ ಬಗೆಗೆ ಮನಸ್ಸಿಗೆ ಆಗಾಗ್ಗೆ ಹೊಳೆದ ಯೋಜನೆಗಳನ್ನು ಬೇರೆ ಕೆಲವು ಹಾಳೆಗಳಲ್ಲಿ ಗುರುತುಹಾಕಿದ್ದಳು. ತನ್ನ ಉದ್ದೇಶವನ್ನು ತಿಳಿಸಿ ಪ್ರೊಫೆಸರರಿಗೆ ಒಂದು ಕಾಗದವನ್ನು ಬರೆಯಬೇಕು. ಈಗ ಕೂತು ಬರೆಯೋಣವೆಂದು ಕಾಗದ ಪೆನ್ನುಗಳನ್ನು ತೆಗೆದುಕೊಂಡಳು. Respected Sir, ಎಂದು ಬರೆದಳು. ಮುಂದಿನ ವಾಕ್ಯ ತಲೆಯಲ್ಲಿ ಹೊಳೆಯಲಿಲ್ಲ. ಶ್ರೀನಿವಾಸ ಯಾಕೆ ಹೀಗೆ ಮಾಡಿದ, ಎಂಬ ಪ್ರಶ್ನೆಯೇ ಕಾಡಲು ಮೊದಲಾಯಿತು. ಕಾಗದಗಳನ್ನು ಜೋಡಿಸಿ ಮೊದಲಿದ್ದ ಕಡೆ ಇಟ್ಟು, ಅದರ ಮೇಲೆ ಪೆನ್ನು ಇಟ್ಟು, ಮತ್ತೆ ಹೊರಭಾಗಕ್ಕೆ ಬಂದಳು. ಕೊಳದ ಹತ್ತಿರ ಹತ್ತು ನಿಮಿಷ ಸುತ್ತಿ ಮತ್ತೆ ಕೋಣೆಗೆ ಹೋಗಿ ಮೀರಾಳ ಹಾಸಿಗೆಯ ದಡದಲ್ಲಿ ಕುಳಿತಳು. ಮಗ್ಗುಲು ಬದಲಾಯಿಸದೆ ಮೀರಾ ಮೊದಲಿನಂತೆಯೇ ಮಲಗಿದ್ದಳು. ಸತ್ಯ ಅವಳ ಮುಖವನ್ನೇ ನೋಡುತ್ತಾ ಕುಳಿತಳು.

ಮೀರಾಳ ಮುಖದ ಮೇಲೆ ಇದ್ದಕ್ಕಿದ್ದ ಹಾಗೆಯೇ ಕೆಲವು ಗೆರೆಗಳು ಮೂಡಿದುವು. ಏನೋ ಮಾತನಾಡುವವಳಂತೆ ತುಟಿ ಅಲುಗಿತು. ಎರಡು ಹುಬ್ಬೂ ಸಂಕುಚಿಸಿ ಒಂದನ್ನೊಂದು ಸೇರಿಕೊಂಡುವು. ಬಿಕ್ಕಿ ಅಳುವಾಗ ಆಗುವಂತೆ ಕೆನ್ನೆಗಳು ಅರಳಿದುವು. ಮಲಗಿದ್ದ ಅವಳು ಏನೋ ಅನಾಹುತವಾದವಳಂತೆ ಧಡಕ್ಕನೆ ಎದ್ದು ಕೂತಳು. ಕಣ್ಣು ಬಿಟ್ಟು, ಏನೂ ತಿಳಿಯದೆ ಸತ್ಯಳನ್ನು ನೋಡಿದಳು. 'ಮಲೀಕೊ. ಯಾಕೆ ಎದ್ದೆ? ಚನ್ನಾಗಿ ನಿದ್ದೆ ಮಾಡು' – ಎಂದು ಸತ್ಯ ಅವಳ ಭುಜ ಹಿಡಿದು ಮತ್ತೆ ಮಲಗಿಸಿದಳು. ಅವಳು ಕಣ್ಣು ಮುಚ್ಚಿ ಮಲಗಿದಳು. ಆದರೆ ನಿದ್ದೆ ಬರಲಿಲ್ಲವೆಂದು ಮುಖವೇ ಹೇಳುತ್ತಿತ್ತು. ಎರಡು ನಿಮಿಷದಲ್ಲಿ ಬೇರೆ ಮಗ್ಗುಲಾದಳು. ಮತ್ತೆ ಒಂದು ನಿಮಿಷದ ನಂತರ ಎದ್ದು ಕೂತಳು. 'ಯಾಕೆ ಎದ್ದುಬಿಟ್ಟೆ?' – ಸತ್ಯ ಕೇಳಿದಳು.

'ಹೆದರಿಕೆ ಆದ್ಹಾಗಾಯ್ತು.'

'ಏನೂ ಹೆದರಬೇಡ ಮಲಕ್ಕೊ.'

'ನಿದ್ದೆ ಬರುಲ್ಲ.'

'ಹಾಗಾದ್ರೆ ತಣ್ಣೀರಲ್ಲಿ ಮುಖ ತೊಳಕ ಬಾ. ಜಡರು ಕಳೀಲಿ. ಮಾತಾಡಾಣ.'

'ತಣ್ಣೀರಲ್ಲಿ ಮುಖ ತೊಳಕೊಳುಕ್ಕೆ ನಾನೇನು ಕುಡಿದಿದೀನಿಯೆ?'

'ಇದ್ಯಾಕೆ ಹೀಗೆ ಮಾತಾಡ್ತಿ? ಮುಖ ತೊಳಕ, ಕಾಫಿ ಕಾಯಿಸ್ತೀನಿ.'

ಮೀರಾ ಸರಿಯಾಗಿ ಕಣ್ಣುಬಿಟ್ಟು ನೋಡಿದಳು. ಈಗ ಪೂರ್ತಿಯಾಗಿ ಎಚ್ಚರವಾದಂತೆ ಅವಳ ಮುಖದ ಮೇಲೆ ಕಾಣುತ್ತಿತ್ತು. 'ಏನಾಯ್ತು ತುಮಕೂರಲ್ಲಿ?' – ಎಂದು ಕೇಳಿದುದಕ್ಕೆ ಅವಳಿಗೆ ಅಳು ಬಂತು. ಸತ್ಯ ಅವಳ ಮುಖವನ್ನು ತನ್ನ ಎದೆಗೆ ಒರಗಿಸಿ ತಬ್ಬಿಕೊಂಡಳು. ಒಂದು ಸಲ ಅತ್ತು ಸಮಾಧಾನವಾದ ಮೇಲೆ, ಕೈಹಿಡಿದು ಕೊಳದ ಹತ್ತಿರಕ್ಕೆ ಕರೆದುಕೊಂಡು ಹೋಗಿ ಮುಖ ತೊಳೆಸಿದಳು. ಮತ್ತೆ ಕೈಹಿಡಿದು ಕರೆತಂದು ಅಡಿಗೆಮನೆಯ ಬಾಗಿಲಿನಲ್ಲಿ ಕೂರಿಸಿ, ತಾನು ಕಾಫಿಗೆ ಚರುಕಿನಲ್ಲಿ ನೀರಿಟ್ಟು ಸೋಗೆಯ ಗರಿ ಹೊತ್ತಿಸಿ ಹಿಡಿದುಕೊಂಡು ಕುಳಿತಳು. ತುಮಕೂರಿನಲ್ಲಿ ನಡೆದುದನ್ನು ಮೀರಾ ತಾನಾಗಿಯೇ ವಿವರವಾಗಿ ಜ್ಞಾಪಿಸಿಕೊಂಡು ಯಥಾವತ್ ಹೇಳಿದಳು.

ರಾತ್ರಿ ಸತ್ಯ ಬಿಸಿಯಾಗಿ ಅಡಿಗೆ ಮಾಡಿದಳು. ಬಲವಂತ ಮಾಡಿ ಮೀರಾಳಿಗೆ ಊಟ ಮಾಡಿಸಿದಳು. ಮನೆಯಲ್ಲಿ ಎರಡು ಹಾಸಿಗೆಗಳಿರಲಿಲ್ಲ. ತನಗೆ ಒಂದು ಮುಂದಲಿಗೆ ಸಾಕೆಂದು ಮೀರಾ ಎಂದಳು. ಆದರೆ ಸತ್ಯ ಅವಳನ್ನೂ ತನ್ನ ಹಾಸಿಗೆಯಲ್ಲೇ ಮಲಗಿಸಿಕೊಂಡಳು. ಅವಳ ಕೈಹಿಡಿದು ಹೇಳಿದಳು: 'ಹೆಚ್ಚು ಯೋಚನೆ ಮಾಡಬ್ಯಾಡ. ಸರಿಯಾಗಿ ನಿದ್ದೆ ಮಾಡು. ಬೆಳಗ್ಗೆ ಹೊತ್ತಿಗೆ ಮುಂಚೆ ಎದ್ದು ನಾನು ಮೊದಲ ಬಸ್ಸಿಗೆ ತುಮಕೂರಿಗೆ ಹೋಗಿ ಬರ್ತೀನಿ. ನೀನು ಇಲ್ಲೇ ಇರು. ಎಲ್ಲೂ ಹೋಗಬೇಡ.'

'ಯಾಕೆ ಹೋಗ್ತೀರ?'

'ಅವನಿಗೆ ಕುಡಿದು ಬುದ್ಧಿ ಕೆಟ್ಟಿದೆ. ಇದು ಹ್ಯಾಗೆ ಅಂಟಿಕಂಡ್ತು ಅನ್ನೂದನ್ನ ವಿಚಾರ ಮಾಡಬೇಕು. ಅವನನ್ನೇ ಇಲ್ಲಿಗೆ ಕರ್‍ಕಂಡುಬರ್ತೀನಿ.'

೮

ಬೆಳಗ್ಗೆ ಹತ್ತೂವರೆಯ ಹೊತ್ತಿಗೆ ಸತ್ಯ ಹೋದಾಗ ಶ್ರೀನಿವಾಸ ಕೋಣೆಯಲ್ಲೇ ಮಂಚದ ಮೇಲೆ ಕುಳಿತಿದ್ದ. ಕುಡಿದಿರಲಿಲ್ಲ. ಆದರೆ ಹಿಂದಿನ ರಾತ್ರಿ ಕುಡಿದಿದ್ದು ಈಗ ಮತ್ತು ಇಳಿದಂತೆ ಮುಖದಲ್ಲಿ ಮಂಕು ಕಾಣುತ್ತಿತ್ತು. ಕಣ್ಣು ಬೆಳ್ಳಗಿದ್ದುವು. ಆಗ ತಾನೇ ಶೇವ್ ಮಾಡಿಕೊಂಡಿದ್ದ ಮುಖ ಜೋಲುಬಿದ್ದಿತ್ತು. ಒಳಗೆ ಬಂದ ಇವಳನ್ನು ಪ್ರಶ್ನಾರ್ಥಕವಾಗಿ ನೋಡಿದ. 'ಬಾ, ಕೂತುಕೊ' – ಎಂದು ಹೇಳಲಿಲ್ಲ. ಸತ್ಯಳೇ ಒಂದು ಕುರ್ಚಿಯ ಮೇಲೆ ಕೂತಳು. ಎಷ್ಟು ಹೊತ್ತಾದರೂ ಅವನು ಕಿಟಕಿಯ ಕಡೆಗೆ ನೋಡುತ್ತಾ ಸುಮ್ಮನೆ ಕುಳಿತಿದ್ದ.

ಅವಳೇ ಮಾತನಾಡಿದಳು: 'ನೆನ್ನೆ ಮೀರಾ ಇಲ್ಲಿಗೆ ಬಂದಿದ್ದಳಂತೆ.'

'ಹೂಂ' – ಅವನು ಎಂದ.

'ನೀನು ಅವಳ ಕೈಲಿ ಏನು ಹೇಳಿದೆ?'

'ಏನು ಹೇಳಿದೆ?' – ಎಂದು ಅವನು ಜ್ಞಾಪಿಸಿಕೊಳ್ಳುತ್ತಾ ಇವಳನ್ನೇ ಕೇಳಿದ.

'ನೀನು ಮತ್ತಿನಲ್ಲಿದ್ದೆ. ಜ್ಞಾಪಕವಿಲ್ಲ. ಆ ಮಾತು ಬ್ಯಾಡ. ಈ ಕಾಗದ ಹ್ಯಾಗೆ ಬರೆದೆ?' – ಎಂದು ತನ್ನ ಚೀಲದಲ್ಲಿ ತಂದಿದ್ದ ಅದನ್ನು ತೆಗೆದು ಎದ್ದು ಬಂದು ಅವನ ಮುಂದೆ ಹಿಡಿದಳು.

ಅವನು ಓದಿಕೊಂಡ. ಒಂದು ಕ್ಷಣ ಪೆಚ್ಚಾದರೂ, ಅನಂತರ ಆತ್ಮವಿಶ್ವಾಸ ದಿಂದ ಕೇಳಿದ: 'ನಾನು ಅವಳಿಗೆ ಬರೆದದ್ದು. ನಿನ್ನ ಕೈಗೆ ಹ್ಯಾಗೆ ಬಂತು?'

'ಇದನ್ನ ನೀನು ಅವಳಿಗೆ ಹ್ಯಾಗೆ ಬರೆದೆ ಅಂತ ಕೇಳುಕ್ಕೆ ಬಂದೆ. ಕೇಳುಕ್ಕೆ ಅಂತ ನೆನ್ನೆ ಅವಳೇ ಬಂದಾಗ ಎಂಥೆಂಥ ಮಾತಾಡಿದೀಯ!' – ಎಂದು ಹೋಗಿ ಅವಳು ಪುನಃ ಕುರ್ಚಿಯ ಮೇಲೆ ಕುಳಿತಳು.

ಒಂದು ನಿಮಿಷ ಯೋಚಿಸುತ್ತಾ ಸುಮ್ಮನಿದ್ದು ಅನಂತರ ಅವಳ ಕಡೆಗೆ ತಿರುಗಿ, ತೀರ್ಮಾನ ಹೇಳುವವನಂತೆ ಅಂದ: 'ಈ ಕಾಗದ ಬರೆದೋನು ನಾನು. ನೆನ್ನೆ ಅವಳು ಬಂದ ಜ್ಞಾಪಕವಿದೆ. ನಾನು ಏನೆಂದೆನೋ ಜ್ಞಾಪಕವಿಲ್ಲ. ಜ್ಞಾಪಕ ಇದ್ದು ಆಗಬೇಕಾದ್ದು ಏನೂ ಇಲ್ಲ. ಈ ಕಾಗದದಲ್ಲಿ ಬರೆದಿರೂದೇ ಕೊನೇ ತೀರ್ಮಾನ.'

'ಹಾಗಂದ್ರೆ ಹ್ಯಾಗೆ? ಜವಾಬ್ದಾರಿ ಇಟ್ಕಂಡು ಆಡ್ತಿದೀಯಾ ನೀನು?'

'ನನ್ನ ಹಾಗಂತ ಕೇಳುಕ್ಕೆ ನಿಂಗೇನು ಅಧಿಕಾರ?'

'ನಿನ್ನ ಮೇಲೆ ಅಧಿಕಾರ ಮಾಡುಕ್ಕೆ ನಾನು ಬರಲಿಲ್ಲ. ಯಾರ ಮೇಲೆ ಯಾರು ಅಧಿಕಾರ ಮಾಡೂದೂ ನಂಗೆ ಬೇಕಿಲ್ಲ. ನೀನು ನಿನ್ನ ಸಂಕಲ್ಪಶಕ್ತಿಯ ಮೇಲೆ, ವಿಲ್‌ಪವರ್ ಮೇಲೆ ಆಣೆ ಮಾಡಿದೀಯ. ನಿನ್ನ ಮಾತಿನ ಅಧಿಕಾರವೇ ನಿನ್ನ ಮೇಲಿದೆ. ಈಗ ಇವ್ರಕ್ಕಿದ್ದ ಹಾಗೇ ಮಾತು ಬದಲಾಯಿಸಿದರೆ ಅವಳ ಗತಿ ಏನು?'

'ಏನು?' – ಎಂದು ಅವಳನ್ನೇ ಕೇಳಿದ.

'ನೀನು ಯೋಚನೆ ಮಾಡು.'

'ನನಗೆ ಅದೆಲ್ಲ ಹೇಳಬ್ಯಾಡ. ಯೋಚನೆ ಮಾಡಬೇಕಾದೋಳು ನೀನು. ನಿನ್ನದೇ ಜವಾಬ್ದಾರಿ. ಈಗ ಇಲ್ಲಿಂದ ಎದ್ದು ಹೊರಡು' – ಎಂದು ಬಾಗಿಲಿನ ಕಡೆ ಕೈ ತೋರಿಸಿದ.

'ನಿನ್ನ ಹತ್ತಿರ ಭಿಕ್ಷೆ ಬೇಡುಕ್ಕೆ ಬಂದಿಲ್ಲ. ಆ ಹುಡುಗೀ ಜೊತೆ ಇಷ್ಟೆಲ್ಲ ಸುತ್ತಾಡಿ ಈಗ ಯಾಕೆ ತಪ್ಪಿಸ್ಕತ್ತಿದೀಯ?'

'ಪ್ಲೀಸ್ ಗೆಟ್ ಔಟ್' – ಎಂದು ಅವನು ಎದ್ದು ನಿಂತ.

ತಾಳ್ಮೆ ಕಳೆದುಕೊಳ್ಳಬಾರದೆಂದು ಅವಳು ಶಾಂತವಾಗಿ ಕುಳಿತಳು. ಅವನೇ ಕಾಲಿಗೆ ಎಕ್ಕಡ ಮೆಟ್ಟಿಕೊಂಡು ಹೊರಗೆ ಹೊರಟುಹೋದ. ಬಾಗಿಲಿನ ತನಕ ಬಂದು ಅವಳು ಕೂಗಿದರೂ ಹಿಂತಿರುಗಿ ನೋಡಲಿಲ್ಲ. ಅವಳು ಎರಡು ಗಂಟೆ ಕಾದು ಕುಳಿತಳು. ಅವನು ಹಿಂತಿರುಗಲಿಲ್ಲ. ಅವಳೇ ಎದ್ದು ಪಕ್ಕದ ಆಫೀಸಿಗೆ ಹೋದಳು. ಗುಮಾಸ್ತೆ ಕೂತು ಲೆಕ್ಕ ಬರೆಯುತ್ತಿದ್ದ. ವಿಚಾರಿಸಿದಳು. 'ಅವರದ್ದು ಹೀಗೆ ಅಂತ ಹೇಳೂಹಾಗಿಲ್ರಮ್ಮ. ಕಾರು ತಗಂಡು ಹೋಗಿದಾರೆ. ಬೆಂಗಳೂರಿಗೆ ಹೋಗಿರ್‌ಭೌದು. ಮತ್ತೆ ಎಲ್ಲಿಗಾದರೂ ಹೋಗಿರ್‌ಭೌದು' – ಎಂದ. ಅವನು ಹೋಗುವಾಗ ನಡೆದುಕೊಂಡೇ ರಸ್ತೆಯಿಂದ ಆಚೆಗೆ ಹೋಗಿದ್ದ. ಅನಂತರ ತಾನು ಒಳಗೆ ಬಂದು ಕೂತಳು. ಈ ನಡುವೆ ಅವನು ಯಾವಾಗ ಬಂದು ಕಾರು ತೆಗೆದುಕೊಂಡು ಹೋದನೋ ತಿಳಿಯಲಿಲ್ಲ. ಇನ್ನು ಇಲ್ಲಿ ಕೂತು ಪ್ರಯೋಜನ ವಿಲ್ಲ. ಊರಿಗೆ ಹೋಗಬೇಕು. ಮೀರಾ ಒಬ್ಬಳೇ ಕಾಯುತ್ತಿದ್ದಾಳೆ. ಮುಂದಿನ ಕ್ರಮವನ್ನು ಆಲೋಚಿಸಬೇಕು – ಎಂದು ತನ್ನ ಕೈಚೀಲವನ್ನು ತೆಗೆದುಕೊಂಡು, 'ರೂಮಿಗೆ ಬೀಗ ಹಾಕ್ಕಳಿ' ಎಂದು ಗುಮಾಸ್ತರಿಗೆ ಹೇಳಿ ಹೊರಟುಬಂದಳು. ಅಂಗಡಿಗೆ ಹೋಗಿ ಮೋಹನದಾಸನನ್ನು ನೋಡೋಣವೇ ಎಂಬ ಯೋಚನೆ ಬಂತು. ಮೀರಾಳ ಕೈಲಿ ಮೊದಲು ಮಾತಾಡಬೇಕು; ಅವನ ಸ್ವಭಾವ ದುಡುಕು; ಸಿಟ್ಟಿನಲ್ಲಿ ಒಂದಲ್ಲ ಒಂದು ಮಾಡಿಯಾನು; ಶ್ರೀನಿವಾಸನನ್ನು ದಾರಿಗೆ ತರುವ ದಾರಿಯನ್ನು ತಾವಿಬ್ಬರೇ ಶಾಂತವಾಗಿ ಆಲೋಚಿಸಬೇಕು – ಎಂದು ನಿಶ್ಚಯಿಸಿ, ನೇರವಾಗಿ ಬಸ್‌ಸ್ಟ್ಯಾಂಡಿಗೆ ಬಂದಳು.

ಸಂಜೆ ಆರು ಗಂಟೆಯ ಹೊತ್ತಿಗೆ ಊರು ತಲುಪಿ ತೋಟಕ್ಕೆ ಹೋದಾಗ ಮೀರಾ ಕೊಳದ ದಡದಲ್ಲಿ ಕುಳಿತಿದ್ದಳು. ಹೋದ ಕೆಲಸ ಏನಾಯಿತೆಂದು ಅವಳು ಕೇಳಲಿಲ್ಲ. ಸತ್ಯಳೇ, 'ಹೊಟ್ಟೆಗೆ ಏನು ತಿಂದೆ?' ಎಂದು ಕೇಳಿದಳು. 'ಏನೂ ಬೇಡ' – ಅವಳೆಂದಳು. ಸತ್ಯ ಒಳಕ್ಕೆ ಹೋಗಿ ನೋಡುತ್ತಾಳೆ: ಮೀರಾ ಪಾತ್ರೆಗಳನ್ನು ತೊಳೆದು ಅಡಿಗೆಮನೆಯನ್ನು ಸಾರಿಸಿ ರಂಗವಲ್ಲಿ ಹಾಕಿದ್ದಾಳೆ. ಆದರೆ ಏನೂ ಅಡಿಗೆ ಮಾಡಿಲ್ಲ. ಬೆಳಗ್ಗೆ ಊರಿನಿಂದ ಆಳು ತಂದುಕೊಟ್ಟ ಹಾಲನ್ನು ಸಹ ಕಾಯಿಸಿಲ್ಲ, ಕುಡಿದಿಲ್ಲ. ಅಂಗಳದಲ್ಲಿ ಹವನಕುಂಡವನ್ನು ಅಣಿ ಮಾಡಿದ್ದಾಳೆ. ಕೊಟ್ಟಿಗೆಮನೆಯ ಬಾಗಿಲು ತೆಗೆದು ಒಂದೇ ಉದ್ದದ ಚಕ್ಕೆಗಳನ್ನು ಆರಿಸಿ ತಂದು ಅದರ ಪಕ್ಕದಲ್ಲಿ ಜೋಡಿಸಿಟ್ಟಿದ್ದಾಳೆ. ಕುಂಡದ ಸುತ್ತ ಸಾರಿಸಿ ಇಟ್ಟಿದ್ದ ರಂಗವಲ್ಲಿ ಎದ್ದು ಕಾಣುತ್ತಿದೆ.

'ಯಾಕೆ ಹೀಗೆ ಉಪವಾಸ ಮಾಡಿದೆ? ಏನಾದರೂ ಮಾಡಿಕೊಂಡು ತಿನ್ನ

ಬಾರದಾಗಿತ್ತೆ?'

'ನಂಗೆ ಹಸಿವೇ ಆಗಲಿಲ್ಲ. ನೀವೇನು ತಿಂದಿರಿ?'

'ಬಸ್ಸು ಹೊರಡುಕ್ಕೆ ಮುಂಚೆ ಎರಡು ದೋಸೆ, ಎರಡು ಒಡೆ, ಒಂದು ಕಾಫಿ ತಗಂಡಿದ್ದೆ.'

'ಈಗ ಅಡಿಗೆ ಮಾಡಲೆ?'

ಮೀರಾ ಶಾಂತವಾಗಿದ್ದಳು. ಬೆಳಗ್ಗೆ ತಾನು ಹೊರಟಾಗ ಇದ್ದ ದುಃಖ ನಿರಾಶೆಗಳು ಮುಖದ ಮೇಲೆ ಇರಲಿಲ್ಲ. ಅಮುಕಿಹಿಡಿದ ದುಗುಡವು ಸೂಕ್ಷ್ಮ ವಾಗಿ ಕಾಣುತ್ತಿದ್ದರೂ ಶಾಂತಿ ಮಾತ್ರ ಎದ್ದುತೋರುತ್ತಿತ್ತು. ಸತ್ಯ ಆ ವಿಷಯ ಮಾತನಾಡಲಿಲ್ಲ. ಸ್ನಾನ ಮಾಡಿ ಅಡಿಗೆಗೆ ಇಟ್ಟಳು. 'ಇದನ್ನ ಅಣಿ ಮಾಡಿ ದೀನಿ. ನೀವು ಹವನ ಮಾಡಿ. ನಾನು ಅಡಿಗೆ ನೋಡ್ಕತ್ತೀನಿ' – ಮೀರಾ ಎಂದಳು. ಅಗ್ನಿಯನ್ನು ಪುಟಮಾಡಿ, ಕರಗಿದ ತುಪ್ಪ ಮತ್ತು ದರ್ವಿಗಳನ್ನು ಹತ್ತಿರ ಇಟ್ಟುಕೊಂಡು ಸತ್ಯ ಮಂತ್ರ ಹೇಳಿಕೊಳ್ಳುತ್ತಾ ಹವನ ಮಾಡುತ್ತಿದ್ದಳು. ಅಡಿಗೆಕೋಣೆಯ ಒಳಬಾಗಿಲಿನಲ್ಲಿ ಕೂತು ಮೀರಾ ಗಮನವಿಟ್ಟು ಅಗ್ನಿಯನ್ನು ನೋಡುತ್ತಿದ್ದಳು. ಎಲ್ಲ ಮುಗಿದ ಮೇಲೆ ಅವಳೇ ಹತ್ತಿರ ಬಂದು ಭಸ್ಮವನ್ನು ಬೆರಳಿನಿಂದ ಹಿಡಿದು ಹಣೆಗೆ ಇಟ್ಟುಕೊಂಡಳು.

ಇಬ್ಬರೂ ಬಡಿಸಿಕೊಂಡು ಎದುರುಬದುರಾಗಿ ಕುಳಿತು ಊಟ ಮಾಡುವಾಗ ಸತ್ಯ ಕೇಳಿದಳು: 'ಅವನು ನಿನಗೆ ಕಾಗದ ಬರೆಯುತ್ತಿದ್ದನೆ?'

'ಹೂಂ.'

'ಅವೆಲ್ಲ ಇವೆಯೇ?'

'ಹಾಸ್ಟೆಲಿನಲ್ಲಿ ಪೆಟ್ಟಿಗೇಲಿವೆ.'

"ಜೊತೆಗೆ ಈ ಫೋಟೋ ಇದೆ. ಇಷ್ಟು ಸಾಕು. ನೀನು ಅವನ ಹತ್ತಿರ ಹೋಗಿ, 'ಈ ಸಾಕ್ಷಿ ಇದೆ. ಮದುವೆಯಾಗಲೇಬೇಕು ಅಂತ ನಾನು ಕೋರ್ಟಿ ನಲ್ಲಿ ಕೇಸು ಮಾಡ್ತೀನಿ' ಅನ್ನು. ಬೈಯಬೇಡ. ತಾಳ್ಮೆ ಕಳಕೊಬೇಡ. ಉಪಾಯವಾಗಿ ಮಾತಾಡು. ಆದರೆ ಕೋರ್ಟಿಗೆ ಹೋಗೂದು ಖಂಡಿತ ಅನ್ನು. ದಾರಿಗೆ ಬರ್ತಾನೆ."

'ಕೋರ್ಟಿಗೇ ಹೋಗಬೇಕಾದರೆ ಇನ್ನೂ ಸಾಕ್ಷಿ ಇದೆ' – ಎಂದ ಮೀರಾ ಮುಂದೆ ಹೇಳಲು ನಾಚಿಕೊಂಡು ತಲೆತಗ್ಗಿಸಿದಳು.

'ಏನು ಹೇಳು.'

'ಹ್ಯಾಗೆ ಹೇಳ್ಲಿ? ನೀವು ಏನಂತೀರ?'

'ಯಾಕೆ ಏನಾದರೂ....ಹೆಚ್ಚು ಕಮ್ಮಿ ಮಾಡ್ಕಂಡಿದೀಯ?'

'ಏನೂ ಆಗಿಲ್ಲ. ಆದರೆ ನಾಲ್ಕು ಸಲ ಇಬ್ಬರೂ ನಂದಿಬೆಟ್ಟಕ್ಕೆ ಹೋಗಿ ಟ್ರಾವೆಲರ್ಸ್ ಬಂಗಲೆಯಲ್ಲಿ ಇದ್ದೆವು. ಜವಾನನ ಹತ್ತಿರ ಪುಸ್ತಕ ಇರುತ್ತಲ, ಅದರಲ್ಲಿ ಇವರೇ, ಮಿಸೆಸ್ ಅ್ಯಂಡ್ ಮಿಸ್ಟರ್ ಶ್ರೀನಿವಾಸ, ಎಸ್. ಎಸ್. ಮೋಟಾರ್ ಸರ್ವೀಸ್ ಪ್ರಪ್ರೈಟರು, ತುಮಕೂರು ಅಂತ ಬರೆದು ರುಜು ಮಾಡಿದಾರೆ. ಇವರು ಈ ಕಾರಿನಲ್ಲೇ ಬರ್ತಿದ್ರು ಅಂತ ನನ್ನ ರೂಮ್‌ಮೇಟ್ ಸಾಕ್ಷಿ ಹೇಳಬಹುದು.'

'ಹಾಗಾದ್ರೆ ಅವನು ಬ್ರಹ್ಮಾಂಡ ಹೊಕ್ಕರೂ ತಪ್ಪಿಸ್‌ಕಳುಕ್ಕಾಗುಲ್ಲ. ಹಾಗಂತ ಮೊದಲೇ ಕೋರ್ಟಿಗೆ ಹೋಗೂದು ಬ್ಯಾಡ. ಹೆದರಿಸಿದರೆ ಸಾಕು.'

'ಅದು ಬ್ಯಾಡಿ.'

'ಯಾಕೆ ಹೀಗಂತೀಯ?'

'ಪ್ರೀತಿ ಅನ್ನೂದ ಬಲವಂತ ಮಾಡಿ, ಹೆದರಿಸಿ ಹುಟ್ಟಿಸಬೇಕೆ? ಅಂಥಾ ಮದುವೆ ನನಗೆ ಬ್ಯಾಡ.'

'ಪ್ರೀತಿ ಇಲ್ಲ ಅಂತ ತಿಳ್ಕಾಬ್ಯಾಡ. ಮಧ್ಯದಲ್ಲಿ ಏನೋ ಆಗಿದೆ.'

'ಅಂದರೆ ಇವತ್ತು ನೀವು ತುಮಕೂರಿಗೆ ಹೋಗಿದ್ದ ಕೆಲಸ ಆಗಲಿಲ್ಲ ಅಂತ ಆಯಿತು. ಅವರು ಏನಂದ್ರು ಹೇಳಿ.'

ಸತ್ಯ ಮಾತನಾಡಲಿಲ್ಲ. ಮೀರಳೇ ಮತ್ತೊಂದು ಸಲ ಕೇಳಿದ ಮೇಲೆ, 'ಆ ಮಾತು ಬ್ಯಾಡ. ನಾನು ಹೇಳಿದ ಹಾಗೆ ಕೇಳು. ಎಲ್ಲ ಸರಿಯಾಗುತ್ತೆ' ಎಂದಳು.

ಅರ್ಧ ಬಟ್ಟಲು ನೀರು ಕುಡಿದು ಮೀರಾ ನಿಧಾನವಾಗಿ ಎಂದಳು: 'ಬೆಳಗೆ ನೀವು ಹೋದಮೇಲೆ ನಾನು ಯೋಚನೆ ಮಾಡ್ತಿದ್ದೆ. ನೀವು ವಾಪಸು ಬರೂದು ಇಷ್ಟು ಹೊತ್ತಾಗುತ್ತೆ ಅಂತ ನಾನು ನಿರೀಕ್ಷಿಸಿಯೇ ಇರಲಿಲ್ಲ. ಹತ್ತು ನಿಮಿಷ ದಲ್ಲಿ ಮಾತು ಮುಗಿದು ನೀವು ಮುಂದಿನ ಬಸ್ಸಿಗೇ ಬರ್ತೀರಾ ಅನ್ನುಸ್ತಿತ್ತು.' ಸತ್ಯಳಿಗೆ ಆಶ್ಚರ್ಯವಾಯಿತು. ವಾಸ್ತವವಾಗಿ ಮಾತು ನಡೆದುದು ಅಷ್ಟೇ ಹೊತ್ತು. ಅನಂತರ ತಾನು ಕಾದು ಕುಳಿತದ್ದರಿಂದ ಅಷ್ಟು ಹೊತ್ತಾಯಿತು. ಮೀರಾ ಹೇಳುತ್ತಿದ್ದಳು: 'ನೀವು ಬಂದ ತಕ್ಷಣ ಹವನ ಮಾಡಲಿ ಅಂತ ಆ ಜಾಗಾನ ಚನ್ನಾಗಿ ತೊಳೆದು ರಂಗವಲ್ಲಿ ಹಾಕಿದೆ. ಆ ಮೊಳೆಗೆ ತಗಲುಹಾಕಿದ್ದ ಬೇಗದ ಕೈ ತಗಂಡು ಹೋಗಿ ಸಮಿತ್ತು ಜೋಡಿಸಿ ತಂದಿಟ್ಟೆ. ಅದೇ ಜಾಗದಲ್ಲಿ ಕೂತಿದ್ದಾಗ ಅನಿಸಿತು. ನೆನ್ನೆ ಅವರು ನನ್ನ ಕೈಲಿ ಆಡಿದ ಮಾತೆಲ್ಲ ಜ್ಞಾಪಕಕ್ಕೆ ಬಂತು. ನೋಡಿ, ಹರಿಜನರ ಜಾತೀಲೇ ಹುಟ್ಟಿ ಬೆಳೆದ ನನಗೆ ಕುಡುಕರ ಮನಸ್ಸು ಗೊತ್ತಿದೆ. ಒಳಮನಸ್ಸಿನಲ್ಲಿರೂದು ಕುಡಿದಾಗ ನಾಲಗೇಲಿ ಬರುತ್ತೆ. ನೆನ್ನೆ ಅವರು ನನ್ನ ವಿಷಯ ಏನೇನು ಆಡಿದರೋ ಅದೆಲ್ಲ ಅವರ ನಿಜವಾದ

ಮಾತೇ. ಖಂಡಿತ ಅವರು ನನ್ನ ಪ್ರೀತಿಸುಲ್ಲ. ಅಂದ್ರೆ ಧರ್ಮೇಚ ಅರ್ಥೇಚ ಕಾಮೇಚ ಅಂತ ನೀವು ಮದುವೆ ಶಾಸ್ತ್ರದಲ್ಲಿ ಹೇಳುಸ್ತೀರಂತಲ್ಲ, ಆ ಪ್ರೀತಿ ಅವರಿಗೆ ಇಲ್ಲ. ಕಾಮದ ಪ್ರೀತಿ ಇದೆ ಅಂತ ಕುಡಿದಾಗಿನ ಮಾತಿನಲ್ಲೂ ಗೊತ್ತಾಯ್ತು. ನಮ್ಮ ಜಾತಿ ಹೆಂಗಸರ ಮೇಲೆ ಅಂಥ ಪ್ರೀತಿ ಸಾವಿರಾರು ವರ್ಷ ಗಳ ಮೊದಲಿನಿಂದಲೂ ಇತ್ತು. ಧರ್ಮ ಮತ್ತು ಅರ್ಥದ ಮಟ್ಟದಲ್ಲಿ ಯಾವತ್ತೂ ಇರಲಿಲ್ಲ. ಇವರಿಗೂ ಇಲ್ಲ. ಅದು ಬಲವಂತ ಮಾಡಿ ಹೆದರಿಸಿದರೆ ಬರುತ್ತೆಯೇ?'

ಸತ್ಯ ನಿಬ್ಬೆರಗಾದಳು. ತನಗೆ ಈ ಅರ್ಥ ಹೊಳೆದಿರಲಿಲ್ಲ. ಇದನ್ನು ಶ್ರೀನಿವಾಸನ ಸಂಕಲ್ಪಶಕ್ತಿಯ ಅಭಾವ ಅಥವಾ ಅವರ ಅಪ್ಪನ ಪ್ರಭಾವ ಎಂದು ಮುಂತಾಗಿ, ಒಬ್ಬ ವ್ಯಕ್ತಿಯ ಒಂದು ಸಮಸ್ಯೆಯಂತೆ ಯೋಚಿಸುತ್ತಾ ಬೆಳಗಿನಿಂದ ತೊಳಲು ತ್ತಿದ್ದೇನೆ. ಆದರೆ ಮೀರಾ ಇದರ ಮೂಲಕ ಇಡೀ ಇತಿಹಾಸವನ್ನು ನೋಡುತ್ತಿ ದ್ದಾಳೆ. ಈ ಆಳದ ಶೋಧಕದೃಷ್ಟಿ ಈ ಹುಡುಗಿಗೆ ಇದೆ ಎಂದು ತಾನು ಯೋಚಿಸಿಯೇ ಇರಲಿಲ್ಲ. ಇವಳು ಬುದ್ಧಿವಂತೆ – ಗಂಭೀರವಾಗಿ ಓದುವ ಅಭ್ಯಾಸ ವಿದೆ, ಆಲೋಚಿಸುವ ಪ್ರವೃತ್ತಿಯೂ ಇದೆ – ಎಂಬುದು ತನಗೆ ಗೊತ್ತಿತ್ತು. ಆದರೆ ತನ್ನ ನೋವಿನ ಬಿಂದುವನ್ನೇ ಹಿಡಿದು ಅದರ ಮೂಲಕ ಇತಿಹಾಸವನ್ನು ಸಮೀಕ್ಷಿಸುವ ಬೌದ್ಧಿಕಗತಿ ಇದೆ ಎಂಬುದನ್ನು ತಿಳಿದಿರಲಿಲ್ಲ. ಅವಳು ಮತ್ತೆ ಮಾತನಾಡಲಿಲ್ಲ. ಮೀರಳೂ ಸುಮ್ಮನಿದ್ದಳು.

ಮೀರಾ ಸರಿಯಾಗಿ ಊಟ ಮಾಡಲಿಲ್ಲ. ಹಾಗೆಂದು ನೆನ್ನೆ ರಾತ್ರಿಯಂತೆ ಅನ್ನವನ್ನು ಅಸಹ್ಯಿಸಿಕೊಳ್ಳಲೂ ಇಲ್ಲ. ಇಷ್ಟು ಮಾಡಿದರೆ ಸಾಕು ಎಂದು ಸತ್ಯಳೂ ಹೆಚ್ಚು ಬಲವಂತ ಮಾಡಲಿಲ್ಲ. ಊಟ ಮಾಡಿ ಉಳಿದದ್ದನ್ನು ತೆರವು ಮಾಡಿ, ಇಬ್ಬರೂ ಆಗಲೇ ಪಾತ್ರೆ ತೊಳೆದಿಟ್ಟರು. ಒಲೆ ಇನ್ನೂ ಬಿಸಿಯಾಗಿದ್ದು ಬೆಂಕಿ ಆರದಿದ್ದುದರಿಂದ, ಬೂದಿ ತೆಗೆದು ಒಲೆ ಸಾರಿಸಲು ಹೋಗಲಿಲ್ಲ. ನೆನ್ನೆಯಂತೆ ಇಬ್ಬರೂ ಒಂದೇ ಹಾಸಿಗೆಯ ಮೇಲೆ ಮಲಗಿದರು. ಸತ್ಯ ಕೇಳಿದಳು: 'ಅವನು ಬಂದು ನಿನ್ನನ್ನ ಮೊದಲ ಸಲ ಕೇಳಿದಾಗ ನಿನಗೆ ಅವನ ವಿಷಯವೆಲ್ಲ ಗೊತ್ತು. ಅಂದರೆ ಅವನು ಮೊದಲು ನನ್ನನ್ನ ಮದುವೆಯಾಗಬೇಕು ಅಂತಿದ್ದ. ಆಮೇಲೆ ಬೇರೆ ಮದುವೆಯಾದ. ಬಸುರಿಯಾದ ಹೆಂಡತಿ ಸತ್ತಳು. ಅಂದರೆ ಮೊದಲ ಗಂಡೇನಲ್ಲ. ಅಂಥವನ ಮೇಲೆ ನಿನಗೆ ಹ್ಯಾಗೆ ಮನಸ್ಸು ಒಪ್ಪಿತು?'

'ಹ್ಯಾಗೆ ಹೇಳಲಿ?'

'ಯೋಚಿಸಿ ಹೇಳು ನೋಡಾಣ. ನಿಜವಾದ ಮಾತು ಹೇಳು.'

ಮೀರಾ ಹತ್ತು ನಿಮಿಷ ಸುಮ್ಮನಿದ್ದಳು. ಅವಳು ಆಳವಾಗಿ ಯೋಚಿಸು ತ್ತಿದ್ದಾಳೆಂದು ಸತ್ಯಳಿಗೆ ಕತ್ತಲೆಯಲ್ಲೂ ಎನಿಸುತ್ತಿತ್ತು. ಅನಂತರ, 'ಹೇಳು'

ಎಂದು ಮತ್ತೊಮ್ಮೆ ಕೇಳಿದಾಗ ಎಂದಳು: 'ಮಂತ್ರಿಗಳ ಮಗ ಅಥವಾ ಅನುಕೂಲಸ್ಥರು ಅನ್ನೋದು ನನಗೇನೂ ಇರಲಿಲ್ಲ. ಮೇಲುಜಾತಿಯೋರು ಅನ್ನುವ ಆಕರ್ಷಣೆ ಇತ್ತು ಅಂತ ಕಾಣುತ್ತೆ. ನೀವು ಕೇಳಿದಿರಿ ಅಂತ ನಾನು ಯೋಚನೆ ಮಾಡಿ ಹೇಳ್ತಿದೀನಿ. ವಾಸ್ತವವಾಗಿ ಅದೊಂದೇ ಇತ್ತೇ ಅಂತ ಗೊತ್ತಿಲ್ಲ.'

'ಮೇಲು ಕೆಳಗು ಅನ್ನೋದನ್ನ ಮನಸ್ಸಿನಲ್ಲಿ ಒಪ್ತೀ ಏನು?'

'ಮೇಲಿನೋರು ತಮ್ಮೊಳಗೆ ಸೇರಿಸಿ ಒಂದುಮಾಡಿಕೊಳ್ಳೊತನಕ ಅದು ಎಲ್ಲಿ ಹೋಗುತ್ತೆ? ಬುದ್ಧಿ ಬೇಕಾದ್ದು ಹೇಳಬಹುದು. ಆದರೆ ಮನಸ್ಸಿನ ಬಯಕೆಗಿಂತ ಹೆಚ್ಚಿನ ನಿಜವಿಲ್ಲ.'

ಸತ್ಯ ತನ್ನ ಎಡಮಗ್ಗುಲಿಗೆ ಹೊರಳಿ ತನ್ನ ಬಲಗೈಯಿಂದ ತಡಕಿ ಅವಳ ಕೈಯನ್ನು ಹಿಡಿದು ಬಿಗಿಯಾಗಿ ಹಿಸುಕಿದಳು.

## ೯

ಬೆಳಗ್ಗೆ ಎದ್ದು ಮುಖ ತೊಳೆದ ಮೇಲೆ ಮೀರಾ ಕೇಳಿದಳು: 'ಹೆಂಗಸರಿಗೂ ಯಜ್ಞೋಪವೀತದ ಅಧಿಕಾರ ಉಂಟು ಅಂತ ನಿಮ್ಮ ತಂದೆಯೋ ಹೇಳಿದರೆ?'

'ಹೇಳಲಿಲ್ಲ. ನನಗೆ ಜನಿವಾರ ಹಾಕಿದರು.'

'ಅಂದ್ರೆ ನಮ್ಮ ಜಾತಿಯ ಹೆಂಗಸರಿಗೆ?'

'ಇದೇನು ಹೊಸದಾಗಿ ಕೇಳ್ತೀಯ? ಶೂದ್ರರಿಗೆ ಅಧಿಕಾರವಿಲ್ಲ ಅಂದ ಮೇಲಿನ ಮೂರು ಜಾತಿಯವರು, ತಮ್ಮ ಹೆಂಗಸರಿಗೂ ಇಲ್ಲ ಅಂದ್ರು. ಅಂದ್ರೆ ಅವರ ಹೆಂಗಸರನ್ನೂ ಶೂದ್ರರನ್ನೇ ಮಾಡಿದರು. ನಾನು ಇದನ್ನ ಹಾಕಿಕೋಬಹುದಾದರೆ ನೀವು ಯಾಕೆ ಹಾಕಿಕೋಬಾರದು?'

'ಹಾಗಾದರೆ ನನಗೆ ಹಾಕ್ತೀರಾ?'

ಸತ್ಯ ಆಶ್ಚರ್ಯದಿಂದ ಅವಳ ಮುಖವನ್ನು ನೋಡಿದಳು. ಮೀರಾ ಗಂಭೀರವಾಗಿ ಕೇಳುತ್ತಿದ್ದಳು. 'ಈಗ ಯಾಕೆ ಈ ಬಯಕೆ ಬಂತು?' – ಎಂದದ್ದಕ್ಕೆ, 'ಬರಬಾರದೆ?' ಎಂದಳು. 'ಯಾರು ಬಯಸ್ತಾರೋ ಅವರಿಗೆ ಇಲ್ಲ ಅನ್ನಬಾರದು. ನಮ್ಮಪ್ಪ ಸಾಯುಕ್ಕೆ ಮೊದಲು ತಂದಿಟ್ಟಿದ್ದ ಜನಿವಾರಗಳು ಇನ್ನೂ ಇವೆ. ನೀನು ಸ್ನಾನಮಾಡಿ, ನೆನ್ನೆ ಮಾಡಿದಹಾಗೆ ಹವನಕುಂಡದ ಜಾಗವನ್ನು ಶುಚಿಮಾಡಿ ಅಣಿಮಾಡು.'

ಮೀರಾ ಕೊಳದ ದಡದಲ್ಲಿ ಬದುವಿನ ಮೇಲಿದ್ದ ಕಲ್ಲಿನ ಮೇಲೆ ಕುಳಿತು ತಲೆಗೂ ಸ್ನಾನ ಮಾಡಿದಳು. ಅವಳ ಹತ್ತಿರ ಬೇರೆ ಸೀರೆ ಇರಲಿಲ್ಲ. ಸತ್ಯ

ಕೊಟ್ಟ ಒಂದು ಮಡಿಸೀರೆ ಉಟ್ಟು, ತನ್ನ ಬಟ್ಟೆಗಳನ್ನು ಒಗೆದು ಒಣಗಹಾಕಿದಳು. ಸತ್ಯಳ ರವಿಕೆ, ಅವಳ ದಪ್ಪ ಮೈಕಟ್ಟಿಗೆ ಆಗಲಿಲ್ಲ. ಹಾಗೆಯೇ ಸೆರಗನ್ನು ಹೊದೆದುಕೊಂಡು ನೆಲ ತೊಳೆದು ರಂಗವಲ್ಲಿ ಹಾಕಿ ಸಮಿತ್ತುಗಳನ್ನು ತಂದಿಟ್ಟಳು. ತಾನೂ ಸ್ನಾನ ಮಾಡಿದ ಸತ್ಯ ಬೇಲಿಯ ಹತ್ತಿರಕ್ಕೆ ಹೋಗಿ ದರ್ಭೆಯನ್ನು ಕಿತ್ತುತಂದು, ಎರಡು ಪವಿತ್ರ ಮಾಡಿಟ್ಟಳು. ಪಂಚಪಾತ್ರೆಗೆ ತುಪ್ಪ ಬಗ್ಗಿಸಿ ತಂದಿಟ್ಟುಕೊಂಡು ಕುಳಿತು, ಮೊದಲು ಸಂಧ್ಯಾವಂದನೆ ಮಾಡಿ, ಅನಂತರ ಪವಿತ್ರ ಧರಿಸಿ ಹವನ ಮಾಡಿದಳು. ಅನಂತರ ಮೀರಳನ್ನು ಅಗ್ನಿಯ ಎದುರಿಗೆ ಕೂರಿಸಿ ಯಜ್ಞೋಪವೀತಂ ಪರಮಂ ಪವಿತ್ರಂ ಹೇಳಿಕೊಂಡು ಅವಳ ಕೊರಳಿಗೆ ಮೂರೆಳೆಯ ಜನಿವಾರವನ್ನು ಹಾಕಿ ಅವಳ ಕಿವಿಯಲ್ಲಿ ಗಾಯತ್ರಿಯನ್ನು ಉಸುರಿ, ಅವಳ ಬಾಯಲ್ಲಿ ಹೇಳಿಸಿದಳು. ಅವಳ ಬೆರಳಿಗೆ ಪವಿತ್ರವನ್ನು ಇಟ್ಟು, ತಾನು ಮಂತ್ರ ಹೇಳುತ್ತಾ, ಅವಳಿಂದ 'ಓಂ ಭೂಃ ಅಗ್ನಯೇ ಸ್ವಾಹಾ' ಎಂದು ಹೇಳಿಸಿ ಆಜ್ಯವನ್ನು ಬಿಡಿಸುತ್ತಾ ಹವನ ಮಾಡಿಸಿದಳು. ಅನಂತರ, 'ಓಂ ಅಗ್ನೇ ನಯ ಸುಪಥಾರಾಯೇ ಅಸ್ಮಾನ್ । ವಿಶ್ವಾನಿ ದೇವ ವಯುನಾನಿ ವಿದ್ವಾನ್' ಎಂದು ಹೇಳಿಸುತ್ತಾ ಅಗ್ನಿಗೆ ಪ್ರದಕ್ಷಿಣೆ ಮಾಡಿಸಿದಳು.

ಎಲ್ಲ ಮುಗಿದ ನಂತರ ಎಂದಳು: 'ಹಾಸ್ಟೆಲಿನಲ್ಲಿರ್ತೀಯ. ಹವನಕ್ಕೆ ಅನುಕೂಲವಿರುಲ್ಲ. ಸಂಧ್ಯಾವಂದನೇನ ಮಾಡಬಹುದು. ಐದಾರು ದಿನದಲ್ಲಿ ಕಲೀಬಹುದು. ಬರೆದುಕೊಡ್ತೀನಿ. ಆದರೆ ನೀನು ಸಂಧ್ಯಾವಂದನೆ ಮಾಡ್ತೀಯ ಅಂದ್ರೆ, ಉಳಿದೋರು, ಉಳಿದ ಜಾತಿಯೋರು, ಎಲ್ಲ ಜಾತಿಯ ಹೆಂಗಸರು, ನಿಮ್ಮ ಜಾತಿಯೋರು, ಆಡ್ಕತಾರೆ. ಅದನ್ನ ಲೆಕ್ಕಿಸದೆ ಇರುವಷ್ಟು ಸಂಕಲ್ಪಶಕ್ತಿ ಇಟ್ಟುಕೊ.'

ಅಷ್ಟರಲ್ಲಿ ಬಿಸಿಲಿನಲ್ಲಿ ಒಣಗುಹಾಕಿದ್ದ ಅವಳ ಸೀರೆ ಒಣಗಿತ್ತು. ಲಂಗ, ಬಾಡಿ, ರವಿಕೆಗಳು ಅರೆ ಒದ್ದೆಯಾಗಿದ್ದುವು. ಮೀರಾ ಅವುಗಳನ್ನುಟ್ಟು ಬಂದು, 'ನಾನು ಮನೆಗೆ ಹೋಗ್ತೀನಿ' ಎಂದಳು.

'ಊಟ ಮಾಡ್ಕಂಡು ಹೋಗು. ಬೆಂಗ್ಳೂರಿಗೆ ಯಾವತ್ತು ಹೋಗ್ತೀಯ?'

'ಗೊತ್ತಿಲ್ಲ.'

'ಅಂದ್ರೆ ಓದೋದ ಬಿಡ್ಬೇಡ. ಶ್ರೀನಿವಾಸನ ವಿಷಯ ಹೆಚ್ಚಾಗಿ ಹಚ್ಚಿಕೊ ಬೇಡ. ನಾನು ಅವನಿಗೆ ಇನ್ನೊಂದು ಸಲ ಹೇಳ್ತೀನಿ.'

'ಅದೊಂದು ಮಾಡಬ್ಯಾಡಿ.'

ಅಷ್ಟರಲ್ಲಿ ಆಳು ಊರಿನಿಂದ ಹಾಲು ತಂದುಕೊಟ್ಟು ಹೋದ. ಸತ್ಯ ಕಾಫಿ ಕಾಯಿಸಲು ಹೋದಳು. ಮೀರಳೇ, 'ನನಗೆ ಒಂದು ಲೋಟ ಹಾಲು ಕೊಡಿ'

ಎಂದಳು. 'ಹಾಗಿರಬೇಕು ಹುಡುಗಿ' – ಎಂದು ಅವಳ ಬೆನ್ನು ತಟ್ಟಿ, ಸತ್ಯ ಹಾಲು ಕಾಯಲು ಇಟ್ಟಳು. 'ನೀವೂ ಕುಡೀಬೇಕು' – ಮೀರಾ ಎಂದಳು.

ಇಬ್ಬರೂ ಒಂದೊಂದು ಲೋಟ ಹಾಲು ಕುಡಿದರು.

ಸತ್ಯ ಸುಮ್ಮನೆ ಅವಳ ಮುಖ ನೋಡಿದಳು. ಮೀರಳ ಕಣ್ಣಿನಲ್ಲಿ ಕಳೆ ಇರಲಿಲ್ಲ. ಮುಖ ಮ್ಲಾನವಾಗಿತ್ತು. 'ನಿನಗ್ಯಾಕೆ ಈ ಮಂಕು? ಯಜ್ಞೋಪವೀತ ಹಾಕ್ಕೊಂಡಿದೀಯ. ಯಾರಿಗಿಂತಲೂ ನೀನು ಕಮ್ಮಿಯಲ್ಲ' – ಸತ್ಯ ಉತ್ಸಾಹ ದಿಂದ ಹೇಳಿದಳು.

ಮೀರಾ ಬಾಗಿ ಸತ್ಯಳ ಕಾಲು ಮುಟ್ಟಿ ನಮಸ್ಕಾರ ಮಾಡಿ, 'ಹೋಗಿ ಬರ್ತೀನಿ' ಎಂದಳು.

'ನಮಸ್ಕಾರ ಯಾಕೆ ಮಾಡ್ದೆ?'

'ನಾನು ಮಾದಿಗಿತ್ತಿಯಲ್ಲ ಅಂತ ಒಪ್ಪಿ ಜನಿವಾರ ಹಾಕಿದಿರಲ್ಲ.'

'ಯಾರೂ ಮಾದಿಗಿತ್ತಿಯರಲ್ಲ.'

'ನಿಮಗೆ ತಿಳಿಯುಲ್ಲ. ನೀವು ಬರೀ ವೇದಾಂತದ ಮಾತು ಹೇಳ್ತೀರಿ' – ಎನ್ನುವಾಗ ಅವಳ ಕಣ್ಣಿನಲ್ಲಿ ನೀರು ತುಂಬಿಕೊಂಡಿತು.

'ಬೆಂಗಳೂರಿಗೆ ಹೋಗುಕ್ಕೆ ಮೊದಲು ಬರ್ತೀಯಾ?'

ಮೀರಾ ಉತ್ತರ ಹೇಳಲಿಲ್ಲ. ತನ್ನ ವ್ಯಾನಿಟಿ ಚೀಲವನ್ನು ಹಿಡಿದು ಕಾಲಿಗೆ ಚಪ್ಪಲಿ ಮೆಟ್ಟಿ ಹೊರಟುಹೋದಳು. ಸತ್ಯ ಮನೆಯಿಂದ ಹೊರಗೆ ಬಂದು ಬದುವಿನ ಮೇಲೆ ನಿಂತು, ಅವಳು ಹೊಳೆಬಾಗಿಲು ದಾಟಿ ಮರೆಯಾಗುವತನಕ ನೋಡುತ್ತಾ ಇದ್ದಳು.

ಸತ್ಯ ದಿನವೆಲ್ಲ ಏನೂ ಮಾಡಲಿಲ್ಲ. ಮಧ್ಯಾಹ್ನ ಅಡಿಗೆ ಮಾಡಿ ಊಟ ಮಾಡಿದಳು. ಶ್ರೀನಿವಾಸ ಹೀಗೆ ಮಾಡುತ್ತಾನೆಂದು ತಾನು ಎಣಿಸಿರಲಿಲ್ಲ. ಆದರೆ ಅವನು ಮಾಡಿರುವುದರಲ್ಲಿ ಆಶ್ಚರ್ಯವಿಲ್ಲ. ಅವನ ಸಂಕಲ್ಪಶಕ್ತಿಯೇ ಕಡಿಮೆಯುದೆಂಬುದಕ್ಕೆ ಹೆಚ್ಚು ಸಾಕ್ಷಿ ಬೇಡ. ಆದರೆ ತನ್ನ ದೌರ್ಬಲ್ಯದಿಂದ ಇತರರಿಗೆ ಎಷ್ಟು ನೋವಾಗುತ್ತದೆಂಬ ಪರಿವೆ ಇರಬೇಡವೇ, ಎಂದುಕೊಂಡಳು. ಮೀರಳ ವ್ಯಕ್ತಿತ್ವವೇ ಮನಸ್ಸಿನಲ್ಲಿ ತುಂಬಿತ್ತು. ಅವಳು ನೆನ್ನೆ ಹೇಳಿದ ಐತಿಹಾಸಿಕ ಮಾತು ಈಗಲೂ ಬುದ್ಧಿಯಲ್ಲಿ ಧ್ವನಿಸುತ್ತಿತ್ತು.

ಆದರೆ ಒಂದು ತೃಪ್ತಿಯೂ ಮನಸ್ಸನ್ನು ತುಂಬಿತ್ತು: ಆ ದಿನ ತಾನು ಜೀವೊಬ್ಬರಿಗೆ, ಅದರಲ್ಲೂ ಇದುವರೆಗೆ ಮಾದಿಗರೆಂದು ದೂಡಲ್ಪಟ್ಟ ಜಾತಿಯವಳಿಗೆ, ಅದರಲ್ಲೂ ಶೂದ್ರರಲ್ಲಿ ಶೂದ್ರ ಎನಿಸಿಕೊಂಡ ಹೆಂಗಸಿಗೆ ಬ್ರಹ್ಮೋಪದೇಶ ಮಾಡಿದ್ದೇನೆ. ಉಪದೇಶ ಪಡೆಯುವ ಬಯಕೆ ಅವಳಿಂದಲೇ ಬಂತು. ಇವರ

ಅರ್ಥವು ಮನಸ್ಸು ಬುದ್ಧಿಗಳನ್ನು ಹೊಕ್ಕು ಹಿಡಿದರೆ ಸಾಕು. ಈಗ ಮೀರಳಿಗಾಗಿರುವಂತಹ ದುಃಖವನ್ನು ಹೆಚ್ಚು ಕಷ್ಟವಿಲ್ಲದೆ ಸಹಿಸಬಹುದು. ಆದರೂ ಪ್ರಯತ್ನಪಟ್ಟು ಶ್ರೀನಿವಾಸನನ್ನು ತಿದ್ದಬೇಕು. ಮೀರಾ ಹೇಳುವ ವ್ಯಾಖ್ಯೆ ಸೈದ್ಧಾಂತಿಕವಾಗಿ ಸರಿ. ಆದರೆ ವ್ಯಾವಹಾರಿಕವಾಗಿ ಅದು ಅತಿ ಆದರ್ಶದಿಂದ ಕೂಡಿದುದು. ಒಂದು ಹುಡುಗಿಯ ಜೊತೆಯಲ್ಲಿ ಇಷ್ಟೆಲ್ಲ ನಡೆದ ಮೇಲೆ ಮನಸ್ಸು ಬದಲಾಯಿಸುವವನನ್ನು ಏನಾದರೂ ಸರಿ, ಸುಮ್ಮನೆ ಬಿಡಬಾರದು.

ಅವಳಿಗೆ ಮೋಹನದಾಸನ ನೆನಪು ಬಂತು. ಈ ವಿಷಯ ತಿಳಿದರೆ ಅವನು ಸುಮ್ಮನಿರುವುದೇ ಇಲ್ಲ. ಇನ್ನು ಇಪ್ಪತ್ತು ದಿನವಿದೆ ದಸರಾ ರಜ. ಆಗ ಎಲ್ಲೆಲ್ಲೂ ದೇವಾಲಯದ ನಿತ್ಯಪ್ರವೇಶ ಕಾರ್ಯಕ್ರಮಕ್ಕೆ ವ್ಯವಸ್ಥೆ ಮಾಡಲು ಅವನು ಸುತ್ತುತ್ತಿದ್ದಾನೆ. ಪತ್ರಿಕೆಗಳಲ್ಲಿ ಆ ಬಗೆಗೆ ಸುದ್ದಿ ಬರುತ್ತಿದೆ. ಮುಖ್ಯಮಂತ್ರಿಗಳನ್ನು ಕಾಣಲು ಹೋದ ನಿಯೋಗದಲ್ಲಿ ಬೆಟ್ಟಯ್ಯನವರೂ ಸೇರಿದ್ದರು. ಹರಿಜನರು ಕೇಳಿದ ಕಡೆ ದೇವಸ್ಥಾನದ ಹತ್ತಿರ ಪೋಲೀಸರನ್ನು ಇಡುತ್ತಾರಂತೆ. ಮೋಹನದಾಸ ಈಗ ನಿಜವಾಗಿಯೂ ಯುದ್ಧಮನೋಭಾವದಲ್ಲಿದ್ದಾನೆ: ಶ್ರೀನಿವಾಸನ ವಿಷಯ ತಿಳಿದರೆ ಅವನನ್ನು ದೈಹಿಕವಾಗಿ ಹಿಡಿದು ಹೊಡೆದರೂ ಹೊಡೆಯಬಹುದು. ಆದರೆ ಹಾಗಾಗಬಾರದು. ಮುಂದೆ ಸಂಬಂಧಿಕರಾಗಬೇಕಾದ ಅವರು ಹೊಡೆದಾಡಬಾರದು. ಭಯವನ್ನು ಹುಟ್ಟಿಸಿ ಕೆಲಸ ಮಾಡಿಸಬೇಕು. ನಿಜವಾದ ಅಪಾಯ ಮಾಡಬಾರದು.

ಮನಸ್ಸಿಗೆ ಹಲವಾರು ಯೋಚನೆಗಳು ಬರುತ್ತಿದ್ದುವು. ರಾತ್ರಿ ಬೇಗ ನಿದ್ರೆ ಬರಲಿಲ್ಲ. ಇದೇ ಯೋಚನೆ, ಮೀರಳದೇ ಚಿಂತೆ. ಇಷ್ಟು ಒಳ್ಳೆಯ ಹುಡುಗಿಯನ್ನು ಕೈಹಿಡಿಯುವ ಭಾಗ್ಯವನ್ನು ಶ್ರೀನಿವಾಸ ಹಾಳುಮಾಡಿಕೊಳ್ಳುತ್ತಿದ್ದಾನೆಂಬ ಅನುಕಂಪ. ಅವಳು ಬೆಳಗ್ಗೆ ಎದ್ದು ಮುಖ ತೊಳೆದುಕೊಂಡಳು. ಇವತ್ತು ಮೈಸೂರಿಗೆ ಪ್ರೊಫೆಸರರಿಗೆ ಕಾಗದ ಬರೆಯಬೇಕೆಂದು ನಿರ್ಧರಿಸಿ, ಆಗಲೇ ಕೈಗೆ ಪೆನ್ನು ಕಾಗದ ತೆಗೆದುಕೊಂಡು ಕುಳಿತಳು. ಆರಂಭದ ವಾಕ್ಯವೇ ಸರಿಯಾಗಿ ರೂಪಗೊಳ್ಳಲಿಲ್ಲ. ಬಂದಂತೆ ಬರೆಯುವುದು, ಆಮೇಲೆ ಸರಿಯಾದ ರೂಪ ಬರುವಂತೆ ತಿದ್ದುವುದು ಎಂದು ಗೀಚಲು ಆರಂಭಿಸಿದಳು. ಏಳೆಂಟು ಪಂಕ್ತಿಯಾಗಿತ್ತು. ಅಷ್ಟರಲ್ಲಿ ಯಾರೋ ಬಂದಂತಾಯಿತು. ದೊಡ್ಡ ದೊಡ್ಡ ಹೆಜ್ಜೆಯ ಸಪ್ಪಳ ಕೇಳಿಸಿತು. ಅದು ಬೂಟುಕಾಲಿನ ಸದ್ದೆಂದು ಗುರುತಿಸುವಷ್ಟರಲ್ಲಿ ಮನೆಯ ಮುಂದೆ ಒಬ್ಬ ಕಾನಿಸ್ಟೇಬಲ್ ಬಂದು ಹೇಳಿದ: 'ಬೆಟ್ಟಯ್ಯಾರ ಮಗಳು ಕೆರೆಗೆ ಬಿದ್ದು ಸತ್ತಿದಾಳೆ. ಮಹಜರ್ ಆಗ್ತಿದೆ. ಏರೀ ಹತ್ತಿರ ನೀವು ಬರಬೇಕಂತೆ.'

ಕೇಳಿ ಅವಳಿಗೆ ಎದೆಯ ಚಲನೆ ನಿಂತಿತು. ಬುದ್ಧಿಗೆ ಸರಿಯಾಗಿ ಅರ್ಥವಾಗ

ಲಿಲ್ಲ. 'ಯಾರು ?' – ಎಂದಳು.

'ಬೆಟ್ಟಯ್ಯಾರ ಮಗಳು' – ಎಂದು ಕಾನಿಸ್ಟೇಬಲ್ ಮತ್ತೆ ಹೇಳಿದ.

ಪೆನ್ನು ಕಾಗದಗಳನ್ನು ಕೆಳಗಿಟ್ಟು, ತೆರೆದ ಬಾಗಿಲನ್ನು ಹಾಗೆಯೇ ಬಿಟ್ಟು ಅವಳು ಅವನ ಜೊತೆ ಬಂದಳು. ಅವನಿಗಿಂತ ಬೇಗ ಹೆಜ್ಜೆಹಾಕಿ ಗದ್ದೆಯ ಬದುಗಳ ಮೇಲೆ ನಡೆದು, ಕಾಲುವೆಯ ದಡದಲ್ಲಿ ಓಡಿ ತೂಬಿನ ಬಾಯಿಯ ಹತ್ತಿರದ ಏರಿನಲ್ಲಿ ಹತ್ತಿ ಕೆರೆಯ ಏರಿಯ ಮೇಲೆ ಹೋಗಿ ನೋಡುತ್ತಾಳೆ: ಬೆಟ್ಟಯ್ಯನವರು, ಅವರ ಹೆಂಡತಿ, ಮಾತಂಗಿಯರೇ ಅಲ್ಲದೆ ಅವರ ಕಾಲೋನಿಯ ಮೂವತ್ತು ನಲವತ್ತು ಜನ ಸೇರಿದ್ದಾರೆ. ಊರೊಳಗಿನ ಹತ್ತು ಹದಿನೈದು ಜನ. ಸುದ್ದಿ ತಿಳಿದು ಇನ್ನೂ ಜನ ಬರುತ್ತಿದ್ದಾರೆ. ಪೋಲೀಸ್ ಸಬ್ಇನ್‌ಸ್ಪೆಕ್ಟರು, ದಫೇದಾರರು, ನಾಲ್ಕು ಜನ ಕಾನಿಸ್ಟೇಬಲುಗಳು ನಿಂತು, ಜನರನ್ನು ಏರಿಯಿಂದ ಒಂದು ಮಾರು ದೂರದಲ್ಲೇ ತಡೆಯುತ್ತಿದ್ದಾರೆ. ಸುಮಾರು ಎರಡು ವರ್ಷದಲ್ಲಿ ತನ್ನ ತಂದೆ ನೀರಿಗೆ ಬಿದ್ದ ಜಾಗದಲ್ಲೇ ಈಗ ಮೀರಾ ಹೊಟ್ಟೆಗೆ ಕಲ್ಲು ಕಟ್ಟಿಕೊಂಡು ಮುಳುಗಿದ್ದಾಳೆ. ಕೆಳಗೆ ಶರೀರ ಮುಳುಗಿದೆ. ಬಿಚ್ಚಿದ ಕೊಡೆಯಂತೆ ಹರಡಿರುವ ಸೀರೆ ಸ್ಪಷ್ಟವಾಗಿ ಕಾಣುತ್ತಿದೆ.

ಮೀರಾಳ ತಾಯಿ ನೆಲಕ್ಕೆ ಬಿದ್ದು ಅಳುತ್ತಿದ್ದರು. ಮಾತಂಗಿ ಕಣ್ಣೀರು ಹಾಕುತ್ತಾ ಅವರನ್ನು ಎತ್ತಿ ಕೂರಿಸುತ್ತಿದ್ದಳು. ಬೆಟ್ಟಯ್ಯನವರು ಮಂಡಿಗೆ ತಲೆ ಕೊಟ್ಟುಕೊಂಡು ಬಿಕ್ಕಳಿಸುತ್ತಿದ್ದರು. ಸಬ್ ಇನ್‌ಸ್ಪೆಕ್ಟರು ಒಂದು ಬಿಳೀ ಕವರು ತೆಗೆದು ಸತ್ಯಳ ಕೈಗೆ ಕೊಟ್ಟು, 'ನೋಡಿ' ಎಂದರು. ಕವರನ್ನು ಪೋಲೀಸರೇ ಒಡೆದಿದ್ದರು. ಸತ್ಯ ಕೈಹಾಕಿ ನೋಡಿದಳು: ಒಂದು ಸಣ್ಣ ಕಾಗದ. ಕಾಗದದಲ್ಲಿ ಮೀರಾಳ ಅಕ್ಷರ. 'ಸ್ವ ಇಚ್ಛೆಯಿಂದ ಆತ್ಮಹತ್ಯೆ ಮಾಡಿಕೊಂಡಿದ್ದೇನೆ. ಯಾರದೂ ಯಾವ ರೀತಿಯಲ್ಲೂ ಜವಾಬ್ದಾರಿಯಿಲ್ಲ' – ಎಂದು ಬರೆದು ಕೆಳಗೆ ರುಜು ಮಾಡಿ, ನೆನ್ನೆಯ ತಾರೀಕು ಹಾಕಿದ್ದಳು.

'ಈ ಕವರು ಎಲ್ಲಿ ಸಿಕ್ತು?' – ಸತ್ಯ ಕೇಳಿದಳು.

'ಈ ಕಲ್ಲಿನ ಮೇಲೆ ಕವರನ್ನಿಟ್ಟು ಅದರ ಮೇಲೆ ಸಣ್ಣ ಕಲ್ಲು ಹೇರಿತ್ತು. ಕವರಿನ ಮೇಲೆ ಪೋಲೀಸರಿಗೆ ಅಂತ ಇಂಗ್ಲಿಷಿನಲ್ಲಿ ಬರೆದಿದೆ ನೋಡಿ. ಕವರಿನ ಮೇಲೆಯೇ ಈ ಜನಿವಾರ ಮಡಿಸಿ ಇಟ್ಟಿದೆ' – ಎಂದು, ಇನ್ನೂ ದಾರದ ಮಡಿಕೆ ಸರಿಯಾಗದ ಒಂಟಿ ಜನಿವಾರವನ್ನು ತಮ್ಮ ಎಡಗೈಯಿಂದ ತೆಗೆದು ತೋರಿಸಿದ ಸಬ್ ಇನ್‌ಸ್ಪೆಕ್ಟರು, 'ಸತ್ತೋರೇನೋ ಕಾಗದದಲ್ಲಿ ಹಾಗೆ ಬರೆದಿದಾರೆ. ಅದರ ತನಿಖೆ ಮಾಡಬೇಕಾದ್ದು ನಮ್ಮ ಜವಾಬ್ದಾರಿ ಕೆಲಸವಾಗಿತ್ತು. ನೆನ್ನೆ ಬೆಳಗಿನ ತನಕ ಅವರು ನಿಮ್ಮ ತೋಟದ ಮನೇಲಿನವರಂತೆ ಕೂತಿರುತ್ತಿದ್ದರು.' –

ಅವರೇ ಹಾಗಂತ ತಾಯಿಯ ಕೈಲಿ ಅಂದ್ರಂತೆ. ನೀವು ಏನು ಹೇಳಿಕೆ ಕೊಡ್ತೀರಿ, ಕೊಡಿ' ಎಂದರು.

ಸತ್ಯ ನೀರಿನಲ್ಲಿ ಮುಳುಗಿ ಕಾಣುತ್ತಿದ್ದ ಮೀರಾಳ ಹೆಣವನ್ನು ನಿರುಕಿಸುತ್ತಾ ಒಂದು ನಿಮಿಷ ನಿಂತಳು. ಈ ಹುಡುಗಿ ಹೀಗೆ ದುಡುಕಬಾರದಾಗಿತ್ತು ಎನಿಸಿತು. ಆದರೆ ಅವಳು ಆಡಿದ ಇತಿಹಾಸದ ಮಾತು ಜ್ಞಾಪಕಕ್ಕೆ ಬಂತು. ತಕ್ಷಣ ಮಹಾ ಸಿಟ್ಟು ಬಂತು. ಜನವೆಲ್ಲ ಅವಳು ಏನು ಹೇಳುತ್ತಾಳೆಂದು ಗಟ್ಟಿಯಾಗಿ ಉಸಿರೂ ಬಿಡದೆ ಕೇಳುತ್ತ ನಿಂತರು.

'ನನ್ನ ಹೇಳಿಕೆ ಬೇಕಾದರೆ ಬರೆದು ಕೊಡ್ತೀನಿ. ಅವಳ ವ್ಯಾನಿಟಿ ಬ್ಯಾಗ್ ನೋಡಿದೀರಾ?'

'ಇಲ್ಲ.'

'ಬೆಟ್ಟಯ್ಯನವರನ್ನ ಕೇಳಿ.'

'ಅದು ಮನ್ಲಿದೆ. ಏನಿದೆ ಅದರಲ್ಲಿ?' – ಬೆಟ್ಟಯ್ಯನವರು ಕೇಳಿದರು.

'ತರಿಸಿ ನೋಡಿ' – ಸತ್ಯ ಎಂದಳು.

'ಯಾರೂ ಹೋಗಿ ಮುಟ್ಕೊಡದು. ನಾವೇ ಮೊದಲು ಮುಟ್ಟಿ ನೋಡ್ಬೇಕು. ನಡೀರಿ' – ಎಂದ ಸಬ್ ಇನ್‌ಸ್ಪೆಕ್ಟರು, 'ನೀವು ಇಲ್ಲಿರಿ' ಎಂದು ಮೂವರು ಕಾನಿಸ್ಟೇಬಲ್ ಮತ್ತು ದಫೇದಾರನಿಗೆ ಹೇಳಿ, ಇನ್ನಿಬ್ಬರು ಕಾನಿಸ್ಟೇಬಲುಗಳನ್ನು ಜೊತೆಯಲ್ಲಿ ಕರೆದುಕೊಂಡು ಬೆಟ್ಟಯ್ಯನವರ ಕಾಲೋನಿಯ ಕಡೆಗೆ ನಡೆದರು. ಬೆಟ್ಟಯ್ಯನವರು ಜೊತೆಯಲ್ಲಿ ಬಂದರು. ಸತ್ಯ ಅನುಸರಿಸಿದಳು.

ಮನೆಯ ಒಳಗೆ ಬಂದ ಬೆಟ್ಟಯ್ಯನವರು, ಎದುರು ಗೋಡೆಗೆ ಹಾಕಿದ್ದ ಗಾಂಧಿಯ ಪಟದ ಗೂಟದ ಕಡೆಗೆ ಕೈ ತೋರಿಸಿ, 'ಅವೇಯ' ಎಂದರು. ಮುಂದೆ ಹೋಗಿ ಕೈಗೆ ತೆಗೆದುಕೊಂಡು ಸಬ್ ಇನ್‌ಸ್ಪೆಕ್ಟರು ಜಗುಲಿಯ ಮೇಲಕ್ಕೆ ಬಂದು ಅದನ್ನು ತೆಗೆದು, ಒಳಗಿದ್ದುದನ್ನು ಒಂದೊಂದಾಗಿ ಕೆಳಗಿಟ್ಟರು: ಒಂದು ಪುಟ್ಟ ಬಾಚಣಿಗೆ. ಸಣ್ಣ ಕನ್ನಡಿ. ಒಂದು ಪೆನ್ನು. ಒಂದು ದುಡ್ಡಿನ ಪರ್ಸು. ಇನ್ನೊಂದು ಮಡಿಕೆಯಲ್ಲಿ ಶ್ರೀನಿವಾಸನ ಕಾಗದ. ಅವನೊಡನೆ ತೆಗೆಸಿಕೊಂಡ ಫೋಟೋ. ಮೀರಳ ಅಕ್ಷರದ ಒಂದು ಕಾಗದ. ಇನ್‌ಸ್ಪೆಕ್ಟರು ಮೊದಲು ಶ್ರೀನಿವಾಸನ ಕಾಗದವನ್ನು ಗಟ್ಟಿಯಾಗಿ ಓದಿದರು. ಅನಂತರ ಅವಳ ಕಾಗದವನ್ನು ಓದಿದರು: 'ತೀರ್ಥರೂಪರ ಚರಣಗಳಲ್ಲಿ ಬಾಲಕಿ ಮೀರಾಳ ನಮಸ್ಕಾರಗಳು. ಈ ಕಾಗದವನ್ನು ನಿಮಗೆ ಬರೆ[illegible]ದ್ದೇನೆ. ಅಣ್ಣನಿಗೆ ಬರೆಯುತ್ತಿಲ್ಲ. ನೀವು ಇದರಂತೆ[illegible] [illegible]ಮರಣಕ್ಕೆ ಯಾರಿಗೂ ಶಿಕ್ಷೆಯಾಗಕೂಡದು. [illegible]ಮಾಡದಂತೆ ಅಣ್ಣನನ್ನು ನೀವು ತಡೆಯಬೇಕು.

ಈ ಚೀಲದಲ್ಲೇ ಇಟ್ಟಿರುವ ಒಂದು ಜೊತೆ ವಜ್ರದ ಓಲೆ ಮತ್ತು ಚಿನ್ನದ ಸರಗಳನ್ನೂ, ಶ್ರೀನಿವಾಸರು ನನಗೆ ತೆಗೆದು ಕೊಟ್ಟಿದ್ದ ಸೀರೆ ರವಿಕೆಗಳನ್ನೂ ಅವರಿಗೆ ತಪ್ಪದೆ ಮುಟ್ಟಿಸಿ. ನನ್ನ ರೂಮ್‌ಮೇಟ್ ಪಾರ್ವತಿಯನ್ನು ಕೇಳಿದರೆ, ಅವರು ತೆಗೆದು ಕೊಟ್ಟಿದ್ದ ಸೀರೆ ರವಿಕೆಗಳ್ಯಾವುವು ಎಂದು ಹೇಳುತ್ತಾಳೆ. ನಾನು ಸಾಯುವುದರಿಂದ ನಿಮಗೆಲ್ಲ ದುಃಖವಾಗುತ್ತದೆ. ಇವಳು ಹೀಗೆ ದುರ್ಬಲ ಕೆಲಸಮಾಡಿಕೊಂಡಳು ಎಂದು, ಗುರುಗಳಾದ ಸತ್ಯಮ್ಮನವರಿಗೆ ಸಿಟ್ಟು ಬರುತ್ತದೆ. ಆದರೆ ನೀವೆಲ್ಲ ನನ್ನನ್ನು ಕ್ಷಮಿಸಬೇಕು. ನಿಮ್ಮ ಪ್ರೀತಿಯ ಮಗಳು ಮೀರಾ.' ಕಾಗದಕ್ಕೆ ನೆನ್ನೆಯ ತಾರೀಕು ಹಾಕಿದ್ದಳು.

ಸಬ್‌ಇನ್‌ಸ್ಪೆಕ್ಟರು ಚೀಲದ ತಳಕ್ಕೆ ಕೈಹಾಕಿ ನೋಡಿದರು. ಐದೆಳೆಯ ಚಿನ್ನದ ಸರ ಮತ್ತು ಹೊಳೆಯುವ ಎರಡು ಬಿಳೀ ವಜ್ರದ ಓಲೆಗಳಿದ್ದುವು.

'ನೆನ್ನೆ ಸಂಜೆ ಎಲ್ಲ ಮಾತಾಡದೆ ಕುಂತಿದ್ಳು. ಯಾವಾಗ ಇದನ್ನ ಬರೆದಳೋ, ರಾತ್ರಿ ಯಾವ ಹೊತ್ತಿನಲ್ಲಿ ಹೋಗಿ ಬಿದ್ದಳೋ ದೇವರಿಗೇ ಗೊತ್ತು' – ಎನ್ನುತ್ತಾ ಚೆಟ್ಟಿಯ್ಯನವರು ಬಿಕ್ಕಿ ಅಳಲು ಪ್ರಾರಂಭಿಸಿದರು.

## ೧೦

ಮೀರಳೇ ಬರೆದಿಟ್ಟಿದ್ದ ಕಾಗದ ಮತ್ತು ಸುದ್ದಿ ತಿಳಿದ ತಕ್ಷಣ ಮಂತ್ರಿಗಳೇ ಧಾವಿಸಿ ಬಂದದ್ದರಿಂದ ಪೋಲೀಸರು ಕೇಸುಗೀಸು ಏನೂ ಮಾಡಲಿಲ್ಲ. ಮೋಹನದಾಸನನ್ನು ಪತ್ತೆ ಮಾಡುವುದು ಸಾಧ್ಯವಾಗಲಿಲ್ಲ. ಅವನು ಈಗ ತನ್ನ ಕ್ರಾಂತಿ ಯೋಜನೆಗೆ ತಕ್ಕಂತೆ ಕಾರ್ಯಕರ್ತರನ್ನು ಸಂಘಟಿಸಲು ಕೋಲಾರದ ಕಡೆಗೆ ಹೋಗಿದ್ದ. ಯಾವ ಸ್ಥಳವೆಂಬುದು ಇವರಾರಿಗೂ ತಿಳಿಯದು. ಅವನ ಸಂಗಡಿಗರು, ಕಾರ್ಯಕ್ರಮ, ಮೊದಲಾದುವುಗಳ ಬಗೆಗೆ ಇವರಿಗೆ ಯಾವ ವಿವರವೂ ತಿಳಿದಿರುತ್ತಿರಲಿಲ್ಲ. ಆದುದರಿಂದ ಅವನನ್ನು ಕಾಯದೆ, ಶವಸಂಸ್ಕಾರವನ್ನು ಮುಗಿಸಿದರು. ವೆಂಕಟೇಶನೇ ಊರಿನ ಪತ್ರಿಕಾಪ್ರತಿನಿಧಿ. ಮಂತ್ರಿ ಮೇಲಗಿರಿಗೌಡರ ಮಗನಿಗೂ ಎಂ.ಎಲ್.ಎ. ಚೆಟ್ಟಿಯ್ಯನವರ ಮಗಳಿಗೂ ಸಂಬಂಧಿಸಿದ ಸಂಗತಿಯಾದುದರಿಂದ ಈ ಆತ್ಮಹತ್ಯೆಯ ಬಗೆಗೆ ಅವನು ಪತ್ರಿಕೆಗಳಿಗೆ ಸುದ್ದಿ ಕಳಿಸಲಿಲ್ಲ.

ಸತ್ಯ ದಿನವೂ ಚೆಟ್ಟಿಯ್ಯನವರ ಮನೆಗೆ ಹೋಗುತ್ತಿದ್ದಳು. ಅವರ ಹೆಂಡತಿಯನ್ನು ಸಮಾಧಾನ ಮಾಡುವುದು ಕಷ್ಟದ [illegible]ವಾಗಿತ್ತು. ಚೆಟ್ಟಿಯ್ಯನವರು ಮಾತ್ರ ಕಣ್ಣೀರು ಹಾಕದೆ ಮಂಕುಬಡಿದವ[illegible] ಕೂತಿರುತ್ತಿದ್ದರು. ಮೀರಾ

ಸತ್ತ ನಾಲ್ಕನೆಯ ದಿನ ಅವರೇ ಸತ್ಯಳ ತೋಟಕ್ಕೆ ಬಂದರು. ಒಂದು ಕೈಚೀಲ ದೊಳಗೆ ಮಗಳ ವ್ಯಾನಿಟಿ ಚೀಲವನ್ನು ಇಟ್ಟುಕೊಂಡು ಬಂದಿದ್ದರು. 'ವಾಲೆ, ಸರ, ಇದರೊಳಗೆ ಅವೆ. ಬೆಂಗಳೂರಿಗೆ ಹೋಗಿ, ಅದ್ಯಾವುದು ಸೀರೆ ತಗಂಡು ಅವರಿಗೆ ನೀವೇ ಮುಟ್ಟಿಸಿ ಬನ್ನಿ' – ಎಂದರು.

'ಅದಕ್ಕೇನು ಆತುರ?' – ಸತ್ಯ ಕೇಳಿದಳು.

'ಇದು ನನ್ನ ಮನ್ಲಿರಾದು ಬ್ಯಾಡ. ನಾಳೀಕೇ ಹ್ವರಡಿ. ಅಲ್ಲೀತಂಕ ನಿಮ್ಮ ತಾವ ಮಡೀಕಂಡಿರಿ.'

'ನನ್ನ ಜೊತೆ ನೀವೂ ಬನ್ನಿ. ನೀವು ಬರದೆ ಹಾಸ್ಟೆಲಿನೋರು ಸಾಮಾನು ಕೊಡುಲ್ಲ.'

'ಬಾಕಿ ಸಾಮಾನು ನಮಗೆ ಬ್ಯಾಡವೇ ಬ್ಯಾಡ. ಆ ಸೀರೆ ರವಿಕೆ ಅಷ್ಟು ತಗಂಡ್ಹೋಗಿ ಅವರಿಗೆ ಕೊಟ್ಟುಬುಡಿ.'

'ಅದಕ್ಕೂ ನೀವು ಬರಬೇಕು.'

ಮರುದಿನ ಬೆಳಗ್ಗೆ ಮೊದಲ ಬಸ್ಸಿಗೆ ಇಬ್ಬರೂ ಬೆಂಗಳೂರಿಗೆ ಹೋದರು. ಇವರು ಹೋಗುವ ಹೊತ್ತಿಗೆ ಪಾರ್ವತಿ ಕಾಲೇಜಿಗೆ ಹೋಗಿದ್ದಳು. ಸತ್ಯಳೇ ಕಾಲೇಜಿಗೆ ಹೋಗಿ ಅವಳನ್ನು ಕರೆತಂದಳು. ವಿಷಯ ತಿಳಿದ ಪಾರ್ವತಿ, 'ಅವಳು ತೀರ ಐಡಿಯಲಿಸ್ಟಿಕ್; ಸೆಂಟಿಮೆಂಟಲ್. ಅವಳು ಹಾಗೆ ಬರೆದಿಟ್ಟಿದಾಳೆ ಅಂತ ನೀವ್ಯಾಕೆ ಸುಮ್ಮನಾದಿರಿ? ಪೋಲೀಸಿಗೆ ಕೇಸು ಹಾಕಿ ಇಂಥೋರಿಗೆ ಬುದ್ಧಿ ಕಲಿಸ ಬ್ಯಾಡವೆ?' ಎಂದಳು.

'ಅವಳ ತಂದೆ ಒಪ್ಪೂದಿಲ್ಲ.'

ಪಾರ್ವತಿ ಗುರುತಿಸಿದ ಸೀರೆ ರವಿಕೆಗಳನ್ನು ಬೇರೆಯಾಗಿಟ್ಟುಕೊಂಡು, ವಾರ್ಡನ್ನರ ಅನುಮತಿ ಪಡೆದು ಮೀರಳ ಉಳಿದ ಸಾಮಾನುಗಳನ್ನು ಕಟ್ಟಿ ಟ್ಯಾಕ್ಸಿ ಯಲ್ಲಿ ಹಾಕಿಕೊಂಡು ಅವರು ನೇರವಾಗಿ ಬಸ್‌ಸ್ಟ್ಯಾಂಡಿಗೆ ಬಂದರು. ತಕ್ಷಣ ಸಿಕ್ಕಿದ ಬಸ್ಸಿನಲ್ಲಿ ಕೂತು ತುಮಕೂರಿಗೆ ಬರುವ ವೇಳೆಗೆ ಸಂಜೆ ನಾಲ್ಕೂವರೆ ಯಾಗಿತ್ತು. ಸಾಮಾನು ಹಾಕಿಸಿಕೊಂಡು ಟಾಂಗಾದಲ್ಲಿ ಕುಳಿತ ಮೇಲೆ ಬೆಟ್ಟಯ್ಯ ನವರು, 'ನೀವು ಅವರ ಮೋಟಾರ್ ಆಫೀಸಿನ ತಾವ ಇಳೀರಿ. ನಾನು ಅಂಗ್‌ಡಿಗೆ ಹೋಗ್ತೀನಿ. ಅವರಿಗೆ ಕೊಟ್ಟುಬಿಟ್ಟು ನೀವು ಅಂಗ್‌ಡಿಗೆ ಬನ್ನಿ' ಎಂದರು.

ಸತ್ಯ ಶ್ರೀನಿವಾಸನ ಕೋಣೆಗೆ ಹೋದಾಗ ಅವನು ಅಲ್ಲೇ ಇದ್ದ. ಅವನ ತಂದೆಯೂ ಕುರ್ಚಿಯ ಮೇಲೆ ಕೂತಿದ್ದರು. ಯಾವುದೋ ಗಂಭೀರವಾದ ಮಾತಿನ ಮಧ್ಯದಲ್ಲಿ ಆವರುವ ಮೌನವು ರೂಮಿನಲ್ಲಿತ್ತು. ಒಳಗೆ ಬಂದ ಸತ್ಯ ಒಂದು ನಿಮಿಷ ಕುರ್ಚಿಯ ಮೇಲೆ ಕುಳಿತಳು. ಅವರಿಬ್ಬರೂ ಇವಳನ್ನು ನೋಡು

ತ್ತಿದ್ದರು. ಆದರೆ ಯಾರೂ ಮಾತನಾಡಲಿಲ್ಲ. ಸತ್ಯಳೇ ಮೇಲೆ ಎದ್ದು, ಶ್ರೀನಿವಾಸ ಕುಳಿತಿದ್ದ ಮಂಚದ ಹತ್ತಿರಕ್ಕೆ ಬಂದು ತನ್ನ ಕೈಚೀಲವನ್ನು ತೆಗೆದು ಎರಡು ರೇಶಿಮೆ ಸೀರೆ, ಎರಡು ನೈಲಾನ್ ಸೀರೆ, ನಾಲ್ಕು ರವಿಕೆ, ಒಂದು ಚಿನ್ನದ ಸರ, ಎರಡು ಓಲೆಗಳನ್ನು ಒಂದೊಂದಾಗಿ ಅವನ ಮುಂದೆ ಹಾಕಿದಳು. ಅವನು ಮಂಕು ಹಿಡಿದವನಂತೆ ಅವುಗಳನ್ನು ನೋಡುತ್ತಿದ್ದ. ತನ್ನ ಪರ್ಸ್ ತೆಗೆದು, ಅದರೊಳಗೆ ಇಟ್ಟುಕೊಂಡಿದ್ದ ಮೀರಳ ಕಾಗದವನ್ನು ತೆರೆದು ಅವಳು ಅವನ ಮುಂದೆ ಇಟ್ಟು, 'ಓದಿ ವಾಪಸು ಕೊಡು' ಎಂದಳು. ಶ್ರೀನಿವಾಸ ಕೈ ಎತ್ತಿ ಕಾಗದವನ್ನು ಮುಟ್ಟಲೂ ಇಲ್ಲ. ಒಂದು ನಿಮಿಷ ಕಾಯ್ದು ಸತ್ಯಳೇ, 'ಅವಳು ಯಾಕೆ ಆತ್ಮಹತ್ಯ ಮಾಡಿಕೊಂಡಳು ಅನ್ನೋದು ನಿನಗೆ ಗೊತ್ತಿದೆ. ನಿಮ್ಮ ತಂದೆ ಅದನ್ನಾದರೂ ನಿಜವಾಗಿ ಹೇಳಿರಬಹುದು. ಸಾಯುಕ್ಕೆ ಮೊದಲು ಅವಳು ಬರೆದಿಟ್ಟಿರೂ ಕಾಗದ ಇದು. ನಾನೇ ಓದ್ತೀನಿ ತಾಳು' ಎಂದು ಅದನ್ನು ಕೈಗೆ ತೆಗೆದುಕೊಂಡು ಗಟ್ಟಿಯಾಗಿ, 'ತೀರ್ಥರೂಪರ ಚರಣಗಳಲ್ಲಿ ಬಾಲಕಿ ಮೀರಾಳ ನಮಸ್ಕಾರಗಳು. ಈ ಕಾಗದವನ್ನು ನಿಮಗೆ ಬರೆಯುತ್ತಿದ್ದೇನೆ. ಅಣ್ಣನಿಗೆ ಬರೆಯು ತ್ತಿಲ್ಲ. ನೀವು ಇದರಂತೆಯೇ ಮಾಡಬೇಕು. ನನ್ನ ಮರಣಕ್ಕೆ ಯಾರಿಗೂ ಶಿಕ್ಷೆ ಯಾಗಕೂಡದು. ಶ್ರೀನಿವಾಸರಿಗೆ ಸ್ವಲ್ಪವೂ ಕೇಡುಮಾಡದಂತೆ ಅಣ್ಣನನ್ನು ನೀವು ತಡೆಯಬೇಕು. ಈ ಚೀಲದಲ್ಲೇ ಇಟ್ಟಿರುವ ಒಂದು ಜೊತೆ ವಜ್ರದ ಓಲೆ ಮತ್ತು ಚಿನ್ನದ ಸರಗಳನ್ನು, ಶ್ರೀನಿವಾಸರು ನನಗೆ ತೆಗೆದುಕೊಟ್ಟಿದ್ದ ಸೀರೆ ರವಿಕೆ ಗಳನ್ನೂ ಅವರಿಗೆ ತಪ್ಪದೆ ಮುಟ್ಟಿಸಿ. ನನ್ನ ರೂಮ್‌ಮೇಟ್ ಪಾರ್ವತಿಯನ್ನು ಕೇಳಿದರೆ, ಅವರು ತೆಗೆದು ಕೊಟ್ಟಿದ್ದ ಸೀರೆ ರವಿಕೆಗಳ್ಯಾವುವು ಎಂದು ಹೇಳು ತ್ತಾಳೆ....' ಎಂಬ ತನಕ ಓದಿ, 'ಓ, ಇನ್ನೊಂದು ಮರೆತಿದ್ದೆ. ನೀನು ಅವಳ ಜೊತೆ ತೆಗೆಸಿಕೊಂಡ ಫೋಟೋ ಇಲ್ಲೇ ಇದೆ' ಎಂದು ತನ್ನ ಚೀಲಕ್ಕೆ ಕೈಹಾಕಿ ಫೋಟೋವನ್ನು ತೆಗೆದು ಅವನ ಮುಂದೆ ಇಟ್ಟು, 'ಅವಳು ಯಾಕೆ ಸತ್ತಳು ಅನ್ನೋದು ನಿನಗೇ ಗೊತ್ತಿದೆ. ಅವತ್ತು ಅವಳು ಬಂದಿದ್ದಾಗ ನೀನು ಕುಡಿದಿದ್ದೆ ಯಂತೆ. ಸರ, ಓಲೆ ಮಾಡಿಸಿ ಕೊಟ್ಟಿದ್ದಕ್ಕೆ ಅವಳು ನಿನ್ನ ಜೊತೆ ಮಲಗಿದ್ದಳು. ಇನ್ನು ಮುಂದೆ ಮಲಗುಕ್ಕೆ ವಜ್ರ ಹದಿಸಿರುವ ಬಳೆ ಮಾಡಿಸಿಕೊಡ್ತೀನಿ ಅಂದಿದ್ದೆ ಯಂತೆ. ಅದಕ್ಕೆ ನೀನು ಮಾಡಿಸಿಕೊಟ್ಟಿರುವ ಸಾಮಾನು ನಿನಗೆ ತಲುಪಿಸಬೇಕು ಅಂತ ಅವಳ ಆಸೆಯಾಗಿತ್ತು - ಅಂತ ನನಗೆ ಅರ್ಥವಾಗುತ್ತೆ. ಇನ್ನು ನಾನು ಹೋಗ್ತೀನಿ' ಎಂದು ಹೇಳಿ ಕೋಣೆಯಿಂದ ಹೊರಗೆ ಬಂದುಬಿಟ್ಟಳು. ಅವನು ಮಂಕು ಹಿಡಿದವನಂತೆ ತನ್ನ ಮುಂದಿದ್ದ ಒಡವೆ ವಸ್ತ್ರಗಳನ್ನೇ ದಿಟ್ಟಿಸುತ್ತಿದ್ದ.

ಸತ್ಯ ಇಪ್ಪತ್ತು ಮಾರು ನಡೆದಿದ್ದಳು. ಹಿಂದಿನಿಂದ, 'ಸತ್ಯನ್ನಾ' ಎಂದು

ಕೂಗಿದಂತಾಯಿತು. ಹಿಂತಿರುಗಿ ನೋಡಿದಳು: ಮಂತ್ರಿಗಳು ದೊಡ್ಡ ಹೆಜ್ಜೆ ಹಾಕಿ ಕೊಂಡು ಬರುತ್ತಿದ್ದರು. ಹತ್ತಿರ ಬಂದು, 'ನಿನ್ನ ಕೈಲಿ ಮಾತಾಡಬೇಕು. ಬಾ, ಬೆಂಗಳೂರಿಗೆ ಹೋಗೋಣ' ಎಂದರು.

'ನನಗೆ ಅಲ್ಲೇನೂ ಕೆಲಸವಿಲ್ಲ.'

'ಅಯ್ಯೋ ಹಂಗನ್ನಾಕಾದು. ನಾನೇ ಊರಿಗೆ ಬಂದು ನಿನ್ನ ಕಾಣಬೇಕು ಅಂತಿದ್ದೆ. ಈಗ ನೀನು ಬಂದೆ, ಹೇಳಿ ಕಳುಸ್ದ ಹಂಗೆ. ನಡಿ. ನಡಿ.'

'ಗೌಡ್ರೇ, ನಾನು ಬೆಂಗಳೂರಿಗೆ ಬರುಲ್ಲ. ಮೋಹನದಾಸನ ಅಂಗ್ಡೀಗೆ ಹೋಗ್ತಿದೀನಿ.'

'ಅವನು ಊರಾಗಿಲ್ವಂತೆ. ಕೋಲಾರದ ಕಡೇಲಿ ಅಲೀತವ್ನಂತೆ ಪೋಲಿ ಪೋಲಿ.'

'ಅದು ನಂಗೆ ಗೊತ್ತಿಲ್ಲ. ಬೆಟ್ಟಯ್ಯನೋರೂ ನಾನೂ ಬೆಂಗಳೂರಿಂದ ಜೊತೇಲೇ ಬಂದ್ವು. ಈ ಸೀರೆ ರವಿಕೆ ನೀವು ಹೋಗಿ ಕೊಟ್ಟು ಬನ್ನಿ, ನಾನು ಅಲ್ಲಿ ಕಾಯ್ತಿರ್ತೀನಿ ಅಂತ ಹೇಳಿದ್ರು.'

'ಹೌದಾ? ಪಾಪ, ಒಳ್ಳೆಯೋರು. ಅವರಿಗೆ ಹಿಂಗಾಗಬ್ಯಾಡದು. ಏನು ಹೆಣ್ಣು ಮಕ್ಕಳು, ಗಂಡು ಹುಡುಗರು ಬೇಜವಾಬ್ದಾರಿ ಕೆಲಸ ಮಾಡ್ತಾರೆ! ನಮ್ಮ ದೇಶದಲ್ಲಿ ಜವಾಬ್ದಾರಿಯೇ ಇಲ್ಲ. ಏನಂತೀ? ಹೂಂ. ಈಗ ಬಾ, ಬೆಂಗ್ಳೂರಿಗೆ ಬರುಕ್ಕೆ ನಿಂಗೆ ಟೈಂ ಇಲ್ಲದಿದ್ರೆ ಇಲ್ಲೇ ಒಂದಿಷ್ಟು ಮಾತಾಡಾಣ.'

'ಮಾತಾಡೂವಂಥದು ಏನೂ ಇಲ್ಲ, ಗೌಡ್ರೆ.'

'ಅಯ್ಯೋ ಅಯ್ಯೋ! ಹಂಗನ್ನಬ್ಯಾಡ ನಡಿಯಮ್ಮ'–ಎಂದು, ಅವಳ ಮುಂದೆ ಬಂದು ಅಡ್ಡ ನಿಂತರು. ಆ ಮಂಡಿ ಬೀದಿಯಲ್ಲಿ ತಿರುಗುವವರಲ್ಲಿ ಹತ್ತು ಹದಿನೈದು ಜನಗಳು ಇವರಿಬ್ಬರನ್ನೇ ನೋಡುತ್ತಾ ನಿಂತುಕೊಂಡರು. ಇವರು ಮಂತ್ರಿಗಳೆಂದು ಹಲವರಿಗೆ ಗುರುತು ಸಿಕ್ಕಿರಬಹುದು. ಸತ್ಯಳಿಗೆ ಸಂಕೋಚ ವೆನಿಸಿತು. 'ನಡೀರಿ. ಆದರೆ ನನಗೆ ಹೆಚ್ಚು ಟೈಂ ಇಲ್ಲ'–ಎಂದು ಅವರ ಜೊತೆ ನಡೆದಳು.

ಮೋಟಾರ್ ಆಫೀಸಿನ ಮುಂದೆಯೇ ಮಂತ್ರಿಗಳ ಕಾರು ನಿಂತಿತ್ತು. ಎದುರಿನ ಹೋಟಲಿನಲ್ಲಿ ಕೂತಿದ್ದ ಡ್ರೈವರ್‌ನನ್ನು ಕೂಗಿದರು. ಸತ್ಯಳನ್ನು ಕೂರಿಸಿಕೊಂಡು ಗುಬ್ಬಿ ರಸ್ತೆಯಲ್ಲಿ ಮೂರು ಮೈಲಿ ಬಂದು ಕಾರನ್ನು ಒಂದು ಮರದ ಕೆಳಕೆ ನಿಲ್ಲಿಸಿ ದರು. ಕೆಳಗಿಳಿದು ಅವಳನ್ನು ಕರೆದುಕೊಂಡು ಬಯಲಿನಲ್ಲಿ ಅರ್ಧ ಫರ್ಲಾಂಗ್ ನಡೆದು ಒಂದು ಬಂಡೆಯ ಹತ್ತಿರಕ್ಕೆ ಬಂದು ಜೇಬಿನಿಂದ ಕರವಸ್ತ್ರವನ್ನು ತೆಗೆದು ಕಲ್ಲನ್ನು ಒರೆಸಿ ಬಗ್ಗಿ ಬಾಯಿಂದ ಊದಿ ಶುಚಿ ಮಾಡಿ, 'ಕೂತ್ಕಳವ್ವ' ಎಂದು

ತೋರಿಸಿದರು. ತಾವು ಎದುರಿಗೆ ಕುಳಿತು ಹೇಳಿದರು: 'ಯಲ್ಲಾ ನಿಂಗೆ ಗೊತ್ತಿದೆ. ಇನ್ನು ಮುಂದಿಂದೆಲ್ಲ ನಿಂಗೇ ಸೇರಿದ್ದು.'

'ಅಂದ್ರೆ ಏನು ನಿಮ್ಮ ಅಭಿಪ್ರಾಯ?'

'ಅವನು ಮದ್ಲು ಕುಡೀತಿದ್ನಂತೆ. ಈಗ ನಾಕು ದಿನದಿಂದ ಬಾಟ್ಲಿ ಕೈಲೂ ಮುಟ್ಲಿಲ್ವಂತೆ. ಗುಮಾಸ್ತರು ಅಂದ್ರು. ಮಂಕು ಹಿಡಿದ ಹಂಗೆ ಸುಮ್ಮನೆ ಕೂತಿರ್ತಾನಂತೆ. ಈಗ ನೀನೇ ನೋಡಿದ್ಯಲ.'

'ನಾನೇನು ಮಾಡಬೇಕು ಅಂತೀರ?'

'ನಿಂಗೆ ಗೊತ್ತಿಲ್ಲದ್ದು ನಂಗೆ ಗೊತ್ತದಾ?' – ಎಂದು ಅವರು ದೇಶಾವರಿ ನಕ್ಕರು.

'ಹಾಗಾದ್ರೆ ನೀವೇ ಒಂದು ಬಾಟ್ಲೆ ಕುಡಿಸಿ. ಮಂಕು ಕಳೆಯುತ್ತೆ.'

ಮಂತ್ರಿಗಳು ಗಂಭೀರರಾದರು. ಮುಖದ ಮೇಲೆ ಸಿಟ್ಟು ಹೊಮ್ಮಿತು. ಆದರೆ ಕೋಪಮಾಡಿಕೊಳ್ಳಬಾರದೆಂದು ನಿಯಂತ್ರಿಸಿಕೊಂಡು ಮುಗುಳ್ನಕ್ಕು ಹೇಳಿದರು: 'ನೀವಿಬ್ಬರೂ ಚಿಕ್ಕ ವಯಸ್ಸಿನಿಂದ ಜೊತೇಲಿ ಬೆಳೆದೋರು. ಮಧ್ಯ ಏನೋ ಆಯ್ತು, ಹೋಯ್ತು. ನಿನ್ನ ಸಿಟ್ಟು ಕಳೀಲಿಲ್ಲ. ಅವತ್ತು ನಾನು ಬಂದಿದ್ನಲಾ, ಆಗಲೇ ನೀನು ಮದುವೆ ಮಾಡ್ಕಂಡಿದ್ರೆ ಅವನು ಕುಡೀತಿರ್ಲಿಲ್ಲ. ನೀನು ವಲ್ಲೆ ಅಂದೆ ಅಂತಲೇ ಕುಡಿಯೂದು ಕಲ್ತ.'

'ಗೌಡರೇ, ನೀವು ಹೇಳ್ತಿರೂದು ಸುಳ್ಳು ಅಂತ ನಿಮಗೇ ಗೊತ್ತಿದೆ. ಬೆಟ್ಟಯ್ಯನೋರ ಮಗಳನ್ನ ಅವನು ನಿಜವಾಗಿಯೂ ಇಷ್ಟಪಟ್ಟಿದ್ದ. ಇಲ್ಲದಿದ್ರೆ ಓಲೆ, ಸೀರೆ, ಕೊಂಡು ಕೊಡ್ತಿದ್ನೆ? ಅವ್ಳನ್ನ ಯಾಕೆ ಬ್ಯಾಡ ಅಂದ, ಅದಕ್ಕೆ ಯಾರು ಕಾರಣರು ಅನ್ನೂದು ನಂಗೆ ಗೊತ್ತಿಲ್ಲ. ನಿಮಗೆ ಗೊತ್ತಿದೆ ಅಂತ ನನ್ನ ಅಂದಾಜು. ಹೇಳಿ ಅಂತ ನಾನು ನಿಮ್ಮನ್ನ ಕೇಳುಲ್ಲ. ಈಗ ತಿಳಕಂಡು ನನಗೆ ಆಗಬೇಕಾದ್ದೂ ಏನೂ ಇಲ್ಲ. ಇನ್ನು ನನ್ನ ವಿಷಯ: ಅವನ ಮೇಲೆ ನನಗೆ ಸ್ವಲ್ಪವೂ ಭಾವನೆ ಇಲ್ಲ. ಈಗ ಎರಡೂವರೆ ವರ್ಷದಲ್ಲಿ ಅವನು ಬೇರೆ ಮದುವೆ ಆದಾಗಲೇ ಆ ಭಾವನೆ ಎಲ್ಲ ಹೊರಟುಹೋಯ್ತು. ಆಮೇಲೆ ಸ್ನೇಹವಿತ್ತು. ಬೆಟ್ಟಯ್ಯನೋರ ಮಗಳಿಗೆ ಹೀಗೆ ಮಾಡಿದ್ನಲ ಈಗ ಆರೇಳು ದಿನದಲ್ಲಿ, ಅವೊತ್ತಿನಿಂದ ಅದೂ ಹೊರಟು ಹೋಯ್ತು. ಸುಮ್ಮನೆ ಮಾತು ಬೆಳೆಸಬ್ಯಾಡಿ. ಏಳಿ' – ಎಂದು ಮೇಲೆ ಎದ್ದಳು.

'ನೀನು ಹಿಂಗಂದ್ರೆ ನಮ್ಮ ಗತಿ ಏನು? ಸಿಟ್ನಲ್ಲಿ ಮಾತಾಡಬ್ಯಾಡ. ಆ ಹುಡುಗಿ ಸತ್ತಿದ್ದಕ್ಕೆ ನಂಗೂ ಕಣ್ಣಲ್ಲಿ ನೀರು ಬಂತು' – ಎಂದು ಅವರು ಹೇಳುತ್ತಿದ್ದರು. ಅದು ತನಗೆ ಕೇಳಿಸಲಿಲ್ಲವೆಂಬಂತೆ ಅವಳು ಸರಸರನೆ ರಸ್ತೆಯ ಕಡೆಗೆ ನಡೆದುಬಿಟ್ಟಳು.

# ಹದಿನೇಳು

## ೧

ಆ ಸಲ ಭಾದ್ರಪದ ಮಾಸದಲ್ಲಿ ಮತ್ತೆ ಮಳೆಯಾಯಿತು. ಹುಚ್ಚು ಹರಿದು ನಿಂತಿದ್ದ ಕೆರೆಯ ಕೋಡಿ ಮತ್ತೆ ಜಿನುಗಲು ಶುರುವಾಯಿತು. ಕೋಡಿಯ ಕಲ್ಲುಗೋಡೆಯ ಮೇಲಿನಿಂದಲೇ ಊರಿನವರೆಲ್ಲ ಗೌರಿ ಗಣೇಶರನ್ನು ಬಿಟ್ಟರು. ಗೌರಿ ಕಳೆದು ನವರಾತ್ರಿಯೂ ಬಂತು.

ಶ್ರೀನಿವಾಸ ಮಂದಿರಕ್ಕೆ ತಮ್ಮವರ ನಿತ್ಯಪ್ರವೇಶವನ್ನು ಪಾಡ್ಯಮಿಯ ದಿನವೇ ಆರಂಭಿಸಲು ಮೋಹನದಾಸ ನಿಶ್ಚಯಿಸಿದ್ದ. ಅದಕ್ಕೆ ಮೂರು ದಿನ ಮೊದಲಿನಿಂದ ಸ್ಕೂಲುಗಳಿಗೆ ರಜ ಆರಂಭ. ಕಾಲೇಜುಗಳಿಗೆ ಇನ್ನೂ ಐದು ದಿನ ಮೊದಲೇ ಶುರುವಾಗಿತ್ತು. ತಿರುಮಲಾಪುರದ್ದು ಜಿಲ್ಲೆಯಲ್ಲೇ ಒಂದು ಮುಖ್ಯವಾದ ದೇವಸ್ಥಾನ. ಇದರ ಪ್ರವೇಶಕ್ಕೆ ವಿಶೇಷ ಮಹತ್ವವಿದೆ. ಅಲ್ಲದೆ ಕ್ರಾಂತಿ ಸಂಘದ ಒಬ್ಬ ಪ್ರಮುಖ ಕಾರ್ಯಕರ್ತನಾದ ಮೋಹನದಾಸನ ಹುಟ್ಟೂರಿನ ಗುಡಿ ಇದು. ಅವನೂ ಅವನ ಹಿಂದಿನ ಎಲ್ಲರೂ ಆ ಊರಲ್ಲಿ ಅನುಭವಿಸಿದ್ದ ಅಪಮಾನಗಳು ಅವನ ನೆನಪಿನ ಆಳ ಆಳದಲ್ಲೂ ಮರಳುತ್ತಿವೆ. ಆದುದರಿಂದ ಈ ಸಲ ಆರಂಭಿಸುವ ಪ್ರವೇಶವನ್ನು ಮುಂದೆ ಎಂದೂ ನಿಲ್ಲಿಸಬಾರದೆಂದು ಅವನು ವ್ಯವಸ್ಥೆ ಮಾಡುತ್ತಿದ್ದಾನೆ. ತುಮಕೂರಿನ ಅವನ ಜನದ ಹಾಸ್ಟೆಲಿನಿಂದ ಹುಡುಗರು ಅಮಾವಾಸ್ಯೆಯ ದಿನ ಬಂದು ತನ್ನ ಮನೆಯಲ್ಲಿ ಉಳಿದಿದ್ದು, ಇಡೀ ರಜದಲ್ಲಿ ಅವರಿಗೆ ಊಟ ತಿಂಡಿಯ ಏರ್ಪಾಟು ಮಾಡಿದ್ದಾನೆ. ಮೊದಲ ಎರಡು ದಿನ ತಾನು ಇಲ್ಲಿದ್ದು ಅನಂತರ ಉಳಿದ ಕಡೆಗಳ ಪ್ರಗತಿಯನ್ನು ನೋಡಲು ಹೋಗಬೇಕು.

ತಂಗಿಯ ಸಾವಿನ ಸುದ್ದಿ ಅವನಿಗೆ ತಿಳಿದದ್ದು ಆರು ದಿನಗಳ ನಂತರ. ತಕ್ಷಣ ಊರಿಗೆ ಓಡಿಬಂದ. ಕೇಸು ಯಾಕೆ ಹಾಕಲಿಲ್ಲವೆಂದು ತಂದೆಯನ್ನು ಕೇಳಿದ. ತುಮಕೂರಿಗೆ ಹೋಗಿ ಶ್ರೀನಿವಾಸನನ್ನು ಬೂಟಿನಲ್ಲಿ ಹೊಡೆಯುವ ಅಥವಾ ಕೊನೆಗಾಣಿಸುವ ಶಪಥ ಮಾಡಿದ. ಮಗಳ ಕಾಗದವನ್ನು ಅವನಿಗೆ ಕೊಟ್ಟು ಬೆಟ್ಟಯ್ಯನವರು 'ಅದರ ಇಚ್ಛೆ ಮೀರಬ್ಯಾಡ' ಎಂದರು.

'ಅವಳಿಗೆ ಬುದ್ಧಿ ಇರಲಿಲ್ಲ' – ಇವನು ರೇಗಿದ.

'ಪ್ರೀತಿಯ ಗುಣವೇ ಅಂತದು. ಮಹಾತ್ಮರು ಏಳ್ತಿದ್ರು, ಕೆಟ್ಟದು ಮಾಡಿ-

ದೋರ್ನ್ನೂ ಪ್ರೀತಿಸಬೇಕು ಅಂತ.'

'ಅವನು ಕೆಟ್ಟದು ಮಾಡಿದಾನೆ ಅಂತ ನಿಂಗೆ ಅರ್ಥವಾಗ್ಯೆತಾ?'

'ಆಗ್ಯೆತೆ.'

'ಯಾಕೆ ಸುಮ್ಕನಿದೀಯ?'

'ಏನು ಮಾಡಬೇಕು?'

'ಅವನ ಮೇಲೆ ಕೇಸು ಹಾಕು.'

'ಅವಳ ಇಚ್ಛೆ ಮೀರಬ್ಯಾಡ್‌ದು.'

ಮೋಹನದಾಸ ಸುಮ್ಮನಾದ. ತೋಟಕ್ಕೆ ಬಂದು ಸತ್ಯಳನ್ನು ಕಂಡು, ನಡೆದಿರುವ ವಿಷಯಗಳನ್ನೆಲ್ಲ ವಿವರವಾಗಿ ತಿಳಿದುಕೊಂಡ. ಅಪ್ಪನ ಮೇಲೂ ರೇಗಲಿಲ್ಲ. ಯಾರನ್ನೂ ಆಕ್ಷೇಪಿಸಲಿಲ್ಲ. ತಂಗಿ ಸತ್ತಳೆಂದು ಕಳಲಲೂ ಇಲ್ಲ. ತುಮಕೂರಿಗೆ ಹೊರಟುಹೋದ. ಮಧ್ಯ ನಾಲ್ಕು ಸಲ ಊರಿಗೆ ಬಂದಿದ್ದನಂತೆ. ತಂದೆಯ ಕೈಲಿ ತುಂಬ ಚರ್ಚೆ ಮಾಡಿದನಂತೆ. ಸತ್ಯಳನ್ನು ನೋಡಲು ಬರಲಿಲ್ಲ. ಈಗ ಮಾತಂಗಿ ಅವಳನ್ನು ನೋಡಲು ಆಗಾಗ್ಗೆ ಬರುತ್ತಿದ್ದಾಳೆ. ಮೀರಾ ಸತ್ತ ಮೇಲೆ ಮಾತಂಗಿಗೆ ಸತ್ಯಳ ಮೇಲಿನ ಅಂತಃಕರಣ ಹೆಚ್ಚಾಗಿದೆ. ಸತ್ಯಳೂ ಎರಡು ಸಲ ಬೆಟ್ಟಯ್ಯನವರ ಹೆಂಡತಿಯನ್ನು ಮಾತನಾಡಿಸಿಕೊಂಡು ಬರಲು ಹೋಗಿದ್ದಳು. ಅವರಿಂದ ಅವಳಿಗೆ ಮೋಹನದಾಸನ ವಿಷಯ ತಿಳಿಯುತ್ತಿತ್ತು.

ಅಮಾವಾಸ್ಯೆಯ ಬೆಳಗ್ಗೆ ಎಂಟು ಗಂಟೆಯ ಹೊತ್ತಿಗೆ ಮೋಹನದಾಸ ಸತ್ಯಳ ತೋಟಕ್ಕೆ ಬಂದ. ಅವಳು ಆಗ ತಾನೇ ಹವನ ಮುಗಿಸಿ, ಮೇಲೆ ಏಳುತ್ತಿದ್ದಳು. ಒಳಗೆ ಬಂದ ಅವನು ಕೇಳಿದ: 'ತುಪ್ಪ ಸುಟ್ಟ ವಾಸನೆ ತೋಟದಲ್ಲೆಲ್ಲ ಬಡಿಯುತ್ತೆ. ಮನುಷ್ಯರು ತಿನ್ನಬೇಕಾದ ತುಪ್ಪಾನ ಬೆಂಕಿಗೆ ಹಾಕಿ ಹಾಳುಮಾಡ್ತೀರಲ. ಇದನ್ನ ಯಾಕೆ ಬಿಡಬಾರದು?'

ಅವನ ಭೇಟಿ ಅನಿರೀಕ್ಷಿತವಾಗಿತ್ತು. ಪ್ರಶ್ನೆಯೇನೂ ಅವನ ವಿಚಾರಗಳಿಗೆ ಅಸಂಗತವಾಗಿರಲಿಲ್ಲ. ಆದುದರಿಂದ ಸತ್ಯ ಉತ್ತರ ಹೇಳಲಿಲ್ಲ. 'ನಾಳೆ ದಿನದ ವ್ಯವಸ್ಥೆ ಹ್ಯಾಗಿದೆ?' – ಎಂದು ವಿಚಾರಿಸಿದಳು.

'ಇವತ್ತು ಸಂಜೆ ಮೋಟಾರಿನಲ್ಲಿ ಹತ್ತು ಜನ ಹುಡುಗರು ಬತ್ತಾರೆ. ನಾಳೆಯಿಂದ ಪೋಲೀಸು ಕಾನಿಸ್ಟೇಬಲುಗಳು ದೇವಸ್ಥಾನದ ಹತ್ತಿರ ಇದ್ದು, ನಮಗೆ ತೊಂದರೆಯಾಗದ ಹಾಗೆ ಒಳಗೆ ಬಿಡಿಸಬೇಕು ಅಂತ ಮೇಲಿನಿಂದ ಆರ್ಡರೂ ಬಂದಿದೆ. ಪೋಲೀಸ್ನೋನು ಹ್ಯಂಗೆ ಬಿಡುಸ್ತಾನೆ ನೋಡ್ತೀವಿ ಅಂತ ಊರಲ್ಲಿ ಮಾತಾಡ್ಕತ್ತಿದಾರಂತೆ. ಏನಾದ್ರೂ ಬಿಡಾಕಿಲ್ಲ ಅಂತ ಮುದುಕ ಪಟೇಲ ಇದಾನಲ, ನಮ್ಮಪ್ಪನ ಮೀಸೆ ಬೋಳಿಸಿದೋನು, ಅವನು ಅಂತಿದಾನಂತೆ. ಹೊಡೆ

ದಾಟವಾದರೂ ಆಗಬೌದು. ನಮ್ಮ ಹತ್ತು ಜನ ಹುಡುಗರಿದಾರಲ, ಹೊಡೆದಾಟ ದಲ್ಲಿ ಸರಿಯಾದ ಟ್ರೇನಿಂಗ್ ಆಗಿದೆ. ನಮ್ಮ ಕೇರಿಯ ಗಂಡಸರು ಹೆಂಗಸರೆಲ್ಲ ತಯಾರಾಗಿದಾರೆ.'

'ನಿಮ್ಮ ಕೇರಿಯೋರೆಲ್ಲ ತಯಾರಾಗಿದಾರಾ? ಎಲ್ಲರೂ?'

'ಹೂಂ. ಬಲಗೈಯೋರೂ ಸೇರ್ಕಂಡಿದಾರೆ. ನಮ್ಮಪ್ಪನೇ ಮುಂದಾಳು.'

'ಹೌದಾ?' – ಸತ್ಯಳಿಗೆ ಆಶ್ಚರ್ಯವಾಯಿತು: 'ಹೊಡೆದಾಟವಾದರೂ ಮುಂದಾಳಾಗಿ ನಿಲ್ತೀನಿ ಅಂದ್ರಾ?'

'ಹೂಂ.'

'ಅದು ಹ್ಯಾಗೆ ಸಾಧ್ಯ?'

'ಶ್ರೀನಿವಾಸಗೌಡನ ಮೇಲೆ ಕೇಸು ಗೀಸು ಮಾಡಕೂಡದು ಅಂತ ಮೀರಾ ಬರೆದಿಟ್ಟದ್ದು ಎರಡು ಥರಕ್ಕೆ ಒಳ್ಳೇದುಕ್ಕೇ ಆಯ್ತು. ಕೇಸು ಹಾಕಿದ್ರೆ ನಮ್ಮಪ್ಪನ ದುಃಖ ತೀರಿಹೋಗ್ತಿತ್ತು. ಈಗ ಒಳಗೇ ಉರೀತಿತ್ತು. ನಾನು ಚರ್ಚೆ ಮಾಡಿ ಕ್ರಾಂತಿಯ ಮಾರ್ಗಕ್ಕೆ ಅದನ್ನು ತಿರುಗಿಸಿದೆ.'

ಸತ್ಯಳಿಗೆ ಒಂದು ನಿಮಿಷ ಆಶ್ಚರ್ಯವಾಯಿತು. ತಾನು ಕಂಡ ಮಟ್ಟಿಗೆ ಬೆಟ್ಟಯ್ಯನವರೆಂದರೆ ತಾಳ್ಮೆಯ ಮೂರ್ತಿಯಾಗಿದ್ದರು. ಯಾವುದಕ್ಕೂ ಕೋಪ ಮಾಡಿಕೊಳ್ಳುತ್ತಿರಲಿಲ್ಲ. ಚಿಕ್ಕವಯಸ್ಸಿನಿಂದ ಅವರ ಸ್ವಭಾವವೇ ಅಂಥದಂತೆ. ಸಹಸ್ರಾರು ವರ್ಷಗಳಿಂದ ಅಪಮಾನಗಳನ್ನು ಸಹಿಸಿ, ಅದನ್ನು ಸ್ವೀಕರಿಸುವುದೇ ತಮ್ಮ ಪಾಲಿಗೆ ಬಂದದ್ದೆಂಬ ಮನೋಧರ್ಮ ಅವರಿಗೆ ಬಂದುಹೋಗಿತ್ತು. ಅಲ್ಲದೆ ಆರು ವರ್ಷ ಆಶ್ರಮದಲ್ಲಿದ್ದು ಅಹಿಂಸೆಯಲ್ಲಿ ಶ್ರದ್ಧೆಯನ್ನು ರೂಢಿಸಿಕೊಂಡಿದ್ದರು. ಇಂಥವರು ಕ್ರಾಂತಿಯ ವಿಧಾನಕ್ಕೆ ಒಪ್ಪಿರುವುದೆಂದರೆ ಆಶ್ಚರ್ಯವೇ. ಆದರೆ ಮರುಕ್ಷಣದಲ್ಲಿಯೇ, ಇದರಲ್ಲಿ ಅಸಹಜವಾದುದೇನೂ ಇಲ್ಲವೆನಿಸಿತು.

ಅವನು ಎಂದ: 'ಹತ್ತು ಹುಡುಗರೂ ಇಲ್ಲಿ ಇಪ್ಪತ್ತು ದಿನ ಇರ್ತಾರೆ. ದಿನಾ ಅವರಿಗೆ ಊಟ ತಿಂಡಿಯ ಏರ್ಪಾಟು ನಮ್ಮಪ್ಪನದೇ. ಅವರು ದಿನಾ ನಮ್ಮ ಕಾಲೋನಿಯ ಹೆಂಗಸರು ಗಂಡಸರಿಗೆ ಭಾಷಣ ಮಾಡಿ ತಿಳಿವಳಿಕೆ ಕೊಡ್ತಾರೆ. ಕ್ರಾಂತಿ ಅಂದ್ರೆ ಏನು, ಮಾನ ಅಂದ್ರೆ ಏನು, ಮರ್ಯಾದೆ ಅಂದ್ರೆ ಏನು ಅಂತ, ಬಿಡಿಸಿ ಬಿಡಿಸಿ ಹೇಳ್ತಾರೆ. ಹೊರಗಿನೋರು ಮೊದಲು ಹೇಳಿದ್ರೆ ನಮ್ಮೋವ್ರ ತಲೆಗೆ ಹೋಗ್ತದೆ. ನಾನು ಶುರುಮಾಡಿದರೆ ಈ ಬ್ಯಟ್ಟಯ್ಯನ ಮಗಂಗೆಲ್ಲೋ ಆಕ್ಲಾಸ ಅಂತ ಪರೆಸ್ಕತ್ತಾರೆ.'

'ಇನ್ನೊಂದು ಥರಕ್ಕೆ ಅನುಕೂಲ ಆಯ್ತು ಅಂದ್ರಲ್ಲ, ಯಾವುದು?'

'ಯಾವ ವಿಷಯಕ್ಕೆ?'

'ಮೀರಾ ಹಾಗೆ ಬರೆದಿಟ್ಟದ್ದಕ್ಕೆ?'

'ಓ, ಅದೇ?' – ಮೋಹನದಾಸ ಉತ್ಸಾಹದಿಂದ ಹೇಳಿದ: 'ಶ್ರೀನಿವಾಸಗೌಡನಿಗೆ ಹುಚ್ಚು ಹಿಡಿದಿದೆ.'

'ಹೌದಾ? ಯಾವಾಗಿನಿಂದ?' – ಸತ್ಯ ಆಶ್ಚರ್ಯ ಗಾಬರಿಗಳಿಂದ ಕೇಳಿದಳು.

"ಆರು ದಿನದಲ್ಲಿ ಬೀದೀಲಿ ಅಲೀತಿದ್ದ. ಕೊರಳಿಗೆ ಚಿನ್ನದ ಸರ ಹಾಕ್ಕಂಡಿರ್ತಿದ್ದ. 'ಹೆಣ್ಣಿಗ ಸೂಳೇಮಕ್ಳಾ' ಅಂತ ಸಿಕ್ಕಿಸಿಕ್ಕಿದೋರ್‍ನ ಬೈತಿದ್ದ. ನಂಗೆ ಗೊತ್ತಾಯ್ತು. ನಾನೂ ಯೋಚನೆ ಮಾಡ್ದೆ. ಆಮೇಲೆ ನಮ್ಮೋರ ಹಾಸ್ಟಲಿಗೆ ಹೋಗಿ ನಾಲ್ಕು ಹುಡುಗರನ್ನ ಕರೆದು ಛೂ ಬಿಟ್ಟೆ. ಹೊನ್ನೇಶ ಗೊತ್ತಲ, ಅವನೇ ಹುಡುಗರಿಗೆ ಮುಖಂಡ. ಅವರು ಹೋಗಿ ಅವನನ್ನ, 'ಶಿಖಂಡಿ ಸೂಳೆಮಗನೆ, ಶಿಖಂಡಿ ಸೂಳೆಮಗನೆ' ಅಂತ ರೇಗಿಸಿದರು. 'ಕಲ್ಲಲ್ಲಿ ಹೊಡ್ದುಬಿಡ್ತೀನಿ ನನ್ಮಕ್ಳಾ' ಅಂತ ಓಡಿಸ್ಕಂಡು ಬಂದ. ಅವರು ವಾಟ ಹ್ವಡ್ದು ತಪ್ಪಿಸ್ಕಳೋರು. ಮತ್ತೆ ಹಿಂದ್ಗಡಿಂದ ಬಂದು, ಶಿಖಂಡಿ ಸೂಳೆಮಗನೆ ಅಂತ ಕೂಗೋರು. ಬೀದಿಯ ಉಳಿದ ಹುಡುಗರೂ ಸೇರ್ಕಂಡ್ರು. ಎಲ್ಲಾ, ಶಿಖಂಡಿ ಶಿಖಂಡಿ ಅಂತ ಕೂಗಿದ್ದೇ ಕೂಗಿದ್ದು. ಗಡ್ಡ ಕೆರೆದಿರಲಿಲ್ಲ. ತಲೆ ಕೆರೆದಿರಲಿಲ್ಲ. ಶರಟು ಕೊಳೆಯಾಗಿತ್ತು. ಇವನು ಮಂತ್ರಿ ಮಗ ಅಂತ ಜನಕ್ಕೆ ಬೇಗ ಗೊತ್ತಾಗ್‍ಲಿಲ್ಲ. ಅಷ್ಟೊಂದು ಹುಡುಗರು ಸೇರಿ ಒಂದೇ ಸಮ ಕಿರುಚ್‍ಕಂಡ್ರಲ – ಶಿಖಂಡಿ, ಶಿಖಂಡಿ, ಶಿಖಂಡಿ ಅಂತ. ಎರಡು ಗಂಟೇಲಿ ಹುಚ್ಚು ರೇಗ್ತು. 'ನಾನು ಶಿಖಂಡಿಯಲ್ಲ, ನಾನು ಶಿಖಂಡಿಯಲ್ಲ' ಅಂತ ಹೊಡ್ಕಳುಕ್ಕೆ ಶುರು ಮಾಡಿದ. ಹೊನ್ನೇಶ ಬಲು ಬುದ್ಧಿವಂತ...."

'ನೀವ್ಯಾಕೆ ಹಾಗೆ ಮಾಡ್ಸಿದಿರಿ?' – ಸತ್ಯ ನಡುವೆಯೇ ಕೇಳಿದಳು.

'ಅವನಿಗೆ ಹುಚ್ಚು ಚೆನ್ನಾಗಿ ರೇಗಲಿ ಅಂತ' – ಮೋಹನದಾಸ ತಿರಸ್ಕಾರ ಮತ್ತು ತೃಪ್ತಿಗಳಿಂದ ಉತ್ತರ ಹೇಳಿದ.

ಆದರೆ ಸತ್ಯಳಿಗೆ ಇದರಿಂದ ನೋವಾಯಿತು. 'ಇದು ಮನುಷ್ಯಗುಣವಲ್ಲ' – ಎಂದಳು.

'ನಾವು ಏನು ಮಾಡಿದರೂ ಮನುಷ್ಯಗುಣವಲ್ಲ. ಮೇಲುಜಾತಿಯೋರು ಏನು ಬೇಕಾದರೂ ಮಾಡಬಹುದು ಅಲ್ಲವಾ? ನಾಳೆ ಆಕಸ್ಮಾತ್ ಹೊಡೆದಾಟವಾಗಿ ನಾವು ಒಂದು ನಾಕು ಜನಾನ ಕೊಚ್ಚಿ ಎಸೆದೆವು ಅನ್ನಿ. ಆಗಲೂ ನೀವು ಮನುಷ್ಯಗುಣ ಅಲ್ಲ ಅಂತೀರಿ. ಸತ್ಯ, ನೀವು ಚರಿತ್ರೆ ಓದಿದೀರಿ. ಚನ್ನಾಗಿ ಬರೀತೀರಿ. ಆದರೆ ನಾವು ಚರಿತ್ರೇನ ಉಂಡಿದೀವಿ. ನಿಮ್ಮ ಹತ್ತಿರ ಸಹಾನುಭೂತಿ ಹುಡಿಕ್ಕಂಡು ಬರುವ ನಾವು ಶಿಖಂಡಿಗಳು. ಇಷ್ಟೆಲ್ಲ ನಾನು ನಿಮ್ಮ ಕೈಲಿ

ಹೇಳುಕ್ಕೆ ಅಂತ ಯಾಕೆ ಬಂದೆನೋ, ನನಗೇ ಅರ್ಥವಾಗ್ತಿಲ್ಲ' – ಎನ್ನುವಾಗ ಅವನ ಕಪ್ಪು ಮುಖ ಕೆನ್ನೆಗಳು ಕೆಂಚಗಾಗಿದ್ದುವು.

ಅವನನ್ನು ರೇಗಿಸಬಾರದೆಂದು ಅವಳು ಕೇಳಿದಳು: 'ಹೋಗ್ಲಿ. ಈಗ ಅವನು ಎಲ್ಲಿದಾನೆ?'

'ಯಾಕೆ?'

'ತಿಳ್ಕಳುಕ್ಕೆ, ಕೇಳಿದೆ.'

'ನೀವು ಈಗಲೇ ಬಸ್‌ಸ್ಟ್ಯಾಂಡಿಗೆ ಓಡಿ, ಅಲ್ಲಿಂದ ಬಸ್ ಹತ್ತಿ ಹೋಗಿ ಅವನನ್ನು ಲಾಲಿಸಿ ಪಾಲಿಸಿ ಸಮಾಧಾನ ಮಾಡುಕ್ಕೇನು?'

ಸತ್ಯ ಅವನ ಮುಖವನ್ನು ಸೂಕ್ಷ್ಮವಾಗಿ ನೋಡಿದಳು. ಕೋಪದ ಜೊತೆಗೆ ಅಸೂಯೆಯೂ ಕಣ್ಣುಗಳಲ್ಲಿ ಕಾಣುತ್ತಿತ್ತು. ಅವಳು ಹೇಳಿದಳು: 'ಲಾಲಿಸಿ ಪಾಲಿಸುವ ಮಾತಿಗಲ್ಲ. ಇಷ್ಟು ಹೇಳಿದಿರಲ್ಲ. ಮುಂದಿನದನ್ನೂ ಹೇಳಿ. ಎಲ್ಲಿದಾನೆ?'

"ತುಮಕೂರಿನ ಯಾವ ಯಾವುದೋ ಮೂಲೇಲಿ 'ನಾನು ಶಿಖಂಡಿಯಲ್ಲ, ನಾನು ಶಿಖಂಡಿಯಲ್ಲ' ಅಂತ ಅಲೀತಿದ್ದ. ಬೀದಿಯ ಹುಡುಗರಿಗೆ ಅವನೇ ಹೆಸರು ಹೇಳಿಕೊಟ್ಟ ಹಾಗೆ ಆಯ್ತುಲ. ಅವರು ಅದೇ ಹೆಸರು ಹಿಡಿದು ಕೂಗ್ತಿದ್ರು. ನಮ್ಮ ಹುಡುಗರು ಹುಡಿಕ್ಕಂಡು ಹೋಗಿ ರೇಗಿಸಿ, ಬೀದಿ ಹುಡುಗರಿಗೆ ಹೇಳಿಕೊಟ್ಟು ಬರ್ತಿದ್ರು. ಅವನ ಆಫೀಸಿನ ಗುಮಾಸ್ತರಿಗೆ ಎಲ್ಲಿದಾನೆ ಅಂತ ಗೊತ್ತೇ ಇರಲಿಲ್ಲವಂತೆ. ನೆನ್ನೆ ಬೆಳಗ್ಗೆ ಅವನ ಬಸ್ಸಿನ ಒಬ್ಬ ಕಂಡಕ್ಟರ ಕಣ್ಣಿಗೆ ಬಿದ್ದು ಗುರುತು ಸಿಕ್ಕಿತಂತೆ. ಗುಮಾಸ್ತ ಬೆಂಗಳೂರಿಗೆ ಫೋನು ಮಾಡಿ, ಅವನ ಅಪ್ಪ ಬಂದು ನೆನ್ನೆ ಸಂಜೆ ಕಾರಿನಲ್ಲಿ ಕರ್ಕಂಡು ಹೋದ್ನಂತೆ. ಅವ್ನನ್ನ ಕಾರಿಗೆ ಹತ್ತಿಸುಕ್ಕೆ ಕಷ್ಟವಾಯ್ತಂತೆ. ನಮ್ಮ ಹುಡುಗರು ಎಲ್ಲ ಹೇಳಿದ್ರು."

'ಇದನ್ನ ನಿಮ್ಮ ತಂದೆಗೆ ಹೇಳಿದಿರಾ?'

'ಹೇಳಿಲ್ಲ. ನೀವು ಹೇಳ್ತೀರೇನು?' – ಎಂದು ಕೇಳಿದ ಮೋಹನದಾಸ ತಕ್ಷಣ ಧ್ವನಿಯನ್ನು ಎತ್ತರಿಸಿ, 'ಹೇಳುಕ್ಕೆ ಅಂತ ನಮ್ಮ ಕೇರಿ ಕಡೆ ಬಂದ್ರೆ ನಿಮ್ಮನ್ನ ಸುಮ್ಮನೆ ಬಿಡುಲ್ಲ, ಎಚ್ಚರಿಕೆ' ಎಂದ.

ಸತ್ಯ ಅವನ ಮುಖವನ್ನು ದಿಟ್ಟಿಸಿ ನೋಡಿದಳು. ತನ್ನ ನಿಶ್ಚಯದಲ್ಲಿ ಒಂದು ಗೆರೆಯಷ್ಟೂ ಕದಲುವುದಿಲ್ಲವೆಂದು ಮುಖಭಾವ ಹೇಳುತ್ತಿತ್ತು. ಅವಳು ಮುಖವನ್ನು ತಿರುಗಿಸಿ ಬಾಗಿಲ ಕಡೆ ನೋಡುತ್ತಾ ಕುಳಿತಳು.

ಈ ಸುದ್ದಿಯಿಂದ ಅವಳ ಮನಸ್ಸು ತಳಮಳಗೊಂಡಿದೆ ಎಂಬುದು ಅವನಿಗೆ ಅರ್ಥವಾಯಿತು. ಅವನು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದ. ಅನಂತರ ಕೇಳಿದ: 'ನಾಳೆ ಬೆಳಗ್ಗೆ ಹತ್ತು ಗಂಟೆಗೆ ದೇವಸ್ಥಾನ ಪ್ರವೇಶ ಅಂತ ನಿಶ್ಚಯ

ವಾಗಿದೆ. ನೋಡುಕ್ಕೆ ನೀವು ಬರ್ತೀರಿ ಅಲ್ಲವೆ?'

'ನಿಜ ಹೇಳಿ: ನೀವು ಆ ದೇವರನ್ನ ನಂಬ್ತೀರಾ?'

'ನಾನೇ?' – ಎಂದು ಎರಡು ಅವುಡಗಳನ್ನೂ ಒತ್ತಿ ಒಂದು ನಿಮಿಷ ಸುಮ್ಮನಿದ್ದು ಹೇಳಿದ: 'ಬೈಗುಳ ಉಪಯೋಗಿಸಿದರೆ ನಮ್ಮ ದೇವರ ವಿಷಯದಲ್ಲಿ ಅಗೌರವ ತೋರಿಸಿದಿರಿ, ಅಹಂಕಾರ ತೋರಿಸಿದಿರಿ ಅಂತ ನೀವು ಬೋಧನೆ ಮಾಡುಕ್ಕೆ ಬರ್ತೀರಿ. ಆದ್ದರಿಂದ ತಾಳ್ಮೆಯಿಂದ ಹೇಳ್ತೀನಿ: ನಾನು ನಂಬುಲ್ಲ. ಆ ದೇವರ ಬಗೆಗೆ ಯಾವುದಾದರೂ ಭಾವನೆ ಇದ್ದರೆ ಅದು ನನ್ನ ತಿರಸ್ಕಾರ ಅಷ್ಟೆ.'

'ಹಾಗಾದ್ರೆ ಅಂಥ ಗುಡಿಯನ್ನ ಪ್ರವೇಶ ಮಾಡುಕ್ಕೆ ಯಾಕೆ ಇಷ್ಟೆಲ್ಲ ಪ್ರಯತ್ನ ಮಾಡ್ತಿದೀರ?'

'ಯಾಕೆ! ಇಷ್ಟು ಶತಮಾನಗಳಿಂದ ಅದು ನಮ್ಮನ್ನ ತಿರಸ್ಕರಿಸಿದೆಯಲ್ಲ.'

ಇದು ಒಂದು ತೆರನಾದ ವಿಚಿತ್ರ ಸಂಬಂಧ ಎನಿಸಿತು. ಮೋಹನದಾಸ ನಾಳೆ ಪ್ರವೇಶಿಸುವ ಗುಡಿಯ ದೇವರನ್ನು ದ್ವೇಷಿಸುತ್ತಾನೆ, ತಿರಸ್ಕರಿಸುತ್ತಾನೆ. ನಾನು ಆಕ್ಷೇಪಿಸುತ್ತೇನೆಂಬ ಕಾರಣದಿಂದ ಅವನು ಬೈಗುಳದ ಮಾತನ್ನು ಉಪಯೋಗಿಸಿಲ್ಲ. ಇಲ್ಲದಿದ್ದರೆ ಬೂಟಿನಲ್ಲಿ ಹೊಡೆಯುವ, ಕ್ಯಾಕರಿಸಿ ಉಗುಳುವ ಮಾತುಗಳನ್ನು ಸಲೀಸಾಗಿ ಆಡುತ್ತಿದ್ದನೇನೋ! 'ಒದೀಬೇಕು ಹಿಡಕಂಡು'– ಎನ್ನುವುದು ಅವನಿಗೆ ಸಹಜವಾಗಿ ಬರುವ ಮಾತು. ಆದರೆ ಇಷ್ಟು ಶತಮಾನಗಳಿಂದ ಅದು ತಿರಸ್ಕರಿಸಿದೆ ಎಂಬ ಕಾರಣಕ್ಕಾಗಿ ಅದರ ಮಂದಿರವನ್ನು ಪ್ರವೇಶಿಸಲು ಇಷ್ಟ ಸನ್ನಾಹ ಮಾಡುತ್ತಿರುವ ಇವನ ಮನಸ್ಸಿನಲ್ಲಿರುವುದು ಶುದ್ಧ ತಿರಸ್ಕಾರವೇ? – ಇವನ ಬೈಗುಳಗಳು ನಿಂದಾಸ್ತುತಿಯೇ? – ಇವನ ಭಾವವು ವಿರೋಧಭಕ್ತಿಯೇ? –ಎಂಬ ಪ್ರಶ್ನೆಗಳು ಅವಳ ಮನಸ್ಸಿನಲ್ಲಿ ಹುಟ್ಟಿ, ಕೇಳಿದಳು: 'ನಿಮ್ಮ ನಿತ್ಯಪ್ರವೇಶಕ್ಕೆ ಯಾರೂ ಅಡ್ಡ ಬರದೆ ಇದ್ರೆ ಮುಂದೆ ಏನು ಮಾಡ್ತೀರಿ?'

'ಏನು ಮಾಡ್ತೀವಿ!' – ಎಂದು ಅವಳ ಪ್ರಶ್ನೆಯನ್ನೇ ಪುನರುಚ್ಚರಿಸಿದ ಮೋಹನದಾಸನಿಗೆ ತಕ್ಷಣ ಉತ್ತರ ಹೊಳೆಯಲಿಲ್ಲ.

'ಅಂದ್ರೆ ದಿನಾ ದೇವಸ್ಥಾನಕ್ಕೆ ಹೋಗೂದ ನಿಲ್ಲಿಸಿಬಿಡ್ತೀರಾ? ಪ್ರವೇಶಕ್ಕೆ ವಿರೋಧವಿದ್ದರೆ ದಿನಾ ಸರತಿ ಮೇಲಾದರೂ ಹೋಗಬೇಕು ಅನ್ನೊ ಹಟ ಇರುತ್ತೆ. ವಿರೋಧವೇ ಇಲ್ಲದಿದ್ದರೆ ಆ ಹಟವೂ ಇರುಲ್ಲ. ನಿಜವಾದ ಭಕ್ತಿ ಇಲ್ಲದೆ, ಮಾಡೊ ಕೆಲಸ ಬಿಟ್ಟು ಯಾರೂ ಒಂದೇಸಮನೆ ದೇವಸ್ಥಾನಕ್ಕೆ ಹೋಗುಕ್ಕಾಗುಲ್ಲ.'

ಈ ಪ್ರಶ್ನೆ ಅವನನ್ನು ಇನ್ನೂ ಕಕ್ಕಾವಿಕ್ಕಿಯಲ್ಲಿ ಕೆಡವಿತು. ಆದರೆ ಏನೋ ಜ್ಞಾಪಿಸಿಕೊಂಡವನಂತೆ ಹೇಳಿದ: 'ಇದು ಬರೀ ಭಕ್ತಿಯ ಪ್ರಶ್ನೆಯಲ್ಲ. ಇಷ್ಟು ದಿನ ಅವರು ನಮ್ಮನ್ನ ಒಳಕ್ಕೂ ಸೇರಿಸಲಿಲ್ಲ. ಈಗ ಬರೀ ಒಳಕ್ಕೆ ಹೋಗಿ ಯಥಾ

ಪ್ರಕಾರ ಗುಲಾಮರಾಗಿ ನಿಂತುಕೊಂಡರೆ ನಮಗೆ ಸಾಲದು. ನಾವೇ ಪೂಜಾರಿಗಳಾಗಬೇಕು. ನಾವು ಮಂಗಳಾರತಿ ಮಾಡುವಾಗ, ಇದುವರೆಗೆ ಮೇಲಿನೋರಾಗಿದ್ದೋರು ಕೈಮುಗಿದು ನಿಂತುಕೊಬೇಕು. ಅಲ್ಲೀತನಕ ನಾವು ಹೋರಾಡಬೇಕು.'

'ಉಳಿದೋರು ಇದಕ್ಕೆ ಒಪ್ಪೂದಿಲ್ಲ.'

'ಯಾಕೆ ಒಪ್ಪಲ್ಲ? ಎಲ್ಲ ಅಧಿಕಾರದ ಕೈಲಿದೆ. ನಮ್ಮೋರ ಸರಿಯಾದ ಸಂಖ್ಯೆ ನನಗೆ ಈಗ ಗೊತ್ತಾಗಿದೆ. ಉಳಿದ ಯಾವ ಒಂದು ಜಾತಿಯೋರಿಗಿಂತಲೂ ನಾವು ಹೆಚ್ಚು ಸಂಖ್ಯೇಲಿದೀವಿ. ಉಳಿದೋರು ಒಂದಾಗದ ಹಾಗೆ ತಂತ್ರಮಾಡಿದರೆ, ನಮ್ಮೋರು ಒಟ್ಟಾದರೆ ಅಧಿಕಾರ ನಮ್ಮ ಕೈಗೆ ಬರುತ್ತೆ. ಆಗ ಇದುವರೆಗೆ ನಮ್ಮನ್ನ ತುಳಿದ ಈ ಮೇಲುಜಾತಿಯೋರನ್ನೆಲ್ಲ ತುಳೀಭೌದು. ದೇವಸ್ಥಾನದ ಹೊಸಲಿನ ಆಚೆ ನಿಂತು ಮಂಗಳಾರತಿ ತಗಂಡು ಹೋಗೂ ಹಾಗೆ ಮಾಡಭೌದು.'

'ಅಂದ್ರೆ ಸಮಾನತೆ?'

'ಎಲ್ಲಿತ್ತು ಸಮಾನತೆ ನಾಲ್ಕುಸಾವಿರ ವರ್ಷದಿಂದ? ನಾವು ಬರೀ ಸಮಾನತೆಗೆ ಹೊಡೆದಾಡ್ತಿಲ್ಲ. ಅವರನ್ನ ತುಳಿದು ನಾವು ಆಳೂದೇ ನಮ್ಮ ಗುರಿ. ಅವರು ಬಂದು ನಮ್ಮ ಹೊಲದಲ್ಲಿ ಆರುಗೇಯಬೇಕು. ಇಷ್ಟು ದಿನ ಅವರು ನಮ್ಮ ಹೆಂಗಸರನ್ನ ಮಾಡಿದ ಹಾಗೆ ನಾವು ಅವರ ಹೆಂಗಸರನ್ನ....ಹೋಗಲಿ' – ಎಂದು ಮುಂದೆ ಮಾತನಾಡದೆ ಅವನು ನಿಲ್ಲಿಸಿದ.

ಸತ್ಯ ಮಾತನಾಡಲಿಲ್ಲ; ಏನೂ ಕೇಳಲೂ ಇಲ್ಲ. ತಾನು ಕೊನೆಗೆ ಆಡಿದ ಮಾತಿನ ಪೂರ್ತಿ ಅರಿವಾಗಿ ಅವನಿಗೇ ನಾಚಿಕೆ ಎನಿಸಿತು. ಇವಳ ಎದುರಿಗೆ ಹೀಗೆ ಅನ್ನಬಾರದಾಗಿತ್ತು ಎಂಬ ವಿವೇಕ ಹುಟ್ಟಿತು. ಎರಡು ನಿಮಿಷ ಸುಮ್ಮನೆ ಮುಜುಗರ ಪಡುತ್ತಿದ್ದು, ಅನಂತರ ತನ್ನ ಒಳಮನಸ್ಸನ್ನು ಬಿಚ್ಚಿ ತೋರಿಸಲು ತಿಳಿಯದೆ ಹೆಣಗುವವನಂತೆ, 'ಸತ್ಯ, ತಪ್ಪು ತಿಳಿಕೋಬ್ಯಾಡಿ. ನಿಮ್ಮನ್ನ ನಾನು ಆ ಅರ್ಥದಲ್ಲಿ ಮೇಲಿನ ಜಾತಿಯೋರು ಅಂತ ತಿಳ್ಕೊಂಡಿಲ್ಲ. ಇಲ್ಲದೆ ಇದ್ರೆ ನಿಮ್ಮ ಹತ್ತಿರ ಬಂದು ಯಾಕೆ ಎಲ್ಲಾನೂ ಮಾತಾಡ್ತಿದ್ದೆ? ಓಡಿ ಬಂದು ನಿಮಗೆ ಹೇಳದೆ ಇದ್ದರೆ ಮನಸ್ಸಿಗೆ ಆಗುಲ್ಲ. ಆದ್ರೆ ನೀವು ಮಾತ್ರ....' ಎಂದು ತೊದಲಿದ.

'ಏನು?' – ಎಂದು ಅವಳು, ತನಗೆ ಏನೂ ತಿಳಿಯದವಳಂತೆ ಕೇಳಿದಳು.

'ನಿಮಗೆ ಅರ್ಥವಾಗೂ ಹಾಗೆ ಹ್ಯಾಗೆ ಹೇಳಲಿ?' – ಎಂದು ಮುಖವನ್ನು ಅಗಲಿಸುವಾಗ ಅದು ಕೆಂಪಗಾಗಿತ್ತು.

'ನಾಳೆ ಕಾರ್ಯಕ್ರಮಕ್ಕೆ ಇನ್ನೂ ಎಷ್ಟು ವ್ಯವಸ್ಥೆ ಮಾಡಬೇಕೋ! ನಿಮಗೆ ಗೊತ್ತಾಗುತ್ತೆ ಅಂತ ಕಾಣುತ್ತೆ.'

ಅವನಿಗೆ ಪೆಚ್ಚಾಯಿತು. ಎರಡು ನಿಮಿಷ ಸುಮ್ಮನೆ ಕೂತುಬಿಟ್ಟ. ಅನಂತರ

ಹೊರಗೆ ಬಂದು ಕಾಲಿಗೆ ಬೂಟುಗಳನ್ನು ಕಟ್ಟಿಕೊಂಡು, 'ನಾಳೆ ಗುಡಿಗೆ ನೀವು ಖಂಡಿತ ಬರಬೇಕು' ಎಂದು ಹೇಳಿ ಹೊರಟುಹೋದ.

ಮೋಹನದಾಸ ಹೋಗಿ ಎರಡು ಗಂಟೆಯಾದರೂ ಸತ್ಯ ಏನೊಂದು ಕೆಲಸ ಮಾಡಲೂ ಮನಸ್ಸಾಗದೆ ಸುಮ್ಮನೆ ಕೂತಿದ್ದಳು. ಅವನ ಮಾತುಗಳಿಂದ ಅವಳ ಮನಸ್ಸಿಗೆ ಶಾಕ್ ಹೊಡೆದಿತ್ತು. ಬರೀ ಸಮಾನತೆಯಲ್ಲ. ಮೇಲಿನ ಜಾತಿಯವರನ್ನು ತುಳಿದು ಆಳುವುದೇ ತನ್ನವರ ಧ್ಯೇಯವಂತೆ. ದೇವಸ್ಥಾನದಲ್ಲಿ ತಾವು ಮಾತ್ರ ಪೂಜಾರಿಗಳಾಗಿ ಇತರರು ಕೈ ಒಡ್ಡಿ ನಿಲ್ಲಬೇಕಂತೆ. ಇತರರು ಅವರ ಹೊಲ ಗದ್ದೆಗಳಲ್ಲಿ ಕೂಲಿಗೆ ಬರುವಂತಾಗಿ ಅವರು ಇತರ ಜಾತಿಯ ಹೆಂಗಸರನ್ನ ....ಅವನ ಬಗೆಗೆ ಅವಳಲ್ಲಿ ಹೇಸಿಗೆ ಹುಟ್ಟಿತು. ಅವನ ನೆನಪಿನಿಂದಲೇ ಅಸಹ್ಯವಾಗಲು ಶುರುವಾಯಿತು. ಇಂಥವನ ಜೊತೆ ತಾನು ಈ ಮಟ್ಟಿಗಾದರೂ ಸೇರಿದುದೇ ತಪ್ಪು ಎಂದುಕೊಂಡಳು.

ಮಧ್ಯಾಹ್ನ ಒಂದು ಗಂಟೆಯತನಕ ಹಾಗೆಯೇ ಕೂತಿದ್ದು ಅನಂತರ ಎದ್ದು ಅಡಿಗೆಗೆ ಇಟ್ಟಳು. ಅಷ್ಟರಲ್ಲಿ ಮನಸ್ಸು ಸ್ವಲ್ಪ ತಿಳಿಯಾಗಿತ್ತು. ಇದು ಬರೀ ಮೋಹನದಾಸನ ಮನೋಭಾವವಲ್ಲವೇನೋ – ಎನಿಸಿತು. ಬಹಳ ದಿನಗಳಿಂದ ತುಳಿಸಿಕೊಂಡ ಜನಾಂಗವು ತನ್ನ ದಾಸ್ಯವನ್ನು ಕಳಚಿಕೊಂಡ ನಂತರ, ಇದುವರೆಗೆ ತಾನು ಅನುಭವಿಸಿದ ದಾಸ್ಯವನ್ನು ಉಳಿದವರ ಮೇಲೆ ಹೇರಿ ತುಳಿಯುವುದು ಹೊಸತಲ್ಲ ಎಂಬ ವಿಚಾರ ಬಂತು. ಕ್ರಾಂತಿಮಾರ್ಗದಿಂದ ಸಮಾನತೆಯನ್ನು ಗಳಿಸುವ ಗುಂಪು, ಅನಂತರ ಸಾಮಾನ್ಯವಾಗಿ ಶೋಷಕವರ್ಗವೇ ಆಗುತ್ತದೆ. ಮೋಹನದಾಸನ ಜನಾಂಗವೂ ಇದಕ್ಕೆ ಹೊರತಲ್ಲವೆನಿಸಿತು. ತನಗೆ ಇದುವರೆಗೂ ಹೊಳೆಯದಿದ್ದ ಈ ಸಂಗತಿಯಿಂದ ಅವಳಿಗೇ ಆಶ್ಚರ್ಯವಾಯಿತು. ಒಂದು ಹೊಸ ಸತ್ಯವನ್ನು ಕಂಡಂತಹ ಬೆರಗು ಅಂಜಿಕೆಗಳುಂಟಾದುವು.

ಅಡಿಗೆಯಾಗಿ ಊಟ ಮಾಡಿದ ನಂತರ, ಅವಳ ನೆನಪು ಮೋಹನದಾಸನು ಆಡಿದ ಕೊನೆಯ ಮಾತಿನ ಕಡೆಗೆ ತಿರುಗಿತು. ಅವನು ಈ ರೀತಿ ಸೂಚಿಸುತ್ತಿರುವುದು ಇದೇ ಮೊದಲ ದಿನವಲ್ಲ. ಈ ಹಿಂದೆಯೇ ಹಲವು ಸಲ ವ್ಯಕ್ತಪಡಿಸಿದ್ದಾನೆ. ಅದು ತಿಳಿಯಲೇ ಇಲ್ಲವೆಂಬಂತೆ ತಾನು ಸುಮ್ಮನಿದ್ದೇನೆ. ಅವನ ಬಗೆಗೆ ತನ್ನಲ್ಲಿ ಅಂತಹ ಭಾವನೆ ಏನೂ ಇರಲಿಲ್ಲ. ಆದರೆ ಅವನ ನನ್ನ ಸಂಬಂಧದ ಬಗೆಗೆ ಶ್ರೀನಿವಾಸ ಅಸೂಯೆಪಟ್ಟ. ಶ್ರೀನಿವಾಸನ ವಿಷಯದಲ್ಲಿ ನನಗೆ ಅಂತಃಕರಣ ವಿರಬಹುದೆಂಬ ಅಸೂಯೆ ಮೋಹನದಾಸನಲ್ಲಿಯೂ ತುಂಬಿದೆ. ಮೋಹನದಾಸನ ಒರಟು, ಅಂಧದ್ವೇಷಗಳನ್ನು ಅವಳು ಅನುಕಂಪದಿಂದ ನೋಡಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಳು. ಆದರೆ ಆ ಅನುಕಂಪವು, ಅವನು ಬಯಸುವಂತೆ

ಅವನ ಕೈಹಿಡಿಯುವ ಹೆಂಡತಿಯಾಗಲು ತಕ್ಕ ಮೂಲಧನವಾಗಿರಲಿಲ್ಲ. ಆ ಆಲೋಚನೆಯೂ ಬೇರೊಂದು ರೀತಿಯಲ್ಲಿ ಅವಳ ಮನಸ್ಸಿನಲ್ಲಿ ಬೇರು ಹುಡುಕುತ್ತಿತ್ತು.

ಮೀರಾಳಿಗೆ ಹೀಗೆ ಆದುದಕ್ಕೆ ತನ್ನ ನೈತಿಕ ಹೊಣೆಯೂ ಉಂಟೆಂಬುದನ್ನು ಅವಳ ಮನಸ್ಸು ತನಗೆ ತಾನೇ ಹೇಳಿಕೊಂಡಿತ್ತು. ವೆಂಕಟೇಶ ಹೇಳಿದಂತೆ, ಮೀರಾ ಶ್ರೀನಿವಾಸರ ಮದುವೆಯನ್ನು ತಾನು ಪ್ರತೀಕಾರಭಾವದಿಂದ ಸೂಚಿಸಿದೆನೇ? – ಎಂದು ಅಂತರಂಗವನ್ನು ತಾನೇ ತಡಕಿಕೊಂಡಳು. ಆದರೆ ಅದು ವೆಂಕಟೇಶನ ಬುದ್ಧಿಯು ಅರ್ಥಮಾಡಿಕೊಂಡ ಬಗೆಯೇ ಹೊರತು, ತನ್ನ ಮನಸ್ಸಿನ ನಿಜವಲ್ಲ ಎಂದು ಅವಳ ಮನಸ್ಸೇ ಸಮಾಧಾನ ಹೇಳಿತು. ಆದರೆ ತಾನು ಯಾಕೆ ಈ ಸಲಹೆ ಮಾಡಿದೆ, ಶ್ರೀನಿವಾಸನ ಕೈಲಿ ಅಷ್ಟು ಮಾತನಾಡಿ ಅವನ ಮನಸ್ಸನ್ನು ಹೀಗೆ ತಿರುಗಿಸಲು ಪ್ರಯತ್ನಪಟ್ಟೆ? ಅವನಿಗೆ ತಕ್ಕ ಹೆಂಡತಿ ಸಿಕ್ಕಲಿ ಎಂಬ ನನ್ನ ಆಶೆಯೂ ಸಾತ್ವಿಕಗುಣದ್ದಾಗಿರಬಹುದು. ಮೀರಾ ಅವನಿಗೆ ತಕ್ಕ ಹುಡುಗಿ ಎಂಬುದೂ ನಿಜವಿರಬಹುದು. ಆದರೆ ಇದಕ್ಕೆ ಶ್ರೀನಿವಾಸನ ಹಿರಿಯರಿಂದ ವಿರೋಧ ಬರುವುದು ಖಂಡಿತ ಎಂದು ಗೊತ್ತಿದ್ದರೂ ನಾನೇಕೆ ಈ ದಿಶೆಯಲ್ಲಿ ಪ್ರಯತ್ನಪಟ್ಟೆ? ಸುಧಾರಣೆಯ ನನ್ನ ಬಯಕೆ ಅತಿಯಾಯಿತೇನೋ! ಸುಧಾರಣೆಗೆ ತಕ್ಕ ವ್ಯಕ್ತಿತ್ವವಿಲ್ಲದ ಶ್ರೀನಿವಾಸನನ್ನು ಮತ್ತೆ ನಂಬಿ ಹೊರಟಿದ್ದರಿಂದ ಮೀರಳಿಗೆ ಹೀಗಾಯಿತು. ಒಟ್ಟಿನಲ್ಲಿ, ಸುಧಾರಣೆಯ ಈ ಪ್ರಯೋಗಕ್ಕೆ ಒಂದು ಮೃದುಜೀವಿಯ ಬಲಿಯಾಯಿತು. ಎಂತಹ ಅನ್ಯಾಯವಾಯಿತು! – ಎಂದು ಅವಳು ತನ್ನಲ್ಲಿ ತಾನೇ ವ್ಯಸನಪಡುತ್ತಿದ್ದಳು.

ಇದ್ದಕ್ಕಿದ್ದಂತೆಯೇ ಒಂದು ಯೋಚನೆ ಬಂದಿತ್ತು: ಇನ್ನೊಬ್ಬರ ಮೂಲಕ ಸುಧಾರಣೆಗೆ ಪ್ರಯತ್ನಿಸುವುದು ಬೇಡ. ಅದು ನಮ್ಮಿಂದಲೇ, ನಮ್ಮಲ್ಲೇ ಆಗಬೇಕು. ಅಂದರೆ ಹೇಗೆ ಆಗಬೇಕು? ತಕ್ಷಣ ಮನಸ್ಸು ಸೂಚಿಸಿತು: ತಾನು ಮೋಹನದಾಸನನ್ನು ಮದುವೆಯಾಗಲು ಒಪ್ಪಿದರೆ ಆ ಸುಧಾರಣೆ ಆಗುವುದಿಲ್ಲವೇ? ಮೀರಳ ದುರಂತಕ್ಕೆ ತಾನು ಈ ಮೂಲಕ ಪ್ರಾಯಶ್ಚಿತ್ತವನ್ನೂ ಮಾಡಿಕೊಂಡಂತಾಗುತ್ತದೆ ಎಂಬ ವಿಚಾರವು ತಲೆಯನ್ನು ಹೊಕ್ಕಿತು.

ತಲೆಯನ್ನು ಹೊಕ್ಕ ವಿಚಾರವನ್ನೇ ಅನುಸರಿಸುವುದು ಸತ್ಯಳ ಸ್ವಭಾವವಾಗಿತ್ತು. ತಾನು ಮೋಹನದಾಸನನ್ನು ಮದುವೆಯಾದರೆ ತಪ್ಪಿಲ್ಲ. ಇದನ್ನು ಯಾರಾದರೂ ವಿರೋಧಿಸುವ ಅಡ್ಡಿಯೂ ಇಲ್ಲ. ವೆಂಕಟೇಶ ಬಂದು ಬೈಯ್ದು ಹೋಗುತ್ತಾನೆ. ತಾನು ಹೇಗೂ ಬ್ರಾಹ್ಮಣಿಕೆಯನ್ನು, ಉತ್ತಮ ಜಾತಿಯ ನಡೆವಳಿಕೆಗಳನ್ನು, ಬೇಕೆಂದೇ ಕೈಬಿಟ್ಟ ಹೆಂಗಸೆಂದು ಊರಿನ ಬ್ರಾಹ್ಮಣರು ಮಾತ್ರವಲ್ಲ, ಉಳಿದ ಜಾತಿಗಳವರೂ ತಿಳಿದುಕೊಂಡಿದ್ದಾರೆ. ಅವರು ಯಾರೂ ಈ ವಿಷಯದಲ್ಲಿ ತಲೆ

ಹಾಕುವುದಿಲ್ಲ. ಹಿಂದುಗಡೆ ಬೇಕಾದಂತೆ ಹರಟಿಕೊಳ್ಳುತ್ತಾರೆ ಅಷ್ಟೆ – ಎಂಬ ಧೈರ್ಯವೂ ಮನಸ್ಸಿನಲ್ಲಿತ್ತು.

ಆದರೆ ಒಳಮನಸ್ಸು ಸಣ್ಣಗೆ ನುಡಿಯುತ್ತಿತ್ತು: ಈ ಮದುವೆ ಯಶಸ್ವಿಯಾಗುವುದಿಲ್ಲ. ಇದರಿಂದ ತಾನು ಸುಖಿಯಾಗುವುದಿಲ್ಲ. ತನಗೂ ಮೋಹನದಾಸನಿಗೂ ಹೊಂದಲಾರದಷ್ಟು ಅಂತರವಿದೆ. ಬರೀ ಸಾಂಸ್ಕೃತಿಕವಾಗಿಯಲ್ಲ – ಸ್ವಭಾವದಲ್ಲಿ, ಮೂಲ ದೃಷ್ಟಿಕೋನದಲ್ಲಿ ಅಂತರವಿದೆ. ಅವನನ್ನು ನಾನು ತಿದ್ದಬೇಕು. ಅಥವಾ ಅವನ ದಾರಿಯನ್ನು ಪೂರ್ಣವಾಗಿ ಅನುಮೋದಿಸಬೇಕು. ದಿನಾ ಬೆಳಗ್ಗೆ ಎದ್ದು ಗಂಡನನ್ನು ತಿದ್ದುವುದಕ್ಕೆ ಹೊರಟರೆ ದಾಂಪತ್ಯದಲ್ಲಿ ಸರಸವಿರುವುದಿಲ್ಲ – ಎಂಬ ವಿಚಾರ ಹುಟ್ಟಿತು.

ಅವನನ್ನು ಮದುವೆಯಾಗದೆ ಹಿಂದೆ ಉಳಿದರೆ ತಾನು ತನ್ನ ವಿಚಾರದಲ್ಲಿ, ಶ್ರದ್ಧೆಯಲ್ಲಿ ಸೋತಂತೆ ಆಗುತ್ತದಲ್ಲ ಎಂಬ ಒಂದು ಹಟವೂ ಒಳಗೇ ಬೆಳೆಯುತ್ತಿತ್ತು.

ಆದರೆ ಈ ಬೆಳಗ್ಗೆ ಮೋಹನದಾಸ ಬಂದು ಆಡಿಹೋದ ಮಾತುಗಳಿಂದ ಅವಳ ಈ ಹಟವು ಮೆದುವಾಯಿತು. ಮುಂದೆ, ಮೇಲಿನ ಇತರ ಜಾತಿಗಳನ್ನು ತುಳಿಯುವುದೇ ಅವನ, ಅವನ ಕ್ರಾಂತಿಯ ಗುಂಪಿನ ಧ್ಯೇಯವಂತೆ. ಇತರ ಜಾತಿಯ ಗಂಡಸರು ಅವರ ಹೊಲದಲ್ಲಿ ಗೇಯುವುದು, ಅವರು ಇತರ ಜಾತಿಯ ಹೆಂಗಸರನ್ನು....ಅವನು ನನ್ನನ್ನು ಮದುವೆಯಾಗಬಯಸುವುದೂ ಈ ತಾಮಸ ಪ್ರತೀಕಾರದಿಂದ ಪ್ರೇರಿತನಾಗಿಯೇ? – ಎಂಬ ವಿಚಾರ ಬಂದು ಅವಳ ಮೈ ಬೆವರಿತು. ಹೊಲತಿಯರಿರುವುದೇ ಮಜಾಮಾಡುವುದಕ್ಕೆ ಎಂದು ಶ್ರೀನಿವಾಸ ಅಮಲಿನಲ್ಲಿ ಮೀರಳ ಕೈಲಿ ಆಡಿದನಂತೆ. ಅದು ಅವನ ಒಳಮನಸ್ಸಿನ ನಿಜದ ಮಾತು ಎಂದು ಮೀರಾ ಹೇಳಿದಳು. ನಿಜವೇ ಇರಬಹುದು. ಆದರೆ ಮೋಹನದಾಸನದೂ ಇದೇ ರೀತಿಯ ಮನಸ್ಸಾಯಿತಲ್ಲ! ಶ್ರೀನಿವಾಸ, ಮೋಹನದಾಸ, ಇಬ್ಬರೂ ಒಂದೇ ಲೋಹದ ಪ್ರತಿಮೆಗಳೇ! – ಎಂಬ ಆಲೋಚನೆ ಬಂದಾಗ ಅವಳ ಅಂತರಂಗದಲ್ಲಿ ಕಲಮಲವೆದ್ದಿತು.

ರಾತ್ರಿಯಾದರೂ ಅವಳಿಗೆ ಇದೇ ಯೋಚನೆ. ನಡುರಾತ್ರಿಯ ವೇಳೆಗೆ ಮನಸ್ಸು ಒಂದು ತೀರ್ಮಾನಕ್ಕೆ ಬಂತು: ಮೋಹನದಾಸನನ್ನು – ಅವನ ಧ್ಯೇಯ ದೃಷ್ಟಿಕೋನಗಳನ್ನು – ತಿದ್ದಲು ತಾನು ಪ್ರಯತ್ನಿಸಬೇಕು. ಆದರೆ ಅವನನ್ನು ಮದುವೆಯಾಗಬಾರದು.

ಈ ವಿಷಯದಲ್ಲಿ ಒಂದು ನೆಲೆ ಮುಟ್ಟಿದ ಮೇಲೆ ಮನಸ್ಸು, ಶ್ರೀನಿವಾಸನನ್ನು ಕುರಿತು ಚಿಂತಿಸಲು ಮೊದಲುಮಾಡಿತು. ಮೀರಳಿಗೆ ಹೀಗೆ ಮಾಡಿದ್ದಕ್ಕೆ ಅವನಿಗೆ ಹೀಗಾಗುವುದೇ ನ್ಯಾಯವೆಂದು ಸ್ವಲ್ಪ ಹೊತ್ತು ಮನಸ್ಸಿಗೆ ನೆಮ್ಮದಿ ಎನಿಸಿತು.

ಆದರೆ ಬುದ್ಧಿ ಕೆಟ್ಟಿರುವ ಮನುಷ್ಯನ ವಿಷಯದಲ್ಲಿ ಹೀಗೆ ಯೋಚಿಸುವುದು ಹೀನ ತನವೆಂದು ಬುದ್ಧಿಯು ಛೇಡಿಸಿತು. ಹೀಗೆ ಯೋಚಿಸಿದರೆ ತನಗೂ, ಹುಚ್ಚು ಹಿಡಿದಿದ್ದಾಗ ತನ್ನ ಅಪ್ಪನನ್ನು ಹಿಡಿದು ಛೇಡಿಸಿ ಅವರ ಆತ್ಮಹತ್ಯೆಗೆ ಕಾರಣನಾದ ಮೋಹನದಾಸನಿಗೂ, ವ್ಯತ್ಯಾಸವಿಲ್ಲವೆನಿಸಿತು. ತಾನು ಬೆಳಗ್ಗೆ ಬೆಂಗಳೂರಿಗೆ ಹೋಗಿ ಶ್ರೀನಿವಾಸನನ್ನು ನೋಡಲೇ ಎಂಬ ಯೋಚನೆ ಬಂತು. ಆದರೆ ತನ್ನನ್ನು ನೋಡಿ ಅವನಿಗೆ ಸಮಾಧಾನವಾಗುತ್ತದೆಯೇ, ತನ್ನ ಮಾತಿನಿಂದ ಮನಸ್ಸಿನ ಉದ್ವಿಗ್ನತೆ ಕಡಿಮೆಯಾಗುತ್ತದೆಯೇ ಎಂಬ ಬಗೆಗೆ ನಂಬಿಕೆ ಹುಟ್ಟಲಿಲ್ಲ. ಬೆಂಗಳೂರಿಗೆ ಹೋದರೆ ಅವನ ಅಪ್ಪ ಇರುತ್ತಾರೆ. ಒಳವಿಷಯವನ್ನು ಮುಚ್ಚಿಹಾಕಿ, 'ನೋಡಮ್ಮ, ನಿನ್ನ ಮೇಲಿನ ಮನಸ್ಸಿನಿಂದಲೇ ಅವನಿಗೆ ಹಿಂಗಾಗ್ಯದೆ. ನೀನು ಮದುವೆಗೆ ಒಪ್ಪು' ಎಂದು ಕೇಳಬಹುದು ಎಂಬ ಅನುಮಾನವೂ ಬಂದಿತು. ಈಗ ಹೋಗಿ ತಾನು ಏನೂ ಮಾಡುವಂತಿಲ್ಲ. ಬೆಂಗಳೂರಿನಲ್ಲೇ ಮನೋರೋಗದ ಆಸ್ಪತ್ರೆ ಇದೆ. ಅವರು ಹೇಗೂ ಮಂತ್ರಿಗಳು. ಆಸ್ಪತ್ರೆಯಲ್ಲಿ ಬೇಕಾದ ಡಾಕ್ಟರರಿಂದ ಚಿಕಿತ್ಸೆ ಮಾಡಿಸಬಲ್ಲರು. ಇಷ್ಟರಲ್ಲಿ ಮಾಡಿಸುತ್ತಲೂ ಇದ್ದಾರೆ – ಎಂದು ಸಮಾಧಾನ ತಂದುಕೊಂಡಳು. ಆದರೆ ಅವನಿಗೆ ಹೀಗಾದುದರಿಂದ, ಅವಳ ಮನಸಿನಲ್ಲಿ ಮಡುಗಟ್ಟಿದ್ದ ವ್ಯಸನ ಮಾತ್ರ ಕಡಿಮೆಯಾಗಲಿಲ್ಲ.

೨

ನವರಾತ್ರಿಯ ಪಾಡ್ಯದ ದಿನ ಊರಿನ ಹೊಲೆಯ ಮಾದಿಗರೆಲ್ಲ ದೇವಸ್ಥಾನಕ್ಕೆ ನುಗ್ಗುತ್ತಾರೆಂಬ ಸುದ್ದಿಯನ್ನು ತಿಳಿದು ಊರಿಗೆ ಊರೇ ಆತಂಕಗೊಂಡಿತು. ಅವರು ದೇವಸ್ಥಾನಕ್ಕೆ ಬರುತ್ತಿರುವುದು ಇದೇ ಮೊದಲಲ್ಲ. ಈಗ ಹನ್ನೆರಡು ವರ್ಷದ ಮೊದಲು ಒಂದು ಸಲ ಬಂದಿದ್ದರು. ಈಗ ಮಂತ್ರಿಗಳಾಗಿರುವ ಮೇಲಗಿರಿ ಗೌಡರೇ ಮುಂದೆ ನಿಂತು, ಬೆಟ್ಟಯ್ಯನನ್ನು ಒಳಗೆ ಕರೆದುಕೊಂಡು ಹೋಗಿದ್ದರು. ಅವರೆಲ್ಲ ಒಳಗೆ ಬಂದು ಕೈಗೆ ತೀರ್ಥ ಬಿಡಿಸಿಕೊಂಡು ಹೋದ ಸ್ವಲ್ಪ ಹೊತ್ತಿಗೆ ಊರಿಗೆ ಊರೇ ಸೇರಿ ಇಡೀ ಗುಡಿಯನ್ನು ಸಗಣಿ, ಗಂಜಲದ ನೀರಿನಲ್ಲಿ ತೊಳೆದು ದೇವರಿಗೆ ಪುಣ್ಯಾಃವಾಚನ, ಮತ್ತೆ ಅಭಿಷೇಕ ಮಂಗಳಾರತಿಗಳನ್ನು ಮಾಡಿ ಸೂತಕವನ್ನು ಕಳೆದಿತ್ತು. ಹೊಲೆಯ ಮಾದಿಗರು ಮತ್ತೆ ಗುಡಿಗೆ ಬರುವ ಮಾತನಾಡಿರಲಿಲ್ಲ. ಆದರೆ ಈಗ ಅವರ ಸಂಚು ಬೇರೆಯೇ ಇದೆಯಂತೆ. ಇನ್ನು ಮೇಲೆ ಅವರ ಕೇರಿಯವರೆಲ್ಲ ಮಾತನಾಡಿಕೊಂಡು ಪ್ರತಿದಿನ ಇಬ್ಬಿಬ್ಬರು ಹಣ್ಣುಕಾಯಿ ಮಾಡಿಸುವುದಕ್ಕೆ ಬರುತ್ತಾರಂತೆ. ದೇವರಿಗೆ ದಿನಾ ಪುಣ್ಯಾಃವಾಚನ ಮಾಡುಕ್ಕೆ

ಆಗುತ್ತೆಯೆ? ಇಡೀ ಗುಡಿಯನ್ನು ಶಿಖರದಿಂದ ಪೌಳಿನೆಲದ ತನಕ ದಿನಾ ತೊಳೆಯುಕ್ಕೆ ಸಾಧ್ಯವೇ? ಈ ಚಾಂಡಾಲರನ್ನು ಮೊದಲ ದಿನವೇ ತಡೆಯಬೇಕು – ಎಂದು ಅನೇಕರು ಮಾತನಾಡಿಕೊಂಡು ಯಜಮಾನ ದೊಡ್ಡ ಪಟೇಲರ ಹತ್ತಿರ ಹೋದರು.

ಮೊಮ್ಮಗನು ಮಾದಿಗಿತ್ತಿಯನ್ನು ಮದುವೆಯಾಗುವ ಹಟ ಹಿಡಿದಿರುವುದನ್ನು ಕೇಳಿದಾಗಿನಿಂದ ದೊಡ್ಡ ಪಟೇಲರು ಗಾಬರಿಗೊಂಡಿದ್ದರು. ತುಮಕೂರಿಗೆ ಹೋಗಿ ಅವನಿಗೆ ಬೆತ್ತದಿಂದ ಬಿಡುವ ಯೋಚನೆಯೂ ಅವರಿಗೆ ಬಂದಿತ್ತು. ಆದರೆ ಅದರಿಂದ ಅವನ ಹಟ ಇನ್ನೂ ಬಲಿಯುತ್ತದೆ, ಅದು ಬೇಡ ಎಂದು ಮಗ ದಿವಾನನೇ ಹೇಳಿದ್ದರಿಂದ ಅವರು ಸುಮ್ಮನಾಗಿದ್ದರು. ಈಗ ಆ ಹುಡುಗಿಯೇ ಕೆರೆಗೆ ಬಿದ್ದು ಸತ್ತಳು. ಗಂಡು ಕುದುರೇನ ಮದುವೆ ಮಾಡ್ಕಳಾಕ್ ಹ್ವರಟ ಹೆಣ್ಣು ನಾಯಿಗೆ ಇದೇ ಮೋಕ್ಷ ಎಂದುಕೊಂಡು ಅವರು ಸಮಾಧಾನಪಟ್ಟುಕೊಂಡರು. ಮೊಮ್ಮಗನಿಗೆ ಇತ್ತೀಚಿಗೆ ಆಗಿರುವ ಸಂಗತಿ ಅವರಿಗೆ ತಿಳಿಯದು. ಊರೆಲ್ಲ ಒಟ್ಟು ಸೇರಿ ಗುಡಿಯ ಹತ್ತಿರ ಹೋಗಿ, ಒಳಗೆ ಬರುವ ಹೊಲೆಯ ಮಾದಿಗರನ್ನೆಲ್ಲ ಚಚ್ಚಿ ಹಾಕಿಬಿಡಬೇಕೆಂದು, ಅವರ ಪಾಳೇಗಾರ ರಕ್ತ ನುಡಿಸಿತು. ಸೇರಿದ್ದ ಜನ ಸಂತೋಷದಿಂದ ಉತ್ಸಾಹಗೊಂಡಿತು.

ಆದರೆ ಹತ್ತು ನಿಮಿಷ ತಡವಾಗಿ ಬಂದ ವೆಂಕಟೇಶ, 'ಹಾಗೆ ಮಾಡುಕ್ಕಾಗುಲ್ಲ. ದಿನಾ ಪೇಪರಲ್ಲೇ ಬರ್ತಿದೆ. ಪೋಲೀಸಿನೋರನ್ನ ಕಳಿಸಬೇಕು ಅಂತ ಚೀಫ್ ಮಿನಿಷ್ಟರಿಂದಲೇ ಸೂಚನೆ ಬಂದಿದೆಯಂತೆ' ಎಂದ.

'ಯಾವನ್ಲಾ ಅವನು ಚೀಫ್ ಮಿನಿಷ್ಟರು ಅಂದ್ರೆ? ನನ್ನ ಮಗ ದಿವಾನನಿಗಿಂತ ವ್ಯಾಲಿನೋರಾ?' – ಎಂದು ದೊಡ್ಡ ಯಜಮಾನರು ರೇಗಿ ಕೇಳಿದರು.

'ಅವರೂ ಹೊಡೆದಾಟಕ್ಕೆ ನಿಂತು ಖೂನಿ ಗೀನಿ ಆದ್ರೆ ರಿಸರ್ವ್ ಪೋಲೀಸಿನೋರು ಬತ್ತಾರೆ. ಊರಿಗೆ ಊರನ್ನೇ ಓಲು ಎತ್ತಾರೆ. ಅದೆಲ್ಲ ಬ್ಯಾಡ. ಉಪಾಯದಿಂದ ಕೆಲಸ ಮಾಡಬೇಕು.'

ವೆಂಕಟೇಶನ ವಿವೇಕ ಬಹು ಜನಕ್ಕೆ ಹಿಡಿಯಿತು. 'ಅದೇ ನ್ಯಾಯ. ಏನು ಮಾಡ್ಬೇಕು ನೀವೇ ಹೇಳ್ರಿ ವೆಂಕಟೇಶಯ್ನೋರೇ' – ಎಂದರು.

'ಯೋಚನೆ ಮಾಡಿ ಹೇಳ್ತೀನಿ. ಅಂದ್ರೆ ಕೆಲಸ ಗ್ಯಾರಂಟಿ ಆಗುತ್ತೆ ಅಂತ ಅಲ್ಲ. ಬೆಟ್ಟಯ್ಯಾನ ಮಗ ಗುರುಘಾತಕ ಸೂಳೆಮಗ. ಆದರೂ ಮಾಡೂ ಪ್ರಯತ್ನ ನಮ್ಮದು' – ಎಂದು ವೆಂಕಟೇಶ ಆಶ್ವಾಸನೆ ಇತ್ತ.

ಸಭೆ ಚದುರಿತು.

ಅದೇ ದಿನ ಸಂಜೆ ಸಬ್ ಇನ್‌ಸ್ಪೆಕ್ಟರು ದೊಡ್ಡ ಯಜಮಾನರ ಮನೆಗೆ ಬಂದು

ಕೈಮುಗಿದು ಹೇಳಿದರು: 'ಸರ್ಕಾರದಿಂದ ನೇರವಾಗಿ ಸರ್ಕ್ಯುಲರ್ ಬಂದಿದೆ. ತಾಲ್ಲೂಕಿಗೇ ಮುಖ್ಯ ದೇವಸ್ಥಾನ ಇದು. ಸರ್ಕಲ್ ಇನ್ಸ್‌ಪೆಕ್ಟರೂ ಬರಬಹುದು. ಗಲಾಟೆ ಗಿಲಾಟೆಯಾದರೆ ನಾವು ಡ್ಯೂಟಿ ಮಾಡಬೇಕಾಗುತ್ತೆ. ನೀವು ಅವರ ಕೈಲಿ ವಾದ ವಿವಾದ ಬೇಕಾದ್ದು ಮಾಡಿ ವಾಪಸು ಕಳಿಸಿ. ನಮ್ಮದೇನೂ ಆಕ್ಷೇಪ ವಿಲ್ಲ. ನಮ್ಮ ಗುಡಿ ಪವಿತ್ರವಾಗಿ ಉಳಿಯೂದು ನಮಗೂ ಬೇಕು.'

ಊರಿನಲ್ಲಿ ಇಂಥ ಮುಖ್ಯವಾದದ್ದು ನಡೀತಿರುವಾಗ ಇವನ್ಯಾಕೆ ಬರದೆ ಬೆಂಗಳೂರಾಗೆ ಇದಾನೆ? ಹಿಂಗಲ್ಲ ಹಿಂಗೆ ಮಾಡಿ ಅಂತ ಬಂದು ಹೇಳಬಾರದೆ? ಅಥವಾ ಆ ಬೆಟ್ಟೆ ಸೂಳೆಮಗಂಗೆ ಹೇಳಿ ತಪ್ಪಿಸುಕ್ಕೆ ಆಗುಲ್ವೆ? ದಿವಾನನ ಮಾತು ಅಂದ್ರೆ ಆ ಮಾದಿಗ ಕೇಳಲೇಬೇಕು – ಎಂದು ಯಜಮಾನರು ಮಗನ ಮೇಲೆ ಸಿಡಿಮಿಡಿಗೊಂಡರು.

ಪಾಡ್ಯಮಿಯ ಬೆಳಗ್ಗೆ ಏಳು ಗಂಟೆಯ ಹೊತ್ತಿಗೇ ದಫೇದಾರರು, ಹತ್ತು ಜನ ಕಾನಿಸ್ಟೇಬಲುಗಳು ಗುಡಿಯ ದಿಬ್ಬದ ಹತ್ತಿರ ಬಂದು ಕುಳಿತರು. ಎಂಟು ಗಂಟೆಯ ಹೊತ್ತಿಗೆ ಊರಿನವರೆಲ್ಲ ಬರಲು ಪ್ರಾರಂಭಿಸಿದರು. ಗುಡಿಯ ವಾಸ್ತವ ಅರ್ಚಕ ನರಸಿಂಹ ಜೋಯಿಸರು ಬಂದು ಬಾಗಿಲು ತೆಗೆದು ಒಳಗೆ ಪೂಜೆಗೆ ನಿಂತರು. ಸ್ಮಾರ್ತರ ವೆಂಕಟೇಶ, ಶ್ರೀವೈಷ್ಣವರ ಕುಪ್ಪಣ್ಣಯ್ಯಂಗಾರರು, ಮಾಧ್ವರ ವೆಂಕಣ್ಣಾಚಾರರುಗಳ ನೇತೃತ್ವದಲ್ಲಿ ತ್ರಿಮತ ಬ್ರಾಹ್ಮಣ ಗಂಡಸರೆಲ್ಲ ಬಂದರು. ಮಲ್ಲನಾಯಕನ ಮುಂದಾಳುತ್ವದಲ್ಲಿ ವಾಲ್ಮೀಕಿ ಬ್ರಾಹ್ಮಣರು, ಈರಾಚಾರ್ಯರ ಆಚಾರ್ಯತ್ವದಲ್ಲಿ ವಿಶ್ವಕರ್ಮ ಬ್ರಾಹ್ಮಣರು, ತೋಟಪ್ಪಾರಾಧ್ಯರ ಮುಂದಾಳುತನದಲ್ಲಿ ಲಿಂಗಾಯಿತರು, ಸೌಪ್ರೇಗೌಡರ ನಾಯಕತ್ವದಲ್ಲಿ ಕಾಳಿದಾಸರು, ಮೇಲುಸಕ್ಕರೆಯವರು ಸಾತಾಸಿಗಳು ಮುಗ್ಗದವರು ಮೊದಲಾಗಿ ಊರಿನ ಸಮಸ್ತ ಮತದ ಗಂಡಸರೂ ಬಂದು ಸೇರಿದರು.

ಇಷ್ಟು ಜನರನ್ನು ಕಂಡ ಹತ್ತು ಮಂದಿ ಕಾನಿಸ್ಟೇಬಲರಿಗೂ ದಫೇದಾರರಿಗೂ ದಿಗಿಲಾಯಿತು. ಇವರನ್ನು ತಡೆಯುವುದು ತಮ್ಮಿಂದ ಸಾಧ್ಯವೇ ಎಂದು ಸಬ್ ಇನ್ಸ್‌ಪೆಕ್ಟರು ಒಳಗೇ ಆತಂಕಗೊಂಡರೂ ಹೊರಗೆ ಮಾತ್ರ ಧೈರ್ಯ ತೋರಿಸುತ್ತಾ, 'ಯಾರೂ ಗಲಾಟೆಗೆ ಹೋಗಕೂಡದು. ಸರ್ಕಾರದ ಹುಕುಂ' ಎಂದು ಇವರನ್ನೆಲ್ಲ ಒಂದು ಕಡೆಗೆ ನಿಲ್ಲಿಸುತ್ತಿದ್ದರು. ದಿಬ್ಬವಾಗಿ ಏರಿದ ಆ ಜಾಗದಲ್ಲಿ ಯಾರು ಯಾರು ಎಲ್ಲಿ ಎಲ್ಲಿ ನಿಲ್ಲಬೇಕೆಂದು ಅವರವರಲ್ಲೇ ಸ್ವಲ್ಪ ವಾಗ್ವಾದವಾಯಿತು. ಮೊದಲು ದೊಡ್ಡ ಯಜಮಾನರು, ಅವರ ಪಕ್ಕದಲ್ಲಿ ವೆಂಕಟೇಶ, ಅನಂತರ ಬ್ರಾಹ್ಮಣರು, ಅನಂತರ ಲಿಂಗಾಯಿತರು ಎಂದು ಯಾರೊ ಹೇಳಿದ ತಕ್ಷಣ ಲಿಂಗಾಯಿತ ಮುಖಂಡ ತೋಟಪ್ಪಾರಾಧ್ಯರು, 'ನಾವು ಬ್ರಾಹ್ಮಣರಿಗಿಂತ ಕಮ್ಮಿಯಲ್ಲ. ನಾವೇ ಮೊದಲು

ನಿಲ್ಲಬೇಕು. ಇಲ್ಲದಿದ್ದರೆ ವಾಪಸ್ ಹೋಗ್ತೀವಿ. ಇದು ಹ್ಯಾಗೂ ವಿಷ್ಣುದೇವರ ಗುಡಿ' ಎಂದು ವಿರೋಧಿಸಿದರು. ಪ್ರತಿಯೊಬ್ಬರೂ ತಮ್ಮ ತಮ್ಮ ಮತದ ಮೇಲ್ಮೆಯ ಬಗೆಗೆ ವಾದಮಾಡಿದರು. ಕೊನೆಗೆ ವೆಂಕಟೇಶ ಪ್ರವೇಶಿಸಿ, 'ನಮ್ಮನಮ್ಮಲ್ಲಿ ಈಗ ಭಿನ್ನಾಭಿಪ್ರಾಯವಿರಬಾರದು. ಐಕ್ಯಮತ್ಯವೇ ಜಯ, ಅನೈಕಮತ್ಯವೇ ಅಪಜಯ' ಎಂದು ಹೇಳಿದುದರಿಂದ ವಾದವು ಜಗಳವಾಗಲಿಲ್ಲ. ಯಾರು ಎಲ್ಲಿ ಬೇಕಾದರೂ ನಿಲ್ಲಬಹುದೆಂದು ತೀರ್ಮಾನವಾಯಿತು.

ಅಲ್ಲಿಗೆ ಬರಲು ಸತ್ಯ ತಪ್ಪಲಿಲ್ಲ. ಒಂಬತ್ತೂವರೆ ಗಂಟೆಯ ಹೊತ್ತಿಗೇ ದೇವಸ್ಥಾನದ ದಿಬ್ಬದ ಹತ್ತಿರಕ್ಕೆ ಬಂದಳು. ಊರಿನ ಗಂಡಸರೆಲ್ಲ ಸೇರಿದ್ದಾರೆ. ಆದರೆ ಯಾರೂ ಹೆಂಗಸರು ಬಂದಿಲ್ಲ. ಹೊಡೆದಾಟವಾಗಬಹುದೆಂದು ಹೆಂಗಸರನ್ನು ನಿಷೇಧಿಸಿರಬಹುದು ಎಂದುಕೊಂಡಳು. ಆದರೆ ಒಬ್ಬರೂ ಹೆಂಗಸರಿಲ್ಲದಿರುವಾಗ ತಾನೊಬ್ಬಳೇ ಹೋದರೆ ಎಲ್ಲರೂ ತನ್ನನ್ನೇ ನೋಡುತ್ತಾರೆಂಬ ಸಂಕೋಚ ವಾಯಿತು. ಇದೇ ಜಾಗದಲ್ಲಿ ಹಿಂದೆ ಒಂದು ದಿನ ಸಭೆ ನಡೆದು ತಾನು ಮಾತ ನಾಡಲು ಎದ್ದು ನಿಂತು ತಲೆ ತಿರುಗಿ ಬಿದ್ದಿದ್ದ ನೆನಪಾಯಿತು. ವಾಪಸು ಹೋಗಿ ಬಿಡಲೇ ಎಂಬ ಯೋಚನೆ ಬಂತು. ಆದರೆ ಇವತ್ತಿನ ಘಟನೆಯನ್ನು ನೋಡಲೇ ಬೇಕೆಂದು ನಿಶ್ಚಯಿಸಿ, ಹೋಗಿ ಪೌಳಿಯ ಒಂದು ಮೂಲೆಯಲ್ಲಿ ನಿಂತಳು. ಇವಳನ್ನು ಕಂಡ ಕೆಲವರು ಈವಮ್ಮ ಥೇಟ್ ಗಂಡಸೇ ಎಂದುಕೊಂಡರು. ಬ್ರಾಹ್ಮಣ ಮುಖ್ಯರೆಲ್ಲ ಅವಳನ್ನೇ ನೋಡುತ್ತಾ ತಮ್ಮತಮ್ಮಲ್ಲೇ ಮಾತನಾಡಿ ಕೊಳ್ಳುತ್ತಿದ್ದರು. ಆದರೆ ಅವಳು ಆ ಕಡೆಗೆ ಗಮನ ಕೊಡಲಿಲ್ಲ.

ಸ್ವಲ್ಪ ಹೊತ್ತಿನಲ್ಲಿ ಊರಿನ ಕಡೆಯಿಂದ ದೊಡ್ಡ ಪಟೇಲರು ಬರುತ್ತಿರುವುದು ಕಾಣಿಸಿತು. ಬಿಳಿಯ ರೇಶಿಮೆ ಪಂಚೆ ಉಟ್ಟು, ಅಂಗಿ ಮತ್ತು ಬಿಳಿಯ ಕೋಟಿನ ಮೇಲೆ ಹಳದಿ ಬಣ್ಣದ ವಲ್ಲಿಯನ್ನು ಮಡಿಸಿ ಸುತ್ತುಹಾಕಿ ಹೊದೆದಿದ್ದಾರೆ. ಮುಖದ ಮೇಲಿನ ದಪ್ಪ ಬಿಳಿಯ ಪಾಳೇಗಾರರ ಮೀಸೆ ಪ್ರಧಾನವಾಗಿ ಕಾಣು ತ್ತಿದೆ. ರಾಜಠೀವಿಯಿಂದ ಕಾಣುವಂತಹ ಜರಿಯ ಪೇಟ. ಕಾಲಿಗೆ ಚಡಾವು ಧರಿಸಿ ಗಂಭೀರವಾಗಿ ನಡೆಯುತ್ತಿದ್ದ ಅವರ ತಲೆಯ ಮೇಲೆ, ಹಿಂದಿನಿಂದ ಆಳು ಛತ್ರಿಯನ್ನು ಎತ್ತಿ ಹಿಡಿದಿದ್ದಾನೆ. ಸುತ್ತ ಅಂಗರಕ್ಷಕರಂತೆ ಕಾಣುವ ನಾಲ್ಕು ಜನ ಗಂಡಾಳುಗಳು. ಅವರಲ್ಲಿ ಒಬ್ಬ ಸುತ್ತಿದ ಕೃಷ್ಣಾಜಿನವನ್ನು ಹಿಡಿದು ತರುತ್ತಿದ್ದಾನೆ.

'ಆಹಾ. ಸೇನಾಧಿಪತಿ ಭೀಷ್ಮಪಿತಾಮಹರ ಹಾಗೆ ಕಾಣ್ತಾರೆ ಯಜಮಾನರು' – ಕುಪ್ಪಣ್ಣಯ್ಯಂಗಾರರು ಉದ್ಗಾರ ತೆಗೆದರು. ಸಭೆ ಹರ್ಷಗೊಂಡಿತು. ವೆಂಕಟೇಶ ಮಾತ್ರ, 'ಅಯ್ಯಂಗಾರ‍್ರೇ, ಅನುಂಗಳ ಮಡೀಬ್ಯಾಡ್ರೀ' ಎಂದ. 'ಅಲ್ಲ, ಮಾತಿಗೆ ಹಾಗಂದೆ' – ಎಂದು ಅವರು ಅಲ್ಲಿಗೆ ನುಣುಚಿಕೊಂಡರು. ಮೆಟ್ಟಲಿನ

ಹತ್ತಿರ ತಮ್ಮ ಛಡಾವನ್ನು ಬಿಟ್ಟು ಯಜಮಾನರು ಮೇಲೆ ಬಂದು ಬಾಗಿಲಿನ ಮುಂದಿನ ಕಲ್ಲಿನ ಮೇಲೆ ನಿಂತರು.

ಸಬ್ ಇನ್‌ಸ್ಪೆಕ್ಟರು ಹತ್ತಿರ ಬಂದು, 'ಏನೂ ಗಲಾಟೆಯಾಗದ ರೀತಿ ನಡೆಸೂದು ನಿಮ್ಮ ಜವಾಬ್ದಾರಿ ಯಜಮಾನರೇ. ನೀವು ದೊಡ್ಡೋರು' ಎಂದರು.

ಅಷ್ಟರಲ್ಲಿ ಏರಿಯ ಮೇಲೆ ಶಬ್ದ ಕೇಳಿಸಿತು. ಜನವೆಲ್ಲ ಆ ಕಡೆಗೆ ತಿರುಗಿ ನೋಡಿತು. ತೆಂಗಿನ ಮರಗಳ ಮರೆಯಲ್ಲಿ ತಾಳದ ಶಬ್ದ ಮಾಡಿಕೊಂಡು ಕೆಲವು ಹುಡುಗರು, 'ರಘುಪತಿ ರಾಘವ ರಾಜಾರಾಮ, ಪತಿತ ಪಾವನ ಸೀತಾರಾಮ' ಎಂದು ಹೇಳಿಕೊಳ್ಳುವಂತೆ ಕೇಳಿಸಿತು. ಸ್ವಲ್ಪ ಹೊತ್ತಿನಲ್ಲಿ ಅದೊಂದು ಮೆರವಣಿಗೆಯೇ ಎಂಬುದು ಗೊತ್ತಾಯಿತು. ತೆಂಗಿನ ತೋಟದ ಮರೆಯನ್ನು ಕಳೆದು ಅದು ಏರಿಯ ಮೇಲೆ ಬಂತು. ಜನರಿಗೆ ಗುರುತು ಸಿಕ್ಕಿತು. ಮುಂಭಾಗದಲ್ಲಿ ಮೋಹನದಾಸ. ಅವನ ಹಿಂದೆ ಹತ್ತು ಹದಿನೈದು ಯುವಕರು. ಎಲ್ಲರೂ ಲುಂಗಿ ಪಂಚೆ ಉಟ್ಟು ಬಿಳಿಯ ಶರಟು ಹಾಕಿದ್ದಾರೆ. ಮುಂದಿನ ಹುಡುಗನ ಕೈಲಿ ಒಂದು ದೊಡ್ಡ ಫೋಟೊ ಇದೆ. ಇನ್ನೊಬ್ಬ, ಒಂದು ಉರಿಯುವ ದೀಪದ ಕಂಬ ಹಿಡಿದಿದ್ದಾನೆ. ಅವರ ಹಿಂದೆ ಹರಿಜನರ ಗಂಡಸರು. ಎಲ್ಲರೂ ಪಂಚೆ ಉಟ್ಟಿದ್ದಾರೆ. ಅವರ ಹಿಂದೆ ಹೆಂಗಸರು. ಮೆರವಣಿಗೆ ಏರಿಯ ಮಧ್ಯದಲ್ಲಿ ನಿಂತಿತು. ಎಲ್ಲರೂ ಕೆರೆಯ ನೀರಿನ ಕಡೆಗೆ ತಿರುಗಿ ಬಾಗಿ ಕೈಮುಗಿದರು.

'ಅದೇ ಜಾಗದಲ್ಲೇ ಅಲ್ವಾ ಬೆಟ್ಟಯ್ಯನ ಹುಡುಗಿ ನೀರಿಗೆ ಬಿದ್ದುದ್ದು?' – ಎಂದು ಒಬ್ಬರು ಇನ್ನೊಬ್ಬರನ್ನು ಕೇಳಿದರು.

'ಹೂಂ. ಹ್ವಾದ ವರ್ಷ ಪೂಜಾರಿ ವೆಂಕಟರಮಣಯ್ಯಾರೂ ಅಲ್ಲೇ ಮುಳಿಕ್ಕಂಡದ್ದು. ಕ್ಯಟ್ಟ ಜಾಗ. ಅಲ್ಲೇನ್ ಮಾಡ್ತಾರೋ ಅವರು?' – ಎಂದು ಇನ್ನೊಬ್ಬರು ಹೇಳಿದರು.

ಅನಂತರ ಮೆರವಣಿಗೆ ಮುಂದೆ ನಡೆದು ಏರಿಯನ್ನು ಇಳಿಯಲು ಶುರು ಮಾಡಿತು. ಉದ್ದನೆಯ ಹಾವಿನಂತೆ ಅದು ಇಳಿಯುತ್ತಿತ್ತು. ಅದರ ಮೂತಿಯಂತೆ ಮೋಹನದಾಸ ಕಾಣಿಸುತ್ತಿದ್ದ. 'ರಘುಪತಿ ರಾಘವ....' ಹೇಳಿಕೊಂಡು ಅವರು ಗುಡಿಯ ದಿಬ್ಬ ಏರುವಾಗ ಇನ್‌ಸ್ಪೆಕ್ಟರು, 'ಶಾಂತಿ, ಶಾಂತಿ. ಎಲ್ಲಿ, ಮೆಟ್ಟಿಲ ಹತ್ತಿರ ಜಾಗ ಬಿಡಿ' ಎನ್ನುತ್ತಿದ್ದರು. ಪೌಳಿಯ ಮೂಲೆಯಲ್ಲಿದ್ದ ಸತ್ಯ ಮೆಟ್ಟಿಂಗಾಲು ಇಕ್ಕಿ ಸೂಕ್ಷ್ಮವಾಗಿ ನೋಡುತ್ತಿದ್ದಳು. ಮುಂಭಾಗದಲ್ಲಿದ್ದ ಹುಡುಗನಲ್ಲಿ ದೀಪ ಹಿಡಿದಿದ್ದವನು ಹೊನ್ನೇಶ. ಉಳಿದವರೆಲ್ಲ ಸ್ಕೂಲು ಅಥವಾ ಕಾಲೇಜಿನಲ್ಲಿ ಓದುತ್ತಿದ್ದವರಿರಬೇಕು. ಎಲ್ಲರೂ ಹಣೆಯ ಮೇಲೆ ಒಂದೊಂದು ಕೆಂಪು ನಾಮ ಹಾಕಿದ್ದರು. ಹುಡುಗರೆಲ್ಲರ ಮುಖದ ಮೇಲೂ ತಿರಸ್ಕಾರ ತುಂಬಿ

ತುಳುಕುತ್ತಿತ್ತು. ಅದರೊಡನೆ ಏನೋ ಹೊಸತನ್ನು ಸಾಧಿಸುವ ಧೈರ್ಯ ಉತ್ಸಾಹಗಳೂ ಇದ್ದುವು. ಹೊನ್ನೇಶನ ಮುಖ, ಹಾಯಲು ಬರುವ ಹೋರಿ ಕರುವಿನಂತೆ ಗಂಟುಕಟ್ಟಿತ್ತು. ಮೋಹನದಾಸ ಯಾರನ್ನೂ ಲೆಕ್ಕಿಸದೆ ದರ್ಪದಿಂದ ಮೆರವಣಿಗೆಯ ಮುಂಭಾಗದಲ್ಲಿ ಮೆಟ್ಟಿಲು ಹತ್ತುತ್ತಿದ್ದ. ಸತ್ಯ ಮೆಟ್ಟಿಂಗಾಲು ಇಕ್ಕಿ ಹಿಂಭಾಗದಲ್ಲಿ ನೋಡಿದಳು. ಗಂಡಸರ ಸಾಲಿನ ಕೊನೆಗೆ ಹೆಂಗಸರು. ಹೆಂಗಸರಲ್ಲಿ ಬೆಟ್ಟಯ್ಯನವರ ಹೆಂಡತಿ ಮತ್ತು ಮಾತಂಗಿಯರು ಜೊತೆಯಲ್ಲಿದ್ದರು. ಉಳಿದವರೆಲ್ಲ ಆದನಂತರ ಕೊನೆಗೆ ಬೆಟ್ಟಯ್ಯನವರು ತಮ್ಮ ನಿತ್ಯದ ಖಾದಿ ಪಂಚೆ, ಖಾದಿ ಅಂಗಿ ಮತ್ತು ಬಿಳೀ ಟೋಪಿ ಧರಿಸಿ ಬರಿಕಾಲಿನಲ್ಲಿ ಕೈಮುಗಿದುಕೊಂಡು ಬರುತ್ತಿದ್ದರು.

ಮೋಹನದಾಸ ಹಿಂಬಾಲಕರೊಡನೆ ಮೆಟ್ಟಿಲು ಹತ್ತುತ್ತಿದ್ದ. ಪೋಲೀಸರು ಎರಡು ಕಡೆಗೂ ನಿಂತು ಅವರಿಗೆ ದಾರಿ ಮಾಡಿಕೊಡುತ್ತಿದ್ದರು. 'ನಾವು ಹೇಳಾ ಮಾತು ಒಂದ್ ರವಷ್ಟು ಕೇಳಿ ಆಮ್ಯಾಲೆ ಒಳಿಕ್ಕೆ ಹೋಗಿ. ಹುಡುಗಾಟವಲ್ಲ' – ಎಂದು ದೊಡ್ಡ ಯಜಮಾನರು ಗಟ್ಟಿಯಾಗಿ ಕೂಗಿದರು.

'ಅವರ ಮಾತು ಒಂದಿಷ್ಟು ಕೇಳಿ' – ಎಂದು ಸಬ್ ಇನ್‌ಸ್ಪೆಕ್ಟರೂ ಹೇಳಿದ ಮೇಲೆ ಮೋಹನದಾಸ ನಿಂತುಕೊಂಡ. ಉಳಿದವರೂ ನಿಂತರು.

ವೆಂಕಟೇಶ ಎಲ್ಲರಿಗೂ ಕೇಳುವಂತೆ ಗಟ್ಟಿಯಾಗಿ ಹೇಳಿದ: 'ನೋಡ್ರಪ್ಪಾ, ನೀವೇನು ಬ್ಯಾರೆಯಲ್ಲ; ನಮ್ಮ ಬಾಂಧವರೇ. ನಮ್ಮ ಶಿಷ್ಯವರ್ಗದೋರೇ. ದೇವಸ್ಥಾನದೊಳಕ್ಕೆ ನೀವು ಬರೂದು ಇದೇ ಮೊದಲ ಸಲವಲ್ಲ. ಈಗ ಹನ್ನೆರಡು ವರ್ಷದ ಹಿಂದೆ ಒಂದು ಸಲ ಬಂದಿದ್ರಂತೆ. ಆಗ ಬಂದೋರು ಮಧ್ಯ ಯಾಕೆ ಕೈಬಿಟ್ರಿ ಅಂತ ನಾನು ಕೇಳೂದು. ಕ್ರಮವಾಗಿ ಬರಬೇಕಾಗಿತ್ತು. ಈಗಾಗಲೇ ಎಂಟುನೂರು ವರ್ಷದ ಹಿಂದೆ ಶ್ರೀರಾಮಾನುಜಾಚಾರ್ಯರೇ ನಿಮ್ಮನ್ನೆಲ್ಲ ದೇವಸ್ಥಾನಕ್ಕೆ ಬಿಡಬೇಕು ಅಂತ ಮಾಡಿದ್ರಂತೆ. ಆ ಸಂಪ್ರದಾಯದ ಪ್ರಕಾರ ವರ್ಷಕ್ಕೊಂದು ದಿನ ನೀವು ಗುಡಿ ಒಳಗೆ ಬರೂದು ಎಷ್ಟೋ ದೇವಸ್ಥಾನಗಳಲ್ಲಿ ನಡೀತಿದೆಯಂತೆ. ನಮ್ಮೂರಲ್ಲಿ ಯಾಕೆ ಅದು ನಡೀಬಾರ್ದು ಅಂತ ನಾನು ಕೇಳೂದು. ಇವತ್ತು ಹ್ಯಾಗೂ ನವರಾತ್ರಿ ಪಾಡ್ಯ. ಇದೇ ಒಂದು ಖಚಿತ ತಿಥಿ ಅಂತ ಮಾಡ್ಕಂಡು ಇನ್ನು ಮ್ಯಾಲೆ ಪ್ರತಿ ನವರಾತ್ರಿ ಪಾಡ್ಯದ ದಿನವೂ ನೀವೆಲ್ಲ ಗರ್ಭಗುಡಿ ಬಾಗಿಲತನಕ ಬಂದು ಮಂಗಳಾರತಿ ಮಾಡಿಸ್ಕಂಡು ತೀರ್ಥ ಪ್ರಸಾದ ತಗಂಡು ಹೋಗಬಹುದು. ಅದಕ್ಕೆ ಪೋಲೀಸು ಗೀಲೀಸಿನೋರು ಯಾ
ಬ್ಯಾಡ. ಏನಂತೀರ? ಮಹಾ ಸಭೆ ನಿಶ್ಚಯಿಸಬೇಕು.'

ಎಲ್ಲರೂ ಸ್ತಬ್ಧರಾಗಿ ಕೇಳುತ್ತಿದ್ದರು. ಮೇಲುಜಾತಿಯವರಲ್ಲಿ

ವೆಂಕಟೇಶನ ಮಾತಿನ ಸೂಕ್ಷ್ಮ ಅರ್ಥವಾಗಿ, 'ಇವನ ತಲೆಯೇ ತಲೆ' ಎಂದುಕೊಂಡರು. ಆದರೆ ಉಳಿದವರು, 'ದಬಾಯ್ಸೂದು ಬಿಟ್ಟು ಈವಯ್ಯ ಯಾಕೆ ವರ್ಷಕ್ಕೊಂದು ಸಲ ಒಪ್ಕಂತೈತೆ?' ಎಂದು ಕೂಗಿದರು.

ಮೋಹನದಾಸ ಗಟ್ಟಿಯಾಗಿ ಉತ್ತರ ಕೊಟ್ಟ: 'ಅಂದ್ರೆ ವರ್ಷಕ್ಕೆ ಮುನ್ನೂರ ಅರವತ್ತನಾಲ್ಕು ದಿನ ನೀವು ಹೊಲೆಯ ಮಾದಿಗರಾಗಿಯೇ ಇರಿ. ಒಂದು ದಿನ ಗುಡಿಯ ಒಳಗೆ ಬನ್ನಿ. ಅವತ್ತು ನಾವು ದೂರ ಇರ್ತೀವಿ. ನೀವು ಬಂದುಹೋದ ಮೇಲೆ ಗುಡೀನೆಲ್ಲ ಹುಣಿಸೇಹುಳಿ ಹಾಕಿ ತೊಳ್ಕತ್ತೀವಿ ಅಂತ ತಾನೇ ನಿಮ್ಮ ಅಭಿಪ್ರಾಯ? ಅದು ಸಾಧ್ಯವಿಲ್ಲ. ನಾವ್ರು ದಿನಾ ಬರೋರೇ.'

'ಹಾಗಾದ್ರೆ ಇನ್ನೂ ಒಂದು ಕೆಲಸ ಮಾಡಿ' – ವೆಂಕಟೇಶ ತಕ್ಷಣ ಹೇಳಿದ: 'ನೀವು ಹೇಳೂದೂ ನ್ಯಾಯ. ದೇವರು ಅಂದಮೇಲೆ ದಿನಾ ದರ್ಶನವಾಗಬೇಕು. ಕನಕದಾಸರು ಮಹಾಭಕ್ತರು. ಅವರು ಮಾಡಿದ ಹಾಗೆ ಮಾಡಿ. ಅಂದ್ರೆ ದೇವಸ್ಥಾನದ ಹಿಂದುಗಡೆ ಗೋಡೆಗೆ ಒಂದು ಕನ್ನ ಕೊರಿಸೋಣ. ಕನ್ನ ಅಂದ್ರೆ ದೊಡ್ಡದೇ. ದಿನಾ ನೀವು ಎಷ್ಟು ಹೊತ್ನಲ್ಲಿ ಬೇಕಾದ್ರೂ ಬಂದು ಹಿಂದುಗಡೆ ಪೌಳೀಲಿ ನಿಂತ್ಕಂಡು ದರ್ಶನ ಮಾಡಭೌದು. ವಿಗ್ರಹದ ಮುಖ ಮುಂದುಗಡೆಗೆ ಇರುತ್ತಲ, ನಮಗೆ ಬೆನ್ನು ಮಾತ್ರ ಕಾಣುತ್ತೆ ಅಂತ ನೀವು ಕೇಳಬಹುದು. ಆದರೆ ನಿಮಗೆ ಕಾಣುವ ಹಾಗೆ ಬೇರೆ ಒಂದು ವಿಗ್ರಹಾನೇ ಮಾಡಿಸಿ ಇಡಾಣ. ಇಲ್ಲದೆ ಇದ್ರೆ ನಿಮಗೆ ಮೂರ್ತಿಯ ಬಿಂಬ ಸ್ಪಷ್ಟವಾಗಿ ಕಾಣೂಹಾಗೆ ಒಂದು ದೊಡ್ಡ ಕನ್ನಡಿ ಇಡಿಸಾಣ.'

'ಅಂತೂ ನಮ್ಮನ್ನ ಹೊರಗೇ ಇಡೂದು ನಿಮ್ಮ ಪ್ಲಾನು' – ಮೋಹನದಾಸ ತಕ್ಷಣ ಜವಾಬು ಕೊಟ್ಟ: 'ಅದೆಲ್ಲ ಆಗುಲ್ಲ. ನಾವು ಮುಂದುಗಡೆಯಿಂದಲೇ ದಿನಾ ಒಳಗೆ ಹೋಗ್ತೀವಿ. ಅಷ್ಟೇ ಅಲ್ಲ. ಮುಂದೆ ನಾವೂ ಯಾಕೆ ದೇವಸ್ಥಾನದ ಪೂಜಾರಿಗಳಾಗಬಾರದು ಅಂತ ಕೇಳ್ತೀವಿ. ನಿಮ್ಮ ಮಂತ್ರ ಗಿಂತ್ರ ಹೇಳಿಕೊಡಿ. ಕಲೀತೀವಿ. ನಮ್ಮ ಜನದಲ್ಲಿ ಯಾರು ಚನ್ನಾಗಿ ಕಲೀತಾರೋ ಅವರನ್ನ ಪೂಜಾರಿಯಾಗಿ ನೇಮಕ ಮಾಡಿ. ನಮ್ಮೋರು ಪೂಜೆ ಮಾಡಿ ಕೊಟ್ಟ ತೀರ್ಥಾನ ನಿಮ್ಮೋರೂ ತಗಾಬೇಕು. ಅಂಥ ಸಮಾನತೆ ನಾವ್ರು ಕೇಳೂದು.'

ಅಂದ್ರೆ ಪೂಜೆಯ ಇನಾಮತಿ ಜಮೀನಿಗೆ ಕಣ್ಣು ಹಾಕಿದ್ದಾನೆಯೇ ಈ ಘಾತಕ ಸೂಳೆಮಗ? – ಎಂದು ವೆಂಕಟೇಶನ ಬುದ್ಧಿ ತಕ್ಷಣ ಅನುಮಾನಪಟ್ಟಿತು. ...ವೆಲ್ಲ ಈ ಮಾದಿಗರ ಕೈಯ ತೀರ್ಥ ಕುಡೀಬೇಕೆ? – ಎಂಬ ಯೋಚನೆಯಿಂದಲೇ ...ರೆಲ್ಲ ಅಪಮಾನಿತರಾದರು. ತನ್ನ ಯಜಮಾನಿಕೆಯನ್ನು ಧಿಕ್ಕರಿಸಲು ...ದ್ದಾನೆ ಈ ಮಾದಿಗ ಎಂದುಕೊಂಡ ದೊಡ್ಡ ಯಜಮಾನರು,

ಮೋಹನದಾಸನ ಮುಖವನ್ನು ದಿಟ್ಟಿಸಿ ನೋಡಿದರು. ದಪ್ಪನಾಗಿ ಹೊರಜಿಯಂತೆ ಬೆಳೆಸಿದ್ದ ಅವನ ಕರಿಯ ಮೀಸೆಯನ್ನು ಕಂಡು ಅವರಿಗೆ ರೇಗಿಹೋಯಿತು. ಮೀಸೆ ಬಿಟ್ಟಿದ್ದಕ್ಕೆಂದು ಇವರಪ್ಪನನ್ನು ತಾವು ಕಂಬಕ್ಕೆ ಕಟ್ಟಿಸಿ ಹೊಡೆಸಿರ ಲಿಲ್ಲವೇ? ಅದರ ಜಿದ್ದಿಗೇ ಇಷ್ಟು ದಪ್ಪ ಬೆಳೆಸಿದಾನೆ ಈ ಸೂಳೆಮಗ ಎಂದು ಕೊಂಡರು. ಅವರ ಕೈ ತಮ್ಮ ಬಿಳಿಯ ಮೀಸೆಯ ಕಡೆಗೆ ಹೋಯಿತು. 'ಅದೇನು ಮುಕ ನೋಡ್ತೀರ, ಹಿಡಕಂಡು ನೋವೆತ್ರಲಾ ಈ ನನ್‌ಮಗುಂಗೆ. ಮೀಸೆ ಕಿತ್ತಾಕ್ರುಲಾ ಮದ್ಲು' – ಎಂದು ತಮ್ಮ ಜನರ ಕಡೆಗೆ ನೋಡಿ ಆದೇಶ ವಿತ್ತರು. ಸಬ್ ಇನ್‌ಸ್ಪೆಕ್ಟರು, 'ಯಜಮಾನರೇ, ಯಜಮಾನರೇ, ಗಲಾಟೆ ಯಾಗಕೂಡದು' ಎಂದು ಅವರಿಗೆ ಹೇಳಿ ಜನದ ಕಡೆಗೆ ತಿರುಗಿ, 'ಜ್ಞಾಪಾನ, ಸರ್ಕಾರೀ ಆರ್ಡರ್ ಇದೆ. ಯಾರೂ ಕೈ ಎತ್ತಕೂಡದು' ಎನ್ನುತ್ತಿರುವಂತೆಯೇ ದೊಡ್ಡ ಯಜಮಾನರು, 'ಸರ್ಕಾರೀ ಆಡ್ರು ನಾನ್ ನೋಡ್ಕಂತೀನಿ. ನನ್ಮಗುಂದೇ ಸರ್ಕಾರ' ಎಂದು ರಣೋತ್ಸಾಹಿಗಳನ್ನು ಹುರಿದುಂಬಿಸಿದರು. 'ಇವರವ್ವನಾ' ಎಂದು ಗುಂಪು ಮುಂದೆ ನುಗ್ಗಿತು. ಮೆಟ್ಟಿಲುಗಳ ಎರಡು ಬದಿಗೂ ಬೇಲಿಯಂತೆ ಕೈ ಅಡ್ಡಗಟ್ಟಿ ನಿಂತಿದ್ದ ಕಾನಿಸ್ಟೇಬಲುಗಳು, 'ಲಾಟೀ, ಏಟಾಗುತ್ತೆ. ಏ, ಏ' ಎನ್ನುತ್ತಾ ಕೆಲವರು, ಮೆಟ್ಟಿಲುಗಳ ಮೇಲೆ ಇಬ್ಬಿಬ್ಬರಂತೆ ನಿಂತಿದ್ದ ಹರಿಜನರ ಮೇಲೆ ಅಂಗೈಯಿಂದ ಹೊಡೆದರು.

'ಏನ್ ನೋಡ್ತೀರ ಹಿಡ್ಕಂಡು ಮಡಗ್ರೀ. ನಾವೇನ್ ಶಿಖಂಡಿಗಳಲ್ಲ' – ಎಂದು ಮೋಹನದಾಸ ಕೂಗಿದ.

ಅದೇ ಹೊತ್ತಿಗೆ ಸರಿಯಾಗಿ ಕಾರು ಹಾರನ್ ಆದ ಸದ್ದು ಕೇಳಿಸಿತು. ದಿಬ್ಬದ ಕೊನೆಗಿದ್ದವರ ಪೈಕಿ ಕೆಲವರು, 'ದಿವಾನ್ರು ಬಂದ್ರು, ದಿವಾನ್ರು ಬಂದ್ರು' ಎಂದು ಕೂಗಿದರು. 'ಮಂತ್ರಿಗಳು ಬತ್ತಿದಾರೆ. ಅಲ್ಲೀ ತಂಕ ಯಾರೂ ಕೈಮಾಡ ಕೂಡದು. ಶಾಂತಿ. ಶಾಂತಿ' – ಎಂದು ಸಬ್ ಇನ್‌ಸ್ಪೆಕ್ಟರು ಕೈ ಎತ್ತಿ ಹುಕುಂ ಮಾಡಿದರು. ಗಾಬರಿಯಾಗಿದ್ದ ಅವರ ಮುಖದ ಮೇಲೆ ಸ್ವಲ್ಪ ಸಮಾಧಾನ ಹುಟ್ಟಿತು. ಜನವೆಲ್ಲ ಆ ಕಡೆಗೆ ತಿರುಗಿ ನೋಡಿದರು. 'ಅವನು, ನಾನು ಹುಟ್ಟಿಸಿದ ಮಗ. ಅವನು ಬಂದ್‌ರೂ ನಾನು ಈ ಸನ್ಕಕ್ಳುನ್ನ ಒಳಗೆ ಬಿಡಾದಿಲ್ಲ' – ಎಂದು ವೀರ ನಿಶ್ಚಯವನ್ನು ನುಡಿದು, ದೊಡ್ಡ ಯಜಮಾನರು ಅತ್ತ ತಿರುಗದೆ ಗುಡಿಯ ಬಾಗಿಲ ಕಡೆ ನೋಡುತ್ತಾ ನಿಂತರು.

ಕೆಂಪು ಬಣ್ಣದ ಉದ್ದನೆಯ ಕಾರು ಆ ಕಾರು-ದಾರಿಯಲ್ಲೇ ಮುಗ್ಗರಿಸಿ ಮುಗ್ಗರಿಸಿಕೊಂಡು ಬರುತ್ತಿದೆ. ಶ್ರೀನಿವಾಸನಿಗೆ ಮದುವೆಯಲ್ಲಿ ಮಂಡ್ಯದ ಸಾಹುಕಾರ ಬೀಗರು ಕೊಟ್ಟಿದ್ದು ಅದು ಎಂದು ಅನೇಕರಿಗೆ ಗುರುತು ಹತ್ತಿತು.

ಅದು ಹತ್ತಿರ ಬಂದಂತೆ ಕಂಡಿತು.

ಕಾರನ್ನು ಡ್ರೈವರ್ ನಡೆಸುತ್ತಿದ್ದಾನೆ. ಹಿಂಭಾಗದಲ್ಲಿ ಮಂತ್ರಿಗಳು. ಅವರ ಪಕ್ಕದಲ್ಲಿ ಶ್ರೀನಿವಾಸ. ಅವನ ಪಕ್ಕದಲ್ಲಿ ರಂಗಮ್ಮ. ಶ್ರೀನಿವಾಸ ಅರ್ಧ ತೋಳಿನ ಶರಟು ಹಾಕಿ, ಕೊಳೆಯಾದ ಎಂಟು ಮೊಳದ ಪಂಚೆಯನ್ನು ಸೀರೆಯಂತೆ ಉಟ್ಟು, ಸೆರಗನ್ನು ಶರಟಿನ ಮೇಲೆ ಹೊದೆದಿದ್ದಾನೆ. ತಲೆಗೆ ಮುಸುಕು ಹಾಕಿದೆ. ಕ್ಷೌರ ಮಾಡಿಸಿಕೊಂಡ ಮುಖ. ಕೊರಳಲ್ಲಿ ಎದ್ದುಕಾಣಿಸುವಂತಹ ದೊಡ್ಡ ಚಿನ್ನದ ಸರ. 'ನಾನೇನು ಶಿಖಂಡಿಯಲ್ಲ. ನಾನೇನು ಶಿಖಂಡಿಯಲ್ಲ. ಯಾವನೋ ಬೋಳೀಮಗ ನನ್ನ ಶಿಖಂಡಿ ಅಂದೋನು?' – ಎಂದು ಅರಚಿಕೊಳ್ಳುತ್ತಿದ್ದಾನೆ. ಕೂಗಿ ಕೂಗಿ ಅವನ ಗಂಟಲು ಹೂತುಹೋಗಿದೆ. ಮಂತ್ರಿಗಳು ಮತ್ತು ರಂಗಮ್ಮ, ಗುಡಿಯ ದಿಬ್ಬದಲ್ಲಿ ಅಷ್ಟೊಂದು ಜನರಿರುವುದನ್ನು ಕಂಡು ಸಂಕೋಚಗೊಂಡರು. ಶ್ರೀನಿವಾಸನ ರಟ್ಟೆ ಹಿಡಿದು, 'ಇಳೀಬ್ಯಾಡ ಕಣೋ ತಮ್ಮಯ್ಯಾ. ದೊಡ್ಡ ಯ್ಯಾರುನ್ನೇ ಇಲ್ಲಿಗೆ ಕೂಗಾಣ' ಎಂದರೂ ಕೇಳದೆ ಕೊಸರಿ ಕೆಳಗೆ ಜಿಗಿದು – 'ಯಾವನೋ ಬೋಳೀಮಗ ನನ್ನ ಶಿಖಂಡಿ ಅಂದೋನು?' ಎಂದು ಅರಚಿಕೊಂಡು ಮೇಲೆ ನುಗ್ಗಿ ಬಂದ. ಜನಗಳೆಲ್ಲ ಸ್ತಬ್ಧರಾದರು. ಅವನು ಹತ್ತಿರ ಬರುತ್ತಿದ್ದ. ಮಂತ್ರಿಗಳು ಮತ್ತು ರಂಗಮ್ಮ ಹತಾಶರಾದವರಂತೆ ಇಳಿದು, ಹಿಡಿದುಕೊಳ್ಳಲು ಅವನನ್ನು ಅನುಸರಿಸಿದರು.

ಮೋಹನದಾಸ ತನ್ನ ಹಿಂದೆ ನಿಂತಿದ್ದ ತುಮಕೂರಿನ ವಿದ್ಯಾರ್ಥಿಗಳನ್ನು ನೋಡಿದ. ಹೊನ್ನೇಶ ಗಟ್ಟಿಯಾಗಿ, 'ಶಿಖಂಡೀ, ಶಿಖಂಡೀ' ಎಂದು ಕೂಗಿದ. ವಿದ್ಯಾರ್ಥಿಗಳೆಲ್ಲ ಇನ್ನೂ ಗಟ್ಟಿಯಾಗಿ, 'ಶಿಖಂಡೀ, ಶಿಖಂಡೀ' ಎಂದು ಧ್ವನಿಸಿದರು. ಶ್ರೀನಿವಾಸನಿಗೆ ರೇಗಿತು. 'ನಾನೇನು ಬಳೆ ತೊಟ್ಕಂಡಿಲ್ಲ. ಯಾವನೋ ನನ್ನ ಶಿಖಂಡಿ ಅನ್ನೋನು ಬೋಳೀಮುಕ್ಳಾ?' ಎಂದು ಎರಡು ಕೈಗಳನ್ನೂ ಎತ್ತಿ ಕೂಗಿದ. ಅವನು ಕೂಗಲು ಒತ್ತಿ ತರುತ್ತಿದ್ದ ಉಸಿರು, ಕುತ್ತಿಗೆ ಮುಖಗಳ ನರಗಳ ಬಿಗಿತದ ನೋವು ನೋಡುವವರಿಗೇ ಕಾಣುತ್ತಿತ್ತು. ಆದರೆ ಹೂತು ಹೋಗಿದ್ದ ಗಂಟಲಿನಿಂದ ಸರಿಯಾಗಿ ಶಬ್ದ ಹೊರಡುತ್ತಿರಲಿಲ್ಲ.

ಮೋಹನದಾಸ ದೊಡ್ಡ ಯಜಮಾನರಿಗೆ, 'ನಿಮ್ಮ ಮೊಮ್ಮಗನಿಗೆ ಹುಚ್ಚು ಹಿಡಿದಿದೆ ಕನ್ರೀ. ತುಮಕೂರು ಚರಂಡೀಲೆಲ್ಲ ಹಿಂಗಂತ ಕೂಕ್ಕಂಡು ತಿರುಗ್ತಿದ್ದ' ಎಂದ. ಇದು ಹುಚ್ಚು ಎಂದು ಎಲ್ಲರಿಗೂ ಅಷ್ಟರಲ್ಲಿ ಅರ್ಥವಾಗಿತ್ತು. ದೊಡ್ಡ ಯಜಮಾನರ ಮುಖ ಸಪ್ಪೆಗಟ್ಟಿತು. 'ಇದೇನಪ್ಪಾ ಇದು?' – ಎನ್ನುತ್ತಿರುವಾಗಲೇ ಅವರ ಕಣ್ಣು ಸಂಕುಚಿಸಿದುವು. ಪಕ್ಕದಲ್ಲಿ ನಿಂತಿದ್ದ ವೆಂಕಟೇಶ ಅವರ ಎರಡು ತೋಳುಗಳನ್ನೂ ಹಿಡಿದುಕೊಂಡ. ಅರ್ಧ ನಿಮಿಷ ಅವನ ಭುಜದ ಮೇಲೆ

ಕೈಹಾಕಿ ನಿಂತಿದ್ದ ಅವರು ದಾರಿ ಬಿಡಿಸಿಕೊಂಡು, 'ಇದ್ಯಾಕೋ ತಮ್ಮಯ್ಯಾ ಹಿಂಗ್ ಆಡ್ತೀಯ?' ಎಂದು ಕೆಳಗೆ ಇಳಿದರು. ಜನವೆಲ್ಲ ಆ ಕಡೆಗೆ ತಿರುಗಿತು. ಏನೋ ತಮಾಷೆ ನೋಡುವವರಂತೆ ಗುಂಪು ದಿಬ್ಬದಿಂದ ಇಳಿದು ಕೆಳಗೆ ಹೋಗಿ, ಶ್ರೀನಿವಾಸ ಮತ್ತು ಅವನ ತಂದೆ ತಾಯಿಯರನ್ನು ಸುತ್ತುಗಟ್ಟಿತು. ಶ್ರೀನಿವಾಸ, ಕಟ್ಟಿದ ಗಂಟಲಿನಲ್ಲಿ ಕೂಗುತ್ತಲೇ ಇದ್ದ: 'ಯಾವನೋ ಬೋಳೀಮಗ ನನ್ನ ಶಿಖಂಡಿ ಅನ್ನೋನು?....'

ಮೋಹನದಾಸ ಮತ್ತು ಅವನ ಸಂಗಡಿಗರನ್ನು ಇನ್ನು ತಡೆಯುವವರಿರಲಿಲ್ಲ. 'ನಾವೀಗ ಒಳಗೆ ಮಂಗಳಾರತಿಗೆ ಹೋಗ್ತೀವಿ' – ಎಂದು ಅವನು ಸಬ್ ಇನ್‌ಸ್ಪೆಕ್ಟರಿಗೆ ಹೇಳಿದ.

ಅವರು, 'ಹೋಗಿ. ನೀವು ವಿದ್ಯಾವಂತರು. ಸ್ವಲ್ಪವೂ ಗಲಾಟೆಯಾಗದ ರೀತಿ ನೋಡ್ಕಳೂ ಜವಾಬ್ದಾರಿ ನಿಮ್ಮದು' – ಎಂದರು.

ಎಲ್ಲವನ್ನೂ ನೋಡುತ್ತಾ ನಿಂತಿದ್ದ ಕುಪ್ಪಣ್ಣಯ್ಯಂಗಾರರು, 'ಶಿಖಂಡಿ ದರ್ಶನವಾದ ತಕ್ಷಣ ಭೀಷ್ಮ ಪಿತಾಮಹರು ಶಸ್ತ್ರಸನ್ಯಾಸ ಮಾಡಿದರು. ನಮ್ಮ ಸೇನೆ ಚೆದರಿಹೋಯಿತು' ಎಂದರು. ವೆಂಕಟೇಶ ಅವರನ್ನು ದುರುಗುಟ್ಟಿಕೊಂಡು ನೋಡಿದ.

ಕೆಳಗೆ ಹತ್ತಿರ ಬಂದ ದೊಡ್ಡ ಗೌಡರಿಗೆ ಮಂತ್ರಿಗಳು ಹೇಳುತ್ತಿದ್ದರು: "ಹಿಂಗಾಗ್ಯದೆ. ನಿಮ್ಮ ತಾವಿಕ್ಕಾದ್ರೂ ಕರ್ಕಂಡ್ ಬರಾಣ, ಯಂಗಟರಮಣ ಮ್ಯಾರ ಮಗಳಾದ್ರೂ ಸಮಾಧಾನ ಮಾಡಭೌದು ಅಂತ ಕರ್ಕಂಡ್ ಬಂದ್ವಿ. ಕೋಟೆಬಾಗಿಲಿಗೆ ಬಂದ ಪಟ್ಟೀಗೆ, 'ಗುಡಿಕಡೀಕ್ ನಡಿ. ನಾನು ಗುಡಿ ನೋಡಬೇಕು' ಅಂತ ಗಲಾಟೆ ಮಾಡ್ದ."

ಒಳಗೆ ಗರ್ಭಗುಡಿಯಲ್ಲಿ ನರಸಿಂಹಜೋಯಿಸರು ಕಾಯುತ್ತಿದ್ದರು. ಇವರು ಒಳಗೆ ಹೋಗುವುದಕ್ಕೆ ಇನ್ನು ಯಾವ ಅಡಚಣೆಯೂ ಇರಲಿಲ್ಲ. ಕುಪ್ಪಣ್ಣಯ್ಯಂಗಾರರು, ವಿಶ್ವಕರ್ಮ ಬ್ರಾಹ್ಮಣರ ಈಶಾಚಾರ್ಯರು ಮೊದಲಾದವರು ಮಾತ್ರ, 'ಹೋಗಲಿ. ಇವರಿಗೆ ದೇವರೇ ತಕ್ಕ ಶಿಕ್ಷೆಮಾಡ್ತಾನೆ. ಎಲ್ಲಾ ನೋಡ್ತಾ ಇರೂ ಸರ್ವಾಂತರ್ಯಾಮಿ ಅವನು' ಎಂದರು. ಮೋಹನದಾಸ ತಿರುಗಿ ಅವರನ್ನೆಲ್ಲ ನೋಡಿ ಒಳಗೆ ನಡೆದ. ಅವನ ಹಿಂದೆಯೇ ಹೊನ್ನೇಶ ಮತ್ತು ಹುಡುಗರು ಬಂದರು. ಅವರ ಹಿಂದೆ ಇತರ ಗಂಡಸರು. ಗುಡಿ ತುಂಬಿಹೋಗಿ ಉಳಿದವರು ಹೊರಗೆ ನಿಂತರು. ಮೋಹನದಾಸ ತನ್ನ ಜೀವನದಲ್ಲೇ ಮೊದಲ ಸಲ ಈ ದೇವಸ್ಥಾನದೊಳಕ್ಕೆ ಹೋಗುತ್ತಿದ್ದಾನೆ. ಅವನು ಬೆಂಗಳೂರು, ಮೈಸೂರು ಮೊದಲಾದ ಕಡೆಗಳಲ್ಲಿ ದೇವಸ್ಥಾನಗಳ ಒಳಗೆ ನೋಡಿದ್ದಾನೆ. ಆದರೆ ಆ ಕಾಣದ ಊರುಗಳಲ್ಲಿ

ಅಜ್ಞಾತನಾಗಿ ಹೋಗಿ ನೋಡುವುದಕ್ಕೂ, ಇಷ್ಟೆಲ್ಲ ವಿರೋಧವನ್ನೆದುರಿಸಿ ತನ್ನ ಈ ಹುಟ್ಟೂರಿನ ಗುಡಿಯನ್ನು ಪ್ರವೇಶಿಸುವುದಕ್ಕೂ ಅವನಿಗೆ ಪ್ರಚಂಡ ವ್ಯತ್ಯಾಸದ ಅನುಭವವಾಗುತ್ತಿದೆ. ತನ್ನ ಮೊದಲನೆಯ ಹೆಜ್ಜೆಯಲ್ಲಿ ಸಫಲನಾಗಿರುವ ಭಾವದಿಂದ ಮೈ ಪುಳಕಿತವಾಗುತ್ತಿದೆ. ಗರ್ಭಗುಡಿಯ ಒಳಗೆ ಎರಡು ಕಡೆಯಲ್ಲೂ ಉರಿಯುತ್ತಿರುವ ದಪ್ಪ ದೀಪದ ನಡುವೆ ಕರೀಕಲ್ಲಿನ ವಿಗ್ರಹವಿದೆ. ಈ ಕಲ್ಲನ್ನು ನೋಡುವುದಕ್ಕೆ ನಮ್ಮವರು ಶತ ಶತಮಾನಗಳಿಂದ ಆಶೆ ಪಟ್ಟರೇ? – ಎಂಬ ತಿರಸ್ಕಾರ ಮನಸ್ಸಿನಲ್ಲಿ ಹುಟ್ಟಿತು. ಹೊರಗೆ ಹೊರಟುಹೋಗಬೇಕೆನಿಸಿತು. ಆದರೆ ಪೂರ್ತಿ ಇರಬೇಕು. ಪ್ರತಿದಿನವೂ ನಮ್ಮವರು ಇಲ್ಲಿಗೆ ಬರುವಂತೆ ವ್ಯವಸ್ಥೆ ಮಾಡುವ ನಾನು ಮಧ್ಯದಲ್ಲಿ ಹೋಗಬಾರದು ಎಂದುಕೊಂಡು ನಿಂತ. ಹಿಂತಿರುಗಿ ನೋಡುತ್ತಾನೆ: ಗುಡಿಯ ಒಳಗೆಲ್ಲ ಅವನವರೇ ತುಂಬಿದ್ದಾರೆ. ಮನಸ್ಸಿನಲ್ಲಿ ವಿಜಯದ ಭಾವ ಮೂಡಿತು.

ಆದರೆ ಮರುಕ್ಷಣವೇ ತಾನು ಇನ್ನೂ ಗೆದ್ದಿಲ್ಲವೆನಿಸಿತು. ಬರೀ ನಮ್ಮವರೇ ಇದ್ದಾರೆ. ಮೇಲುಜಾತಿಯ ಒಬ್ಬರೂ ಒಳಗೆ ಬಂದು ನಮ್ಮವರ ಜೊತೆ ನಿಂತಿಲ್ಲ. ಹೊರಗೇ ಉಳಿದಿದ್ದಾರೆ. ಎಂದರೆ ಮುಂದೆ ಅವರೆಲ್ಲ ಈ ಗುಡಿಗೆ ಬರುವುದನ್ನೇ ನಿಲ್ಲಿಸುತ್ತಾರೆಯೇ? ಬೇರೆ ಗುಡಿ ಕಟ್ಟಿಕೊಳ್ಳುತ್ತಾರೆಯೇ? ಹಾಗೆ ಮಾಡಿದರೆ ತನಗೆ ಸಿಕ್ಕುವುದು ಈ ಕಲ್ಲಿನ ದರ್ಶನ ಮಾತ್ರ. ಇದರಲ್ಲೇನಿದೆ, ಎಂದು ಯೋಚಿಸುತ್ತಿರುವಾಗ ಗಂಟೆಯ ಶಬ್ದವಾಯಿತು. ಅವನು ತಿರುಗಿ ನೋಡಿದ: ಪೂಜಾರಿಗಳು ಎಡಗೈಲಿ ಗಂಟೆ ಬಾರಿಸಿಕೊಂಡು, ಉರಿಯುವ ಮಂಗಳಾರತಿಯ ಹಲಗೆಯನ್ನು ಬಲಗೈಲಿ ನಿಧಾನವಾಗಿ ಮೇಲೆ ಎತ್ತುತ್ತಿದ್ದಾರೆ. ಕಾಲೇಜಿನಲ್ಲಿ ಓದುತ್ತಿದ್ದ ಇಬ್ಬರು ಎತ್ತರವಾದ ಹುಡುಗರು ಮೆಟ್ಟಿಂಗಾಲಿನಮೇಲೆ ನಿಂತು, ತೊಲೆಗೆ ನೇತುಹಾಕಿದ್ದ ಎರಡು ಗಂಟೆಗಳನ್ನು ಢಣ ಢಣ ಢಣ ಢಣ ಎಂದು ಗಟ್ಟಿಯಾಗಿ ಬಡಿಯಲು ಆರಂಭಿಸಿದರು. ದಪ್ಪನಾಗಿ ಉರಿಯುವ ಮಂಗಳಾರತಿಯ ಬೆಳಕಿನಲ್ಲಿ ವಿಗ್ರಹದ ಕಾಲು ಕಾಣಿಸಿದುವು. ಅನಂತರ ಮುಂಡಿಯ ಭಾಗ. ತೊಡೆ. ಹೊಟ್ಟೆ. ಶಂಖ ಚಕ್ರ ಗದೆ ಪದ್ಮಗಳನ್ನು ಹಿಡಿದು ವಿವಿಧ ಭಂಗಿಯಲ್ಲಿದ್ದ ನಾಲ್ಕು ಕೈಗಳು. ಎದೆಯ ಮೇಲೆ, ಹೊಳೆಯುವ ಪೀತಾಂಬರ. ಅದರ ಮೇಲೆ ಹಾರಗಳು. ಮಂಗಳಾರತಿ ಇನ್ನೂ ಮೇಲೆ ಹೋಯಿತು. ಮಿನುಗುವ ಕಪ್ಪು ಮುಖ. ಕಣ್ಣು ಕೋರೈಸುವಂತೆ ಹೊಳೆಯುವ ಬೆಳ್ಳಿಯ ಕಣ್ಣುಕಟ್ಟುಗಳು. ದೇವರ ಕಣ್ಣುಗಳನ್ನು ಯಾಕೆ ಹೀಗೆ ಮುಚ್ಚಿದ್ದಾರೆ, ಎಂಬ ಪ್ರಶ್ನೆ ಮೋಹನದಾಸನ ಮನಸ್ಸಿನಲ್ಲಿ ಹುಟ್ಟಿತು. ಮುಖದ ಹತ್ತಿರಕ್ಕೆ ಬಂದ ಮಂಗಳಾರತಿ ಹಾಗೆಯೇ ನಿಂತಿತು. ಹಣೆಯ ಮೇಲೆ, ಹೊಳೆಯುವ ನಾಮ. ತಲೆಯ ಮೇಲೆ, ನಿಗಿನಿಗಿಸುವ ಕಿರೀಟ.

ಎರಡು ಕಿವಿಗಳಲ್ಲೂ ಥಳಥಳನೆ ನೇತಾಡುವ ಕರ್ಣಕುಂಡಲಗಳು. ಮೋಹನದಾಸನ ಊರಿನ ಕುಲಬಾಂಧವರೆಲ್ಲ ಕೈಮುಗಿದುಕೊಂಡು, 'ನನ್ನಪ್ಪಾ, ನನ್ನಪ್ಪಾ' ಎನ್ನುತ್ತಿದ್ದಾರೆ. ಅದನ್ನು ಕೇಳಿ ಅವನ ಮನಸ್ಸಿನಲ್ಲಿ ಮಾತ್ರ ತಿರಸ್ಕಾರ ಹುಟ್ಟಿತು. ಮಂಗಳಾರತಿ ನಿಂತಲ್ಲೇ ನಿಂತಿತ್ತು. ಕರಿಯ ಮುಖ ಮಿನುಗುತ್ತಿತ್ತು. ಬೆಳ್ಳಿಯ ಕಣ್ಣು ಕಟ್ಟುಗಳು ಕಣ್ಣು ಕೋರೈಸುವಂತೆ ಹೊಳೆಯುತ್ತಿದ್ದುವು. ಹಣೆಯ ಮೇಲೆ, ಹೊಳೆಯುವ ನಾಮ. ತಲೆಯ ಮೇಲೆ, ಎದ್ದುನಿಂತ ನಿಗಿನಿಗಿಸುವ ಕಿರೀಟ. ಎರಡು ಕಿವಿಗಳಲ್ಲೂ ಥಳಥಳನೆ ನೇತಾಡುವ ಕರ್ಣಕುಂಡಲಗಳು. ಥಳಥಳನೆ ಹೊಳೆಯುವ ಪ್ರಭಾವಳಿಯು ಹಿಂಭಾಗದ ಕತ್ತಲೆಯನ್ನು ತಡೆಯುವ ಅರೆವೃತ್ತಾಕಾರದ ಏರಿಯಂತಿದೆ. ಅದನ್ನು ದಿಟ್ಟಿಸಿ ನೋಡುತ್ತಾ ನಿಂತ ಮೋಹನದಾಸನಿಗೆ ಕಣ್ಣುಗತ್ತಲೆಯಾಗುವಂತೆ ಎನಿಸಿತು. ತನ್ನ ಇಡೀ ಶರೀರವು ತೂಗುವಂತೆ ಭಾಸವಾಯಿತು. ಅವನು ಕಣ್ಣು ಮುಚ್ಚಿಕೊಂಡ. ತಲೆ ಸುತ್ತಿಬಂತು. ಕೆಳಗೆ ಕೂರಬೇಕೆನ್ನುವುದರಲ್ಲಿ ಧೊಪ್ಪನೆ ಬಿದ್ದುಬಿಟ್ಟ.

ಎಲ್ಲರೂ ಗಾಬರಿಯಾದರು. ಪಕ್ಕದಲ್ಲಿದ್ದ ಹುಡುಗರು ತಕ್ಷಣ ನೋಡಿದರು. 'ಎಲ್ಲ ಹೊರಗೆ ನಡೀರಿ. ದಾರಿಬಿಡಿ' – ಎಂದು ಕೂಗಿಕೊಂಡರು. ಕುಲಬಾಂಧವರೆಲ್ಲ ಹೆದರಿದರು. 'ಜಾಗ ಬಿಡಿ, ಜಾಗ ಬಿಡಿ' – ಎನ್ನುತ್ತಾ ಹುಡುಗರು ಮೋಹನದಾಸನ ಕೈ ಕಾಲು ಭುಜ ಸೊಂಟಗಳಿಗೆ ಕೈಕೊಟ್ಟು ಎತ್ತಿ ಹೊರಗೆ ತಂದರು. ಒಳಗೆ ಇದ್ದವರೆಲ್ಲ ಗಾಬರಿಯಿಂದ ಹೊರಗೆ ಬಂದರು. 'ಏನಾಯ್ತು?' – ಬಾಗಿಲಿನಲ್ಲಿದ್ದ ವೆಂಕಟೇಶ ಕೇಳಿದ.

'ಕೆಳಗೆ ಬಿದ್ದುಬಿಟ್ಟರು' – ಒಬ್ಬ ಹುಡುಗ ಹೇಳಿದ.

'ನಮ್ಮೂರ ದೇವರ ಸತ್ಯ ನಿಮಗೇನು ಗೊತ್ತೋ? ರಾವು ಬಡಿದಿದೆ, ರಾವು. ಬ್ಯಾಡ ಅಂದ್ರೂ ಗುಡಿ ಒಳಕ್ಕೆ ಯಾಕೆ ಹೋದಿರಿ?' – ವೆಂಕಟೇಶ ಕೂಗಿದ.

ಹುಡುಗರೆಲ್ಲ ಹೆದರಿದರು. ಗಂಡಸರೆಲ್ಲ ಮೆಟ್ಟಿಲಿನಿಂದ ಕೆಳಗೆ ಓಡಲು ಆರಂಭಿಸಿದರು. ಹಿಂದೆ ನಿಂತಿದ್ದ ಹೆಂಗಸರು, ಏನಾಯಿತೆಂಬುದನ್ನು ಕೇಳದೆಯೇ, ಹಾವು ಕಂಡವರಂತೆ ತಮ್ಮ ಗಂಡಸರ ಹಿಂದೆ ಓಡಿದರು.

'ಮೋಹನದಾಸರು ಬಿದ್ದುಬಿಟ್ಟರು' – ಎಂದು ಒಬ್ಬ ಕಾಲೇಜು ಹುಡುಗ ಕೂಗಿದ. ಬೆಟ್ಟಯ್ಯನವರು, ಅವರ ಹೆಂಡತಿ, ಮಾತಂಗಿ ಓಡಿ, ಅವನನ್ನು ಮಲಗಿಸಿದ್ದ ಜಾಗಕ್ಕೆ ಬಂದರು. ಕೆಳಗೆ ಕಾರಿನ ಹತ್ತಿರ ಗುಂಪುಗೂಡಿದ್ದ ಜನವೂ ಮೇಲೆ ಬರತೊಡಗಿತು. ಪೌಳಿಯ ಮೂಲೆಯಲ್ಲಿ ನಿಂತಿದ್ದ ಸತ್ಯಳಿಗೆ ಗಾಬರಿಯಾಯಿತು. ಶ್ರೀನಿವಾಸನನ್ನು ಕಂಡು ಅವಳ ಮನಸ್ಸು ಮರುಗುತ್ತಿತ್ತು. ತಾನು ಕೆಳಗೆ ಹೋಗಿ ಅವನೊಬ್ಬನನ್ನೇ ಜನದಿಂದ ತಪ್ಪಿಸಿ ಕರೆದುಕೊಂಡು ಹೋಗಲೇ

ಎಂಬ ಯೋಚನೆ ಬಂದಿತ್ತು. ಆದರೆ ಹುಚ್ಚು ಹಿಡಿದಿರುವ ಅವನು ತನ್ನನ್ನು ಕಂಡು ಏನೇನು ಆಡುವನೋ ಎಂದು ಯೋಚಿಸಿ ಸುಮ್ಮನೆ ನಿಂತಿದ್ದಳು. ಈಗ ಮೋಹನದಾಸ ಯಾಕೆ ಬಿದ್ದ ಎಂದುಕೊಂಡು ಓಡಿ ಬಂದಳು. 'ಯಾಕೆ, ಯಾಕೆ?' – ಬೆಟ್ಟಯ್ಯನವರು ಕೇಳಿದರು. 'ಮಂಗಳಾರತಿ ನೋಡ್ತಿದ್ರು. ಹಂಗೇ ಕುಸಿದುಬಿಟ್ರು' – ಒಬ್ಬ ಹುಡುಗ ಹೇಳಿದ. ಮೋಹನದಾಸನ ತಾಯಿ ಮಗನ ಎದೆಯ ಮೇಲೆ ಮುಖವಿಟ್ಟು ಗೋಳೋ ಎನ್ನಲು ಆರಂಭಿಸಿದಳು. ಬೆಟ್ಟಯ್ಯನವರಿಗೆ ದಿಕ್ಕು ತೋಚಲಿಲ್ಲ. ಮಾತನಾಡಲು ನಾಲಿಗೆ ಆಡಲಿಲ್ಲ. ಭಯದಿಂದ ಕೈ ಕಾಲು ನಡುಗುತ್ತಿತ್ತು. 'ಹೃದಯಸ್ತಂಭನವೇ?' – ಎಂದು ಸತ್ಯಳಿಗೆ ಅನುಮಾನವಾಯಿತು. ಪಕ್ಕದಲ್ಲಿ ಕುಳಿತು, ಅವನ ತಾಯಿಯನ್ನು ಎತ್ತಿ ದೂರ ಕೂರಿಸಿ, ಅವನ ಕೈನಾಡಿ ಹಿಡಿದಳು. ಎಡಗೈಯನ್ನು ಎದೆಯ ಮೇಲೆ ಇಟ್ಟು ನೋಡಿದಳು. ಅಷ್ಟರಲ್ಲಿ ಸುತ್ತುಕೂಡಿದ್ದ ಜನರ ಪೈಕಿ ಒಬ್ಬರು, 'ದೇವರ ತೀರ್ಥ ತಂದು ಹಾಕಿ. ಮುಂದೇದು ಬದುಕ್ಕಳ್ಲಿ' ಎಂದರು. 'ತೀರ್ಥ ತನ್ನಿ, ತೀರ್ಥನಾ' – ಬೆಟ್ಟಯ್ಯನವರು ತೊದಲಿದರು. 'ಒಂದು ಚೊಂಬು ನೀರು ತನ್ನಿ' – ಸತ್ಯ ಎಂದಳು. ಹತ್ತಿರ ಚೊಂಬು ಪಾತ್ರೆ ಯಾವುದೂ ಇರಲಿಲ್ಲ. ಅವಳೇ ಎದ್ದು ಗುಡಿಯ ಒಳಗೆ ಹೋದಳು. ಗರ್ಭಗುಡಿಯಲ್ಲಿ ದೇವರ ಮುಂದೆ ಇಟ್ಟಿದ್ದ ತಾಮ್ರದ ಚೊಂಬಿನಲ್ಲಿ ಮುಕ್ಕಾಲು ಭಾಗ ನೀರಿತ್ತು. ಹಿಡಿದು ಓಡಿ ಬಂದು ಬಲಗೈಗೆ ಹಾಕಿಕೊಂಡು ನೀರನ್ನು ಅವನ ತಲೆಗೆ ತಟ್ಟಿ ಮುಖಕ್ಕೆ ಸಿಂಪಡಿಸಿದಳು. ಹತ್ತಿರ ಇದ್ದ ಇಬ್ಬರು ಹುಡುಗರಿಗೆ, 'ಜನಾನ ದೂರ ಕಳಿಸಿ. ಗಾಳಿ ಬೀಸಿ' ಎಂದು ಹೇಳಿ, ತಲೆಗೆ ಮತ್ತೆ ನೀರು ತಟ್ಟಿದಳು. ಜನವನ್ನು ದೂರ ತಳ್ಳಲು ಪೋಲೀಸಿನವರೇ ನಿಂತರು. ಅಲ್ಲಿ ಸ್ವಲ್ಪ ಗಾಳಿ ಆಡಿತು. ಸತ್ಯಳೇ ಸೆರಗಿನಿಂದ ಅವನ ಮುಖದ ಹತ್ತಿರ ಗಾಳಿ ಹಾಕಿದಳು.

ಐದು ನಿಮಿಷದಲ್ಲಿ ಮೋಹನದಾಸ ನಿಧಾನವಾಗಿ ಕಣ್ಣು ಬಿಟ್ಟ. ಏನಾಯಿತು, ಈಗ ಏನಾಗಿದೆ, ತಾನು ಎಲ್ಲಿದ್ದೇನೆ ಎಂಬುದು ತಿಳಿಯದ ಸಂಭ್ರಾಂತಿಯಿಂದ ತಲೆಯನ್ನು ಹೊರಳಿಸಿದ. 'ಏನೂ ಯೋಚನೆ ಇಲ್ಲ. ಈಗ ಎದ್ದು ಕೂತ್ಕತ್ತಾರೆ. ನೀವು ಸುಮ್ಮನಿರಮ್ಮ' – ಸತ್ಯ ಅವನ ತಾಯಿಗೆ ಹೇಳಿದಳು.

ಮೋಹನದಾಸ, 'ಏನು?' ಎಂದ. ಕೆಳಗೆ ಶ್ರೀನಿವಾಸ, 'ನಾನಲ್ಲ ಕಣೋ ಶಿಖಂಡಿ ಸೂಳೆಮಗ: ನೀನು. ನೀನೇ ಶಿಖಂಡಿ' ಎಂದು ಅರಚಿಕೊಳ್ಳುತ್ತಿದ್ದ.

೩

ಆ ದಿನ ನಡೆದದ್ದೆಲ್ಲ ಸತ್ಯಳಿಗೆ ವಿಸ್ಮಯವಾಗಿ ಕಾಣುತ್ತಿತ್ತು. ಹರಿಜನರ ಪ್ರವೇಶ ಪೂರ್ಣವಾಗಿ ಆಗಲಿಲ್ಲ. ನಿತ್ಯವೂ ಪ್ರವೇಶಿಸುವ ಕಾರ್ಯಕ್ರಮವು ಮರು ದಿನದಿಂದ ನಿಂತೇ ಹೋಯಿತು. ಇನ್ನು ಆ ಗುಡಿಯ ಒಳಗೆ ತಾವು ಹೋಗುವು ದಿಲ್ಲವೆಂದು ಹರಿಜನರ ಗಂಡಸರು ಹೇಳಿಬಿಟ್ಟರಂತೆ. ಆ ದಿನ ಸಂಜೆಯೇ ಮೋಹನ ದಾಸ ಊರು ಬಿಟ್ಟು ಹೊರಟುಹೋದನಂತೆ. ತುಮಕೂರಿನಿಂದ ಬಂದ ವಿದ್ಯಾರ್ಥಿ ಗಳೂ ಹೊನ್ನೇಶನೂ ಮುಂದಿನ ಬೆಳಗ್ಗೆ ಹಿಂತಿರುಗಿದರು.

ಎಂಟು ದಿನ ಕಳೆದಿತ್ತು. ತೋಟದ ಕಾಯಿ ಕೆಡವಿಸಬೇಕಾಗಿತ್ತು. ಆಳುಗಳು ಬಂದು ಮರ ಹತ್ತಿ ಕೆಡವುತ್ತಿದ್ದರು. ವೆಂಕಟೇಶನ ಭಾಗದ್ದೂ ಕೆಡವಿಸಬೇಕಾ ಗಿತ್ತು. ಅವನೂ ಬಂದ. ಇವಳ ಕೈಲಿ, 'ಸತ್ಯ, ನಾಳೆ ವಿಜಯದಶಮಿ ಹಬ್ಬ. ಅಲ್ಲೇ ಊಟಕ್ಕೆ ಬಾ' ಎಂದ.

ಊರೊಳಕ್ಕೆ ಹೋಗಲು ಅವಳಿಗೆ ಬೇಜಾರು. ಸಂತೋಷದಿಂದ ಹಬ್ಬದ ಊಟ ಮಾಡುವ ಮನಃಸ್ಥಿತಿ ತನಗಿಲ್ಲವೆಂದು ಅವಳಿಗೆ ಗೊತ್ತಿತ್ತು. ಅವಳು ಎಂದಳು: 'ಈ ತ್ವಾಟ ಬಿಟ್ಟು ಹೊರಕ್ಕೆ ಹೋಗುಕ್ಕೆ ನನಗೆ ಬೇಜಾರಪ್ಪ. ನಾನು ಬರುಲ್ಲ.'

ಅದೂ ಇದೂ ಮಾತನಾಡುತ್ತಾ ಶ್ರೀನಿವಾಸನ ವಿಷಯ ಬಂತು. ವೆಂಕಟೇಶ ಹೇಳಿದ: 'ಇಲ್ಲಿ ನಿನ್ನ ಹತ್ರ ತೋಟಕ್ಕೆ ಕರ್ಕಂಡು ಬರಬೇಕು ಅಂತ ಮೇಲಗಿರಿ ಹೊರಟನಂತೆ. ತಾನು ಅವಳ ಹತ್ತಿರಕ್ಕೆ ಹೋಗುಲ್ಲ ಅಂತ ಶ್ರೀನಿವಾಸ ಹಟ ಹಿಡಿದನಂತೆ. ಅವರು ಬಲವಂತ ಮಾಡಿದ್ದಕ್ಕೆ, ಅವಳ ಎದುರಿಗೆ ನನ್ನ ಕರ್ಕಂಡು ಹೋದ್ರೆ ಅಲ್ಲಿ ವೆಂಕಟರಮಣಯ್ಯ ಜೋಯಿಸರು ಬಿದ್ದು ಮುಳುಗಿದರಲ್ಲ, ಅದೇ ಜಾಗದಲ್ಲಿ ಮುಳುಗಿ ಪ್ರಾಣ ಕಳ್ಕತ್ತೀನಿ ಅಂತ ಆಣೆ ಹಾಕಿದನಂತೆ. ಅವತ್ತು ಸಂಜೆಗೇ ಬೆಂಗಳೂರಿಗೆ ಕರಕೊಂಡು ಹೋದ್ರು. ದೊಡ್ಡ ಗೌಡ್ರೂ ಜೊತೇಲಿ ಹೋದ್ರು. ಇನ್ನೂ ವಾಪಸು ಬಂದಿಲ್ಲ. ಕಾಳೇಗೌಡ ಬೆಂಗಳೂರಿಗೆ ಹೋಗಿದ್ದ. ನೆನ್ನೆ ಸಂಜೆ ಬಂದ. ಅವನಿಗೆ ಹುಚ್ಚು ದಿನದಿನಕ್ಕೆ ಕೇಗ್ತಾ ಐತೆಯಂತೆ. ಹುಚ್ಚಾಸ್ಪತ್ರೆ ಡಾಕ್ಟರಿಗೆ ಅವನನ್ನ ಹಿಡಿಯುಕ್ಕೆ ಆಗುಲ್ಲವಂತೆ. ಬೆಳಗ್ಗೆ ಸಂಜೆ, ಮತ್ತು ಬರುವ ಇಂಜೆಕ್ಷನ್ ಚುಚ್ಚಿ ಕೆಡವಿರ್ತಾರಂತೆ.'

ಸತ್ಯ ಯಾವ ಪ್ರತಿಕ್ರಿಯೆಯನ್ನೂ ತೋರಲಿಲ್ಲ. ವೆಂಕಟೇಶನೇ, 'ಮತ್ತು ಬರೂ ಇಂಜೆಕ್ಷನ್ ಚುಚ್ಚಿ ಅವನನ್ನ ಮಲಗಿಸಬಹುದು. ಅಂಪ್ರೆ ಅರ್ಚಿ ಕೊಳ್ಳೂದು ನಿಲ್ಲಿಸಬಹುದು. ಪೂರ್ತಿ ಗುಣವಂತೂ ಆಗುಲ್ಲ ಅಂತ ನನ್ನ ಅಂದಾಜು.

ಗುಣವಾದ್ರೂ ಪ್ರಯೋಜನವಿಲ್ಲ' ಎಂದ.

'ಯಾಕೆ?'

'ಇನ್ನು ಪಾಳೇಗಾರ್ರ ಮನೆ ಬೆಳೆಯುಲ್ಲ.'

'ದೊಡ್ಡ ಯಜಮಾನರು ಹ್ಯಾಗಿದಾರಂತೆ?'

'ಇದಾರಂತೆ ಪೂಜೆ ಗೀಜೆ ಮಾಡ್ಕಂಡು. ಎಂಟು ದಿನಕ್ಕೇ ಇಳಿದುಹೋಗಿದಾರಂತೆ. ಇನ್ನೇನು ವರ್ಷ ಆರು ತಿಂಗಳಲ್ಲಿ ಅವರ ಕತೆ ಮುಗಿಯುತ್ತೆ ಅಂತ ನನ್ನ ಅಂದಾಜು....'

ಸ್ವಲ್ಪ ಹೊತ್ತಾದನಂತರ ವೆಂಕಟೇಶ ಕೇಳಿದ: 'ಸತ್ಯ, ನಂಗೊಂದು ನಾಲ್ಕು ಸಾವಿರ ರೂಪಾಯಿ ಬೇಕು. ಕೊಟ್ಟಿರ್ತೀಯ? ಕಾಗದ ಬರದು ಕೊಡ್ತೀನಿ ಬೇಕಾದ್ರೆ.'

ಈ ಅಣ್ಣನಿಂದ ಕಾಗದ ಬರೆಸಿಕೊಂಡು ದುಡ್ಡು ಕೊಡುವುದು ಅವಳಿಗೆ ಇಷ್ಟವಾಗಲಿಲ್ಲ. ಆದುದರಿಂದ ಅವಳು ಮಾತನಾಡದೆ ಸುಮ್ಮನಿದ್ದಳು. ಅವನೇ ಎಂದ: 'ಲೆಕ್ಕಾಚಾರ ಲೆಕ್ಕಾಚಾರ. ನನ್ನ ಹತ್ತಿರ ದುಡ್ಡಿದೆ. ಕ್ವಾಟೆ ಹಿಂದಲ ಹ್ವಲ ಇದೆಯಲ ಕುಪ್ಪಣ್ಣಯ್ಯಂಗಾರ್ರದ್ದು. ಮಗಳ ಮದುವೆಗೆ ಮಾರ್ತಾರೆ. ಹದಿನೈದು ಸಾವಿರಕ್ಕೆ ಖರೀದಿ ಮಾಡಿದೀನಿ. ನಾಡದ್ದು ರಿಜಿಸ್ಟರಾಗುತ್ತೆ. ಹಳ್ಳದ ಕಾವಲು ಇದೆ ನೋಡು, ಅದರಲ್ಲಿ ಹತ್ತು ಎಕರೆ ದರಖಾಸ್ತಿಗೆ ಹಾಕಿದ್ದೆ. ಮಂಜೂರಾಗಿದೆ. ಬೇಗ ಗುಂಡಿ ತೆಗೆಸಿ, ಬದು ಕಟ್ಟಿ, ಬೇಲಿ ಕಟ್ಟಿಸಿ ಒಂದು ನಾನೂರು ತೆಂಗಿನ ಸಸಿ ಹಾಕಿಸಬೇಕು. ಒಂದು ಬಾವಿ ತೆಗೆಸಬೇಕು ದುಡ್ಡು ಸಾಲುಲ್ಲ. ಕೊಟ್ಟಿರು. ನಿಂಗೆ ಬ್ಯಾಂಕಿನೋರು ಕೊಡೂ ಬಡ್ಡಿ ಕೊಟ್ರೆ ಆಯ್ತೋ ಇಲ್ವೋ?'

ಸತ್ಯ ಸುಮ್ಮನಿದ್ದಳು. ವೆಂಕಟೇಶ ಮತ್ತೆ ಕೇಳಲಿಲ್ಲ. ಇಂತಹ ವ್ಯವಹಾರವನ್ನು ಪ್ರಸ್ತಾಪಿಸಿದ ತಕ್ಷಣ, ಉಂಟು, ಇಲ್ಲ, ಎಂದು ಉತ್ತರ ಹೇಳೆಂದು ಯಾರನ್ನೂ ಒತ್ತಾಯಿಸಬಾರದೆಂಬ ವ್ಯವಹಾರಸೂಕ್ಷ್ಮ ಅವನು ತಿಳಿಯದವನಲ್ಲ.

'ನಾಳೆ ಊಟಕ್ಕೆ ಬಾ' – ಎಂದು ಮತ್ತೆ ಹೇಳಿ, ತನ್ನ ಕಡೆಯ ಕಾಯಿ ಕೆಡವಿಸಲು ಹೋದ.

ಮರುದಿನ ಸತ್ಯ ಊಟಕ್ಕೆ ಹೋಗಲಿಲ್ಲ. ಆದರೆ ತೋಟದಲ್ಲಿ ಒಬ್ಬಳೇ ಇರಲು ಬೇಸರವೆನಿಸಿತು. ಏನು ಮಾಡಲೂ ಮನಸ್ಸಿಲ್ಲ. ಹವನ ಮಾಡುವುದರಲ್ಲೂ ಆಸ್ಥೆ ಕಾಣಲಿಲ್ಲ. ಅಡಿಗೆಯನ್ನೇ ಮಾಡಲಿಲ್ಲ. ಇದ್ದಕ್ಕಿದ್ದ ಹಾಗೆಯೇ ಈ ತೋಟದ ಮೇಲೆ, ಈ ಕೆಲಸದ ಮೇಲೆ, ಬೆವರು ಸುರಿಸಿ ಮಣ್ಣಿನಲ್ಲಿ ದುಡಿಯುವ ಜೀವನದ ಮೇಲೆ ಬೇಸರ ಕಂಡಿತು. ಇಲ್ಲಿ ಏನಿದೆ ಅಂತ ಇರಬೇಕು. ಎಷ್ಟು ದಿನ ಅಂತ ಹೀಗೆ ಇರಬಹುದು, ಎಂಬ ಪ್ರಶ್ನೆ ಎದ್ದಿತು. ಮೈಸೂರಿಗಾದರೂ ಹೋಗಿ ಯಾವು

ದಾದರೂ ಸಂಶೋಧನೆ ಮಾಡಬೇಕು, ಹ್ಯಾಗೂ ಹತ್ತಿರ ದುಡ್ಡಿದೆ, ಹಗಲು ರಾತ್ರಿ ಓದಬೇಕು ಎನಿಸಿತು. ಆದರೆ ಸುಮ್ಮನೆ ಓದಿಕೊಂಡಿರುವ ಆಸ್ಥೆ ಉತ್ಸಾಹ ಎಷ್ಟು ದಿನ ಇದ್ದೀತು ಎನಿಸಿತು. ನನಗೇಕೆ ಇದ್ದಕ್ಕಿದ್ದ ಹಾಗೆಯೇ ಹೀಗೆ ನಿರುತ್ಸಾಹ ಹುಟ್ಟಿದೆ, ಎಂದುಕೊಂಡಳು. ತಾನು ದೇವಸ್ಥಾನದ ಬಗೆಗೆ ಬರೆದಿದ್ದ ಟಿಪ್ಪಣಿ ಗಳನ್ನು ತೆಗೆದು ನೋಡಿದಳು. ಮತ್ತೆ ಟೇಪು ತೆಗೆದುಕೊಂಡು ಕಾಗದ ಪೆನ್ನು ಗಳೊಡನೆ ದೇವಸ್ಥಾನಕ್ಕೆ ಹೋದಳು. ಗುಡಿಯ ಒಂದೊಂದು ಕಂಬದ ಉದ್ದ, ಆಕಾರ, ಸುತ್ತಳತೆ, ಅದರ ಮೇಲಿರುವ ವಿಗ್ರಹಗಳ ವಿವರ, ಶಿಖರಕ್ಕೂ ನೆಲಕ್ಕೂ ಇರುವ ಎತ್ತರ, ಮೊದಲಾಗಿ ತನಗೆ ತೋರಿದ ಅಂಶಗಳನ್ನೆಲ್ಲ ಬರೆದುಕೊಂಡಳು. ಪೂಜೆಗೆ ಬಂದಿದ್ದ ನರಸಿಂಹಜೋಯಿಸರಿಗೆ ಹೇಳಿ ತಾನೇ ಗರ್ಭಗುಡಿಗೆ ಹೋಗಿ, ವಿಗ್ರಹದ ಕೆತ್ತನೆಯ ವಿವರಗಳನ್ನೆಲ್ಲ ಗುರುತು ಹಾಕಿಕೊಂಡಳು. ಒಂದು ಒಳ್ಳೆಯ ಕ್ಯಾಮರಾ ಕೊಳ್ಳಬೇಕು. ಫೋಟೋ ತೆಗೆಯುವ ಅಭ್ಯಾಸ ಮಾಡಿಕೊಳ್ಳಬೇಕು. ಈ ವಿಗ್ರಹ, ಕಂಬ, ಬೋದಿಗೆ, ಬಾಗಿಲುವಾಡಗಳನ್ನೆಲ್ಲ ಫೋಟೋ ತೆಗೆದುಕೊಳ್ಳ ಬೇಕು ಎಂದು ಯೋಚಿಸಿದಳು. ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಮನೆಗೆ ಬಂದಾಗ ಹಸಿವಾಗಿ ಸುಸ್ತಾಗಿತ್ತು. ಅಡಿಗೆಗೆ ಇಟ್ಟಳು. ಪಾಡ್ಯದ ದಿನ ದೇವಾಲಯ ವನ್ನು ಪ್ರವೇಶಿಸಲು ಬಂದ ದಿನದ ವಿವರಗಳನ್ನು ನೆನಪಿರುವ ಮಟ್ಟಿಗೆ ಖಚಿತ ವಾಗಿ ಬರೆದಿಡಬೇಕೆಂದು ನಿಶ್ಚಯಿಸಿದಳು. ಊಟ ಮಾಡಿದ ತಕ್ಷಣ ಬರೆಯಲು ಕೂತಳು.

ಸಂಜೆ ಐದು ಗಂಟೆಯ ಹೊತ್ತಿಗೆ ಬೆಟ್ಟಯ್ಯನವರು ಬಂದರು. ತುಂಬ ಯೋಚನೆಗೆ ಸಿಕ್ಕಿದಂತೆ ಕಾಣುತ್ತಿದ್ದ ಅವರನ್ನು ಅವಳು ಮೋಹನದಾಸನ ಬಗೆಗೆ ವಿಚಾರಿಸಿದಳು.

'ಎಲ್ಲಿ ಹೋಗ್ಯವ್ನೋ ಕಾಣೆ ಕಣವ್ವ. ತುಮಕೂರಾಗಿಲ್ವಂತೆ. ಮಾತಂಗ-ಮ್ಮನ ಮಗ ಹೊನ್ನೇಶ ಅಂತ ಹುಡುಗ ಇದಾನಲ, ಅವನೂ ಇಲ್ಲ. ಇಬ್ರೂ ಎಲ್ಲಿ ಹೋದರೋ ಕಾಣೆ' – ಎಂದು ಪೇಚಾಡಿಕೊಂಡರು. 'ಮಗಳು ಹಿಂಗಾದ್ಲು. ಇವನಾರ್ರೂ ಸುಮ್ಮನಿರಬ್ಯಾಡ್ದಾ? ಪ್ರಪಂಚ ತಾನೇ ಬದಲಾಯಿಸುತ್ತೆ. ನಾವೇ ಬದಲಾಯಿಸ್ತೀವಿ, ನಮ್ಮ ತಲೇಲೇ ಬದಲಾವಣೆಯಾಗಬೇಕು ಅನ್ನೂ ಹಟ ಯಾಕೆ ಅವನಿಗೆ?'

'ನಮ್ಮ ತಲೆ ಕಳೆದ ಮೇಲೆ ಮುಂದೆ ಏನಾಗುತ್ತೋ ನಮಗೆ ಗೊತ್ತಿಲ್ಲ. ಒಳ್ಳೇದೇ ಆದ್ರೂ ಅದನ್ನ ನೋಡುಕ್ಕೆ ನಾವಿರುಲ್ಲ. ಒಳ್ಳೇದೇನಿದ್ರೂ ಸಾಯುವ ಮುಂಚೆ ನಾವೇ ಕಾಣಬೇಕು ಅನ್ನೂ ಬಯಕೆ ಕೆಟ್ಟದ್ದೇ?' – ಅವಳು ಕೇಳಿದಳು.

'ಅದರಿಂದ ಎಷ್ಟು ಕಷ್ಟವಾಗ್ತದೆ ನೋಡಿ' – ಅಂದರು.

ಮಗಳು ಸತ್ತು, ಮಗನ ಪ್ರಯತ್ನ ಹೀಗೆ ವಿಫಲವಾಗಿರುವ ಸಂದರ್ಭದಲ್ಲಿ ಅವರೊಡನೆ ಹೆಚ್ಚು ಚರ್ಚಿಸಬಾರದೆಂದು ಅವಳು ಸುಮ್ಮನೆ ತಲೆಹಾಕಿದಳು. ಅವರೇ, 'ಮೇಲಗಿರಿಗೌಡರ ಮನೆ ನಿಂತುಹೋದ ಹಂಗೇ ಆಯ್ತು. ಇವನು ಮದುವೆಯಾಗ್ತಾನೋ ಇಲ್ವೋ ಅಂತ ನಂಗೆ ಯಾವತ್ತೂ ಅನುಮಾನವಿತ್ತು. ಮಗಳ ಹೊಟ್ಟೇಲಿ ಆದ್ರೂ ನಮ್ಮ ಮನೆ ಬೆಳೀತದೆ ಅಂತ ಆಶೆ ಇತ್ತು. ಏನೇನಾಯ್ತು ನೋಡಿ' ಎಂದು ಸಂಕಟವನ್ನು ತೋಡಿಕೊಂಡರು.

ಸತ್ಯ ಮಾತನಾಡಲಿಲ್ಲ. ಅವರಿಗೆ ಸಮಾಧಾನ ಹೇಳಲು ಅವಳಿಗೆ ತಿಳಿಯಲಿಲ್ಲ. ರಾತ್ರಿ ಏಳು ಗಂಟೆಯತನಕ ಇದ್ದು ಬೆಟ್ಟಯ್ಯನವರು ಮನೆಗೆ ಹೋದರು.

ಆ ರಾತ್ರಿ ಅವಳಿಗೆ ಹೊನ್ನೇಶನ ನೆನಪು ಬಂತು. ಮೀರಾ ಸತ್ತ ಮೇಲೆ ಸಮಾಧಾನ ಹೇಳಲು ಅವರ ಕಾಲೋನಿಗೆ ಹೋಗಿದ್ದಾಗ ಮಾತಂಗಿ ಸಿಕ್ಕುತ್ತಿದ್ದಳು. ಒಂದು ದಿನ ಮಗನ ವಿಷಯ ವಿಚಾರಿಸಿದ್ದಕ್ಕೆ ಕಣ್ಣೀರು ಹಾಕಿಕೊಂಡು ಅಂದಿದ್ದಳು: 'ನೀವಾರೂ ಹೇಳವ್ವ. ನನ್ನ ಕಂಡ್ರೆ ಕೆಂಡ ಕಾರ್ತಾನೆ. ಒಂದು ದಿನ, ಸೂಳೆಗಾರ ಮುಂಡೆ ಅಂತ ಬೋಯ್ದುಬುಟ್ಟ.'

ಅವನನ್ನು ಹೀಗೆ ಮಾಡಿರುವವನು ಮೋಹನದಾಸನೆಂಬುದು ಸತ್ಯಳಿಗೆ ಗೊತ್ತು. ಆದರೆ ಅದನ್ನು ಮಾತಂಗಿಗೆ ಹೇಳಿ ಪ್ರಯೋಜನವಿಲ್ಲ. ಮೋಹನದಾಸನಿಗೇ ಹೇಳಿ ಹೊನ್ನೇಶನನ್ನು ಬದಲಾಯಿಸಬೇಕು. ಅಥವಾ ಮೊದಲು ನನಗೆ ಹೊಂದಿಸಿ ಕೊಂಡು ನಿಧಾನವಾಗಿ ಅವನೊಡನಾಡಿ ತಿದ್ದಬೇಕು ಎಂದುಕೊಂಡಿದ್ದಳು. ಅನಂತರ ಮೋಹನದಾಸನೊಡನೆ ಆ ವಿಷಯವಾಗಿ ಮಾತನಾಡುವ ಸಂದರ್ಭವೇ ಬಂದಿರಲಿಲ್ಲ. ಪಾಡ್ಯದ ಹಿಂದಿನ ದಿನ ಅವನು ಬಂದಿದ್ದಾಗ ಆ ವಿಷಯ ನೆನಪಿಗೆ ಬರಲಿಲ್ಲ. ಬರೀ ಮಾತಂಗಿಯ ಸಲುವಾಗಿ ಅಲ್ಲ. ತನಗೇ ಹೊನ್ನೇಶನ ವಿಷಯ ದಲ್ಲಿ ಕಳೆದ ಕೆಲವು ದಿನದಿಂದ ಅಂತಃಕರಣ ಬೆಳೆಯುತ್ತಿದೆ: ಮೀರಾ ಸತ್ತ ಮೇಲೆ ಅದು ಹೆಚ್ಚಾಗುತ್ತಿದೆ. ಈಗ ಅವನು ಎಲ್ಲಿ ಹೋದನೋ! ಮೋಹನದಾಸನ ಜೊತೆಯೇ ಹೋಗಿರಬೇಕು. ಮೋಹನದಾಸ ಅಪಮಾನದಿಂದ ಹೋಗಿದ್ದಾನೆಂಬುದು ಸ್ಪಷ್ಟ.

೬

ಇನ್ನೂ ನಾಲ್ಕು ದಿನ ಕಳೆದಿತ್ತು. ಸತ್ಯಳಿಗೆ ಬೇಸಾಯ ಕೆಲಸದಲ್ಲಿ ಸ್ವಲ್ಪವೂ ಆಸ್ಥೆ ಇಲ್ಲದಂತಾಗಿದೆ. ಕಳೆದ ಮೂರು ದಿನಗಳಿಂದ ಅವಳು ಒಂದೇಸಮನೆ ಓದು ತ್ತಿದ್ದಾಳೆ. ಮೈಸೂರಿನಿಂದ ಬಂದಾಗ ಕೊಂಡು ತಂದಿದ್ದ ಇತಿಹಾಸ ಪುಸ್ತಕಗಳಲ್ಲಿ

ಕೆಲವನ್ನು ಇನ್ನೂ ಓದಿರಲಿಲ್ಲ. ಈಗ ಅವುಗಳ ಮೇಲೆ ಆಸ್ಥೆ ಬೆಳೆದಿದೆ. ಉಳಿದ ದಿನನಿತ್ಯದ ಸಾರಣೆ, ಸ್ನಾನ, ಅಡಿಗೆ, ಹವನಗಳ ಮೇಲೂ ಗಮನ ಹೋಗುತ್ತಿಲ್ಲ. ಬೆಳಗಿನಿಂದ ಸಂಜೆಯತನಕ ದೇಶದ ಗತಜೀವನವನ್ನು ಓದಿ, ಸದ್ಯದ ಘಟನೆಗಳೊಡನೆ ಹೋಲಿಸಿ ಅರ್ಥ ಮಾಡಿಕೊಳ್ಳುತ್ತಾಳೆ. ಈ ದಿನ ಮಧ್ಯಾಹ್ನ ಎರಡು ಗಂಟೆಗೆ ಒಂದು ಪುಸ್ತಕವನ್ನು ಮುಗಿಸಿ, ಅನಂತರ ಅಡಿಗೆ ಮಾಡಿ ಊಟ ಮಾಡಿದಳು. ತೂಕಡಿಕೆ ಬಂತು. ಮಲಗಿದಳು. ಎಚ್ಚರವಾದಾಗ ಸಂಜೆ ಆರು ಗಂಟೆ. ಮತ್ತೊಂದು ಪುಸ್ತಕವನ್ನು ತೆಗೆದುಕೊಳ್ಳುವ ಮನಸ್ಸಾಗಲಿಲ್ಲ. ದೇವಸ್ಥಾನದ ತನಕ ಹೋಗಿ ಒಂದು ಸುತ್ತು ಹಾಕಿದಳು. ಇದರ ಇತಿಹಾಸವನ್ನು ಬರೆಯಬೇಕು. ನನಗೆ ಇಂತಹ ಸಂಶೋಧನೆಯ ವಿಧಾನಗಳೆಲ್ಲ ತಿಳಿದಿಲ್ಲ. ಪ್ರೊಫೆಸರರ ಮಾರ್ಗದರ್ಶನ ಪಡೆಯಬೇಕು. ಈ ದೇವಸ್ಥಾನವನ್ನು ಕೇಂದ್ರಬಿಂದುವಾಗಿಟ್ಟುಕೊಂಡು ಈ ಊರಿನ, ಈ ಸುತ್ತಿನ, ಜೀವನದ ಇತಿಹಾಸವನ್ನು ಬರೆಯಬೇಕು ಎಂದುಕೊಂಡಳು. ಮನೆಗೆ ಬಂದು, ಉಳಿದಿದ್ದ ಅನ್ನವನ್ನು ಊಟ ಮಾಡಿ ಮಲಗಿದಳು. ನಿದ್ರೆ ಬರಲಿಲ್ಲ. ಲಾಟೀನು ಹಚ್ಚಿಕೊಂಡು, ದೇವಸ್ಥಾನದ ಬಗೆಗೆ ತಾನು ಬರೆದಿದ್ದ ಟಿಪ್ಪಣಿಗಳನ್ನೆಲ್ಲ ಓದಲು ಆರಂಭಿಸಿದಳು. ನಿಂತು ಗೀಚಿಕೊಂಡ ತನ್ನ ಅಕ್ಷರ ಎಷ್ಟೋ ಕಡೆ ತನಗೇ ತಿಳಿಯುತ್ತಿಲ್ಲ. ಇಂಗ್ಲಿಷು ಕನ್ನಡ ಶಬ್ದಗಳೆರಡನ್ನೂ ಬೆರೆಸಿ ಗುರುತು ಹಾಕಿಕೊಂಡಿರುವ ಭಾಷೆ. ಅದೆಲ್ಲವನ್ನೂ ಮೊದಲು ಒಂದು ರೂಪಕ್ಕೆ ತಂದು ಗುಂಡಗಿನ ಅಕ್ಷರದಲ್ಲಿ ಬರೆಯಬೇಕೆನಿಸಿತು. ಆಗಲೇ ಪೆನ್ನು ತೆಗೆದುಕೊಂಡು ಬರೆಯಲು ಆರಂಭಿಸಿದಳು. ಎರಡು ದಿನದಲ್ಲಿ ಎಲ್ಲವನ್ನೂ ಬರೆದು ಮುಗಿಸಬಹುದು ಎನಿಸಿತು.

ರಾತ್ರಿ ಸುಮಾರು ಹತ್ತೂವರೆ ಗಂಟೆಯ ಹೊತ್ತಿನಲ್ಲಿ ಹೊರಗೆ ಯಾರೋ ಬರುತ್ತಿರುವ ಶಬ್ದವಾಯಿತು. ಆಶ್ಚರ್ಯ ಕುತೂಹಲಗಳಿಂದ ಸಪ್ಪಳವನ್ನು ಆಲಿಸಿದಳು. ಸಪ್ಪಳವು ಹತ್ತಿರ ಹತ್ತಿರ ಬಂದು ಅನಂತರ ಮೃದುವಾಗಿ ಬಾಗಿಲು ತಟ್ಟಿದ ಶಬ್ದವಾಯಿತು. 'ಯಾರು?' – ಎಂದಳು. 'ನಾನು' – ಎಂಬ ಉತ್ತರ ಮೋಹನದಾಸನದೆಂದು ತಿಳಿಯಿತು. ಎದ್ದು ಬಾಗಿಲು ತೆಗೆದಳು. ಮೋಹನದಾಸ ಒಂದು ಕಪ್ಪು ಪ್ಯಾಂಟು ಹಾಕಿ ಬೂದು ಬಣ್ಣದ ಬುಶ್‌ಕೋಟು ತೊಟ್ಟಿದ್ದ. ಈ ಹೊತ್ತಿನಲ್ಲಿ ಇದ್ದಕ್ಕಿದ್ದ ಹಾಗೆಯೇ ಬಂದ ಅವನನ್ನು ಕಂಡು ಅವಳಿಗೆ ಆಶ್ಚರ್ಯ. 'ಎಲ್ಲಿ ಹೋಗಿದ್ದಿರಿ ಇಷ್ಟು ದಿನ?' – ಎಂದು ಕೇಳಿದಳು.

'ಹೀಗೇ ನನ್ನ ಕೆಲಸಕ್ಕೆ ಹೋಗಿದ್ದೆ. ನಿಮ್ಮ ಮನೇಲಿ ಬೆಳಕು ಕಾಣಿಸಿತು. ಈಗ ಏನು ಬರೀತಿದೀರಿ?'

'ಈ ದೇವಸ್ಥಾನದ ಇತಿಹಾಸ.'

'ಗುಡ್' – ಎಂದು ಅವನು ಮಾರ್ಮಿಕವಾಗಿ ನಕ್ಕ.

ಅದು ಅವಳಿಗೆ ಅರ್ಥವಾಗಲಿಲ್ಲ. 'ಇಷ್ಟು ಹೊತ್ತಿನಲ್ಲಿ ಎಲ್ಲಿಂದ ಬಂದಿರಿ? ಯಾಕೆ ಬಂದಿರಿ?' – ಎಂದು ಕೇಳಿದಳು.

'ಎಲ್ಲಿಂದ ಅಂತ ಹೇಳುಲ್ಲ. ಯಾಕೆ ಅನ್ನೂದ ಅಂದಾಜು ಮಾಡಿ ನೋಡಾಣ.'

ಅವಳಿಗೆ ತಿಳಿಯಲಿಲ್ಲ. ಅವನ ಮುಖವನ್ನೇ ನೋಡಿದಳು. ಅವನೇ, 'ಇಷ್ಟು ಹೊತ್ತಿನಲ್ಲಿ ಯಾಕೆ ಬಂದಿರಬಹುದು? ಹೇಳಿ ಕಲ್ಪನೆ ಇದ್ದರೆ' ಎಂದ.

ಅವಳಿಗೆ ಒಂದು ನಿಮಿಷ ಅಧೈರ್ಯವಾಯಿತು. ಅನಂತರ ಧೈರ್ಯ ತಂದುಕೊಂಡು ಹೇಳಿದಳು: 'ನೋಡಿ. ತಮಾಷೆ ಮಾಡಬೇಡಿ. ನನ್ನ ಮರ್ಯಾದೆ ಕಾಪಾಡಿಕೊಳೂ ಶಕ್ತಿ ನನಗಿದೆ.'

ಅವನು ಕಕ್ಕಾವಿಕ್ಕಿಯಾಗಿ ಅವಳ ಮುಖ ನೋಡುತ್ತಾ ನಿಂತ. ಎರಡು ನಿಮಿಷದ ನಂತರ ಅವಳ ಮಾತಿನ ಅರ್ಥ ಅವನಿಗೆ ಆಯಿತು. ಎಂದ: 'ಸತ್ಯ, ನೀವು ನನ್ನನ್ನ ಅರ್ಥ ಮಾಡ್ಕಂಡಿಲ್ಲ. ಇಂಥ ವೀಕ್‌ನೆಸ್ ಇರೂ ಮನುಷ್ಯ ಕ್ರಾಂತಿಕಾರಿಯಾಗುಲ್ಲ. ಸಂಶಯ ಹೆಂಗಸರ ಸ್ವಭಾವ ಅನ್ನೂದು ತಪ್ಪಲ್ಲ.'

'ಸಾರಿ. ಹಾಗಾದ್ರೆ ಯಾಕೆ ಬಂದಿರಿ?'

'ಭಾಷೆ ಕೊಡ್ತೀರಾ, ಹೇಳ್ತೀನಿ' – ಎಂದು ಕೈ ನೀಡಿದ.

'ವಿಷಯ ತಿಳೀದೇ ನಾನು ಯಾವುದಕ್ಕೂ ಭಾಷೆ ಕೊಡುಲ್ಲ.'

'ಹೆದರಿಕೋಬ್ಯಾಡಿ. ಮೊದಲು ಭಾಷೆ ತಗಂಡು, ಆಮೇಲೆ ನನ್ನ ಮದುವೆಯಾಗಿ ಅಂತ ಕೇಳುಲ್ಲ. ನಿಮ್ಮ ಒಳ್ಳೇದಕ್ಕೆ ಹೇಳ್ತಿದೀನಿ. ಸತ್ಯ, ನಿಮುಗೆ ಅಪಾಯವಾಗಬಾರದು.'

'ಏನು ನಿಮ್ಮ ಮಾತಿನ ಅರ್ಥ?'

'ಭಾಷೆ ಕೊಡಿ' – ಎಂದು ಅವನೇ ಕೈ ನೀಡಿ ಅವಳ ಬಲಗೈಯನ್ನು ಬಿಗಿಯಾಗಿ ಹಿಡಿದು ಧ್ವನಿಯನ್ನು ತಗ್ಗಿಸಿ ಹೇಳಿದ: 'ನೀವು ಈಗಲೇ ಇಲ್ಲಿಂದ ಹೊರಟು ಹೋಗಿ. ಈ ಜಾಗದಿಂದ ಒಂದು ಫರ್ಲಾಂಗ್ ಮೇಲೆ, ಊರ ಕಡೆಗೆ ಹೋಗಬೇಕು. ನಿಮ್ಮ ಜೀವಕ್ಕೆ ಅಪಾಯವಿದೆ.'

'ಯಾಕೆ ಅಪಾಯ? ಯಾರಿಂದ?'

'ಅದನ್ನ ಹೇಳುಲ್ಲ. ನಿಮುಗೇ ಗೊತ್ತಾಗುತ್ತೆ. ಬೇಕಾದ್ರೆ ವೀಕ್‌ನೆಸ್ ಅಂತ ಕರೀರಿ. ನೀವು ಬದುಕಬೇಕು ಅನ್ನೊ ವೀಕ್‌ನೆಸ್ ನಂಗೆ ತುಂಬ ಇದೆ. ಈಗಲೇ ಹೊರಡಿ' – ಎಂದು ತನ್ನ ಗಡಿಯಾರ ನೋಡಿಕೊಂಡು ಹೇಳಿದ: 'ನಂಗೆ ಟೈಂ ಇಲ್ಲ. ಇನ್ನೊಂದು ವಿಷಯ: ನಾನು ಈಗ ಇಲ್ಲಿ ಬಂದಿದ್ದನ್ನಾಗಲಿ, ನಿಮ್ಮ ಕೈಲಿ

ಮಾತಾಡಿದ್ದನ್ನಾಗಲಿ ಮುಂದೆ ಯಾರ ಕೈಲೂ ಆಡಕೂಡದು. ನಿಮಗೆ ನನ್ನ ಮೇಲೆ ವೀಕ್‌ನೆಸ್ ಇಲ್ಲದಿದ್ದರೆ ಬ್ಯಾಡ. ದಯ, ಸಹಾನುಭೂತಿ ಇದ್ದರೆ ಸಾಕು. ಬೇಗ ಹೊರಟುಹೋಗಿ' – ಎಂದು ಅವಳ ಎಡಗೈಯನ್ನೂ ತೆಗೆದುಕೊಂಡು ತನ್ನ ಎರಡು ಕೈಗಳಿಂದಲೂ ಒಂದು ಸಲ ಹಿಸುಕಿ ಕುಲುಕಿ ಹಿಂತಿರುಗಿ ಹೊರಟುಹೋದ.

ಸತ್ಯಳಿಗೆ ಆಶ್ಚರ್ಯವಾಯಿತು. ತನ್ನ ಜೀವಕ್ಕೆ ಎಂಥ ಅಪಾಯವಿದೆ? ಯಾರಿಂದ ಬಂದೀತು? ಮೋಹನದಾಸನ ಕಳಕಳಿಯನ್ನು ನೋಡಿದರೆ ಅಪಾಯ ಇರುವುದು ಸ್ಪಷ್ಟವಾಗುತ್ತಿತ್ತು. ನನ್ನ ಕೊಲೆ ಮಾಡಿಸುವ ಪ್ರಯತ್ನ ನಡೆದಿದೆಯೇ? ಯಾರು ಮಾಡಿಸಬೇಕು? ಮಂತ್ರಿಗಳೇನಾದರೂ ಅಂತಹ ಹಂಚಿಕೆ ಹಾಕಿರ ಬಹುದೆ? ಅವರಲ್ಲಿ ನಂಬಿಕೆ ಬರಲಿಲ್ಲ. ಅದು ನಿಜವಾಗಿದ್ದರೆ ಮೋಹನದಾಸ ನನಗೆ ಎಚ್ಚರ ಹೇಳಿ ಹೊರಟುಹೋಗುತ್ತಿರಲಿಲ್ಲ. ತಾನೇ ಕೈಹಿಡಿದು ಎಳೆದುಕೊಂಡು ಹೋಗುತ್ತಿದ್ದ. ಅವನು ಎಲ್ಲಿಗೆ ಹೋದ, ಎಂದು ಪ್ರಶ್ನೆ ಹಾಕಿಕೊಂಡು ಉತ್ತರ ಹುಡುಕುತ್ತಾ ನಿಂತಳು. ಏನಾದರೂ ಆಗಲಿ, ನಾನು ಹೆದರಕೂಡದು ಎನಿಸಿತು. ಇಷ್ಟು ದಿನದಿಂದ ಈ ತೋಟದಲ್ಲಿ ಅಪ್ಪ ಗುಡಿಸಲು ಕಟ್ಟಿಕೊಂಡಿದ್ದ ಜಾಗದಲ್ಲಿ, ಹಗಲು ರಾತ್ರಿ ಒಬ್ಬಳೇ ಇದೀನಿ. ಈಗಲೂ ಇರ್ತೀನಿ. ಜೀವಕ್ಕೆ ಅಪಾಯ ಅಂದರೆ ಸಾವು. ಯಾಕೆ ಹೆದರಬೇಕು, ಎಂಬ ಧೈರ್ಯ ಹಟಗಳು ಮನಸ್ಸಿನಲ್ಲಿ ಹುಟ್ಟಿದುವು. ಲಾಟೀನಿಗೆ ಎಣ್ಣೆ ಹಾಕಿಕೊಂಡು ಬರೆಯುತ್ತಾ ಕೂತಳು. ಸುಮಾರು ಒಂದು ಗಂಟೆಯಾಯಿತು. ಒಂದೂಕಾಲು ಗಂಟೆಯಾಯಿತು. ಅಪಾಯದ ಯಾವ ಸೂಚನೆಯೂ ಕೇಳಲಿಲ್ಲ. ಬರವಣಿಗೆ ಸಾಗುತ್ತಿರಲಿಲ್ಲ. ಅವಳ ಕಿವಿಗಳು ಸುತ್ತ ಮುತ್ತ ಯಾರದಾದರೂ ಸಪ್ಪಳವಾದೀತೇನೋ ಎಂದು ಚುರುಕಾಗಿ ಗಮನವೆಲ್ಲ ಆ ಕಡೆಗೇ ಇತ್ತು.

ಹನ್ನೆರಡು ಗಂಟೆಯಾಯಿತು. ಯಾವ ಸುಳಿವೂ ಇಲ್ಲ. ಈ ಮೋಹನದಾಸ ನನ್ನ ಧೈರ್ಯ ಪರೀಕ್ಷೆ ಮಾಡುಕ್ಕೆ ಹೀಗೆ ಹೇಳಿ ಹೋದನೇ, ಎನಿಸಿತು. ನನ್ನ ಧೈರ್ಯ ಪರೀಕ್ಷೆಮಾಡಿ ಅವನಿಗೆ ಏನಾಗಬೇಕು, ಎಂದು ಕೇಳಿಕೊಂಡಳು. ಅವನಿಗೆ ಏನಾಗಬೇಕು? ಅದನ್ನು ಸ್ಪಷ್ಟವಾಗಿ ಸೂಚಿಸಿದ್ದಾನೆ. ತನ್ನ ಮನಸ್ಸನ್ನು ತಿಳಿಯಲು ಪ್ರಯತ್ನಿಸಿದ್ದಾನೆ. 'ಮೇಲಿನೋರು ತಮ್ಮೊಳಗೆ ಸೇರಿಸಿಕೊಂಡು ಒಂದು ಮಾಡಿಕೊಳ್ಳೂ, ತನಕ ಮೇಲು ಕೀಳು ಅನ್ನೂ ಭಾವನೆ ಎಲ್ಲಿ ಹೋಗುತ್ತೆ?' – ಎಂಬ ವೀರಳ ಮಾತು ಮತ್ತೆ ನೆನಪಿಗೆ ಬಂತು. ಹಾಗಾದರೆ ಈ ಬಗೆಗೆ ಮತ್ತೆ ಆಲೋಚಿಸಬೇಕೆ? – ಎಂದುಕೊಂಡಳು.

ಪೆನ್ನನ್ನು ತೆಗೆದು ಮತ್ತೆ ಬರೆಯಲು ಕೂತಳು. ಪ್ರಯತ್ನಪಟ್ಟು ಎರಡು ಸಾಲುಗಳನ್ನು ಬರೆದಿದ್ದಳು. ಘಂ. ಘಘಂ. ಘುಂ ಘುಂ ಎಂಬ ಸದ್ದು ಎಲ್ಲೋ

ದೂರದಲ್ಲಿ ಕೇಳಿಸಿತು. ಅದೇ ಧ್ಯಾನದಲ್ಲಿ ಕಿವಿಯನ್ನು ಚುರುಕಾಗಿಟ್ಟುಕೊಂಡಿದ್ದುದರಿಂದ ಸದ್ದು ಕೇಳಿಸಿದೆ. ಇಲ್ಲದೆ ನಿದ್ದೆ ಮಾಡಿದ್ದರೆ ಗೊತ್ತಾಗುತ್ತಿರಲಿಲ್ಲ ಎಂದುಕೊಂಡಳು. ಏನಿರಬಹುದು ಈ ಸದ್ದು? ಬಂದೂಕದ್ದೆ? ಯಾವ ಕಡೆ ಆಯಿತು – ಎಂದು ಯೋಚಿಸಿದಳು. ಕೆರೆಯ ಏರಿಯ ಕಡೆ ಎನಿಸಿತು. ತನಗೇನು ಅಪಾಯ ಕಾದಿದೆ? ಯಾರಾದರೂ ಬಂದು ತನ್ನನ್ನು ಗುಂಡಿಕ್ಕಿ ಕೊಲ್ಲುವರೇ, ಎಂಬ ಅನುಮಾನ ಬಂತು. ಎದ್ದು, ಮುಂದಿನ ಬಾಗಿಲಿನ ಚಿಲಕದ ಕೊಂಡಿಗೆ ಸೌಟಿನ ಕಾವು ಸಿಕ್ಕಿಸಿ, ಮನೆಯ ಕಿಟಿಕಿಗಳನ್ನೆಲ್ಲ ಮುಚ್ಚಿದಳು. ಮತ್ತೆ ನಿಶ್ಶಬ್ದ. ಹತ್ತು ನಿಮಿಷದಲ್ಲಿ ಸದ್ದು ಕೇಳಿಸಿತು. ಕೆರೆ ಕೋಡಿ ಬಿದ್ದಾಗ ಕೇಳುವಂತಹ ಮೊರೆತ. ಅವಳಿಗೆ ಏನೂ ಅರ್ಥವಾಗಲಿಲ್ಲ. ಒಂದು ನಿಮಿಷದಲ್ಲಿ ಮೊರೆತ ಹೆಚ್ಚಾಯಿತು. ಇನ್ನೊಂದು ನಿಮಿಷದಲ್ಲಿ ಇನ್ನೂ ಏರಿತು. ಒಂದೇಸಮನೆ ಕಿವಿಯ ಮೇಲೆ ಮುಯ್‌ಗುಡುವ ಸದ್ದು ನಿಮಿಷ ನಿಮಿಷಕ್ಕೂ ಏರಿ, ಅನಂತರ ದಬ ದಬ ಎಂದು ನೀರು ಧುಮುಕುವಂತೆ ಕೇಳಿಸಲು ಮೊದಲಾಯಿತು. ಕೈಲಿದ್ದ ಕಾಗದದ ಕಟ್ಟನ್ನು ಹಿಡಿದೇ ಬಾಗಿಲಿನ ಅಗಳಿ ತೆಗೆದು ಹೊರಗೆ ಬಂದಳು. ಬೆಳದಿಂಗಳು ಸ್ಪಷ್ಟವಾಗಿತ್ತು. ತಕ್ಷಣ ಅರ್ಥವಾಯಿತು. ಕೆರೆಯ ಕೋಡಿ ಒಡೆದಿದೆ. ಮಧ್ಯದ ಹಳ್ಳವನ್ನು ಕಟ್ಟಿ ನೀರು ಹರಿಯುತ್ತಿದೆ. ಸ್ವಲ್ಪ ಮುಂದೆ ಹೋಗಿ ನೋಡಿದಳು. ತನ್ನ ತೋಟದ ಕೆಳಭಾಗದ ಬೇಲಿ ಮುಳುಗಿದೆ. ನೀರು ಮೇಲ್ಭಾಗಕ್ಕೆ ಏರುತ್ತಿದೆ. ಎಲ್ಲೆಲ್ಲೂ ಜಲಮಯ. ಪ್ರವಾಹವು ಏರಿ ತನ್ನ ಮನೆಯನ್ನು ಸುತ್ತುವರಿಯುತ್ತದೆ ಎನಿಸಿತು. ಮೋಹನದಾಸನ ಮಾತು ನೆನಪಿಗೆ ಬಂತು. ಗರ ಬಡಿದವಳಂತೆ ಒಂದು ನಿಮಿಷ ನಿಂತುಬಿಟ್ಟಳು. ಅಷ್ಟರಲ್ಲಿ, ಹಳ್ಳದ ಕಡೆಯ ನೀರು ಇನ್ನೂ ಮೇಲೆ ಏರಿ ಬಂತು. ಒಂದು ಕ್ಷಣವೂ ತಡಮಾಡುವಂತಿಲ್ಲ. ಮತ್ತೆ ಮನೆಯೊಳಕ್ಕೆ ಹೋಗಲಿಲ್ಲ. ಕೈಲಿದ್ದ ಕಾಗದದ ಕಟ್ಟನ್ನು ಹಿಡಿದು ಹೊಳೆಬಾಗಿಲ ಕಡೆಗೆ ತಿರುಗಿ ಓಡತೊಡಗಿದಳು. ಆದರೆ ಆ ಭಾಗವೆಲ್ಲ ಕಟ್ಟಿ ತುಂಬಿಹೋಗಿತ್ತು. ದಕ್ಷಿಣ ಭಾಗಕ್ಕೆ ಓಡಿದಳು. ಅಲ್ಲೂ ನೀರು ಏರುತ್ತಿತ್ತು. ನೀರು ಇಲ್ಲದ್ದರೂ ಪರವಾಗಿಲ್ಲ. ಎತ್ತರದ ಭಾಗವೆಂದರೆ ಇದೇ. ಹಿಂದು ಮುಂದು ನೋಡುವಂತೆಯೇ ಇಲ್ಲ ಎಂದು ಯೋಚಿಸಿ ಮಂಡಿಯುದ್ದದ ನೀರಿನಲ್ಲಿ ನಡೆದಳು. ತಾನೇ ಬಲವಾಗಿ ಕಟ್ಟಿದ್ದ ಬೇಲಿ ಎದುರಾಯಿತು. ಹಿಂದು ಮುಂದು ನೋಡದೆ ಅದನ್ನು ಹತ್ತಿ ಬಗ್ಗಿಸಿದಳು. ಕೈ ಕಾಲುಗಳಿಗೆ ಮುಳ್ಳು ಚುಚ್ಚಿಕೊಂಡುವು. ಎಡಗೈಲಿದ್ದ ಕಾಗದದ ಕಟ್ಟನ್ನು ಹಿಡಿದು ಇಳಿಯುವುದು ಸಾಧ್ಯವಾಗಲಿಲ್ಲ. ಎಸೆಯಬೇಕೆನಿಸಿತು. ತತ್‌ಕ್ಷಣ ಅದಾವುದೋ ಅಂತಃಪ್ರೇರಣೆಯಿಂದಲೆಂಬಂತೆ ಅದನ್ನು ರೌಕೆಯೊಳಕ್ಕೆ ತುರುಕಿಕೊಂಡು ಬೇಲಿಯ ಹೊರಭಾಗಕ್ಕೆ ಇಳಿದಳು. ಸೆರಗನ್ನು ಮುಳ್ಳಿನಿಂದ

ಬಿಡಿಸಿಕೊಳ್ಳಲು ವೇಳೆ ಇರಲಿಲ್ಲ. ಎಳೆದುಕೊಂಡು ಮುಂದೆ ನಡೆದಳು. ಸೆರಗು ಮತ್ತು ನೆರಿಗೆಗಳ ಭಾಗ ಹರಿದು ಜೂಲಾದುದು ಬೇಲಿಯಲ್ಲಿ ಉಳಿಯಿತು. ಉಳಿದ ಭಾಗ ಮತ್ತು ಹರಿದ ಲಂಗಗಳು ಮೈಮೇಲೆ ಉಳಿದುವು. ಅಲ್ಲಿಯೂ ನೀರು ಏರು ತ್ತಿತ್ತು. ಆದರೆ ಇನ್ನು ಅಪಾಯವಿಲ್ಲವೆಂಬ ಧೈರ್ಯದಿಂದ ಮುಂದೆ ನಡೆದಳು. ಎಡಭಾಗಕ್ಕಾದರೆ ಎತ್ತರ. ಊರಿನ ಕಡೆಗೆ ತಿರುಗಿದರೆ ಮೊದಲು ತಗ್ಗು ಸಿಕ್ಕುತ್ತದೆ ಎಂಬ ನೆನಪಾಗಿ ಎಡಗಡೆಗೆ ತಿರುಗಿ ನೀರಿನಲ್ಲೇ ಧಪಧಪನೆ ದಾಪುಗಾಲು ಹಾಕಿ ದಳು. ಬಿದಿರುಮುಳ್ಳು ಚುಚ್ಚಿಕೊಂಡಿದ್ದ ಅಂಗಾಲು, ಮತ್ತು ತೆರೆದು ರಕ್ತ ಬರುತ್ತಿದ್ದ ಮಂಡಿ ಮೊಣಕಾಲುಗಳು ನೀರಿನಲ್ಲಿ ಉರಿಯುತ್ತಿದ್ದುವು. ಒಂದು ಫರ್ಲಾಂಗ್ ನಡೆಯುವುದರಲ್ಲಿ ನೀರಿಲ್ಲದ ನೆಲದ ಭಾಗ ಸಿಕ್ಕಿತು. ಇನ್ನು ಅಪಾಯ ವಿಲ್ಲವೆಂದು ಒಂದು ನಿಮಿಷ ನಿಂತು ಸುಧಾರಿಸಿಕೊಂಡಳು. ಈಗ ಏನು ನಡೆದಿದೆ ಎಂಬುದು ಅವಳಿಗೆ ಹೊಳೆದುಹೋಗಿತ್ತು. ಆದರೆ ಯಾಕೆ ಹೀಗಾಗಿದೆ ಎಂಬುದು ತಿಳಿದಿರಲಿಲ್ಲ. ಸುತ್ತ ತಿರುಗಿ ನೋಡಿದಳು. ನೀರು ತನ್ನನ್ನು ಸುತ್ತುವರಿಯುವುದಿಲ್ಲ. ಇನ್ನು ಮೇಲಿನ ಭಾಗವೆಲ್ಲ ದಿಬ್ಬವೇ ಎಂದು ಮನಸ್ಸಿಗೆ ಖಚಿತವಾಯಿತು. ಅಲ್ಲಿಂದ ಇಡೀ ಗದ್ದೆಯ ಬಯಲು, ಕೆರೆ ಏರಿಯ ಕಡೆಗಳು ಕಾಣುತ್ತಿದ್ದುವು. ಕೆರೆಯು ತನ್ನ ಏರಿಯನ್ನು ಎತ್ತಿ, ಅರ್ಧ ಮುಕ್ಕಾಲು ಮೈಲಿ ಕೆಳಗೆ ಇಟ್ಟು ಕೊಂಡಂತೆ ಕಾಣುತ್ತಿತ್ತು. ದೇವಸ್ಥಾನದ ಮೇಲ್ಭಾಗದಲ್ಲಿ ಸುಮಾರು ಅರ್ಧ ಫರ್ಲಾಂಗ್ ಉದ್ದದ ಏರಿ ಒಡೆದುಹೋಗಿತ್ತು. ಪ್ರಚಂಡಶಕ್ತಿಯಿಂದ ನುಗ್ಗುವ ನೀರು ನೇರವಾಗಿ ದೇವಸ್ಥಾನದ ಹಿಂಭಾಗದ ಗೋಡೆಯನ್ನೇ ಒದೆಯುತ್ತಿರುವಂತೆ ಅಸ್ಪಷ್ಟವಾಗಿ ಕಾಣುತ್ತಿತ್ತು. ಆದರೆ ಗುಡಿಗೆ ಏನೂ ಆಗಿರಲಿಲ್ಲ. ಅದರ ಎತ್ತರ ವಾದ ಶಿಖರದ ಚಿನ್ನದ ತಗಡಿನ ಕಲಶವು ಬೆಳದಿಂಗಳಿನಲ್ಲಿ ಮಿಣಿ ಮಿಣಿ ಮಿನುಗು ವುದು ದಿಟ್ಟಿಸಿ ನೋಡಿದರೆ ಕಾಣುತ್ತಿತ್ತು.

ಸತ್ಯ ನೋಡುತ್ತಲೇ ನಿಂತಿದ್ದಳು. ಎಡಭಾಗಕ್ಕೆ ತಿರುಗಿದಳು. ಊರಿನ ಜನ ವೆಲ್ಲ ಎದ್ದಿದ್ದಾರೆ. ದೂರದಲ್ಲಿ ಜನಗಳ ಓಡಾಟವು ಅಸ್ಪಷ್ಟವಾಗಿ ಕಾಣುತ್ತಿದೆ. ಆದರೆ ಈ ಮಹಾ ಪ್ರವಾಹದ ಮೊರೆತದಲ್ಲಿ ಮತ್ತೆ ಯಾವ ಸದ್ದೂ ಕೇಳುತ್ತಿಲ್ಲ.

ಅವಳು ದಿಬ್ಬದಿಂದ ನಡೆದು ಊರಿನ ಕಡೆಗೆ ಬಂದಳು. ಊರ ಜನವೆಲ್ಲ ಎದ್ದಿತ್ತು. ಕೋಟೆಯ ಹತ್ತಿರದಿಂದ ನೀರು ಹೆಚ್ಚು ಸ್ಪಷ್ಟವಾಗಿ ಕಾಣುತ್ತಿತ್ತು. ಊರಿನ ಮತ್ತು ಕೋಟೆಯ ಕಂದಕಗಳು ಕೆರೆಯ ನೀರಿಗಿಂತ ಎತ್ತರದಲ್ಲಿದ್ದುದ ರಿಂದ ಊರಿಗೆ ಯಾವ ತೊಂದರೆಯೂ ಇಲ್ಲ. ಊರಿನ ಹಲವು ಗಂಡಸರ ಗುರುತು ಸತ್ಯಳಿಗೆ ಸಿಕ್ಕಿತು. ಉಳಿದವರೊಡನೆ ಪೋಲೀಸಿನವರೂ ಓಡಾಡುತ್ತಿದ್ದರು. ಯಾರೂ ನೀರಿನ ಹತ್ತಿರ ಹೋಗಕೂಡದೆಂದು ತಡೆಯುತ್ತಿದ್ದರು. ಇವಳ ಗುರುತು

ಹಿಡಿದ ಸೌದ್ರೇಗೌಡರು ಅಂದರು: 'ನಿಮ್ಮ ಗತಿ ಏನಾಯ್ತೋ ಅಂತ ನಿಮ್ಮಣ್ಣ ಪೇಚಾಡ್ತಿದ್ರು. ಸದ್ಯ ಬದುಕಿದಿರಲ್ಲ. ಹ್ಯಾಗೆ ಬಂದಿರಿ?'

'ನೀರಿನ ಸದ್ದು ಕೇಳಿ ಎಚ್ಚರವಾಯ್ತು. ಬಾಗಿಲಿನ ತಂಕ ಬಂದಿತ್ತು. ಮೇಲಿನ ಬೇಲಿ ಹತ್ತಿ ಇಳಿದು ಬಂದೆ.'

'ಗ್ರಾಚಾರ ಕಣವ್ವ. ಊರೊಳಗೆ ಹೋಗಿ ಬೇರೆ ಬಟ್ಟೆ ಹಾಕ್ಕಳಿ. ನಿಮ್ಮಣ್ಣ ಇಲ್ಲೇ ಎಲ್ಲೋ ನಿಮ್ಮ ಹೆಸರು ಹೇಳ್ಕಂಡು ಸುತ್ತಾಡ್ತಿದ್ರು.'

'ಕೆರೆ ಯಾಕೆ ಒಡೀತು?'

'ಘಂ ಅಂತ ಸದ್ದು ಕೇಳಿಸ್ತು. ಯಾರೋ ಡೈನಾಮೈಟ್ ಹಾಕಿರಭೌದು.'

ಹತ್ತಿರ ಇದ್ದ ಮಲ್ಲನಾಯಕ ಎಂದ: 'ಬರೀ ನಮ್ಮ ಕೆರೇ ನೀರಲ್ಲ ಅದು. ಇಷ್ಟೊಂತರ ಕಟ್ಟೆ ಹರೀತಿದೆ. ನಮ್ಮದೇ ಆಗಿದ್ರೆ ಈಟ್‌ಹೊತ್ಗೆ ಖಾಲಿಯಾಗ ಬೇಕಾಗಿತ್ತು. ಅಲ್ಲಿ ನೋಡಿ, ಮ್ಯಾಲಿನಿಂದ ಸಮುದ್ರದ ಹಂಗೆ ಕಾಣ್ತದೆ. ಮ್ಯಾಲೆ ಯಾವುದೋ ಕೆರೆ ಒಡೆದಿರಬಹುದು.'

ಮಲ್ಲನಾಯಕನ ವಿವರಣೆ ಹೆಚ್ಚು ಸಮಂಜಸವಾಗಿತ್ತು. ಮೇಲಿನಿಂದ ಬರುತ್ತಿರುವ ನೀರಿನ ಪ್ರಮಾಣವನ್ನು ನೋಡಿದರೆ ಸಲವತ್ತು ಮೈಲಿ ಆಚೆಗಿರುವ ಕಣಿವೆಕೆರೆಯೇ ಒಡೆದಿರಬಹುದು. ಅದರ ಕೆಳಗಿನ ಕೆರೆಗಳೆಲ್ಲ ನೀರಿನ ಒದೆತ ತಡೆಯಲಾರದೆ ಒಡೆದುಕೊಂಡಿವೆ. ಅದಕ್ಕೇ ಇಷ್ಟು ನೀರು.

'ಅಲ್ಲಿ ನೋಡಿ ಅವ್ವ, ಅದೇನು ಪ್ರಳಯ! ಗಾಡಿ, ಮರ, ಕೊಂಬೆ, ಅದೇ ನೇನು ಕಾಣ್ತೈತೆ' – ಮಲ್ಲನಾಯಕ ಹೇಳಿದ.

ಸತ್ಯಳ ಗಮನ ನೀರಿನ ಕಡೆಗೆ ಹೋಯಿತು. ದೂರದ ಗುಡಿಯಮೇಲೆ ರಭಸ ದಿಂದ ನುಗ್ಗುತ್ತಿದ್ದ ನೀರು ಹರವಿಕೊಂಡು ಸುತ್ತಲೂ ಸುಳಿಯಾಗುತ್ತಿತ್ತು. ಊರಿನ ಕೋಟೆಯ ತನಕ ಸುತ್ತಿ ಬರುತ್ತಿದ್ದ ನೀರಿನಲ್ಲಿ ಗಾಡಿ, ಮರಗಳು, ಕೊಂಬೆ, ತುಂಡುಗಳು ಮಾತ್ರವಲ್ಲ; ಹುಲ್ಲು, ಜೋಳದ ಕಡ್ಡಿ, ಸೋಗೆ ಮೊದ ಲಾದುವು ಕಾಣುತ್ತಿದ್ದುವು. ಹೋ! ಸತ್ತ ದನಗಳು ಕಾಣುತ್ತಿವೆ. ಒಂದೆರಡು ಮನುಷ್ಯರ ಹೆಣಗಳ ಗುರುತು ಸಿಕ್ಕುತ್ತಿದೆ. ಸತ್ಯ ತಲೆ ಎತ್ತಿ ನೋಡಿದಳು. ಕೆರೆಯ ಪಾತ್ರದ ನೀರು ಕಡಿಮೆಯಾಗುತ್ತಲೇ ಇಲ್ಲ. ಕೆಳಗೆ ಹರಿದಂತೆ ಮೇಲಿ ನಿಂದ ಬರುತ್ತಿರಬಹುದು. ಎಷ್ಟು ಹೊತ್ತಿನಿಂದ ಹರಿಯುತ್ತಿದೆ, ಈ ವೇಗದಲ್ಲಿ! ಉಕ್ಕಿ ಉಕ್ಕಿ ಬರುತ್ತಿದೆ. ಬಾನಿನಲ್ಲಿ ಚಂದ್ರ ಬೆಳಗುತ್ತಿದ್ದಾನೆ. ಇವತ್ತು ಪೂರ್ಣಿಮೆ ಹೌದೋ ಅಲ್ಲವೋ! ಆದರೆ ಪೂರ್ಣಚಂದ್ರನು ಸಮುದ್ರವನ್ನೇ ಆಕರ್ಷಿಸುತ್ತಾನಂತೆ. ಉಕ್ಕಿ ಹರಿದು ಗದ್ದೆ ತೋಟಗಳನ್ನು ಕಬಳಿಸಿರುವ ಈ ನೀರು ಸಮುದ್ರದಂತೆ ಹರಡಿದೆ. ಪ್ರಳಯವೆಂದರೆ ಹೀಗೆಯೇ ಇರುತ್ತದೇನೋ!

ಅಷ್ಟರಲ್ಲಿ ಕುಪ್ಪಣ್ಣಯ್ಯಂಗಾರರು ಅಲ್ಲಿಗೆ ಬಂದರು. ಸತ್ಯಳನ್ನು ಕಂಡು, ನಿಮ್ಮನ್ನ ಹುಡಿಕ್ಕಂಡು ವೆಂಕಟೇಶಯರ್‌ನೋರು ಪೂರ್ವದಿಕ್ಕಿನ ಬೋರೇ ಕಡೆಗೆ ಹೋದರು. ನೀರಿನ ಸದ್ದು ಕೇಳಿ ಅವಳು ಎದ್ದು ಆ ಕಡೆ ಓಡಿ ಹೋಗಿದ್ದರೆ ಅದೃಷ್ಟ ಅಂತಿದ್‌ರು' ಎಂದರು.

ಸೌದ್ರೇಗೌಡರು ಅವರನ್ನು, 'ಯಾಕೆ ಸ್ವಾಮಿ ಕೆರೆ ಒಡೀತು?' – ಎಂದು ಕೇಳಿದರು.

'ಗೊತ್ತಾಗಲಿಲ್ವೆ? ಬೆಟ್ಟಯ್ಯನ ಮಗ ಡೈನಾಮೈಟ್ ಹಾಕಿ ಒಡೆದ.'

'ಯಾರು ಹೆಂಗಂದ್‌ರು?' – ಹತ್ತಿರ ಇದ್ದವರೆಲ್ಲ ಸ್ತಂಭೀಭೂತರಾದರು.

'ಮಾತಂಗಿ ಮಗ ಹೊನ್ನೂರ ಅಂತ ಇಲ್ಲವೇ, ತುಮಕೂರಿನಲ್ಲಿ ಓದಿಕಂಡು. ಅವನು ಓಡಿ ಹೋಗ್ತಿದ್ನಂತೆ. ಇದ್ಯಾಕೆ ಹಿಂಗ್ ಓಡ್ತಾನೆ ಅಂತ ಯಾರೋ ಒಂದಿಬ್ರು ಹಿಡ್‌ಕಂಡ್‌ರಂತೆ. ಅವನ ಹತ್ತಿರ ತಂತಿ, ಮೋಟರಿಗೆ ಹಾಕುವಂಥ ಸೆಲ್ಲು, ಏನೇನೋ ಇತ್ತಂತೆ. ಅಷ್ಟರಲ್ಲಿ ಪೋಲೀಸ್ ಸಬ್ ಇನ್‌ಸ್ಪೆಕ್ಟರೂ ಅಲ್ಲಿಗೆ ಬಂದರು. ಹಿಡ್‌ಕಂಡು ಒದ್‌ರಂತೆ. ಅವನು, ಬೆಟ್ಟಯ್ಯನ ಮಗ, ಇಬ್ಬರೂ ಕೂಡಿ ಡೈನಾಮೈಟ್ ಹಾಕಿದೆವು ಅಂತ ಒಪ್ಕಂಡ್ನಂತೆ.'

'ಬೆಟ್ಟಯ್ಯನ ಮಗ ಸಿಕ್ಕಿದ್‌ನಾ?'

'ಅವನೊಂದು ಕಡೆ ಇವನೊಂದು ಕಡೆ ಇದ್ರಂತೆ. ಅವನು ತಪ್ಪಿಸ್ಕಳೂದ್ರೊಳಗೇ ಏರಿ ಒಡಿದು ಅವನ ಸಮೇತ ಕೊಚ್ಚಿಹೋಯಿತಂತೆ. ಇವನು ಈ ಕಡೆ ಇದ್ದದ್ದರಿಂದ ಉಳಕೊಂಡ. ಸ್ವಲ್ಪ ಹೊತ್ತು ಬುದ್ಧಿ ತೋಚದೆ ನಿಂತಿದ್ದು, ಆಮೇಲೆ ಓಟ ಹೊಡಿಯುಕ್ಕೆ ಶುರೂ ಮಾಡಿದ. ಹತ್ತಿರ ಇದ್ದ ತಂತಿ, ಶೆಲ್‌ಗಳನ್ನು ನೀರೊಳಗೆ ಎಸೀಬೇಕು ಅನ್ನೂದು ಗಾಬ್ರೀಲಿ ಹೊಳೀಲಿಲ್ಲ ಅಂತ ಕಾಣುತ್ತೆ. ಸಿಕ್ಕಿಹಾಕ್ಕಂಡ.'

ಇವನ್ನು ಕೇಳಿದ ಸತ್ಯಳ ಮನಸ್ಸು ಉದ್ವಿಗ್ನವಾಯಿತು. ಮೋಹನದಾಸ, ಅವನ ಕ್ರಾಂತಿಯ ಮಾತುಗಳು, ನೆನಪಿಗೆ ಬಂದುವು. ನಡುರಾತ್ರಿಯಲ್ಲಿ ಬಂದು, ತೋಟದಿಂದ ಹೊರಗೆ ಹೋಗುವಂತೆ ಅವನು ತನ್ನನ್ನು ಅನುನಯಿಸಿದುದು ನೆನಪಿಗೆ ಬಂತು. ತಕ್ಷಣವೇ ಕಣ್ಣು ತುಂಬಿಕೊಂಡಿತು. ಎದುರಿಗಿದ್ದ ಕುಪ್ಪಣ್ಣಯ್ಯಂಗಾರರು ಏನು ತಿಳಿದುಕೊಂಡಾರು ಎಂಬ ಅರಿವೂ ಇಲ್ಲದೆ ಅವಳು ಒಮ್ಮೆ ಬಿಕ್ಕಿ ಅತ್ತಳು. ಕುಪ್ಪಣ್ಣಯ್ಯಂಗಾರರು ಕಕ್ಕಾವಿಕ್ಕಿಯಾಗಿ ಅವಳನ್ನೇ ನೋಡುತ್ತಾ ನಿಂತರು. ಐದು ನಿಮಿಷದಲ್ಲಿ ಅವಳ ಮನಸ್ಸು ಸ್ವಲ್ಪಮಟ್ಟಿನ ಸಮಸ್ಥಿತಿಗೆ ಬಂತು. ದ್ವೇಷ ತಿರಸ್ಕಾರಗಳು ತುಂಬಿದ ಹೊನ್ನೇಶನ ಮುಖವು ಕಣ್ಣು ಮುಂದೆ ಸುಳಿಯಿತು. ತಕ್ಷಣ ತನ್ನ ಅಪ್ಪನ ನೆನಪಾಯಿತು. ಅವರು ಸಾಯುವ ಹಿಂದಿನ

ದಿನ ಅಂದಿದ್ದ ನೀರು, ಜಲಪ್ರಳಯ, ಎಂಬ ಮಾತುಗಳು ಪ್ರಜ್ಞೆಗೆ ಬಂದುವು. ಕ್ಷಣಕಾಲದಲ್ಲಿ ಯಾವ ಭಾವನೆಯೂ ಇಲ್ಲದಂತೆ ಮನಸ್ಸು ಮೂಕವಾಯಿತು. ಎದುರಿನ ದೃಶ್ಯ ಮಾತ್ರ ಸ್ತಬ್ಧ ಚಿತ್ರದಂತೆ ಕಾಣುತ್ತಿತ್ತು: ಎಲ್ಲೆಲ್ಲೂ ನೀರು. ತೋಟದ ತೆಂಗಿನ ಸುಳಿಗಳೂ ಕಾಣುತ್ತಿಲ್ಲ. ಮರಗಳೆಲ್ಲ ಗಡ್ಡೆ ಸಮೇತ ಮಲಗಿಬಿಟ್ಟಿವೆ. ಎಲ್ಲ ಒಂದೇ ಮಟ್ಟದ ನೀರಾಗಿದೆ. ನಡುವೆ ಕಾಣುತ್ತಿದ್ದ ಗುಡಿಯ ಶಿಖರ? ದಿಟ್ಟಿಸಿ ನೋಡಿದಳು. ಆಗ ಅಷ್ಟು ದೂರಕ್ಕೆ ಕಂಡಿದ್ದ ಅದರ ಚಿನ್ನದ ತಗಡಿನ ಕಲಶವು, ಈಗ ಹತ್ತಿರ ಬಂದರೂ ಕಾಣುತ್ತಿಲ್ಲ. ಬಾನಿನಲ್ಲಿ ಚಂದ್ರನ ಬೆಳಕೇನೋ ಪ್ರಕಾಶಮಾನವಾಗಿದೆ. ಹಾಗಾದರೆ ಗುಡಿಯು ಶಿಖರ ಸಮೇತ ಕುಸಿದುಬಿದ್ದಿದೆ. ಮೊದಲೇ ಅದರ ಹಿಂಭಾಗದ ಬೆಂಬಲದ ಗೋಡೆ ಶಿಥಿಲವಾಗಿತ್ತು. ಅದಕ್ಕೆ ಮಂತ್ರಿಗಳು ಸಿಮೆಂಟಿನಿಂದ ಬೇರೆ ಗೋಡೆ ಕಟ್ಟಿಸಿ ಆಧಾರ ಕೊಡಿಸಿದ್ದರು. ಈ ಪ್ರವಾಹದೆದುರು ಸರ್ಕಾರೀ ಗೋಡೆ ನಿಲ್ಲುವುದು ಸಾಧ್ಯವಿಲ್ಲವೆನಿಸಿತು. ಈ ಸಣ್ಣ ಗುಡಿ ಕುಸಿಯಲು ಇಷ್ಟೊಂದು ನೀರು ಉಕ್ಕಬೇಕೇ ಎನಿಸಿತು. 'ಗುಡಿ ಹೋಯ್ತು, ಗುಡಿ' – ಎಂದು ಜನಗಳೂ ಕೂಗಿಕೊಳ್ಳುತ್ತಿದ್ದರು. 'ಆಗಲೇ ಹೋಯ್ತು. ಕಳಸ ಬಿದ್ದಾಗ ನಾವು ನೋಡಿದೆವು' – ಎಂದು ಯಾರೋ ಇಬ್ಬರು ಅಂದರು.

ಸತ್ಯ, ಗುಡಿ ಇದ್ದ ಜಾಗವನ್ನೇ ಅಂದಾಜು ಮಾಡಿ ನಿಟ್ಟಿಸುತ್ತಿದ್ದಳು. ಅಲ್ಲಿ ಒಂದು ದೊಡ್ಡ ಸುಳಿ ಸುತ್ತುತ್ತಿರುವಂತೆ ಕಾಣುತ್ತಿತ್ತು. ದಿಬ್ಬ ಇನ್ನೂ ಪೂರ್ತಿಯಾಗಿ ಕರಗಿ ಕೊಚ್ಚಿಹೋಗಿಲ್ಲ. ಅದಕ್ಕೆ ಹೊಡೆದ ನೀರೇ ಸುಳಿಯಾಗಿ ಸುತ್ತುತ್ತಿದೆ ಎನಿಸಿತು. ಅವಳ ಕೈ, ತನ್ನ ರವಿಕೆಯಲ್ಲಿ ತುರುಕಿಕೊಂಡಿದ್ದ ಕಾಗದದ ಕಟ್ಟಿನ ಕಡೆಗೆ ಹೋಯಿತು. ಅದು ಸುರಕ್ಷಿತವಾಗಿತ್ತು. ಹಾಗೆಯೇ, ಬೆರಳಿಗೆ. ರವಿಕೆಯ ಒಳಗಿದ್ದ ಜನಿವಾರ ಸಿಕ್ಕಿತು. ಅವಳು ಜನಿವಾರವನ್ನು ಹಿಡಿದುಕೊಂಡು ನಿಂತಳು. ಅಪ್ಪ ಅಂದ ಮಾತು ಮತ್ತೆ ನೆನಪಿಗೆ ಬರಲು ಶುರುವಾಯಿತು: ಪ್ರವಾಹ. ಪ್ರಳಯ. ಎಲ್ಲೆಲ್ಲೂ ನೀರು. ಆಲದೆಲೆ. ಹೊಸ ಸಂಸ್ಕಾರ. ಈ ಜನಿವಾರ ತನಗೆ ಅಪ್ಪ ಹಾಕಿದುದು ಎಂಬ ಜ್ಞಾಪಕ ಬಂತು. ಯಜ್ಞೋಪವೀತಂ ಪರಮಂ ಪವಿತ್ರಂ. ಜಾತಶೂದ್ರಳಾದ ಹೆಂಗಸಿಗೂ ಯಜ್ಞೋಪವೀತ, ಅದನ್ನು ತಾನು ಮೀರಳಿಗೆ ಹಾಕಿದ ನೆನಪು ಬಂತು. ತಾನು ಮತ್ತೊಬ್ಬ ಶೂದ್ರಳನ್ನು, ಶೂದ್ರರಲ್ಲಿ ಶೂದ್ರಳೆನಿಸಿಕೊಂಡವಳನ್ನು ಬ್ರಾಹ್ಮಣಿಯಾಗಿ ಮಾಡಿದೆ. ಆದರೆ ನೀರಿಗೆ ಬೀಳುವ ಮೊದಲು ಮೀರಾ ಯಜ್ಞೋಪವೀತವನ್ನು ತೆಗೆದುಹಾಕಿದ್ದಳಲ್ಲ. ಇದರ ಅರ್ಥವೇನು?

ಮನಸ್ಸು ನಿರ್ವೇದಕ್ಕೆ ಒಳಗಾಯಿತು. ಮೈ ಜುಂ ಎಂದಿತು. ಯಾವ

ಅರ್ಥದ ಸ್ಫುರಣೆಯಿಂದ ಹೀಗಾಗುತ್ತಿದೆ ಎಂಬುದು ತಿಳಿಯಲಿಲ್ಲ. ಎದುರಿಗೆ ಪ್ರವಾಹ ಉಕ್ಕುತ್ತಿದೆ. ನೀರು ಮೇಲೆ ಮೇಲೆ ಬರುತ್ತಿದೆ. 'ಎಲ್ಲ ಮೇಲೆ ಬನ್ನಿ' – ಎಂದು ಜನಗಳು ಕೂಗುತ್ತಿದ್ದಾರೆ. ನೀರು, ನೆಲ, ಜನ, ಊರು, ಕೇರಿ, ಯಾವುದೂ ಪ್ರಜ್ಞೆಯಲ್ಲಿಲ್ಲ. ಕಣ್ಣು ಉಕ್ಕುವ ಪ್ರವಾಹವನ್ನು ನೋಡುತ್ತಿದ್ದರೂ, ದೃಷ್ಟಿಯು, ಕಣ್ಣಿಗೆ ಕಾಣಿಸದ ನೋಟವೊಂದರಲ್ಲಿ ಮಗ್ನವಾಗಿರುವಂತೆ ನಟ್ಟು ಹೋಗಿತ್ತು. ಬಲಗೈ, ಇದ್ದಕ್ಕಿದ್ದಹಾಗೆಯೇ ಜನಿವಾರವನ್ನು ಗಟ್ಟಿಯಾಗಿ ಹಿಡಿಯಿತು. ಬಲವಾಗಿ ಎಳೆಯಿತು. ಫಟ್ ಎಂದು ಕಿತ್ತು ಬಂದ ಜನಿವಾರವನ್ನು ಸುತ್ತಿ ಉಂಡೆ ಮಾಡಿ ಹಿಡಿದುಕೊಂಡಳು. ನೀರು ಇನ್ನೂ ಉಕ್ಕುತ್ತಿತ್ತು. ಅವಳು ಕೆಳಭಾಗಕ್ಕೆ ಇಳಿದು ಆ ಉಂಡೆಯನ್ನು ನೀರಿನೊಳಕ್ಕೆ ಎಸೆದು ಮೇಲ್ಭಾಗಕ್ಕೆ ತಿರುಗಿದಳು.

ಹೆಜ್ಜೆ ಇಡುತ್ತಾ ಎತ್ತರದ ದಿಬ್ಬಕ್ಕೆ ಹತ್ತಿ ಬರುತ್ತಿದ್ದರೂ ಕತ್ತು ಹಿಂದುಗಡೆಗೆ ತಿರುಗಿತ್ತು. ಕಣ್ಣು ನೀರಿನ ಹರವನ್ನು ನೋಡುತ್ತಿತ್ತು. ದೃಷ್ಟಿಯು, ಕಣ್ಣಿಗೆ ಕಾಣಿಸದ ನೋಟವನ್ನು ಕಾಣುವಂತೆ ನಟ್ಟಿತ್ತು. ದಿಬ್ಬವನ್ನು ಹತ್ತಿ ಪ್ರವಾಹವನ್ನು ದಿಟ್ಟಿಸುತ್ತಾ ನಿಂತಳು. ಸ್ವಲ್ಪ ಹೊತ್ತಿನಲ್ಲಿ, ಧಿಯೋ ಯೋ ನಃ ಪ್ರಚೋದಯಾತ್ ಎಂಬ ಮಾತು ಮನಸ್ಸಿನ ಆಳದಿಂದ ತೇಲಿಬಂದು, ನೀರಿನ ಮೊರೆತದಲ್ಲಿಯೂ ಕಿವಿಗೆ ಸ್ಪಷ್ಟವಾಗಿ ಕೇಳುತ್ತಿತ್ತು. ಅದನ್ನೇ ನಾಲಗೆ, ತುಟಿಗಳೂ ಉಚ್ಚರಿಸುತ್ತಿದ್ದುವು.



ಲೇಖಕನ ಕೃತಜ್ಞತೆ:

ಹಸ್ತಪ್ರತಿಯನ್ನು ವಿಮರ್ಶಿಸಿದ

ಗೆಳೆಯ ಶ್ರೀ ಎಂ. ಎಸ್. ಕೆ. ಪ್ರಭುವಿಗೆ

# ಭೈರಪ್ಪನವರ ಕೃತಿಗಳು

| | |
|---|---|
| ಧರ್ಮಶ್ರೀ: | ಐದನೇ ಮುದ್ರಣ |
| ದೂರ ಸರಿದರು: | ನಾಲ್ಕನೇ ಮುದ್ರಣ |
| ವಂಶವೃಕ್ಷ: | ಐದನೇ ಮುದ್ರಣ |
| ಮತದಾನ: | ಮೂರನೇ ಮುದ್ರಣ |
| ಜಲಪಾತ: | ಮೂರನೇ ಮುದ್ರಣ |
| ನಾಯಿ-ನೆರಳು: | ಮೂರನೇ ಮುದ್ರಣ |
| ತಬ್ಬಲಿಯು ನೀನಾದೆ ಮಗನೆ: | ಎರಡನೇ ಮುದ್ರಣ |
| ಗೃಹಭಂಗ: | ಎರಡನೇ ಮುದ್ರಣ |
| ನಿರಾಕರಣ: | ಎರಡನೇ ಮುದ್ರಣ |
| ಗ್ರಹಣ: | ಒಂದನೇ ಮುದ್ರಣ |
| ದಾಟು: | ಎರಡನೇ ಮುದ್ರಣ |
| ಅನ್ವೇಷಣ: | ಒಂದನೇ ಮುದ್ರಣ |
| ಸಾಹಿತ್ಯ ಮತ್ತು ಪ್ರತೀಕ: | ಎರಡನೇ ಮುದ್ರಣ |
| ಸತ್ಯ ಮತ್ತು ಸೌಂದರ್ಯ: | ಮೂರನೇ ಮುದ್ರಣ |
| ಕಥೆ ಮತ್ತು ಕಥಾವಸ್ತು: | ಎರಡನೇ ಮುದ್ರಣ |

ಸಾಹಿತ್ಯ ಭಂಡಾರ
ಜಂಗಮಮೇಸ್ತ್ರಿ ಗಲ್ಲಿ, ಬಳೇಪೇಟೆ
ಬೆಂಗಳೂರು: 53

## ಭೈರಪ್ಪನವರ ಮುಂದಿನ ಕಾದಂಬರಿ "ಪರ್ವ"

ತಮ್ಮ ಅಂತರಂಗವನ್ನು ಬಾಧಿಸುತ್ತಿದ್ದ ಹಲವು ಭಾವನೆ ಮತ್ತು ಶೋಧನೆಗಳ ಅಭಿವ್ಯಕ್ತಿಯಾಗಲು ಮಹಾಭಾರತವು ತಕ್ಕ ವಸ್ತುವೆಂದು ಭೈರಪ್ಪನವರಿಗೆ ಅನ್ನಿಸಿದುದು ಸುಮಾರು ಹನ್ನೆರಡು ವರ್ಷಗಳ ಹಿಂದೆ. ಮೂರು ನಾಲ್ಕು ವರ್ಷ ಒಳಗೇ ಮಾಗಿದ ಮೇಲೆ ಅವರು ಅದಕ್ಕೆ ಸಂಬಂಧಿಸಿದ ಐತಿಹಾಸಿಕ ವಿವರ ಮತ್ತು ಸ್ಥಳಗಳ ಅಭ್ಯಾಸಕ್ಕೆ ತೊಡಗಿದರು. ನಿರಂತರ ಐದು ಸಂವತ್ಸರಗಳ ಅಧ್ಯಯನ ಹಾಗೂ ತಾದಾತ್ಮ್ಯಗಳ ನಂತರ ವಸ್ತುವಿನ ಸ್ವರೂಪ, ತಂತ್ರ, ಮತ್ತು ಸಂಕೇತಗಳನ್ನು ಅನ್ವೇಷಿಸುತ್ತಾ ೧೯೭೫-೭೭ರಲ್ಲಿ ಬರೆದು ಮುಗಿಸಿದರು. ತಿದ್ದಿ ಹೊರಹಾಕುವ ತನಕ ಬಿಡುಗಡೆ ಇಲ್ಲವಾಗಿರುವುದರಿಂದ ಈಗ ಅದನ್ನು ಕೊನೆಯದಾಗಿ ಪರಿಷ್ಕರಿಸುತ್ತಿದ್ದಾರೆ. ನಮಗೆ ಹೇಳಿರುವಂತೆ ಸದ್ಯದಲ್ಲೇ ಮುಗಿಸಿಕೊಟ್ಟರೆ ೧೯೭೮ರ ದಶಂಬರ್ ಒಳಗೆ ನಾವು ಪುಸ್ತಕವನ್ನು ಓದುಗರ ಕೈಯಲ್ಲಿಡುತ್ತೇವೆ.

ಐತಿಹಾಸಿಕ ಸಂಗತಿಗಳನ್ನು ಅವುಗಳ ಸಮಕಾಲೀನ ಧ್ವನಿಯೊಡನೆ ಮನುಷ್ಯನ ಅಂತರಂಗ ಮತ್ತು ಭಾವಗಳ ಮಾಧ್ಯಮದಲ್ಲಿ ವ್ಯಕ್ತಪಡಿಸುವ, ತಂತ್ರವೈವಿಧ್ಯದಿಂದ ಕೂಡಿದ ಈ ಕಾದಂಬರಿಗೆ ಸಮರ್ಪಕವಾಗಿ ಹೊಂದುವ ಹೆಸರು ಇನ್ನೂ ಅವರಿಗೆ ಹೊಳೆದಿಲ್ಲ. ಇದು ಭೈರಪ್ಪನವರ ಸಾಹಿತ್ಯಸಾಧನೆಯನ್ನು ಮೂರು ಪಟ್ಟು ಎತ್ತರಿಸಿರುವ ಕೃತಿ ಎನ್ನಬಹುದು.

ಡೆಮಿ ಅಳತೆಯಲ್ಲಿ ಆರು ನೂರ ಐವತ್ತು, ಏಳು ನೂರು ಪುಟಗಳು

